# RIG-VEDA SAMHITA

# ಋಗ್ವೇದಸಂಹಿತಾ

ಭಾಗ ೧೪

ದ್ವಿತೀಯಾಷ್ಟಕದ ೬-೭-೮ ನೇ ಅಧ್ಯಾಯಗಳು


ಅನುವಾದಕರು :

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.



ಶ್ರೀ ಶಾರದಾ ಪ್ರೆಸ್,

ಮೈಸೂರು.



# ಋಗ್ವೇದಸಂಹಿತಾ

## ಭಾಗ—೧೮

ತೃತೀಯಾಷ್ಟಕದಲ್ಲಿ ಆರು, ಏಳು ಮತ್ತು
ಎಂಟನೆಯ ಅಧ್ಯಾಯಗಳು

ಚತುರ್ಥ ಮಂಡಲದ ಸೂಕ್ತಗಳು ೧೯–೫೮ ಮತ್ತು
ಪಂಚಮ ಮಂಡಲದ ಸೂಕ್ತಗಳು ೧–೮

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೮

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೮

ತೃತೀಯಾಷ್ಟಕದಲ್ಲಿ ಆರು, ಏಳು ಮತ್ತು ಎಂಟನೆಯ ಅಧ್ಯಾಯಗಳು.

ಚತುರ್ಥ ಮಂಡಲದ ಸೂಕ್ತಗಳು ೧೯—೫೮

ಮತ್ತು

ಪಂಚಮ ಮಂಡಲದ ಸೂಕ್ತಗಳು ೧—೮

*Translated with Exhaustive Critical Notes & Explanations*

*by*

**Asthana Mahavidwan**

**H. P. VENKATA RAO.**

*Editor.*

*Printed at*

SREE SHARADA PRESS,

MYSORE.

1952

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,
ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor:

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

Associate

1. ಬ್ರ॥ ಶ್ರೀ॥ G. N. ಚಕ್ರವರ್ತಿ M.A.
   Professor of Sanskrit. St. Philomina's College, Mysore.

**ಸಹಾಯಕ ವಿದ್ವನ್ಮಂಡಲಿ**

2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್,
   Govt. Oriental Research Institute, Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು.
    Govt. Oriental Research Institute, Mysore.

## ಪೀಠಿಕೆ.

\ ವಿಶ್ವದ ಮೂಲತತ್ತ್ವ ಮತ್ತು ವಿಶ್ವಸೃಷ್ಟಿಯ ವಿಷಯದಲ್ಲಿಯೂ, ದೇವತೆಗಳ ವಿಷಯದಲ್ಲಿಯೂ ಋಗ್ವೇದ ಕಾಲದ ಋಷಿಗಳ ವಿಚಾರಕಲ್ಪನೆ ಮತ್ತು ತತ್ಸಂಬಂಧವಾದ ಕಥೆಗಳ ವಿಷಯವಾಗಿ ಕೆಲವು ಸಂಗತಿಗಳನ್ನು ಇಲ್ಲಿ ವಿಮರ್ಶೆಮಾಡುವುದು ಅಪ್ರಕೃತವೆನಿಸಲಾರದು.

ಮಾನವನ ಇತಿಹಾಸದ ಅರುಣೋದಯದಲ್ಲಿ ಜಗತ್ತಿನ ಮೂಲತತ್ತ್ವದ ವಿಷಯದಲ್ಲಿ ಚಿಂತಿಸುತ್ತಿದ್ದ ತತ್ತ್ವಜಿಜ್ಞಾಸುಗಳ ಮನಸ್ಸಿಗೆ ವಿಶ್ವರಹಸ್ಯದ ವಿಷಯದಲ್ಲಿ ಅನೇಕ ಸಮಸ್ಯೆಗಳು ಉದ್ಭವಿಸಿದವು. ಆಯಾ ಮನಃ ಪರಿಪಾಕಕ್ಕೆ ತಕ್ಕಂತೆ ವೈಯಕ್ತಿಕವಾದ ಸಮಸ್ಯಾಪರಿಹಾರಗಳೂ ಆ ಧ್ಯಾನಮಗ್ನವಾದ ಮನಸ್ಸಿಗೇ ಹೊಳೆಯುತ್ತಿದ್ದವು. ಒಂದೊಂದು ಸಲ ಜಗತ್ತಿನ ಸೃಷ್ಟಿಸ್ಥಿತಿಗಳು ಅನಾದಿಯಾದ ಭೌತಿಕಶಕ್ತಿಯ ಸ್ವಾಭಾವಿಕವಾದ ಪರಿಣಾಮ ವಿಶೇಷಗಳೆಂದೂ, ಇನ್ನು ಕೆಲವು ಸಲ ಕೆಲವು ಅಸಾಧಾರಣವಾದ ಬುದ್ಧಿಗೆ ಆಧ್ಯಾತ್ಮಿಕತತ್ತ್ವವೇ ಜಗದ್ವ್ಯವಹಾರಗಳಿಗೆಲ್ಲಾ ಮೂಲವೆಂದೂ ಭಾಸವಾಗಿರುತ್ತದೆ. ಪ್ರಕೃತಿಯ ಎಲ್ಲಾ ಭಾಗಗಳಲ್ಲಿಯೂ ಸಹ ಅನುಸ್ಯೂತವಾಗಿ ಕಂಡ ಬರುತ್ತಿರುವ ನಾನಾವಿಧವಾದ ಪರಿಣಾಮಗಳೂ, ಬೆಳವಣಿಗೆಗಳೂ ಒಂದೊಂದು ಸಲ ಒಂದೊಂದು ವಿಧವಾದ ಕಲ್ಪನೆಗೆ ಅವಕಾಶವನ್ನು ಕೊಟ್ಟವೆ. ಸಮಸ್ತ ಜಗತ್ತೂ ಅಸದ್ರೂಪವಾದ ತತ್ತ್ವದಿಂದಲೇ (ನಾಸದಾಸೀನ್ನೋ ಸದಾಸೀತ್) ಉತ್ಪನ್ನವಾಯಿತೆಂದು ಒಂದು ಮತವೂ, ಸೂಕ್ಷ್ಮಾವಸ್ಥೆಯಲ್ಲಿದ್ದ ತತ್ತ್ವವು ವಿಕಸಿತವಾಗಿ ನಾನಾ ಪರಿಣಾಮಗಳಿಗೆ ಅವಕಾಶವನ್ನು ಕೊಟ್ಟದೆಯೆಂದು ಇನ್ನೊಂದು ಮತವೂ, ಜಗತ್ಸೃಷ್ಟಿಯ ವಿಷಯದಲ್ಲಿ ತಮ್ಮ ಕಲ್ಪನೆಗನುಗುಣವಾದ ವಿಚಾರಗಳನ್ನು ವಿವರಿಸಿವೆ. ಸ್ವಭಾವವಾದವನ್ನು ಸಮರ್ಥಿಸುವ ಸಾಂಖ್ಯಮತಕ್ಕೆ ಈ ಎರಡನೆಯ ಮತವೇ ಮೂಲವಾಯಿತು. ಎಂದರೆ ಅತಿ ಸೂಕ್ಷ್ಮಾವಸ್ಥೆಯಲ್ಲಿದ್ದ ಮೂಲತತ್ತ್ವವು ಸ್ವಾಭಾವಿಕವಾದ ವಿಕಾಸ ಮತ್ತು ಪರಿಣಾಮವನ್ನು ಹೊಂದುವುದೇ ಜಗದ್ವ್ಯವಹಾರವು ಎಂಬುದೇ ಈ ಮತದ ಸಾರಾಂಶ. ಅಥವಾ, ರಾತ್ರಿಯಲ್ಲಿ ಗೂಢವಾಗಿ ಅಡಗಿದ್ದ ಸಮಸ್ತನಾಮರೂಪಗಳೂ ಪ್ರಾತಃಕಾಲದಲ್ಲಿ ಸೂರ್ಯೋದಯವಾದನಂತರ ಪ್ರಕಾಶಕ್ಕೆ ಬರುವಂತೆ, ವಿಶ್ವದ ಸಮಸ್ತ ನಾಮರೂಪಾತ್ಮಕವಾದ ವಸ್ತುಗಳು ಅನಾದಿಯೂ, ಮೂಲಭೂತವೂ ಆದ ತಮಸ್ಸಿನಿಂದ ಆವಿರ್ಭೂತವಾದವು ಎಂಬುದೂ ಇನ್ನೊಂದು ಮತ, "ತಮ ಆಸೀತ್ತಮಸಾ ಗೂಳ್ಹಮಗ್ರೇ" (ಋ. ಸಂ. ೧೦-೧೨೯-೩) ಪ್ರಥಮತಃ ವಿಶ್ವವನ್ನೆಲ್ಲಾ ವ್ಯಾಪಿಸಿದ್ದ ತಮಸ್ಸಿನಿಂದ ಭಾವರೂಪವಾದ ಜಗತ್ತು ಆವಿರ್ಭೂತವಾಯಿತು ಎಂದು ಋಕ್ಸಂಹಿತೆಯ ಒಂದು ಭಾಗದಲ್ಲಿ ತಿಳಿಸಿರುತ್ತದೆ. ಆದರೆ, ಭಾವರೂಪವದ್ದೂ, ಕ್ರಮಬದ್ಧವಾದುದೂ ಆದ ವಿಶ್ವರಚನೆಯು ಅಭಾವರೂಪದ್ದೂ, ಶೂನ್ಯಾತ್ಮಕವೂ ಆದ ತಮಸ್ಸಿನಿಂದ ಆವಿರ್ಭೂತವಾಯಿತು ಎಂದು ಹೇಳುವುದು ಕೆಲವು ಜಿಜ್ಞಾಸುಗಳ ವಿಚಾರಕ್ಕೆ ಸಮಾಧಾನವನ್ನು ತರಲಿಲ್ಲ. ಯಾವ ರೀತಿ ಮಾನವನ ವ್ಯವಹಾರಗಳು ಒಂದು ಗುರಿಯನ್ನಿಟ್ಟು ಅವನ್ನು ಸಾಧಿಸಲು ಸುಸಂಘಟಿತವಾಗಿಯೂ, ಸುಸಂವಿಧಾನದಿಂದ ಕೂಡಿಯೂ, ಸಂಕಲ್ಪಮೂಲವಾಗಿರುವುವೋ; ಅದೇ ರೀತಿ ನಿಯಮಬದ್ಧವಾದ ಪ್ರಕೃತಿಯ ವ್ಯವಹಾರಗಳಿಗೂ ಒಂದು ಚಿದಾತ್ಮಕವಾದ ತತ್ತ್ವದ ಸುಸಂಘಟಿತವಾದ ಸಂಕಲ್ಪವೂ, ನಿಯಮವ್ಯವಸ್ಥೆಯೂ ಇದ್ದೇ ತೀರಬೇಕು. ನಿಯಮಬದ್ಧವಾದ ಜಗದ್ವ್ಯವಹಾರಗಳಿಗೆ ಅಂಧರೂಪವೂ, ಶೂನ್ಯಾತ್ಮಕವೂ ಆದ ಅಭಾವವು ಮೂಲವಾಗಿರಲು ಸಾಧ್ಯವಿಲ್ಲ. ಆದುದರಿಂದ ಚಿದ್ವಿಶೇಷದ ಅತ್ಯುತ್ತಮವಾದ ಸಂಕಲ್ಪದ ಫಲವೇ ಜಗತ್ತಿನ ಸೃಷ್ಟಿಯು ಎಂದು ಇನ್ನೊಂದು ಮತವೂ ಋಕ್ಸಂಹಿತಾ ದ್ರಷ್ಟೃಗಳಾದ ಕೆಲವು ಋಷಿಗಳ ವಾಕ್ಯಗಳಲ್ಲಿ ಕಂಡುಬರುತ್ತದೆ. \

ಈ ಸಂದರ್ಭದಲ್ಲಿ ಗಮನಿಸಬೇಕಾದ ಇನ್ನೊಂದಂಶವಿರುತ್ತದೆ. ಉಪನಿಷದಾದಿಗಳಲ್ಲಿ ವರ್ಣಿತವಾಗಿರುವ ಈಶ್ವರತತ್ತ್ವಕ್ಕೂ ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ಈಶ್ವರತತ್ತ್ವಕ್ಕೂ ವ್ಯತ್ಯಾಸವಿದೆಯೆಂದು ಆಧುನಿಕ ವಿಮರ್ಶಕರಲ್ಲಿ ಕೆಲವರ ಮತವಾಗಿರುತ್ತದೆ. ಆ ವ್ಯತ್ಯಾಸವೇನೆಂದರೆ; ಚಿದಚಿದಾತ್ಮಕವಾದ ಸಮಸ್ತ ವಿಶ್ವವೂ ಒಂದೇ ಮೂಲತತ್ತ್ವದ ಸಂಕಲ್ಪ ಮತ್ತು ನಿಯಮನಗಳಿಗೆ ಒಳಪಟ್ಟಿದೆಯೆಂಬುದೇ ಉಪನಿಷತ್ತಿನ ಸಾರಾಂಶ. ಋಕ್ಸಂಹಿತೆಯಲ್ಲಿ ಈ ಏಕತತ್ತ್ವವಾದವು ಅಷ್ಟಾಗಿ ಕಂಡುಬರುವುದಿಲ್ಲ. ಪ್ರಕೃತಿಯು ನಾನಾ ಭಾಗಗಳುಳ್ಳದ್ದಾಗಿರುತ್ತದೆ. ಒಂದೊಂದು ಭಾಗಕ್ಕೆ ಒಂದೊಂದು ಅಧಿದೇವತೆ. ಆಯಾ ಭಾಗಗಳು ಆಯಾ ದೇವತೆಗಳ ಸಂಕಲ್ಪ ಮತ್ತು ನಿಯಮನಗಳಿಗೆ ಅನುಸಾರವಾಗಿ ವ್ಯವಸ್ಥಿತವಾಗಿರುತ್ತವೆ ಎಂದು ದೇವತಾಬಹುತ್ವದಲ್ಲಿ ಶ್ರದ್ಧೆಯಿರುವುದು ಋಕ್ಸಂಹಿತೆಯಲ್ಲಿ ಕಂಡು ಬರುತ್ತದೆ. ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿದರೆ ಬೇರೆ ಬೇರೆ ದೇವತೆಗಳೂ ಒಂದೇ ಮೂಲತತ್ತ್ವದ ವಿಭೂತಿ ವಿಶೇಷಗಳೇ ಹೊರತು ತಾತ್ತ್ವಿಕವಾದ ವೈವಿಧ್ಯವನ್ನು ಹೊಂದಿಲ್ಲ ಎಂಬುದೂ ಒಂದು ಮತ. ಈ ಅಂಶವನ್ನು ವಿಶೇಷ ವಿಷಯಪ್ರಕರಣಗಳಲ್ಲಿ ಕೆಲವೆಡೆ ಸೂಚಿಸಿದೆ. ಒಂದು ವೇಳೆ ಈ ಭಾಗಗಳು ಪರಸ್ಪರ ಸಂಬಂಧವನ್ನು ಹೊಂದಿ ತಮ್ಮ ವೈವಿಧ್ಯದಲ್ಲಿಯೂ ಒಂದು ಐಕ್ಯವಿದೆ ಎಂಬ ಅಂಶವನ್ನು ಸೂಚಿಸಿದರೂ ಸಹ, ವ್ಯಾವಹಾರಿಕಪ್ರಭೇದಗಳಿಗನುಗುಣವಾಗಿ ಆಯಾ ಭಾಗಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತವೆ. ಪ್ರತಿಯೊಂದು ವಿಭಾಗಕ್ಕೂ ಸುವ್ಯವಸ್ಥಿತವಾದ ಕಟ್ಟಳೆಯನ್ನು ತೋರಿಸುವ ಒಂದೊಂದು ಅಧಿದೇವತೆಯು ನಿಯತವಾಗಿರಲೇಬೇಕು. ಆದುದರಿಂದ ಪ್ರತಿಯೊಂದು ದೇವತೆಯೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರಲೇಬೇಕು ಎಂದು ದೇವತಾಬಹುತ್ವದಲ್ಲಿನ ನಂಬಿಕೆಯು ವಿಶದವಾಗಿದೆ. ಆದರೆ, ಈ ಅಂಶವನ್ನೂ ನಿಸ್ಪೃಷ್ಟವಾಗಿ ವಿವರಿಸಲು ಸಾಧ್ಯವಿಲ್ಲ. ವೈಯಕ್ತಿಕವಾದ ಪ್ರಭುತ್ವವನ್ನು ಹೊಂದಿರುವವರೆಂದು ವರ್ಣಿತವಾಗಿರತಕ್ಕ ದೇವತೆಗಳು ಒಂದೊಂದು ಸಲ ತಾವೇ ದೇವತಾಂತರದ ನಿಯಮನಕ್ಕೆ ಒಳಪಟ್ಟವರೆಂದು ವರ್ಣಿತರಾಗಿರುತ್ತಾರೆ. ಆದುದರಿಂದ ಈ ವಿಷಯದಲ್ಲಿ ಸೂಕ್ಷ್ಮವಾದ ಪರಿಶೀಲನವು ಅತ್ಯಗತ ವಾಗಿರುತ್ತದೆ.

## ಋಗ್ವೇದಕಾಲದ ಋಷಿಗಳ ಕಲ್ಪನಾವೈವಿಧ್ಯ.

ಋಗ್ವೇದದ ಸೂಕ್ತಗಳು ಬೇರೆಬೇರೆ ಕಾಲದ ಬೇರೆ ಬೇರೆ ಋಷಿಗಳಿಂದ ನಿರ್ಮಿತವಾದವು. ಈ ಸೂಕ್ತಗಳ ಸಂಖ್ಯೆಯು ಸಹಸ್ರಕ್ಕೂ ಮೀರಿದೆ. ಈ ಸೂಕ್ತಗಳಲ್ಲೆಲ್ಲಾ ಆಯಾ ಋಷಿಗಳು ತಮ್ಮದೇ ಆದ ಸಾಂಪ್ರದಾಯಿಕವೂ ವೈಯಕ್ತಿಕವೂ ಆದ ಭಾವನೆಗಳನ್ನು ಪ್ರಕಾಶಪಡಿಸಿದ್ದಾರೆ. ಪ್ರಕೃತಿಸಂಪತ್ತಿನ ವೈವಿಧ್ಯದಿಂದ ಕೂಡಿದ ಸನ್ನಿವೇಶಗಳು ಈ ಋಷಿಗಳ ಮನಸ್ಸಿನಲ್ಲಿ ಬಾಹ್ಯಪ್ರಪಂಚದ ವೈವಿಧ್ಯದ ಸತ್ಯತೆಯನ್ನು ತೋರಿಸಿ ತಮ್ಮ ಪ್ರಭಾವವನ್ನು ಬೀರಿರಬೇಕು. ಋಷಿಗಳ ಕಲ್ಪನಾಶಕ್ತಿಗಳು ಒಂದೊಂದು ಅಂಶವನ್ನು ಒಂದೊಂದು ವಿಧವಾಗಿ ವರ್ಣಿಸತೊಡಗಿದವು. ಒಂದು ಕಡೆ ನಕ್ಷತ್ರಭರಿತವಾದ ಅಂತರಿಕ್ಷ, ಒಂದು ಕಡೆ ಅಂತರಿಕ್ಷದಲ್ಲಿ ಸಂಚರಿಸತಕ್ಕ ಆದಿತ್ಯನ ಪರಿಭ್ರಮಣ, ಇನ್ನೊಂದು ಕಡೆ, ನಾನಾರೂಪಗಳನ್ನೂ ಹೊಂದಿ ಪೃಥಿವ್ಯಂತರಿಕ್ಷಗಳ ನಡುವೆ ಸಂಚರಿಸತಕ್ಕ ಮೇಘಗಳು ಮತ್ತು ಅವುಗಳಲ್ಲಿ ಉತ್ಪನ್ನವಾಗುವ ವಿದ್ಯುತ್ಪ್ರಕಾಶ ಮತ್ತು ಪ್ರಭಾವ. ಹೀಗೆ ಒಂದೊಂದು ಸನ್ನಿವೇಶವೂ ಒಂದೊಂದು ವೈಶಿಷ್ಟ್ಯವನ್ನು ಪ್ರಕಾಶಪಡಿಸಿದುದರ ಪರಿಣಾಮವಾಗಿ ಋಷಿಗಳ ಭಾವಗಳು ಶ್ರದ್ಧಾಭಕ್ತಿಗಳಿಂದ ಕೂಡಿ ಆಯಾ ಶಕ್ತಿಗಳನ್ನು ಆರಾಧಿಸಲು ತೊಡಗಿದರು. ಆಯಾ ಶಕ್ತಿಗಳನ್ನು ಪ್ರತಿಬಿಂಬಿಸತಕ್ಕ ದೇವತಾಕಲ್ಪನೆಗಳೂ ಸಾಧ್ಯವಾದವು. ಪ್ರತಿದೇವತೆ ಯನ್ನೂ ಒಂದೊಂದು ಋಷಿಯು ಒಂದೊಂದು ವಿಧವಾಗಿ ಸ್ತುತಿಸಿದ್ದಾನೆ. ಆದರೆ, ಈ ಸ್ತುತಿವೈವಿಧ್ಯದಲ್ಲಿಯೂ ಒಂದು ಸಾಂಪ್ರದಾಯಿಕವಾದ ಸಮಾನತೆಯು ಕಂಡುಬರುತ್ತದೆ. ದೇವತೆಗಳ ಮೂಲತತ್ವಗಳಲ್ಲಿ ಭಾವಭೇದಗಳಿಲ್ಲ. ಆದರೆ

ಅವರ ಶಕ್ತ್ಯತಿಶಯಗಳನ್ನು ಸ್ತುತಿಸುವಾಗ ಪ್ರಶಂಸಾಪ್ರಭೇದಗಳಿರುತ್ತವೆ. ಈ ದೇವತೆಗಳ ವೈಯಕ್ತಿಕವಾದ ಸ್ವರೂಪ ಮತ್ತು ಪ್ರಭಾವಗಳನ್ನು ತಿಳಿಯುವ ಮೊದಲು ಈ ದೇವತೆಗಳ ಸಂಖ್ಯೆ, ಇವರ ಸ್ಥಾನಮಾನಗಳ ವಿಷಯದಲ್ಲಿ ವೈದಿಕವಾದ ಮತ್ತು ವೈದಿಕಸಂಪ್ರದಾಯಗಳನ್ನನುಸರಿಸುವ ನಿರುಕ್ತಾದಿಗಳ ವಿವರಣೆಗಳನ್ನು ತಿಳಿಯುವುದು ಅವಶ್ಯವಾಗಿರುತ್ತದೆ.

## ಯಾಸ್ಕರ ರೀತ್ಯಾ ದೇವತೆಗಳ ವರ್ಗೀಕರಣ.

ಹಿಂದಿನ ಸಂಪ್ರದಾಯವನ್ನೇ ಅನುಸರಿಸಿ ಯಾಸ್ಕರು ದೇವತಾವಿಭಾಗಕ್ರಮವನ್ನು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ.—

> **ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಪೃಥಗೇವ ಸ್ಯುಃ । ಪೃಥಕ್ ಹಿ ಸ್ತುತಯೋ ಭವಂತಿ । ತಥಾ ಅಭಿಧಾನಾನಿ ।** (ನಿ. ೭-೫)

ನೈರುಕ್ತರ ಮತದಂತೆ ದೇವತೆಗಳ ಸಂಖ್ಯೆ ಮೂರು. ಅಗ್ನಿಯು ಪೃಥಿವೀಸ್ಥನಾದ ದೇವತೆ; ಅಂತರಿಕ್ಷಸ್ಥನಾದ ದೇವತೆಯು ವಾಯು ಅಥವಾ ಇಂದ್ರನು; ಸೂರ್ಯನು ದ್ಯುಸ್ಥಾನದ ದೇವತೆ. ಸಂಹಿತಾವಾಕ್ಯವು ಈ ವಿಭಾಗಕ್ಕೆ ಅನುಗುಣವಾಗಿದೆ ಮತ್ತು ಅಂತಹ ವಾಕ್ಯಗಳ ಆಧಾರದ ಮೇಲೆಯೇ ಈ ವಿಭಾಗವನ್ನೂ ನೈರುಕ್ತರು ಮಾಡಿರಬಹುದು. "ಸೂರ್ಯೋ ನೋ ದಿವಸ್ಪಾತು............" (ಋ. ಸಂ. ೧೦-೧೫೮-೧) ಇತ್ಯಾದಿವಾಕ್ಯಗಳೇ ಇದಕ್ಕೆ ಉದಾಹರಣೆ. ಈ ದೇವತೆಗಳೇ ಅವರವರ ವೈಯಕ್ತಿಕವಾದ ಮಾಹಾತ್ಮ್ಯಗಳಿಂದಲೂ ಮತ್ತು ಕರ್ಮವೈವಿಧ್ಯಗಳಿಂದಲೂ ಕೂಡ ಅನೇಕವಿಧವಾದ ಅಭಿಧಾನಗಳನ್ನು ಹೊಂದಿರುವರು. ಒಬ್ಬನೇ ಪುರುಷನು ಯಜ್ಞದ ಬೇರೆಬೇರೆ ಕರ್ಮಗಳನ್ನು ಮಾಡುವಾಗ ಹೋತೃ, ಅಧ್ವರ್ಯು, ಬ್ರಹ್ಮ, ಉದ್ಗಾತೃ, ಇತ್ಯಾದಿ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವಂತೆ ಒಂದೇ ದೇವತೆಯು ಬೇರೆಬೇರೆ ಕರ್ಮಗಳಿಗೆ ಅಧ್ಯಕ್ಷನಾಗಿರುವಾಗ ಆಯಾ ಕರ್ಮಗಳಿಗನುಗುಣವಾದ ಹೆಸರುಗಳಿಂದ ನಿರ್ದಿಷ್ಟನಾಗಿರುತ್ತಾನೆ. ಅಥವಾ ಈ ದೇವತೆಗಳ ಸ್ತುತಿಯಲ್ಲಿಯೂ ವ್ಯತ್ಯಾಸಗಳಿರುವುದರಿಂದ ತಾತ್ವಿಕವಾದ ಭೇದವೇ ಇದ್ದರೂ ಇರಬಹುದು. ಆ ಭೇದಾನುಸಾರವಾದ ಅಭಿಧಾನಗಳೂ ಬೇರೆಬೇರೆಯಾಗಿರಬಹುದು. ಎಂದು ಯಾಸ್ಕರ ವಾಕ್ಯಕ್ಕೆ ತಾತ್ಪರ್ಯ. ಈ ಮೂರು ವಿಭಾಗಗಳನ್ನೇ ಅನುಸರಿಸಿ ನೈಘಂಟುಕದ ಐದನೆಯ ಅಧ್ಯಾಯದಲ್ಲಿ ಯಾಸ್ಕರು ದೇವತಾಸ್ಥಾನವನ್ನು ಮೂರು ಭಾಗವಾಗಿ ವಿಂಗಡಿಸಿದ್ದಾರೆ. ನಿರುಕ್ತದಲ್ಲಿ ೭ನೇ ಅಧ್ಯಾಯದ ೧೪ನೇ ಖಂಡದಿಂದ ೯ನೇ ಅಧ್ಯಾಯದ ೪೩ನೇ ಖಂಡದವರೆಗೆ ಪೃಥಿವೀಸ್ಥರಾದ ದೇವತಾವಿಷಯವೂ, ೧೦ನೇ ಅಧ್ಯಾಯದ ೧ ನೇ ಖಂಡದಿಂದ ೧೧ ನೇ ಅಧ್ಯಾಯದ ೫೦ ನೇ ಖಂಡದ ವರೆಗೆ ಅಂತರಿಕ್ಷಸ್ಥರಾದ ದೇವತಾವಿಷಯವೂ, ೧೨ ನೇ ಅಧ್ಯಾಯದ ೧ ನೇ ಖಂಡದಿಂದ ೪೬ ನೇ ಖಂಡದ ವರೆಗೆ ದ್ಯುಲೋಕದೇವತಾವಿಷಯವೂ ವಿವರಿಸಲ್ಪಟ್ಟಿದೆ.

ಯಾಸ್ಕರ ವರ್ಗೀಕರಣಗಳನ್ನನುಸರಿಸಿ, ದೇವತಾಪ್ರಶಂಸಕಗಳಾದ ಸೂಕ್ತಗಳನ್ನೂ ಸಹ ಮೂರು ಭಾಗ ಮಾಡಬಹುದು. ಈ ಮಂತ್ರವಿಭಾಗವನ್ನೂ ಯಾಸ್ಕರು ಈ ರೀತಿ ಮಾಡಿದ್ದಾರೆ:—(ದೇವತಾಸ್ಥಾನ ಮತ್ತು ಸಂಖ್ಯಾಪ್ರಭೇದಗಳಿಗೂ ಈ ವಿಭಜನೆಗೂ ಸಾಕ್ಷಾತ್ಸಂಬಂಧವಿಲ್ಲದಿದ್ದರೂ ಸಹ, ಈ ಅಂಶವನ್ನರಿಯುವುದು ಅತ್ಯವಶ್ಯವಾಗಿರುತ್ತದೆ.)

"ತಾಃ ತ್ರಿವಿಧಾ ಋಚಃ । ಪರೋಕ್ಷಕೃತಾಃ ಪ್ರತ್ಯಕ್ಷಕೃತಾಃ ಆಧ್ಯಾತ್ಮಿಕ್ಯಶ್ಚ । ತತ್ರ ಪರೋಕ್ಷ-ಕೃತಾಃ ಸರ್ವಾಭಿಃ ನಾಮವಿಭಕ್ತಿಭಿಃ ಯುಜ್ಯಂತೇ । ಪ್ರಥಮಪುರುಷೈಶ್ಚ ಆಖ್ಯಾತಸ್ಯ ॥"
(ನಿ. ೭-೧)

ದೇವತಾಪ್ರಶಂಸಕವಾದ ಋಕ್ಕುಗಳೂ ಮೂರು ವಿಧವಾಗಿವೆ :—(೧) ಪರೋಕ್ಷಕೃತ, (೨) ಪ್ರತ್ಯಕ್ಷಕೃತ ಮತ್ತು (೩) ಆಧ್ಯಾತ್ಮಿಕೀ ಎಂಬುದೇ ಈ ಮೂರು ಪ್ರಭೇದಗಳು.

೧. "ಇಂದ್ರೋ ದಿವ ಇಂದ್ರ ಈಶೇ" (ಋ. ಸಂ. ೧೦–೮೯–೧೦) 'ಇಂದ್ರನು ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾಗಿದ್ದಾನೆ' ಇತ್ಯಾದಿಯಾಗಿ ಪ್ರಥಮಪುರುಷದಲ್ಲಿ ದೇವತೆಯನ್ನುದ್ದೇಶಿಸಿ ಪ್ರಶಂಸಿಸುವ ವಾಕ್ಯಗಳು ಮೊದಲನೆಯ ಗುಂಪಿಗೆ ಸೇರಿದವು.

೨. "ವಿ ನ ಇಂದ್ರ ಮೃಧೋ ಜಹಿ" (ಋ. ಸಂ. ೧೦–೧೫೨–೪) 'ಎಲೈ ಇಂದ್ರನೇ, ನಮ್ಮ ಶತ್ರುಗಳನ್ನು ಜಯಿಸು' ಇತ್ಯಾದಿಯಾಗಿ ಮಧ್ಯಮಪುರುಷದಲ್ಲಿ ದೇವತೆಗಳನ್ನುದ್ದೇಶಿಸಿ ಪ್ರಾರ್ಥಿಸುವುದು ಎರಡನೆಯ ಗುಂಪಿಗೆ ಸೇರಿದುವು.

"ಅಹಂ ಭುವಂ ವಸುನಃ" (ಋ. ಸ. ೧೦–೪೮–೧) 'ಸಕಲ ಧನಕ್ಕೂ ನಾನೇ ಸ್ವಾಮಿಯು' ಇತ್ಯಾದಿಯಾಗಿ ಉತ್ತಮಪುರುಷದಲ್ಲಿ ದೇವತಾಪ್ರಶಂಸಕವಾಕ್ಯಗಳು ಮೂರನೆಯ ಗುಂಪಿನವು. ಇವುಗಳಲ್ಲಿ ಮೊದಲನೆಯ ಎರಡು ಗುಂಪುಗಳಿಗೆ ಸೇರಿದ ಸೂಕ್ತಗಳೇ ಅಧಿಕವಾಗಿವೆ.

## ದೇವತೆಗಳ ಸಂಖ್ಯೆ.

ಋಕ್ಸಂಹಿತೆಯ ಅನೇಕ ವಾಕ್ಯಗಳಲ್ಲಿ ದೇವತೆಗಳ ಸಂಖ್ಯೆಯು ೩೩ ಎಂಬುದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಉದಾಹರಣೆಗೆ—

"ಎಲೈ ಅಶ್ವಿನೀದೇವತೆಗಳೇ, ಅಮೃತಪಾನವನ್ನು ಮಾಡಲು ಮೂವತ್ತುಮೂರು ದೇವತೆಗಳೊಡನೆಯೂ ಕೂಡಿಕೊಂಡು ಬನ್ನಿರಿ." (ಋ. ಸಂ. ೧-೩೭-೧೪)

"ರೋಹಿತಾಶ್ವವುಳ್ಳವನೂ, ಸ್ತುತಿಪ್ರಿಯನೂ ಆದ ಎಲೈ ಅಗ್ನಿಯೇ, ಮೂವತ್ತುಮೂರು ದೇವತೆಗಳನ್ನೂ ಇಲ್ಲಿ ಕರೆದುಕೊಂಡು ಬಾ." (ಋ. ಸಂ. ೧–೪೫–೨)

"ಎಲೈ ದೇವತೆಗಳೇ, ನೀವು ದ್ಯುಲೋಕದಲ್ಲಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ, ಅಂತರಿಕ್ಷದಲ್ಲಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ ಪೃಥ್ವಿಯಲ್ಲಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ ಇದ್ದೀರಿ." (ಋ. ಸಂ. ೧–೧೩೯–೧೧)

"ಎಲೈ ಅಗ್ನಿಯೇ, ಪದ್ಧತಿಯಂತೆ, ಪತ್ನಿಯರೊಡಗೂಡಿದ ಮೂವತ್ತಮೂರು ದೇವತೆಗಳನ್ನೂ ಕರೆದುಕೊಂಡು ಬಂದು ಅವರಿಗೆಲ್ಲಾ ತೃಪ್ತಿಯನ್ನುಂಟುಮಾಡು." (ಋ. ಸಂ. ೩-೬-೯)

"ನಮ್ಮ ಯಜ್ಞವೇದಿಕೆಯಲ್ಲಿ ದರ್ಭಾಸನದ ಮೇಲೆ ಕುಳಿತಿರುವ ಮೂವತ್ತಮೂರು ದೇವತೆಗಳೂ ಸಹನಮ್ಮನ್ನು ಪುರಸ್ಕರಿಸಿ ನಮಗೆ ದ್ವಿಗುಣವಾಗಿ ಧನಗಳನ್ನೂ ಪುತ್ರಾದಿಸಂಪತ್ತುಗಳನ್ನೂ ಕೊಡಲಿ." (ಋ. ಸಂ. ೮–೨೮–೧)

" ಮನುವಿನಿಂದ ಪೂಜಿತರಾದ ಎಲೈ ಮೂವ್ವತ್ತುಮೂರು ದೇವತೆಗಳೇ, ನನ್ನಿಂದಲೂ ಸ್ತುತರಾಗಿ ನಮ್ಮ ಶತ್ರುಗಳನ್ನು ನಾಶಮಾಡಿರಿ." (ಋ. ಸಂ. ೮-೩೦-೨)

" ಎಲೈ ಅಶ್ವಿನೀದೇವತೆಗಳೇ, ಮೂವತ್ತಮೂರು ದೇವತೆಗಳೊಡನೆಯೂ, ಅಬ್ದೇವತೆಯೊಡನೆಯೂ, ಮರುತ್ತುಗಳೊಡನೆಯೂ, ಭೃಗುಗಳೊಡನೆಯೂ, ಉಷಸ್ಸು ಮತ್ತು ಸೂರ್ಯನೊಡನೆಯೂ ಕೂಡಿಕೊಂಡು ಬಂದು ನಮ್ಮಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ." (ಋ. ಸಂ. ೮-೩೫-೩)

" ಎಲೈ ಸೋಮನೇ, ಈ ಎಲ್ಲಾ ಮೂವತ್ತಮೂರು ದೇವತೆಗಳೂ ಸಹ ನಿನ್ನ ಅನುಗ್ರಹಕ್ಕೆ ಕಾದಿದ್ದಾರೆ." (ಋ ಸಂ. ೯-೯೨-೪)

ಇತ್ಯಾದಿಯಾಗಿ ಅನೇಕ ವಾಕ್ಯಗಳು ಈ ಮೂವತ್ತಮೂರು ಎಂಬ ದೇವತಾಸಂಖ್ಯೆಯನ್ನು ನಿಷ್ಪಷ್ಟವಾಗಿ ತಿಳಿಸುತ್ತವೆ. ಈ ವಿಭಾಗವು ಋಕ್ಸಂಹಿತಾವಾಕ್ಯಗಳಲ್ಲೇ ಅಲ್ಲದೇ ಇತರ ಶ್ರುತಿವಾಕ್ಯಗಳಲ್ಲೂ ನಿರ್ದಿಷ್ಟವಾಗಿವೆ. ಉದಾಹರಣೆಗೆ:—

" ಯೇ ದೇವಾ ದಿವಿಷದೋ ಅಂತರಿಕ್ಷಸದಶ್ಚ ಯೇ ಚ ಇಮೇ ಭೂಮ್ಯಾಂ ಅಧಿ " ಎಂಬ ಈ ಅಥರ್ವವೇದದ ವಾಕ್ಯದಲ್ಲಿ ಮೂವತ್ತುಮೂರು ಎಂಬ ಸಂಖ್ಯಾನಿರ್ದೇಶವಿಲ್ಲದಿದ್ದರೂ, ಪೃಥಿವೀಸ್ಥರು, ಅಂತರಿಕ್ಷಸ್ಥರು ಮತ್ತು ದ್ಯುಲೋಕಸ್ಥರು ಎಂಬ ವಿಭಾಗವಿರುತ್ತದೆ. ಸಾಮವೇದವಾಕ್ಯದಲ್ಲಿ ಸ್ವಲ್ಪ ವ್ಯತ್ಯಸ್ತವಾದ ವಿವರಣೆಯಿದೆ. (ಅ. ವೇ. ೧೦-೯-೧೨)

"ಯೇ ದೇವಾ ದಿವಿ ಸ್ಥ ಯೇ ಪೃಥಿವ್ಯಾಂ ಯೇ ಅಂತರಿಕ್ಷೇ ಓಷಧೀಷು ಪಶುಷು ಅಪ್ಸು ಅಂತಃ" ಎಂಬ ಈ ವಾಕ್ಯದಲ್ಲಿ ದ್ಯುಲೋಕಸ್ಥರೂ, ಪೃಥಿವೀಸ್ಥರೂ, ಅಂತರಿಕ್ಷಸ್ಥರೂ, ಓಷಧಿಗಳಲ್ಲಿ ಅಂತರ್ಗತರಾಗಿರುವವರೂ, ಪಶುಗಳಲ್ಲಿ ಅಂತರ್ಯಾಮಿಗಳಾಗಿರುವವರೂ, ಅಬ್ವರ್ತಿಗಳಾಗಿರುವವರೂ ಆದ ದೇವತೆಗಳು ಎಂಬ ವಿಭಾಗವಿರುತ್ತದೆ. (ಸಾ. ವೇ. ೧-೩೦-೩)

ಈ ಮುವತ್ತುಮೂರು ದೇವತೆಗಳು ಯಾರೆಂಬುದನ್ನು ಶತಪಥಬ್ರಾಹ್ಮಣದ ವಾಕ್ಯಗಳು ಈ ರೀತಿ ತಿಳಿಸುತ್ತವೆ.

" ಅಷ್ಟೌ ವಸವಃ । ಏಕಾದಶ ರುದ್ರಾ ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯ-ಸ್ತ್ರಿಗ್ಂಶ್ಯೌ ತ್ರಯಸ್ತ್ರಿಗ್ಂಶದ್ವೈ ದೇವಾಃ । ಪ್ರಜಾಪತಿಶ್ಚತುಸ್ತ್ರಿಗ್ಂಶಃ ॥

(ಶ. ಬ್ರಾ. ೪-೫-೭-೨)

"ವಸುಗಳ ಸಂಖ್ಯೆ ೮, ರುದ್ರರು ೧೧, ಆದಿತ್ಯರು ೧೨. ಅಲ್ಲದೇ ದ್ಯಾವಾಪೃಥಿಗಳು ೨, ಎಲ್ಲವೂ ಸೇರಿದರೆ ೩೩ ದೇವತೆಗಳು. ಇವರೊಂದಿಗೆ ಪ್ರಜಾಪತಿಯು ಸೇರಿಕೊಂಡರೆ ಮುವ್ವತ್ತನಾಲ್ಕನೆಯವನಾಗುತ್ತಾನೆ, ಎಂದು ಸಂಖ್ಯಾನಿರ್ದೇಶವಿದೆ. ಇದಲ್ಲದೇ ಈ ಸಂಖ್ಯೆಯ ವಿಷಯದಲ್ಲಿ ಒಂದು ಚರ್ಚೆಯೂ ಸಹ ನಡೆದಿರುತ್ತೆ. ಯಾಜ್ಞವಲ್ಕ್ಯನಿಗೂ, ಶಾಕಲ್ಯನಿಗೂ ನಡೆದ ಸಂಭಾಷಣೆಯಲ್ಲಿ ಈ ವಿಷಯವು ಈ ರೀತಿ ವಿವರಿಸಲ್ಪಟ್ಟಿದೆ.

" ಸ ಹೋವಾ ಚ । ಕತಿ ದೇವಾ ಯಾಜ್ಞವಲ್ಕ್ಯೇತಿ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತ್ಯೋಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯಸ್ತ್ರಿಗ್ಂಶ-ದಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿತ್ರಯ ಇತ್ಯೋಮಿತಿ ಹೋವಾಚ

ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ದ್ವಾವಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯಧ್ಯರ್ಧ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯೇಕ ಇತ್ಯೋಮಿತಿ ಹೋವಾಚ ಕತಮೇ ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತಿ"
(ಶ. ಬ್ರಾ. ೧೧-೬-೩-೪)

ಶಾಕಲ್ಯ:—ಎಲೈ ಯಾಜ್ಞವಲ್ಕ್ಯನೇ, ದೇವತಾ ಸಂಖ್ಯೆಗಳೆಷ್ಟು ?

ಯಾಜ್ಞವಲ್ಕ್ಯ :—ಮುನ್ನೂರುಮೂರು; ಮೂರುಸಾವಿರದ ಮೂರು.

ಶಾಕಲ್ಯ :—ಸತ್ಯವಾಗಿಯೂ ದೇವತೆಗಳ ಸಂಖ್ಯೆಯೆಷ್ಟು ಹೇಳು.

ಯಾಜ್ಞ್ಯವಲ್ಕ್ಯ :—ಮೂವತ್ತುಮೂರು.

ಶಾಕಲ್ಯ :—ಇನ್ನೂ ಖಂಡಿತವಾಗಿ ಹೇಳು.

ಯಾ :—ಮೂರು.

ಶಾ :—ಒಪ್ಪಿಕೊಂಡೆ. ಇನ್ನೂ ಖಂಡಿತವಾಗಿ ಹೇಳು.

ಯಾ :—ಎರಡು

ಶಾ :—ಅದೂ ಆಗಬಹುದು. ಇನ್ನೂ ನಿಷ್ಕೃಷ್ಟವಾಗಿ ಹೇಳು.

ಯಾ :—ಒಂದೂವರೆ.

ಶಾ :—ಅದೂ ಸತ್ಯವೇ ಸರಿ. ಇನ್ನೂ ಖಚಿತವಾಗಿ ಹೇಳು.

ಯಾ :—ಒಂದು. ಖಂಡಿತವಾಗಿಯೂ ಒಂದೇ.

ಶಾ :—ಹಾಗಾದರೆ, ಮುನ್ನೂರುಮೂರು; ಮೂರುಸಾವಿರದ ಮೂರು ಎಂದೆಯಲ್ಲಾ ಅದಕ್ಕೆ ಅರ್ಥವೇನು ಹೇಳು ಎಂದು ಪ್ರಶ್ನಿಸಲು ಪುನಃ ಯಾಜ್ಞವಲ್ಕ್ಯನು ಈ ರೀತಿ ವಿವರಿಸಿದ್ದಾನೆ.

"ಸ ಹೋವಾಚ । ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಗ್ಂಶತ್ವೇವ ದೇವಾ ಇತಿ ಕತಮೇ ತೇ ತ್ರಯಸ್ತ್ರಿಗ್ಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕಸ್ತ್ರಿಗ್ಂ ಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಗ್ಂಶಾವಿತಿ." (ಶ. ಬ್ರಾ. ೧೧-೬-೩-೫)

ಯಾಜ್ಞವಲ್ಕ್ಯ :—ದೇವತೆಗಳ ಸಂಖ್ಯೆಯು ಕೇವಲ ಮೂವತ್ತುಮೂರು ಆದರೆ ಉಳಿದ ಸಂಖ್ಯೆಗಳು ಅವರ ಮಹಿಮಾವಿಶೇಷಗಳನ್ನು ತಿಳಿಸತಕ್ಕ ಅಭಿಧಾನಗಳು.

ಶಾಕಲ್ಯ—ಆ ಮೂವತ್ತುಮೂರು ದೇವತೆಗಳು ಯಾರು ಯಾರು ?

ಯಾಜ್ಞವಲ್ಕ್ಯ—ವಸುಗಳು ೮ ; ರುದ್ರರು ೧೧ ; ಆದಿತ್ಯರು ೧೨, ಈ ಒಟ್ಟು ೩೧. ಇಂದ್ರನೂ ಪ್ರಜಾಪತಿಯೂ ಸೇರಿ ಒಟ್ಟು ೩೩.

[ಮೇಲೆ ಉದಹರಿಸಿದ ಶ. ಬ್ರಾ. ೪-೫-೭-೨ ನೇ ವಾಕ್ಯದ ವಿವರಣೆಗೂ ಈ ವಾಕ್ಯದ ವಿವರಣೆಗೂ ಇರತಕ್ಕ ವ್ಯತ್ಯಾಸವನ್ನು ಗಮನಿಸಬೇಕು.]

"ತ್ರಯಸ್ತ್ರಿಂಶಚ್ಛ ವೈ ದೇವಾಃ" (ಮ. ಭಾ. ಅ. ಪ. ೧೭೧) ಎಂಬ ಮಹಾಭಾರತದ ವಾಕ್ಯದಲ್ಲೂ ಈ ಸಂಖ್ಯಾನಿರ್ದೇಶನವಿದೆ. ರಾಮಾಯಣವಲ್ಲೂ ಇವೇ ಸಂಖ್ಯೆಯನ್ನು ನಿರ್ದೇಶಿಸುತ್ತಾ,

"ಅದಿತ್ಯಾಂ ಜಜ್ಞಿರೇ ದೇವಾಸ್ತ್ರಯಸ್ತ್ರಿಂಶದರಿಂದಮ ।
ಆದಿತ್ಯಾ ವಸವೋ ರುದ್ರಾ ಅಶ್ವಿನೌ ಚ ಪರಂತಪ ॥"

(ರಾಮಾಯಣ ಅ. ಕಾ. ೧೪-೧೪)

ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಅಶ್ವಿನೀದೇವತೆಗಳೂ ಅದಿತಿಯಲ್ಲಿ ಜನಿಸಿದರು ಎಂದಿದೆ. ಆದರೆ ಅಶ್ವಿನೀದೇವತೆಗಳು ಇಲ್ಲಿ ಸೇರಿದ್ದಾರೆ. ಈ ದೇವತಾಸಂಖ್ಯೆಯ ವಿಷಯವನ್ನು ವಿಮರ್ಶಿಸುವಾಗ ಐತರೇಯ ಬ್ರಾಹ್ಮಣದ ವಾಕ್ಯಗಳು ಈರೀತಿ ತಿಳಿಸುತ್ತವೆ.

ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾ ಏಕಾದಶ ಪ್ರಯಾಜಾ ಏಕಾದಶಾನುಯಾಜಾ ಏಕಾದಶೋಪಯಾಜಾ ಏತೇಽಸೋಮಪಾಃ ಪಶು-ಭಾಜನಾಃ ಸೋಮೇನ ಸೋಮಪಾನ್ ಪ್ರೀಣಾತಿ ಪಶುನಾಽಸೋಮಪಾನ್"

(ಐ. ಬ್ರಾ. ೨-೧೮)

ಸೋಮಪಾನವನ್ನು ಮಾಡತಕ್ಕ ದೇವತೆಗಳು ೩೩. ಸೋಮಪಾನವನ್ನು ಮಾಡದಿರುವ ದೇವತೆಗಳ ಸಂಖ್ಯೆ ೩೩. ಅಷ್ಟವಸುಗಳೂ, ಏಕಾದಶ ರುದ್ರರೂ ಮತ್ತು ದ್ವಾದಶಾದಿತ್ಯರೂ. ಪ್ರಜಾಪತಿಯೂ ಮತ್ತು ವಷಟ್ಕಾರನೂ ಸಹ ಸೋಮಪರು. ಹನ್ನೊಂದು ಪ್ರಯಾಜದೇವತೆಗಳೂ, ಹನ್ನೊಂದು ಅನುಯಾಜರೂ, ಹನ್ನೊಂದು ಉಪಯಾಜರೂ ಸೋಮಪಾನವನ್ನು ಮಾಡತಕ್ಕವರಲ್ಲ. ಅವರು ಪಶುಗಳ ಆಹುತಿಯನ್ನು ಸ್ವೀಕರಿಸತಕ್ಕವರು. ಯಜ್ಞಕರ್ತನು ಸೋಮಪರಾದ ದೇವತೆಗಳನ್ನು ಸೋಮದ ಅರ್ಪಣೆಯಿಂದಲೂ, ಅಸೋಮಪರನ್ನು ಪಶುಗಳ ಆಹುತಿಯಿಂದಲೂ ತೃಪ್ತಿಪಡಿಸುತ್ತಾನೆ.

ಈ ವಿಷಯವಾಗಿ ಒಂದು ರೀತ್ಯಾ ಸಾಮಂಜಸ್ಯವಿದ್ದರೂ ಇನ್ನೊಂದು ರೀತ್ಯಾ ಈ ಸಂಖ್ಯೆಗಳ ವಿಷಯದಲ್ಲಿ ಸಾಮಂಜಸ್ಯವಿರುವುದಿಲ್ಲ. ವಸುರುದ್ರಾದಿತ್ಯರ ವಿಷಯದಲ್ಲಿ ಪ್ರಾಯಃ ಅನೇಕ ಮತಗಳು ಒಂದೇ ಆಗಿರುತ್ತವೆ. ಮೂವತ್ತೆರಡು ಮೂವತ್ತಮೂರನೆಯ ದೇವತೆಗಳ ವಿಷಯದಲ್ಲಿ ಒಂದಕ್ಕೊಂದಕ್ಕೆ ವ್ಯತ್ಯಾಸವಿರುತ್ತದೆ. ಅಲ್ಲದೇ ಒಂದೆರಡೆಡೆಗಳಲ್ಲಿ ವಸುಗಳಾರೆಂಬುದರ ವಿಷಯದಲ್ಲೂ ಸಂಶಯಕ್ಕೆ ಅವಕಾಶವಿರುತ್ತದೆ. (ಶ. ಬ್ರಾ. ೧೧-೬-೩-೬.)

ಆದುದರಿಂದ ಈ ಮೂವತ್ತುಮೂರು ಎಂಬ ಸಂಖ್ಯೆಯು ನಿಸ್ಪಷ್ಟವಾದ ಅಭಿಪ್ರಾಯವನ್ನು ಎಲ್ಲಾ ಕಡೆಯೂ ಸೂಚಿಸುವುದಿಲ್ಲ. ಕೆಲವೆಡೆಗಳಲ್ಲಿ, ಅಗ್ನಿ, ಅಶ್ವಿನೀದೇವತೆಗಳು ಮತ್ತು ಮರುತ್ತುಗಳು ಈ ಸಂಖ್ಯೆಯಲ್ಲಿ ಸೇರಿಲ್ಲ ವೆಂದು ಪ್ರತ್ಯೇಕನಿರ್ದೇಶದಿಂದ ತಿಳಿದುಬರುತ್ತದೆ. ಮೇಲೆ ಉದಾಹರಿಸಿರುವ ಶತಪಥಬ್ರಾಹ್ಮಣದ (೧೧-೬-೩-೬) ವಾಕ್ಯದಲ್ಲಿ ಇಂದ್ರನನ್ನು ದ್ವಾದಶಾದಿತ್ಯರಲ್ಲಿ ಸೇರಿಸಿಲ್ಲ. ಆದಿತ್ಯರ ಜೊತೆಯಲ್ಲಿ ಇಂದ್ರನು ಮೂವತ್ತೆರಡನೆಯ ದೇವತೆಯೆಂದು ತಿಳಿಸಿದೆ.

ಋಕ್ಸಂಹಿತೆಯ ಕೆಲವು ವಾಕ್ಯಗಳಲ್ಲಿ ಎಂದರೆ, ಋ. ಸಂ. ೩-೯-೯ ಮತ್ತು ೧೦-೫೨-೬ನೇ ಮಂತ್ರಗಳಲ್ಲಿ "ತ್ರೀಣಿ ಶತಾ ತ್ರೀ ಸಹಸ್ರಾಣಿ" ಮುನ್ನೂರು, ಮೂರುಸಾವಿರ, ಮೂವತ್ತೊಂಭತ್ತು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದಿದೆ.

ಋಕ್ಸಂಹಿತೆಯ ಇನ್ನೊಂದು ಮಂತ್ರದಲ್ಲಿ ದೇವತೆಗಳ ಗುಂಪನ್ನು ಹಿರಿಯರು ಮತ್ತು ಕಿರಿಯರು ಎಂಬ ವಿಭಾಗವನ್ನು ಮಾಡಿದೆ. "ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ.........." (ಋ. ಸಂ. ೧-೨೭-೧೩) ಎಂಬಲ್ಲಿ ಮಹತ್ಸ್ವರೂಪವುಳ್ಳ ದೇವತೆಗಳು ಅರ್ಭಕರಾದ ಕಿರಿಯ ದೇವತೆಗಳಿಗೂ ನಮಸ್ಕಾರವು ಎಂದು ವಿಭಾಗಿಸಿದೆ. ಆದರೆ ಇದಕ್ಕೆ ವಿರುದ್ಧವಾಗಿ ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋಮ-ಹಾಂತ ಇತ್ ॥ (ಋ. ಸಂ. ೮-೩೦-೧) ಎಂಬಲ್ಲಿ ಎಲೈ ದೇವತೆಗಳೇ, ನಿಮ್ಮಲ್ಲಿ ಹಿರಿಯರು, ಕಿರಿಯರು ಎಂಬ ವ್ಯತ್ಯಾಸವಿಲ್ಲ. ಎಲ್ಲರೂ ಮಹತ್ಸ್ವರೂಪವುಳ್ಳವರೇ ಆಗಿದ್ದೀರಿ ಎಂದು ಪ್ರಶಂಸಿಸಿದೆ

### ದೇವತೆಗಳ ಮೂಲ ಮತ್ತು ಅಮರ್ತ್ಯತ್ವ.

"ವಿಶ್ವೇ ಅಮೃತಾ ಅಮೂರಾಃ" ಇತ್ಯಾದಿ ವಾಕ್ಯಗಳಿಂದ ಋಕ್ಸಂಹಿತೆಯಲ್ಲಿ ದೇವತೆಗಳನ್ನೆಲ್ಲಾ ಮರಣರಹಿತರೆಂದು ನಿರ್ದೇಶಿಸಿದೆ. (ಋ. ಸಂ. ೧-೨೪-೧; ೧-೭೨-೨; ೧-೭೨-೧೦; ೧-೧೫೯-೩; ೩-೪-೧೧; ೩-೨೧-೧; ೪-೪೨-೧; ೭-೧೧-೧; ೭-೧೭-೪; ೧೦-೧೩-೧; ೧೦-೬೫-೧೫; ೧೦-೬೯-೯; ೧೦-೭೨-೫). ಆದರೆ, ಉತ್ಪತ್ತಿರಹಿತರೆಂದಾಗಲಿ, ಸ್ವಯಂ ಆವಿರ್ಭೂತರೆಂದಾಗಲಿ ನಿರ್ದೇಶಿಸಲ್ಪಟ್ಟಿಲ್ಲ ದೇವತೆಗಳ ಉತ್ಪತ್ತಿ ವಿಷಯವನ್ನು ತಿಳಿಸುವಾಗೆಲ್ಲಾ ಕೇವಲ ಭೌತಿಕವಾದ ಆವಿರ್ಭಾವಗಳೆಂದರ್ಥಮಾಡಬೇಕೆಂದು Max Muller ಎಂಬ ಪಂಡಿತನು ಹೇಳಿದ್ದಾನೆ. ಅಹಸ್ಸಿನ ಆವಿರ್ಭಾವ, ಸೂರ್ಯನ ಉದಯ, ಸಂವತ್ಸರದ ಆದಿ ಇತ್ಯಾದಿಗಳು ಉದಾಹರಣೆಗಳು. (ಮುಂದಿನ ಭಾಗದಲ್ಲಿ ದೇವತೆಗಳ ಉತ್ಪತ್ತಿ ವಿಷಯದ ವಿವರಣೆಯನ್ನು ತಿಳಿಸಿದೆ.) ಋ. ಸಂ. ೧-೧೧೩-೧೯ ನೇ ಮಂತ್ರದಲ್ಲಿ ಉಷಸ್ಸು (ದೇವಾನಾಂ ಮಾತಾ) ದೇವತೆಗಳ ಮಾತೆಯೆಂದು ವರ್ಣಿತಳಾಗಿದ್ದಾಳೆ. ಋ. ಸಂ. ೨-೨೬-೩ ರಲ್ಲಿ ಬ್ರಹ್ಮಣಸ್ಪತಿಯನ್ನು ದೇವತೆಗಳ ಪಿತೃವೆಂದು ಕರೆದಿದೆ. ೯-೮೭-೨ ರಲ್ಲಿ ಸೋಮನನ್ನು ನಿರ್ಮಾಣಕೌಶಲ್ಯವನ್ನು ಹೊಂದಿರುವವನೂ ದೇವತೆಗಳ ಪಿತೃವೆಂದೂ ಕರೆದಿದೆ. (೯-೪೨-೪; ೯-೮೬-೧೦; ೯-೧೦೯-೪ ಇತ್ಯಾದಿ ಮಂತ್ರಗಳಲ್ಲೂ ಇದೇ ವಿಷಯವನ್ನು ತಿಳಿಸಿದೆ). ೯-೯೬-೫ ರಲ್ಲು ಅದೇ ಸೋಮನು ದ್ಯಾವಾಪೃಥಿವಿಗಳಿಗೂ, ಅಗ್ನಿ, ಸೂರ್ಯ, ಇಂದ್ರ ಮತ್ತು ವಿಷ್ಣು ಈ ದೇವತೆಗಳಿಗೂ ಜನಕನೆಂದು ಸ್ತುತಿಸಿದೆ. ದೇವತೆಗಳು ಅದಿತಿಯನ್ನು ಅನುಸರಿಸಿ ಉತ್ಪನ್ನರಾದರೆಂದು ೧೦-೭೨-೫ ನೇ ಮಂತ್ರದ ಪ್ರಶಂಸೆಯಾಗಿದೆ. ಕೆಲವು ಓಷಧಿಗಳು ದೇವತೆಗಳಿಗಿಂತಲೂ ಮೂರು ಯುಗಗಳ ಪೂರ್ವಭಾವಿಯಾಗಿ ಉತ್ಪನ್ನವಾದವು ಎಂದು ೧೦-೯೭-೧ ನೇ ಋಕ್ಕಿನಲ್ಲಿ ತಿಳಿಸಿದೆ. ವಿಶ್ವದ ಸೃಷ್ಟಿಯಾದನಂತರವೇ ದೇವತೆಗಳು ಉತ್ಪನ್ನರಾದುದರಿಂದ ವಿಶ್ವದ ಮೂಲವನ್ನೂ ಸೃಷ್ಟಿಕ್ರಮವನ್ನೂ ವಿವರಿಸಲು ಅವರಿಗೆ ಸಾಧ್ಯವಿಲ್ಲವಾಯಿತು ಎಂದು ೧೦-೧೨೯-೬ ನೇ ಮಂತ್ರವು ಪ್ರಕಟಪಡಿಸುತ್ತದೆ. ಇದಲ್ಲದೇ, ದೇವತೆಗಳ ಉತ್ಪತ್ತಿಕ್ರಮವನ್ನು ಕೆಳಗೆ ಉದಾಹೃತವಾಗಿರುವ ಮಂತ್ರಗಳು ಈ ರೀತಿ ತಿಳಿಸಿವೆ.

"ಸಕಲ ದೇವತೆಗಳೂ ಉಚ್ಛಿಷ್ಟದಿಂದ ಉತ್ಪನ್ನರಾದರು" (ಅ. ವೇ. ೧೧-೭-೨೩)

"ಇದೇ ಸಮುದ್ರದಿಂದಲೇ ಸಕಲ ದೇವತೆಗಳೂ, ಸಕಲ ಪ್ರಾಣಿಗಳೂ ಉತ್ಪನ್ನವಾದವು"

"ಏತಸ್ಮಾದ್ವೈ ಸಮುದ್ರಾತ್ ಸರ್ವೇ ದೇವಾಃ ಸರ್ವಾಣಿ ಭೂತಾನಿ ಸಮುದ್ದ್ರವಂತಿ"
(ಶ. ಬ್ರಾ. ೧೪-೨-೨-೨)

" ವರುಣ, ಮಿತ್ರ, ಅರ್ಯಮ, ಭಗ, ದಕ್ಷ ಮತ್ತು ಅಂಶ ಎಂಬ ಈ ದೇವತೆಗಳು ಅದಿತಿಪುತ್ರರು. ಆದುದರಿಂದಲೇ ಆದಿತ್ಯರು" (೨-೨೭-೧)

ಇಂದ್ರನ ಉತ್ಪತ್ತಿಯೂ ಮತ್ತು ಅವನ ಮಾತಾಪಿತೃಗಳ ನಿರ್ದೇಶವೂ ಅನೇಕ ಕಡೆಗಳಲ್ಲಿ ಸೂಚಿತವಾಗಿವೆ. (೪-೧೭-೪; ೧-೧೬-೧೨; ೪-೧೮-೫; ೪-೧೮-೧೨; ೮-೪೫-೪; ೮-೬೬-೧; ೧೦-೧೩೪-೧) ನಿಷ್ಟಿಗ್ರಿಯೇ ಇಂದ್ರನ ತಾಯಿ (೧೦-೧೦೧-೧೨). ೬-೫೯-೨ ರಲ್ಲಿ ಇಂದ್ರಾಗ್ನಿಗಳ ಜನಕನು ಒಬ್ಬನೇ ಎಂದೂ, ಇವರಿಬ್ಬರೂ ಅವಳಿಜವಳಿ ಮಕ್ಕಳೆಂದೂ ಸ್ತುತಿಸಿದೆ. **ಸಮಾನೋ ವಾಂ ಜನಿತಾ ಭ್ರಾತರಾ ಯುವಂ ಯಮಾವಿಹೇಹ ಮಾತರಾ ॥**

"ಯೇ ವೋ ದೇವಾಃ ಪಿತರೋ ಯೇ ಚ ಪುತ್ರಾಃ..........." (ಅ. ವೇ. ೧-೩೦-೨)

ಎಲೈ ದೇವತೆಗಳೇ, ನಿಮ್ಮಲ್ಲಿ ಯಾರು ಪಿತೃಗಳೋ ಮತ್ತು ಯಾರು ಪುತ್ರರೋ ಎಂಬ ಅಥರ್ವವೇದದ ವಾಕ್ಯದಲ್ಲಿ ಜನ್ಯಜನಕಭಾಗವು ನಿರೂಪಿತವಾಗಿದೆ.

ಅಮರ್ತ್ಯತ್ವ.

ಋ. ಸಂ. ೪-೫೪-೨ ನೇ ಮಂತ್ರದಲ್ಲಿ ಸವಿತೃವು ದೇವತೆಗಳಿಗೆ ಅಮೃತತ್ವವನ್ನು ಅನುಗ್ರಹಿಸುತ್ತಾನೆಂದಿದೆ (ಸಾಯಣರು ಈ ವಾಕ್ಯದಲ್ಲಿ **ಅಮೃತತ್ವಂ** ಎಂಬ ಪದಕ್ಕೆ ಅಮರ್ತ್ಯತ್ವಸಾಧಕವಾದ ಸೋಮಾದಿಗಳನ್ನನುಗ್ರಹಿಸಿ ಕೊಟ್ಟನು ಎಂದರ್ಥಮಾಡಿದ್ದಾರೆ.) ಇದೇ ಸವಿತೃವು ಋಭುಗಳಿಗೂ ಸಹ ಮರಣರಾಹಿತ್ಯವನ್ನು ಹೊಂದುವಂತೆ ಅನುಗ್ರಹಿಸಿದನು ಎಂದು ೧-೧೧೦-೩ ನೇ ಮಂತ್ರದಲ್ಲಿ ಪ್ರಶಂಸೆಯಿದೆ. ಇದೇ ಭಾವವನ್ನು ವಿವರಿಸತಕ್ಕ ಇನ್ನೂ ಕೆಲವು ವಾಕ್ಯಗಳನ್ನು ಉದಾಹರಣೆಗಾಗಿ ಪರಿಶೀಲಿಸಬಹುದು. " ಯಾವ ದೇವತೆಗಳು, ಶಿಶುರೂಪನಾಗಿ ಉತ್ಪನ್ನನಾದವನೂ, ತನ್ನ ಪಿತೃಗಳ ಉದರದಿಂದ ಆವಿರ್ಭೂತನಾದವನೂ ಆದ ಅಗ್ನಿಯನ್ನು ಪೂಜಿಸುವರೋ ಆ ದೇವತೆಗಳಿಗೆ ಅಗ್ನಿಯು ತನ್ನ ಮಹತ್ತ್ವದಿಂದ ಅಮರ್ತ್ಯತ್ವವನ್ನನುಗ್ರಹಿಸುವನು.

(೬-೭-೪)

" ದೇವತೆಗಳು ಅಮೃತತ್ವದ ಸಂಪಾದನೆಗಾಗಿ ಸೋಮಪಾನವನ್ನು ಮಾಡುತ್ತಾರೆ."

(೯-೧೦೬-೮)

ಇದೇ ವಿಷಯದಲ್ಲಿ ಶತಪಥಬ್ರಾಹ್ಮಣದಲ್ಲಿ ಒಂದು ಕಥಾಸನ್ನಿವೇಶವು ಈರೀತಿ ವಿವೃತವಾಗಿದೆ;—

" **ದೇವೇಭ್ಯೋ ಹ ವೈ ಅಮೃತತ್ವಮಪಚಕ್ರಾಮ । ಅಭಿಷುತ್ಯ ಅಗ್ನಾವಜುಹವುಃ । ತದಗ್ನಾವಮೃತಮಾದಧುಃ............ತತೋ ದೇವಾ ಅಮೃತಾ ಅಭವನ್ ॥** "

(ಶ. ಬ್ರಾ. ೯-೫-೧-೧ ರಿಂದ ೮)

ಒಂದುಸಲ ದೇವತೆಗಳು ಅಮೃತತ್ವವನ್ನು ಕಳೆದುಕೊಂಡರು. ಆದರೆ, ವ್ರತಕರ್ಮಗಳ ಆಚರಣೆಯಿಂದ ಪುನಃ ಅದನ್ನು ಸಂಪಾದಿಸಬೇಕೆಂದಿಚ್ಛಿಸಿದರು. ಆಗ ಅಗ್ನಿಯಲ್ಲಿ ಸೋಮವನ್ನರ್ಪಿಸಿ ಅಗ್ನಿಗೆ ಅಮೃತತ್ವವು ಲಭಿಸುವಂತೆ ಮಾಡಿದರು. ಅಗ್ನಿಯೇ ಸಕಲ ದೇವತೆಗಳಿಗೂ ಆತ್ಮರೂಪನಾದುದರಿಂದ ಅವರಿಗೂ ಅಮೃತತ್ವವು ಒಡನೆಯೇ ಲಭಿಸಿತು. ಸೋಮವೇ ಅಮೃತತ್ವಸಾಧಕವು. ಈ ಸೋಮದ ಪ್ರಭಾವದಿಂದಲೇ ಇಂದ್ರನು ದೇವಲೋಕವನ್ನು ಜಯಿಸಿದನು (೧೦-೧೬೭-೧) ಮತ್ತು ಸೋಮರೂಪವಾದ ಹವಿಸ್ಸನ್ನರ್ಪಿಸಿ ಮಹತ್ತ್ವವನ್ನು ಪಡೆದನು (೧೮-೧೫೫-೪).

" ಯೇನ ದೇವಾ ಅಮೃತಮನ್ವವಿಂದನ್ " ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯೇ ದೇವತೆಗಳಿಗೆಲ್ಲಾ ಅಮೃತತ್ವಸಾಧಕನೆಂದು ಅಥರ್ವವೇದವು ಪ್ರಶಂಸಿಸಿದೆ (ಅ. ವೇ. ೪-೨೩-೬). " ಬ್ರಹ್ಮಚರ್ಯೇಣ ತಪಸಾ ದೇವಾಃ ಮೃತ್ಯುಮುಪಾಘ್ನತ " ದೇವತೆಗಳು ಬ್ರಹ್ಮಚರ್ಯದಿಂದಲೂ, ತಪಸ್ಸಿನಿಂದಲೂ ಮೃತ್ಯುವನ್ನು ನಾಶಮಾಡಿದರೆಂದು ಅದೇ ವೇದದಲ್ಲಿ ತಿಳಿಸಿದೆ (ಅ. ವೇ. ೯-೫-೧೯). ರೋಹಿತನ ಸಹಾಯದಿಂದ ಅಮೃತತ್ವವನ್ನು ಪಡದರೆಂದೂ ಒಂದು ಸಲ ಹೇಳಿದೆ. (ಅ. ವೇ. ೧೩-೧-೭)

ಹೀಗೆ ವ್ರತಾದಿಗಳಿಂದ ದೇವತೆಗಳು ಅಮೃತತ್ವವನ್ನು ಸಂಪಾದಿಸಿದರೆಂಬ ಭಾವವು ನಾನಾ ಕಡೆಗಳಲ್ಲಿ ಸೂಚಿತ ವಾಗಿದೆ. ಅ. ವೇ. ೩-೨೨-೩; ೪-೧೧-೬; ೪-೧೪-೧; ಶ. ಬ್ರಾ. ೧-೭-೩-೧; ಐ. ಬ್ರಾ. ೬-೨೦; ತೈ. ಸಂ. ೧-೭-೧-೩; ೬-೫-೩-೧.

" ತಥೈವ ತಪಸಾ ದೇವಾ ಮಹಾಮಾಯೊ ದಿವಂ ಗತಾಃ " (ಮಹಾಭಾರತ)

ಇದೇ ಅಮೃತತ್ವಸಾಧನೆಯ ವಿಷಯದಲ್ಲಿ ಶತಪಥಬ್ರಾಹ್ಮಣದಲ್ಲೂ, ತೈತ್ತಿರೀಯಸಂಹಿತೆಯಲ್ಲಿಯೂ ಸಹ ಸ್ವಾರಸ್ಯವಾದ ಸನ್ನಿವೇಶಗಳು ವಿವೃತವಾಗಿವೆ.

" ಪ್ರಜಾಪತಿಂ ವೈ ಭೂತಾನ್ಯುಪಾಸೀದನ್.........ಯಜ್ಞೋ ವೋಽನ್ನಮಮೃತತ್ವಂ ಚ "
(ಶ. ಬ್ರಾ. ೨-೪-೨-೧)

ಒಂದು ಸಲ ಸಕಲ ಭೂತಗಳೂ ಪ್ರಜಾಪತಿಯನ್ನು ಸಮೀಪಿಸಿ " ನಾವು ಬದುಕಬೇಕಾದ ಮಾರ್ಗವನ್ನುಪದೇಶಿಸು " ಎಂದು ಪ್ರಾರ್ಥಿಸಿದವು. ಅದೇ ಕಾಲದಲ್ಲಿ ದೇವತೆಗಳೂ ಸಹ ಯಜ್ಞೋಪವೀತಧಾರಿಗಳಾಗಿ ಬಂದು ನಮಸ್ಕರಿಸಿ ಪ್ರಾರ್ಥಿಸಿದಾಗ " ಯಜ್ಞವೇ ನಿಮಗೆ ಅನ್ನವು. ಅಮೃತತ್ವವೇ ಸಾರವು. ಮತ್ತು ಆದಿತ್ಯನೇ ಜ್ಯೋತಿಯು " ಎಂದು ಹೇಳಿದನು. ಇದೇ ವಿಷಯವು ಕೊಂಚ ವ್ಯತ್ಯಸ್ತವಾದ ರೀತಿಯಲ್ಲಿ ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ತಿಳಿಸಲ್ಪಟ್ಟಿದೆ.

ಯಥಾ ವೈ ಮನುಷ್ಯಾ ಏವಂ ದೇವಾ ಅಗ್ರ ಆಸನ್ ತೇಽಕಾಮಯಂತಾವರ್ತಿಂ ಪಾಪ್ಮಾನಂ ಮೃತ್ಯುಮಪಹತ್ಯ ದೈವೀಗ್ಂ ಸಂಗ್ಂ ಸದಂ ಗಚ್ಛೇಮೇತಿ............ಗಚ್ಛನ್ ॥
(ತೈ. ಸಂ. ೭-೪-೨-೧)

ಪೂರ್ವದಲ್ಲಿ ದೇವತೆಗಳೂ ಮಾನವರಂತೆಯೇ ಇದ್ದರು. ಅವರು ಮಾನವರಿಗೆ ಸಹಜವಾದ ಕಾಮ, ದುಃಖ ಮತ್ತು ಮೃತ್ಯುಗಳನ್ನು ದಾಟ ದೇವಪರಿಷತ್ತಿಗೆ ಹೋಗಿ ಸೇರಬೇಕೆಂದಿಚ್ಛಿಸಿದರು. ಆಗ ಅವರು ಚತುರ್ವಿಂಶತಿರಾತ್ರವೆಂಬ ಸತ್ರವನ್ನು ಧ್ಯಾನಿಸಿ ಅದನ್ನಾಚರಿಸಿದರು ಅದರ ಫಲವಾಗಿ ಅವರು ದುಃಖ ಮತ್ತು ಮರಣಗಳ ಭಯದಿಂದ ಮುಕ್ತರಾಗಿ ದೇವಸಂಸತ್ತನ್ನು ಸೇರಿದರು. ಇದರಂತೆಯೇ ತೈತ್ತಿರೀಯ ಬ್ರಾಹ್ಮಣದಲ್ಲೂ ಸಹ ' ತಪಸಾ ದೇವಾ ದೇವತಾಮಗ್ರ ಆಯನ್ ' (ತೈ. ಬ್ರಾ. ೩-೧೨-೩-೧) ತಪಸ್ಸಿನಿಂದಲೇ ದೇವತೆಗಳು ದೇವತ್ವವನ್ನು ಪಡೆದರೆಂಬ ವಿಷಯವನ್ನು ತಿಳಿಸಿದೆ.

ಕೆಲವು ಶ್ರುತಿವಾಕ್ಯಗಳು, ಇಂದ್ರಾದಿ ಕೆಲವು ದೇವತೆಗಳು ಸ್ವಾಭಾವಿಕವಾಗಿಯೇ ಅಜರರೂ, ಅಮರ್ತ್ಯರೂ ಆಗಿರುವರೆಂದು ತಿಳಿಸುತ್ತವೆ. (೩-೪೬-೧; ೫-೪೨-೬) " ಶರತ್ತುಗಳಾಗಲಿ, (ಶರತ್ ಎಂದರೆ ಸಂವತ್ಸರವು) ಮಾಸ ಗಳಾಗಲಿ, ದಿವಸಗಳಾಗಲಿ ಇಂದ್ರನಿಗೆ ಜರೆಯನ್ನುಂಟುಮಾಡಲಾರವು " (೬-೨೪-೭).

ದೇವತೆಗಳ ಈ ವಿಧವಾದ ಅಮರ್ತ್ಯತ್ವವು ಪರವಸ್ತುವಿನ ಅಮರ್ತ್ಯತ್ವದಂತೆ ಅನಂತವೇ ಅಥವಾ ಸಾಂತವೇ ಎನ್ನುವ ವಿಷಯದಲ್ಲಿ ಸಂಹಿತಾವಾಕ್ಯಗಳು ಯಾವ ಅಭಿಪ್ರಾಯವನ್ನೂ ತಿಳಿಸಿಲ್ಲ. ಆದರೆ, ಬ್ರಾಹ್ಮಣಾದಿಗಳ ವಿವರಣೆಯಂತೆ ಅದು ಸಾಂತವೆಂದೇ ತಿಳಿಯುತ್ತದೆ. ವಿಶ್ವಸೃಷ್ಟಿ ಮತ್ತು ವಿಶ್ವಪ್ರಳಯಗಳನ್ನು ವರ್ಣಿಸುವ ಪುರಾಣವಾಕ್ಯಗಳು ದೇವತೆಗಳನ್ನೂ ವಿಶ್ವರಚನೆಯ ಒಂದು ಭಾಗವೆಂದು ತಿಳಿಸಿ ವಿಶ್ವಪ್ರಳಯಕಾಲದಲ್ಲಿ ದೇವತೆಗಳೂ ಪ್ರಳಯನಿಯಮಕ್ಕೆ ಒಳಪಡುವರೆಂದು ಖಚಿತವಾಗಿ ವಿವರಿಸಿವೆ.

" ಬಹೂನೀಂದ್ರಸಹಸ್ರಾಣಿ ದೇವಾನಾಂ ಚ ಯುಗೇ ಯುಗೇ ।
ಕಾಲೇನ ಸಮತೀತಾನಿ ಕಾಲೋ ಹಿ ದುರತಿಕ್ರಮಃ ''

(ಸಾಂಖ್ಯಕಾರಿಕಾಭಾಷ್ಯ)

ಇತ್ಯಾದಿ ವಾಕ್ಯಗಳಿಂದ ಈ ವಿಷಯವು ಸ್ಪಷ್ಟಪಡುತ್ತದೆ. ಇಂದ್ರಾದಿದೇವತೆಗಳೆಲ್ಲರೂ ಸಹ ಕಾಲನಿಯಮಕ್ಕೆ ಒಳಪಟ್ಟು ಸೃಷ್ಟಿಪ್ರಳಯಗಳ ರಚನೆಗೆ ಬದ್ಧರೆಂಬುದು ವ್ಯಕ್ತವಾಗುತ್ತದೆ. ಜರಾಮರಣಾದಿ ದುಃಖವು ದೇವಮಾನವಾದಿಗಳಿಗೆಲ್ಲಾ ಸಮಾನವೆಂದು ಸಾಂಖ್ಯಸೂತ್ರದ ವಿಷಯವು (ಸಾ. ಸೂ. ೩-೫೩). ಈ ಸೂತ್ರದ ಭಾಷ್ಯವು ಈ ಅಭಿಪ್ರಾಯವನ್ನು ಇನ್ನೂ ಅಧಿಕವಾಗಿ ವಿವರಿಸುತ್ತದೆ. ಆದರೆ ಈ ನಿಯಮವು ಮುಕ್ತಾತ್ಮರಿಗೆ ಅನ್ವಯಿಸುವುದಿಲ್ಲವೆಂದು ಕೆಲವರ ಮತ. ಬ್ರಹ್ಮಸೂತ್ರಾದಿಗಳು ಈ ಶ್ರದ್ಧೆಯನ್ನು ಬಲಪಡಿಸುತ್ತವೆ.

## ದೇವತೆಗಳ ಸಂತತಿವೈವಿಧ್ಯ ಮತ್ತು ಅವುಗಳ ಪರಸ್ಪರ ಸಂಬಂಧ.

ಹಿಂದಿನ ಪ್ರಕರಣದಲ್ಲಿ ದೇವತೆಗಳ ಉತ್ಪತ್ತಿಯ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿದೆ. ಕೆಲವು ದೇವತೆಗಳಿಗೆ ಮಾತಾಪಿತೃಗಳೂ ನಿರ್ದೇಶಿಸಲ್ಪಟ್ಟಿದ್ದಾರೆ. ಈ ಅಂಶವು ದೇವತೆಗಳ ಸಂತತಿಪ್ರಭೇದಗಳನ್ನೂ ತಿಳಿಯಲು ಸಾಹಾಯ್ಯಕವಾಗಿರುತ್ತದೆ. ದೇವತೆಗಳ ಜನನೀಜನಕರ ವಿಷಯಗಳನ್ನು ತಿಳಿಸುವ ಕೆಲವು ಮಂತ್ರಗಳನ್ನು ಪ್ರಥಮತಃ ಪರಿಶೀಲಿಸಬೇಕು.

" ಎಲೈ ಇಂದ್ರನೇ, ನಿನ್ನ ಮಾತೃವನ್ನು ವಿಧವೆಯನ್ನಾಗಿ ಮಾಡಿದವರಾರು ? ನೀನು ಸುಪ್ತನಾಗಿರುವಾಗಾಗಲಿ ಅಥವಾ ಸಂಚರಿಸುತ್ತಿರುವಾಗಾಗಲಿ ನಿನ್ನನ್ನು ನಾಶಮಾಡಬೇಕೆಂದಿಚ್ಛಿಸಿದವರಾರು ? ನೀನು ನಿನ್ನ ಪಿತೃವಿನ ಪಾದವನ್ನು ಹಿಡಿದುಕೊಂಡು ಅವನನ್ನು ಕೊಂದಕಾಲದಲ್ಲಿ ಯಾವ ದೇವತೆಯು ನಿನ್ನ ಸಮೀಪದಲ್ಲಿದ್ದಳು ?'' (೪-೧೮-೧೨) ಎಂಬ ತಾತ್ಪರ್ಯವನ್ನು ಕೊಡುವ ಈ ಮಂತ್ರಕ್ಕೆ ಭಾಷ್ಯವನ್ನು ವಿವರಿಸುವಾಗ ಸಾಯಣರು ತೈತ್ತಿರೀಯಸಂಹಿತೆಯಲ್ಲಿ ಉಕ್ತವಾಗಿರುವ ಈ ಪ್ರಕರಣವನ್ನು ಉದಾಹರಣೆಯಾಗಿ ಹೇಳಿದ್ದಾರೆ. ತೈತ್ತಿರೀಯಸಂಹಿತೆಯಲ್ಲಿ ಹೇಳಿರುವಂತೆ ಈ ಪ್ರಕರಣದ ವಿವರಣವು ಈ ರೀತಿಯಿದೆ :—

"ಯಜ್ಞವು ದಕ್ಷಿಣೆಯನ್ನು ತಾನು ಹೊಂದಬೇಕೆಂದಿಚ್ಛಿಸಿ ಅದರ ಸಂಸರ್ಗವನ್ನು ಪಡೆಯಿತು. ಅದರ ನಿಮಿತ್ತವಾಗಿ ಅದರೊಡನೆ ಸಂಯುಕ್ತವಾಯಿತು. ಈ ಸಂಯೋಗದಿಂದ ಇಂದ್ರನು ಹೆದರಿದನು. "ಇವರ ಸಂಸರ್ಗದಿಂದ ಉತ್ಪನ್ನವಾಗತಕ್ಕ ವ್ಯಕ್ತಿಯು ಈ ಲೋಕವೇ ಆಗುತ್ತದೆ'' ಎಂಬ ನಿರೀಕ್ಷೆಯಿಂದ ತಾನೇ ಆ ದಕ್ಷಿಣೆಯ ಗರ್ಭವನ್ನು ಪ್ರವೇಶಿಸಿದನು. ಆ ಗರ್ಭದಿಂದ ಉತ್ಪನ್ನನಾಗಿ, ಪುನಃ ಆ ಗರ್ಭದಿಂದ ಉತ್ಪನ್ನನಾಗುವ ವ್ಯಕ್ತಿಯು ಈ ಲೋಕವೇ ಆಗುವುದೆಂದು ಹೆದರಿ ಆ ಗರ್ಭವನ್ನೇ ಸೀಳಿಹಾಕಿದನು. ಅದರಿಂದ ಗೋವಿನ ಉತ್ಪತ್ತಿಯಾಯಿತು"

(ತೈ. ಸಂ ೬-೧-೩-೬)

ಸಾಯಣರು ತೋರಿಸಿರುವ ಈ ಉದಾಹರಣೆಯಲ್ಲಿ ಇಂದ್ರನು ತನ್ನ ಪಿತೃವಧಕ್ಕೆ ಕಾರಣನಾದನು ಎಂಬಂಶವೇ ಇಲ್ಲ. ಆದರೂ ಸಹ ಈ ಸನ್ನಿವೇಶವು ದೇವತೆಗಳಲ್ಲೂ ಜನ್ಯಜನಕಭಾವವಿದೆಯೆಂದೂ, ಸಂತತಿಯ ಬೆಳೆವಣಿಗೆಗೆ ಇದು ಮೂಲವೆಂದೂ ತಿಳಿಯಪಡಿಸುತ್ತದೆ. ಇದಲ್ಲದೇ, ಪೂರ್ವಯುಗ, ಪ್ರಥಮಯುಗ ಇತ್ಯಾದಿ ಪ್ರಯೋಗಗಳೂ ಸಹ ಈ ಅಂಶವನ್ನು ವಿವರಿಸುತ್ತವೆ. (೧೦–೭೨–೩; ೧೦–೭೨–೪ ಇತ್ಯಾದಿ). ೧–೧೬೪–೫೦ ಮತ್ತು ೧೦–೯೦–೧೬ ನೇ ಮಂತ್ರಗಳಲ್ಲಿ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ಎಂಬ ವಾಕ್ಯದ ತಾತ್ಪರ್ಯವು ಈ ಸಂದರ್ಭದಲ್ಲಿ ವಿಚಾರಾರ್ಹವಾದುದು.

ಸಾಧ್ಯರೆಂದರೆ ದ್ಯುಸ್ಥಾನದೇವತೆಗಳೆಂದರ್ಥಮಾಡಿದ್ದಾರೆಂದು ನಿರುಕ್ತಕಾರರು ತಿಳಿಸುತ್ತಾರೆ (ನಿ. ೧೨–೪೧) ಇನ್ನೊಂದು ಆಖ್ಯಾನದಂತೆ ಪೂರ್ವಕಾಲವು ದೇವಯುಗವೆಂದರ್ಥ. ಛಂದಸ್ಸುಗಳೇ ಸಾಧ್ಯರೆಂದು ಐತರೇಯಬ್ರಾಹ್ಮಣದ ಮತ (ಐ. ಬ್ರಾ. ೧–೧೬). ಆದಿತ್ಯರೂ. ಅಂಗಿರಸ್ಸುಗಳೂ ಸಾಧ್ಯಸಂಜ್ಞಕರೆಂದು ಸಾಯಣರ ವಿವರಣೆಯಿದೆ. ಸಾಧ್ಯರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದರೆಂದೂ ಅವರನ್ನು ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. Wilson ಎಂಬ ಪಂಡಿತನೂ ಈ ಮತವನ್ನೇ ಅನುಮೋದಿಸಿ ವಿವರಿಸಿದ್ದಾನೆ. ಆದರೆ, ವಾಜಸನೇಯ ಸಂಹಿತೆಯ ೩೧–೧೭ ನೇ ಮಂತ್ರಕ್ಕೆ ಮಹೀಧರರ ವ್ಯಾಖ್ಯಾನವು ಈ ಅರ್ಥಗಳು ಅಷ್ಟು ಸಮಂಜಸವಾಗಿಲ್ಲವೆಂದು ಸೂಚಿಸುತ್ತದೆ. ಆ ವ್ಯಾಖ್ಯಾನದಂತೆ ದೇವತೆಗಳ ಗುಂಪು ಎರಡು ಭಾಗವಾಗಿರುವುದು. ಕರ್ಮದೇವಾಃ, ಆಜಾನದೇವಾಃ ಎಂದು ದೇವತೆಗಳು ಎರಡು ಗುಂಪುಳ್ಳವರಾಗಿರುತ್ತಾರೆ. ತಮ್ಮ ಅತ್ಯುತ್ತಮವಾದ ಕರ್ಮಗಳಿಂದಲೇ ದೇವತ್ವವನ್ನು ಪಡೆದವರ ಗುಂಪೊಂದು. ಜನ್ಮತಃ ದೇವತ್ವವನ್ನು ಹೊಂದಿರುವ ದೇವತೆಗಳ ಗುಂಪಿನ್ನೊಂದು, ಬೃಹದಾರಣ್ಯಕವು ಈ ಗುಂಪಿನಲ್ಲಿ ಎರಡನೆಯ ಶ್ರೇಣಿಗೆ ಸೇರಿದವರೇ ಶ್ರೇಷ್ಠರೆಂದು ತಿಳಿಸುತ್ತದೆ. ಈ ರೀತಿ ಅರ್ಥಾಂತರಗಳು ಸಾಧ್ಯವಿರುವುದರಿಂದ Wilson ಎಂಬ ಪಂಡಿತನು "It would seem that in Sayana's day, the purport of the designation ಸಾಧ್ಯ had become uncertain" ಸಾಯಣರ ಕಾಲದಲ್ಲಿ ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಲು ಸಾಧ್ಯವಿರಲಿಲ್ಲ ಎಂದು ತಿಳಿಸಿದ್ದಾನೆ.

ಈ ರೀತಿ ದೇವತೆಗಳ ಗುಂಪುಗಳು ಬೇರೆಬೇರೆಯಾಗಿದ್ದಿರಲು ಸಾಧ್ಯವೆಂದು ಮೇಲಿನ ವಾಕ್ಯಗಳು ಸೂಚಿಸುತ್ತವೆ. ಈ ಗುಂಪುಗಳು ಯಾವಾಗಲೂ ಅನ್ಯೋನ್ಯವಾದ ಮೈತ್ರೀಭಾವವನ್ನು ಹೊಂದಿದ್ದವು ಎಂದು ಹೇಳಲು ಸಾಧ್ಯವಿಲ್ಲ. ಋ. ಸಂ. ೪–೩೦–೩ ಮತ್ತು ೪–೩೦–೫ ಇತ್ಯಾದಿ ಮಂತ್ರಗಳ ವಿವರಣವು ಈ ಅಂಶವನ್ನು ಸಮರ್ಥಿಸುವುದಿಲ್ಲ ಆದರೆ ಈ ಮಂತ್ರಗಳಿಗೂ ಸಹ ಒಬ್ಬೊಬ್ಬರ ವಿವರಣವು ಒಂದೊಂದು ವಿಧವಾಗಿರುತ್ತದೆ.

## ದೇವತೆಗಳ ಪ್ರಭಾವ ಮತ್ತು ಅಧಿಕಾರಗಳು.

"ದೇವತೆಗಳು ಸ್ವಚ್ಛಂದವಾಗಿ ಯಾವರೀತಿ ಬೇಕಾದರೂ ವರ್ತಿಸಬಹುದು. ಅವರ ರಚನೆಗಳನ್ನು ಯಾವ ಮಾನವನೂ, ಎಷ್ಟು ಪ್ರಬಲವಾದ ಶತ್ರುವೂ ಸಹ ನಿರೋಧಿಸಲಾರನು" (೮–೨೦–೪). ೮–೨೦–೧೭ ನೇ ಮಂತ್ರದಲ್ಲಿ ಇದೇ ರೀತಿ ಮರುತ್ತುಗಳ ಪ್ರಶಂಸೆಯಿದೆ. ೮–೫೦–೪ ಮತ್ತು ೮–೫೫–೪ ನೇ ಮಂತ್ರಗಳು ಇಂದ್ರನ ಪ್ರಭಾವವನ್ನು ವರ್ಣಿಸಿ ಈ ಅಂಶವನ್ನು ತಿಳಿಸುತ್ತವೆ. ಕೆಳಗೆ ಉದಾಹೃತವಾಗಿರುವ ವಾಕ್ಯಗಳು ದೇವತೆಗಳ ಅಸಾಧಾರಣವಾದ ಪ್ರಭಾವವನ್ನು ವಿವರಿಸುತ್ತವೆ.

" ಯಾರೇ ಆಗಲಿ, ಎಷ್ಟೇ ಪ್ರಭಾವಶಾಲಿಯಾಗಲಿ, ದೇವತೆಗಳ ಉತ್ತಮವಾದುದೂ ಸ್ಥಿರವಾದುದೂ ಆದ ವ್ರತಗಳನ್ನು (ಕಾರ್ಯಗಳನ್ನು) ನಿರೋಧಿಸಲಾರನು." (೩-೫೬-೧)

" ದೇವತೆಗಳ ಪ್ರಭುತ್ವವು ಸಕಲ ಭುವನಗಳ ಮೇಲೂ ಇರುತ್ತದೆ." (೧೦-೬೫-೧೫)

" ಮನುವಿನ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ದೇವತೆಗಳು ನಮ್ಮನ್ನು ಒಯ್ಯದಿರಲಿ."
(೮-೩೦-೩)

" ದೇವತೆಗಳಿಂದ ನಿಯಮಿತವಾದ ನೂರು ವರ್ಷಗಳಿಗಿಂತ ಮೀರಿ ಯಾರೂ ಜೀವಿಸಿರಲಾರರು "
(೧೦-೩೩-೯)

" ದೇವತೆಗಳು ಸಕಲ ಇಷ್ಟಾರ್ಥಗಳನ್ನೂ ಸಾಧಿಸಲು ಅನುಕೂಲ ಮಾಡುತ್ತಾರೆ. ಅವರಿಗಿಂತಲೂ ಅಧಿಕವಾಗಿ ಸಹಾಯಮಾಡತಕ್ಕವರಾರೂ ಇರಲಾರರು " (೧೦-೬೪-೨)

" ವಿಷ್ಣುವು ತನ್ನ ಮೂರು ಪಾದಗಳನ್ನೂ ಇಟ್ಟು ಆಕ್ರಮಿಸಿದ ಪ್ರದೇಶಗಳಲ್ಲೆಲ್ಲಾ ದೇವತೆಗಳು ಹರ್ಷವನ್ನನುಭವಿಸುತ್ತಾರೆ." (೮-೨೯-೭)

" ದೇವತೆಗಳ ನಿವಾಸಸ್ಥಾನಕ್ಕೆ ಕರೆದೊಯ್ಯುವ ಮಾರ್ಗವು ಯಾರಿಗೆ ಗೊತ್ತಿದೆ? ಕೆಳಗಿನ ಲೋಕದ ಅವರ ಸ್ಥಾನವು ಸಾಧಾರಣವಾಗಿ ಗೋಚರವಾಗುತ್ತದೆ. ಆದರೆ ಇದಕ್ಕಿಂತಲೂ ಮೀರಿದುದೂ, ರಹಸ್ಯವಾದುದೂ, ಮಾನವನ ಗೋಚರಾತೀತವಾದುದೂ ಆದ ಪ್ರದೇಶವು ಬೇರೊಂದಿದೆ." (೩-೫೪-೫)

" ಸೋಮಪಾನವನ್ನು ಮಾಡತಕ್ಕವನು ಮಾತ್ರ ಅಮೃತತ್ವವನ್ನು ಪಡೆದು ದೇವತಾಜ್ಞಾನವನ್ನು ಹೊಂದುತ್ತಾನೆ" (೮-೪೮-೩)

" ಯಾಗಾದಿಕರ್ಮಾಚರಣೆಯಲ್ಲಿ ನಿರತರಾಗಿರತಕ್ಕವರನ್ನು ದೇವತೆಗಳು ಪ್ರತಿಫಲದಾನದಿಂದ ಸತ್ಕರಿಸುತ್ತಾರೆ. ಕರ್ಮಭ್ರಷ್ಟರನ್ನು ಶಿಕ್ಷಿಸುತ್ತಾರೆ" (೮-೨-೧೮)

" ದೇವಪೂಜಕನಾದ ಯಜಮಾನನ ರಥವು ಸಕಲ ಯಜ್ಞಗಳಲ್ಲೂ ಜಯವನ್ನು ತರತಕ್ಕದ್ದಾಗಿದೆ. ಯಜ್ಞಕರ್ತನಾಗಿ ದೇವತೆಗಳನ್ನು ತೃಪ್ತಿಪಡಿಸುವ ಮಾನವನು ಕರ್ಮಭ್ರಷ್ಟರನ್ನು ಸೋಲಿಸುವ ಶಕ್ತಿಯನ್ನು ಹೊಂದುತ್ತಾನೆ"
(೮-೩೧-೧೫)

" ಮನೋ ಹ ವೈ ದೇವಾಃ ಮನುಷ್ಯಸ್ಯ ಆಜಾನಂತಿ............ತೇ ಅಸ್ಯ ಗೃಹೇಷೂಪವಸಂತಿ "
(ಶ. ಬ್ರಾ. ೧-೧-೧-೭)

ದೇವತೆಗಳು ಮಾನವನ ಅಭೀಷ್ಟವನ್ನು ಪೂರ್ಣವಾಗಿ ಅರಿಯುತ್ತಾರೆ. ಅವರನ್ನೇ ಧ್ಯಾನಿಸುತ್ತಾ ಅವರಿಗೆ ಸಕಾಲದಲ್ಲಿ ಆಹುತ್ಯಾದಿಗಳನ್ನರ್ಪಿಸಿದರೆ ಅವರು ಅಂತಹ ಯಜಮಾನನ ಗೃಹಕ್ಕೆ ಬಂದು, ಅಲ್ಲೇ ವಸಿಸಿ ಅವನನ್ನು ಅನುಗ್ರಹಿಸುತ್ತಾರೆ.

ಮೇಲೆ ಉದ್ಧರಿಸಿರುವ ಈ ವೈದಿಕವಾಕ್ಯಗಳಲ್ಲಿ ಸಾಧಾರಣವಾಗಿ ದೇವತಾಸಮೂಹಕ್ಕೆಲ್ಲಾ ಸೇರಿದಂತಿರುವ ಪ್ರಭಾವಗಳೂ, ಅತಿಶಯವಾದ ಅಧಿಕಾರವೂ ವರ್ಣಿತವಾಗಿವೆ. ಆಯಾ ದೇವತೆಯ ವೈಯುಕ್ತಿಕವಾದ ಗುಣಗಳನ್ನು ಸಂದರ್ಭಾನುಸಾರ ವಿಮರ್ಶಿಸಲಾಗುತ್ತದೆ

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ, ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ **ಗಾಯಿತ್ರೀ** ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ದ್ವಿತೀಯ ರಾಜಕುಮಾರಿಗೂ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ, ಪಾರಿಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋऽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ನಂದನನಾಮ ಸಂ॥ ಕಾರ್ತಿಕ ಬ॥ ದಶಮಿ ಬುಧವಾರ
ತಾ॥ 12—11—52.

ಅನುವಾದಕ :
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

## ಸಂಕೇತಾಕ್ಷರಗಳ ವಿವರಣೆಯು.

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ —ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ.—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನಿಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾ ವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ.—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.

॥ ಶ್ರೀಃ ॥

# ವಿ ಷ ಯಾ ನು ಕ್ರ ಮ ಣಿ ಕೆ.

ಪುಟಸಂಖ್ಯೆ



ಆರನೆಯ ಅಧ್ಯಾಯವು ಸಮಾಪ್ತವು

ಪುಟಸಂಖ್ಯೆ

## ಮೂರನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯ

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ



ವಿಷಯಾನುಕ್ರಮಣಿಕೆ ಸಮಾಪ್ತವು.





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## (ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

## ಭಾಗ—೧೮

## ॥ ತೃತೀಯಾಷ್ಟಕೇ ಷಷ್ಠೋಽಧ್ಯಾಯಃ ॥

### ಮೂರನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು

### ॥ ಚತುರ್ಥಂ ಮಂಡಲಂ ॥

## ನಾಲ್ಕನೆಯ ಮಂಡಲದಲ್ಲಿ ಹತ್ತೊಂಭತ್ತನೆಯ ಸೂಕ್ತವು.

### ಪೀಠಿಕೆ

ಈ ಸೂಕ್ತವು ವಾಮದೇವಋಷಿದೃಷ್ಟವಾದುದು. ವಾಮದೇವಋಷಿಯ ವಿಷಯವನ್ನು ನಾವು ಈ ಮಂಡಲದ ಪ್ರಾರಂಭದಲ್ಲಿ ಎಂದರೆ ೧೭ ನೆಯ ಭಾಗದಲ್ಲಿ ಸೂಕ್ಷ್ಮವಾಗಿ ವಿವರಿಸಿರುವೆವು. ಈ ವಾಮದೇವನು ಗೋತಮಋಷಿಯ ಪುತ್ರನು. ಈ ನಾಲ್ಕನೆಯ ಮಂಡಲದ ಸೂಕ್ತಗಳು ೧–೭ (ಒಟ್ಟು ಋಕ್ಕುಗಳು ೨೦೬); ೧೮ ನೆಯ ಸೂಕ್ತದಲ್ಲಿ ೨–೩॥ ಮತ್ತು ೮–೧೩ (ಒಟ್ಟು ೮॥ ಎಂಟುವರೆ ಋಕ್ಕುಗಳು); ೧೯–೪೧ ಸೂಕ್ತಗಳು (ಒಟ್ಟು ೨೩೯ ಋಕ್ಕುಗಳು); ೪೫–೫೮ (ಒಟ್ಟು ೧೦೭ ಋಕ್ಕುಗಳು) ಇವೆಲ್ಲವೂ ಸೇರಿ ಆಗುವ ಒಟ್ಟು ೫೬೦॥ ಐನೂರ ಅರವತ್ತೂವರೆ ಋಕ್ಕುಗಳಿಗೆ ಋಷಿಯಾಗಿರುವನು. ಹಿಂದಿನ ಭಾಗದಲ್ಲಿ ಈ ಮಂಡಲದ ೧೮ ಸೂಕ್ತಗಳು ಮುಗಿದು ಈಗ ಈ ಭಾಗವು ೧೯ ನೆಯ ಸೂಕ್ತದಿಂದ ಪ್ರಾರಂಭವಾಗಿರುವುದು.

॥ ಸಾಯಣಭಾಷ್ಯಂ ॥

ಚತುರ್ಥೇ ಮಂಡಲೇ ದ್ವಿತೀಯಾನುವಾಕೇಽಷ್ಟ ಸೂಕ್ತಾನಿ ವ್ಯಾಖ್ಯಾತಾನಿ । ಏವಾ ತ್ವಾಮಿಂದ್ರೇತ್ಯೇಕಾದಶರ್ಚಂ ನವಮಂ ಸೂಕ್ತಂ । ತಸ್ಯ ಮಂಡಲಾದಿಪರಿಭಾಷಯಾ ವಾಮದೇವ ಋಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ ಛಂದಃ । ಇಂದ್ರೋ ದೇವತಾ । ತಥಾ ಚಾನುಕ್ರಾಂತಂ । ಏವೈಕಾದಶೇತಿ ॥ ಅಗ್ನಿಷ್ಟೋಮೇ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರ ಇದಂ ಸೂಕ್ತಂ । ಸೂತ್ರ್ಯತೇ ಹಿ । ಏವಾ ತ್ವಾಮಿಂದ್ರೋಃಶನ್ನು ಷು ಣಃ ಸುಮನಾ ಉಪಾಕ ಇತಿ ಯಾಜ್ಯಾ । ಆ. ೫-೧೬ । ಇತಿ ॥ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ಮೈತ್ರಾವರುಣಶಸ್ತ್ರೇಽಹೀನಸೂಕ್ತಂ ತತ್ಸ್ಥಾನೇ ತ್ರೀಣಿ ಸಂಪಾತಸೂಕ್ತಾನಿ । ತತ್ರೇದಂ ಪ್ರಥಮಂ ಸೂಕ್ತಂ । ಸೂತ್ರಿತಂ ಚ । ಏವಾ ತ್ವಾಮಿಂದ್ರ ಯನ್ನ ಇಂದ್ರಃ । ಆ. ೭-೫ । ಇತಿ ॥

ಅನುವಾದವು—ಹಿಂದಿನ ಭಾಗದಲ್ಲಿ ಈ ನಾಲ್ಕನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಎಂಟು ಸೂಕ್ತಗಳನ್ನು ವಿವರಿಸಿದ್ದಾಯಿತು. ಈಗ ವಿವರಿಸುವ ಏವಾ ತ್ವಾಮಿಂದ್ರ ಎಂಬ ಸೂಕ್ತವು ಎರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ವಾಮದೇವನೇ ಋಷಿಯು ; ತ್ರಿಷ್ಟುಪ್ ಛಂದಸ್ಸು ; ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ ಏವೈಕಾದಶ ಎಂದು ಮೊದಲಾಗಿ ಹೇಳಿರುವುದು. ಅಗ್ನಿಷ್ಟೋಮ ಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಏವಾ ತ್ವಾಮಿಂದ್ರೋಃಶನ್ನು ಷು ಣಃ ಸುಮನಾ ಉಪಾಕ ಇತಿ ಯಾಜ್ಯಾ ಎಂದು ವಿವೃತವಾಗಿರುವುದು (ಆ ೫-೧೬) ; ಪೃಷ್ಠ್ಯ ಮತ್ತು ಅಭಿಪ್ಲವ ಷಡಹವೆಂಬ ಯಾಗಗಳ ಮೊದಲನೆಯ ದಿವಸ ಮೈತ್ರಾವರುಣಶಸ್ತ್ರಮಂತ್ರಗಳನ್ನು ಪಠಿಸುವಾಗ ಅಹೀನಸೂಕ್ತವನ್ನು ಪಠಿಸುವುದಕ್ಕೆ ಪ್ರತಿಯಾಗಿ ಮೂರು ಸಂಪಾತ ಸೂಕ್ತಗಳನ್ನು ಪಠಿಸಬೇಕು. ಅವುಗಳಲ್ಲಿ ಈ ಸೂಕ್ತವು ಮೊದಲನೆಯದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ ಏವಾ ತ್ವಾಮಿಂದ್ರ ಯನ್ನ ಇಂದ್ರಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೫)

## ಸೂಕ್ತ—೧೯

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೯ ॥
ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧, ೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ವಾಮದೇವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಏವಾ ತ್ವಾಮಿಂದ್ರ ವಜ್ರಿನ್ನತ್ರ ವಿಶ್ವೇ ದೇವಾಸಃ ಸುಹವಾಸ ಊಮಾಃ ।
ಮಹಾಮುಭೇ ರೋದಸೀ ವೃದ್ಧಮೃಷ್ವಂ ನಿರೇಕಮಿದ್ವೃಣತೇ ವೃತ್ರಹತ್ಯೇ ॥

॥ ಪದಪಾಠಃ ॥

ಏವ । ತ್ವಾಂ । ಇಂದ್ರ । ವಜ್ರಿನ್ । ಅತ್ರ । ವಿಶ್ವೇ । ದೇವಾಸಃ । ಸುऽಹವಾಸಃ । ಊಮಾಃ ।

ಮಹಾಂ । ಉಭೇ ಇತಿ । ರೋದಸೀ ಇತಿ । ವೃದ್ಧಂ । ಋಷ್ವಂ । ನಿಃ । ಏಕಂ । ಇತ್ । ವೃಣತೇ ।

ವೃತ್ರऽಹತ್ಯೇ ॥ ೧ ॥

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ಯಜ್ಞೇ ವಜ್ರಿನ್ ಹೇ ವಜ್ರವನ್ನಿಂದ್ರ ಸುಹವಾಸಃ ಸುಹವಾಃ ಶೋಭನಾಹ್ವಾನಾ ಊಮಾ ರಕ್ಷಕಾ ವಿಶ್ವೇ ದೇವಾಸಃ ಸರ್ವೇ ದೇವಾ ಉಭೇ ರೋದಸೀ ದ್ಯಾವಾಪೃಥಿವ್ಯೌ ಚ ಏವೈವ-ಮುಕ್ತಪ್ರಕಾರೇಣ ಸ್ತೂಯಮಾನಂ ಮಹಾಂ ಮಹಾಂತಂ ಪ್ರಭೂತಂ ವೃದ್ಧಂ ಗುಣೈಃ ಪ್ರವೃದ್ಧಮೃಷ್ವಂ ದರ್ಶನೀಯಂ ತ್ವಾಮೇಕಮಿದೇಕಮೇವ ವೃತ್ರಹತ್ಯೇ ವೃತ್ರಹನನಾರ್ಥಂ ನಿರ್ವೃಣತೇ । ನಿಃಶೇಷೇಣ ಸಂಭಜಂತೇ ॥

॥ ಪ್ರತಿಪದಾರ್ಥ ॥

ವಜ್ರಿನ್—ವಜ್ರಾಯುಧವನ್ನು ಹಿಡಿದಿರುವ । ಇಂದ್ರ—ಎಲೈ ಇಂದ್ರನೇ । ಅತ್ರ—ಈ ಯಜ್ಞದಲ್ಲಿ । ಸುಹವಾಸಃ—ಭಕ್ತಿಪೂರ್ವಕವಾಗಿ ಕರೆಯಲ್ಪಟ್ಟವರೂ । ಊಮಾಃ—ರಕ್ಷಕರೂ ಆದ । ವಿಶ್ವೇ ದೇವಾಸಃ—ಸಕಲ ದೇವತೆಗಳೂ । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡೂ ಸಹ । ಏವ—ಈ ರೀತಿಯಲ್ಲಿ ಸ್ತುತನಾದವನೂ । ಮಹಾಂ—ಮಹಾತ್ಮನೂ । ವೃದ್ಧಂ—ವೃದ್ಧಿಹೊಂದಿದ ಮಹದ್ಗುಣಗಳುಳ್ಳವನೂ । ಋಷ್ವಂ—ಆಕರ್ಷಕವಾದ ರೂಪವುಳ್ಳವನೂ ಆದ । ತ್ವಾಂ—ನಿನ್ನನ್ನು । ಏಕಮಿತ್—ಒಬ್ಬನನ್ನೇ । ವೃತ್ರಹತ್ಯೇ—ವೃತ್ರನನ್ನು ನಾಶಮಾಡಲು । ನಿಃ ವೃಣತೇ—ಪೂರ್ಣವಾಗಿ ಪ್ರಾರ್ಥಿಸಿ ಕರೆಯುತ್ತಾರೆ. (ಪೂಜಿಸಿ ಪ್ರಾರ್ಥಿಸುತ್ತಾರೆ)

॥ ಭಾವಾರ್ಥ ॥

ವಜ್ರಧಾರಿಯಾದ ಎಲೈ ಇಂದ್ರನೇ, ಈ ಯಜ್ಞದಲ್ಲಿ ಭಕ್ತಿಪುರಸ್ಸರವಾಗಿ ಕರೆಯಲ್ಪಟ್ಟವರೂ, ರಕ್ಷಕರೂ ಆದ ಸಕಲ ದೇವತೆಗಳೂ, ದ್ಯಾವಾಪೃಥಿವಿಗಳೂ ಸಹ ವೃತ್ರಹನನಕ್ಕಾಗಿ ನಿನ್ನೊಬ್ಬನನ್ನೇ ಪೂಜಿಸಿ ಪ್ರಾರ್ಥಿಸುತ್ತಾರೆ. ಈ ಕಾರ್ಯಕ್ಕೆ ನೀನೊಬ್ಬನಲ್ಲದೇ ಬೇರೆ ಯಾರೂ ಶಕ್ತರಲ್ಲ. ನೀನು ಆಕರ್ಷಕವಾದ ರೂಪವುಳ್ಳವನೂ, ವೃದ್ಧಿ ಹೊಂದಿದ ಮಹದ್ಗುಣಗಳುಳ್ಳವನೂ ಆಗಿರುವೆ. ಆದುದರಿಂದ ನಿನ್ನೊಬ್ಬನನ್ನೇ ಈ ಕಾರ್ಯಕ್ಕೆ ನಂಬಿ ಪ್ರಾರ್ಥಿಸುತ್ತಾರೆ.

## English Translation.

Indra, wielder of the thunderbolt, all the protecting deities who are reverently invoked, and both the heaven and the earth, glorify you who are verily one alone, mighty, vast, and pleasing of aspect, for the destruction of Vritra.

॥ ವಿಶೇಷವಿಷಯಗಳು ॥

ವಜ್ರಿನ್ ಇಂದ್ರ ಅತ್ರ ಸುಹವಾಸಃ ಊಮಾಃ ವಿಶ್ವೇ ದೇವಾಸಃ ಉಭೇ ರೋದಸೀ ಏವ ಮಹಾಂ ವೃದ್ಧಂ ಋಷ್ವಂ ತ್ವಾಂ ಏಕಮಿತ್ ವೃತ್ರಹತ್ಯೇ ನಿಃ ವೃಣತೇ—ಎಲೈ ವಜ್ರಾಯುಧವನ್ನು ಧರಿಸಿರುವ ಇಂದ್ರನೇ, ಸಕಲದೇವತೆಗಳೂ ನಿನ್ನನ್ನು ವೃತ್ರಹನನಕ್ಕಾಗಿ ಪ್ರಾರ್ಥಿಸಿ ಕರೆಯುತ್ತಾರೆ. ಆ ದೇವತೆಗಳಾದರೋ ಈ ಯಜ್ಞದಲ್ಲಿ ಯಜ್ಞರಕ್ಷಣಾರ್ಥವಾಗಿ ನಮ್ಮಿಂದ ಆಹ್ವಾನಿತರಾಗಿರುವರು. ಇಂತಹ ಸಮಸ್ತ ದೇವತೆಗಳೂ ದ್ಯಾವಾಪೃಥಿವಿಗಳೂ ಸಹ ಮಹಾತ್ಮನೂ, ಯಜ್ಞಭೂಮಿಯಲ್ಲಿ ಚೆನ್ನಾಗಿ ಬೆಳಗುತ್ತಿರುವವನೂ ಸೌಮ್ಯವಾದ ರೂಪವುಳ್ಳವನೂ ಆದ ನಿನ್ನನ್ನು ಮಾತ್ರವೇ ಗೌರವಿಸಿ ವೃತ್ರಹನನಕ್ಕಾಗಿ ಪ್ರಾರ್ಥಿಸಿರುವರು. ಏಕೆಂದರೆ ವೃತ್ರನನ್ನು ಸಂಹಾರಮಾಡಲು ನೀನಲ್ಲದೆ ಇತರರಿಂದ ಸಾಧ್ಯವಿಲ್ಲ. ಆದುದರಿಂದ ಈ ವಿಷಯದಲ್ಲಿ ಇತರ ದೇವತೆಗಳನ್ನು ಪ್ರಾರ್ಥಿಸದೆ ನಿನ್ನನ್ನೇ ಪ್ರಾರ್ಥಿಸುವರು ಎಂದು ಮುಖ್ಯಾಭಿಪ್ರಾಯವು.

ಚಿತ್—ಯಾಸ್ಕರು ಚಿತ್ ಎಂಬ ನಿಪಾತವು ಚಿದಿತ್ಯೇಷೋಽನೇಕಕರ್ಮಾ ಅನೇಕ ವಿಧವಾದ ಅರ್ಥಗಳಲ್ಲಿಯೂ ಪ್ರಯುಕ್ತವಾಗಿರುವುದು ಎಂದು ಹೇಳಿ, ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ, ದಧಿಚಿದಿತ್ಯುಪಮಾರ್ಥೇ, ಕುಲ್ಮಾಷಾಂಶ್ಚಿದಾಹರೇತ್ಯವಕುತ್ಸಿತೇ । ಆಚಾರ್ಯಶ್ಚಿದ್ ಎಂಬ ವಾಕ್ಯದಲ್ಲಿ ಪೂಜಾರ್ಥವಾಗಿ ಪ್ರಯುಕ್ತವಾಗಿದೆ. ದಧಿಚಿತ್ ಎಂಬ ವಾಕ್ಯದಲ್ಲಿ ಉಪಮಾರ್ಥದಲ್ಲಿಯೂ, ಕುಲ್ಮಾಷಾಂಶ್ಚಿದ್ ಎಂಬಲ್ಲಿ ನಿಂದಾರ್ಥಕವಾಗಿಯೂ ಪ್ರಯುಕ್ತವಾಗಿದೆ ಎಂದು ಉದಾಹರಣೆಯನ್ನು ಹೇಳಿ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವರ್ಣಿಸಿ ಇಂದ್ರನ ಮಹಿಮೆಯನ್ನೂ ಸಾಮರ್ಥ್ಯಾತಿಶಯವನ್ನೂ ವಿವರಿಸಿರುವುದೆಂದು ಹೇಳಿದಾರೆ.



॥ ಸಂಹಿತಾಪಾಠಃ ॥

ಅವಾಸೃಜಂತ ಜಿವ್ರಯೋ ನ ದೇವಾ ಭುವಃ ಸಮ್ರಾಳಿಂದ್ರ ಸತ್ಯಯೋನಿಃ ।
ಅಹನ್ನಹಿಂ ಪರಿಶಯಾನಮರ್ಣಃ ಪ್ರ ವರ್ತನೀರರದೋ ವಿಶ್ವಧೇನಾಃ ॥ ೨ ॥

॥ ಪದಪಾಠಃ ॥

ಅವ । ಅಸೃಜಂತ । ಜಿವ್ರಯಃ । ನ । ದೇವಾಃ । ಭುವಃ । ಸಮ್ಽರಾಟ್ । ಇಂದ್ರ । ಸತ್ಯಽಯೋನಿಃ ।
ಅಹನ್ । ಅಹಿಂ । ಪರಿಽಶಯಾನಂ । ಅರ್ಣಃ । ಪ್ರ । ವರ್ತನೀಃ । ಅರದಃ । ವಿಶ್ವಽಧೇನಾಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ದೇವಾಸ್ತ್ವಾಂ ಜಿವ್ರಯೋ ನ ಜೀರ್ಣಾಃ ಪ್ರವೃದ್ಧಾಃ ಪಿತರೋ ಯೂನಃ ಪುತ್ರಾನಿವಾವಾಸೃಜಂತ । ಅಸುರವಧಾರ್ಥಂ ಪ್ರೈರಯನ್ । ತತೋ ಹೇ ಇಂದ್ರ ಸತ್ಯಯೋನಿಃ ಸತ್ಯನಿವಾಸಸ್ತ್ವಂ

ಸಮ್ರಾಟ್ ಸರ್ವೇಷಾಂ ಲೋಕಾನಾಮಧೀಶ್ವರೋ ಭುವಃ । ಅಭವಃ । ಅರ್ಣ ಉದಕಂ ಲಕ್ಷೀಕೃತ್ಯ ಪರಿಶಯಾನಂ ಪರಿತಃ ಸಮಂತಾಚ್ಛಯನಂ ಕುರ್ವಂತಮಹಿಂ ವೃತ್ರಾಸುರಮಹನ್ । ಅವಧೀಃ । ವಿಶ್ವಧೇನಾ ವಿಶ್ವಸ್ಯ ಪ್ರೀಣಯಿತ್ರೀರ್ವರ್ತನೀಃ ಸರ್ವತ್ರ ಪ್ರವರ್ತಿಕಾ ನದೀಃ ಪ್ರಾರದಃ । ಪ್ರಕರ್ಷೇಣ ವಿಲೇಖನಂ ಕೃತವಾನಸಿ । ಇಂದ್ರೋ ವೃತ್ರಂ ಹತ್ವಾ ತೇನಾವೃತಾನ್ಯುದಕಾನಿ ಪ್ರವಾಹರೂಪೇಣ ಪ್ರವರ್ತಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಜಿವ್ರಯೋ ನ—ವೃದ್ಧರು ಯುವಕರಾದ ಪುತ್ರರನ್ನು ಮುಂದೆ ಬಿಟ್ಟು ಪ್ರೇರಿಸುವಂತೆ । ದೇವಾಃ—ದೇವತೆಗಳು । ಅವಾಸೃಜಂತ—ಅಸುರವಧಕ್ಕಾಗಿ ನಿನ್ನನ್ನು ಪ್ರೇರಿಸಿ ಮುಂದೆ ಬಿಟ್ಟರು (ಅನಂತರವೇ) । ಸತ್ಯಯೋನಿಃ—ಸತ್ಯಕ್ಕೆ ಮೂಲನಾದ ನೀನು । ಸಮ್ರಾಟ್—ದೇವಮಾನವಾದಿ ಗಳಿಗೆಲ್ಲಾ ಪ್ರಭುವಾದವನಾಗಿ । ಭುವಃ—ಆದೆ । ಅರ್ಣಃ—ಉದಕದ ಅಭಿಮುಖವಾಗಿ । ಪರಿಶಯಾನಂ—ಸುತ್ತಲೂ ಅಡ್ಡಕಟ್ಟಿ ಮಲಗಿದ್ದ । ಅಹಿಂ—ವೃತ್ರಾಸುರನನ್ನು । ಅಹನ್—ನಾಶಪಡಿಸಿದೆ । ವಿಶ್ವಧೇನಾಃ—ಸಕಲಲೋಕಕ್ಕೂ ಪ್ರೀತಿಕಾರಕವಾದವೂ । ವರ್ತನೀಃ—ಸುತ್ತಲೂ ಹರಡುವುವೂ ಆದ ನದಿಗಳನ್ನು । ಪ್ರ ಅರದಃ—ಸೀಳಿ ಅವುಗಳು ಸುಲಭವಾಗಿ ಹರಿಯುವಂತೆ ಮಾಡಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ವೃದ್ಧರು ಯುವಕರಾದ ಪುತ್ರರನ್ನು ಮುಂದೆ ಬಿಟ್ಟು ಪ್ರೇರಿಸುವಂತೆ ದೇವತೆಗಳು ಅಸುರ ವಧಕ್ಕಾಗಿ ನಿನ್ನನ್ನು ಪ್ರೇರಿಸಿ ಮುಂದೆ ಬಿಟ್ಟರು. ಅನಂತರವೇ, ಸತ್ಯಕ್ಕೆ ಮೂಲನಾದ ನೀನು ದೇವಮಾನವಾದಿ ಗಳಿಗೆಲ್ಲಾ ಪ್ರಭುವಾದೆ. ಉದಕದ ಅಭಿಮುಖವಾಗಿ ಸುತ್ತಲೂ ಅಡ್ಡಕಟ್ಟಿ ಮಲಗಿದ್ದ ವೃತ್ರಾಸುರನನ್ನು ನಾಶ ಪಡಿಸಿದೆ. ಸಕಲ ಲೋಕಕ್ಕೂ ಪ್ರೀತಿಕಾರಕವೂ, ಸುತ್ತಲೂ ಹರಡಿರುವುವೂ ಆದ ನದಿಗಳನ್ನು ಸೀಳಿ ಅವುಗಳನ್ನು ಸುಲಭವಾಗಿ ಹರಿಯುವಂತೆ ಮಾಡಿದೆ.

## English Translation.

As elders (send forth their young), so the gods have sent you (against Vritra): thence you became, Indra who are the abode of truth, the sovereign of the world: you have slain the slumbering Ahi for (the release of) the water, and have marked out (the channels of) the all delighting rivers.

॥ ವಿಶೇಷವಿಷಯಗಳು ॥

ಇಂದ್ರ ಜಿವ್ರಯೋ ನ ದೇವಾಃ ಅವಾಸೃಜಂತ—ಪ್ರವೃದ್ಧಾಃ ಪಿತರೋ ಯೂನಃ ಪುತ್ರಾನಿವ ಅಸುರವಧಾರ್ಥಂ ಪ್ರೈರಯನ್ । ಲೋಕದಲ್ಲಿ ತಂದೆತಾಯಿಗಳು ಕಷ್ಟಸಾಧ್ಯವಾದ ಕೆಲಸಕಾರ್ಯಗಳನ್ನು ಸಾಧಿಸು ವುದಕ್ಕಾಗಿ ಅಥವಾ ಯುದ್ಧಾದಿಗಳಲ್ಲಿ ಶತ್ರುಗಳನ್ನು ಜಯಿಸುವುದಕ್ಕಾಗಿ ಯೌವನೋಪೇತರೂ ದೃಢಾಂಗವುಳ್ಳವರೂ

ಉತ್ಸಾಹಶಾಲಿಗಳೂ ಆದ ತಮ್ಮ ಪುತ್ರರನ್ನು ಕಳುಹಿಸುವುದು ಸರಿಯಷ್ಟೆ. ಅದರಂತೆ ದೇವತೆಗಳೆಲ್ಲರೂ ಸೇರಿ ಮಹಾ ಬಲಶಾಲಿಯಾದ ವೃತ್ರನನ್ನು ಸಂಹಾರಮಾಡಲು ಇಂದ್ರನನ್ನು ಪ್ರೇರಿಸಿದರು ಎಂದಭಿಪ್ರಾಯವು.

**ಸತ್ಯಯೋನಿಃ ಸಾಮ್ರಾಟ್ ಭುವಃ**—ಎಲೈ ಇಂದ್ರನೇ, ನೀನು ಸತ್ಯಕ್ಕೆ ಆಶ್ರಯಭೂತನಾದವನು. ದೇವತೆಗಳಿಗೂ, ಮಾನವರಿಗೂ ಪ್ರಭುವಾದವನು. ಇಂತಹ ನೀನು ವೃತ್ರಾಸುರನನ್ನು ಸಂಹಾರಮಾಡಲು ಶಕ್ತನಾಗಿರುವೆ.

**ಅರ್ಣಃ ಪರಿಶಯಾನಂ ಅಹಿಂ ಅಹನ್**—ಎಲೈ ಇಂದ್ರನೇ, ಮೇಘಮಂಡಲದಲ್ಲಿರುವ ಉದಕದ ಸುತ್ತಲೂ ವ್ಯಾಪಿಸಿ ಉದಕವು ಭೂಮಿಯಮೇಲೆ ಬೀಳದಂತೆ ತಡೆಗಟ್ಟಿಮಲಗಿರುವ ವೃತ್ರಾಸುರನನ್ನು ನೀನು ಸಂಹಾರ ಮಾಡಿದೆ ಎಂದಭಿಪ್ರಾಯವು. ಇದೇ ಅಭಿಪ್ರಾಯವನ್ನು ಹಿಂದೆ ಅಹನ್ನಹಿಮನ್ವಪಸ್ತತರ್ದ (ಋ. ಸಂ ೧-೩೨-೧) ಎಂಬ ಋಕ್ಕಿನಲ್ಲಿ ಹಿರಣ್ಯಸ್ತೂಪಋಷಿಯು ವಿವರಿಸಿರುವನು.

**ವಿಶ್ವಧೇನಾಃ ವರ್ತನೀಃ ಪ್ರ ಅರದಃ**—ಸಮಸ್ತ ಜನರನ್ನು ಸಂತೋಷಪಡಿಸುವ ನದಿಗಳು ತಮ್ಮ ಪಾತ್ರ ಗಳಲ್ಲಿ ಹರಿಯುವಂತೆ ಮಾಡಿದೆ. ಎಂದರೆ ವೃತ್ರವಧಾನಂತರ ಅವನು ತಡೆದಿದ್ದ ಉದಕಗಳು ವೃಷ್ಟಿಮೂಲಕ ಭೂಮಿಯ ಮೇಲೆ ಬಿದ್ದು ನದಿಗಳ ರೂಪದಲ್ಲಿ ಸಕಲಜನರಿಗೂ ಆಹಾರಾದಿಗಳನ್ನು ಒದಗಿಸಿ ತೃಪ್ತಿಪಡಿಸುತ್ತಾ ಕ್ಲುಪ್ತವಾದ ಮಾರ್ಗಗಳಲ್ಲಿ ಎಂದರೆ ನದೀಪಾತ್ರಗಳಲ್ಲಿ ಹರಿಯುತ್ತಿರುವವು. ಇಂತಹ ಅಗಾಧ ಕೆಲಸವನ್ನು ನೀನು ಮಾಡಿರುವೆ ಎಂದು ಇಂದ್ರನನ್ನು ಸ್ತುತಿಸಲಾಗಿದೆ.



॥ ಸಂಹಿತಾಪಾಠಃ ॥

ಅತೃಪ್ಣುವಂತಂ ವಿಯತಮಬುಧ್ಯಮಬುಧ್ಯಮಾನಂ ಸುಷುಪಾಣಮಿಂದ್ರ ।
ಸಪ್ತ ಪ್ರತಿ ಪ್ರವತ ಆಶಯಾನಮಹಿಂ ವಜ್ರೇಣ ವಿ ರಿಣಾ ಅಪರ್ವನ್ ॥ ೩ ॥

॥ ಪದಪಾಠಃ ॥

ಅತೃಪ್ಣುವಂತಂ । ವಿಽಯತಂ । ಅಬುಧ್ಯಂ । ಅಬುಧ್ಯಮಾನಂ । ಸುಸುಪಾನಂ । ಇಂದ್ರ ।
ಸಪ್ತ । ಪ್ರತಿ । ಪ್ರಽವತಃ । ಆಽಶಯಾನಂ । ಅಹಿಂ । ವಜ್ರೇಣ । ವಿ । ರಿಣಾಃ । ಅಪರ್ವನ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮತೃಪ್ಣುವಂತಂ ಭೋಗೇಷ್ವತೃಪ್ಯಂತಂ ವಿಯತಂ ಶಿಥಿಲಾಂಗಮಬುಧ್ಯಂ ದುರ್ವಿಜ್ಞಾನಮಬುಧ್ಯಮಾನಂ ಕಿಮಪ್ಯಜಾನಂತಂ ಸುಷುಪಾಣಂ ಸುಪ್ತಂ ಸಪ್ತ ಸರ್ಪಣಸ್ವಭಾವಾಃ

ಪ್ರವತೋಽಪಃ ಪ್ರತ್ಯಾಶಯಾನಮಾವೃತ್ಯ ತಿಷ್ಠಂತಮಹಿಂ ವೃತ್ರಮಪರ್ವನ್ ಅಪರ್ವಣಿ ಪೌರ್ಣಮಾ-ಸ್ಯಾಂ ವಜ್ರೇಣ ವಿ ರಿಣಾಃ । ವ್ಯರಿಣಾಃ । ವಿಶೇಷೇಣ ಹತವಾನಸಿ । ಪೌರ್ಣಮಾಸ್ಯಾಂ ವೃತ್ರವಧಸ್ತ್ವಷ್ಟಾ ಹತಪುತ್ರ ಇತ್ಯನುವಾಕೇ ಘ್ನಂತಿ ವಾ ಏನಂ ಪೌರ್ಣಮಾಸ ಆಮಾವಾಸ್ಯಾಯಾಂ ಪ್ಯಾಯಯಂತೀತಿ ತೈತ್ತಿರೀಯೇಽಪ್ಯುಕ್ತಃ । ತೈ. ಸಂ. ೨-೫-೨-೫ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಅತೃಪ್ಣುವಂತಂ—ಭೋಗಗಳಲ್ಲಿ ತೃಪ್ತಿಯಿಲ್ಲದಿರುವವನೂ । ವಿಯತಂ—ಶಿಥಿಲವಾದ ಅಂಗವುಳ್ಳವನೂ । ಅಬುಧ್ಯಂ—(ಅವನ ಸ್ವಭಾವವನ್ನು) ತಿಳಿಯಲು ಸಾಧ್ಯವಿಲ್ಲದವನೂ । ಅಬುಧ್ಯಮಾನಂ—ಯಾವ ಪರಿಜ್ಞಾನವೂ ಇಲ್ಲದವನೂ । ಸುಷುಪಾಣಂ—ಸುಪ್ತಾವಸ್ಥೆಯಲ್ಲಿ ಆಲಸನಾಗಿ ಬಿದ್ದಿದ್ದವನೂ । ಸಪ್ತ—ಹರಿಯುವ ಸ್ವಭಾವವುಳ್ಳ । ಪ್ರವತಃ ಪ್ರತಿ—ಉದಕಗಳ ಎದುರಾಗಿ । ಆಶಯಾನಂ—ಸುತ್ತಲೂ ಆವರಿಸಿ ಮಲಗಿದ್ದವನೂ ಆದ । ಅಹಿಂ—ವೃತ್ರಾಸುರನನ್ನು । ಅಪರ್ವನ್—ಪೌರ್ಣಮಾಸ್ಯಾದಿನದಲ್ಲಿ । ವಜ್ರೇಣ—ವಜ್ರಾಯುಧದಿಂದ । ವಿ ರಿಣಾಃ—ಸೀಳಿ ಕೊಂದಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಭೋಗಗಳಲ್ಲಿ, ತೃಪ್ತಿಯಿಲ್ಲದಿರುವವನೂ, ಶಿಥಿಲವಾದ ಅಂಗವುಳ್ಳವನೂ, ಅವನ ಸ್ವಭಾವವನ್ನೇ ತಿಳಿಯಲಾರದಷ್ಟು ವಂಚಕನೂ, ಯಾವ ಪರಿಜ್ಞಾನವೂ ಇಲ್ಲದವನೂ, ಸುಪ್ತಾವಸ್ಥೆಯಲ್ಲಿ ಆಲಸನಾಗಿ ಬಿದ್ದಿದ್ದವನೂ, ಹರಿಯುವ ಸ್ವಭಾವವುಳ್ಳ ಉದಕಗಳ ಎದುರಾಗಿ ಸುತ್ತಲೂ ಆವರಿಸಿ ಮಲಗಿದ್ದವನೂ ಆದ ವೃತ್ರಾಸುರನನ್ನು ಪೌರ್ಣಮಾಸ್ಯಾದಿನದಲ್ಲಿ ವಜ್ರಾಯುಧದಿಂದ ಸೀಳಿ ಕೊಂದಿರುವೆ.

## English Translation.

On the day of full moon you have slain with the thunderbolt the insatiable, unnerved, ignorant, un-apprehending, slumbering Ahi, obstructing the gliding-down-ward-flowing (streams).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವೃತ್ರಾಸುರನ ದುಷ್ಟಸ್ವಭಾವವನ್ನು ವಿವರಿಸಿದೆ. ಆ ವೃತ್ರನು ಎಷ್ಟು ಭೋಗಗಳನ್ನನುಭವಿಸಿದರೂ ತೃಪ್ತಿಯಿಲ್ಲದವನು, ಇವನ ಅಂಗಗಳು ದೃಢವಾಗಿಲ್ಲ. ಇವನ ಸ್ವಭಾವವು ಯಾರಿಗೂ ತಿಳಿಯದು. ಇವನಿಗೆ ಯಾವ ಉತ್ತಮ ಪರಿಜ್ಞಾನವೂ ಇಲ್ಲ. ಯಾವಾಗಲೂ ಉದಕಗಳನ್ನು ಅಡ್ಡಗಟ್ಟಿ ಮಲಗಿರುವುದೇ ಇವನ ಸ್ವಭಾವ. ಇಂತಹ ನೀಚಸ್ವಭಾವವುಳ್ಳ ವೃತ್ರನನ್ನು ಇಂದ್ರನು ಪೌರ್ಣಮಾಸಿಯ ದಿವಸ ವಜ್ರಾಯುಧದಿಂದ ಸಂಹರಿಸಿದನೆಂದು ಈ ಋಕ್ಕಿನಲ್ಲಿ ವರ್ಣಿಸಿದೆ. ಈ ವಿಷಯದಲ್ಲಿ ಭಾಷ್ಯಕಾರರು—

ತೈತ್ತಿರೀಯ ಸಂಹಿತಾವಾಕ್ಯವನ್ನುದಾಹರಿಸಿ ಅದರಲ್ಲಿ ಇಂದ್ರನು ವೃತ್ರನನ್ನು ಪೌರ್ಣಮಾಸಿಯ ದಿನದಲ್ಲಿ ಸಂಹಾರಮಾಡಿರುವ ವಿಷಯವು ಉಕ್ತವಾಗಿದೆಯೆಂದು ತಿಳಿಸಿದಾರೆ. ಇಂದ್ರನು ವೃತ್ರನನ್ನು ಸಂಹಾರಮಾಡಿದ

ವಿಷಯವನ್ನು ಎಲ್ಲಾ ಋಷಿಗಳೂ ಪ್ರಶಂಸೆಮಾಡಿರುವುದರಿಂದ ಆ ವೃತ್ರಹನನದ ವಿಸ್ತಾರವಾದ ವಿವರಣೆಯನ್ನು ಇಲ್ಲಿ ಹೇಳುವುದು ಆವಶ್ಯಕವು. ಆದುದರಿಂದ ಆ ವಿವರವನ್ನು ತಿಳಿಸುವ ಯಜುರ್ವೇದದ ಮಂತ್ರಭಾಗವನ್ನೂ ಅದರ ಅರ್ಥಾನುವಾದವನ್ನೂ ಇಲ್ಲಿ ವಿವರಿಸಿದೇವೆ—

> ತ್ವಷ್ಟಾ ಹತಪುತ್ರೋ ವೀಂದ್ರಗ್‌ಂ ಸೋಮಮಾಹರತ್ತಸ್ಮಿಂನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮ-ಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರು-ರ್ವರ್ಧಸ್ವೇತಿ ಯದವರ್ತಯತ್ತದ್ವೃತ್ರಸ್ಯ ವೃತ್ರತ್ವಂ ಯದಬ್ರವೀತ್ಸ್ವಾಹೇಂದ್ರಶತ್ರುರ್ವರ್ಧ-ಸ್ವೇತಿ ತಸ್ಮಾದಸ್ಯೇಂದ್ರಃ ಶತ್ರುರಭವತ್ಸ ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷು-ಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನವೃಣೋದ್ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂದ್ರೋಽಬಿಭೇತ್ ॥
>
> (ತೈ. ಸಂ. ೨-೫-೨-೧)

ಈ ಅನುವಾಕದಲ್ಲಿ ಇಂದ್ರನು ವೃತ್ರನನ್ನು ಸಂಹರಿಸಿದ ವಿವರವು ಉಕ್ತವಾಗಿದೆ. ಈ ಕಥಾಸಂದರ್ಭಕ್ಕೆ ಹಿನ್ನೆಲೆಯಾಗಿ ಇನ್ನೊಂದು ಉಪಾಖ್ಯಾನವಿರುವುದು ಅದನ್ನು ನಾವು ಹಿಂದೆ ವಿವರಿಸಿರುವೆವಾದರೂ ಇಲ್ಲಿ ಮುಂದಿನ ವಿವರಣೆಗೆ ಪೀಠಿಕಾರೂಪವಾಗಿ ಸೂಕ್ಷ್ಮರೀತಿಯಿಂದ ವಿವರಿಸುವುದು ಆವಶ್ಯಕವು. ಪೂರ್ವದಲ್ಲಿ ತ್ವಷ್ಟೃ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದನು. ಆದರೂ ಇವನು ಅಸುರಸ್ತ್ರೀಯಲ್ಲಿ ಜನಿಸಿದವನಾದ್ದರಿಂದ ಇವನಿಗೆ ಅಸುರರ ವಿಷಯದಲ್ಲಿ ವಿಶೇಷವಾಗಿ ಅಭಿಮಾನವಿತ್ತು. ಹೀಗಿರುವಾಗ ಈ ವಿಶ್ವರೂಪನು ನಮಗೆ ಪುರೋಹಿತನಾಗಿದ್ದರೂ ಅಸುರಪಕ್ಷಪಾತಿಯಾದ್ದರಿಂದ ಸಮಯ ಸಾಧಿಸಿ ಅಸುರರಿಗೆ ಸಹಾಯಮಾಡುತ್ತಾ ದೇವತೆಗಳಿಗೆ ರಾಜ್ಯವೇ ಇಲ್ಲದಂತೆ ಒಳಸಂಚು ನಡೆಸಬಹುದೆಂದು ಇಂದ್ರನು ಹೆದರಿದನು. ಆದ್ದರಿಂದ ಇಂದ್ರನು ಇವನನ್ನು ಉಪಾಯಾಂತರದಿಂದ ಸಂಹಾರಮಾಡಿದನು. ಈ ವಿಷಯವನ್ನೇ ಇಲ್ಲಿ ತ್ವಷ್ಟಾ ಹತಪುತ್ರಃ ವೀಂದ್ರಗ್‌ಂ ಸೋಮಮಾಹರತ್ ಎಂಬ ವಾಕ್ಯದಿಂದ ಹೇಳಲಾಗಿದೆ. ತನ್ನ ಮಗನನ್ನು ಕೊಂದನೆಂಬ ಕೋಪದಿಂದ ತ್ವಷ್ಟೃವು ತಾನು ಯಜ್ಞಮಾಡುವಾಗ ಇಂದ್ರನನ್ನು ಯಜ್ಞದಲ್ಲಿ ಆಹ್ವಾನಮಾಡದೆ ಅವನನ್ನು ಬಿಟ್ಟೇ ಯಜ್ಞಮಾಡಿದನು. ಅವನಿಗೆ ಪಾನಾರ್ಥವಾಗಿ ಸೋಮವನ್ನೂ ಕೊಡಲಿಲ್ಲ. ಅದರಿಂದ ಕೋಪಗೊಂಡ ಇಂದ್ರನು ಅವನ ಯಜ್ಞಕ್ಕೆ ಬಂದು ಯಜ್ಞಕ್ಕೆ ವಿಘ್ನವನ್ನುಂಟುಮಾಡಿದ್ದಲ್ಲದೆ ಯಜ್ಞಕ್ಕಾಗಿ ಸಿದ್ಧಪಡಿಸಿಟ್ಟದ್ದ ಸೋಮರಸವನ್ನು ಬಲಾತ್ಕಾರವಾಗಿ ಪಾನ ಮಾಡಿದನು. ಇದನ್ನು ನೋಡಿ ತ್ವಷ್ಟೃವು ಇಂದ್ರನಿಗೆ ತಕ್ಕ ಪ್ರತೀಕಾರಮಾಡಬೇಕೆಂದು ಯೋಚಿಸಿ ಇಂದ್ರನು ಕುಡಿದು ಮಿಕ್ಕ ಸೋಮರಸವನ್ನು ಆಹವನೀಯಾಗ್ನಿಯಲ್ಲಿ ಸುರಿದು ಸ್ವಾಹೇಂದ್ರಶತ್ರುರ್ವರ್ಧಸ್ವ—ಇಂದ್ರನನ್ನು ಜಯಿಸುವ ಮತ್ತು ಇಂದ್ರನಿಗೆ ಶತ್ರುವಾದ ಪುತ್ರನುಂಟಾಗಲಿ ಎಂದು ಅಗ್ನಿಯನ್ನು ಪ್ರಾರ್ಥಿಸುತ್ತಾ ಸೋಮಶೇಷವನ್ನು ಅಗ್ನಿಯಲ್ಲಿ ಹೋಮಮಾಡಿದನು. ಹೀಗೆ ಹೋಮಮಾಡುವಾಗ ಮಂತ್ರದಲ್ಲಿ ಸ್ವರವ್ಯತ್ಯಾಸವಾದುದರಿಂದ ಇಂದ್ರನನ್ನು ಜಯಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಜಯಿಸಲ್ಪಡುವ ಪುತ್ರನಾದನು. ಈ ಪುತ್ರನೇ ವೃತ್ರನು. ಇದೇ ಇವನ ಉತ್ಪತ್ತಿಯ ಕ್ರಮವು. ಯಜ್ಞಾದಿಗಳಲ್ಲಿ ಮಂತ್ರಪಠನಮಾಡುವಾಗ ಸ್ವರವ್ಯತ್ಯಾಸವಾದರೆ ಯಜಮಾನನಿಗೆ ಹಾನಿಯುಂಟಾಗುವುದೆಂದು—

ದುಷ್ಟಃ ಶಬ್ದಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।
ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರ ಶತ್ರುಃ ಸ್ವರತೋಽಪರಾಧತ್ ॥

(ಪಾಣಿನೀಯಶಿಕ್ಷಾ)

ಪಾಣಿನಿಮಹರ್ಷಿಯು ಈ ಮಂತ್ರವನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡು ಹೇಳಿರುವರು. ಹೀಗೆ ಮಂತ್ರದ ಸ್ವರವ್ಯತ್ಯಾಸದಿಂದ ತ್ವಷ್ಟೃವಿಗೆ ತನಗೆ ಬೇಕಾದ ಇಂದ್ರನನ್ನು ನಿಗ್ರಹಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಸಂಹೃತನಾಗುವ ಪುತ್ರನು ಜನಿಸಿದನು. ಆದರೂ ಆ ವೃತ್ರನು, ಅಗ್ನಿಯಲ್ಲಿ ಅಗ್ನಿ ಮತ್ತು ಸೋಮದೇವತೆಗಳನ್ನು ಉದ್ದೇಶಿಸಿ ಮಾಡಿದ ಹವಿಸ್ಸಿನಿಂದ ವೃದ್ಧಿಯನ್ನೈದುತ್ತಾ ಬಂದನು. ಅವನು ಪ್ರತಿದಿನವೂ ಒಂದು ಬಿಲ್ಲಿನ ಪ್ರಮಾಣದಂತೆ ಬೆಳೆಯುತ್ತಾ ದೊಡ್ಡ ಆಕಾರವುಳ್ಳವನಾಗಿ ಈ ಲೋಕಗಳನ್ನೆಲ್ಲಾ ಎಲ್ಲೆಲ್ಲಿಯೂ ವ್ಯಾಪಿಸಿದನು. ಹೀಗೆ ಸರ್ವಪ್ರದೇಶಗಳನ್ನೂ ವ್ಯಾಪಿಸುವ ಸ್ವಭಾವವುಳ್ಳವನಾದ್ದರಿಂದ ವೃತ್ರನಿಗೆ ವೃತ್ರನೆಂದು ಹೆಸರಾಯಿತು. ಆಚ್ಛಾದಿಸು, ಮುಚ್ಚು ವ್ಯಾಪಿಸು ಎಂಬರ್ಥವುಳ್ಳ ವೃಞ್ ವರಣೇ ಎಂಬ ಧಾತುವಿನಿಂದ ವೃತ್ರಶಬ್ದವು ನಿಷ್ಪನ್ನವಾಗಿ ಇವನು ಸರ್ವವನ್ನೂ ವ್ಯಾಪಿಸುವವನು ಎಂಬ ಅನ್ವರ್ಥನಾಮವನ್ನು ಸೂಚಿಸುವುದು. ವೃತ್ರನ ಈ ವಿಧವಾದ ಬೆಳವಣಿಗೆಯನ್ನು ಕಂಡು ಇಂದ್ರನು ಹೆದರಿದನು.

ಸ ಪ್ರಜಾಪತಿಮುಪಾಧಾವಚ್ಛತ್ರುರ್ಮೇಽಜನೀತಿ ತಸ್ಮೈ ವಜ್ರಗ್ಂ ಸಿಕ್ತ್ವಾ ಪ್ರಾಯಚ್ಛ-ದೇತೇನ ಜಹೀತಿ ತೇನಾಭ್ಯಾಯತ ।

ಬಳಿಕ ಇಂದ್ರನು ಪ್ರಜಾಪತಿಯ ಸಮೀಪಕ್ಕೆ ಹೋಗಿ ಎಲೈ ಬ್ರಹ್ಮನೇ, ನನಗೆ ಒಬ್ಬ ಶತ್ರುವು ಜನಿಸಿರುವನು. ಅವನನ್ನು ಸಂಹರಿಸುವ ಬಗೆ ಹೇಗೆ ಎಂದು ಪ್ರಾರ್ಥಿಸಲು ಪ್ರಜಾಪತಿಯು ಇಂದ್ರನನ್ನು ಹೆದರಬೇಡವೆಂದು ಸಂತೈಸಿ ಅವನ ವಜ್ರಾಯುಧವನ್ನು ಹರಿತವನ್ನಾಗಿ ಮಾಡಿಕೊಟ್ಟು ಈ ಆಯುಧದಿಂದ ನಿನ್ನ ಶತ್ರುವನ್ನು ಸಂಹರಿಸೆಂದು ಹೇಳಲು ಇಂದ್ರನು ಅದನ್ನು ತೆಗೆದುಕೊಂಡು ವೃತ್ರನ ಬಳಿಗೆ ಬಂದನು.

ತಾವಬ್ರೂತಾಮಗ್ನೀಷೋಮೌ ಮಾ ಪ್ರಹಾರಾವಮಂತಃ ಸ್ವ ಇತಿ ಮಮ ವೈ ಯುವಗ್ಂ ಸ್ಥ ಇತ್ಯಬ್ರವೀನ್ಮಾಮಭ್ಯೇತಮಿತಿ ತೌ ಭಾಗಧೇಯಮೈಚ್ಛೇತಾಂ ತಾಭ್ಯಾಮೇತಮಗ್ನೀಷೋಮೀಯ-ಮೇಕಾದಶಕಪಾಲಂ ಪೂರ್ಣಮಾಸೇ ಪ್ರಾಯಚ್ಛತ್ತಾವಬ್ರೂತಾಮಭಿ ಸಂದಷ್ಟೌ ವೈ ಸ್ವೋ ನ ಶಕ್ನುವ ಐತುಮಿತಿ ಸ ಇಂದ್ರ ಆತ್ಮನಃ ಶೀತರೂರಾವಜನಯತ್ತಚ್ಛೀತರೂರಯೋರ್ಜನ್ಮ ಯ ಏವಗ್ಂ ಶೀತರೂರಯೋರ್ಜನ್ಮ ವೇದ ನೈನಗ್ಂ ಶೀತರೂರೌ ಹತಸ್ತಾಭ್ಯಾಮೇನಮಭ್ಯನ-ಯತ್ತಸ್ಮಾಜ್ಜಂಜಭ್ಯಮಾನಾದಗ್ನೀಷೋಮೌ ನಿರಕ್ರಾಮತಾಂ ॥

ಅನಂತರ ಇಂದ್ರನು ತನ್ನ ಆಯುಧದಿಂದ ವೃತ್ರನನ್ನು ಪ್ರಹರಿಸಲು ಉದ್ಯುಕ್ತನಾದಾಗ ಅಗ್ನಿ ಮತ್ತು ಸೋಮರು ಇಂದ್ರನನ್ನು ಹೊಡೆಯಬೇಡವೆಂದು ತಡೆದು—ಎಲೈ ಇಂದ್ರನೇ, ಈಗ ವೃತ್ರನನ್ನು ಹೊಡೆಯಬೇಡ. ಅಗ್ನೀಸೋಮ ದೇವತೆಗಳಾದ ನಾವು ಈ ವೃತ್ರನ ಮುಖದಲ್ಲಿ ವಾಸಿಸುತ್ತಿರುವೆವು ಎನ್ನಲು, ಇಂದ್ರನು ಎಲೈ ಅಗ್ನೀಸೋಮರೇ, ನೀವು ನಮ್ಮವರು ತಾನೆ. ಆದ್ದರಿಂದ ನೀವು ವೃತ್ರನ ಶರೀರವನ್ನು ಬಿಟ್ಟು ನನ್ನ ಬಳಿಗೆ ಬನ್ನಿ. ಅನಂತರ ನಾನು ವೃತ್ರನನ್ನು ಸಂಹರಿಸುವೆನು ಎಂದನು. ಅದನ್ನು ಕೇಳಿ ಅಗ್ನೀಸೋಮದೇವತೆಗಳು—ಎಲೈ ಇಂದ್ರನೇ, ನೀನು ಹೇಳುವಂತೆ ನಾವು ಮಾಡುವುದಾದರೆ ನಮಗೆ ಏನು ಉಪಕಾರ ಮಾಡುತ್ತೀಯೆ ? ನಮಗೂ ಯಜ್ಞದಲ್ಲಿ ಭಾಗವನ್ನು ಕಲ್ಪಿಸಿ

ಕೊಡುವುದಾದರೆ ನೀನು ಹೇಳುವಂತೆ ಕೇಳುವೆವು ಎನ್ನಲು ಅದಕ್ಕೆ ಇಂದ್ರನು ಸಮ್ಮತಿಸಿ ಅವರಿಗೆ ಪೂರ್ಣಮಾಸ ಯಾಗದಲ್ಲಿ ಏಕಾದಶ ಕಪಾಲವೆಂಬ ಪೋರಾಡಶ ಹವಿಸ್ಸಿನ ಆಹುತಿಭಾಗವನ್ನು ಕಲ್ಪಿಸಿಕೊಟ್ಟನು. ಬಳಿಕ ಅಗ್ನಿ ಸೋಮದೇವತೆಗಳು ಈ ರೀತಿ ತಮಗೆ ಬೇಕಾದ ವರವನ್ನು ಪಡೆದರೂ ಸಹ ಇಂದ್ರನನ್ನು ಕುರಿತು--ಎಲೈ ಇಂದ್ರನೇ, ಈಗ ನಾವು ವೃತ್ರನ ಮುಖದಿಂದ ಹೊರಟುಬರಲು ಸಾಧ್ಯವಿಲ್ಲ. ನಾವು ವೃತ್ರನ ಹಲ್ಲುಗಳ ಮಧ್ಯೆ ಸಿಕ್ಕಿ ಬಲವಾಗಿ ಹಿಡಿಯಲ್ಪಟ್ಟದ್ದೇವೆ. ಅವನು ಬಾಯನ್ನು ತೆರೆದಲ್ಲದೆ ನಾವು ಈಚೆಗೆ ಬರಲಾಗುವುದಿಲ್ಲ ಎಂದರು. ಆಗ ಇಂದ್ರನು ಇದಕ್ಕೊಂದುಪಾಯವನ್ನು ಯೋಚಿಸಿದನು. ತನ್ನ ಶರೀರದಿಂದ ಶೀತಜ್ವರ ಮತ್ತು ಅದರಿಂದ ಉಂಟಾಗುವ ಮಹಾ ತಾಪವನ್ನು ಸೃಷ್ಟಿಮಾಡಿದನು. ಛಳಿಜ್ವರವು ಪ್ರಪಂಚದಲ್ಲಿ ಜನರನ್ನು ಬಾಧಿಸುವುದಕ್ಕೆ ಇದೇ ಮೊದಲು. ಈ ಛಳಿ ಜ್ವರದ, ಈ ರೀತಿಯಾದ ಉತ್ಪತ್ತಿಕ್ರಮವನ್ನು ಯಾವ ಪುರುಷನು ತಿಳಿಯುವನೋ ಅವನಿಗೆ ಈ ಶೀತಜ್ವರದಿಂದ ಬಾಧೆ ಇರುವುದಿಲ್ಲ. ಬಳಿಕ ಇಂದ್ರನು ತಾನು ಸೃಷ್ಟಿಸಿದ ಛಳಿಜ್ವರಗಳನ್ನು ಕರೆದುಕೊಂಡು ಹೋಗಿ ವೃತ್ರಾಸುರನ ಶರೀರವನ್ನು ಪ್ರವೇಶಿಸುವಂತೆ ಮಾಡಿದನು. ಆಗ ವೃತ್ರಾಸುರನು ಛಳಿಯಿಂದ ನಡುಗುತ್ತಾ ಜ್ವರದ ತಾಪದಿಂದ ಬಳಲಿ ಆಯಾಸದಿಂದ ನಿಟ್ಟುಸುರನ್ನು ಬಿಡುವುದಕ್ಕಾಗಿ ಬಾಯನ್ನು ಅಗಲವಾಗಿ ತೆರೆದನು. ತತ್ಕ್ಷಣ ಅವನ ಬಾಯಿ ಯಿಂದ ಅಗ್ನಿಸೋಮದೇವದೇವತೆಗಳು ಹೊರಹೊರಟು ಈಚೆಗೆ ಬಂದರು.

> ಪ್ರಾಣಾಪಾನೌ ವಾ ಏನಂ ತದಜಹಿತಾಂ ಪ್ರಾಣೋ ವೈ ದಕ್ಷೋಽಪಾನಃ ಕ್ರತುಸ್ತಸ್ಮಾಜ್ಜಂಜಭ್ಯ-ಮಾನೋ ಬ್ರೂಯಾನ್ಮಯಿ ದಕ್ಷಕ್ರತೂ ಇತಿ ಪ್ರಾಣಾಪಾನಾವೇವಾತ್ಮನ್ಧತ್ತೇ ಸರ್ವ-ಮಾಯುರೇತಿ ।

ಅನಂತರ ಪ್ರಾಣ, ಅಪಾನ ಎಂಬ ವಾಯುಗಳು ಆ ವೃತ್ರನನ್ನು ತ್ಯಜಿಸಿದವು. ಎಂದರೆ ಅವನ ಶರೀರವನ್ನು ಬಿಟ್ಟು ಹೋದವು. ಪ್ರಾಣಶಬ್ದಕ್ಕೆ ದಕ್ಷವೆಂದೂ ಅಪಾನಶಬ್ದಕ್ಕೆ ಕ್ರತುವೆಂದೂ ಅರ್ಥವಿರುವುದು. ದಕ್ಷವೆಂದರೆ ಕೆಲಸ ಕಾರ್ಯಗಳಲ್ಲಿ ಕುಶಲತೆಯು, ಪ್ರಜ್ಞೆಯು ; ಕ್ರತುವೆಂದರೆ ಕೆಲಸಮಾಡುವ ದೇಹಶಕ್ತಿ, ಸಾಮರ್ಥ್ಯ, ಇವೆರಡೂ ಬಾಯನ್ನು ತೆರೆದಿದ್ದ ಆ ವೃತ್ರನನ್ನು ಬಿಟ್ಟುಹೋದವು. ಆದ್ದರಿಂದ ಯಜ್ಞಕರ್ಮವನ್ನು ನೆರವೇರಿಸುತ್ತಿರುವಾಗ ದೇಹಚೇಷ್ಟೆ ಮಾಡಿದರೂ, ಆಕಳಿಸಿ ಬಾಯನ್ನು ತೆರೆದರೂ ಆಗ ಮಯಿ ದಕ್ಷಕ್ರತೂ ಎಂಬ ಮಂತ್ರವನ್ನುಚ್ಚರಿಸ ಬೇಕು. ಹಾಗೆ ಮಾಡಿದರೆ ಪ್ರಾಣಾಪಾನಗಳು ಯಜಮಾನನನ್ನು ಬಿಟ್ಟುಹೋಗದೆ ಸ್ಥಿರವಾಗಿ ನಿಲ್ಲುವವು, ದೀರ್ಘಾ ಯುಸ್ಸೂ ಉಂಟಾಗುವುದು.

> ಸ ದೇವತಾ ವೃತ್ರಾನ್ನಿರ್ಹೂಯ ವಾರ್ತ್ರಘ್ನಗ್ಂ ಹವಿಃ ಪೂರ್ಣಮಾಸೇ ನಿರವಪದ್ ಘ್ನಂತಿ ವಾ ಏನಂ ಪೂರ್ಣಮಾಸ ಆಮಾವಾಸ್ಯಾಯಾಂ ಪ್ಯಾಯಯಂತಿ ತಸ್ಮಾದ್ವಾರ್ತ್ರಘ್ನೀ ಪೂರ್ಣಮಾಸೇಽನೂಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ ।

ಅನಂತರ ಇಂದ್ರನು ವೃತ್ರಾಸುರನ ಮುಖದಲ್ಲಿ ಇದ್ದ ಅಗ್ನೀಷೋಮಾದಿದೇವತೆಗಳನ್ನೆಲ್ಲಾ ಅಲ್ಲಿಂದ ಈಚೆಗೆ ಕರೆದು ವೃತ್ರನ ಸಂಹಾರಕ್ಕೆ ಸಾಧನಭೂತವಾದ ಹವಿರಾಜ್ಯಭಾಗದ್ರವ್ಯರೂಪವಾದ ಆಹುತಿಯನ್ನು ಪೌರ್ಣಮಾಸಿಯ ದಿವಸ ಸಿದ್ಧಪಡಿಸಿದನು. ಲೋಕವ್ಯವಹಾರದಲ್ಲಿಯೂ ಅಂಧಕಾರವೆಂಬ ಎಲ್ಲೆಲ್ಲಿಯೂ ಆವರಿಸಿರುವ ಕತ್ತಲೆಯೆಂಬ ಶತ್ರುವು ಪೌರ್ಣಮಾಸಿಯ ಪ್ರಕಾಶಮಾನವಾದ ಬೆಳದಿಂಗಳಿನಿಂದ ನಾಶವಾಗುವ ವಿಷಯವು ಎಲ್ಲರಿಗೂ ತಿಳಿದೇ ಇದೆ. ಆದರೆ

ಅಮಾವಾಸ್ಯೆಯ ದಿವಸ ಬೆಳದಿಂಗಳಿನ ಪ್ರಕಾಶವು ಇರುವುದಿಲ್ಲವಾದ್ದರಿಂದ ಆಗ ಕತ್ತಲೆಯೆಂಬ ಶತ್ರುವು (ವೃತ್ರ) ಎಲ್ಲೆಲ್ಲಿಯೂ ಆವರಿಸಿ ವೃದ್ಧಿಯಾಗುವುದು. ಆದುದರಿಂದ ವೃತ್ರಹನನಕ್ಕಾಗಿ ಪೂರ್ಣಮಾಸಿಯ ದಿವಸ ಅಗ್ನೀಷೋಮಿಯ ಆಜ್ಯಭಾಗಗಳೆಂಬ ಆಹುತಿಗಳಿಗೆ ಪೂರ್ವಭಾವಿಯಾಗಿ,

ಅಗ್ನಿರ್ವೃತ್ರಾಣಿ ಜಂಘನದ್ದ್ರವಿಣಸ್ಯುರ್ವಿಪನ್ಯಯಾ । ಸಮಿದ್ಧಃ ಶುಕ್ರ ಆಹುತಃ ।

(ಋ. ಸಂ. ೬-೧೬-೩೪)

ತ್ವಂ ಸೋಮಾಸಿ ಸತ್ಪತಿಸ್ತ್ವಂ ರಾಜೋತ ವೃತ್ರಹಾ । ತ್ವಂ ಭದ್ರೋ ಅಸಿ ಕ್ರತುಃ ॥

(ಋ. ಸಂ. ೧-೯೧-೫)

ಎಂಬ ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕು. ಈ ಎರಡು ಋಕ್ಕುಗಳಲ್ಲಿಯೂ ವೃತ್ರಹನನವನ್ನು ಸೂಚಿಸುವ ಶಬ್ದಗಳ ಪ್ರಯೋಗವಿರುವುದರಿಂದ ಈ ಋಕ್ಕುಗಳಿಗೆ ವಾರ್ತ್ರಘ್ನೀ ಋಕ್ಕುಗಳೆಂದು ಹೆಸರು. ಏಕೆಂದರೆ—ಪೌರ್ಣಮಾಸಿಯ ದಿವಸವೇ ವೃತ್ರನ ಸಂಹಾರವಾಯಿತು. ಆದುದರಿಂದ ಆ ದಿವಸ ವೃತ್ರಹನನ ಸಂಬಂಧವಾದ ಋಕ್ಕುಗಳನ್ನು ಪಠಿಸಿ ಹೋಮ ಮಾಡುವುದು ಯುಕ್ತವಾಗಿದೆ. ಅಮಾವಾಸ್ಯೆಯ ದಿವಸ ಅಂಧಕಾರವು ವೃದ್ಧಿಯಾಗಿರುವುದು. ಎಂದರೆ, ತಮಸ್ಸಿನಿಂದ ಸರ್ವವನ್ನು ವ್ಯಾಪಿಸುವ ವೃತ್ರನು ಅಭಿವೃದ್ಧಿಯನ್ನೈದುವನು. ಆದುದರಿಂದ ಆ ದಿವಸ ವೃಧಿ-ವೃದ್ಧೌ ಎಂಬ ವೃದ್ಧಿಯನ್ನು ಸೂಚಿಸುವ ಧಾತುವಿನಿಂದ ನಿಷ್ಪನ್ನವಾದ ಶಬ್ದಗಳನ್ನೊಳಗೊಂಡ—

ಅಗ್ನಿಃ ಪ್ರತ್ನೇನ ಮನ್ಮನಾ ಶುಂಭಮಾನಸ್ತನ್ವಂ೧ ಸ್ವಾಂ । ಕವಿರ್ವಿಪ್ರೇಣ ವಾವೃಧೇ ॥

(ಋ. ಸಂ. ೮-೪೪-೧೨)

ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ । ಸುಮೃಳೀಕೋ ನ ಆ ವಿಶ ॥

(ಋ. ಸಂ. ೧-೯೧-೧೧)

ಎಂಬ ಋಕ್ಕುಗಳನ್ನು ಪಠಿಸಬೇಕು. ವೃದ್ಧಿಯನ್ನು ಸೂಚಿಸುವ ಶಬ್ದಗಳಿಂದ ಸಹಿತವಾದ ಈ ಋಕ್ಕುಗಳಿಗೆ ವೃಧನ್ವತೀ ಋಕ್ಕುಗಳೆಂದು ಹೆಸರು. ಇವುಗಳನ್ನು ಅಂಧಕಾರದಿಂದ ವೃದ್ಧಿಯಾಗಿರುವ ಅಮಾವಾಸ್ಯೆಯ ದಿವಸ ಪಠಿಸಬೇಕು.

ತತ್ಸಗ್ಂಸ್ಥಾಪ್ಯ ವಾರ್ತ್ರಘ್ನಗ್ಂ ಹವಿರ್ವಜ್ರಮಾದಾಯ ಪುನರಭ್ಯಾಯತ ತೇ ಅಬ್ರೂತಾಂ ದ್ಯಾವಾಪೃಥಿವೀ ಮಾ ಪ್ರಹಾರಾವಯೋರ್ವೈ ಶ್ರಿತ ಇತಿ ತೇ ಅಬ್ರೂತಾಂ ವರಂ ವೃಣಾವಹೈ ನಕ್ಷತ್ರವಿಹಿತಾಹಮಸಾನೀತ್ಯಸಾವಬ್ರವೀಚ್ಚಿತ್ರವಿಹಿತಾಹಮಿತೀಯಂ ತಸ್ಮಾನ್ನಕ್ಷತ್ರವಿಹಿತಾಸೌ ಚಿತ್ರವಿಹಿತೇಯಂ ಯ ಏವಂ ದ್ಯಾವಾಪೃಥಿವ್ಯೋರ್ವರಂ ವೇದೈನಂ ವರೋ ಗಚ್ಛತಿ ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್ ।

ಅನಂತರ ಇಂದ್ರನು ವೃತ್ರಹನನಹೇತುಭೂತವಾದ ಆಜ್ಯಭಾಗ ಮತ್ತು ಹವಿಸ್ಸುಗಳನ್ನು ಪೂರ್ತಿಯಾಗಿ ನೆರವೇರಿಸಿ ಹಿಂದಿನಂತೆ ವಜ್ರಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ವೃತ್ರನನ್ನು ಸಂಹಾರಮಾಡುವ ಉದ್ದಿಶ್ಯದಿಂದ ಅವನ

ಅಭಿಮುಖವಾಗಿ ನುಗ್ಗಿಹೋದನು. ಆಗ ದ್ಯಾವಾಪೃಥಿವಿಗಳು (ಭೂಮ್ಯಂತರಿಕ್ಷಗಳು) ಇಂದ್ರನನ್ನು ತಡೆದು—ಎಲೈ ಇಂದ್ರನೇ, ನೀನು ಈ ವೃತ್ರನನ್ನು ಕೊಲ್ಲಬೇಡ. ಇವನು ಭೂಮಿಯಿಂದ ಸ್ವರ್ಗಪರ್ಯಂತರ ಇರುವ ಪ್ರದೇಶವನ್ನೆಲ್ಲಾ ವ್ಯಾಪಿಸಿ ಇರುವನು. ನಮ್ಮನ್ನಾಶ್ರಯಿಸಿ ಇರುವ ಇವನನ್ನು ನಾವು ಬಿಟ್ಟುಕೊಡಲಾರೆವು ಎಂದವು. ಅದಕ್ಕೆ ಇಂದ್ರನು ಒಪ್ಪದಿರಲು ಮತ್ತೆ ದ್ಯಾವಾಪೃಥಿವಿಗಳು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ಒಂದು ವೇಳೆ ನಾವು ವೃತ್ರ ಸಂಹಾರಕ್ಕೆ ಅವಕಾಶವನ್ನು ಕೊಡುವುದಾದರೆ ನಾವು ಕೇಳುವ ವರಗಳನ್ನು ಕೊಡಬೇಕು ಎಂದು ಹೇಳಲು ಇಂದ್ರನು ಹಾಗೆಯೇ ಆಗಲೆಂದನು. ಆಗ ಅಂತರಿಕ್ಷವು (ದ್ಯೌಃ) ತಾನು ನಕ್ಷತ್ರಗಳಿಂದ ಅಲಂಕೃತವಾಗಿರಬೇಕೆಂದು ವರವನ್ನು ಬೇಡಿತು. ಭೂಮಿಯು ನಾನಾವಿಧವಾದ ಮನುಷ್ಯಪಶುವೃಕ್ಷಪರ್ವತನದೀಸಮುದ್ರಾದಿ ವಿಚಿತ್ರವಸ್ತುಗಳಿಂದ ಕೂಡಿರಬೇಕೆಂದು ವರವನ್ನು ಕೇಳಿತು. ಇಂದ್ರನು ಅದರಂತೆ ವರವನ್ನು ಕೊಟ್ಟನು. ದ್ಯಾವಾಪೃಥಿವಿಗಳ ಈ ವಿಧವಾದ ವರಪ್ರಾಪ್ತಿಕ್ರಮವನ್ನು ತಿಳಿಯುವ ಪುರುಷನು ತನಗೆ ಬೇಕಾದ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು. ಬಳಿಕ ಇಂದ್ರನು ದ್ಯಾವಾಪೃಥಿವಿಗಳ ಅನುಮತಿಯನ್ನು ಪಡೆದು ವೃತ್ರನನ್ನು ವಜ್ರಾಯುಧದಿಂದ ಹೊಡೆದು ಸಂಹರಿಸಿದನು.

ತೇ ದೇವಾ ವೃತ್ರಗ್ಂ ಹತ್ವಾಗ್ನೀಷೋಮಾವಬ್ರುವನ್ ಹವ್ಯಂ ನೋ ವಹತಮಿತಿ ತಾವಬ್ರೂತಾಮಪತೇಜಸೌ ವೈ ತ್ಯೌ ವೃತ್ರೇ ವೈ ತ್ಯಯೋಸ್ತೇಜ ಇತಿ ತೇಽಬ್ರುವನ್ ಕ ಇದಮಚ್ಛೈತೀತಿ ಗೌರಿತ್ಯಬ್ರುವನ್ಗೌರ್ವಾವ ಸರ್ವಸ್ಯ ಮಿತ್ರಮಿತಿ ಸಾಬ್ರವೀದ್ವರಂ ವೃಣೈ ಮಯ್ಯೇವ ಸತೋಭಯೇನ ಭುನಜಾಥಾ ಇತಿ ತದ್ಗೌರಾಹರತ್ತಸ್ಮಾದ್ಗವಿ ಸತೋಭಯೇನ ಭುಜಂತ ಏತದ್ವಾ ಅಗ್ನೇಸ್ತೇಜೋ ಯದ್ಘೃತಮೇತತ್ಸೋಮಸ್ಯ ಯತ್ಪಯೋ ಯ ಏವಮಗ್ನೀಷೋಮಯೋಸ್ತೇಜೋ ವೇದ ತೇಜಸ್ವ್ಯೇವ ಭವತಿ ।

ವೃತ್ರಹನನಾನಂತರ ಇಂದ್ರನ ಸಮೀಪದಲ್ಲಿದ್ದ ದೇವತೆಗಳೆಲ್ಲರೂ ಅಗ್ನೀಸೋಮರನ್ನು ಕುರಿತು—ಎಲೈ ಅಗ್ನೀಸೋಮದೇವತೆಗಳೇ, ನೀವು ಈಗ ವೃತ್ರನ ಮುಖದಿಂದ ಹಿಂತಿರುಗಿ ಬಂದಿರುವಿರಷ್ಟೆ. ಇನ್ನು ಮುಂದೆ ನಮಗಾಗಿ ಯಜ್ಞಾದಿಗಳಲ್ಲಿ ಹೋಮಮಾಡುವ ಹವಿಸ್ಸುಗಳನ್ನು ವಹಿಸಿ ತಂದು ನಮಗೆ ಅರ್ಪಿಸಿರಿ ಎಂದರು. ಅದಕ್ಕೆ ಆ ಅಗ್ನೀಸೋಮರು ದೇವತೆಗಳನ್ನು ಕುರಿತು—ಎಲೈ ದೇವತೆಗಳೇ, ನಾವು ಬಹಳ ಕಾಲದಿಂದಲೂ ವೃತ್ರನ ಶರೀರದಲ್ಲಿದ್ದು ಅವನ ದಂತದಶನಾದಿಗಳಿಂದ ನಿಸ್ತೇಜಸ್ಕರಾಗಿದೇವೆ, ಎಂದರೆ ನಮ್ಮ ಶಕ್ತಿಯು ಕುಗ್ಗಿಹೋಗಿದೆ. ನಮ್ಮ ಶಕ್ತಿ ಅಥವಾ ತೇಜಸ್ಸೆಲ್ಲವೂ ವೃತ್ರನಲ್ಲಿಯೇ ನಿಂತುಹೋಗಿದೆ ಎಂದರು. ಆಗ ದೇವತೆಗಳು ವೃತ್ರನ ಶರೀರದಲ್ಲಿದ್ದು ಅಗ್ನಿಸೋಮರು ಬಿಟ್ಟುಬಂದ ತೇಜಸ್ಸನ್ನು ಹಿಂದಕ್ಕೆ ತರುವ ಬಗೆ ಹೇಗೆಂದು ತಮ್ಮತಮ್ಮಲ್ಲಿಯೇ ಆಲೋಚಿಸಿ, ಗೋವು ಯಾರಿಗೂ ಕೆಡಕುಮಾಡದೆ ಎಲ್ಲರಲ್ಲಿಯೂ ಸ್ನೇಹಭಾವದಿಂದ ವರ್ತಿಸುತ್ತಿರುವುದರಿಂದ ಅದನ್ನು ಕಳುಹಿಸಿ ವೃತ್ರನಲ್ಲಿದ್ದ ತೇಜಸ್ಸನ್ನು ತರಿಸಬೇಕೆಂದು ನಿರ್ಧರಿಸಿದರು. ಬಳಿಕ ಅವರು ಹಸುವನ್ನು ಕರೆದು ವೃತ್ರನಲ್ಲಿರುವ ತೇಜಸ್ಸನ್ನು ತರಬೇಕೆಂದು ಹೇಳಲು, ಅದು ಹಾಗೆಯೇ ಆಗಲಿ ಆದರೆ ನಾನು ತರುವ ತೇಜಸ್ಸು ಹಾಲು ತುಪ್ಪ ಇವುಗಳ ರೂಪದಲ್ಲಿ ಸದಾ ನನ್ನಲ್ಲಿಯೇ ನೆಲಸಿರಬೇಕು. ಅವುಗಳನ್ನು ಜನರು ನನ್ನಿಂದ ಪಡೆದು ಭೋಜನಾದಿಗಳನ್ನು ನೆರವೇರಿಸಬೇಕು. ಈ ರೀತಿ ವರವನ್ನು ಕೊಡುವುದಾದರೆ ತರುತ್ತೇನೆಂದಿತು. ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಅದರಂತೆ ವರವನ್ನು ಕೊಟ್ಟರು. ವರವನ್ನು ಪಡೆದು ಗೋವು ಆ ತೇಜಸ್ಸನ್ನು ತಂದಿತು. ಈ ವಿಧವಾದ ವರಪ್ರದಾನದ ಫಲವಾಗಿ ಈಗಲೂ ಲೋಕದಲ್ಲಿರುವ ಜನರು ಗೋವುಗಳಿಂದಲೇ ಹಾಲು, ತುಪ್ಪ ಮೊದಲಾದ ಪುಷ್ಟಿಪ್ರದವಾದ ಆಹಾರವನ್ನು ಆಗಾಗ್ಯೆ ಪಡೆಯುತ್ತಾ

ಭೋಜನಮಾಡುತ್ತಿರುವರು. ಇಲ್ಲಿ ತುಪ್ಪ ಅಥವಾ ಘೃತವು ಅಗ್ನಿಯ ತೇಜಸ್ಸೆಂದು ಹೇಳಲ್ಪಡುವುದು. ಆದುದರಿಂದಲೇ ಯಜ್ಞಾದಿಗಳಲ್ಲಿ ಜನರು ಘೃತ ಅಥವಾ ತುಪ್ಪದಿಂದ ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡಿ ಅಗ್ನಿಯು ಪ್ರಜ್ವಲಿಸುವಂತೆ ಮಾಡುವರು. ಹಾಲು ಸೋಮದ ತೇಜಸ್ಸೆಂದು ಹೇಳಲ್ಪಡುವುದು. ಏಕೆಂದರೆ ಸೋಮವು ಹಾಲಿನಂತೆ ದ್ರವರೂಪದಲ್ಲಿರುವುದು ಮತ್ತು ಸೋಮರಸದ ರುಚಿಯನ್ನು ಹೆಚ್ಚಿಸುವುದಕ್ಕಾಗಿ ಅದರ ಜತೆಗೆ ಹಾಲನ್ನು ಮಿಶ್ರಮಾಡುವರು. ಇದಕ್ಕೆ ಗವಾಶಿರವೆಂದು ಹೆಸರು. ಈ ರೀತಿ ಹಾಲನ್ನು ಮಿಶ್ರಮಾಡುವುದರಿಂದ ಸೋಮದ ತೇಜಸ್ಸು ಅಥವಾ ಸತ್ತ್ವವು (ರುಚಿಯು) ಹೆಚ್ಚುವುದು. ಈ ರೀತಿಯಾದ ಅಗ್ನಿಯ ಮತ್ತು ಸೋಮದ ತೇಜಸ್ಸುಗಳ ಮಹಿಮೆಯನ್ನು ತಿಳಿಯುವ ಪುರುಷನು ತೇಜಸ್ವಿಯಾಗುವನು.

> ಬ್ರಹ್ಮವಾದಿನೋ ವದಂತಿ ಕಿಂದೇವತ್ಯಂ ಪೌರ್ಣಮಾಸಮಿತಿ ಪ್ರಾಜಾಪತ್ಯಮಿತಿ ಬ್ರೂಯಾತ್ತೇ- ನೇಂದ್ರಂ ಜ್ಯೇಷ್ಠಂ ಪುತ್ರಂ ನಿರವಾಸಾಯಯದಿತಿ ತಸ್ಮಾಜ್ಜ್ಯೇಷ್ಠಂ ಪುತ್ರಂ ಧನೇನ ನಿರವಾಸಯಂತಿ ॥
>
> (ತೈ. ಸಂ. ೨-೫-೨-೧ ರಿಂದ ೭)

ಈ ಪೌರ್ಣಮಾಸ್ಯವೆಂಬ ಯಾಗಕ್ಕೆ ಮುಖ್ಯದೇವತೆಯಾರು ಎಂದು ಬ್ರಹ್ಮವಾದಿಗಳು ಕೇಳುವರು. ಅದಕ್ಕೆ ಪ್ರಜಾಪತಿಯೇ ಯಜ್ಞಾಧಿಷ್ಠಾತೃವಾದ ದೇವತೆಯು ಎಂದು ಪ್ರತ್ಯುತ್ತರವನ್ನು ಹೇಳಬೇಕು. ಆದರೆ ಈ ಯಾಗದಲ್ಲಿ ಪ್ರಜಾಪತಿಗೆ ಯಾವ ಹವಿರ್ಭಾಗವೂ ಇರುವುದಿಲ್ಲವಲ್ಲ ? ಆದ್ದರಿಂದ ಈ ಯಜ್ಞಕ್ಕೆ ಪ್ರಜಾಪತಿಯು ಹೇಗೆ ದೇವತೆಯು ? ಎಂದರೆ ಪೂರ್ವದಲ್ಲಿ ಪ್ರಜಾಪತಿಯು ಎಲ್ಲಾ ಯಜ್ಞಗಳನ್ನೂ ಸೃಷ್ಟಿಮಾಡಿದನು. ಈ ವಿಷಯವು—

> ಪ್ರಜಾಪತಿರ್ಯಜ್ಞಾನಸೃಜತಾಗ್ನಿಹೋತ್ರಂ ಚಾಗ್ನಿಷ್ಟೋಮಂ ಚ ಪೌರ್ಣಮಾಸೀಂ ಚೋಕ್ಥ್ಯಂ ಚಾಮಾವಾಸ್ಯಾಂ ಚಾತಿರಾತ್ರಂ ಚ ॥
>
> (ತೈ. ಸಂ. ೧-೫-೯-೧)

ಎಂಬ ಶ್ರುತಿವಾಕ್ಯದಲ್ಲಿ ಹೇಳಲಾಗಿದೆ. ಎಂದರೆ ಪ್ರಜಾಪತಿಯು—ಅಗ್ನಿಹೋತ್ರ, ಅಗ್ನಿಷ್ಟೋಮ, ಪೌರ್ಣಮಾಸಿ (ಪೌರ್ಣಮಾಸಿಯ ದಿನದಲ್ಲಿ ಮಾಡುವ ಯಾಗ), ಉಕ್ಥ್ಯ, ಅಮಾವಾಸ್ಯಾ (ಅಮಾವಾಸ್ಯೆಯ ದಿನದಲ್ಲಿ ಮಾಡುವ ಯಾಗ) ಅತಿರಾತ್ರ ಮೊದಲಾದ ಯಜ್ಞಗಳನ್ನೆಲ್ಲಾ ಸೃಷ್ಟಿಮಾಡಿದನು ಎಂದು ಇಲ್ಲಿ ಹೇಳಿದೆ. ಪ್ರಜಾಪತಿಯು ಸೃಷ್ಟಿಮಾಡಿರುವ ಯಜ್ಞಗಳೆಲ್ಲಾ ಅವನ ಸ್ವಕೀಯವಾದ ಆಸ್ತಿಯಾಯಿತು. ಆದುದರಿಂದ ಲೋಕವ್ಯವಹಾರದಲ್ಲಿ ರೂಢಿಯಾಗಿರುವಂತೆ ಎಂದರೆ ತನ್ನ ಆಸ್ತಿಯನ್ನು ತನ್ನ ಜ್ಯೇಷ್ಠಪುತ್ರನಿಗೆ ಕೊಡುವಂತೆ, ಪ್ರಜಾಪತಿಯು ತನ್ನ ಜ್ಯೇಷ್ಠಪುತ್ರನಾದ ಇಂದ್ರನಿಗೆ ಈ ಯಜ್ಞಗಳ ಮುಖ್ಯದೇವತ್ವವನ್ನು ವಹಿಸಿಕೊಟ್ಟನು. ಈ ವಿಷಯವು— ತೇನೇಂದ್ರಂ ನಿರವಾಸಾಯಯತ್ತೇನೇಂದ್ರಃ ಪರಮಾಂ ಕಾಷ್ಠಾಮಗಚ್ಛತ್—ಎಂಬ ತೈತ್ತಿರೀಯಸಂಹಿತಾ ವಾಕ್ಯದಲ್ಲಿಯೇ ಹೇಳಿದೆ. ಆದುದರಿಂದ ಪುತ್ರನಾದ ಇಂದ್ರನಿಗೆ ಪೌರ್ಣಮಾಸ್ಯಯಾಗದಲ್ಲಿ ಅರ್ಪಿತವಾಗುವ ಹವಿಸ್ಸುಗಳೆಲ್ಲವೂ ತಂದೆಯಾದ ಪ್ರಜಾಪತಿಗೆ ಅರ್ಪಿತವಾದಂತೆಯೇ ಎಂದು ಭಾವಿಸಬೇಕು. ಈ ಕಾರಣದಿಂದಲೇ ಈ ಪೌರ್ಣಮಾಸ್ಯಯೆಂಬ ಯಾಗವು ಪ್ರಾಜಾಪತ್ಯ ಎಂದರೆ ಪ್ರಜಾಪತಿಸಂಬಂಧವಾದುದು ಎಂದು ಹೇಳುವ ರೂಢಿಯಿದೆ. ಈ ಕ್ರಮವನ್ನನುಸರಿಸಿ ಈಗಲೂ ಲೋಕವ್ಯವಹಾರದಲ್ಲಿ ತಂದೆಯು ತನ್ನ ಧನಾದಿಯಾದ ಸಮಸ್ತ ಆಸ್ತಿಯನ್ನೂ ತನ್ನ ಹಿರಿಯಮಗನಿಗೆ ಕೊಡುವುದು ರೂಢಿಯಲ್ಲಿದೆ.

॥ ಸಂಹಿತಾಪಾಠಃ ॥

ಅಕ್ಷೋದಯಚ್ಛವಸಾ ಕ್ಷಾಮ ಬುಧ್ನಂ ವಾರ್ಣ ವಾತಸ್ತವಿಷೀಭಿರಿಂದ್ರಃ ।
ದೃಳ್ಹಾನ್ಯೌಭ್ನಾದುಶಮಾನ ಓಜೋಽವಾಭಿನತ್ಕಕುಭಃ ಪರ್ವತಾನಾಂ ॥ ೪ ॥

॥ ಪದಪಾಠಃ ॥

ಅಕ್ಷೋದಯತ್ । ಶವಸಾ । ಕ್ಷಾಮ । ಬುಧ್ನಂ । ವಾಃ । ನ । ವಾತಃ । ತವಿಷೀಭಿಃ । ಇಂದ್ರಃ ।
ದೃಳ್ಹಾನಿ । ಔಭ್ನಾತ್ । ಉಶಮಾನಃ । ಓಜಃ । ಅವ । ಅಭಿನತ್ । ಕಕುಭಃ । ಪರ್ವತಾನಾಂ ॥ ೪ ॥

॥ ಸಾಯಣಭಾಷ್ಯಂ ॥

ಇಂದ್ರಃ ಪರಮೈಶ್ವರ್ಯಯುಕ್ತಃ ಶವಸಾ ಬಲೇನ ಬುಧ್ನಮಂತರಿಕ್ಷಂ ಕ್ಷಾಮ ಕ್ಷೀಣೋದಕ-ಮಕ್ಷೋದಯತ್ । ಸಂಪಿಪೇಷ । ತತ್ರ ದೃಷ್ಟಾಂತಃ । ವಾತೋ ವಾಯುಸ್ತವಿಷೀಭಿರ್ಬಲೈರ್ವಾರ್ನ ಉದಕಮಿವ ತದ್ವತ್ । ಕಿಂಚ ಓಜೋ ಬಲಮುಶಮಾನಃ ಕಾಮಯಮಾನ ಇಂದ್ರೋ ದೃಳ್ಹಾನಿ ದೃಢಾನಿ ಸ್ಥಿರಾಣ್ಯಪ್ಯಭ್ರಾಣ್ಯೌಭ್ನಾತ್ । ಅಭಾಂಕ್ಷೀತ್ । ತಥಾ ಪರ್ವತಾನಾಂ ಗಿರೀಣಾಂ ಕಕುಭಃ ಪಕ್ಷಾನವಾಭಿ-ನತ್ । ಅತ್ಯಂತಮಭೈತ್ಸೀತ್ ॥

॥ ಪ್ರತಿಪದಾರ್ಥ ॥

ವಾತಃ—ವಾಯುವು । ತವಿಷೀಭಿಃ—ತನ್ನ ಶಕ್ತಿಗಳಿಂದ । ವಾಃ ನ—ಉದಕವನ್ನು ಕ್ಷುಬ್ಧವನ್ನಾಗಿ (ಅಲ್ಲೋಲಕಲ್ಲೋಲವನ್ನಾಗಿ) ಮಾಡುವಂತೆ । ಇಂದ್ರಃ—ಇಂದ್ರನು । ಶವಸಾ—ತನ್ನ ಬಲದಿಂದ । ಬುಧ್ನಂ—ಅಂತರಿಕ್ಷವನ್ನು । ಕ್ಷಾಮ—ಉದಕವೆಲ್ಲಾ ಪೂರ್ಣವಾಗಿ ಸುರಿಯುವಂತೆ । ಅಕ್ಷೋದಯತ್—ಬಲವಾಗಿ ಅಲ್ಲಾಡಿಸಿದನು । ಓಜಃ—ವೀರ್ಯವನ್ನು । ಉಶಮಾನಃ—ಅಪೇಕ್ಷಿಸುವ ಇಂದ್ರನು । ದೃಳ್ಹಾನಿ—ದೃಢವಾದ ಪರ್ವತಗಳನ್ನೂ । ಔಭ್ನಾತ್—ಸೀಳಿಹಾಕಿದನು । ಪರ್ವತಾನಾಂ—ಪರ್ವತಗಳ । ಕಕುಭಃ—ಶಿಖರಗಳನ್ನು (ಪಕ್ಷಗಳನ್ನು) । ಅವಾಭಿನತ್—ಸೀಳಿಹಾಕಿದನು.

॥ ಭಾವಾರ್ಥ ॥

ವಾಯುವು ತನ್ನ ಶಕ್ತಿಗಳಿಂದ ಉದಕವನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡುವಂತೆ ಪ್ರಭುವಾದ ಇಂದ್ರನು ತನ್ನ ಬಲದಿಂದ ಅಂತರಿಕ್ಷವನ್ನು ಅಲ್ಲಾಡಿಸಿ ಉದಕವನ್ನು ಸುರಿಸುವಂತೆ ಮಾಡಿದನು, ವೀರ್ಯವನ್ನು ಪ್ರಕಟಿಸಲು ಅಪೇಕ್ಷಿಸಿದ ಇಂದ್ರನು ದೃಢವಾದ ಪರ್ವತಗಳನ್ನು ಸೀಳಿಹಾಕಿದನು. ಪರ್ವತಗಳ ಶಿಖರಗಳನ್ನೂ (ಪಕ್ಷಗಳನ್ನೂ) ಸೀಳಿಹಾಕಿದನು.

## English Translation.

Indra, by his strength, has agitated the exhausted firmament, as wind, by its violent (gusts, agitates) the water: exulting in his strength, he has divided the solid (clouds), and has shattered the peaks of the mountains.

॥ ವಿಶೇಷವಿಷಯಗಳು ॥

**ವಾತಃ ತವಿಷೀಭಿಃ ವಾಃ ನ ಇಂದ್ರಃ ಶವಸಾ ಬುಧ್ನಂ ಕ್ಷಾಮ ಅಕ್ಷೋಭಯತ್**—ವಾಯುವು ವೇಗವಾಗಿ ಬೀಸುವುದರಿಂದ ಸಮುದ್ರವೇ ಮೊದಲಾದ ಜಲಾಶಯಗಳಲ್ಲಿರುವ ಉದಕವು ಅಲ್ಲೋಲಕಲ್ಲೋಲವಾಗಿ ದೊಡ್ಡದೊಡ್ಡ ಅಲೆಗಳಿಂದ ಕೂಡಿ ಪ್ರಕ್ಷುಬ್ಧವಾಗಿ ಮಾಡುವಂತೆ ಇಂದ್ರನು ತನ್ನ ಮಹಾಶಕ್ತಿಯಿಂದ ಅಂತರಿಕ್ಷವನ್ನು ಎಂದರೆ ಅಂತರಿಕ್ಷದಲ್ಲಿರುವ ಮೇಘಸಮೂಹವನ್ನು ಅಲ್ಲೋಲಕಲ್ಲೋಲವಾಗುವಂತೆ ಮಾಡಿ ಮೇಘಗಳು ವೃಷ್ಟಿಯನ್ನು ಸುರಿಯುವಂತೆ ಮಾಡಿದನು ಎಂದಭಿಪ್ರಾಯವು.

**ಓಜಃ ಉಶಮಾನಃ ದೃಳ್ಹಾನಿ ಔಭ್ನಾತ್, ಪರ್ವತಾನಾಂ ಕಕುಭಃ ಅವಾಭಿನತ್**—ಬಲವನ್ನು ಅಪೇಕ್ಷಿಸುವ ಎಂದರೆ ಅತ್ಯಂತ ಬಲವುಳ್ಳ ಇಂದ್ರನು ಭೂಮಿಯಮೇಲೆ ಚಲಿಸದೆ ದೃಢವಾಗಿ ಸ್ಥಾಪಿತವಾಗಿರುವ ಪರ್ವತಾದಿಗಳನ್ನು ಸೀಳಿಹಾಕಿದನು ಮತ್ತು ಆ ಪರ್ವತಗಳ ಶಿಖರಗಳನ್ನು ಅಥವಾ ರೆಕ್ಕೆಗಳನ್ನು ಸೀಳಿ (ಕತ್ತರಿಸಿ) ದನು.

ಈ ಋಕ್ಕಿನಲ್ಲಿ ಇಂದ್ರನು ಇತರರಿಂದ ಮಾಡಲಸಾಧ್ಯವಾದ ಸಾಹಸಕರ್ಮಗಳನ್ನು— ಎಂದರೆ ಮೇಘಗಳನ್ನು ಪ್ರಹರಿಸಿ ವೃಷ್ಟಿಯನ್ನುಂಟುಮಾಡುವುದು, ಅಚಲವಾದ ಪರ್ವತಾದಿಗಳನ್ನು ಸೀಳುವುದು ಮುಂತಾದ ಸಾಹಸ ಕೃತ್ಯಗಳನ್ನು ವರ್ಣಿಸಿ ಇಂದ್ರನ ಶಕ್ತಿಸಾಮರ್ಥ್ಯಗಳು ಅಗಾಧವಾದುವು ಎಂಬ ವರ್ಣನೆ ಇರುವುದು. ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ವಿಷಯದಲ್ಲಿ ಪುರಾಣಾದಿಗಳಲ್ಲಿ ಅನೇಕ ಉಪಾಖ್ಯಾನಗಳಿವೆ. ಪೂರ್ವದಲ್ಲಿ ಪರ್ವತಗಳು ಸೃಷ್ಟಿಸಲ್ಪಟ್ಟಾಗ ಅವುಗಳಿಗೆ ರೆಕ್ಕೆಗಳಿದ್ದವೆಂತಲೂ, ಅವು ಹಾರಾಡುತ್ತಾ ಗ್ರಾಮನಗರಗಳ ಮೇಲೆ ಕುಳಿತು ಅವುಗಳನ್ನು ಧ್ವಂಸಮಾಡಿ ಜನರಿಗೆ ಹಿಂಸೆಯನ್ನುಂಟುಮಾಡುತ್ತಿದ್ದುದರಿಂದ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿ ಅವುಗಳು ಚಲಿಸದಂತೆ ಮಾಡಿದನೆಂದೂ ಆದುದರಿಂದ ಪರ್ವತಗಳಿಗೆ ಅಚಲವೆಂಬ ಹೆಸರು ಬಂದಿತೆಂದೂ ವರ್ಣನೆಗಳಿವೆ.

ತವಿಷೀ, ಶವಃ, ಓಜಃ ಎಂಬ ಶಬ್ದಗಳು ಬಲನಾಮಗಳಲ್ಲಿ ಪಠಿತವಾಗಿವೆ. **ಕಕುಭಃ** ಎಂಬ ಶಬ್ದಕ್ಕೆ ಭಾಷ್ಯಕಾರರು **ಪಕ್ಷಾನ್**—ರೆಕ್ಕೆಗಳನ್ನು ಎಂದು ಅರ್ಥವಿವರಣೆಮಾಡಿದಾರೆ. ಆದರೆ ಯಾಸ್ಕರು ಈ ಶಬ್ದವನ್ನು ದಿಙ್ನಾಮಗಳಲ್ಲಿ ಪಠಿಸಿ ದಿಕ್ಕುಗಳೆಂದು ಅರ್ಥಮಾಡಿದಾರೆ (ನಿ. ೨-೧೫) ಇದಲ್ಲದೆ **ಕಕುಪ್** ಎಂಬುದು—**ಕಕುಪ್ ಕಕುಭಿನೀ ಭವತಿ । ಕಕುಪ್ಚ ಕುಜತೇರ್ವೋಬ್ಜತೇರ್ವಾ ।** ಎಂದು ಯಾಸ್ಕರು ನಿರ್ವಚನವನ್ನು ಹೇಳಿದಾರೆ (ನಿ. ೭-೧೨) ಎಂದರೆ, **ಕಕುಪ್** ಎಂಬುವುದು **ಉಷ್ಣಿಕ್** ಎಂಬ ಹೆಸರಿನ ಛಂದಸ್ಸುಗಳಲ್ಲಿ ಒಂದು ಪ್ರಭೇದವು. ಈ ಜಾತಿಯ ಛಂದಸ್ಸುಗಳಲ್ಲಿ ಒಂದು ಪಾದವು ಜಗತೀ ಛಂದಸ್ಸಿನ ಪಾದವನ್ನೊಳಗೊಂಡು ಇರುವುದರಿಂದ ಈ ಛಂದಸ್ಸಿಗೆ **ಕಕುಪ್** ಎಂದು ಹೆಸರು. ಈ ಶಬ್ದವು ಕುಟಿಲಸ್ವಭಾವವನ್ನು ಸೂಚಿಸುವ ಕುಜತಿ ಧಾತುವಿನಿಂದ ನಿಷ್ಪನ್ನವಾಗಿ

ವಕ್ರವಾಗಿರುವುದೆಂಬ ಅರ್ಥವನ್ನು ಸೂಚಿಸುವುದು. ಎಂದರೆ ಉಷ್ಣಿಕ್ ಛಂದಸ್ಸಿನಲ್ಲಿ ಸೇರಿದ್ದರೂ ಅದರ ಕ್ರಮದಂತಿರದೆ ಮಧ್ಯದಲ್ಲಿ ಜಗತೀಛಂದಸ್ಸಿನ ಕ್ರಮವನ್ನೊಳಗೊಂಡು ವಕ್ರರೀತಿಯಿಂದ ಇರುವುದೆಂದಭಿಪ್ರಾಯವು.



॥ ಸಂಹಿತಾಪಾಠಃ ॥

ಅಭಿ ಪ್ರ ದದ್ರುರ್ಜನಯೋ ನ ಗರ್ಭಂ ರಥಾ ಇವ ಪ್ರ ಯಯುಃ ಸಾಕಮದ್ರಯಃ ।
ಅತರ್ಪಯೋ ವಿಸೃತ ಉಬ್ಜ ಊರ್ಮೀನ್ತ್ವಂ ವೃತಾಁ ಅರಿಣಾ ಇಂದ್ರ ಸಿಂಧೂನ್ ॥ ೫ ॥

॥ ಪದಪಾಠಃ ॥

ಅಭಿ । ಪ್ರ । ದದ್ರುಃ । ಜನಯಃ । ನ । ಗರ್ಭಂ । ರಥಾಃऽಇವ । ಪ್ರ । ಯಯುಃ । ಸಾಕಂ । ಅದ್ರಯಃ ।
ಅತರ್ಪಯಃ । ವಿऽಸೃತಃ । ಉಬ್ಜಃ । ಊರ್ಮೀನ್ । ತ್ವಂ । ವೃತಾನ್ । ಅರಿಣಾಃ । ಇಂದ್ರ । ಸಿಂಧೂನ್॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಮದ್ರಯೋ ಮರುತೋ ಜನಯೋ ಜವನ್ಯೋ ಗರ್ಭಂ ನ ಪುತ್ರಮಿವಾಭಿ ಪ್ರ ದದ್ರುಃ । ಅಭಿಜಗ್ಮುಃ । ಕಿಂಚ ರಥಾ ಇವ ರಂಹಣಶೀಲಾ ರಥಾ ಯಥಾ ತಥಾ ವೃತ್ರವಧಾರ್ಥಂ ತ್ವಯಾ ಸಾಕಂ ಪ್ರ ಯಯುಃ । ಪ್ರಕರ್ಷೇಣಾಯಾಸಿಷುಃ । ಹೇ ಇಂದ್ರ ತ್ವಂ ವಿಸೃತೋ ವಿಸರಣಶೀಲಾ ನದೀರತರ್ಪಯಃ । ಅದ್ಭಿರಪೂರಯಃ । ತಥೋರ್ಮೀನ್ಮೇಘಾನುಬ್ಜಃ । ಅವಧೀಃ । ತಥಾ ತ್ವಂ ವೃತಾನ್ಸ್ವೃತ್ರೇಣಾವೃತಾನ್ ಸಿಂಧೂನಪೋऽರಿಣಾಃ । ಪ್ರೈರಯಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಜನಯಃ—ತಾಯಿಯರು । ಗರ್ಭಂ ನ—ತಮ್ಮ ತಮ್ಮ ಮಕ್ಕಳಿಗೆ ಎದುರಾಗಿ ಓಡಿಬಂದು ಸೇರಿಕೊಳ್ಳುವಂತೆ । ಅದ್ರಯಃ—ಮರುತ್ತುಗಳು । ಅಭಿ—ನಿನಗೆದುರಾಗಿ । ಪ್ರ ದದ್ರುಃ—(ಪ್ರೀತಿಯಿಂದ) ಓಡಿಬಂದು ನಿನ್ನೊಡನೆ ಸೇರಿಕೊಂಡರು । ರಥಾ ಇವ—ಶೀಘ್ರಗಾಮಿಗಳಾದ ರಥಗಳಂತೆ । ಸಾಕಂ—ನಿನ್ನೊಡನೆ ಸೇರಿ । ಪ್ರ ಯಯುಃ—ವೇಗವಾಗಿ ಮುನ್ನುಗ್ಗಿದ್ದಾರೆ । (ಇಂದ್ರ—ಎಲೈ ಇಂದ್ರನೇ) । ತ್ವಂ—ನೀನು । ವಿಸೃತಃ—ವಿಸ್ತೃತವಾಗಿ ಹರಡುವ ಸ್ವಭಾವವುಳ್ಳ ನದಿಗಳನ್ನು । ಅತರ್ಪಯಃ—ನೀರುಗಳಿಂದ

ತುಂಬಿ ಪೂರ್ಣವಾದವನ್ನಾಗಿ ಮಾಡಿದೆ । ಊರ್ಮಿರ್ಣೀನ್—ಮೇಘಗಳನ್ನು । ಉಬ್ಜಃ—ಸೀಳಿಹಾಕಿದೆ । (ತ್ವಂ—ನೀನು) । ವೃತಾನ್—ವೃತ್ರನಿಂದ ಸುತ್ತುವರೆಯಲ್ಪಟ್ಟ । ಸಿಂಧೂನ್—ಉದಕಗಳನ್ನು । ಅರಿಣಾಃ—ಹರಿಯುವಂತೆ ಪ್ರೇರಿಸಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತಾಯಿಯರು ಪ್ರೀತಿಯಿಂದ ತಮ್ಮ ಮಕ್ಕಳ ಎದುರಾಗಿ ಓಡಿಬಂದು ಸೇರಿಕೊಳ್ಳುವಂತೆ ಮರುತ್ತುಗಳು ನಿನಗೆದುರಾಗಿ ಪ್ರೀತಿಯಿಂದ ಓಡಿಬಂದು ನಿನ್ನೊಡನೆ ಸೇರಿಕೊಂಡರು. ಮತ್ತು ಶೀಘ್ರಗಾಮಿಗಳಾದ ರಥಗಳಂತೆ ನಿನ್ನೊಡನೆ ಸೇರಿ ವೇಗವಾಗಿ ಮುನ್ನುಗ್ಗಿದ್ದಾರೆ. ಎಲೈ ಇಂದ್ರನೇ, ನೀನು ವಿಸ್ತೃತವಾಗಿ ಹರಡುವ ಸ್ವಭಾವವುಳ್ಳ ನದಿಗಳನ್ನು ನೀರುಗಳಿಂದ ತುಂಬಿ ಪೂರ್ಣವಾದವನ್ನಾಗಿ ಮಾಡಿದೆ. ಮೇಘಗಳನ್ನು ಸೀಳಿಹಾಕಿದೆ. ಮತ್ತು ವೃತ್ರನಿಂದ ಸುತ್ತುವರೆಯಲ್ಪಟ್ಟ ಉದಕಗಳನ್ನು ಹರಿಯುವಂತೆ ಪ್ರೇರಿಸಿದೆ.

English Translation.

The Maruts have hastened to you like mothers to their young: like chariots they have rushed in along (with you); you, Indra, have satisfied the flowing streams: you have shattered the clouds: you have set free the obstructed rivers.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಇಂದ್ರನ ಮಹಿಮೆಯ ವರ್ಣನೆ ಇದೆ. ಮಕ್ಕಳನ್ನು ಬಿಟ್ಟು ಸ್ವಲ್ಪಕಾಲ ಅಗಲಿದ್ದ ತಾಯಿಯರು ತಮ್ಮ ಮಕ್ಕಳ ಬಳಿಗೆ ಬಹಳ ತ್ವರೆಯಿಂದ ಓಡಿಬರುವಂತೆಯೂ, ರಥಗಳು ವೇಗವಾಗಿ ಚಲಿಸುವಂತೆಯೂ ನಿನ್ನ ಪ್ರೀತಿಗೆ ಪಾತ್ರರಾದ ಮರುದ್ದೇವತೆಗಳು ನಿನಗಭಿಮುಖವಾಗಿ ಪ್ರೀತಿಯಿಂದ ನಿನ್ನ ಬಳಿಗೆ ಓಡಿಬಂದು ಸೇರಿದರು. ಎಂದು ಈ ಋಕ್ಕಿನ ಪೂರ್ವಾರ್ಧದಲ್ಲಿ ವರ್ಣನೆ ಇದೆ. ಇಲ್ಲಿ ಭಾಷ್ಯಕಾರರು ಅದ್ರಯಃ ಎಂಬ ಶಬ್ದಕ್ಕೆ ಮರುತ್ತುಗಳು ಎಂದರ್ಥಮಾಡಿದಾರೆ. ಅದ್ರಿಶಬ್ದವು ಉದಕನಾಮುಗಳಲ್ಲಿಯೂ (ನಿ. ೨-೨೪), ಪರ್ವತನಾಮುಗಳಲ್ಲಿಯೂ ಪಠಿತವಾಗಿದೆ. ಯಾಸ್ಕರು ಈ ಶಬ್ದಕ್ಕೆ ಅದ್ರಿವನ್—ಅದ್ರಿರಾದೃಣೋತ್ಯೇತೇನ (ನಿ. ೪-೪). ಆದರಿಸಲ್ಪಡುವವನಾದುದರಿಂದ ಇಂದ್ರನಿಗೆ ಅದ್ರಿವನ್ ಎಂಬ ಹೆಸರು. ಅದ್ರಯಃ ಆದರಣೀಯಾಃ (ನಿ. ೯-೯) ಆದರಿಸಲ್ಪಡಲು ಯೋಗ್ಯರಾದವರು ಎಂದು ನಿರ್ವಚನವನ್ನು ಹೇಳಿದಾರೆ. ಇಲ್ಲಿ ಮರುದ್ದೇವತೆಗಳು ಇಂದ್ರನಿಗೆ ಪ್ರೀತಿಪಾತ್ರರಾದುದರಿಂದಲೂ, ಇಂದ್ರನಿಗೂ ಮರುದ್ದೇವತೆಗಳಿಗೂ ಯಾವಾಗಲೂ ಸಾಹಚರ್ಯವಿರುವುದರಿಂದಲೂ (ಋ. ಸಂಭಾಗ ೮ ಪೇಜು 172 ನೋಡಿ) ಮರುದ್ದೇವತೆಗಳನ್ನು ಅದ್ರಯಃ ಎಂಬ ಶಬ್ದದಿಂದ ಸೂಚಿಸಿರುವುದು ಯುಕ್ತವಾಗಿದೆ.

ಮತ್ತು ವೃತ್ರನಿಂದ ಆವರಿಸಲ್ಪಟ್ಟು ವೃಷ್ಟಿಪ್ರದಾನವನ್ನು ಮಾಡದಿರುವ ಮೇಘಗಳನ್ನು ಸೀಳಿ ಅವು ಭೂಮಿಯ ಮೇಲೆ ಮಳೆ ಹುಯ್ಯುವಂತೆ ಮಾಡಿದೆ. ಆ ವೃಷ್ಟ್ಯುದಕದಿಂದ ನೀರಿಲ್ಲದೆ ಕೃಶವಾಗಿದ್ದ ನದಿಗಳು ಜಲದಿಂದ ಪೂರ್ಣವಾಗಿ ಹರಿಯುವಂತಾಯಿತು ಎಂದು ಇಂದ್ರನ ಸಾಹಸಕೃತ್ಯವು ಈ ಋಕ್ಕಿನ ಉತ್ತರಾರ್ಧದಲ್ಲಿ ವಿವೃತವಾಗಿದೆ.



॥ ಸಂಹಿತಾಪಾಠಃ ॥

**ತ್ವಂ ಮಹೀಮವನಿಂ ವಿಶ್ವಧೇನಾಂ ತುರ್ವೀತಯೇ ವಯ್ಯಾಯ ಕ್ಷರಂತೀಂ।**

**ಅರಮಯೋ ನಮಸೈಜದರ್ಣಃ ಸುತರಣಾँ ಅಕೃಣೋರಿಂದ್ರ ಸಿಂಧೂನ್ ॥೬॥**

॥ ಪದಪಾಠಃ ॥

ತ್ವಂ । ಮಹೀಂ । ಅವನಿಂ । ವಿಶ್ವ‿ಧೇನಾಂ । ತುರ್ವೀತಯೇ । ವಯ್ಯಾಯ । ಕ್ಷರಂತೀಂ ।

ಅರಮಯಃ । ನಮಸಾ । ಏಜತ್ । ಅರ್ಣಃ । ಸು‿ತರಣಾನ್ । ಅಕೃಣೋಃ । ಇಂದ್ರ । ಸಿಂಧೂನ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಹೀಂ ಮಹತೀಂ ವಿಶ್ವಧೇನಾಂ ವಿಶ್ವಸ್ಯ ಪ್ರೀಣಯಿತ್ರೀಂ ತುರ್ವೀತಯೇ ತುರ್ವೀತಿನಾಮ್ನೇ ರಾಜ್ಞೇ ವಯ್ಯಾಯ ವಯ್ಯನಾಮ್ನೇ ಚ ಕ್ಷರಂತೀಮಭೀಷ್ಟಾನ್ ಕಾಮಾನ್ದುಹತೀಮವನಿಂ ಭೂಮಿಂ ನಮಸಾನ್ನೇನೈಜದೇಜತಾ ಚಲತಾರ್ಣೋಽರ್ಣಸೋದಕೇನ ಚಾರಮಯಃ। ರಮಯಸಿ। ಇಂದ್ರಃ ಪೃಥಿವೀಮನ್ನೋದಕಸಮೃದ್ಧಾಂ ಕರೋತೀತ್ಯರ್ಥಃ। ಕಿಂಚ ಹೇ ಇಂದ್ರ ತ್ವಂ ಸಿಂಧೂನ್ ಜಲಾನಿ ಸುತರಣಾನ್ ಸುಷ್ಠು ತೀರ್ಣಾನ್ಯಕೃಣೋಃ। ಅಕಾರ್ಷೀಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। ತ್ವಂ—ನೀನು। ತುರ್ವೀತಯೇ—ತುರ್ವಿತಿಯೆಂಬ ರಾಜನಿಗೂ। ವಯ್ಯಾಯ—ವಯ್ಯನೆಂಬುವನಿಗೂ ಸಹಾಯವಾಗಲು। ಮಹೀಂ—ಮಹತ್ತಾದುದೂ। ವಿಶ್ವಧೇನಾಃ—ವಿಶ್ವಕ್ಕೆಲ್ಲಾ ತೃಪ್ತಿದಾಯಕವಾದುದೂ। ಕ್ಷರಂತೀಂ—ಇಷ್ಟಾರ್ಥವನ್ನು ಕರೆಯತಕ್ಕದ್ದೂ ಆದ। ಅವನಿಂ—ಭೂಮಿಯನ್ನು। ನಮಸಾ—ಅನ್ನದಿಂದಲೂ। ಏಜತ್—ಹರಿಯುವ। ಅರ್ಣಃ—ಉದಕದಿಂದಲೂ। ಅರಮಯಃ—(ತುಂಬಿ) ನಲಿಯುವಂತೆ ಮಾಡಿರುವೆ। ಸಿಂಧೂನ್—ಉದಕಪೂರ್ಣವಾದ ನದಿಗಳನ್ನು। ಸುತರಣಾನ್—ದಾಟಲು ಅನುಕೂಲವಾಗುವಂತೆ। ಅಕೃಣೋಃ—ಮಾಡಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತುರ್ವೀತಿಯೆಂಬ ರಾಜನಿಗೂ, ವಯ್ಯನೆಂಬ ರಾಜನಿಗೂ ಅನುಕೂಲವಾಗಲೆಂಬ ಉದ್ದಿಶ್ಯದಿಂದ ಮಹತ್ತಾದುದೂ, ವಿಶ್ವಕ್ಕೆಲ್ಲಾ ತೃಪ್ತಿದಾಯಕವಾದುದೂ ಇಷ್ಟಾರ್ಥವನ್ನು ಕರೆಯತಕ್ಕದ್ದೂ ಆದ ಭೂಮಿಯನ್ನು ಅನ್ನದಿಂದಲೂ, ಹರಿಯುವ ಉದಕದಿಂದಲೂ ತುಂಬಿ ನಲಿಯುವಂತೆ ಮಾಡಿರುವೆ. ಉದಕಪೂರ್ಣವಾದ ನದಿಗಳನ್ನು ದಾಟಲು ಅನುಕೂಲವಾಗಿರುವಂತೆ ಮಾಡಿರುವೆ.

## English Translation.

You have made the vast, all-cherishing, and exuberant earth, delighted with (abundant) food, and tremulous water, for (the sake of) Turviti and Vayya: you have made the rivers easy to be crossed.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ತುರ್ವೀತಿ, ವಯ್ಯ ಎಂಬುವರಿಗೆ ಇಂದ್ರನು ಸಹಾಯಮಾಡಿದನೆಂದು ಹೇಳಿದೆ. ತುರ್ವೀತಿ. ವಯ್ಯ ಎಂಬ ಎರಡು ಹೆಸರುಗಳೂ ಸಾಧಾರಣವಾಗಿ ಒಟ್ಟಿಗೆ ಪ್ರಯೋಗಿಸಲ್ಪಡುವುದಾದರೂ ಕೆಲವು ಕಡೆ ಮಾತ್ರ ತುರ್ವೀತಿಯೊಬ್ಬನ ಹೆಸರೇ ಇರುತ್ತದೆ. ತುರ್ವೀತಿ ಎಂಬುವನು ತುರ್ವಶ ಮತ್ತು ಯದುಗಳೆಂಬ ಜನಾಂಗಗಳ ರಾಜನೆಂದು Lvdwig ಮೊದಲಾದ ಪಾಶ್ಚಾತ್ಯಪಂಡಿತರ ಅಭಿಪ್ರಾಯವಾಗಿದೆ. ಆದರೆ ಇದಕ್ಕೆ ತಕ್ಕ ಸಮರ್ಥನೆ ದೊರೆಯುವುದಿಲ್ಲ. ಬಹುಶಃ ಇವನು ತುರ್ವಶ ಜನಾಂಗಕ್ಕೆ ಸೇರಿದ ಒಬ್ಬ ಮುಖಂಡನಾಗಿರಬಹುದು. ಋಗ್ವೇದದಲ್ಲಿ ಇದರ ಹೆಸರು ಪ್ರಕೃತ ಋಕ್ಕಿನಲ್ಲಿಯೂ—

ಅರಮಯಸ್ಸರಪಸಸ್ತರಾಯ ಕಂ ತುರ್ವೀತಯೇ ಚ ವಯ್ಯಾಯ ಚ ।
(ಋ. ಸಂ. ೨-೧೩-೧೨)

ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।
(ಋ. ಸಂ. ೧-೫೪-೬)

ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಈ ಋಕ್ಕುಗಳಲ್ಲಿ ಇಂದ್ರನು ಇವರಿಗೆ ನದಿಯನ್ನು ದಾಟಲು ಸಹಾಯ ಮಾಡಿರುವುದಾಗಿ ವರ್ಣನೆ ಇದೆ. ಇದಲ್ಲದೆ ತುರ್ವೀತಿಯ ಹೆಸರು ಋಗ್ವೇದದಲ್ಲಿ ಋ. ಸಂ. ೧-೩೬-೧೮; ೧-೬೧-೧೧; ೧-೧೧೨-೨೩ ಎಂಬ ಋಕ್ಕುಗಳಲ್ಲಿಯೂ ವಯ್ಯನೆಂಬುವನ ಹೆಸರು ಪಠಿತವಾಗಿದೆ.

॥ ಸಂಹಿತಾಪಾಠಃ ॥

ಪ್ರಾಗ್ರುವೋ ನಭನ್ವೋ೩ ನ ವಕ್ವಾ ಧ್ವಸ್ರಾ ಅಪಿನ್ವದ್ಯುವತೀರೃತಜ್ಞಾಃ ।
ಧನ್ವಾನ್ಯಜ್ರಾ ಅಪೃಣಕ್ತೃಷಾಣಾ ಅಧೋಗಿಂದ್ರಃ ಸ್ತರ್ಯೋ೩ ದಂಸುಪತ್ನೀಃ ॥ ೭ ॥

॥ ಪದಪಾಠಃ ॥

ಪ್ರ । ಅಗ್ರುವಃ । ನಭನ್ವಃ । ನ । ವಕ್ವಾಃ । ಧ್ವಸ್ರಾಃ । ಅಪಿನ್ವತ್ । ಯುವತೀಃ । ಋತಽಜ್ಞಾಃ ।
ಧನ್ವಾನಿ । ಅಜ್ರಾನ್ । ಅಪೃಣಕ್ । ತೃಷಾಣಾನ್ । ಅಧೋಕ್ । ಇಂದ್ರಃ । ಸ್ತರ್ಯಃ । ದಂಽಸುಪತ್ನೀಃ ॥

॥ ಸಾಯಣಭಾಷ್ಯಂ ॥

ಇಂದ್ರೋ ನಭನ್ವಃ ಶತ್ರೂಣಾಂ ಹಿಂಸಿಕಾ ವಕ್ವಾ ನ ಸೇನಾ ಇವ ಧ್ವಸ್ರಾಃ ಕೂಲಾನಾಂ ಧ್ವಂಸಿಕಾ ಯುವತೀರದ್ಭಿರ್ಮಿಶ್ರಿತಾ ಋತಜ್ಞಾ ಋತಸ್ಯಾನ್ನಸ್ಯ ಜನಯಿತ್ರೀರಗ್ರುವಃ । ಅಗ್ರುವ ಇತಿ ನದೀನಾಮೈತತ್ । ಅಗ್ರಗಾಮಿನೀರ್ನದೀಃ ಪ್ರಾಪಿನ್ವತ್ । ಪ್ರಕರ್ಷೇಣಾಪೂರಯತ್ । ತಥಾ ಧನ್ವಾನಿ ನಿರ್ಜಲಾನುನ್ನತಾನ್ದೇಶಾಂಶ್ಚ ವೃಷ್ಟ್ಯಾಪೃಣಕ್ । ಅಪೂರಯತ್ । ತಥಾಜ್ರಾನ್ಮಾರ್ಗಸ್ಯ ಗಂತ್ವೄನ್ ತೃಷಾಣಾನ್ ಪಿಪಾಸಯಾ ಯುಕ್ತಾನ್ ಪುರುಷಾನಪೃಣಕ್ । ಅಪೂರಯತ್ । ಕಿಂಚ ಇಂದ್ರೋ ದಂಸುಪತ್ನೀಃ । ದಮನಪರಾ ಅಸುರಾಃ ಸುಷ್ಠು ಪತಯೋ ಯಾಸಾಂ ತಾಃ ಸ್ತರ್ಯಃ ಸ್ತರೀರ್ನಿವೃತ್ತಪ್ರಸವಾ ಗಾ ಅಧೋಕ್ । ಅಧುಕ್ಷತ್ । ಇಂದ್ರೋ ರಾಕ್ಷಸಕೃತನಿರೋಧದುಃಖಾನ್ನಿರುದ್ಧಪ್ರಸವಾ ಅಪಿ ಗಾ ವಿಮುಚ್ಯ ಸಪ್ರಸವಾಶ್ಚಕಾರೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಇಂದ್ರನು) ನಭನ್ವಃ—ಶತ್ರುಹಿಂಸಕರಾದ । ವಕ್ವಾಃ ನ—ಸೇನೆಗಳಂತೆ । ಧ್ವಸ್ರಾಃ—ದಡಗಳನ್ನು ನಾಶಮಾಡುವುವೂ । ಯುವತೀಃ—ಉದಕಗಳಿಂದ ಪೂರ್ಣವಾದವೂ । ಋತಜ್ಞಾಃ—ಅನ್ನವನ್ನು ಉತ್ಪನ್ನ ಮಾಡುವುವೂ ಆದ । ಅಗ್ರುವಃ—ನದಿಗಳನ್ನು । ಪ್ರ ಅಪಿನ್ವತ್—ಉದಕಗಳಿಂದ ತುಂಬಿದನು । ಧ್ವನಾನಿ—ಮಳೆಯಿಲ್ಲದೇ ಬೆಂಗಾಡಾಗಿದ್ದ ಭೂಮಿಗಳನ್ನೂ । ಅಪೃಣಕ್—ನೀರಿನಿಂದ ತುಂಬಿ ಫಲವತ್ತಾಗುವಂತೆ ಮಾಡಿದನು। ಅಜ್ರಾನ್—ಮಾರ್ಗಸಂಚಾರಿಗಳನ್ನೂ । ತೃಷಾಣಾನ್—ಬಾಯಾರಿಕೆಯಿಂದ ಬಳಲಿದವರನ್ನೂ (ಉದಕದಿಂದ ತೃಪ್ತಿಗೊಳಿಸಿದನು) । ಇಂದ್ರಃ—ಇಂದ್ರನು । ದಂಸುಪತ್ನೀಃ—ಅಸುರರ ಪ್ರಭುತ್ವಕ್ಕೆ ಸಿಕ್ಕಿದವೂ । ಸ್ತರ್ಯಃ—ಬಂಜೆಯಾಗಿದ್ದವೂ ಆದ ಗೋವುಗಳನ್ನು । ಅಧೋಕ್—(ಕ್ಷೀರವನ್ನು ಕೊಡುವಂತೆ ಮಾಡಿದನು.)

॥ ಭಾ ವಾ ರ್ಥ ॥

ಶತ್ರುಹಿಂಸಕಗಳಾದ ಸೇನೆಗಳಂತೆ ದಡಗಳನ್ನು ನಾಶಮಾಡುವುವೂ, ಉದಕಗಳಿಂದ ಪೂರ್ಣವಾದವೂ, ಅನ್ನಕ್ಕೆ ಉತ್ಪಾದಕವಾದವೂ ಆದ ನದಿಗಳನ್ನು ಇಂದ್ರನು ಉದಕಗಳಿಂದ ತುಂಬಿದನು. ಮಳೆಯಿಲ್ಲದೇ ಬೆಂಗಾಡಾಗಿದ್ದ ಭೂಮಿಗಳನ್ನೂ ನೀರಿನಿಂದ ತುಂಬಿ ಫಲವತ್ತಾಗುವಂತೆ ಮಾಡಿದನು. ಮಾರ್ಗಸಂಚಾರದಿಂದ ಬಳಲಿದವರನ್ನೂ ಬಾಯಾರಿಕೆಯಿಂದ ಬಳಲಿದವರನ್ನೂ ಉದಕದಿಂದ ತೃಪ್ತಿಗೊಳಿಸಿದನು. ಅಸುರರ ಪ್ರಭುತ್ವಕ್ಕೆ ಸಿಕ್ಕಿದವೂ, ಬಂಜೆಯಾಗಿದ್ದವೂ ಆದ ಗೋವುಗಳನ್ನು ಕ್ಷೀರವನ್ನು ಕೊಡುವಂತೆ ಮಾಡಿದನು.

## English Translation.

Indra has filled the youthful rivers, the parents of plenty, the corroders (of their banks), like armies destructive (of their foes), he has inundated the dry lands, and (satisfied) the thirsty travellers : he has milked the barren cows whom the Asuras had become the lords of.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ಮಾಡಿದ ಲೋಕೋಪಕಾರವಾದ ಕೆಲವು ವಿಷಯಗಳ ವರ್ಣನೆ ಇದೆ. ನದಿಗಳು ತಮ್ಮ ಉದಕಗಳಿಂದ ಲೋಕದ ಜನರ ಕೃಷಿವ್ಯವಸಾಯಾದಿ ಕಾರ್ಯಗಳಿಗೆ ಸಹಾಯಮಾಡುತ್ತಾ ಅವರಿಗೆ ಅನ್ನಾದ್ಯಾಹಾರಗಳನ್ನು ಒದಗಿಸಿಕೊಡುವವು. ಈ ನದಿಗಳಲ್ಲಿ ನೀರಿಲ್ಲದಿದ್ದರೆ ಅಥವಾ ಅತ್ಯಲ್ಪವಾಗಿದ್ದರೆ ಈ ಕಾರ್ಯವು ಇವುಗಳಿಂದ ಸಾಧ್ಯವಾಗುವುದಿಲ್ಲ. ಆದುದರಿಂದ ಇಂದ್ರನು ವೃಷ್ಟ್ಯುದಕದಿಂದ ಈ ನದಿಗಳಿಗೆ ನೀರುತುಂಬಿ ಅವು ಪೂರ್ಣಪ್ರವಾಹದಿಂದ ಹರಿಯುವಂತೆ ಮಾಡಿದನು. ಭೂಮಿಯ ಮೇಲೆ ಮಳೆಯನ್ನು ಸುರಿಸುವುದರಿಂದ, ಬೆಂಗಾಡಾಗಿದ್ದ ಭೂಮಿಯನ್ನು ಫಲವತ್ತಾಗುವಂತೆ ಮಾಡಿದನು. ಮತ್ತು ಮಾರ್ಗಗಳಲ್ಲಿ ಪ್ರಯಾಣಮಾಡುತ್ತಿದ್ದ ಪಥಿಕರಿಗೆ ದಾಹವಡಗುವಂತೆ ವೃಷ್ಟ್ಯುದಕದಿಂದ ನೀರನ್ನೊದಗಿಸಿ ಕೊಟ್ಟನು. ಇದಲ್ಲದೆ (ಪಣಿಗಳೆಂಬ ಅಸುರರಲ್ಲಿ ಬಂಧಿತವಾಗಿ ಸರಿಯಾದ ಆಹಾರಾದಿಗಳಿಲ್ಲದೆ ಕೃಶವಾಗಿ ಹಾಲನ್ನು ಕೊಡದೆ ಬಂಜೆಯಾಗಿದ್ದ) ಗೋವುಗಳನ್ನು ತೃಣಸಮೃದ್ಧಿಯಿಂದ ತೃಪ್ತಿಗೊಳಿಸಿ) ಹಾಲನ್ನು ಕೊಡುವಂತೆ ಮಾಡಿದನು. ಈ ವಿಧವಾದ ಲೋಕೋಪಕಾರ್ಯಗಳನ್ನೆಲ್ಲಾ ಇಂದ್ರನು ಮಾಡಿದನು ಎಂದು ಇಂದ್ರನ ಪ್ರೀತ್ಯತಿಶಯಗಳನ್ನು ಇಲ್ಲಿ ವರ್ಣಿಸಲಾಗಿದೆ.

॥ ಸಂಹಿತಾಪಾಠಃ ॥

ಪೂರ್ವೀರುಷಸಃ ಶರದಶ್ಚ ಗೂರ್ತಾ ವೃತ್ರಂ ಜಘನ್ವಾಁ ಅಸೃಜದ್ವಿ ಸಿಂಧೂನ್ ।
ಪರಿಷ್ಠಿತಾ ಅತೃಣದ್ಬದ್ಬಧಾನಾಃ ಸೀರಾ ಇಂದ್ರಃ ಸ್ರವಿತವೇ ಪೃಥಿವ್ಯಾ ॥ ೮ ॥

॥ ಪದಪಾಠಃ ॥

ಪೂರ್ವೀಃ । ಉಷಸಃ । ಶರದಃ । ಚ । ಗೂರ್ತಾಃ । ವೃತ್ರಂ । ಜಘನ್ವಾನ್ । ಅಸೃಜತ್ । ವಿ । ಸಿಂಧೂನ್ ।
ಪರಿsಸ್ಥಿತಾಃ । ಅತೃಣತ್ । ಬದ್ಬಧಾನಾಃ । ಸೀರಾಃ । ಇಂದ್ರಃ । ಸ್ರವಿತವೇ । ಪೃಥಿವ್ಯಾ ॥ ೮ ॥

॥ ಸಾಯಣಭಾಷ್ಯಂ ॥

ವೃತ್ರಂ ವೃತ್ರಾಖ್ಯಮಸುರಂ ಜಘನ್ವಾನ್ಹತವಾನಿಂದ್ರೋ ಗೂರ್ತಾಸ್ತುಮಿಸ್ರಯಾ ಗಿರ್ಾಃ ಪೂರ್ವೀರ್ಬಹ್ವೀರುಷಸಃ ಶರದಶ್ಚ ಸಂವತ್ಸರಾಂಶ್ಚ ವ್ಯಸೃಜತ್ । ವಿಶೇಷೇಣ ಸಸರ್ಜ । ತಥಾ ಸಿಂಧೂನ್ ವೃತ್ರೇಣಾವೃತಾನ್ಯುದಕಾನಿ ವ್ಯಸೃಜತ್ । ಕಿಂಚ ಇಂದ್ರಃ ಪರಿಷ್ಠಿತಾ ಮೇಘೇಷು ಪರಿತಃ ಸ್ಥಿತಾ ಬದ್ಬಧಾನಾ ವೃತ್ರೇಣ ಪರಿತೋ ಬಧ್ಯಮಾನಾಃ ಸೀರಾ ನದೀಃ । ಸೀರಾ ಇತಿ ನದೀನಾಮೈತತ್ । ಪೃಥಿವ್ಯಾ ಪೃಥಿವೀರೂಪೇಣ ಮಾರ್ಗೇಣ ಪ್ರವಿತವೇ ಸ್ರವಿತುಂ ಗಮನಾರ್ಥಮತೃಣತ್ । ಅವಿಧ್ಯತ್ ॥

॥ ಪ್ರತಿಪದಾರ್ಥ ॥

ವೃತ್ರಂ—ವೃತ್ರಾಸುರನನ್ನು । ಜಘನ್ವಾನ್—ಕೊಂದಂತಹ ಇಂದ್ರನು । ಗೂರ್ತಾಃ—ತಮಸ್ಸಿನಿಂದ ಮುಚ್ಚಲ್ಪಟ್ಟ । ಪೂರ್ವೀಃ—ಬಹುಸಂಖ್ಯಾತವಾದ । ಉಷಸಃ—ಉಷಸ್ಸುಗಳನ್ನು । ಶರದಶ್ಚ—ಸಂವತ್ಸರಗಳನ್ನೂ । ವಿ ಅಸೃಜತ್—(ತಮಸ್ಸಿನಿಂದ) ಬಿಡಿಸಿ ಪ್ರಕಾಶಿಸುವಂತೆ ಮಾಡಿದನು । ಸಿಂಧೂನ್—ನದಿಗಳನ್ನು ಬಿಡಿಸಿ ಪ್ರವಹಿಸುವಂತೆ ಮಾಡಿದನು । ಇಂದ್ರಃ—ಇಂದ್ರನು । ಪರಿಷ್ಠಿತಾಃ—ಮೇಘಗಳ ಮಧ್ಯೆ ಸಿಕ್ಕಿನಿಂತಿದ್ದವೂ । ಬದ್ಬಧಾನಾಃ—ಸುತ್ತಲೂ ಬಂಧಿತವಾಗಿದ್ದವೂ ಆದ ಉದಕಗಳಿಂದ । ಸೀರಾಃ—ನದಿಗಳನ್ನು । ಪೃಥಿವ್ಯಾ—ಪೃಥಿವಿಯ ಮಾರ್ಗದಿಂದ । ಸ್ರವಿತವೇ—ಹರಿಯಲು ಅನುಕೂಲವಾಗುವಂತೆ । ಅತೃಣತ್—ಬಿಡಿಸಿ ಪ್ರವಹಿಸುವಂತೆ ಮಾಡಿದನು.

॥ ಭಾವಾರ್ಥ ॥

ವೃತ್ರಾಸುರನನ್ನು ಕೊಂದ ಇಂದ್ರನು ತಮಸ್ಸಿನಿಂದ ಮುಚ್ಚಲ್ಪಟ್ಟ ಅನೇಕ ಉಷಸ್ಸುಗಳನ್ನೂ ಸಂವತ್ಸರಗಳನ್ನೂ ತಮಸ್ಸಿನಿಂದ ಬಿಡಿಸಿ ಪ್ರಕಾಶಿಸುವಂತೆ ಮಾಡಿದನು. ಮೇಘಗಳ ಮಧ್ಯೆ ಸಿಕ್ಕಿನಿಂತಿದ್ದವೂ, ಸುತ್ತಲೂ ಬಂಧಿತವಾಗಿದ್ದವೂ ಆದ ವೃಷ್ಟ್ಯುದಕಗಳಿಂದ ನದಿಗಳನ್ನು ಪೃಥಿವಿಯ ಮಾರ್ಗದಿಂದ ಹರಿಯಲು ಅನುಕೂಲವಾಗುವಂತೆ ಬಿಡಿಸಿ ಪ್ರವಹಿಸುವಂತೆ ಮಾಡಿದನು.

## English Translation.

Having slain Vritra, he has liberated many mornings and years (that had been) swallowed up by darkness, and has set the rivers free: Indra has released the imprisoned rivers, encompassed (by the cloud), to flow upon the earth.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದು ಅವನು ತಡೆದಿದ್ದ ಮೇಘಗಳನ್ನು ವೃಷ್ಟಿಸುರಿಸುವಂತೆ ಮಾಡಿ ಆ ಉದಕಗಳಿಂದ ನದಿಗಳು ಭೂಮಿಯ ಮೇಲೆ ತುಂಬಿ ಹರಿಯುವಂತೆ ಮಾಡಿದನು. ರಾತ್ರಿಯ ಅಂಧಕಾರದಿಂದ ಆವೃತವಾಗಿದ್ದ ಉಷಃಕಾಲಗಳನ್ನು ಬೆಳಗುವಂತೆ ಮಾಡಿದನು. ಸಂವತ್ಸರ ಮೊದಲಾದ ಕಾಲವಿಭಾಗಗಳನ್ನು ಸೃಷ್ಟಿಸಿದನು ಎಂಬ ವಿಷಯವು ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ವಮ್ರೀಭಿಃ ಪುತ್ರಮಗ್ರುವೋ ಅದಾನಂ ನಿವೇಶನಾದ್ಧರಿವ ಆ ಜಭರ್ಥ ।
ವ್ಯ೧ಂಧೋ ಅಖ್ಯದಹಿಮಾದದಾನೋ ನಿರ್ಭೂದುಖಚ್ಛಿತ್ಸಮರಂತ ಪರ್ವ ॥

॥ ಪದಪಾಠಃ ॥

ವಮ್ರೀಭಿಃ । ಪುತ್ರಂ । ಅಗ್ರುವಃ । ಅದಾನಂ । ನಿऽವೇಶನಾತ್ । ಹರಿऽವಃ । ಆ । ಜಭರ್ಥ ।

ವಿ । ಅಂಧಃ । ಅಖ್ಯತ್ । ಅಹಿಂ । ಆऽದದಾನಃ । ನಿಃ । ಭೂತ್ । ಉಖಽಛಿತ್ । ಸಂ । ಅರಂತ ।

ಪರ್ವ ॥ ೯ ॥

॥ ಸಾಯಣಭಾಷ್ಯಂ ॥

ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತ್ವಂ ವಮ್ರೀಭಿರುಪಜಿಹ್ವಿಕಾಭಿರದಾನಮದ್ಯಮಾನಮಗ್ರುವಃ । ಅಗ್ರೂ ನಾಮ ಕಾಚಿತ್ । ತಸ್ಯಾಃ ಪುತ್ರಂ ನಿವೇಶನಾದ್ವಲ್ಮೀಕಾಖ್ಯಾತ್ಸ್ಥಾನಾದಾ ಜಭರ್ಥ । ಆಹೃತವಾನಸಿ । ಆದದಾನ ಇಂದ್ರೇಣಾಹ್ರಿಯಮಾಣೋऽಗ್ರುವಃ ಪುತ್ರೋऽಂಧಃ ಪೂರ್ವಮಂಧಃ ಸನ್ ಅಹಿಂ ಸರ್ಪಂ ವ್ಯಖ್ಯತ್ । ವಿಶೇಷೇಣಾಪಶ್ಯತ್ । ತತೋ ನಿರ್ಭೂತ್ । ವಲ್ಮೀಕಾನ್ನಿರ್ಗತೋऽಭೂತ್ । ಉಖಚ್ಛಿದ್ವಲ್ಮೀಕಾಖ್ಯಾಯಾ ಉಖಾಯಾಶ್ಛೇದಕಾನಿ ಪರ್ವ ಪರ್ವಾಣ್ಯಸ್ಯ ಸರ್ವಾಣ್ಯಂಗಾನಾಂ ಶಿಥಿಲಾನಿ ಪರ್ವಾಣಿ ಸಮರಂತ । ಸಮಗಚ್ಛಂತ । ಉಪಜಿಹ್ವಿಕಾಭಿಃ ಶಿಥಿಲೀಕೃತಾನ್ಯಗ್ರುವಃ ಪುತ್ರಸ್ಯ ಪರ್ವಾಣೀಂದ್ರೇಣ ಸಮಧೀಯಂತೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಹರಿವಃ—ಹರಿಸಂಜ್ಞಕಗಳಾದ ಅಶ್ವಗಳಿಂದ ಕೂಡಿದ ಎಲೈ ಇಂದ್ರನೇ । ವಮ್ರೀಭಿಃ—ವಮ್ರಿಯೆಂಬ ಇರುವೆಗಳಿಂದ । ಅದಾನಂ—ಕಚ್ಚಲ್ಪಡುತ್ತಿದ್ದ । ಅಗ್ರುವಃ ಪುತ್ರಂ—ಅಗ್ರೂ ಎಂಬುವಳ ಮಗನನ್ನು । ನಿವೇಶನಾತ್—ವಮ್ರಿಗಳ ಹುತ್ತದಿಂದ । ಆ ಜಭರ್ಥ—ಎತ್ತಿಕೊಂಡು ಹೊರಕ್ಕೆ ಬಂದೆ । ಆದದಾನಃ—ಇಂದ್ರನಿಂದ ಹೊರಕ್ಕೆ ಕರೆತರಲ್ಪಟ್ಟ ಅವನು । ಅಂಧಃ—ಕುರುಡನಾಗಿದ್ದರೂ ಸಹ । ಅಹಿಂ—ಸರ್ಪವನ್ನು । ವಿ ಅಖ್ಯತ್—ಗುರ್ತಿಸಿದನು। ನಿರ್ಭೂತ್—ಹುತ್ತದಿಂದ ಹೊರಕ್ಕೂ ಬಂದನು। ಉಖಚ್ಛಿತ್—ಇರುವೆಗಳಿಂದ ಕಚ್ಚಲ್ಪಟ್ಟು ಛಿನ್ನವಾಗಿದ್ದ। ಪರ್ವ—ಅವನ ದೇಹದ ಪರ್ವಪ್ರದೇಶಗಳು । ಸಮರಂತ—ಒಟ್ಟಿಗೆ ಸೇರಿಕೊಂಡು ಸರಿಯಾದವು.

॥ ಭಾವಾರ್ಥ ॥

ಹರಿನಾಮಕಗಳಾದ ಅಶ್ವಗಳಿಂದ ಕೂಡಿದ ಎಲೈ ಇಂದ್ರನೇ, ವಮ್ರಿಯೆಂಬ ಇರುವೆಗಳಿಂದ ಕಚ್ಚಲ್ಪಡುತ್ತಿದ್ದ ಅಗ್ರೂ ಎಂಬುವಳ ಮಗನನ್ನು ವಮ್ರಿಗಳ ಹುತ್ತದಿಂದ ಎತ್ತಿಕೊಂಡು ಹೊರಕ್ಕೆ ಬಂದೆ. ಇಂದ್ರನಿಂದ ಹೊರಕ್ಕೆ ತರಲ್ಪಟ್ಟ ಅವನು ಕುರುಡನಾಗಿದ್ದರೂ ಸಹ ಸರ್ಪವನ್ನು ಗುರ್ತಿಸಿದನು. ಹುತ್ತದಿಂದ ಹೊರಕ್ಕೆ ಬಂದಾಗ, ಇರುವೆಗಳಿಂದ ಕಚ್ಚಲ್ಪಟ್ಟು ಛಿನ್ನವಾಗಿದ್ದ ಅವನ ದೇಹದ ಪರ್ವಪ್ರದೇಶವು ಒಟ್ಟಿಗೆ ಸೇರಿಕೊಂಡು ಸರಿಯಾದವು.

## English Translation.

Lord of horses, you have brought the son of Agru from his dwelling where he was being devoured by the ants: when extricated, although

blind, he distinguished the serpent; and when he came forth the joints that had been sundered in the ant-hill were restrung.

॥ ವಿಶೇಷವಿಷಯಗಳು ॥

ಹರಿವಃ ಅದಾನಂ ಅಗ್ರುವಃ ಪುತ್ರಂ ನಿವೇಶನಾತ್ ಆ ಜಭರ್ಥ—ಇಲ್ಲಿ ವಮ್ರೀಭಿಃ ಎಂಬ ಶಬ್ದಕ್ಕೆ ಒಂದು ವಿಧವಾದ ಇರುವೆಗಳು (ಗೆಜ್ಜಲು) ಎಂದರ್ಥವು. ವಮ್ರುವೆಂದರೆ ಗಂಡಿರುವೆಯೆಂದೂ, ವಮ್ರಿ ಎಂದರೆ ಹೆಣ್ಣಿರುವೆಯೆಂದೂ ಅರ್ಥವು. ಈ ಋಕ್ಕಿನಲ್ಲಿ ಅಗ್ರುವೆಂಬ ಕನ್ಯೆಯ ಪುತ್ರನು ವಲ್ಮೀಕ ಅಥವಾ ಹುತ್ತದಲ್ಲಿ ಇರುವೆಗಳಿಂದ ಕಟ್ಟಲ್ಪಟ್ಟು ಹಿಂಸೆಯನ್ನನುಭವಿಸುತ್ತಿದ್ದುದನ್ನು ಇಂದ್ರನು ಕಂಡು ಅವನನ್ನು ಹುತ್ತದಿಂದ ಹೊರಕ್ಕೆ ಎಳೆದು ತಂದು ಇರುವೆಗಳ ಬಾಧೆಯಿಂದ ಕಾಪಾಡಿದನೆಂದೂ, ಇಂದ್ರನ ಮಹಿಮೆಯಿಂದ ಇರುವೆಗಳಿಂದ ಕಟ್ಟಲ್ಪಟ್ಟು ಶಿಥಿಲವಾಗಿದ್ದ ಅವನ ಶರೀರವು ಪೂರ್ವದಂತೆ ಸರಿಯಾಯಿತೆಂದೂ ವರ್ಣಿಸಿದೆ. ವಮ್ರಶಬ್ದವು ಋ. ಸಂ. ೧-೫೧-೯; ೮-೧೦೨-೨೧ರಲ್ಲಿ ಪಠಿತವಾಗಿದೆ. ಈ ಉಪಾಖ್ಯಾನವು ಸೂಕ್ಷ್ಮವಾಗಿ ವಾಜಸನೇಯಸಂಹಿತಾ ೩೭-೪; ತೈತ್ತಿರೀಯ ಬ್ರಾಹ್ಮಣ ೧-೨-೧-೩; ಶತಪಥಬ್ರಾಹ್ಮಣ ೧೪-೧-೧-೮, ೧೪ ಇತ್ಯಾದಿ ಸ್ಥಳಗಳಲ್ಲಿ ವಿವರಿಸಲಾಗಿದೆ. ಈ ಅಗ್ರುವಿನ ಪುತ್ರನಿಗೆ ವಮ್ರಕನೆಂದು ಋಗ್ವೇದದಲ್ಲಿ ಕೆಲವು ಕಡೆ ಹೇಳಿದೆ. ಮತ್ತು ಅಗ್ರುವಿನ ಪುತ್ರನನ್ನು ಇರುವೆಗಳ ಹುತ್ತದಿಂದ ಇಂದ್ರನು ಕಾಪಾಡಿದ ವಿಷಯವು—

ಉತ ತ್ಯಂ ಪುತ್ರಮಗ್ರುವಃ ಪರಾವೃಕ್ತಂ ಶತಕ್ರತುಃ ।
ಉಕ್ಥೇಷ್ವಿಂದ್ರ ಆಭಜತ್ ॥

(ಋ. ಸಂ. ೪-೩೦-೧೬)

ಯದತ್ತ್ಯುಪಜಿಹ್ವಿಕಾ ಯದ್ವಮ್ರೋ ಅತಿಸರ್ಪತಿ ।
ಸರ್ವಂ ತದಸ್ತು ತೇ ಘೃತಂ ।

(ಋ. ಸಂ. ೮-೧೦೨-೨೧)

ಏವಾ ಮಹೋ ಅಸುರ ವಕ್ಷಥಾಯ ವಮ್ರಕಃ ಪಡ್ಭಿರುಪ ಸರ್ಪದಿಂದ್ರಂ ।

(ಋ. ಸಂ. ೧೦-೯೯-೧೨)

ಎಂಬ ಋಕ್ಕುಗಳಲ್ಲಿ ಸೂಚಿತವಾಗಿರುವುದು.

ಆದದಾನಃ ಅಂಧಃ ಅಹಿಂ ವಿ ಅಖ್ಯತ್—ಅಗ್ರುವಿನ ಪುತ್ರನು ಹುತ್ತದಲ್ಲಿದ್ದ ಇರುವೆಗಳಿಂದ ಕಚ್ಚಲ್ಪಡುತ್ತಿದ್ದರೂ ಅಲ್ಲಿಂದ ತಪ್ಪಿಸಿಕೊಂಡು ಈಚೆಗೆ ಬರಲಾರದವನಾಗಿದ್ದನು. ಏಕೆಂದರೆ ಅವನಿಗೆ ಕಣ್ಣು ಕಾಣಿಸುತ್ತಿರಲಿಲ್ಲ. ಕುರುಡನಾಗಿದ್ದನು. ಆದರೂ ಇಂದ್ರನು ಅವನನ್ನು ಹುತ್ತದಿಂದ ಹೊರಕ್ಕೆ ತಂದನಂತರ ಹುತ್ತದಲ್ಲಿದ್ದ ಹಾವನ್ನು ಕಂಡು ತಿಳಿಯುವಂತಾಯಿತು. ಹುತ್ತದಲ್ಲಿ ಹಾವಿರುವುದು ಎಲ್ಲರಿಗೂ ತಿಳಿದ ವಿಷಯವು. ಅಂತಹ ಅಪಾಯಸ್ಥಳದಿಂದ ಇಂದ್ರನು ರಕ್ಷಿಸಿದನು ಎಂದು ಮುಖ್ಯಾಭಿಪ್ರಾಯವು. ಇದೆಲ್ಲಾ ಇಂದ್ರನ ಮಹಿಮೆಯು.

॥ ಸಂಹಿತಾಪಾಠಃ ॥

ಪ್ರ ತೇ ಪೂರ್ವಾಣಿ ಕರಣಾನಿ ವಿಪ್ರಾವಿದ್ವಾಁ ಆಹ ವಿದುಷೇ ಕರಾಂಸಿ ।
ಯಥಾಯಥಾ ವೃಷ್ಣ್ಯಾನಿ ಸ್ವಗೂರ್ತಾಪಾಂಸಿ ರಾಜನ್ನರ್ಯಾವಿವೇಷೀಃ॥೧೦॥

॥ ಪದಪಾಠಃ ॥

ಪ್ರ । ತೇ । ಪೂರ್ವಾಣಿ । ಕರಣಾನಿ । ವಿಪ್ರ । ಆವಿದ್ವಾನ್ । ಆಹ । ವಿದುಷೇ । ಕರಾಂಸಿ ।
ಯಥಾಯಥಾ । ವೃಷ್ಣ್ಯಾನಿ । ಸ್ವಗೂರ್ತಾ । ಅಪಾಂಸಿ । ರಾಜನ್ । ನರ್ಯಾ । ಅವಿವೇಷೀಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ರಾಜನ್ರಾಜಮಾನೇಂದ್ರ ವೃಷ್ಣ್ಯಾನಿ ವರ್ಷಣಯೋಗ್ಯಾನಿ ಸ್ವಗೂರ್ತಾ ಸ್ವಗೂರ್ತಾನಿ ಸ್ವಯಮುದ್ಗೀರ್ಣಾನಿ ನರ್ಯಾ ನರ್ಯಾಣಿ ಮನುಷ್ಯಹಿತಾನ್ಯಪಾಂಸಿ ತ್ವತ್ಸಂಬಂಧೀನಿ ಕರ್ಮಾಣಿ ಯಥಾಯಥಾವಿವೇಷೀರ್ವ್ಯಾಪ್ನೋಃ । ಅಕಾರ್ಷೀರಿತಿ ಯಾವತ್ । ತಥಾತಥಾ ಹೇ ವಿಪ್ರ ಪ್ರಾಜ್ಞೇಂದ್ರ ವಿದುಷೇ ವಿದುಷಃ ಸರ್ವಂ ಜಾನತಸ್ತೇ ತ್ವತ್ಸಂಬಂಧೀನಿ ಪೂರ್ವಾಣಿ ಪುರಾತನಾನಿ ಕರಣಾನಿ ಕರ್ಮಾಣ್ಯಾವಿದ್ವಾನ್ ಆ ಸಮಂತಾಜ್ಜಾನನ್ ವಾಮದೇವಃ ಕರಾಂಸಿ ತ್ವದೀಯಾನಿ ಕರ್ಮಾಣಿ ಪ್ರ ಪ್ರಕರ್ಷೇಣಾಹ । ಬ್ರವೀತಿ ॥

॥ ಪ್ರತಿಪದಾರ್ಥ ॥

ರಾಜನ್—ಪ್ರಕಾಶಮಾನನಾದ ಎಲೈ ಇಂದ್ರನೇ। ವೃಷ್ಣ್ಯಾನಿ—ವೃಷ್ಟಿಕಾರಕವಾದವೂ। ಸ್ವಗೂರ್ತಾ—ಸ್ವಯಂಪ್ರಕಾಶಿತವಾದವೂ। ನರ್ಯಾ—ಮಾನವರಿಗೆ ಹಿತಕಾರಿಯಾದವೂ ಆದ। ಅಪಾಂಸಿ—ನಿನ್ನ ಕಾರ್ಯಗಳನ್ನು। ಯಥಾಯಥಾ—ಯಾವಯಾವ ರೀತಿಯಲ್ಲಿ। ಅವಿವೇಷೀಃ—ನೆರವೇರಿಸಿದೆಯೋ (ಅದೇ ರೀತಿಯಲ್ಲಿ)। ವಿಪ್ರ—ಪ್ರಾಜ್ಞನಾದ ಇಂದ್ರನೇ। ವಿದುಷೇ—ಸರ್ವಜ್ಞನಾದ। ತೇ—ನಿನ್ನ। ಪೂರ್ವಾಣಿ—ಪ್ರಾಚೀನಗಳಾದ। ಕರಣಾನಿ—ಕರ್ಮಗಳನ್ನು। ಅವಿದ್ವಾನ್—ಪೂರ್ಣವಾಗಿ ತಿಳಿದ ವಾಮದೇವನು। ಕರಾಂಸಿ—ನಿನ್ನ ಕರ್ಮಗಳನ್ನು। ಪ್ರ ಆಹ—ಪೂರ್ಣವಾಗಿ ಪ್ರಶಂಸಿಸುತ್ತಾನೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಇಂದ್ರನೇ, ವೃಷ್ಟಿಕಾರಕವಾದವೂ, ಸ್ವಯಂಪ್ರಕಾಶಿತವೂ, ಮಾನವರಿಗೆ ಹಿತಕಾರಿಯಾದವೂ ಆದ ನಿನ್ನ ಕಾರ್ಯಗಳನ್ನು ಯಾವಯಾವ ರೀತಿಯಲ್ಲಿ ನೆರವೇರಿಸಿದೆಯೋ, ಅದೇ ರೀತಿಯಲ್ಲಿ ಸರ್ವಜ್ಞನಾದ ನಿನ್ನ ಪುರಾತನ ಕರ್ಮಗಳನ್ನು ಪೂರ್ಣವಾಗಿ ತಿಳಿದ ವಾಮದೇವನು ನಿನ್ನ ಕರ್ಮಗಳನ್ನು ಪೂರ್ಣವಾಗಿ ಪ್ರಶಂಸಿಸುತ್ತಾನೆ.

## English Translation.

The sage, (Vamadeva), knowing, royal Indra, ancient deeds of you who are all-wise, has proclaimed the actions, such as you have performed them, generative of rain, self-evolved, and beneficial to man.

॥ ವಿಶೇಷವಿಷಯಗಳು ॥

ಇಂದ್ರನು ಲೋಕೋಪಕಾರಾರ್ಥವಾಗಿ ಪೂರ್ವದಲ್ಲಿ ಮಾಡಿದ ವೃತ್ರಹನನ, ವೃಷ್ಟ್ಯುದಕಪ್ರಾಪ್ತಿ ಮೊದಲಾದ ಅನೇಕ ಸಾಹಸಕಾರ್ಯಗಳು ತನಗೆ ತಿಳಿದಿರುವುದೆಂದೂ, ಅವುಗಳನ್ನು ತಾನು ಆದರದಿಂದ ಪ್ರಶಂಸಿಸುವನೆಂದೂ, ಮಂತ್ರದ್ರಷ್ಟೃವಾದ ವಾಮದೇವಋಷಿಯು ಈ ಋಕ್ಕಿನಲ್ಲಿ ಹೇಳಿದಾನೆ.



॥ ಸಂಹಿತಾಪಾಠಃ ॥

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।
ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥ ೧೧ ॥

॥ ಪದಪಾಠಃ ॥

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।
ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರ್ಋಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಸ್ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನಾದ್ಭಿರ್ನದೀರಿವ ಪೀಪೇಃ । ಪ್ಯಾಯಯ । ಪ್ರವೃದ್ಧಂ ಕುರು । ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನು—ಅತಿಶಯವಾಗಿ । ಸ್ತುತಃ—ಹಿಂದಿನ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧೆಯಿಂದ । ಗೃಣಾನಃ—(ನಮ್ಮಿಂದಲೂ) ಸ್ತುತನಾಗತಕ್ಕವನೂ ಆಗಿ । ನದ್ಯಃ ನ—

ನದಿಗಳನ್ನು ಉದಕಗಳಿಂದ ತುಂಬುವಂತೆ। **ಜರಿತ್ರೇ**—ಸ್ತೋತೃವಾದ ನನಗೆ। **ಇಷಂ**—ಅನ್ನವನ್ನು। **ಪೀಪೇಃ**—ತುಂಬಿಕೊಂಡು! **ಹರಿವಃ**—ಹರಿಸಂಜ್ಞಕಗಳಾದ ಅಶ್ವಗಳುಳ್ಳ ಇಂದ್ರನೇ। **ತೇ**—ನಿನ್ನನ್ನುದ್ದೇಶಿಸಿ। **ನವ್ಯಂ**—ನೂತನವಾದ। **ಬ್ರಹ್ಮ**—ಸ್ತೋತ್ರವು। **ಅಕಾರಿ**—ನಿರ್ಮಿತವಾಗುತ್ತದೆ। **ರಥ್ಯಃ**—ರಥಗಳನ್ನು ಹೊಂದಿರುವ ನಾವು। **ಧಿಯಾ**—ಪ್ರಜ್ಞಾಪೂರ್ವಕವಾದ ಸ್ತುತಿಯಿಂದ। **ಸದಾಸಾಃ**—ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ। **ಸ್ಯಾಮ**—ಆಗುವಂತೆ ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಅತಿಶಯವಾಗಿ ಸ್ತುತನಾದವನೂ, ಅದೇ ಶ್ರದ್ಧೆಯಿಂದ ನಮ್ಮಿಂದಲೂ ಸ್ತುತನಾಗತಕ್ಕವನೂ ಆಗಿ ನದಿಗಳನ್ನು ಉದಕಗಳಿಂದ ತುಂಬುವಂತೆ ಸ್ತೋತೃವಾದ ನನಗೆ ಅನ್ನವನ್ನು ತುಂಬಿಕೊಡು. ಹರಿಸಂಜ್ಞಕಗಳಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತೋತೃವು ನಿರ್ಮಿತವಾಗುತ್ತದೆ. ರಥಗಳನ್ನು ಹೊಂದಿರುವ ನಾವು ಪ್ರಜ್ಞಾಪೂರ್ವಕವಾದ ಸ್ತುತಿಯಿಂದ ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ ಆಗುವಂತಾಗಲಿ.

## English Translation.

Glorified (in the past), glorified, Indra, at present, satisfy your worshipper with food, as rivers (are filled with water): lord of horses, a new hymn has been made for you: may we, possessed of choriots, be ever diligent in your praise.

॥ ವಿಶೇಷವಿಷಯಗಳು ॥

ಈ ಋಕ್ಕು ಈ ಸೂಕ್ತದಲ್ಲಲ್ಲದೆ ೨೦-೨೪ ನೇ ಸೂಕ್ತಗಳಲ್ಲಿ ಕೊನೆಯ ಋಕ್ಕುಗಳಾಗಿ ಪಠಿತವಾಗಿದೆ.

ಇಂದ್ರ ನು ಸ್ತುತಃ ನು ಗೃಣಾನಃ ನದ್ಯಃ ನ ಜರಿತ್ರೇ ಇಷಂ ಪಿಪೇಃ—ಎಲೈ ಇಂದ್ರನೇ, ನೀನು ಹಿಂದೆ ಅನೇಕ ಋಷಿಗಳಿಂದ ಸ್ತುತಿಸಲ್ಪಟ್ಟಿರುವೆ. ಈಗ ನಮ್ಮಿಂದ ಸ್ತುತಿಸಲ್ಪಡುವೆ. ನದಿಗಳಿಗೆ ವೃಷ್ಟ್ಯುದಕವು ತುಂಬಿ ಪೂರ್ಣವಾಗಿ ಹರಿಯುವಂತೆ ನಿನ್ನನ್ನು ಸ್ತೋತ್ರಮಾಡುವ ನಮಗೆ ಅನ್ನವನ್ನು (ಅನ್ನಾದ್ಯಾಹಾರವನ್ನು) ತುಂಬಿ ಕೊಡು, ಎಂದರೆ ಯಥೇಚ್ಛವಾಗಿ ಕೊಡು.

**ನು**—ನು ಇತ್ಯೇಷೋಽನೇಕಕರ್ಮಾ। ಇದಂ ನು ಕರಿಷ್ಯತೀತಿ ಹೇತ್ವಪದೇಶೇ। ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧-೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. ಕಥಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ ಅಥಾಪ್ಯುಪಮಾರ್ಥೇ ಭವತಿ। ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿರುವುದು. ಉದಾಹರಣೆಗೆ—

**ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।**
**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ ೩ ತಯೋ ರುರುಹುರಿಂದ್ರ ಪೂರ್ವೀಃ ॥**
(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ (ನಿ. ೧-೪), **ವೃಕ್ಷಸ್ಯ ನು ತೇ । ವೃಕ್ಷಸ್ಯೇವ ತೇ ।** ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಶಬ್ದಕ್ಕೆ ಉಪಮಾರ್ಥವನ್ನು ಹೇಳಿದೆಯೆಂದು ತಿಳಿಸಿದಾರೆ. ಹೀಗೆಯೇ—

**ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।**
(ಋ. ಸಂ. ೭-೧೦೦-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂಬ ಶಬ್ದಕ್ಕೆ ಕ್ಷಿಪ್ರಂ ಬೇಗನೆ, ಜಾಗ್ರತೆಯಾಗಿ ಎಂಬರ್ಥವೂ,

**ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।**
(ಋ. ಸಂ. ೭-೧೯-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂದರೆ ಅದ್ಯ, ಈಗ, ಒಡನೆಯೇ ಎಂಬ ಅರ್ಥವಿರುವುದೆಂದು ನಿರುಕ್ತಕಾರರು ಉದಾಹರಣೆ ಸಹಿತವಾಗಿ ವಿವರಿಸಿದಾರೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರಂ ಬೇಗನೆ, ಶೀಘ್ರವಾಗಿ ಎಂದರ್ಥವು.

**ಜರಿತ್ರೇ**—ಜರಿತೃಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯) **ಜರಿತಾ ಗರಿತಾ** (ನಿ. ೧-೭) ಎಂದು ನಿರ್ವಚನವೂ ಇರುವುದರಿಂದ ಜರಿತ್ರೇ ಎಂದರೆ ಇಲ್ಲಿ ಸ್ತೋತ್ರಮಾಡುವ ನನಗೆ ಎಂದರ್ಥವು.

**ನ**—ನ ಎಂಬ ಶಬ್ದಕ್ಕೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು—

**ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯಂ । ನೇಂದ್ರಂ ದೇವಮಮಂಸತ ಇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಂ ಇತ್ಯುಪಮಾರ್ಥೀಯಃ । ಉಪರಿಷ್ಟಾದುಪಚಾರಸ್ತಸ್ಯ ಯೇನೋಪಮಿಮೀತೇ ॥** (ನಿ. ೧-೪)

ಎಂದರೆ ನ ಎಂಬ ಶಬ್ದವು ಲೋಕವ್ಯವಹಾರದ ಭಾಷೆಯಲ್ಲಿ ಎಂದರೆ, ವೇದಭಾಷೆಯಲ್ಲದ ಆಧುನಿಕ ಸಂಸ್ಕೃತ ಭಾಷೆಯಲ್ಲಿ ನಿಷೇಧಾರ್ಥದಲ್ಲಿ (ಇಲ್ಲ, ಅಲ್ಲ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು. ಇದು ಎಲ್ಲರಿಗೂ ತಿಳಿದೇ ಇದೆ. ಆದರೆ ವೇದಗಳಲ್ಲಿ ನಿಷೇಧಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ ನ ಎಂಬ ಶಬ್ದದ ಪ್ರಯೋಗವಿರುವುದು. ಹೇಗೆಂದರೆ— **ನೇಂದ್ರಂ ದೇವಮಮಂಸತ** ಎಂಬ ವಾಕ್ಯದಲ್ಲಿನ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿರುವುದು. ಪ್ರತಿಷೇಧವೆಂದರೆ ಒಬ್ಬ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಎದುರಿಗೆ ಹೊಗಳದೇ ಇರುವುದು. ಇಂದ್ರನನ್ನು ದೀಪ್ತಿಯುಕ್ತನಾದವನೆಂದು ತಿಳಿಯಲಾಗುವುದಿಲ್ಲ ಎಂಬ ವಾಕ್ಯದಲ್ಲಿ ಇಲ್ಲ (ನ ಎಂಬುದರ ಅರ್ಥ) ಎಂಬ ಶಬ್ದವು ಇಂದ್ರನ ವಿಷಯಕವಾದ ಉಪಚಾರೋಕ್ತಿಗೆ ವಿರುದ್ಧವಾದ ಅರ್ಥವನ್ನು ಸೂಚಿಸುವುದು. ಇದಕ್ಕೆ ಪ್ರತಿಷೇಧಾರ್ಥವೆಂದು ಹೆಸರು. **ದುರ್ಮದಾಸೋ ನ ಸುರಾಯಾಂ** ಎಂಬ ವಾಕ್ಯದಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು (ಹೋಲಿಕೆಯನ್ನು) ಸೂಚಿಸುವುದು. ಮದ್ಯವನ್ನು ಪಾನಮಾಡಿದ ಜನರಂತೆ ದುರಹಂಕಾರವುಳ್ಳವರು ಎಂದು

ಈ ವಾಕ್ಯದ ಅರ್ಥವು. ಇಲ್ಲಿ ಒಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳನ್ನು ಮತ್ತೊಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳಿಗೆ ಹೋಲಿಸಿ ಹೇಳುವುದೇ ಉಪಮಾರ್ಥವು. ಮದ್ಯಪಾನಮಾಡಿದವರು ಮತಿಹೀನರಾಗಿ ಅಹಂಕಾರ ದಿಂದ ನೀಚಮಾರ್ಗದಲ್ಲಿ ವರ್ತಿಸುವರು. ಆ ಜನರಂತೆ ದುರಹಂಕಾರವುಳ್ಳವರು ಎಂಬುದೇ ಉಪಮಾರ್ಥವು. ಈ ವಿಧವಾದ ಅರ್ಥಗಳನ್ನು ವೇದಗಳಲ್ಲಿ ನ ಎಂಬ ಪದದಿಂದಲೂ, ಇವ ಎಂಬ ಪದದಿಂದಲೂ ನಿರ್ದೇಶಿಸಲ್ಪಡುವುದು. ಈ ವಿಧವಾದ ಉಪಮಾರ್ಥದಲ್ಲಿ ನ ಎಂಬ ಶಬ್ದದ ಪ್ರಯೋಗವು ವೇದಗಳಲ್ಲಿ ಮಾತ್ರ ಇರುವುದು. ಬಳಸುವ ಭಾಷೆಯಲ್ಲಿಲ್ಲ. ಅದಕ್ಕೆ ಬದಲಾಗಿ ಅಲ್ಲಿ ಇವ ಎಂಬ ಶಬ್ದದ ಪ್ರಯೋಗಮಾತ್ರವಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ವಾಮದೇವಋಷಿಯು ದೇವತೆಗೆ ಹೊಸದಾಗಿ ರಚಿತವಾದ ಸ್ತೋತ್ರವನ್ನರ್ಪಿಸಿ ದೇವತೆಯ ಅನುಗ್ರಹವನ್ನು ಪ್ರಾರ್ಥಿಸಿರುವುದು ಉಕ್ತವಾಗಿದೆ.



# ಇಪ್ಪತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಆ ನ ಇಂದ್ರ ಇತ್ಯೇಕಾದಶರ್ಚಂ ದಶಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಆ ನ ಇತ್ಯನುಕ್ರಮಣಿಕಾ ॥ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ನಿಷ್ಕೇವಲ್ಯ ಏತನ್ನಿವಿದ್ಧಾನೀಯಂ । ಸೂತ್ರಿತಂ ಚ । ಆ ನ ಇಂದ್ರ ಇತಿ ನಿಷ್ಕೇವಲ್ಯಂ । ಆ. ೭-೫ । ಇತಿ ॥ ಮಹಾವ್ರತೇಽಪ್ಯೇತತ್ಸಂಪಾತಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ ಚ । ಆ ನ ಇಂದ್ರೋ ದೂರಾದಾ ನ ಆಸಾದಿತಿ ಸಂಪಾತಃ । ಐ. ಆ. ೫-೨-೨ । ಇತಿ ॥

ಅನುವಾದವು—ಆ ನ ಇಂದ್ರ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಆ ನಃ ಎಂದು ಮೊದಲಾಗಿ ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವ ಷಡಹವೆಂಬ ಯಾಗಗಳ ಮೊದಲನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತವನ್ನು ನಿವಿನ್ಮಂತ್ರಗಳಿಗಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಆ ನ ಇಂದ್ರ ಇತಿ ನಿಷ್ಕೇವಲ್ಯಂ ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು. ಮಹಾವ್ರತದಲ್ಲಿಯೂ ಕೂಡ ಸಂಪಾತಸೂಕ್ತಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯ ಆರಣ್ಯಕದ ಪಂಚಮಾರಣ್ಯಕದಲ್ಲಿ ಆ ನ ಇಂದ್ರೋ ದೂರಾದಾ ನ ಆಸಾದಿತಿ ಸಂಪಾತಃ ಎಂಬ ವಾಕ್ಯದಿಂದ ವಿವೃತವಾಗಿರುವುದು. (ಐ. ಆ. ೫-೨-೨).



## ಸೂಕ್ತ—೨೦

ಮಂಡಲ—೪ ‖ ಅನುವಾಕ—೨ ‖ ಸೂಕ್ತ—೨೦ ‖
ಅಷ್ಟಕ—೩ ‖ ಅಧ್ಯಾಯ—೬ ‖ ವರ್ಗ—೩, ೪ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ‖
ಋಷಿಃ—ವಾಮದೇವಃ ‖
ದೇವತಾ—ಇಂದ್ರಃ ‖
ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಆ ನ ಇಂದ್ರೋ ದೂರಾದಾ ನ ಆಸಾದಭಿಷ್ಟಿಕೃದವಸೇ ಯಾಸದುಗ್ರಃ ।
ಓಜಿಷ್ಠೇಭಿರ್ನೃಪತಿರ್ವಜ್ರಬಾಹುಃ ಸಂಗೇ ಸಮತ್ಸು ತುರ್ವಣಿಃ ಪೃತನ್ಯೂನ್ ‖

‖ ಪದಪಾಠಃ ‖

ಆ । ನಃ । ಇಂದ್ರಃ । ದೂರಾತ್ । ಆ । ನಃ । ಆಸಾತ್ । ಅಭಿಷ್ಟಿಽಕೃತ್ । ಅವಸೇ । ಯಾಸತ್ । ಉಗ್ರಃ ।
ಓಜಿಷ್ಠೇಭಿಃ । ನೃಽಪತಿಃ । ವಜ್ರಽಬಾಹುಃ । ಸಂಽಗೇ । ಸಮತ್ಽಸು । ತುರ್ವಣಿಃ । ಪೃತನ್ಯೂನ್ ‖ ೧ ‖

‖ ಸಾಯಣಭಾಷ್ಯಂ ‖

ಅಭಿಷ್ಟಿಕೃದ್ಯಜಮಾನಸಂಬಂಧಿನಾಮಭೀಷ್ಟಾನಾಂ ಕರ್ತೋಗ್ರಸ್ತೇಜಸ್ವೀಂದ್ರೋ ನೋಽಸ್ಮಾಕಮವಸೇ ರಕ್ಷಣಾಯ ದೂರಾದಾ ಯಾಸತ್। ಆಯಾತು। ಆಗಚ್ಛತು। ಅಪಿ ಚ ಆಸಾದಾಸನ್ನಾದಂತಿಕಾಚ್ಚ ನೋಽಸ್ಮಾಕಮವಸೇ ರಕ್ಷಣಾಯಾ ಯಾಸತ್। ಆಯಾತು। ಕೀದೃಶಃ। ಸಮತ್ಸು ಸಂಗ್ರಾಮೇಷು ಸಂಗೇ ಶತ್ರುಭಿಃ ಸಂಯೋಗೇ ಸತಿ ಪೃತನ್ಯೂನ್ ಶತ್ರೂನ್ ತುರ್ವಣಿರ್ಹಿಂಸನ್ ವಜ್ರಬಾಹುರ್ವಜ್ರಹಸ್ತೋ ನೃಪತಿರ್ವೃಷ್ಟಿದ್ವಾರಾ ನೃಣಾಂ ಮನುಷ್ಯಾಣಾಂ ಪಾಲಕ ಓಜಿಷ್ಠೇಭಿರತಿಶಯೇನ ತೇಜಸ್ವಿಭಿರ್ಮರುದ್ಭಿರ್ಯುಕ್ತ ಇತಿ ಶೇಷಃ ‖

‖ ಪ್ರತಿಪದಾರ್ಥ ‖

ಅಭಿಷ್ಟಿಕೃತ್—ಯಜಮಾನರ ಇಷ್ಟಾರ್ಥಗಳನ್ನು ಈಡೇರಿಸುವವನೂ । ಉಗ್ರಃ—ತೇಜಸ್ವಿಯೂ । ಸಮತ್ಸು—ಸಂಗ್ರಾಮಗಳಲ್ಲಿ । ಸಂಗೇ—ಶತ್ರುಗಳೊಡನೆ ಹೋರಾಡುತ್ತಿರುವಾಗ । ಪೃತನ್ಯೂನ್—ಶತ್ರುಗಳನ್ನು । ತುರ್ವಣಿಃ—ಹಿಂಸಿಸುವವನೂ । ವಜ್ರಬಾಹುಃ—ವಜ್ರಾಯುಧವನ್ನು ಹಿಡಿದಿರುವ ಬಾಹುವುಳ್ಳವನೂ । ನೃಪತಿಃ—ಮಾನವರ ಪಾಲಕನೂ ಆದ । ಇಂದ್ರಃ—ಇಂದ್ರನು । ಓಜಿಷ್ಠೇಭಿಃ—ಅತಿಶಯವಾದ ಓಜಸ್ಸುಳ್ಳ ಮರುತ್ತುಗಳೊಡಗೂಡಿ । ನಃ—ನಮ್ಮ । ಅವಸೇ—ರಕ್ಷಣೆಗಾಗಿ । ದೂರಾತ್—ದೂರದಿಂದಲೂ । ಆ ಯಾಸತ್—ಬರಲಿ । ಆಸಾತ್—ಹತ್ತಿರದಿಂದಲೂ ಸಹ । ಆ (ಯಾಸತ್)—ಬರಲಿ.

॥ ಭಾವಾರ್ಥ ॥

ಯಜಮಾನರ ಇಷ್ಟಾರ್ಥಗಳನ್ನು ಈಡೇರಿಸುವವನೂ, ತೇಜಸ್ವಿಯೂ ಸಂಗ್ರಾಮಗಳಲ್ಲಿ ಶತ್ರುಗಳೊಡನೆ ಹೋರಾಡುತ್ತಿರುವಾಗ ಅವರನ್ನು ಹಿಂಸಿಸುವವನೂ, ವಜ್ರಾಯುಧವನ್ನು ಬಾಹುವಿನಲ್ಲಿ ಹಿಡಿದಿರುವವನೂ, ಮಾನವರ ಪಾಲಕನೂ ಆದ ಇಂದ್ರನು ಅತಿಶಯವಾದ ಓಜಸ್ಸುಳ್ಳ ಮರುತ್ತುಗಳೊಡಗೂಡಿ ನಮ್ಮ ರಕ್ಷಣೆಗಾಗಿ ದೂರದಲ್ಲಿರಲಿ ಅಥವಾ ಹತ್ತಿರವಿರಲಿ, ಖಂಡಿತವಾಗಿ ಬರಬೇಕು.

## English Translation.

May the illustrious Indra, the granter of desires, come to us, whether from afar or nigh, for our protection : he who is the lord of men, armed with the thunderbolt, overcoming his foes in conflict and in combats, (attended) by the most illustrious (Maruts).

॥ ವಿಶೇಷವಿಷಯಗಳು ॥

ಸಮುತ್ಸು, ಪೃತನಾ ಎಂಬ ಶಬ್ದಗಳು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೬) ಈ ಋಕ್ಕಿನಲ್ಲಿ ಪೃತನ್ಯೂನ್ ಎಂಬ ಶಬ್ದಕ್ಕೆ ಯುದ್ಧಾಭಿಲಾಷಿಗಳೆಂಬ ಅರ್ಥದಲ್ಲಿ ಶತ್ರೂನ್—ಶತ್ರುಗಳನ್ನು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದ್ದಾರೆ.

ಆಸಾತ್—ಆಸಾತ್ ಎಂಬ ಶಬ್ದವು ಅಂತಿಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಆಸಾತ್ ಎಂದರೆ ಸಮೀಪದಲ್ಲಿ ಎಂದರ್ಥವು.

ತುರ್ವಣಿಃ—ಈ ಋಕ್ಕಿನಲ್ಲಿರುವ ತುರ್ವಣಿಃ ಎಂಬ ಶಬ್ದಕ್ಕೆ ಭಾಷ್ಯಕಾರರು ಹಿಂಸನ್—ಶತ್ರುಗಳನ್ನು ಹಿಂಸಿಸುವವನು ಎಂದು ಅರ್ಥವಿವರಣೆ ಮಾಡಿದಾರೆ. ಆದರೆ ಯಾಸ್ಕರು ಈ ಶಬ್ದಕ್ಕೆ—

ತುರ್ವಣಿಸ್ತೂರ್ಣವನಿಃ । ಸ ತುರ್ವಣಿರ್ಮಹಾँ ಅರೇಣುಪೌಂಸ್ಯೇ ಇತ್ಯಪಿ ನಿಗಮೋ ಭವತಿ ।
(ನಿ. ೬-೧೪)

ಎಂದು ನಿರ್ವಚನವನ್ನು ಹೇಳಿ ಉದಾಹರಣೆಯನ್ನು ಕೊಟ್ಟಿರುವರು. ಎಂದರೆ ತುರ್ವಣಿಃ ಎಂದರೆ ತೂರ್ಣಂ ಹಿ ಯಃ ಸಂಭಜತೇ ಸ ತೂರ್ಣವನಿತಾ ಸನ್ ತೂರ್ಣವನಿರಿತ್ಯುಕ್ತಃ । ಇಂದ್ರನು ತನ್ನನ್ನು ಸ್ತೋತ್ರಮಾಡುವವರ ಸಮೀಪಕ್ಕೆ ಬೇಗ ಬರುವವನು ಎಂದು ಈ ಶಬ್ದದ ಅರ್ಥವಿವರಣೆಮಾಡಿದ್ದಾರೆ.

ಓಜಿಷ್ಠೇಭಿಃ—ಅತಿಶಯೇನ ತೇಜಸ್ವಿಭಿಃ ಮರುದ್ಭಿರ್ಯುಕ್ತ ಇತಿ ಶೇಷಃ । ಓಜಿಷ್ಠೇಭಿಃ ಎಂಬ ಶಬ್ದಕ್ಕೆ ತೇಜಸ್ವಿಗಳಾದವರು, ಪರಾಕ್ರಮಶಾಲಿಗಳು ಎಂಬರ್ಥಮಾತ್ರ ಇರುವುದಾದರೂ ಭಾಷ್ಯಕಾರರು ಸಂದರ್ಭಾನುಸಾರವಾಗಿ ಅರ್ಥಹೊಂದುವಂತೆ ಮರುದ್ಭಿಃ—ಮರುದ್ದೇವತೆಗಳೊಡನೆ ಎಂದು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಆ ನ ಇಂದ್ರೋ ಹರಿಭಿರ್ಯಾತ್ವಚ್ಛಾರ್ವಾಚೀನೋಽವಸೇ ರಾಧಸೇ ಚ ।

ತಿಷ್ಠಾತಿ ವಜ್ರೀ ಮಘವಾ ವಿರಪ್ಶೀಮಂ ಯಜ್ಞಮನು ನೋ ವಾಜಸಾತೌ ॥

॥ ಪದಪಾಠಃ ॥

ಆ । ನಃ । ಇಂದ್ರಃ । ಹರಿಽಭಿಃ । ಯಾತು । ಅಚ್ಛ । ಅರ್ವಾಚೀನಃ । ಅವಸೇ । ರಾಧಸೇ । ಚ ।

ತಿಷ್ಠಾತಿ । ವಜ್ರೀ । ಮಘಽವಾ । ವಿಽರಪ್ಶೀ । ಇಮಂ । ಯಜ್ಞಂ । ಅನು । ನಃ । ವಾಜಽಸಾತೌ ॥ ೨ ॥

॥ ಸಾಯಣಭಾಷ್ಯಂ ॥

ಅರ್ವಾಚೀನೋಽಸ್ಮದಭಿಮುಖ ಇಂದ್ರೋಽವಸೇಽಸ್ಮದೀಯಾಯ ರಕ್ಷಣಾಯ ರಾಧಸೇ ಚ ಧನಾಯ ಚ ನೋಽಚ್ಛಾಸ್ಮಾನಭಿ ಲಕ್ಷೀಕೃತ್ಯ ಹರಿಭಿರಶ್ವೈಃ ಸಹಾ ಯಾತು । ಆಗಚ್ಛತು । ಕಿಂಚ ವಜ್ರೀ ವಜ್ರವಾನ್ಮಘವಾ ಧನವಾನ್ವಿರಪ್ಶೀ ಮಹಾನ್ । ವಿರಪ್ಶೀತಿ ಮಹನ್ನಾಮಸು ಪಾಠಾತ್ । ಅಸ್ಮದೀಯಸ್ಯ ಕರ್ಮಣೋ ದ್ವೇಷ್ಟೃಭಿರಸುರಾದಿಭಿಃ ಸಹ ನೋಽಸ್ಮಾಕಂ ವಾಜಸಾತೌ ಯುದ್ಧೇ ಪ್ರಾಪ್ತೇ ಸತೀಮಮಸ್ಮದೀಯಂ ಯಜ್ಞಮನೂದ್ದಿಶ್ಯ ತಿಷ್ಠಾತಿ । ತಿಷ್ಠತು ॥

॥ ಪ್ರತಿಪದಾರ್ಥ ॥

ಅರ್ವಾಚೀನಃ—ನಮ್ಮನ್ನು ಅನುಗ್ರಹಬುದ್ಧಿಯಿಂದ ನೋಡುವ । ಇಂದ್ರಃ—ಇಂದ್ರನು ! ಅವಸೇ—ನಮ್ಮ ರಕ್ಷಣೆಗಾಗಿಯೂ । ರಾಧಸೇ ಚ—ನಮ್ಮ ಧನಲಾಭಕ್ಕಾಗಿಯೂ । ನಃ ಅಚ್ಛ—ನಮಗೆ ಅಭಿಮುಖನಾಗಿ । ಹರಿಭಿಃ—ಅಶ್ವಗಳೊಡನೆ । ಆ ಯಾತು—ಬರಲಿ । ವಜ್ರೀ—ವಜ್ರಾಯುಧವುಳ್ಳವನೂ । ಮಘವಾ—ಧನವಂತನೂ । ವಿರಪ್ಶೀ—ಮಹತ್ಸ್ವರೂಪವುಳ್ಳವನೂ ಆದ ಇಂದ್ರನು । ನಃ—ನಮಗೂ (ನಮ್ಮ ಶತ್ರುಗಳಿಗೂ) । ವಾಜಸಾತೌ—ಯುದ್ಧವು ಸಂಭವಿಸಿದ ಕಾಲದಲ್ಲಿ । ಇಮಂ ಯಜ್ಞಂ ಅನು—ಈ ಯಜ್ಞವನ್ನುದ್ದೇಶಿಸಿ । ತಿಷ್ಠಾತಿ—ಬಂದು ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಅಂತರಿಕ್ಷದಲ್ಲಿದ್ದರೂ ಸಹ ನಮ್ಮನ್ನು ಅನುಗ್ರಹಬುದ್ಧಿಯಿಂದ ನೋಡತಕ್ಕ ಇಂದ್ರನು ನಮ್ಮ ರಕ್ಷಣೆಗಾಗಿಯೂ, ಧನಲಾಭಕ್ಕಾಗಿಯೂ ನಮಗೆ ಅಭಿಮುಖನಾಗಿ ಅಶ್ವಗಳೊಡನೆ ಬರಲಿ. ವಜ್ರಾಯುಧವುಳ್ಳವನೂ, ಧನವಂತನೂ, ಮಹತ್ಸ್ವರೂಪವುಳ್ಳವನೂ ಆದ ಇಂದ್ರನು ನಮಗೂ ನಮ್ಮ ಶತ್ರುಗಳಿಗೂ ಯುದ್ಧವು ಸಂಭವಿಸಿದ ಕಾಲದಲ್ಲಿ ಈ ಯಜ್ಞವನ್ನುದ್ದೇಶಿಸಿ ಬಂದು ಕುಳಿತುಕೊಳ್ಳಲಿ.

## English Translation.

May Indra, looking down upon us, come with his steeds to our presence for our protection and enrichment: may the mighty thunderer,

the possessor of wealth, (aiding us) in battle, be present at this our sacrifice.

॥ ವಿಶೇಷವಿಷಯಗಳು ॥

ವಿರಪ್ಶೀ—ವಿರಪ್ಶೀ ಎಂಬ ಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಮಹತ್ಸ್ವರೂಪವುಳ್ಳವನು, ಮಹಾಮಹಿಮೆಯುಳ್ಳವನು ಎಂದರ್ಥವು. ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು—ಮಹಾँ ಅಮತ್ರೋ ವೃಜನೇ ವಿರಪ್ಶಿ (ಋ. ಸಂ. ೩-೩೬-೪) ಎಂಬ ಋಕ್ಕಿಗೆ ಅರ್ಥವಿವರಣೆ ಮಾಡುವಾಗ—ವಿರಪ್ಶೀ ವಿರಾವಣಶೀಲಃ । ಯುದ್ಧಾದಿಗಳಲ್ಲಿ ಬಹಳ ಘಟ್ಟಿಯಾಗಿ ಆರ್ಭಟಿಸುವವನೆಂದು ಇಂದ್ರನ ಪರವಾಗಿ ಅರ್ಥಮಾಡಿದಾರೆ.

ವಾಜಸಾತೌ—ವಾಜಸಾತೌ ಎಂಬ ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಯುದ್ಧದಲ್ಲಿ ಎಂದರ್ಥವು. ಈ ಶಬ್ದಕ್ಕೆ ಇನ್ನೊಂದು ವಿಧ ಅರ್ಥವೂ ಇರುವುದು. ವಾಜಃಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ ವಾಜಸಾತಿ ಶಬ್ದಕ್ಕೆ ಅನ್ನಪ್ರಾಪ್ತಿ ಎಂಬರ್ಥವನ್ನು ಹೇಳಬಹುದು. ಯಾಸ್ಕರು—ವಾಜಸಾತಯೇ ಅನ್ನಸಂಸನನಾಯ, ಅನ್ನಸಂಭಜನಾಯ (ನಿ. ೧೨-೪೬) ಎಂದು ನಿರ್ವಚನವನ್ನು ಹೇಳಿರುವರು.

॥ ಸಂಹಿತಾಪಾಠಃ ॥

ಇಮಂ ಯಜ್ಞಂ ತ್ವಮಸ್ಮಾಕಮಿಂದ್ರ ಪುರೋ ದಧತ್ಸನಿಷ್ಯಸಿ ಕ್ರತುಂ ನಃ ।
ಶ್ವಘ್ನೀವ ವಜ್ರಿನ್ತ್ಸನಯೇ ಧನಾನಾಂ ತ್ವಯಾ ವಯಮರ್ಯ ಆಜಿಂ
ಜಯೇಮ ॥ ೩ ॥

॥ ಪದಪಾಠಃ ॥

ಇಮಂ । ಯಜ್ಞಂ । ತ್ವಂ । ಅಸ್ಮಾಕಂ । ಇಂದ್ರ । ಪುರಃ । ದಧತ್ । ಸನಿಷ್ಯಸಿ । ಕ್ರತುಂ । ನಃ ।
ಶ್ವಘ್ನೀಽಇವ । ವಜ್ರಿನ್ । ಸನಯೇ । ಧನಾನಾಂ । ತ್ವಯಾ । ವಯಂ । ಅರ್ಯಃ । ಆಜಿಂ । ಜಯೇಮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನೋಽಸ್ಮಾನ್ಪುರೋ ದಧತ್ ಪುರಸ್ಕೃತಾನ್ ಕುರ್ವನ್ ಅಸ್ಮಾಕಂ ಕ್ರತುಂ ಕ್ರಿಯಮಾಣಮಿಮಂ ಯಜ್ಞಂ ಸನಿಷ್ಯಸಿ । ಸಂಭಜಿಷ್ಯಸಿ । ಅಪಿ ಚ ಶ್ವಘ್ನೀವ ಮೃಗಯುರ್ಮೃಗಾನಿವ ಹೇ ವಜ್ರಿನ್ ವಜ್ರವನ್ನಿಂದ್ರ ತ್ವಯಾರ್ಯೋಽರಯಃ ಸ್ತೋತಾರೋ ವಯಂ ಧನಾನಾಂ ಪಶ್ವಾದಿಧನಾನಾಂ ಸನಯೇ ಲಾಭಾಯಾಜಿಂ ಶತ್ರುಸಂಬಂಧಿನಂ ಸಂಗ್ರಾಮಂ ಜಯೇಮ । ಸಂಜೀಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ನಃ—ನಮ್ಮನ್ನು। **ಪುರೋ ದಧತ್**—ನಿನ್ನ ಮುಂಭಾಗ ದಲ್ಲಿರಿಸಿಕೊಂಡು । ಅಸ್ಮಾಕಂ—ನಮ್ಮಿಂದ । ಕ್ರತುಂ—ನೆರವೇರಿಸಲ್ಪಡುವ । ಇಮಂ ಯಜ್ಞಂ— ಈ ಯಜ್ಞವನ್ನು । ಸನಿಷ್ಯಸಿ—ಸೇವಿಸು । ವಜ್ರಿನ್—ವಜ್ರಾಯುಧವನ್ನು ಧರಿಸಿರುವ ಎಲೈ ಇಂದ್ರನೇ । ತ್ವಯಾ—ನಿನ್ನ ಸಹಾಯದಿಂದ । ಅರ್ಯಃ—ಸ್ತೋತೃಗಳಾದ । ವಯಂ—ನಾವು । ಧನಾನಾಂ—ಪಶ್ವಾದಿ ಧನಗಳ । ಸನಯೇ—ಲಾಭಕ್ಕಾಗಿ । ಆಜಿಂ—ಯುದ್ಧವನ್ನು। ಶ್ವಘ್ನೀವ—ಬೇಟೆಗಾರನು ಮೃಗಗಳನ್ನು ಕೊಲ್ಲುವಂತೆ । (ನಮ್ಮ ಶತ್ರುಗಳನ್ನು ಕೊಲ್ಲುತ್ತಾ) ಜಯೇಮ—ಜಯಿಸುವಂತೆ ಆಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಮುಂಭಾಗದಲ್ಲಿ ನಮ್ಮನ್ನಿರಿಸಿಕೊಂಡು ನಮ್ಮಿಂದ ನೆರವೇರಿಸಲ್ಪಡುವ ಈ ಯಜ್ಞವನ್ನು ಸೇವಿಸು. ವಜ್ರಧಾರಿಯಾದ ಇಂದ್ರನೇ, ಸ್ತೋತೃಗಳಾದ ನಾವು ನಿನ್ನ ಸಹಾಯದಿಂದ ನಮ್ಮ ಶತ್ರುಗಳನ್ನೆಲ್ಲಾ ಬೇಟೆಗಾರನು ಮೃಗಗಳನ್ನು ಕೊಲ್ಲುವಂತೆ ನಾಶಪಡಿಸಿ, ಯುದ್ಧವನ್ನು ಜಯಿಸಿ ನಮಗೆ ಬೇಕಾದ ಪಶ್ವಾದಿ ಧನಗಳನ್ನು ಪಡೆಯುವಂತಾಗಲಿಃ

## English Translation.

You, Indra, placing us before you, shall receive this sacrifice, our holy offering: and as the huntsman (kills his game), may we, your worshippers, holder of the thunderbolt, for the acquirement of riches through you, be victorious in battle.

॥ ವಿಶೇಷವಿಷಯುಗಳು ॥

ಈ ಋಕ್ಕಿನಲ್ಲಿ ಇಂದ್ರನು ಯಜ್ಞದಲ್ಲಿ ಅಗ್ರಸ್ಥಾನವನ್ನು ಪಡೆದು ಯಜ್ಞವನ್ನು ನೆರವೇರಿಸಬೇಕೆಂದೂ ಧನಪ್ರಾಪ್ತಿಗಾಗಿ ನಾವು ಮಾಡುವ ಯುದ್ಧಗಳಲ್ಲಿ ಬೇಟೆಗಾರನು ಮೃಗಗಳನ್ನು ಕೊಲ್ಲುವಂತೆ ನಾವು ನಮ್ಮ ಶತ್ರುಗಳನ್ನು ಕೊಂದು ಜಯಶೀಲರಾಗೋಣ ಎಂದೂ ವಾಮದೇವಋಷಿಯು ಇಂದ್ರನನ್ನು ಪ್ರಾರ್ಥಿಸಿದಾನೆ.

ಕ್ರತು ಶಬ್ದವು ಕರ್ಮನಾಮಗಳಲ್ಲಿಯೂ (ನಿ. ೩-೧) ಆಜಿ ಶಬ್ದವು ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ.

ಅರ್ಯಃ—ಅರ್ಯಶಬ್ದವು ಈಶ್ವರನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೧) ಪ್ರಭು, ಸ್ವಾಮಿ ಎಂದರ್ಥ. ಪ್ರಕೃತ ಋಕ್ಕಿನಲ್ಲಿ ಋ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವಂತೆ ಭಾವಿಸಿ ಅರ್ಯಃ ಎಂಬ ಶಬ್ದಕ್ಕೆ ಅರಯಃ ಸ್ತೋತಾರಃ ಸ್ತೋತೃಗಳಾದ ಎಂಬರ್ಥವನ್ನು ಭಾಷ್ಯಕಾರರು ಹೇಳಿರುವರು.

ಶ್ವಘ್ನೀವ—ಈ ಶಬ್ದಕ್ಕೆ ಮೋಸಮಾಡತಕ್ಕ ಜೂಜುಗಾರನೆಂದೂ, ವ್ಯಾಧನೆಂದೂ, ವ್ಯಾಧನ ಪತ್ನಿಯೆಂದೂ ಮೂರು ವಿಧವಾಗಿ ಅರ್ಥಮಾಡಬಹುದು. ಮೊದಲನೆಯದಾಗಿ, ನಿರುಕ್ತಕಾರರ ವಿವರಣೆಯಂತೆ—

ಶ್ವಘ್ನೀ ಕಿತವೋ ಭವತಿ ಸ್ವಂ ಹಂತಿ ಸ್ವಂ ಪುನರಾಶ್ರಿತಂ ಭವತಿ। ಕೃತಂ ನ ಶ್ವಘ್ನೀ ವಿ ಚಿನೋತಿ ದೇವನೇ । ಕಿತವಃ ಕಿಂ ತವಾಸ್ತೀತಿ ಶಬ್ದಾನುಕೃತಿಃ । ಕೃತವಾನ್ವಾಶೀರ್ನಾಮಕಃ ।

(ನಿ. ೫-೨೨)

ಶ್ವಘ್ನಿಯೆಂದರೆ ಜೂಜುಗಾರನು. ತಾನು ತನ್ನನ್ನೇ ನಾಶಮಾಡಿಕೊಳ್ಳುತ್ತಾನೆ. ಮತ್ತು ಪರಾಧೀನನಾಗುತ್ತಾನೆ. ಎಂದು ವಿವರಿಸಿ, ಋಕ್ಸಂಹಿತೆಯ—

ಕೃತಂ ನ ಶ್ವಘ್ನೀ ವಿ ಚಿನೋತಿ ದೇವನೇ ಸಂವರ್ಗಂ ಯನ್ಮಘವಾ ಸೂರ್ಯಂ ಜಯೇತ್ ।

(ಋ. ಸಂ. ೧೦-೪೩-೫)

ಎಂಬ ಋಕ್ಕನ್ನು ಉದಾಹರಿಸುತ್ತಾರೆ. ಈ ವಿವರಣೆಯನ್ನು ಅನುಸರಿಸಿದರೆ, ಇಲ್ಲಿ ಜೂಜುಗಾರನೆಂದಾಗುತ್ತದೆ. ಸ್ಕಂದಸ್ವಾಮಿಗಳು ಶ್ವಭಿರ್ಹಂತೀತಿ ಶ್ವಘ್ನಿರ್ಲುಬ್ಧಕ ಇಹೋಚ್ಯತೇ ನಾಯಿಗಳ ಮುಖಾಂತರ ಪ್ರಾಣಿಗಳನ್ನು ಕೊಲ್ಲತಕ್ಕ ಬೇಟೆಗಾರ ಎಂದೂ, ಸಾಯಣರು—ಶುನಾ ಮೃಗಾನ್ ಹತವಾನ್ ಶ್ವಹಾ । ತಸ್ಯ ಸ್ತ್ರೀ ಶ್ವಘ್ನೀ ನಾಯಿಗಳ ಮೂಲಕ ಮೃಗಗಳನ್ನು ಕೊಲ್ಲತಕ್ಕ ವ್ಯಾಧನ ಸ್ತ್ರೀ (ಪತ್ನಿ) ಎಂದೂ ವಿವರಿಸುತ್ತಾರೆ. ಋಕ್ಸಂಹಿತೆಯಲ್ಲಿ ಪ್ರಕೃತ ಋಕ್ಕಿನಲ್ಲಲ್ಲದೆ ಋ. ಸಂ. ೧-೯೨-೧೦; ೨-೧೨-೪; ೧೦-೪೨-೯; ೧೦-೪೩-೫; ೮-೪೫-೩೮ ಎಂಬ ಋಕ್ಕುಗಳಲ್ಲಿ ಶ್ವಘ್ನೀ ಎಂಬ ಶಬ್ದದ ಪ್ರಯೋಗವಿದೆ. ಪ್ರಕೃತ ಋಕ್ಕಿನಲ್ಲಿ ಈ ಶಬ್ದಕ್ಕೆ ವ್ಯಾಧನೆಂದು ಅರ್ಥಮಾಡಿದಾರೆ.

॥ ಸಂಹಿತಾಪಾಠಃ ॥

ಉಶನ್ನು ಷು ಣಃ ಸುಮನಾ ಉಪಾಕೇ ಸೋಮಸ್ಯ ನು ಸುಷುತಸ್ಯ ಸ್ವಧಾವಃ ।

ಪಾ ಇಂದ್ರ ಪ್ರತಿಭೃತಸ್ಯ ಮಧ್ವಃ ಸಮಂಧಸಾ ಮಮದಃ ಪೃಷ್ಠ್ಯೇನ ॥೪॥

॥ ಪದಪಾಠಃ ॥

ಉಶನ್ । ಊಂ ಇತಿ । ಸು । ನಃ । ಸುಽಮನಾಃ । ಉಪಾಕೇ । ಸೋಮಸ್ಯ । ನು । ಸುಽಸುತಸ್ಯ । ಸ್ವಧಾಽವಃ ।

ಪಾಃ । ಇಂದ್ರ । ಪ್ರತಿಽಭೃತಸ್ಯ । ಮಧ್ವಃ । ಸಂ । ಅಂಧಸಾ । ಮಮದಃ । ಪೃಷ್ಠ್ಯೇನ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿಷ್ಟೋಮೇ ಮಾಧ್ಯಂದಿನಸವನೇ ಮೈತ್ರಾವರುಣಸ್ಯೋಶನ್ನು ಷು ಣ ಇತಿ ಶಸ್ತ್ರಯಾಜ್ಯಾ। ಸೂತ್ರಿತಂ ಚ । ಉಶನ್ನು ಷು ಣಃ ಸುಮನಾ ಉಪಾಕ ಇತಿ ಯಾಜ್ಯಾ । ಆ. ೫-೧೬ । ಇತಿ ॥

ಹೇ ಸ್ವಧಾವೋಽನ್ನವನ್ನಿಂದ್ರ ಸುಮನಾಃ ಶೋಭನಮನಸ್ಕಸ್ತ್ವಮುಪಾಕೇ ಸಮೀಪೇ ನೋಽಸ್ಮಾನುಶನ್ನು ಸು ಅತ್ಯಂತಂ ಕಾಮಯಮಾನಃ ಸನ್ ಸುಷುತಸ್ಯ ಸುಷ್ಠ್ವಭಿಷುತಂ ಪ್ರತಿಭೃತಸ್ಯ ಸಂಭೃತಂ ಮಧ್ವೋ ಮಾದಕಂ ಸೋಮಸ್ಯ ಸೋಮಂ ನು ಕ್ಷಿಪ್ರಮೇವ ಪಾಃ । ಪಿಬ । ಪೃಷ್ಠ್ಯೇನ । ಪೃಷ್ಠ್ಯಶಬ್ದೇನ ಮಾಧ್ಯಂದಿನಸವನ ಉದ್ಗಾತೃಭಿರುದ್ಗೀಯಮಾನಂ ಸ್ತೋತ್ರಮುಚ್ಯತೇ । ತತ್ಸಂಬಂಧಿನಾಂಧಸಾ ಪೀತೇನ ಸೋಮೇನ ಸಂ ಮಮದಃ । ಪ್ರಹೃಷ್ಟೋ ಭವ ॥

॥ ಪ್ರತಿಪದಾರ್ಥ ॥

ಸ್ವಧಾವಃ—ಅನ್ನವಂತನಾದ । ಇಂದ್ರ—ಇಂದ್ರನೇ । ಸುಮನಾಃ—ಕಲ್ಯಾಣಕಾರಕವಾದ ಮನಸ್ಸುಳ್ಳ ನೀನು । ಉಪಾಕೇ—ನಮ್ಮ ಸಮೀಪದಲ್ಲಿ । ನಃ—ನಮ್ಮನ್ನು । ಸು ಉಶನ್—ಅತಿಶಯವಾಗಿ (ನಮ್ಮ ಸಾಹಚರ್ಯವನ್ನು) ಅಪೇಕ್ಷಿಸುತ್ತಾ । ಸುಷುತಸ್ಯ—ಶ್ರೇಷ್ಠವಾಗಿ ಹಿಂಡಲ್ಪಟ್ಟುದೂ । ಪ್ರತಿಭೃತಸ್ಯ—ಶೇಖರಿಸಲ್ಪಟ್ಟುದೂ । ಮಧ್ವಃ—ಮಾದಕವಾದುದೂ ಆದ । ಸೋಮಸ್ಯ—ಸೋಮವನ್ನು । ನು—ಶೀಘ್ರವಾಗಿ । ಪಾಃ—ಪಾನಮಾಡು । ಪೃಷ್ಠ್ಯೇನ—ಮಾಧ್ಯಂದಿನಸವನಕಾಲದ ಸ್ತುತಿಯೊಡನೆ । ಅಂಧಸಾ—(ಪಾನಮಾಡಿದ) ಸೋಮದಿಂದ । ಸಂ ಮಮದಃ—ಸಂತೃಪ್ತನಾಗು.

॥ ಭಾವಾರ್ಥ ॥

ಅನ್ನವಂತನಾದ ಇಂದ್ರನೇ, ಕಲ್ಯಾಣಕಾರಕವಾದ ಮನಸ್ಸುಳ್ಳ ನೀನು ನಮ್ಮ ಸಾಹಚರ್ಯವನ್ನು ಅತಿಯಾಗಿ ಅಪೇಕ್ಷಿಸುತ್ತಾ ನಮ್ಮ ಸಮೀಪದಲ್ಲಿ ಕುಳಿತುಕೋ ಮತ್ತು ಉತ್ತಮರೀತಿಯಲ್ಲಿ ಹಿಂಡಲ್ಪಟ್ಟುದೂ ಆದರದಿಂದ ಶೇಖರಿಸಲ್ಪಟ್ಟುದೂ, ಮಾದಕವಾದುದೂ ಆದ ಸೋಮವನ್ನು ಶೀಘ್ರವಾಗಿ ಪಾನಮಾಡು. ಮಾಧ್ಯಂದಿನಸವನಕಾಲದಲ್ಲಿ ಉದ್ಗಾತೃಗಳಿಂದ ಪಠಿತವಾದ ಸ್ತುತಿಯೊಡನೆ ಪಾನಮಾಡಿದ ಸೋಮದಿಂದ ತೃಪ್ತನಾಗು.

## English Translation.

Indra, the giver of food, be near to us, favourably disposed ; and, anxious for our (good), drink of the effused, prepared, exhilarating Soma, and be pleased by the (sacrificial) food (offered) with the noon-day hymn.

॥ ವಿಶೇಷವಿಷಯಗಳು ॥

ಸ್ವಧಾ ಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ಉಪಾಕೇ ಎಂಬ ಶಬ್ದವು ಅಂತಿಕನಾಮಗಳಲ್ಲಿಯೂ (ನಿ. ೩-೯) ಅಂಧಃ ಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ.

ಪೃಷ್ಠ್ಯೇನ—ಇಲ್ಲಿ ಪೃಷ್ಠ್ಯಶಬ್ದಕ್ಕೆ ಮಾಧ್ಯಂದಿನಸವನ ಕಾಲದಲ್ಲಿ ಉದ್ಗಾತೃವೆಂಬ ಋತ್ವಿಜನು ಗಾನಮಾಡುವ ಸ್ತೋತ್ರವೆಂದು ಅರ್ಥಮಾಡಿದಾರೆ. ಋಕ್ಕಿನ ಅರ್ಥವು ಸ್ಪಷ್ಟವಾಗಿದೆ.



॥ ಸಂಹಿತಾಪಾಠಃ ॥

ವಿ ಯೋ ರರಪ್ಶ ಋಷಿಭಿರ್ನವೇಭಿರ್ವೃಕ್ಷೋ ನ ಪಕ್ವಃ ಸೃಣ್ಯೋ ನ ಜೇತಾ ।

ಮರ್ಯೋ ನ ಯೋಷಾಮಭಿ ಮನ್ಯಮಾನೋಽಚ್ಛಾ ವಿವಕ್ಮಿ ಪುರುಹೂತ-

ಮಿಂದ್ರಂ ॥ ೫ ॥

॥ ಪದಪಾಠಃ ॥

ವಿ । ಯಃ । ರರಪ್ಶೇ । ಋಷಿಽಭಿಃ । ನವೇಭಿಃ । ವೃಕ್ಷಃ । ನ । ಪಕ್ವಃ । ಸೃಣ್ಯಃ । ನ । ಜೇತಾ ।

ಮರ್ಯಃ । ನ । ಯೋಷಾಂ । ಅಭಿ । ಮನ್ಯಮಾನಃ । ಅಚ್ಛ । ವಿವಕ್ಮಿ । ಪುರುಽಹೂತಂ । ಇಂದ್ರಂ ॥೫॥

॥ ಸಾಯಣಭಾಷ್ಯಂ ॥

ಪಕ್ವಃ ಪಕ್ವಫಲೋ ವೃಕ್ಷೋ ನ ವೃಕ್ಷ ಇವ । ಅತ್ರ ಸೃಣಿಶಬ್ದೋಽಂಕುಶವಾಚೀ । ತೇನಾಯುಧ-ಮಾತ್ರಂ ಲಕ್ಷ್ಯತೇ । ಸೃಣ್ಯ ಆಯುಧಕುಶಲೋ ಜೇತಾ ನ ಶತ್ರುವಿಜಯೀ ವೀರಪುರುಷ ಇವ ಯೋ ನವೇಭಿರ್ನವ್ಯೈರ್ನೂತನೈರ್ಋಷಿಭಿರ್ವಿ ರರಪ್ಶೇ । ವಿವಿಧಂ ಸ್ತೂಯತೇ । ಸ್ತೋತಾಹಂ ಪುರುಹೂತಂ ಬಹುಭಿರಾಹೂತಂ ತಮಿಂದ್ರಮಚ್ಛಾಭಿ ಲಕ್ಷೀಕೃತ್ಯ ವಿವಕ್ಮಿ । ವಿಶೇಷೇಣ ವಚ್ಮಿ । ಸ್ತೌಮಿ । ತತ್ರ ದೃಷ್ಟಾಂತಃ । ಅಭಿ ಮನ್ಯಮಾನೋ ಮದೀಯೇಯಂ ಯೋಷಿದಿತ್ಯಭಿಜಾನನ್ಮರ್ಯೋ ಮರ್ತ್ಯೋ ಯೋಷಾಂ ನ ಸ್ತ್ರೀಮಿವ ತದ್ವತ್ ॥

॥ ಪ್ರತಿಪದಾರ್ಥ ॥

ಪಕ್ವಃ—ಪಕ್ವವಾದ ಫಲಗಳುಳ್ಳ । ವೃಕ್ಷೋ ನ—ವೃಕ್ಷದಂತೆ ಸಮೃದ್ಧನೂ । ಸೃಣ್ಯಃ—ಉತ್ತಮವಾದ ಆಯುಧವುಳ್ಳವನೂ । ಜೇತಾ ನ—ಶತ್ರುಗಳನ್ನು ಜಯಿಸುವ ವೀರನಂತಿರುವವನೂ ಆದ । ಯಃ—ಯಾವ ಇಂದ್ರನು । ನವೇಭಿಃ—ನೂತನರಾದ । ಋಷಿಭಿಃ—ಋಷಿಗಳಿಂದ । ವಿ ರರಪ್ಶೇ—ವಿಶೇಷ ರೀತಿಯಲ್ಲಿ ಸ್ತುತಿಸಲ್ಪಡುವನೋ ಅಂತಹವನೂ । ಪುರುಹೂತಂ—ಅನೇಕರಿಂದ ಕರೆಯಲ್ಪಡುವವನೂ ಆದ । ಇಂದ್ರಂ—ಇಂದ್ರನನ್ನು । ಅಚ್ಛ—ಆದರದಿಂದ ಉದ್ದೇಶಿಸಿ । ಅಭಿ ಮನ್ಯಮಾನಃ—ಅತ್ಯಂತ ಅಭಿಮಾನದಿಂದ ಕೂಡಿದ । ಮರ್ಯಃ—ಮಾನವನು । ಯೋಷಾಂ ನ—ತನ್ನ ಪತ್ನಿಯನ್ನು ಹೊಗಳುವಂತೆ । ವಿವಕ್ಮಿ—ಅತಿಶಯವಾಗಿ ಸ್ತುತಿಸುತ್ತೇನೆ.

॥ ಭಾವಾರ್ಥ ॥

ಪಕ್ವವಾದ ಫಲಗಳುಳ್ಳ ವೃಕ್ಷದಂತೆ ಸಮೃದ್ಧನೂ, ಉತ್ತಮವಾದ ಆಯುಧವುಳ್ಳವನೂ, ಶತ್ರುಗಳನ್ನು ಜಯಿಸುವ ವೀರನಂತಿರುವವನೂ ಆದ ಯಾವ ಇಂದ್ರನು ನೂತನವಾದ ಋಷಿಗಳಿಂದ ವಿಶೇಷರೀತಿಯಲ್ಲಿ ಸ್ತುತಿಸಲ್ಪ

ಡುವನೋ ಅಂತಹವನೂ, ಅನೇಕರಿಂದ ಸಹಾಯಾರ್ಥವಾಗಿ ಕರೆಯಲ್ಪಡುವವನೂ ಆದ ಇಂದ್ರನನ್ನು ಆದರದಿಂದ ಉದ್ದೇಶಿಸಿ ಅತ್ಯಂತ ಅಭಿಮಾನದಿಂದ ಕೂಡಿದ ಪುರುಷನು ತನ್ನ ಪತ್ನಿಯನ್ನು ಹೊಗಳುವಂತೆ ಅತಿಶಯವಾಗಿ ಸ್ತುತಿಸುತ್ತೇನೆ.

### English Translation.

Like a man boasting of his wife, I glorify that Indra who is invoked of many, who is hymned by recent sages, (who is) like a tree with ripe fruit, like a victorious (warrior), skilful in arms.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವಾಮದೇವಋಷಿಯು ಇಂದ್ರನನ್ನು ಸ್ತೋತ್ರಮಾಡುವ ವಿಷಯದಲ್ಲಿ ಕೆಲವು ದೃಷ್ಟಾಂತ ಗಳನ್ನು ಹೇಳಿದಾನೆ.

ಪಕ್ವಃ ವೃಕ್ಷೋ ನ—ಪಕ್ವಫಲಗಳಿಂದ ತುಂಬಿದ ವೃಕ್ಷಗಳು ಹೇಗೆ ಜನರಿಗೆ ಸಮೃದ್ಧಿಯನ್ನೂ ಆನಂದ ವನ್ನೂ ಉಂಟುಮಾಡುವುದೋ, ಅದರಂತೆ ಇಂದ್ರನು ತನ್ನನ್ನು ಸ್ತೋತ್ರಮಾಡುವವರಿಗೆ ಸಮೃದ್ಧಿಯಾದ ಧನಾದಿ ಗಳನ್ನು ಕೊಡುವನೆಂದು ಪಕ್ವಫಲವೃಕ್ಷಸಾಮ್ಯವನ್ನು ಇಂದ್ರನಿಗೆ ಹೋಲಿಸಿದೆ. ಈ ಋಕ್ಕಿನಲ್ಲಿ ಮೂರಾವೃತ್ತಿಪಠಿತ ವಾಗಿರುವ ನ ಎಂಬ ಶಬ್ದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ.

ಸೃಣ್ಯಃ ಜೇತಾ ನ—ಸೃಣಿ ಶಬ್ದಕ್ಕೆ ಭಾಷ್ಯಕಾರರು ಅಂಕುಶ ಎಂಬ ಆಯುಧವಿಶೇಷವೆಂದು ಅರ್ಥಮಾಡಿ ದಾರೆ. ಯಾಸ್ಕರೂ ಸಹ—

ಸೃಣಿರಂಕುಶೋ ಭವತಿ ಸರಣಾತ್ । ಅಂಕುಶೋಽಞ್ಚತೇರಾಕುಚಿತೋ ಭವತೀತಿ ವಾ । ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ಇತ್ಯಪಿ ನಿಗಮೋ ಭವತಿ । ಅಂತಿಕತಮಮಂಕು- ಶಾದಾಯಾತ್ಪಕ್ವಮೌಷಧಮಾಗಚ್ಛತ್ವಿತ್ಯಾಗಚ್ಛತ್ವಿತಿ ।

(ನಿ. ೫-೨೮)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಸೃಣಿಶಬ್ದಕ್ಕೆ ಅಂಕುಶವೆಂದರ್ಥವು. ಏಕೆಂದರೆ, ಸರಿ, ಒಳಕ್ಕೆ ಹೋಗು ಎಂಬರ್ಥವುಳ್ಳ ಸೃಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿ ಆನೆಯ ಶಿರಸ್ಸಿನಲ್ಲಿ ಒಳಹೊಗುವುದರಿಂದ ಇದಕ್ಕೆ ಸೃಣಿ ಎಂದರೆ ಅಂಕುಶವೆಂದು ಹೆಸರು. ಅಥವಾ ಈ ಅಂಕುಶವು ಕೊಂಡಿಯಂತೆ ಬಗ್ಗಿರುವುದರಿಂದ (ಕುಟಿಲ, ವಕ್ರವಾಗಿರುವುದರಿಂದ) ಈ ಶಬ್ದವು ಅಂಚತಿಧಾತುವಿನಿಂದ ನಿಷ್ಪನ್ನವಾಗಬಹುದು. ಈ ವಿಧವಾದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು—

ಯುನಕ್ತ ಸೀರಾ ವಿ ಯುಗಾ ತನುಧ್ವಂ ಕೃತೇ ಯೋನೌ ವಪತೇಹ ಬೀಜಂ ।
ಗಿರಾ ಚ ಶ್ರುಷ್ಟಿಃ ಸಭರಾ ಅಸನ್ನೋ ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ॥

(ಋ. ಸಂ. ೧೦-೧೦೧-೩)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ಸೃಣ್ಯಃ ಎಂಬ ಶಬ್ದಕ್ಕೆ ವಕ್ರವಾಗಿ ಬಗ್ಗಿರುವ ಅಂಕುಶ ಎಂದರೆ ಎತ್ತರವಾದ ವೃಕ್ಷದ ತುದಿಯಲ್ಲಿರುವ ಹಣ್ಣುಗಳನ್ನು ಕುಯ್ಯುವುದಕ್ಕೆ ಉಪಯೋಗಿಸುವ ತೋಟಿ ಎಂದು ಅರ್ಥವಿವರಣೆಮಾಡಿದಾರೆ. ಪ್ರಕೃತ ಋಕ್ಕಿನಲ್ಲಿ ಅಂಕುಶ ಅಥವಾ ಅಂಕುಶದಂತಿರುವ ಈಟಿ, ಭರ್ಜಿ ಎಂಬ ಆಯುಧವನ್ನು ಧರಿಸಿ ಯುದ್ಧಮಾಡುವ ಯೋಧನು ಎಂಬರ್ಥವಿರುವುದು. ಆದುದರಿಂದ ಸೃಣ್ಯಃ ಜೇತಾ ನ ಎಂಬ ವಾಕ್ಯಕ್ಕೆ ಅಂಕುಶವೆಂಬ ಮೊನುಚಾದ ಆಯುಧಪ್ರಯೋಗದಲ್ಲಿ ಕುಶಲನಾದ ಭಟನು ಶತ್ರುವೀರರನ್ನು ಜಯಿಸುವಂತೆ ಎಂದು ಇಂದ್ರನ ಪರಾಕ್ರಮದ ಮತ್ತು ವಜ್ರಾಯುಧದ ವಿಷಯದಲ್ಲಿ ಉಪಮಾನವನ್ನು ಹೇಳಿದೆ. ಎಂದರೆ ಹರಿತವಾದ ಅಂಕುಶವೆಂಬ ಆಯುಧವನ್ನು ಧರಿಸಿ ಯುದ್ಧಮಾಡುವ ವೀರನು ಯಾವರೀತಿ ಶತ್ರುಗಳನ್ನು ಜಯಿಸುವನೋ ಅದರಂತೆ ಇಂದ್ರನು ವಜ್ರಾಯುಧ ವನ್ನು ಧರಿಸಿ ಶತ್ರುಗಳನ್ನು ಜಯಿಸುವನು ಎಂದು ಇಂದ್ರನ ಪರಾಕ್ರಮದ ವಿಷಯದಲ್ಲಿ ದೃಷ್ಟಾಂತವನ್ನು ಹೇಳಿದೆ.

**ನವೇಭಿಃ ಋಷಿಭಿಃ ವಿ ರರಪ್ಶೇ—ನೂತನೈಃ ಋಷಿಭಿಃ ವಿವಿಧಂ ಸ್ತೂಯತೇ।** ನೂತನಋಷಿಗಳಿಂದ ಎಂದರೆ ವಾಮದೇವ ಋಷಿಯ ಕಾಲದಲ್ಲಿದ್ದ ಅಥವಾ ವಾಮದೇವ ಋಷಿಯ ಸಮಕಾಲೀನರಾದ ಋಷಿಗಳಿಂದ ಇಂದ್ರನು ಸ್ತುತಿಸಲ್ಪಡುವನು ಎಂದು ಹೇಳಿದೆ. ಕೆಲವು ಋಷಿಗಳು ಅಗ್ನಿಯ ವಿಷಯದಲ್ಲಿಯೂ **ಅಗ್ನಿಃಪೂರ್ವೇಭಿ-ರ್ಋಷಿಭಿರೀಡ್ಯೋ ನೂತನೈರುತ।** ಅಗ್ನಿಯೂ ಪೂರ್ವದ (ಹಿಂದಿನ) ಋಷಿಗಳಿಂದಲೂ, ಈಗಿನ ಋಷಿಗಳಿಂದಲೂ ಸ್ತುತಿಸಲ್ಪಡುವನು ಎಂದು ಮೊದಲಾಗಿ ವರ್ಣಿಸಿದಾರೆ. ಎಂದರೆ ಇಂದ್ರನು ಹಿಂದನ ಕಾಲದ ಋಷಿಗಳಿಂದಲೂ ಸ್ತುತಿಸಲ್ಪಡುವವನಾದ್ದರಿಂದ ಈ ಋಕ್ಕಿನಲ್ಲಿ **ಪುರುಹೂತಂ** ಎಂದರೆ ಅನೇಕ ಋಷಿಜನರಿಂದ ಸ್ತುತಿಸಿ ಆಹ್ವಾನಿಸಲ್ಪಡು ವವನು ಎಂದು ವರ್ಣಿಸಿದೆ.

**ಅಭಿ ಮನ್ಯಮಾನಃ ಮರ್ಯಃ ಯೋಷಾಂ ನ ವಿವಕ್ತಿ ಮದೀಯೇಯಂ ಯೋಷಿದಿತ್ಯಭಿಜಾನನ್ ಮರ್ತ್ಯಃ ಯಥಾ ಸ್ವಸ್ತ್ರಿಯಂ ಪ್ರಶಂಸತಿ ತದ್ವತ್।** ಲೋಕದಲ್ಲಿ ಜನರು ತಮ್ಮವರನ್ನು ಎಂದರೆ ಬಂಧುಗಳು, ಸ್ವಜನರು ಮೊದಲಾದವರನ್ನು ಹೊಗಳುವುದು ರೂಢಿಯಷ್ಟೆ. ಅದರಂತೆ ಮನುಷ್ಯರು ತಮ್ಮ ಪತ್ನಿಯರೇ ಮೊದಲಾದವ ರನ್ನು ಪ್ರಶಂಸೆಮಾಡುವರು, ಎಂದರೆ ಮನಃಪೂರ್ವಕವಾಗಿ ಅವರ ಗುಣವರ್ಣನೆ ಮಾಡುವರು. ಅದರಂತೆ ನಾನು ಇಂದ್ರನನ್ನು ಸ್ತುತಿಸುವೆನು ಎಂದು ಋಷಿಯು ಈ ಪತಿಪತ್ನಿಯರ ದೃಷ್ಟಾಂತವನ್ನು ವರ್ಣಿಸಿ ಇಂದ್ರನಲ್ಲಿ ತನಗಿರುವ ಆದರಾತಿಶಯವನ್ನು ಸೂಚಿಸಿರುವನು.

॥ ಸಂಹಿತಾಪಾಠಃ ॥

ಗಿರಿರ್ನ ಯಃ ಸ್ವತವಾಁ ಋಷ್ವ ಇಂದ್ರಃ ಸನಾದೇವ ಸಹಸೇ ಜಾತ ಉಗ್ರಃ ।
ಆದರ್ತಾ ವಜ್ರಂ ಸ್ಥವಿರಂ ನ ಭೀಮ ಉದ್ನೇವ ಕೋಶಂ ವಸುನಾ
ನ್ಯೃಷ್ಟಂ ॥ ೬ ॥

॥ ಪದಪಾಠಃ ॥

ಗಿರಿಃ । ನ । ಯಃ । ಸ್ವsತವಾನ್ । ಋಷ್ವಃ । ಇಂದ್ರಃ । ಸನಾತ್ । ಏವ । ಸಹಸೇ । ಜಾತಃ । ಉಗ್ರಃ ।

ಆsದರ್ತಾ । ವಜ್ರಂ । ಸ್ಥವಿರಂ । ನ । ಭೀಮಃ । ಉದ್ನಾsಇವ । ಕೋಶಂ । ವಸುನಾ । ನಿsಋಷ್ಟಂ ॥೬॥

॥ ಸಾಯಣಭಾಷ್ಯಂ ॥

ಗಿರಿರ್ನ ಪರ್ವತ ಇವ ಸ್ವತವಾನ್ ಸ್ವಯಂ ಪ್ರವೃದ್ಧ ಋಷ್ವೋ ಮಹಾನ್ । ಋಷ್ವ ಇತಿ ಮಹನ್ನಾಮ ಮಹತ್ ಬ್ರಧ್ನ ಋಷ್ವ ಇತಿ ತನ್ನಾಮಸು ಪಾಠಾತ್ । ಉಗ್ರ ಓಜಸ್ವೀ ಯ ಇಂದ್ರಃ ಸಹಸೇ ಶತ್ರೋರಭಿಭವಾಯ ಸನಾದೇವ ಚಿರಾದೇವ ಜಾತ ಉತ್ಪನ್ನೋ ಭೀಮಃ ಶತ್ರೂಣಾಂ ಭಯಂಕರಃ ಸ ಇಂದ್ರ ಉದ್ನೇವ ಕೋಶಮುದಕೇನ ಜಲಪಾತ್ರಮಿವ ವಸುನಾ ತೇಜಸಾ ನ್ಯೃಷ್ಟಂ ನಿಗತಂ ಸ್ಥವಿರಂ ಬೃಹದ್ವಜ್ರಂ ನ ವಜ್ರಂ ಚ । ನೇತಿ ಚಾರ್ಥೇ । ಆದರ್ತಾ । ಆದೃತವಾನಾಸೀತ್ ॥

॥ ಪ್ರತಿಪದಾರ್ಥ ॥

ಗಿರಿಃ ನ—ಪರ್ವತದಂತೆ । ಸ್ವತವಾನ್—ಸ್ಥಿರನಾಗಿಯೂ, ಪ್ರವೃದ್ಧನಾಗಿಯೂ ಇರುವವನೂ । ಋಷ್ವಃ—ಮಹಾತ್ಮನೂ । ಉಗ್ರಃ—ಓಜಸ್ವಿಯೂ ಆದ । ಯಃ ಇಂದ್ರಃ—ಯಾವ ಇಂದ್ರನು । ಸಹಸೇ—ಶತ್ರುಗಳನ್ನು ಸೆದೆಬಡಿಯಲು । ಸನಾದೇವ—ಬಹಳ ಕಾಲದಿಂದಲೇ । ಜಾತಃ—ಉತ್ಪನ್ನನಾಗಿ । ಭೀಮಃ—(ಶತ್ರುಗಳಿಗೆ) ಭಯಂಕರನಾಗಿರುವನೋ (ಅದೇ ಇಂದ್ರನು) । ಕೋಶಂ—ಉದಕಪಾತ್ರವು । ಉದ್ನಾ ಇವ—ಉದಕದಿಂದ ತುಂಬಿ ಪ್ರಕಾಶಿಸುವಂತೆ । ವಸುನಾ—ತೇಜಸ್ಸಿನಿಂದ । ನ್ಯೃಷ್ಟಂ—ಕೂಡಿದುದೂ । ಸ್ಥವಿರಂ—ಬೃಹತ್ಸ್ವರೂಪವುಳ್ಳದೂ ಆದ । ವಜ್ರಂ ನ—ವಜ್ರಾಯುಧವನ್ನೂ ಸಹ । ಆದರ್ತಾ—ಆದರದಿಂದ ಹಿಡಿದಿದ್ದಾನೆ.

॥ ಭಾವಾರ್ಥ ॥

ಪರ್ವತದಂತೆ ಸ್ಥಿರನಾಗಿಯೂ, ಪ್ರವೃದ್ಧನಾಗಿಯೂ ಇರುವವನೂ, ಮಹಾತ್ಮನೂ, ಓಜಸ್ವಿಯೂ ಆದ ಯಾವ ಇಂದ್ರನು ಶತ್ರುಗಳನ್ನು ಸೆದೆಬಡಿಯಲು ಬಹಳ ಕಾಲದಿಂದಲೇ ಉತ್ಪನ್ನನಾಗಿ ಶತ್ರುಗಳಿಗೆ ಭಯಂಕರನಾಗಿರುವನೋ ಅದೇ ಇಂದ್ರನು ವಜ್ರಾಯುಧವನ್ನೂ ಸಹ ಹಿಡಿದಿದ್ದಾನೆ. ಉದಕಪಾತ್ರವು ಉದಕದಿಂದ ತುಂಬಿ ಪ್ರಕಾಶಿಸುವಂತೆ, ಇಂದ್ರನೂ ಸಹ ವಜ್ರಾಯುಧವನ್ನು ಹಿಡಿದು ಪ್ರಕಾಶಿಸುತ್ತಿದ್ದಾನೆ.

## English Translation.

He who is vast aud and self-sustained like a mountain, the radiant and formidable Indra, born of old for the destruction (of the foes of the gods), the wielder of the ancient thunderbolt, charged with splendour, like a jar (filled) with water.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನ ಗುಣಾತಿಶಯಗಳ ವರ್ಣನೆ ಇದೆ. ಇಂದ್ರನು ಪರ್ವತದಂತೆ ಮಹಾಶರೀರವುಳ್ಳವನಾಗಿರುವನು, ಮಹಾಮಹಿಮೆಯುಳ್ಳವನು, ಪರಾಕ್ರಮಶಾಲಿಯು, ಶತ್ರುಗಳ ನಾಶಕ್ಕಾಗಿ ಬಹುಕಾಲದ ಹಿಂದೆಯೇ ಉತ್ಪನ್ನನಾದವನು, ಶತ್ರುಗಳಿಗೆ ಭಯಂಕರನು, ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವನು ಎಂದು ಮುಂತಾಗಿ ವರ್ಣಿಸಿದೆ. ನೀರನ್ನು ತುಂಬುವ ಪಾತ್ರೆಯು ಉದಕಪೂರ್ಣವಾಗಿದ್ದರೆ ಹೀಗೆ ಪ್ರಕಾಶಿಸುವುದೋ ಎಂದರೆ ಚೆನ್ನಾಗಿ ಕಾಣಿಸುವುದೋ ಅದರಂತೆ ಪರಾಕ್ರಮಶಾಲಿಯಾದ ಇಂದ್ರನ ಕೈಯಲ್ಲಿ ಥಳಥಳನೆ ಹೊಳೆಯುತ್ತಿರುವ ವಜ್ರಾಯುಧವಿರುವುದರಿಂದ ಇಂದ್ರನೂ ತೇಜಸ್ವಿಯಾಗಿ ಕಾಣುವನು ಎಂದು ಮುಖ್ಯಾಭಿಪ್ರಾಯವು.

---

॥ ಸಂಹಿತಾಪಾಠಃ ॥

ನ ಯಸ್ಯ ವರ್ತಾ ಜನುಷಾ ನ್ವಸ್ತಿ ನ ರಾಧಸ ಆಮರೀತಾ ಮಘಸ್ಯ ।
ಉದ್ವಾವೃಷಾಣಸ್ತವಿಷೀವ ಉಗ್ರಾಸ್ಮಭ್ಯಂ ದದ್ಧಿ ಪುರುಹೂತ ರಾಯಃ ॥೭॥

॥ ಪದಪಾಠಃ ॥

ನ । ಯಸ್ಯ । ವರ್ತಾ । ಜನುಷಾ । ನು । ಅಸ್ತಿ । ನ । ರಾಧಸಃ । ಆಽಮರೀತಾ । ಮಘಸ್ಯ ।
ಉತ್ಽವವೃಷಾಣಃ । ತವಿಷೀಽವಃ । ಉಗ್ರ । ಅಸ್ಮಭ್ಯಂ । ದದ್ಧಿ । ಪುರುಽಹೂತ । ರಾಯಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಸ್ಯ ತವ ಕಶ್ಚಿಜ್ಜನುಷಾ ಜನ್ಮನಾ ಸ್ವತ ಏವ ನು ಸತ್ಯಂ ವರ್ತಾ ವಾರಯಿತಾ ನಾಸ್ತಿ । ರಾಧಸೋ ಯಜ್ಞಾದಿಕರ್ಮಣಾಂ ಸಾಧಕಸ್ಯ ಮಘಸ್ಯ ತ್ವಯಾ ದೀಯಮಾನಸ್ಯ ಧನಸ್ಯಾಮರೀತಾ ಕಶ್ಚಿದಪಿ ನಾಶಯಿತಾ ನಾಸ್ತಿ ಹೇ ತವಿಷೀವೋ ಬಲವನ್ನುಗ್ರ ತೇಜಸ್ವಿನ್ ಹೇ ಪುರುಹೂತ ಬಹುಭಿರಾಹೂತೇಂದ್ರ ಉದ್ವವೃಷಾಣೋಽಭೀಷ್ಟಾನ್ ಕಾಮಾನ್ವರ್ಷಕಸ್ತ್ವಂ ರಾಯಃ ಪಶ್ವಾದಿಧನಾನ್ಯಸ್ಮಭ್ಯಂ ಸ್ತೋತೃಭ್ಯೋ ದದ್ಧಿ । ದೇಹಿ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) ಜನುಷಾ—ನಿನ್ನ ಜನ್ಮದ ಸ್ವಭಾವದಿಂದಲೇ । (ಮಹಾತ್ಮನಾದ) ಯಸ್ಯ—ಯಾವ ನಿನಗೆ । ನು—ಸತ್ಯವಾಗಿಯೂ । ವರ್ತಾ—ವಿರೋಧಿಸುವವನು । ನ ಅಸ್ತಿ—ಯಾರೂ ಇಲ್ಲ । (ಅದರಂತೆಯೇ) ರಾಧಸಃ—ಯಜ್ಞಾದಿ ಕರ್ಮಗಳಿಗೆ ಸಾಧಕವಾದುದೂ । ಮಘಸ್ಯ—ನಿನ್ನಿಂದ ಕೊಡಲ್ಪಟ್ಟುದೂ

ಆದ ಧನಕ್ಕೆ | ಆಮರೀತಾ—ನಾಶಕನು | ನ—ಯಾರೂ ಇರಲಾರರು | ತವಿಷೀವಃ—ಬಲವಂತನೂ | ಉಗ್ರ—ತೇಜಸ್ವಿಯೂ | ಪುರುಹೂತ—ಅನೇಕರಿಂದ ಕರೆಯಲ್ಪಡುವವನೂ ಆದ ಎಲೈ ಇಂದ್ರನೇ | ಉದ್ವವೃಷಾಣಃ—ಇಷ್ಟಾರ್ಥಗಳನ್ನು ಸುರಿಸುವ ನೀನು | ರಾಯಃ—ಪಶ್ವಾದಿ ಧನಗಳನ್ನು | ಅಸ್ಮಭ್ಯಂ—ಸ್ತೋತೃಗಳಾದ ನಮಗೆ | ದದ್ಧಿ—ಕೊಡು.

॥ ಭಾವಾರ್ಥ ॥

ಉತ್ಪತ್ತಿಯ ಸ್ವರೂಪದಿಂದಲೇ ಅಪ್ರತಿಹತವಾಗ ಶಕ್ತಿಯನ್ನು ಹೊಂದಿರುವ ಎಲೈ ಇಂದ್ರನೇ, ನಿನ್ನನ್ನು ವಿರೋಧಿಸುವ ಶಕ್ತಿಯುಳ್ಳ ಪುರುಷನಾರೂ ಇಲ್ಲ. ಆದರಂತೆಯೇ ಯಜ್ಞಾದಿ ಕರ್ಮಗಳಿಗೆ ಸಾಧಕವಾದುದೂ, ನಿನ್ನಿಂದ ಕೊಡಲ್ಪಟ್ಟುದೂ ಆದ ಧನವನ್ನು ನಾಶಮಾಡಬಲ್ಲ ಪುರುಷನೂ ಯಾರೂ ಇಲ್ಲ. ಬಲವಂತನೂ, ತೇಜಸ್ವಿಯೂ, ಅನೇಕರಿಂದ ಕರೆಯಲ್ಪಡುವವನೂ ಆದ ಎಲೈ ಇಂದ್ರನೇ, ಇಷ್ಟಾರ್ಥಗಳನ್ನು ಸುರಿಸುವ ನೀನು ಸ್ತೋತೃಗಳಾದ ನಮಗೆ ಪಶ್ವಾದಿ ಧನಗಳನ್ನು ಕೊಡು,

## English Translation.

Of whom there is no opposer by (reason of) his birth, nor any destroyer of the wealth that accomplishes (pious works): powerful and resplendent (Indra), the invoked of many, the showerer (of benefits) bestow upon us riches.

॥ ವಿಶೇಷವಿಷಯಗಳು ॥

ಜನುಷಾ ಯಸ್ಯ ನು ವರ್ತಾ ನ ಅಸ್ತಿ—ಎಲೈ ಇಂದ್ರನೇ, ಜನಿಸಿದಕಾಲದಿಂದಲೂ ಮಹಾಬಲಶಾಲಿಯಾಗಿರುವೆ. ಇಂತಹ ನಿನ್ನನ್ನು ಎದುರಿಸುವವರು ಯಾರೂ ಇಲ್ಲ.

ರಾಧಸಃ ಮಘಸ್ಯ ಆಮರೀತಾ ನ—ನೀನು ನಿನ್ನನ್ನು ಸ್ತೋತ್ರಮಾಡುವವರಿಗೆ ಯಜ್ಞಾದಿಕರ್ಮಗಳಿಗಾಗಿ ಕೊಡುವ ಧನವನ್ನು ಯಾರೂ ನಾಶಮಾಡಲಾರರು.

ತವಿಷೀವಃ ಉಗ್ರ ಪುರುಹೂತ ಉದ್ವವೃಷಾಣಃ ರಾಯಃ ಅಸ್ಮಭ್ಯಂ ದದ್ಧಿ—ಎಲೈ ಇಂದ್ರನೇ, ನೀನು ಮಹಾಬಲಶಾಲಿಯು, ತೇಜಸ್ವಿಯು ಮತ್ತು ನಿನ್ನನ್ನು ಅನೇಕರು ಯಜ್ಞಾರ್ಥವಾಗಿ ಆಹ್ವಾನಿಸುವರು. ನೀನು ಸ್ತೋತೃಜನರಿಗೆ ಇಷ್ಟಾರ್ಥಗಳನ್ನು ಸುರಿಸುವವನು (ಕೊಡುವವನು) ಇಂತಹ ನೀನು ನಿನ್ನನ್ನು ಸ್ತೋತ್ರಮಾಡುತ್ತಿರುವ ನಮಗೆ ಪಶುಸಂಪತ್ತೇ ಮೊದಲಾದ ಧನಾದಿಗಳನ್ನು ಒದಗಿಸಿಕೊಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ರಾಧಃ, ಮಘಂ, ರಾಯಃ ಎಂಬ ಶಬ್ದಗಳು ಧನನಾಮಗಳಲ್ಲಿ ಪಠಿತವಾಗಿವೆ. (ನಿ. ೩-೯) ತವಿಷೀ ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೮)

॥ ಸಂಹಿತಾಪಾಠಃ ॥

ಈಕ್ಷೇ ರಾಯಃ ಕ್ಷಯಸ್ಯ ಚರ್ಷಣೀನಾಮುತ ವ್ರಜಮಪವರ್ತಾಸಿ ಗೋನಾಂ।
ಶಿಕ್ಷಾನರಃ ಸಮಿಥೇಷು ಪ್ರಹಾವಾನ್ವಸ್ವೋ ರಾಶಿಮಭಿನೇತಾಸಿ ಭೂರಿಂ॥೮॥

॥ ಪದಪಾಠಃ ॥

ಈಕ್ಷೇ । ರಾಯಃ । ಕ್ಷಯಸ್ಯ । ಚರ್ಷಣೀನಾಂ । ಉತ । ವ್ರಜಂ । ಅಪಽವರ್ತಾ । ಅಸಿ । ಗೋನಾಂ ।
ಶಿಕ್ಷಾಽನರಃ । ಸಂಽಇಥೇಷು । ಪ್ರಹಾಽವಾನ್ । ವಸ್ವಃ । ರಾಶಿಂ । ಅಭಿಽನೇತಾ । ಅಸಿ । ಭೂರಿಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಚರ್ಷಣೀನಾಂ ಪ್ರಜಾನಾಂ ರಾಯೋ ಧನಸ್ಯ ಕ್ಷಯಸ್ಯ ಗೃಹಸ್ಯ ಚೇಕ್ಷೇ। ಈಕ್ಷಸೇ । ಉತಾಪಿ ಚ ಗೋನಾಂ ಗವಾಂ ವ್ರಜಂ ಸಮೂಹಮಪವರ್ತಾಽಪವಾರಕೋಽಸಿ । ನಿರೋಧಕೇಭ್ಯೋಽಸುರೇಭ್ಯೋ ಗವಾಂ ಮೋಚಯಿತಾ ಭವಸೀತ್ಯರ್ಥಃ। ಕಿಂಚ ಹೇ ಇಂದ್ರ ಶಿಕ್ಷಾನರಃ ಶಿಕ್ಷಯಾ ನೇತಾ ಪ್ರಜ್ಞಾನಾಂ ಶಾಸಕಃ ಸಮಿಥೇಷು ಯುದ್ಧೇಷು ಪ್ರಹಾವಾನ್ ಪ್ರಹರಣವಾಂಸ್ತ್ವಂ ಭೂರಿಂ ಪ್ರಭೂತಂ ವಸ್ವೋ ಧನಸ್ಯ ರಾಶಿಂ ಸಮೂಹಮಭಿನೇತಾಸಿ । ಪ್ರಾಪಯಿತಾ ಚ ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಚರ್ಷಣೀನಾಂ— ಪ್ರಜೆಗಳ। ರಾಯಃ—ಧನಕ್ಕೂ। ಕ್ಷಯಸ್ಯ—ಗೃಹಕ್ಕೂ। ಈಕ್ಷೇ—(ನೀನೇ) ಪ್ರಭುವಾಗಿದ್ದೀಯೆ। ಉತ—ಮತ್ತು। ಗೋನಾಂ—ಗೋವುಗಳ। ವ್ರಜಂ—ಸಮೂಹವನ್ನು। ಅಪವರ್ತಾ—(ಅಸುರರಿಂದ) ರಕ್ಷಿಸುವವನಾಗಿಯೂ। ಅಸಿ—ಆಗಿದ್ದೀಯೆ (ಮತ್ತು)। ಶಿಕ್ಷಾನರಃ—ಉಪದೇಶಕನೂ। ಸಮಿಥೇಷು—ಯುದ್ಧಗಳಲ್ಲಿ। ಪ್ರಹಾವಾನ್—ಶತ್ರುಗಳನ್ನು ಸದೆಬಡಿಯುವವನೂ ಆದ ನೀನು। ಭೂರಿಂ—ಪ್ರಭೂತವಾದ। ವಸ್ವಃ—ಧನದ। ರಾಶಿಂ—ಸಮೂಹವನ್ನು। ಅಭಿ ನೇತಾ ಅಸಿ—ಒದಗಿಸುವವನೂ ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ಪೂಜಿಸುವ ಪ್ರಜೆಗಳ ಧನಕ್ಕೂ ಮತ್ತು ಗೃಹಕ್ಕೂ ನೀನೇ ಈಶ್ವರನಾಗಿದ್ದೀಯೆ. ಮತ್ತು ಅಸುರರಿಂದ ತಡೆಯಲ್ಪಟ್ಟ ಗೋವುಗಳನ್ನು ರಕ್ಷಿಸುವವನೂ ನೀನೇ ಆಗಿದ್ದೀಯೆ. ಮಾನವರಿಗೆ ಉಪದೇಶಕನೂ, ಯುದ್ಧಗಳಲ್ಲಿ ಶತ್ರುಗಳನ್ನು ಸದೆಬಡಿಯುವವನೂ ಆದ ನೀನು ಪ್ರಭೂತವಾದ ಧನದ ರಾಶಿಯನ್ನು ಒದಗಿಸುವವನೂ ಆಗಿದ್ದೀಯೆ.

ಶತ್ರುಗಳನ್ನು ಯಾವ ರೀತಿ ಸುಲಭವಾಗಿ ಸೋಲಿಸುವನೋ ಅದರಂತೆ ಇಂದ್ರನು ನಮ್ಮ ಅಥವಾ ಅವನ ಶತ್ರುಗಳನ್ನು ಅನಾಯಾಸವಾಗಿ ಸೋಲಿಸುವನೆಂದಭಿಪ್ರಾಯವು. ಇಲ್ಲಿ ವಿದಥ್ಯಃ ಎಂಬ ಶಬ್ದವು ಸಮ್ರಾಟ್ ಶಬ್ದಕ್ಕೆ ವಿಶೇಷಣ ವಾಗಿದೆ. ವಿದಥಶಬ್ದಕ್ಕೆ ಯಜ್ಞವೆಂದರ್ಥವಿರುವುದರಿಂದ ಯಜ್ಞದಲ್ಲಿ ದೀಕ್ಷೆವಹಿಸಿರುವ ಅಥವಾ ಯಜ್ಞಮಾಡ ಬೇಕೆಂದು ಇಚ್ಛಿಸುವ ಎಂದರ್ಥವು. ಯಜ್ಞಮಾಡುವಾಗ ರಾಜರು ದಿಗ್ವಿಜಯವನ್ನು ಮಾಡಿ ಅನೇಕ ಶತ್ರುಗಳನ್ನು ಸೋಲಿಸಿ ಧನವನ್ನು ಸಂಗ್ರಹಿಸುವುದು ಪ್ರಸಿದ್ಧಿಯು. ಅದನ್ನೇ ಇಲ್ಲಿ ಸೂಚಿಸಿರಬಹುದು. ಇಲ್ಲಿ ನ ಎಂಬ ಶಬ್ದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ.



॥ ಸಂಹಿತಾಪಾಠಃ ॥

ಆ ಯಾತ್ವಿಂದ್ರೋ ದಿವ ಆ ಪೃಥಿವ್ಯಾ ಮಕ್ಷೂ ಸಮುದ್ರಾದುತ ವಾ ಪುರೀಷಾತ್ ।
ಸ್ವರ್ಣರಾದವಸೇ ನೋ ಮರುತ್ವಾನ್ಪರಾವತೋ ವಾ ಸದನಾದೃತಸ್ಯ ॥ ೩ ॥

॥ ಪದಪಾಠಃ ॥

ಆ । ಯಾತು । ಇಂದ್ರಃ । ದಿವಃ । ಆ । ಪೃಥಿವ್ಯಾಃ । ಮಕ್ಷು । ಸಮುದ್ರಾತ್ । ಉತ । ವಾ । ಪುರೀಷಾತ್ ।
ಸ್ವಃऽನರಾತ್ । ಅವಸೇ । ನಃ । ಮರುತ್ವಾನ್ । ಪರಾವತಃ । ವಾ । ಸದನಾತ್ । ಋತಸ್ಯ ॥ ೩ ॥

॥ ಸಾಯಣಭಾಷ್ಯಂ ॥

ಮರುತ್ವಾನ್ಮರುದ್ಭಿಃ ಸಹಿತ ಇಂದ್ರೋ ನೋऽಸ್ಮಾಕಮವಸೇ ರಕ್ಷಣಾಯ ದಿವಃ ಸ್ವರ್ಗಲೋಕಾದಾ ಯಾತು । ಆಗಚ್ಛತು । ಪೃಥಿವ್ಯಾ ಭೂಲೋಕಾಚ್ಚ ಮಕ್ಷು ಶೀಘ್ರಮಾ ಯಾತು । ಉತ ವಾ ಅಥವಾ ಸಮುದ್ರಾದಂತರಿಕ್ಷಲೋಕಾಚ್ಚಾಯಾತು । ಸಮುದ್ರ ಇತ್ಯಂತರಿಕ್ಷನಾಮ ಸಗರಃ ಸಮುದ್ರೋऽಧ್ವರಮಿತಿ ತನ್ನಾಮಸು ಪಾಠಾತ್ । ಅಥವಾ ಪುರೀಷಾದುದಕಾದಾಯಾತು । ಪುರೀಷಮಿತ್ಯುದಕನಾಮ ಮಧು ಪುರೀಷಂ ಪಿಪ್ಪಲಮಿತಿ ತನ್ನಾಮಸು ಪಾಠಾತ್ । ಸ್ವರ್ಣರಾತ್ ಸ್ವರಾದಿತ್ಯೋ ನರೋ ನೇತಾ ಯಸ್ಯ ತಸ್ಮಾಲ್ಲೋಕಾದ್ವಾಯಾತು । ಪರಾವತೋ ವಾ ದೂರಾದ್ವಾಯಾತು । ಋತಸ್ಯೋದಕಸ್ಯ ಸದನಾತ್ಸ್ಥಾನಾನ್ಮೇಘಲೋಕಾದ್ವಾಯಾತು ॥

॥ ಪ್ರತಿಪದಾರ್ಥ ॥

ಮರುತ್ವಾನ್—ಮರುತ್ತುಗಳಿಂದ ಕೂಡಿದ। ಇಂದ್ರಃ—ಇಂದ್ರನು। ನಃ—ನಮ್ಮ। ಅವಸೇ—ರಕ್ಷಣಾರ್ಥವಾಗಿ। ದಿವಃ—ಸ್ವರ್ಗಲೋಕದಿಂದ। ಆ ಯಾತು—ಬರಲಿ। ಪೃಥಿವ್ಯಾಃ—ಪೃಥಿವಿಯಿಂದಲೂ। ಮಕ್ಷು—ಶೀಘ್ರವಾಗಿ। ಆ (ಯಾತು)—ಬರಲಿ। ಉತ ವಾ—ಅಥವಾ। ಸಮುದ್ರಾತ್—ಅಂತರಿಕ್ಷದಿಂದಲಾಗಲಿ। ಪುರೀಷಾತ್—ಉದಕಮಧ್ಯದಿಂದಾಗಲಿ। ಸ್ವರ್ಣರಾತ್—ಆದಿತ್ಯನಿಗೆ ಮಾರ್ಗವಾದ ದ್ಯುಲೋಕದಿಂದಾಗಲಿ (ಬರಲಿ)। ಪರಾವತೋ ವಾ—ದೂರಪ್ರದೇಶದಿಂದಾದರೂ (ಬರಲಿ)। ಋತಸ್ಯ—ಉದಕದ। ಸದನಾತ್—ಆವಾಸಸ್ಥಾನವಾದ ಮೇಘಲೋಕದಿಂದಾಗಲಿ (ಬರಲಿ).

॥ ಭಾವಾರ್ಥ ॥

ಮರುತ್ತುಗಳಿಂದ ಕೂಡಿದ ಇಂದ್ರನು ನಮ್ಮ ರಕ್ಷಣಾರ್ಥವಾಗಿ ಎಲ್ಲಿದ್ದರೂ ಬರಲಿ. ಸ್ವರ್ಗದಲ್ಲಿದ್ದರೂ ಅಥವಾ ಪೃಥ್ವಿಯಲ್ಲಿದ್ದರೂ ಅಥವಾ ಅಂತರಿಕ್ಷಸ್ಥನಾಗಿದ್ದರೂ ಅಥವಾ ಉದಕಮಧ್ಯದಲ್ಲಿದ್ದರೂ ಅಥವಾ ಆದಿತ್ಯನ ಆವಾಸಸ್ಥಾನವೂ, ಸಂಚಾರಮಾರ್ಗವೂ ಆದ ದ್ಯುಲೋಕದಲ್ಲಿದ್ದರೂ ಅಥವಾ ಅತ್ಯಂತ ದೂರಪ್ರದೇಶದಲ್ಲಿದ್ದರೂ ಅಥವಾ ಉದಕಕ್ಕೆ ಆವಾಸಸ್ಥಾನವಾದ ಮೇಘಲೋಕದಲ್ಲಿದ್ದರೂ ಸಹ ಖಂಡಿತವಾಗಿಯೂ ನಮ್ಮ ರಕ್ಷಣೆಗೆ ಬರಲಿ.

## English Translation.

May Indra, accompanied by the Maruts, come quickly for our protection, from the heaven, from the earth, from the firmament, or from the waters; from the sphere of the sun, from (any) distant region, from the abode of the rains.

॥ ವಿಶೇಷವಿಷಯಗಳು ॥

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಶ್ರುತಿಪ್ರಸಿದ್ಧವಾದುದು. ಇಂದ್ರನಿಗೂ ಮರುತ್ತುಗಳಿಗೂ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡುವುದೂ ಸಂಹಿತೆಗಳಲ್ಲಿಯೂ, ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿದ್ದುದನ್ನು ಹೇಳುವ ಪೂರ್ವಕಥೆಯೊಂದು ಶತಪಥ ಬ್ರಾಹ್ಮಣದಲ್ಲಿ ಈ ರೀತಿ ವರ್ಣಿತವಾಗಿದೆ.

> ಆತಿಥ್ಯೇನ ವೈ ದೇವಾ ಇಷ್ಟ್ವಾ। ತಾನ್ತ್ಸಮದವಿಂದತ್ತೇ ಚತುರ್ಧಾ ವ್ಯದ್ರವನ್ನನ್ಯೋನ್ಯಸ್ಯ ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಃ, ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೇದೇವೈಃ।
>
> (ಶ. ಬ್ರಾ. ೩-೪-೨-೧).

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೋಲಲಿಷ್ಟಪಡದೇ ನಾಲ್ಕು ಗುಂಪುಮಾಡಿಕೊಂಡು ಬೇರೆ ಬೇರೆಯಾದರು. ಅಗ್ನಿಯು ವಸುಗಳೊಂದಿಗೂ,

ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾಗಿ ಗುಂಪುಮಾಡಿಕೊಂಡರು, ಎಂಬ ಈ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿರುವುದು. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ—

ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।

(ಶ. ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು, ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯಾಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ, ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವ ಕ್ರಮವೂ ಶ್ರುತಿಗಳಲ್ಲಿ ಕಂಡುಬರುತ್ತದೆ.

ಅನವದ್ಯೈರಭಿದ್ಯುಭಿರ್ಮಖಃ ಸಹಸ್ವದರ್ಚತಿ ।
ಗಣೈರಿಂದ್ರಸ್ಯ ಕಾಮ್ಯೈಃ ॥

(ಋ. ಸಂ. ೧-೬-೮)

ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ।

(ಋ. ಸಂ. ೧-೧೬೬-೧೧)

ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿ ಸ್ಥವಿರಃ ಸಹೋದಾಃ ।

(ಋ. ಸಂ. ೧-೧೭೧-೫)

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈ ರೀತಿಯ ಸಾಹಚರ್ಯವಿರುವುದರಿಂದಲೇ ಇಲ್ಲಿಯೂ ಸಹ ಮರುತ್ವಾನ್ ಎಂದು ವಿಶೇಷಣವಿದೆ. ಮರುತ್ತುಗಳೊಡಗೂಡಿದ ಇಂದ್ರನನ್ನು ಉದ್ದೇಶಿಸಿರುವ ಸಮಯಗಳಲ್ಲೆಲ್ಲಾ ಮರುತ್ವಾನ್ ಎಂದು ಕರೆದಿದೆಯೆಂದು ಬೃಹದ್ದೇವತೆಯಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ

ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।

(ಬೃ. ದೇ. ೪-೫೬)

ಸ್ವರ್ಣರಾಟ್—ಸ್ವಃ ಎಂಬ ಶಬ್ದಕ್ಕೆ ಅನೇಕಾರ್ಥಗಳಿರುವುವು. ಇಲ್ಲಿ ಸ್ವರ್ಗವೆಂಬ ಸಾಧಾರಣಾರ್ಥದಲ್ಲಿ ಇದರ ಪ್ರಯೋಗವಿರುವುದು. (ನಿ. ೩-೧೩)

ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ ।
ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥

(ಋ. ಸಂ. ೧-೫೦-೫)

ಎಂಬ ಋಕ್ಕಿನಲ್ಲಿ ಸ್ವಃ ಎಂಬ ಶಬ್ದಕ್ಕೆ ಸ್ವಃ—ಸ್ವರ್ಲೋಕಂ ಎಂದು ಭಾಷ್ಯಕಾರರು ವ್ಯಾಖ್ಯಾನಮಾಡಿರುವುದರಿಂದ ಸ್ವರ್ಗಲೋಕವೆಂದರ್ಥವು. ಸ್ವರಾದಿತ್ಯೋ ಭವತಿ । ಸ್ವಃ ಎಂದರೆ ಸೂರ್ಯನ ಹೆಸರು.

ಯೋಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।

(ಋ. ಸಂ. ೧-೧೧೨-೫)

ಎಂಬ ಋಕ್ಕಿನಲ್ಲಿ ಸ್ವಃ ಎಂಬ ಶಬ್ದವು ಸ್ವರಾದಿತ್ಯಂ—ಆದಿತ್ಯ ಅಥವಾ ಸೂರ್ಯನೆಂಬ ಅರ್ಥದಲ್ಲಿಯೂ,

ತ್ಮನಾ ವಹಂತೋ ದುರೋ ವ್ಯೃಣ್ವನ್ನವತ ವಿಶ್ವೇ ಸ್ವ ೧ ರ್ದೃಶೀಕೇ ।

(ಋ. ಸಂ. ೧-೬೯-೫)

ಸಿಂಧುಂ ನ ಕ್ಷೋದಃ ಪ್ರ ನೀಚೈರೈನೋನ್ನವಂತ ಗಾವಃ ಸ್ವ ೧ ರ್ದೃಶೀಕೇ ।

(ಋ. ಸಂ. ೧-೭೭-೫)

ಎಂಬ ಋಕ್ಕುಗಳಲ್ಲಿ ಸ್ವಃ-ನಭಸಿ, ಅಂತರಿಕ್ಷವೆಂಬರ್ಥದಲ್ಲಿಯೂ,

ನಿ ಯಂ ದಧುರ್ಮನುಷ್ಯಾಸು ವಿಕ್ಷು ಸ್ವ ೧ ರ್ಣ ಚಿತ್ರಂ ವಪುಷೇ ವಿಭಾವಂ ।

(ಋ. ಸಂ. ೧-೧೪೮-೧)

ಎಂಬ ಋಕ್ಕಿನಲ್ಲಿ ಯಾಸ್ಕರು ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ ಸ್ವೃತೋ ರಸಾನ್ಸ್ವೃತೋ ಭಾಸಂ ಜ್ಯೋತಿಷಾಂ ಸ್ವೃತೋ ಭಾಸೇತಿ ವಾ—ಎಂದು ಹೇಳಿರುವಂತೆ ಭಾಸಾ-ಎಂದರೆ ಪ್ರಕಾಶವೆಂದೂ ಅರ್ಥವು. ಸ್ವಃ ಎಂಬ ಶಬ್ದವು ಅಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿಯೂ ಪಠಿತವಾಗಿರುವುದರಿಂದ ಸ್ವಃ ಎಂದರೆ ಉದಕವೆಂದೂ ಅರ್ಥವು.

(ನಿ. ೨-೨೪)



॥ ಸಂಹಿತಾಪಾಠಃ ॥

ಸ್ಥೂರಸ್ಯ ರಾಯೋ ಬೃಹತೋ ಯ ಈಶೇ ತಮು ಷ್ಟವಾಮ ವಿದಥೇಷ್ವಿಂದ್ರಂ ।

ಯೋ ವಾಯುನಾ ಜಯತಿ ಗೋಮತೀಷು ಪ್ರ ಧೃಷ್ಣುಯಾ ನಯತಿ ವಸ್ಯೋ ಅಚ್ಛ ॥ ೪ ॥

॥ ಪದಪಾಠಃ ॥

ಸ್ಥೂರಸ್ಯ । ರಾಯಃ । ಬೃಹತಃ । ಯಃ । ಈಶೇ । ತಂ । ಊಂ ಇತಿ । ಸ್ತವಾಮ । ವಿದಥೇಷು । ಇಂದ್ರಂ ।

ಯಃ । ವಾಯುನಾ । ಜಯತಿ । ಗೋಽಮತೀಷು । ಪ್ರ । ಧೃಷ್ಣುಽಯಾ । ನಯತಿ । ವಸ್ಯಃ । ಅಚ್ಛ ॥೪॥

॥ ಸಾಯಣಭಾಷ್ಯಂ ॥

ಯ ಇಂದ್ರಃ ಸ್ಥೂರಸ್ಯ ಸ್ಥೂಲಸ್ಯ ಬೃಹತೋ ಮಹತೋ ರಾಯೋ ಧನಸ್ಯೇಶೇ ಈಷ್ಟೇ ವಿದಥೇಷು ಯಜ್ಞೇಷು । ವಿದಥ ಇತಿ ಯಜ್ಞನಾಮೈತತ್ । ತಮಿಂದ್ರಮು ತಮಿಂದ್ರಮೇವ ವಯಂ ಸ್ತೋತಾರಃ ಸ್ತವಾಮ । ಯ ಇಂದ್ರೋ ವಾಯುನಾ ಪ್ರಾಣರೂಪೇಣ ಬಲೇನ ಗೋಮತೀಷು ಸೇನಾಸು ಜಯತಿ ಶತ್ರೂನ್ನಿಜಯತೇ । ಧೃಷ್ಣುಯಾ ಧೃಷ್ಣುಃ ಪ್ರಗಲ್ಭೋ ಯ ಇಂದ್ರಃ ಸ್ತೋತೄನ್ವಸ್ಯೋ ವಸೀಯಃ ಶ್ರೇಷ್ಠಂ ಪಶ್ವಾದಿಧನಮಚ್ಛಾಭಿ ಪ್ರಣಯತಿ ಪ್ರಾಪಯತಿ । ತೇನೇವೇಂದ್ರಂ ಸ್ತವಾಮೇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ವಿದಥೇಷು—ಯಜ್ಞಗಳಲ್ಲಿ । ಸ್ಥೂರಸ್ಯ—ಪ್ರಭೂತವಾದುದೂ । ಬೃಹತಃ—ಅಧಿಕವಾದ ಬೆಲೆಯುಳ್ಳದ್ದೂ ಆದ । ರಾಯಃ—ಧನಕ್ಕೆ । ಈಶೇ—ಪ್ರಭುವಾಗಿದ್ದಾನೆಯೋ (ಮತ್ತು) । ಯಃ—ಯಾವ ಇಂದ್ರನು । ವಾಯುನಾ—ಪ್ರಾಣರೂಪವಾದ ಬಲದಿಂದ । ಗೋಮ್ಮತೀಷು—ಸೇನೆಗಳಲ್ಲಿ (ಸೇನೆಗಳಿಂದ) । ಜಯತಿ—(ಶತ್ರುಗಳನ್ನು) ಜಯಿಸುವನೋ । ಧೃಷ್ಣುಯಾ—ಪ್ರಗಲ್ಭನಾದ ಯಾವ ಇಂದ್ರನು । ವಸ್ಯಃ—ಶ್ರೇಷ್ಠವಾದ ಧನಗಳನ್ನು । ಅಚ್ಛ—ಸ್ತೋತೃಗಳ ಅಭಿಮುಖವಾಗಿ । ಪ್ರ ನಯತಿ—ಸೇರಿಸುತ್ತಾನೆಯೋ । ತಂ ಇಂದ್ರಂ ಉ—ಅದೇ ಇಂದ್ರನನ್ನೇ । ಸ್ತವಾಮ—ನಾವು ಸ್ತುತಿಸುತ್ತೇವೆ.

॥ ಭಾವಾರ್ಥ ॥

ಯಾವ ಇಂದ್ರನು ಯಜ್ಞಗಳಲ್ಲಿ ಸ್ಥಿರವಾದುದೂ, ಪ್ರಭೂತವಾದುದೂ, ಅಧಿಕವಾದ ಬೆಲೆಯುಳ್ಳದ್ದೂ ಆದ ಧನಕ್ಕೆ ಪ್ರಭುವಾಗಿದ್ದಾನೆಯೋ, ಯಾವ ಇಂದ್ರನು ಪ್ರಾಣರೂಪವಾದ ಬಲದಿಂದ ತನ್ನ ಬಲವಾದ ಸೇನೆಗಳಿಂದ ಶತ್ರುಗಳನ್ನು ಜಯಿಸುವನೋ, ಮತ್ತು ಪರಾಕ್ರಮಿಯಾದ ಯಾವ ಇಂದ್ರನು ಸ್ತೋತೃಗಳಿಗೆ ಉತ್ತಮವಾದ ಪಶ್ವಾದಿ ಧನಗಳನ್ನು ಒದಗಿಸುವನೋ ಅಂತಹ ಇಂದ್ರನನ್ನೇ ಸ್ತೋತೃಗಳಾದ ನಾವು ಸ್ತುತಿಸುತ್ತೇವೆ.

## English Translation.

We glorify, in solemn rites, this Indra who rules over substantial, abundant riches; who by his powess is victor over (hostile) hosts; who by his munificence brings excellent (wealth) to the presence (of his worshippers).

॥ ವಿಶೇಷವಿಷಯಗಳು ॥

ವಿದಥೇಷು—ಯಜ್ಞೇಷು । ಯಜ್ಞಗಳಲ್ಲಿ ಎಂದರೆ ಯಜ್ಞಸ್ಥಾನಗಳಲ್ಲಿ ಎಂದರ್ಥ. ವೇದಯಿತೃಷು ಸ್ತೋತೃಷು ನಿಮಿತ್ತಭೂತೇಷು ಎಂಬುದರಿಂದ ವಿದಥ ಶಬ್ದದ ನಿರ್ವಚನವನ್ನು ತೋರಿಸಿದೆ. ಇಲ್ಲಿ ನಿರುಕ್ತ ಕಾರರ ನಿರ್ವಚನಗಳಲ್ಲಿ ಒಂದನ್ನು ಮಾತ್ರ ಅನುಸರಿಸಿದೆ. ಯಜ್ಞಃ ವೇನಃ ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತ ವಾಗಿದೆ. (ನಿ. ೩-೧೭) ಮತ್ತು ವಿದಥಾನಿ ವೇದನಾನಿ । ವಿದಥ ಶಬ್ದಕ್ಕೆ ಜ್ಞಾನವೆಂದರ್ಥವೆಂಬುದನ್ನು (ನಿ. ೬-೭) ತೋರಿಸಲು—

ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ॥

(ಋ. ಸಂ. ೩-೨೭-೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಜ್ಞಾನಾರ್ಥಕವಾದ ವಿದ್ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಸಾಯಣರು ವಿದಥಾನಿ ವೇದಿತವ್ಯಾನಿ ಕರ್ಮಾಣಿ । ಅರಿಯಲ್ಪಡಬೇಕಾದ ಕರ್ಮಗಳು ಎಂದರ್ಥಮಾಡಿ ದ್ದಾರೆ. ಈ ಪದಕ್ಕಾಗಿ ನಿಷ್ಕರ್ಷವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿರುವರು. ಒಬ್ಬೊಬ್ಬರು ಒಂದೊಂದು ವಿಧವಾದ ಈ ಪದದ ನಿರ್ವಚನವನ್ನು ತೋರಿಸಿ ಬೇರೆ ಬೇರೆ ಅರ್ಥಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುವುವು ಎಂದು ತಿಳಿಯುತ್ತದೆ.

ವಿದಥ ಶಬ್ದವು ಧಾ ಧಾತುವಿಗೆ ವಿ ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. ವಿಧಾ ಎಂದರೆ ಹಂಚು, ನಿಯಮಿಸು ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. ವಿದಥ ಮತ್ತು ವಿಧಾ ಈ ಎರಡು ಪದಗಳ ಅರ್ಥಗಳೂ ಒಂದೇ ಎಂಬ ಅಂಶವನ್ನು,

ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।
ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥

(ಋ. ಸಂ. ೫-೩-೬)

ಎಂಬ ಋಕ್ಕಿನಲ್ಲಿರುವ ವಿದಥೇಷ್ವಹ್ನಾಂ ಎಂಬ ಪದಗಳಿಗೂ,

ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।
ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿರುವ ವಿ—ದಧುಃ ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ತಿಳಿಯುತ್ತದೆ. ಮತ್ತು ವಿಹಿತ, ವಿದಥ ಎಂಬ ಪದಗಳ ಅರ್ಥಗಳೂ ಒಂದೇ ಆಗಿ, ಶಾಸ್ತ್ರವಿಹಿತವಾದ ಯಜ್ಞವೇ ವಿದಥವೆಂಬ ಹೆಸರಿನಿಂದ ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಕೆಲವು ಪಾಶ್ಚಾತ್ಯಪಂಡಿತರು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಉಪ ಯೋ ನಮೋ ನಮಸಿ ಸ್ತಭಾಯನ್ನಿಯರ್ತಿ ವಾಚಂ ಜನಯನ್ಯಜಧ್ಯೈ ।
ಋಂಜಸಾನಃ ಪುರುವಾರ ಉಕ್ಥೈರೇಂದ್ರಂ ಕೃಣ್ವೀತ ಸದನೇಷು ಹೋತಾ ॥

॥ ಪದಪಾಠಃ ॥

ಉಪ । ಯಃ । ನಮಃ । ನಮಸಿ । ಸ್ತಭಾಯನ್ । ಇಯರ್ತಿ । ವಾಚಂ । ಜನಯನ್ । ಯಜಧ್ಯೈ ।
ಋಂಜಸಾನಃ । ಪುರುವಾರಃ । ಉಕ್ಥೈಃ । ಆ । ಇಂದ್ರಂ । ಕೃಣ್ವೀತ । ಸದನೇಷು । ಹೋತಾ ॥ ೫ ॥

॥ ಸಾಯಣಭಾಷ್ಯಂ ॥

ಉಪ ಸ್ತಭಾಯನ್ ಲೋಕಾನುಪಸ್ತಂಭಯನ್ ಯಜಧ್ಯೈ ಯಷ್ಟುಂ ವಾಚಂ ಗರ್ಜಿತಲಕ್ಷಣಾಂ ವಾಚಂ ಜನಯನ್ ಪ್ರಜನಯನ್ ಋಂಜಸಾನಃ ಪ್ರಸಾಧ್ಯಮಾನಃ । ಋಂಜತಿಃ ಪ್ರಸಾಧನಕರ್ಮೇತಿ ಯಾಸ್ಕಃ । ಉಕ್ಥೈಃ ಶಸ್ತ್ರಲಕ್ಷಣೈಃ ಸ್ತೋತ್ರೈಃ ಪುರುವಾರೋ ಬಹುಭಿಃ ಸಂಭಜನೀಯೋ ಯ ಇಂದ್ರೋ ನಮಸಿ । ನಮ ಇತ್ಯನ್ನನಾಮೈತತ್ । ಯಜಮಾನೈರ್ದತ್ತೇ ಹವಿಷಿ ನಮೋ ಯಜಮಾನೇಭ್ಯೋ ಯಜ್ಞಾದಿಸಾಧನಮನ್ನಮಿಯರ್ತಿ ಪ್ರೇರಯತಿ । ಇಂದ್ರೋ ಹವಿಷಾ ತೃಪ್ತಃ ಸನ್ ವೃಷ್ಟಿದ್ವಾರಾನ್ನಂ ಪ್ರಯಚ್ಛತಿ ತೇನ ಚಾನ್ನೇನ ಪುನರ್ಯಜ್ಞಃ ಪ್ರಜಾಯತ ಇತ್ಯರ್ಥಃ । ಅಸ್ಮದೀಯೋ ಹೋತಾ ಸದನೇಷು ಯಜ್ಞಗೃಹೇಷು ತಮಿಂದ್ರಮಾ ಕೃಣ್ವೀತ । ಅಭಿಮುಖೀಕರೋತು ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಉಪ ಸ್ತಭಾಯನ್—ಲೋಕಗಳನ್ನು ಭದ್ರವಾದ ತಳಹದಿಯ ಮೇಲೆ ಶಾಶ್ವತವಾಗಿ ನಿಲ್ಲಿಸುತ್ತಲೂ । ಯಜಧ್ಯೈ—ಯಜ್ಞಮಾಡುವುದಕ್ಕೆ (ಸೂಚಕವಾದ) । ವಾಚಂ—ಗರ್ಜನ ರೂಪವಾದ ವಾಕ್ಕನ್ನು । ಜನಯನ್—ಉತ್ಪನ್ನಮಾಡುತ್ತಲೂ । ಋಂಜಸಾನಃ—ಆರಾಧಿಸಲ್ಪಡುತ್ತಲೂ । ಉಕ್ಥೈಃ—ಶಸ್ತ್ರಮಂತ್ರಗಳಿಂದ । ಪುರುವಾರಃ—ಅನೇಕರಿಂದ ಸ್ತುತಿಸಲ್ಪಡುತ್ತಲೂ । ನಮಸಿ—ಹವಿಸ್ಸಿನ ರೂಪದ ಅನ್ನಕ್ಕೆ ಪ್ರತಿಯಾಗಿ । ನಮಃ—ಯಜಮಾನನಿಗೆ ಉಪಯುಕ್ತವಾದ ಅನ್ನವನ್ನು । ಇಯರ್ತಿ—ಒದಗಿಸುತ್ತಾನೆಯೋ । (ತಂ) ಇಂದ್ರಂ—ಅದೇ ಇಂದ್ರನನ್ನು । ಹೋತಾ—ಹೋತೃವು । ಸದನೇಷು—ಯಜ್ಞಗೃಹಗಳಲ್ಲಿ । ಆ ಕೃಣ್ವೀತ—(ಯಜ್ಞಕರ್ತನಿಗೆ) ಅಭಿಮುಖನಾಗಿರುವಂತೆ ಮಾಡಲಿ.

॥ ಭಾವಾರ್ಥ ॥

ಯಾವ ಇಂದ್ರನು ಸಕಲ ಲೋಕಗಳನ್ನೂ ಸಹ ಭದ್ರವಾದ ತಳಹದಿಯ ಮೇಲೆ ಶಾಶ್ವತವಾಗಿ ನಿಲ್ಲಿಸುವವನಾಗಿಯೂ, ಯಜ್ಞಮಾಡಲು ಸೂಚಕವಾದ ಗರ್ಜನರೂಪವಾದ ವಾಕ್ಕನ್ನು ಉತ್ಪನ್ನಮಾಡುವವನಾಗಿಯೂ ಮತ್ತು

ಯಜಮಾನರಿಂದ ಆರಾಧಿಸಲ್ಪಡುವವನಾಗಿಯೂ, ಶಸ್ತ್ರರೂಪವಾದ ಸ್ತೋತ್ರಗಳಿಂದ ಸ್ತುತಿಸಲ್ಪಡುವವನಾಗಿಯೂ ಸಹ ಹವಿಸ್ಸಿನ ರೂಪದ ಅನ್ನಕ್ಕೆ ಪ್ರತಿಯಾಗಿ ಯಜಮಾನನಿಗೆ ವೃಷ್ಟಿಜನಿತವಾದ ಅನ್ನವನ್ನು ಒದಗಿಸುತ್ತಾನೆಯೋ ಅದೇ ಇಂದ್ರನನ್ನು ಹೋತೃವು ಯಜ್ಞಗೃಹಗಳಲ್ಲಿ ಯಜ್ಞಕರ್ತನಿಗೆ ಅಭಿಮುಖನಾಗಿರುವಂತೆ ಮಾಡಲಿ.

## English Translation.

Let the invoking priest bring to our dwellings that (Indra) who, firmly fixing the (world), returns food for (sacrificial food), and (utters) a voice enjoining (men) to worship : he who is to be propitiated by praises, who is adored by many.

### ॥ ವಿಶೇಷವಿಷಯಗಳು ॥

**ಉಕ್ಥೈಃ—ಸ್ತೋತ್ರೈಃ** । ಸ್ತೋತ್ರಗಳಿಂದ ಎಂದು ಸಾಧಾರಣವಾದ ಅರ್ಥವನ್ನು ಮಾತ್ರ ವ್ಯಾಖ್ಯಾನದಲ್ಲಿ ಹೇಳಿದೆ. ಆದರೆ, ತ್ಯತ್ ತೇ ಉಕ್ಥಂ । ಪ್ರಸಿದ್ಧವಾದುದೂ, ನಿನ್ನನ್ನು ಉದ್ದೇಶಿಸಿದುದೂ ಆದ ಉಕ್ಥವನ್ನು ಎಂದು ಹೇಳಿರುವುದರಿಂದ ಇಂದ್ರಪರವಾದುದೂ ಯಾಗಕಾಲದಲ್ಲಿ ಹಿಂದಿನಿಂದಲೂ ಪಠಿಸಲ್ಪಡುತ್ತಿರುವುದೂ ಆದ ಉಕ್ಥವೆಂದು ಸೂಚಿಸಿದೆ. ಇಂದ್ರಪರವಾದ ಈ ಉಕ್ಥಕ್ಕೆ ಒಂದು ಅಸಾಧಾರಣವಾದ ವೈಶಿಷ್ಟ್ಯವಿದೆ.

ಉಕ್ಥದ ಸ್ವರೂಪವನ್ನೂ, ಅದರ ಮಹಿಮೆಯನ್ನೂ, ಶಸ್ತ್ರ, ಉಕ್ಥ, ಸಾಮ ಇವುಗಳಿಗಿರುವ ಸಂಬಂಧ ಮತ್ತು ಸೂಕ್ಷ್ಮವಾದ ವ್ಯತ್ಯಾಸಗಳನ್ನೂ, ಹೋತೃವೂ ಅವನ ಸಹಾಯಕರಾದ ಋತ್ವಿಕ್ಕುಗಳೂ ಇದನ್ನು ಸವನ ಕಾಲದಲ್ಲಿ ಪಠಿಸಬೇಕಾದ ಕ್ರಮವನ್ನೂ ಹಿಂದಿನ ಭಾಗಗಳಲ್ಲಿ ವಿಶದವಾಗಿ ವಿವರಿಸಿದೆ. ಇಲ್ಲಿ ಇಂದ್ರನ ಮಹಿಮೆಯನ್ನು ಉಕ್ಥದ ಮೂಲಕ ಪ್ರಶಂಸಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಪೂರ್ವಕಥಾಸಂದರ್ಭದೊಂದಿಗೆ ಉಕ್ಥದ ಪ್ರಭಾವವೂ ತನ್ಮೂಲಕ ಇಂದ್ರನ ಮಹಿಮೆಯೂ ಸೂಕ್ಷ್ಮವಾಗಿ ತಿಳಿಸಲ್ಪಡುತ್ತದೆ. ಉಕ್ಥದ ಶಕ್ತಿಯು ಅತ್ಯಧಿಕವಾದುದೆಂದೂ ಅಸುರರು ಅದರ ಮರೆಹೊಕ್ಕಿದುದರಿಂದ ಅವರ ಶಕ್ತಿಯೂ ವೃದ್ಧಿಯಾಯಿತೆಂದೂ ಆಗ ಇಂದ್ರನು ಸ್ತುತನಾಗಿ ಬಂದು ಇವರನ್ನು ಓಡಿಸಿದನೆಂದೂ ಐತರೇಯ ಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

> **ತೇ ವಾ ಅಸುರಾ ಮೈತ್ರಾವರುಣಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾ-**
> **ನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ**
> **ಮೈತ್ರಾವರುಣಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವರುಣಶ್ಚ ತತೋ ನುದೇತಾಂ ॥**

ಅಸುರರು ಮೈತ್ರಾವರುಣ ಉಕ್ಥವನ್ನು ಪ್ರವೇಶಿಸಿದರು. ಆಗ ಇಂದ್ರನು ಈ ಅಸುರರನ್ನು ಈ ಉಕ್ಥದಿಂದ ಓಡಿಸಲು ನನಗೆ ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರಿ ಎಂದಾಗ ವರುಣನು ತಾನು ಸಹಾಯಮಾಡುವುದಾಗಿ ಹೇಳಿದನು. ಆ ಕಾಲದಲ್ಲಿ ಹೋತೃವಿಗೆ ಸಹಾಯಕನಾದ ಮೈತ್ರಾವರುಣನು ತೃತೀಯಸವನಕಾಲದಲ್ಲಿ,

> **ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।**

(ಋ. ಸಂ. ೭-೮೨-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ, ವರುಣನನ್ನೂ ಸ್ತುತಿಸಿದನು. ಆಗ ಇಂದ್ರಾವರುಣರು ಆ ಅಸುರರನ್ನು ಮಿತ್ರಾವರುಣಶಸ್ತ್ರದಿಂದ ಓಡಿಸಿದರು.

ತೇ ವೈ ತತೋಽಪಹತಾ ಅಸುರಾ ಬ್ರಾಹ್ಮಣಾಚ್ಛಂಸಿನ ಉಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ಬೃಹಸ್ಪತಿಸ್ತಸ್ಮಾದೈಂದ್ರಾಬಾರ್ಹಸ್ಪತ್ಯಂ ಬ್ರಾಹ್ಮಣಾಚ್ಛಂಸೀ ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ಬೃಹಸ್ಪತಿಶ್ಚ ಹಿ ತತೋ ನುದೇತಾಂ ॥

ಅಲ್ಲಿಂದ ಓಡಿಸಲ್ಪಟ್ಟ ಅಸುರರು ಬ್ರಾಹ್ಮಣಾಚ್ಛಂಸಿಯ ಉಕ್ಥದಲ್ಲಿ ಪ್ರವೇಶಿಸಿದರು.

ಆಗ ಇಂದ್ರನು ಎದ್ದು ಈ ಅಸುರರನ್ನು ಇಲ್ಲಿಂದ ಓಡಿಸಲು ಯಾರು ಸಹಾಯಮಾಡುತ್ತೀರಿ ಎಂದಾಗ ಬೃಹಸ್ಪತಿಯು ಎದ್ದು ತಾನು ಸಹಾಯಮಾಡುವುದಾಗಿ ಹೇಳಿದನು. ಆಗ ಬ್ರಾಹ್ಮಣಾಚ್ಛಂಸಿಯು ತೃತೀಯಸವನ ಕಾಲದಲ್ಲಿ,

ಉದಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ ।
(ಋ. ಸಂ. ೧೦-೬೮-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ, ಬೃಹಸ್ಪತಿಯನ್ನೂ ಸ್ತುತಿಸಿದನು. ಆಗ ಇಂದ್ರನೂ ಬೃಹಸ್ಪತಿಯೂ ಸಹ ಅಸುರರನ್ನು ಅಲ್ಲಿಂದ ಓಡಿಸಿದರು.

ತೇ ವೈ ತತೋಽಪಹತಾ ಅಸುರಾ ಅಚ್ಛಾವಾಕಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವಿಷ್ಣುಸ್ತಸ್ಮಾದೈಂದ್ರಾವೈಷ್ಣವಮಚ್ಛಾವಾಕಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವಿಷ್ಣುಶ್ಚ ತತೋನುದೇತಾಂ ॥

(ಐ. ಬ್ರಾ. ೧೫-೬)

ಬ್ರಾಹ್ಮಣಾಚ್ಛಂಸಿಯ ಉಕ್ಥದಿಂದ ಓಡಿಸಲ್ಪಟ್ಟ ಅಸುರರು ಅಚ್ಛಾವಾಕನ ಉಕ್ಥದಲ್ಲಿ ಸೇರಿಕೊಂಡರು. ಆಗ ಇಂದ್ರನು ಎದ್ದು ಇವರನ್ನು ಇಲ್ಲಿಂದ ಓಡಿಸಲು ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರೆಂದು ಕೇಳಿದನು. ಆಗ ವಿಷ್ಣುವು ತಾನು ಸಹಾಯಮಾಡುತ್ತೇನೆಂದು ಹೇಳಿದನು. ಆ ಕಾಲದಲ್ಲಿ ಅಚ್ಛಾವಾಕನು,

ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ ।
(ಋ. ಸಂ. ೬-೬೯-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ, ವಿಷ್ಣುವನ್ನೂ ಸ್ತುತಿಸಿದನು. ಆಗ ಅವರು ಅಸುರರನ್ನು ಅಲ್ಲಿಂದಲೂ ಓಡಿಸಿದರು ಎಂಬ ಕಥೆಯು ಐತರೇಯ ಬ್ರಾಹ್ಮಣದಲ್ಲಿ (೧೫-೬) ಪಠಿತವಾಗಿದೆ. ಇದರಿಂದ ಉಕ್ಥದ ಶಕ್ತಿಯೂ, ಇಂದ್ರನ ಮಹಿಮೆಯೂ ತಿಳಿಯುತ್ತದೆ. ತತ್ ತ್ಯೇ ಉಕ್ಥಂ ಎಂದರೆ ಈ ಪ್ರಭಾವವುಳ್ಳ ಉಕ್ಥವನ್ನು ಎಂದರ್ಥವು.

ಆದುದರಿಂದಲೇ ಶತಪಥ ಬ್ರಾಹ್ಮಣದಲ್ಲಿಯೂ ಸಹ,

ಇಂದ್ರೋ ವೈ ಯಜ್ಞಸ್ಯ ದೇವತಾ ತಸ್ಮಾದಾಹೇಂದ್ರಾಯ ತ್ವೇತಿ ಬೃಹದ್ವತೇ ವಯಸ್ವತ ಇತಿ ವೀರ್ಯವತ ಇತ್ಯೇವೈತದಾಹ ಯದಾಹ ಬೃಹದ್ವತೇ ವಯಸ್ವತ ಇತ್ಯುಕ್ಥಾಯ್ಯಂ ಗೃಹ್ಣಾಮೀತ್ಯುಕ್ಥೇಭ್ಯೋ ಹ್ಯೇನಂ ಗೃಹ್ಣಾತಿ।

(ಶ. ಬ್ರಾ. ೪-೨-೩-೧೦)

ಇಂದ್ರನೇ ಯಜ್ಞಕ್ಕೆಲ್ಲಾ ದೇವತೆ. ಆದುದರಿಂದಲೇ "ಬೃಹದುಕ್ಥದಿಂದ ಕೂಡಿದವನೂ, ವೀರ್ಯವಂತನೂ ಆದ ಇಂದ್ರನಿಗೆ" ಎಂದು ಇಂದ್ರನ ವೀರ್ಯಕ್ಕೂ ತೃಪ್ತಿಗೂ ಕಾರಣವಾದ ಉಕ್ಥವನ್ನೂ ತನ್ಮೂಲಕ ಇಂದ್ರನನ್ನೂ ಸ್ತುತಿಸಿದೆ.

ಯಾಗಾದಿ ಕರ್ಮಗಳ ಕಾಲದಲ್ಲಿ ಯಾವ ರೀತಿ ಉಕ್ಥದ ಪ್ರಭಾವವನ್ನು ವರ್ಣಿಸಿದೆಯೋ ಅದೇ ರೀತಿ ಆಧ್ಯಾತ್ಮಿಕವಾದ ಜ್ಞಾನವನ್ನು ಉಪದೇಶಿಸುವ ಕಾಲದಲ್ಲೂ ಸಹ ಸ್ತೋತ್ರಾತ್ಮಕವಾದ ಈ ಉಕ್ಥದ ಮಹಿಮೆಯನ್ನು ಪ್ರಶಂಸಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ—

ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಂ ಸರ್ವಮುತ್ಥಾಪಯತ್ಯುದ್ಧಾಸ್ಮಾದುಕ್ಥವಿದ್ವೀರಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ।

(ಬೃ. ಉ. ೫-೧೩-೧)

ಉಕ್ಥಂ ತತೋಽಪಾಸನಾಂತರಂ। ಉಕ್ಥ ಶಸ್ತ್ರಂ। ತದ್ಧಿ ಪ್ರಧಾನಂ ಮಹಾವ್ರತೇ ಕ್ರತೌ।

(ಶಾಂಕರಭಾಷ್ಯ)

ಮಹಾವ್ರತರೂಪವಾದ ಯಾಗದಲ್ಲಿ ಪ್ರಧಾನಶಸ್ತ್ರವಾದ ಉಕ್ಥವೇ ಪ್ರಾಣವು. ಇದರಿಂದಲೇ ಉತ್ಥಾನವಾಗುತ್ತದೆ. ಆದರಿಂದ ಉಕ್ಥಜನಾದ ಪುತ್ರನು ಉತ್ಪನ್ನನಾಗಿ ತತ್ಸಮಾನತೆಯನ್ನೂ ಸಮಾನವಾದ ಮಾನ್ಯತೆಯನ್ನೂ ಪಡೆಯುತ್ತಾನೆ ಎಂದು ಉಕ್ಥದ ಮಹತ್ತ್ವವನ್ನು ಹೇಳಿದೆ.



॥ ಸಂಹಿತಾಪಾಠಃ ॥

ಧಿಷಾ ಯದಿ ಧಿಷಣ್ಯಂತಃ ಸರಣ್ಯಾನ್ತ್ಸದಂತೋ ಅದ್ರಿಮೌಶಿಜಸ್ಯ ಗೋಹೇ।
ಆ ದುರೋಷಾಃ ಪಾಸ್ತ್ಯಸ್ಯ ಹೋತಾ ಯೋ ನೋ ಮಹಾನ್ತ್ಸಂವರಣೇಷು
ವಹ್ನಿಃ ॥ ೬ ॥

॥ ಪದಪಾಠಃ ॥

ಧಿಷಾ। ಯದಿ। ಧಿಷಣ್ಯಂತಃ। ಸರಣ್ಯಾನ್। ಸದಂತಃ। ಅದ್ರಿಂ। ಔಶಿಜಸ್ಯ। ಗೋಹೇ।
ಆ। ದುರೋಷಾಃ। ಪಾಸ್ತ್ಯಸ್ಯ। ಹೋತಾ। ಯಃ। ನಃ। ಮಹಾನ್। ಸಂಽವರಣೇಷು। ವಹ್ನಿಃ ॥೬॥

॥ ಸಾಯಣಭಾಷ್ಯಂ ॥

ಧಿಷಣ್ಯಂತೋ ಧಿಷಣಾಮಿಂದ್ರವಿಷಯಾಂ ಸ್ತುತಿಮಿಚ್ಛಂತ ಔಶಿಜಸ್ಯ । ಉಶಿಜಃ ಕಾಮಯಮಾನಾ ಋತ್ವಿಜಃ । ತೇಷಾಂ ಸಂಬಂಧ್ಯೌಶಿಜೋ ಯಜಮಾನಃ । ತಸ್ಯ ಗೋಹೇ ಗೃಹೇ ಸದಂತೋ ನಿಷೀದಂತೋ ಜನಾ ಅದ್ರಿಂ । ಆದೃಣಾತಿ ಶತ್ರೂನಿತ್ಯದ್ರಿರಿಂದ್ರಃ । ತಮಿಂದ್ರಂ ಧಿಷಾ ಸ್ತುತ್ಯಾ ಯದಿ ಯದಾ ಸರಣ್ಯಾನ್ ಉಪಾಗಚ್ಛೇಯುಃ ತದಾ ಸ ಇಂದ್ರ ಆ ಯಾತು । ನೋಽಸ್ಮಾಕಂ ಸಂವರಣೇಷು ಶತ್ರುಸಂಬಂಧಿಷು ನಿರೋಧೇಷು ವಹ್ನಿರ್ವೋಢಾ ಪಾಸ್ತ್ಯಸ್ಯ ಪಸ್ತ್ಯೇ ಗೃಹೇ ವಸತಾ ಯಜಮಾನೇನ ಹೋತಾಹ್ವಾತಾ ದುರೋಷಾ ದುಸ್ತರಕ್ರೋಧೋ ಯ ಇಂದ್ರೋ ಮಹಾನ್ಪ್ರಭೂತೋ ಭವತಿ । ಸ ಆಯಾತ್ವಿತಿ ॥

॥ ಪ್ರತಿಪದಾರ್ಥ ॥

ಧಿಷಣ್ಯಂತಃ—ಇಂದ್ರನನ್ನು ಸ್ತುತಿಸಲಿಚ್ಛಿಸುವವರೂ । ಔಶಿಜಸ್ಯ—ಋತ್ವಿಕ್ಕುಗಳ ಸಂಬಂಧಿಯಾದ ಯಜಮಾನನ । ಗೋಹೇ—ಯಜ್ಞಗೃಹದಲ್ಲಿ । ಸದಂತಃ—ಕುಳಿತಿರುವವರೂ ಆದ ಸ್ತೋತೃಗಳು । ಅದ್ರಿಂ—ಶತ್ರುನಾಶಕನಾದ ಇಂದ್ರನನ್ನು । ಧಿಷಾ—ಸ್ತುತಿಯಿಂದ । ಯದಿ—ಯಾವಾಗ । ಸರಣ್ಯಾನ್—ಸಮೀಪಿಸುವರೋ (ಆಗ) । ಆ (ಯಾತು)—ಇಂದ್ರನು ದಯಮಾಡಲಿ । ಸಂವರಣೇಷು—ಶತ್ರುಗಳೊಡನೆ ಹೋರಾಡುವ ಕಾಲದಲ್ಲಿ । ನಃ—ನಮ್ಮ । ವಹ್ನಿಃ—ವಾಹಕನೂ (ರಕ್ಷಕನೂ) । ಪಾಸ್ತ್ಯಸ್ಯ—ಯಜ್ಞಗೃಹದಲ್ಲಿರುವ ಯಜಮಾನನಿಗೆ । ಹೋತಾ—ಹೋತೃವಾಗಿರುವವನೂ । ದುರೋಷಾಃ—ತಡೆಯಲಸಾಧ್ಯವಾದ ಕ್ರೋಧವುಳ್ಳವನೂ ಆದ । ಯಃ—ಯಾವ ಇಂದ್ರನು । ಮಹಾನ್—ಮಹದ್ಗುಣಗಳಿಂದ ಕೂಡಿದ್ದಾನೆಯೋ (ಆ ಇಂದ್ರನು ದಯಮಾಡಲಿ).

॥ ಭಾವಾರ್ಥ ॥

ಇಂದ್ರನನ್ನು ಸ್ತುತಿಸಲಿಚ್ಛಿಸುವವರೂ, ಋತ್ವಿಕ್ಕುಗಳಿಗೆ ಸಂಬಂಧಿಯಾದ ಯಜಮಾನನ ಯಜ್ಞಗೃಹದಲ್ಲಿ ಕುಳಿತಿರುವವರೂ ಆದ ಸ್ತೋತೃಗಳು ಶತ್ರುನಾಶಕನಾದ ಇಂದ್ರನನ್ನು ಸ್ತುತಿಯಿಂದ ಯಾವಾಗ ಸಮೀಪಿಸುವರೋ ಆಗ ಇಂದ್ರನು ನಮ್ಮಲ್ಲಿಗೆ ಬರಲಿ. ಶತ್ರುಗಳೊಡನೆ ಹೋರಾಡುವ ಕಾಲದಲ್ಲಿ ನಮ್ಮ ರಕ್ಷಕನೂ, ಯಜಮಾನನಿಗೆ ಹೋತೃವೂ, ತಡೆಯಲಸಾಧ್ಯವಾದ ಕೋಪವುಳ್ಳವನೂ ಆದ ಯಾವ ಇಂದ್ರನು ಮಹದ್ಗುಣಗಳಿಂದ ಕೂಡಿರುವನೋ, ಆ ಇಂದ್ರನು ಬರಲಿ.

## English Translation.

When the repeaters of (his) commendations, abiding in the dwelling of the worshipper, approach Indra with praise, may he who is our (great) sustainer in conflicts, whose wrath is difficult to be (appeased), become the ministering priest of the master of the house.

॥ ವಿಶೇಷವಿಷಯಗಳು ॥

ಧಿಷಣ್ಯಂತಃ ಔಶಿಜಸ್ಯ ಗೋಹೇ ಸದಂತಃ ಅದ್ರಿಂ ಧಿಷಾ ಯದಿ ಸರಣ್ಯಾನ್ ಆ (ಯಾತು)— ಧಿಷಣಾ ಎಂಬ ಶಬ್ದವು ವಾಙ್ನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೩). ಸ್ತುತಿರೂಪವಾದ ವಾಕ್ಕೆಂದರ್ಥವು. ಧಿಷಣ್ಯಂತಃ ಎಂದರೆ ಸ್ತುತಿರೂಪವಾದ ವಾಕ್ಯಗಳಿಂದ ಇಂದ್ರನನ್ನು ಸ್ತೋತ್ರಮಾಡಬೇಕೆಂದು ಬಯಸುವ ಎಂದರ್ಥವು. ಉಶಿಕ್‌ಶಬ್ದವು ಕಾಂತಿಕರ್ಮನಾಮಗಳಲ್ಲಿಯೂ, (ನಿ. ೩-೯) ಮೇಧಾವಿನಾಮಗಳಲ್ಲಿಯು (ನಿ. ೩-೧೫) ಪಠಿತ ವಾಗಿದೆ. ಇಲ್ಲಿ ಮೇಧಾವಿಗಳಾದ ಋತ್ವಿಕ್ಕುಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಋತ್ವಿಕ್ಕುಗಳಿಗೂ ಯಜ್ಞ ಮಾಡುವ ಯಜಮಾನನಿಗೂ ನಿಕಟಸಂಬಂಧವಿರುವುದರಿಂದ ಇಲ್ಲಿ ಯಜಮಾನನ ಎಂಬ ಅರ್ಥವನ್ನು ಸೂಚಿಸುವುದ ಕ್ಕಾಗಿ ಔಶಿಜಸ್ಯ ಎಂಬ ಶಬ್ದಪ್ರಯೋಗವಿದೆ. ಗೋಹ ಎಂಬ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿಲ್ಲವಾದರೂ ಭಾಷ್ಯಕಾರರು ಈ ಶಬ್ದಕ್ಕೆ ಗೃಹವೆಂದು ಅರ್ಥಮಾಡಿದಾರೆ. ಯಜಮಾನನ ಯಜ್ಞಗೃಹದಲ್ಲಿ ಋತ್ವಿಜರು ಕುಳಿತು ಕೊಂಡು ಇಂದ್ರನನ್ನು ಸ್ತುತಿರೂಪವಾದ ವಾಕ್ಯಗಳಿಂದ ಕರೆಯುವಾಗ ಇಂದ್ರನು ಈ ಯಜ್ಞಭೂಮಿಗೆ ಬರಲಿ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು. ಈ ವಾಕ್ಯದಲ್ಲಿ ಕ್ರಿಯಾಪದವಿಲ್ಲದಿರುವುದರಿಂದಲೂ ಆ ಎಂಬ ಉಪಸರ್ಗ ಮಾತ್ರವಿರುವುದರಿಂದಲೂ ಯಾತು—ಬರಲಿ ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿ ಅರ್ಥವಿವರಣೆಮಾಡಿರುವರು.

ಸಂವರಣೇಷು ನಃ ವಹ್ನಿಃ ಪಾಸ್ತ್ಯಸ್ಯ ಹೋತಾ ದುರೋಷಾಃ ಯಃ ಮಹಾನ್ (ಸಃ ಆಯಾತು) ಈ ವಾಕ್ಯವು ಇಂದ್ರನಿಗೆ ವಿಶೇಷಣವಾಗಿರುವುದು. ಪಸ್ತ್ಯಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಪಾಸ್ತ್ಯಸ್ಯ ಎಂದರೆ ಗೃಹದಲ್ಲಿರುವ, ಗೃಹದಲ್ಲಿ ವಾಸಿಸುವ ಯಜಮಾನನ ಎಂದರ್ಥವು. ಶತ್ರುಗಳೊಡನೆ ಯುದ್ಧ ಮಾಡುವ ಕಾಲದಲ್ಲಿ ತಡೆಯಲಸಾಧ್ಯವಾದ ಕೋಪದಿಂದ ಶತ್ರುಗಳೊಡನೆ ಹೋರಾಡುತ್ತಾ ನಮ್ಮನ್ನು ರಕ್ಷಿಸುವವನೂ ಯಜಮಾನನಿಂದ ಪ್ರಾರ್ಥಿಸಿ ಕರೆಯಲ್ಪಡುವವನೂ ಮಹತ್ವಗುಣವಿಶಿಷ್ಟನೂ ಆದ ಇಂದ್ರನು ಯಜ್ಞಭೂಮಿಗೆ ಬರಲಿ ಎಂದು ಹಿಂದಿನ ವಾಕ್ಯದೊಡನೆ ಸಂಬಂಧವು.

---

॥ ಸಂಹಿತಾಪಾಠಃ ॥

ಸತ್ರಾ ಯದೀಂ ಭಾರ್ವರಸ್ಯ ವೃಷ್ಣಃ ಸಿಷಕ್ತಿ ಶುಷ್ಮಃ ಸ್ತುವತೇ ಭರಾಯ ।
ಗುಹಾ ಯದೀಮೌಶಿಜಸ್ಯ ಗೋಹೇ ಪ್ರ ಯದ್ಧಿಯೇ ಪ್ರಾಯಸೇ
ಮದಾಯ ॥ ೭ ॥

॥ ಪದಪಾಠಃ ॥

ಸತ್ರಾ । ಯತ್ । ಈಂ । ಭಾರ್ವರಸ್ಯ । ವೃಷ್ಣಃ । ಸಿಸಕ್ತಿ । ಶುಷ್ಮಃ । ಸ್ತುವತೇ । ಭರಾಯ ।
ಗುಹಾ । ಯತ್ । ಈಂ । ಔಶಿಜಸ್ಯ । ಗೋಹೇ । ಪ್ರ । ಯತ್ । ಧಿಯೇ । ಪ್ರ । ಅಯಸೇ । ಮದಾಯ ॥

॥ ಸಾಯಣಭಾಷ್ಯಂ ॥

ಭಾರ್ವರಸ್ಯ । ಭರ್ವರೋ ಜಗದ್ಭರ್ತಾ ಪ್ರಜಾಪತಿಃ । ತಸ್ಯ ಪುತ್ರೋ ಭಾರ್ವರಃ । ತಸ್ಯ ವೃಷ್ಣಃ ಕಾಮಾನಾಂ ವರ್ಷಿತುರಿಂದ್ರಸ್ಯ ಸಂಬಂಧೀ ಈಮೇಷ ಶುಷ್ಮೋ ಬಲಂ ಸ್ತುವತೇ ಸ್ತೋತ್ರಂ ಕುರ್ವಂತಂ ಯಜಮಾನಂ ಸಿಷಕ್ತಿ ಸೇವತ ಇತಿ ಯತ್ತತ್ಸತ್ರಾ ಸತ್ಯಮೇವ । ಈಮೇತದ್ಬಲಮೌಶಿಜಸ್ಯ ಯಜಮಾನಸ್ಯ ಭರಾಯ ಭರ್ತುಂ ಗುಹಾ ಗುಹಾಯಾಂ ಗುಹಾರೂಪೇ ಹೃದಯೇ ಪ್ರ ಭವತೀತಿ ಯತ್ತತ್ಸತ್ಯಂ । ಯಜ-ಮಾನಸ್ಯ ಗೋಹೇ ಗೃಹೇ ಧಿಯೇ ಕರ್ಮಣೇ ಪ್ರ ಭವತೀತಿ ಯತ್ತತ್ಸತ್ಯಂ । ಅಯಸೇ ಗಮನಾಯ ಕಾಮಾನಾಂ ಪ್ರಾಪ್ತಯೇ ಮದಾಯ ಹರ್ಷಾಯ ತತ್ರ ಯದ್ಬಲಂ ಪ್ರಭವತಿ ತತ್ಸತ್ಯಂ । ಇಂದ್ರಸ್ಯ ಬಲಂ ಯಜಮಾನಂ ಸರ್ವದಾ ಪಾಲಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಭಾರ್ವರಸ್ಯ—ಜಗದ್ಭರ್ತೃವಾದ ಪ್ರಜಾಪತಿಯ ಪುತ್ರನೂ । ವೃಷ್ಣಃ—ಕಾಮವರ್ಷಕನೂ ಆದ ಇಂದ್ರನ । ಈಂ ಶುಷ್ಮಃ—ಪ್ರಸಿದ್ಧವಾದ ಬಲವು । ಸ್ತುವತೇ—ಇಂದ್ರನನ್ನು ಸ್ತುತಿಸುವ ಯಜಮಾನನನ್ನು । ಸಿಷಕ್ತಿ ಯತ್—ಸೇವಿಸುತ್ತದೆಯೆಂಬ ಯಾವ ವಿಷಯವು ಪ್ರಸಿದ್ಧವಾಗಿದೆಯೋ ಅದು । ಸತ್ರಾ—ಸತ್ಯವಾಗಿಯೇ ಇದೆ । ಈಂ—ಇದೇ ಬಲವು । ಔಶಿಜಸ್ಯ—ಯಜಮಾನನ । ಭರಾಯ—ಭರಣಕ್ಕೆ ಸಾಹಾಯ್ಯಕವಾಗಲು । ಗುಹಾ—ಗುಹಾರೂಪವಾದ ಹೃದಯದಲ್ಲಿ । ಪ್ರ (ಭವತಿ)—ಪೋಷಿತವಾಗುತ್ತದೆ ಎಂಬ । ಯತ್—ಯಾವ ವಿಷಯವಿದೆಯೋ ಅದೂ ಸಹ ಸತ್ಯವು । ಗೋಹೇ—ಯಜಮಾನನ ಗೃಹದಲ್ಲಿ । ಧಿಯೇ—ಕರ್ಮಾಚರಣೆಗೆ । ಪ್ರ (ಭವತಿ)—ಸಹಾಯಮಾಡುತ್ತದೆಂಬುದು । ಯತ್—ಯಾವುದಿದೆಯೋ ಅದೂ ಪ್ರಸಿದ್ಧವಾಗಿದೆ । ಅಯಸೇ—ಇಷ್ಟಾರ್ಥವನ್ನು ಪಡೆಯುವುದಕ್ಕೂ । ಮದಾಯ—ಹರ್ಷಜನನಕ್ಕೂ ಇದು ಸಾಧಕವಾಗುವುದೆಂಬುದೂ ಸಹ ಸತ್ಯವೇ ಆಗಿದೆ.

॥ ಭಾವಾರ್ಥ ॥

ಜಗದ್ಭರ್ತೃವಾದ ಪ್ರಜಾಪತಿಯ ಪುತ್ರನೂ, ಕಾಮವರ್ಷಕನೂ ಆದ ಇಂದ್ರನ ಪ್ರಸಿದ್ಧವಾದ ಬಲವು ಇಂದ್ರನನ್ನು ಸ್ತುತಿಸುವ ಯಜಮಾನನನ್ನು ಸೇವಿಸುತ್ತದೆ ಎಂಬ ಯಾವ ವಿಷಯವು ಪ್ರಸಿದ್ಧವಾಗಿದೆಯೋ ಅದೂ, ಇದೇ ಬಲವು ಯಜಮಾನನ ರಕ್ಷಣೆಗೂ, ಪೋಷಣೆಗೂ ಸಾಹಾಯ್ಯಕವಾಗಿರಲು ಅವನ ಹೃದಯದಲ್ಲಿ ಧ್ಯಾನರೂಪದಲ್ಲಿ ಪೋಷಿತವಾಗುತ್ತದೆಂಬುದೂ, ಯಜಮಾನನ ಗೃಹದಲ್ಲಿ ಅವನ ಸಕಲ ಕರ್ಮಗಳೂ ಸಾಂಗವಾಗಿ ನೆರವೇರಲು ಅನುಕೂಲಕಾರಿಯೆಂಬ ವಿಷಯವೂ, ಅವನ ಇಷ್ಟಾರ್ಥವು ನೆರವೇರುವುದಕ್ಕೂ ಮತ್ತು ಅವನಿಗೆ ಹರ್ಷಕಾರಕವಾಗಿರುವುದಕ್ಕೂ ಸಾಧಕವಾಗಿರುತ್ತದೆಂಬುದೂ ಸಹ ಸಕಲವೂ ಸತ್ಯವಾಗಿಯೇ ಇರುತ್ತದೆ. ಇದರಲ್ಲಿ ಯಾವುದೂ ಉತ್ಪ್ರೇಕ್ಷೆಯಿಲ್ಲ.

## English Translation.

True it is that this might of the son of the protector of the world, the showerer (of benifits), affects for his advantage the offerer of praise:

it (prevails) in the secret (thoughts) of the worshipper, and in his dwelling, for (the accomplishment of his) pious acts, (the attainment of his) desires, and his delight.

॥ ವಿಶೇಷವಿಷಯಗಳು ॥

ಇಲ್ಲಿ ಭಾರ್ವರಸ್ಯ ಎಂಬ ಶಬ್ದಕ್ಕೆ ಸಾಯಣರು—ಭರ್ವರೋ ಜಗದ್ಭರ್ತಾ ಪ್ರಜಾಪತಿಃ ತಸ್ಯ ಪುತ್ರೋ ಭಾರ್ವರಃ ತಸ್ಯ—ಜಗದ್ಭರ್ತನಾದ ಪ್ರಜಾಪತಿಗೆ ಭರ್ವರನೆಂದೂ ಅವನ ಪುತ್ರನಾದ ಇಂದ್ರನಿಗೆ ಭಾರ್ವರನೆಂದೂ ಅರ್ಥವೆಂದು ಭಾಷ್ಯಕಾರರ ವಿವರಣೆಯಿದೆ. ಯಜುರ್ವೇದಾದಿಗಳಲ್ಲಿ—ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ ಎಂದು ಹೇಳಿರುವುದರಿಂದ ಇಂದ್ರನು ಪ್ರಜಾಪತಿಯ ಪುತ್ರನಾದಂತಾಯಿತು. ಈ ವಿಷಯವನ್ನು ನಾವು ಈ ಭಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ವಿವರಿಸುವಾಗ ಹೇಳಿದೇವೆ. ಇಂತಹ ಕಾಮವರ್ಷಕನಾದ ಇಂದ್ರನ ಬಲವು ಎಂದರೆ ಅನುಗ್ರಹಾತ್ಮಕವಾದ ಬುದ್ಧಿಯು ಯಜ್ಞಮಾಡುವ ಯಜಮಾನನ ವಿಷಯದಲ್ಲಿ ಒಳ್ಳೆಯದನ್ನು ಮಾಡುವುದು ಎಂಬ ವಿಷಯವು ಸತ್ಯವು. ಇಂದ್ರನ ಅಪಾರವಾದ ಮಹಿಮೆಯೂ, ತನ್ನನ್ನು ಸ್ತೋತ್ರಮಾಡುವವರ ವಿಷಯದಲ್ಲಿ ಇಂದ್ರನು ತೋರಿಸುವ ಸಾಹಸಕೃತ್ಯವೂ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಟ್ಟು ಪೋಷಿಸುವುದಲ್ಲದೆ ಅವನನ್ನು ಪೋಷಿಸುತ್ತಾ ಅವನು ಮಾಡುವ ಯಜ್ಞಾದಿಗಳಿಗೆ ಸಹಾಯಮಾಡುತ್ತದೆ ಎಂದೂ ಈ ವಿಧವಾದ ಇಂದ್ರನ ಅನುಗ್ರಹದಿಂದ ಯಜಮಾನನಿಗೆ ಸಂತೋಷವುಂಟಾಗುವುದೆಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ವಿ ಯದ್ವರಾಂಸಿ ಪರ್ವತಸ್ಯ ವೃಣ್ವೇ ಪಯೋಭಿರ್ಜಿನ್ವೇ ಅಪಾಂ ಜವಾಂಸಿ ।

ವಿದದ್ಗೌರಸ್ಯ ಗವಯಸ್ಯ ಗೋಹೇ ಯದೀ ವಾಜಾಯ ಸುಧ್ಯೋ೩ ವಹಂತಿ ॥

॥ ಪದಪಾಠಃ ॥

ವಿ । ಯತ್ । ವರಾಂಸಿ । ಪರ್ವತಸ್ಯ । ವೃಣ್ವೇ । ಪಯಃಽಭಿಃ । ಜಿನ್ವೇ । ಅಪಾಂ । ಜವಾಂಸಿ ।

ವಿದತ್ । ಗೌರಸ್ಯ । ಗವಯಸ್ಯ । ಗೋಹೇ । ಯದಿ । ವಾಜಾಯ । ಸುಽಧ್ಯಃ । ವಹಂತಿ ॥ ೮ ॥

॥ ಸಾಯಣಭಾಷ್ಯಂ ॥

ಇಂದ್ರಃ ಪರ್ವತಸ್ಯ ಮೇಘಸ್ಯ ವರಾಂಸಿ ದ್ವಾರಾಣಿ ವಿ ವೃಣ್ವೇ ವಿವೃತಾನಿ ಕೃತವಾನಿತಿ ಯತ್ । ಅಪಾಮುದಕಾನಾಂ ಜವಾಂಸಿ ವೇಗಾನ್ಪಯೋಭಿರ್ಜಲೈರ್ಜಿನ್ವೇ ಪ್ರಾಯಯತೀತಿ ಯತ್ । ಯದಿ ಯದಾ

ಸುಧ್ಯಃ ಶೋಭನಕರ್ಮಾಣೋ ಯಜಮಾನಾ ವಾಜಾಯಾನ್ನಾಯ ವಹಂತಿ ಇಂದ್ರಂ ಪ್ರಾಪ್ನುವಂತಿ ತದಾ ಗೋಹೇ ಗೃಹೇ ಗೌರಸ್ಯ ಗೌರಮೃಗಸ್ಯ ಗವಯಸ್ಯ ಗವಯಮೃಗಸ್ಯ ಚ ವಿದತ್ ತೌ ದ್ವೌ ಪಶೂ ಲಭತ ಇತಿ ಯತ್ । ತತ್ಸರ್ವಂ ಸತ್ರೇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । ಪರ್ವತಸ್ಯ—ಮೇಘದ । ವರಾಂಸಿ—ದ್ವಾರಗಳನ್ನು । ವಿ ವೃಣ್ವೇ—ತೆರೆದನು ಎಂಬ । ಯತ್—ಯಾವ ವಿಷಯವುಂಟೋ ಅದೂ । ಅಪಾಂ—ಉದಕಗಳ । ಜವಾಂಸಿ – ವೇಗ ಯುತವಾದ ಪ್ರವಾಹಗಳನ್ನು । ಪಯೋಭಿಃ—ಉದಕಗಳಿಂದ । ಜಿನ್ವೇ—ತುಂಬುತ್ತಾನೆಂಬುದು ಯಾವುದುಂಟೋ ಅದೂ । ಯದಿ—ಯಾವಾಗ । ಸುಧ್ಯಃ - ಶ್ರೇಷ್ಠವಾದ ಕರ್ಮಕರ್ತರಾದ ಯಜಮಾನರು । ವಾಜಾಯ—ಅನ್ನಕ್ಕಾಗಿ । ವಹಂತಿ—ಇಂದ್ರನನ್ನು ಸಮೀಪಿಸಿರುತ್ತಾರೋ ಆಗ । ಗೌರಸ್ಯ—ಗೌರಾಖ್ಯವಾದ ಮೃಗದ (ಮತ್ತು) । ಗವಯಸ್ಯ—ಗವಯವೆಂಬ ಮೃಗದ । ಗೋಹೇ—ಗುಹಾರೂಪವಾದ ಗೃಹದಲ್ಲಿ । ವಿದತ್—ಅದನ್ನು ಪಡೆದನು ಎಂಬುದು ಯಾವುದುಂಟೋ ಅದೆಲ್ಲವೂ ಸತ್ಯವಾಗಿಯೇ ಇದೆ.

॥ ಭಾವಾರ್ಥ ॥

ಇಂದ್ರನು ಮೇಘದ ದ್ವಾರಗಳನ್ನು ತೆರೆದನು ಎಂಬ ಯಾವ ವಿಷಯವುಂಟೋ ಅದೂ, ಉದಕಗಳ ವೇಗ ಯುತವಾದ ಪ್ರವಾಹಗಳನ್ನು ಉದಕಗಳಿಂದ ತುಂಬುತ್ತಾನೆಂಬುದು ಯಾವುದುಂಟೋ ಅದೂ ಮತ್ತು ಶ್ರೇಷ್ಠವಾದ ಕರ್ಮಕರ್ತರಾದ ಯಜಮಾನರು ಅನ್ನಕ್ಕಾಗಿ ಇಂದ್ರನನ್ನು ಸಮೀಪಿಸಿದಾಗ ಗೌರಾಖ್ಯವೂ ಗವಯಾಖ್ಯವೂ ಆದ ಮೃಗಗಳ ಗುಹಾರೂಪವಾದ ಗೃಹದಲ್ಲಿ ಅನ್ನವನ್ನು ಕಂಡುಹಿಡಿದನು ಎಂಬ ಯಾವ ವಿಷಯವುಂಟೋ ಅವೆಲ್ಲವೂ ಸತ್ಯವಾಗಿಯೇ ಇವೆ.

## English Translation.

Inasmuch as he has opened the doors of the cloud, and has supplied the rapid courses of the waters with (additional) torrents, so when the pious have recourse to Indra for food, he finds (it) in the haunt of the Gaura and Gavaya.

॥ ವಿಶೇಷವಿಷಯಗಳು. ॥

ಹಿಂದಿನ ಋಕ್ಕಿನಂತೆ ಈ ಋಕ್ಕಿನ ಅರ್ಥವಿವರಣೆಯೂ ಸ್ವಲ್ಪ ತೊಡಕಾಗಿಯೇ ಇರುವುದು. ಮುಖ್ಯಾಭಿ ಪ್ರಾಯವೇನೆಂದರೆ—ಯಜ್ಞಮಾಡುವ ಯಜಮಾನನು ಅನ್ನಾದ್ಯಾಹಾರಗಳಿಗಾಗಿ ಇಂದ್ರನನ್ನು ಸಮೀಪಿಸಿ ಪ್ರಾರ್ಥಿಸುವಾಗ ಇಂದ್ರನು ವೃಷ್ಟ್ಯುದಕಗಳನ್ನು ತಡೆದಿದ್ದ ಮೇಘಗಳನ್ನು (ಒಳಗೆ ಬಂಧಿತವಾಗಿದ್ದ ಪ್ರಾಣಿ ಯನ್ನು ಬಾಗಿಲು ತೆಗೆದು ಈಚೆಗೆ ಬಿಡುವಂತೆ) ಮಳೆ ಹುಯ್ಯುವಂತೆ ಮಾಡಿ ಆ ಉದಕಗಳು ನದಿಗಳ ಪ್ರವಾಹಗಳಲ್ಲಿ ಹರಿಯುವಂತೆ ಮಾಡಿದನು. ಈ ವಿಧವಾದ ವೃಷ್ಟಿಪ್ರದಾನಕರ್ಮದಿಂದ ಯಜಮಾನನಿಗೆ ಸಸ್ಯಾದ್ಯಾಹಾರ

ಗಳನ್ನು ಒದಗಿಸಿದಂತಾಯಿತು. ಇದಲ್ಲದೆ **ಗೌರಸ್ಯ ಗವಯಸ್ಯ ಗೋಹೇ ವಿದತ್**—ಗೌರ ಮತ್ತು ಗವಯು ಎಂಬ ಪಶುಗಳನ್ನು ಆಹಾರಕ್ಕಾಗಿ ಒದಗಿಸಿಕೊಟ್ಟನು ಎಂದು ಹೇಳಿದೆ. ಗೌರ ಮತ್ತು ಗವಯ ಎಂಬಿವು ಒಂದು ವಿಧ ಜಾತಿಯ ಕಾಡೆತ್ತುಗಳೆಂದು ಹೇಳಲಾಗಿದೆ. ಕೆಲವರು ಇವು ಅರಣ್ಯದಲ್ಲಿ ಸಂಚರಿಸುವ ಒಂದು ಜಾತಿಯ ಮೃಗ ಗಳೆಂದೂ ಇವುಗಳ ಮಾಂಸವು ಮನುಷ್ಯನ ಆಹಾರಕ್ಕಾಗಿ ಉಪಯೋಗಿಸಲ್ಪಡುವುದೆಂದೂ ಹೇಳುತ್ತಾರೆ. ಇಂದ್ರನು ಈ ಮೃಗಗಳನ್ನು ಯಜಮಾನನ ಆಹಾರಕ್ಕಾಗಿ ಅಥವಾ ಯಜ್ಞಪಶುಗಳಿಗಾಗಿ ಒದಗಿಸಿಕೊಟ್ಟನು ಎಂದಭಿಪ್ರಾಯವು.

**ಗವಯಃ ಗೌರಃ**—ಎಂಬ ಶಬ್ದಗಳು ಅಶ್ವಮೇಧಯಜ್ಞದಲ್ಲಿ ಹೇಳಿರುವ ಪಶುಗಳ ಪಟ್ಟಿಯಲ್ಲಿ ಸೇರಿರು ವುದು. ಈ ವಿಷಯವಾಗಿ ತೈತ್ತಿರೀಯ ಸಂಹಿತೆಯಲ್ಲಿ—

**ಇಂದ್ರಾಯ ರಾಜ್ಞೇ ಸೂಕರೋ ವರುಣಾಯ ರಾಜ್ಞೇ ಕೃಷ್ಣೋ ಯಮಾಯ ರಾಜ್ಞ ಋಶ್ಯ ಋಷಭಾಯ ರಾಜ್ಞೇ ಗವಯಃ ಶಾರ್ದೂಲಾಯ ರಾಜ್ಞೇ ಗೌರಃ ಪುರುಷರಾಜಾಯ ಮರ್ಕಟಃ ಕ್ಷಿಪ್ರಶ್ಯೇನಸ್ಯ ವರ್ತಿಕಾ ನೀಲಂಗೋಃ ಕ್ರಿಮಿಃ ಸೋಮಸ್ಯ ರಾಜ್ಞಃ ಕುಲುಂಗಃ ಸಿಂಧೋಃ ಶಿಗ್ಂಶುಮಾರೋರ್ಹಿಮವತೋ ಹಸ್ತೀ ॥**

(ತೈ. ಸಂ ೫-೫-೧೧-೧)

ಮತ್ತು ಯಜುರ್ವೇದ ತೈತ್ತಿರೀಯ ಸಂಹಿತೆಯ ಮತ್ತೊಂದು ಕಡೆಯಲ್ಲಿಯೂ,

**ಗವಯಮಾರಣ್ಯಮನು ತೇ ದಿಶಾಮಿ ತೇನ ಚಿನ್ವಾನಸ್ತನುವೋ ನಿಷೀದ ।**

(ತೈ. ಸಂ. ೪-೨-೧೦-೩)

ಎಂದು ಗವಯ ಎಂಬ ಅರಣ್ಯಪಶುವನ್ನು ಅರ್ಪಿಸುವ ವಿಷಯವಾಗಿ ಹೇಳಿದೆ. **ಗೌರ ಮತ್ತು ಗವಯ** ಎಂಬ ಪಶುಗಳು (Gayal and Bos gavaeus) ಅರಣ್ಯದಲ್ಲಿ ವಾಸಿಸುವ ಒಂದು ವಿಧವಾದ ಜಿಂಕೆ ಮತ್ತು ಎತ್ತು. ಅಶ್ವಮೇಧ ಯಜ್ಞದಲ್ಲಿ ಉಪಯೋಗಿಸುವ ಸುಮಾರು ೮೧ ಅರಣ್ಯಪಶುಗಳ ಪಟ್ಟಿಯಲ್ಲಿ ತೈ. ಸಂ. ೫-೫-೧೧ರಿಂದ ೨೮ ಅನುವಾಕ ಗಳಲ್ಲಿ ಉಕ್ತವಾಗಿದೆ. ಕನ್ನಡದಲ್ಲಿ ಇವುಗಳಿಗೆ ಸರಿಯಾದ ಹೆಸರುಗಳಿಲ್ಲ. **ಗವಯ** ಎಂದರೆ ಒಂದುಜಾತಿಯ ಕಾಡೆತ್ತು. ಇದರ ಹೆಸರು ಋಗ್ವೇದದಲ್ಲಿ ಕೆಲವು ಕಡೆ ಮಾತ್ರ ಉಕ್ತವಾಗಿದೆ. ಆದರೆ ಮೈತ್ರಾಯಣಿಯಸಂಹಿತಾ ೩-೧೪-೧೦; ಕಾಠಕಸಂಹಿತಾ ೧೬-೧೭; ವಾಜಸನೇಯಸಂಹಿತಾ ೨೪-೨೮; ಐತರೇಯ ಬ್ರಾಹ್ಮಣ ೨-೮; ೩-೩೪; ಶತಪಥ ಬ್ರಾಹ್ಮಣ ೧-೨-೩-೯; ಸಾಂಖ್ಯಾಯನಶ್ರೌತ ಸೂತ್ರ ೩-೧೪ ಇತ್ಯಾದಿ ಸ್ಥಳಗಳಲ್ಲಿ ಈ **ಗವಯ**ಶಬ್ದದ ಪ್ರಯೋಗ ವಿರುವುದು. ಈ ಶಬ್ದವು ಗೌರ ಎಂಬ ಶಬ್ದದೊಡನೆ ಪ್ರಕೃತಋಕ್ಕಿನಲ್ಲಿಯೂ ಗೌರ ಮತ್ತು ಮಹಿಷ ಎಂಬ ಶಬ್ದ ಗಳೊಡನೆ ವಾ. ಸಂ. ೨೪-೨೮; ೧೩-೪೯ರಲ್ಲಿಯೂ ಮೈತ್ರಾಯಣಿಸಂಹಿತಾ ೨-೭-೧೭; ಕಾಠಕಸಂಹಿತಾ ೧೬-೧೭ ರಲ್ಲಿಯೂ ಪಠಿತವಾಗಿದೆ.

ಗೌರ ಎಂಬುದು ಸಹ ಒಂದು ಜಾತಿಯ ಕಾಡೆತ್ತು (Bos gaurus) ಇದು ಸಾಧಾರಣವಾಗಿ **ಗವಯ** ಶಬ್ದದೊಡನೆ ಋಗ್ವೇದ ೧-೧೬-೫, ೪-೨೧-೮; ೪-೫೮-೨; ೫-೭೮-೨; ೭-೬೯-೬; ೭-೯೮-೧ ಇತ್ಯಾದಿ ಸ್ಥಳಗಳಲ್ಲಿ ಉಕ್ತವಾಗಿದೆ. ಮೈತ್ರಾಯಣೀಯಸಂಹಿತಾ ೩-೧೪-೧೦; ವಾಜಸನೇಯ ಸಂಹಿತಾ ೨೪-೨೮;

ಐತರೇಯಬ್ರಾಹ್ಮಣ ೩-೩೪ ಇತ್ಯಾದಿಸ್ಥಳಗಳಲ್ಲೂ ಈ ಶಬ್ದದ ಪ್ರಯೋಗವಿದೆ. ಇದು ಅರಣ್ಯಮೃಗವೆಂದು ವಾ. ಸಂ. ೧೩-೪೮ರಲ್ಲಿ ಹೇಳಿದೆ. ಗೌರಿ ಎಂಬ ಹೆಣ್ಣುಮೃಗದ ಹೆಸರು ಋ. ಸಂ. ೧-೮೪-೧೦ ; ೪-೧೨-೬ ; ೯-೧೨-೩ ; ೧-೧೬೪-೧೧ ಎಂಬ ಋಕ್ಕುಗಳಲ್ಲಿದೆ. ಗೌರಮೃಗ ಎಂಬ ಹೆಸರೂ ಸಹ ವಾಜಸನೇಯಸಂಹಿತಾ ೨೪-೩೨ ; ಐತರೇಯ ಬ್ರಾಹ್ಮಣ ೨-೮ ಎಂಬ ಸ್ಥಳಗಳಲ್ಲಿದೆ.



॥ ಸಂಹಿತಾಪಾಠಃ ॥

ಭದ್ರಾ ತೇ ಹಸ್ತಾ ಸುಕೃತೋತ ಪಾಣೀ ಪ್ರಯಂತಾರಾ ಸ್ತುವತೇ ರಾಧ ಇಂದ್ರ ।
ಕಾ ತೇ ನಿಷತ್ತಿಃ ಕಿಮು ನೋ ಮಮತ್ಸಿ ಕಿಂ ನೋದುದು ಹರ್ಷಸೇ ದಾತವಾ ಉ ॥ ೯ ॥

॥ ಪದಪಾಠಃ ॥

ಭದ್ರಾ । ತೇ । ಹಸ್ತಾ । ಸುऽಕೃತಾ । ಉತ । ಪಾಣೀ ಇತಿ । ಪ್ರऽಯಂತಾರಾ । ಸ್ತುವತೇ । ರಾಧಃ । ಇಂದ್ರ । ಕಾ । ತೇ । ನಿऽಸತ್ತಿಃ । ಕಿಂ । ಊಂ ಇತಿ । ನೋ ಇತಿ । ಮಮತ್ಸಿ । ಕಿಂ । ನ । ಉತ್ऽಉತ್ । ಊಂ ಇತಿ । ಹರ್ಷಸೇ । ದಾತವೈ । ಊಂ ಇತಿ ॥ ೯ ॥

॥ ಸಾಯಣಭಾಷ್ಯಂ ॥

ಅಭ್ಯುದಯೇಷ್ಟಾವಿಂದ್ರಸ್ಯ ಪ್ರದಾತುರ್ಭದ್ರಾ ತೇ ಹಸ್ತೇತಿ ಯಾಜ್ಯಾ । ಸೂತ್ರಿತಂ ಚ । ದೀರ್ಘಸ್ತೇ ಅಸ್ತ್ವಂಕುಶೋ ಭದ್ರಾ ತೇ ಹಸ್ತಾ ಸುಕೃತೋತ ಪಾಣೀ । ಆ. ೩-೧೩ । ಇತಿ ॥

ಹೇ ಇಂದ್ರ ತೇ ತ್ವದೀಯೌ ಭದ್ರಾ ಭದ್ರೌ ಕಲ್ಯಾಣೌ ಹಸ್ತಾ ಹಸ್ತೌ ಸುಕೃತಾ ಸುಕೃತೌ ಶೋಭನ-ಕರ್ಮಾಣೌ ಭವತಃ । ಉತಾಪಿ ಚ ಪಾಣೀ ತ್ವದೀಯೌ ಹಸ್ತೌ ಸ್ತುವತೇ ಸ್ತೋತ್ರೇ ಯಜಮಾನಾಯ ರಾಧೋ ಧನಂ ಪ್ರಯಂತಾರಾ ಪ್ರಯಂತಾರೌ ಪ್ರದಾತಾರೌ ಭವತಃ । ಹೇ ಇಂದ್ರ ತೇ ತ್ವದೀಯಾ ನಿಷತ್ತಿರ್ನಿಷದನಂ ಸ್ಥಿತಿಃ ಕಾ । ತ್ವಮಸ್ಮಾನ್ ಕಿಮು ಕಿಮರ್ಥಂ ನೋ ಮಮತ್ಸಿ । ನ ಮಾದಯಸಿ । ಕಿಮುದುದು ಕಿಮರ್ಥಮೇವ ದಾತವಾ ಅಸ್ಮಾಕಂ ಧನಂ ದಾತುಂ ನ ಹರ್ಷಸೇ । ಹೃಷ್ಟೋ ನ ಭವಸಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಭದ್ರಾ—ಕಲ್ಯಾಣಕಾರಕವಾದ । ಹಸ್ತಾ—ಹಸ್ತಗಳು । ಸುಕೃತಾ—ಶ್ರೇಷ್ಠವಾದ ಕರ್ಮಗಳನ್ನು ಮಾಡತಕ್ಕವು । ಉತ—ಮತ್ತು । ಪಾಣೀ—ನಿನ್ನ ಹಸ್ತಗಳು । ಸ್ತುವತೇ—ಸ್ತೋತ್ರಮಾಡುವ ಯಜಮಾನನಿಗೆ । ರಾಧಃ—ಧನವನ್ನು । ಪ್ರಯಂತಾರಾ—ಒದಗಿಸಿಕೊಡುತ್ತವೆ । (ಇಂದ್ರ—ಎಲೈ ಇಂದ್ರನೇ) । ತೇ—ನಿನ್ನ । ನಿಷತ್ತಿಃ—ಸ್ಥಿತಿಯು । ಕಾ—ಯಾವ ಪ್ರಕಾರವುಳ್ಳದ್ದು ? । ಕಿಮು—ಏತಕ್ಕೋಸ್ಕರ । ನೋ ಮಮತ್ಸಿ—ನಮ್ಮನ್ನು ಹರ್ಷಗೊಳಿಸುವುದಿಲ್ಲ ? । ಕಿಂ ಉದುದು—ಖಂಡಿತ ಏತಕ್ಕಾಗಿ । ದಾತವೈ—ನಮಗೆ ಧನವನ್ನು ಕೊಡಲು । ನ ಹರ್ಷಸೇ—ಹರ್ಷಿತನಾಗುವುದಿಲ್ಲ ?

॥ ಭಾವಾರ್ಥ ॥

ಎಲೈ ಇಂದ್ರನೇ, ಕಲ್ಯಾಣಕಾರಕಗಳಾದ ನಿನ್ನ ಹಸ್ತಗಳು ಶ್ರೇಷ್ಠವಾದ ಕರ್ಮಗಳನ್ನು ಮಾಡತಕ್ಕವಾಗಿವೆ. ನಿನ್ನ ಹಸ್ತಗಳು ಸ್ತೋತ್ರಮಾಡುವ ಯಜಮಾನನಿಗೆ ಧನವನ್ನು ಒದಗಿಸತಕ್ಕವಾಗಿವೆ. ಎಲೈ ಇಂದ್ರನೇ, ನಿನ್ನ ಸ್ಥಿತಿಯು ಯಾವ ಪ್ರಕಾರವುಳ್ಳದ್ದು ? ನೀನು ಏತಕ್ಕಾಗಿ ನಮ್ಮನ್ನು ಇನ್ನೂ ಹರ್ಷಗೊಳಿಸಿಲ್ಲ. ನಮಗೆ ಧನವನ್ನು ಕೊಡಲು ನಿನಗೆ ಏತಕ್ಕಾಗಿ ಹರ್ಷವಿಲ್ಲ?

English Translation.

Your auspicious hands, Indra, are the doers of good deeds: your two hands, Indra, are the extenders of wealth to him who praises you: what, Indra, is this delay ? why do you not exhilarate us ? why are you not delighted to make us gifts ?

॥ ವಿಶೇಷವಿಷಯಗಳು ॥

ಆಭ್ಯುದಯೇಷ್ಟಿಯಲ್ಲಿ ಇಂದ್ರನನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಭದ್ರಾ ತೇ ಹಸ್ತಾ ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ದೀರ್ಘಸ್ತೇ ಅಸ್ತ್ವಂಕುಶೋ ಭದ್ರಾ ತೇ ಹಸ್ತಾ ಸುಕೃತೋತ ಪಾಣೀ ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು.

ಈ ಋಕ್ಕಿನಲ್ಲಿ ಋಷಿಯು ಇಂದ್ರನ ಹಸ್ತಗಳು ಯಜಮಾನನಿಗೆ ಧನಾದಿಗಳನ್ನು ಕೊಡುವುವೆಂದು ಎಂದರೆ, ಕೊಡುವ ಸಾಮರ್ಥ್ಯವಿರುವುದೆಂದು ಪ್ರಶಂಸೆಮಾಡಿ, ಹೀಗಿದ್ದರೂ ಇಂದ್ರನು ನಮಗೆ ಏತಕ್ಕಾಗಿ ಧನಾದಿಗಳನ್ನು ಕೊಡುವುದಿಲ್ಲ? ಏತಕ್ಕೆ ನಮಗೆ ಸಂತೋಷವನ್ನುಂಟುಮಾಡುವುದಿಲ್ಲ ಎಂದು ಪ್ರಶ್ನಿಸಿದಾನೆ. ಎಂದರೆ, ಇಂದ್ರನಿಗೆ ಧನಾದಿಗಳನ್ನು ಕೊಡುವ ಸಾಮರ್ಥ್ಯವಿದ್ದರೂ ಅವುಗಳನ್ನು ನಮಗೆ ಒದಗಿಸುವುದರಲ್ಲಿ ಏತಕ್ಕೆ ಸಾವಕಾಶಮಾಡುತ್ತಾನೆಯೋ ತಿಳಿಯದು ಎಂಬ ಭಾವನೆಯನ್ನು ಋಷಿಯು ವ್ಯಕ್ತಪಡಿಸಿದಾನೆ.



॥ ಸಂಹಿತಾಪಾಠಃ ॥

ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾಡ್ಢಂತಾ ವೃತ್ರಂ ವರಿವಃ ಪೂರವೇ ಕಃ ।
ಪುರುಷ್ಟುತ ಕ್ರತ್ವಾ ನಃ ಶಗ್ಧಿ ರಾಯೋ ಭಕ್ಷೀಯ ತೇಽವಸೋ ದೈವ್ಯಸ್ಯ ॥೧೦॥

॥ ಪದಪಾಠಃ ॥

ಏವ । ವಸ್ವಃ । ಇಂದ್ರಃ । ಸತ್ಯಃ । ಸಂಽರಾಟ್ । ಹಂತಾ । ವೃತ್ರಂ । ವರಿವಃ । ಪೂರವೇ । ಕರಿತಿ ಕಃ ।
ಪುರುಽಸ್ತುತ । ಕ್ರತ್ವಾ । ನಃ । ಶಗ್ಧಿ । ರಾಯಃ । ಭಕ್ಷೀಯ । ತೇ । ಅವಸಃ । ದೈವ್ಯಸ್ಯ ॥ ೧೦ ॥

॥ ಸಾಯಣಭಾಷ್ಯಂ ॥

ಇಂದ್ರಸ್ಯ ವಾರ್ತ್ರಘ್ನಸ್ಯ ಪಶಾವೇವಾ ವಸ್ವ ಇತಿ ಹವಿಷೋ ಯಾಜ್ಯಾ । ಸೂತ್ರಿತಂ ಚ । ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾಡ್ಯದ್ವಾಗ್ವದಂತ್ಯವಿಚೇತನಾನಿ । ಆ. ೩-೮ । ಇತಿ ॥

ಏವ್ಯೇವಮುಕ್ತಪ್ರಕಾರೇಣ ಸ್ತೂಯಮಾನಃ ಸತ್ಯಃ ಸತ್ಯವಾನ್ವಸ್ವೋ ಧನಸ್ಯ ಸಮ್ರಾಡೀಶ್ವರೋ ವೃತ್ರಂ ವೃತ್ರನಾಮಾನಮಸುರಂ ಹಂತಾ ಹಿಂಸಿತೇಂದ್ರಃ ಪೂರವೇ ಮನುಷ್ಯಾಯ ಯಜಮಾನಾಯ ವರಿವೋ ಧನಂ ಕಃ । ಕರೋತಿ । ದದಾತೀತ್ಯರ್ಥಃ । ಕ್ರತ್ವಾ ಕರ್ಮಣಾ ಸ್ತುತಿಹೇತುನಾ ಹೇ ಪುರುಷ್ಟುತ ಬಹುಭಿರ್ಯಜಮಾನೈಃ ಸ್ತುತೇಂದ್ರ ತ್ವಂ ನೋಽಸ್ಮಭ್ಯಂ ರಾಯೋ ಧನಾನಿ ಶಗ್ಧಿ । ದೇಹಿ । ತೇ ತ್ವಯಾ ದೀಯಮಾನಸ್ಯ ದೈವ್ಯಸ್ಯ ದೇವಸಂಬಂಧಿನೋಽವಸೋಽನ್ನಸ್ಯ ॥ ಕರ್ಮಣಿ ಷಷ್ಠೀ ॥ ಅನ್ನಂ ಭಕ್ಷೀಯ । ಅಹಂ ಭಜೇಯ ॥

॥ ಪ್ರತಿಪದಾರ್ಥ ॥

ಏವಾ—ಮೇಲೆ ವರ್ಣಿತವಾದಂತೆ ಸ್ತುತನಾಗತಕ್ಕವನೂ । ಸತ್ಯಃ—ಸತ್ಯಾತ್ಮಕನೂ । ವಸ್ವಃ—ಧನಕ್ಕೆ । ಸಮ್ರಾಟ್—ಈಶ್ವರನೂ । ವೃತ್ರಂ—ವೃತ್ರಾಸುರನನ್ನು । ಹಂತಾ—ನಾಶಮಾಡಿದವನೂ ಆದ । ಇಂದ್ರಃ—ಇಂದ್ರನು । ಪೂರವೇ—ಮಾನವನಾದ ಯಜಮಾನನಿಗೆ । ವರಿವಃ—ಧನವನ್ನು । ಕಃ—ಒದಗಿಸಿ ಕೊಡುತ್ತಾನೆ । ಕ್ರತ್ವಾ—ಸ್ತುತಿರೂಪವಾದ ಕರ್ಮಗಳಿಂದ । ಪುರುಷ್ಟುತ—ಅನೇಕರಿಂದ ಸ್ತುತನಾದ ಇಂದ್ರನೇ । ನಃ—ನಮಗೆ । ರಾಯಃ—ಧನಗಳನ್ನು । ಶಗ್ಧಿ—ಕೊಡು । ತೇ—ನಿನ್ನಿಂದ ಕೊಡಲ್ಪಟ್ಟುದೂ । ದೈವ್ಯಸ್ಯ—ದೈವಿಕಸ್ವರೂಪವುಳ್ಳದ್ದೂ ಆದ । ಅವಸಃ—ಅನ್ನದ । ಭಕ್ಷೀಯ—ಭೋಕ್ತೃವಾಗಿ (ನಾನು) ಆಗುವಂತೆ ಅನುಗ್ರಹಿಸು.

॥ ಭಾವಾರ್ಥ ॥

ಅನೇಕ ರೀತಿಯಲ್ಲಿ ಸ್ತುತನಾಗತಕ್ಕವನೂ, ಸತ್ಯಾತ್ಮಕನೂ, ಧನಕ್ಕೆ ಒಡೆಯನೂ, ವೃತ್ರಹಂತಕನೂ ಆದ ಇಂದ್ರನು ಮಾನವನಾದ ಯಜಮಾನನಿಗೆ ಧನವನ್ನು ಒದಗಿಸಿಕೊಡುತ್ತಾನೆ. ಸ್ತುತಿರೂಪವಾದ ಕರ್ಮಗಳಿಂದ

ಅನೇಕರಿಂದ ಸ್ತುತನಾದ ಎಲೈ ಇಂದ್ರನೇ, ನಮಗೆ ಧನಗಳನ್ನು ಕೊಡು. ನಿನ್ನಿಂದ ಕೊಡಲ್ಪಟ್ಟುದೂ, ದೈವಿಕವಾದ ಸ್ವರೂಪ ಮತ್ತು ಸಂಬಂಧವುಳ್ಳದ್ದೂ ಆದ ಅನ್ನವನ್ನು ನಾನು ಭುಜಿಸುವಂತೆ ಅನುಗ್ರಹಿಸು.

## English Translation.

Thus (glorified), Indra, who is faithful (to his word), the lord of wealth, the slayer of Vritra, bestows riches on man; so you, the praised of many, give us riches for our pious acts, that I may eat of your divine food.

॥ ವಿಶೇಷವಿಷಯಗಳು ॥

ವಾರ್ತ್ರಘ್ನ ಎಂಬ ಅಭಿಧಾನದಿಂದ ಕರೆಯಲ್ಪಡುವ ಇಂದ್ರನನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಹವಿಸ್ಸನ್ನು ಹೋಮಮಾಡುವಾಗ ಏವಾ ವಸ್ವಃ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾಡ್ಯದ್ವಾಗ್ವದಂತ್ಯವಿಚೇತನಾನಿ ಎಂಬ ಸೂತ್ರದಿಂದ (ಆ. ೩-೪) ವಿವೃತವಾಗಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ವಾಮದೇವಋಷಿಯು ಇಂದ್ರನನ್ನು ಸ್ತುತಿಸಿ ತನಗೆ ಧನಾದಿಗಳನ್ನೂ ಅನ್ನಾದ್ಯಾಹಾರಗಳನ್ನೂ ಕೊಡಬೇಕೆಂದು ಪ್ರಾರ್ಥಿಸಿದಾನೆ.

॥ ಸಂಹಿತಾಪಾಠಃ ॥

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।
ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥ ೧೧ ॥

॥ ಪದಪಾಠಃ ॥

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।
ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರ್ಋಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಸ್ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನಾದ್ಭಿರ್ನದೀರಿವ ಪೀಪೇಃ ।

ಪ್ಯಾಯಯ । ಪ್ರವೃದ್ಧಂ ಕುರು । ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನು—ಅತಿಶಯವಾಗಿ । ಸ್ತುತಃ—ಹಿಂದಿನ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧೆಯಿಂದ । ಗೃಣಾನಃ—(ನಮ್ಮಿಂದಲೂ) ಸ್ತುತನಾಗತಕ್ಕವನೂ ಆಗಿ । ನದ್ಯಃ ನ—ನದಿಗಳನ್ನು ಉದಕಗಳಿಂದ ತುಂಬುವಂತೆ । ಜರಿತ್ರೇ—ಸ್ತೋತೃವಾದ ನನಗೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು । ಹರಿವಃ—ಹರಿಸಂಜ್ಞಕಗಳಾದ ಅಶ್ವಗಳುಳ್ಳ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಿರ್ಮಿತವಾಗುತ್ತದೆ । ರಥ್ಯಃ—ರಥಗಳನ್ನು ಹೊಂದಿರುವ ನಾವು । ಧಿಯಾ—ಪ್ರಜ್ಞಾಪೂರ್ವಕವಾದ ಸ್ತುತಿಯಿಂದ । ಸದಾಸಾಃ—ನಿನ್ನನ್ನು ಪೂಜಿಸಿ ಹವಿಸ್ಸನ್ನ ರ್ಪಿಸುವವರಾಗಿ । ಸ್ಯಾಮ—ಆಗುವಂತೆ ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಅತಿಶಯವಾಗಿ ಸ್ತುತನಾದವನೂ, ಅದೇ ಶ್ರದ್ಧೆಯಿಂದ ನಮ್ಮಿಂದಲೂ ಸ್ತುತನಾಗತಕ್ಕವನೂ ಆಗಿ ನದಿಗಳನ್ನು ಉದಕಗಳಿಂದ ತುಂಬುವಂತೆ ಸ್ತೋತೃವಾದ ನನಗೆ ಅನ್ನವನ್ನು ತುಂಬಿಕೊಡು. ಹರಿಸಂಜ್ಞಕಗಳಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತೋತ್ರವು ನಿರ್ಮಿತವಾಗುತ್ತದೆ. ರಥಗಳನ್ನು ಹೊಂದಿರುವ ನಾವು ಪ್ರಜ್ಞಾಪೂರ್ವಕವಾದ ಸ್ತುತಿಯಿಂದ ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ ಆಗುವಂತಾಗಲಿ.

## English Translation.

Glorified (in the past), glorified, Indra, at present, satisfy your worshipper with food, as rivers (are filled with water): lord of horses, a new hymn has been made for you: may we, possessed of chariots, be ever diligent in your praise.

॥ ವಿಶೇಷವಿಷಯಗಳು ॥

ಈ ಋಕ್ಕು ಈ ಸೂಕ್ತದಲ್ಲಲ್ಲದೆ ೨೦–೨೪ ನೇ ಸೂಕ್ತಗಳಲ್ಲಿ ಕೊನೆಯ ಋಕ್ಕುಗಳಾಗಿ ಪಠಿತವಾಗಿದೆ.

ಇಂದ್ರ ನು ಸ್ತುತಃ ನು ಗೃಣಾನಃ ನದ್ಯಃ ನ ಜರಿತ್ರೇ ಇಷಂ ಪೀಪೇಃ—ಎಲೈ ಇಂದ್ರನೇ, ನೀನು ಹಿಂದೆ ಅನೇಕ ಋಷಿಗಳಿಂದ ಸ್ತುತಿಸಲ್ಪಟ್ಟಿರುವೆ. ಈಗ ನಮ್ಮಿಂದ ಸ್ತುತಿಸಲ್ಪಡುವೆ. ನದಿಗಳಿಗೆ ವೃಷ್ಟ್ಯುದಕವು ತುಂಬಿ ಪೂರ್ಣವಾಗಿ ಹರಿಯುವಂತೆ ನಿನ್ನನ್ನು ಸ್ತೋತ್ರಮಾಡುವ ನಮಗೆ ಅನ್ನವನ್ನು (ಅನ್ನಾದ್ಯಾಹಾರವನ್ನು) ತುಂಬಿ ಕೊಡು, ಎಂದರೆ ಯಥೇಚ್ಛವಾಗಿ ಕೊಡು.

ನು—ನು ಇತ್ಯೇಷೋಽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧-೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. ಕಥಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ ಅಥಾಪ್ಯುಪಮಾರ್ಥೇ ಭವತಿ । ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿರುವುದು ಉದಾಹರಣೆಗೆ—

ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।
ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ ತಯೋ ರುರುಹುರಿಂದ್ರ ಪೂರ್ವೀಃ ॥
(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ (ನಿ. ೧-೪), ವೃಕ್ಷಸ್ಯ ನು ತೇ । ವೃಕ್ಷಸ್ಯೇವ ತೇ । ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಶಬ್ದಕ್ಕೆ ಉಪಮಾರ್ಥವನ್ನು ಹೇಳಿದೆಯೆಂದು ತಿಳಿಸಿದಾರೆ. ಹೀಗೆಯೇ—

ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।
(ಋ. ಸಂ. ೭-೧೦೦-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂಬ ಶಬ್ದಕ್ಕೆ ಕ್ಷಿಪ್ರಂ ಬೇಗನೆ, ಜಾಗ್ರತೆಯಾಗಿ ಎಂಬರ್ಥವೂ,

ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।
(ಋ. ಸಂ. ೭-೧೯-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂದರೆ ಅದ್ಯ, ಈಗ, ಒಡನೆಯೇ ಎಂಬ ಅರ್ಥವಿರುವುದೆಂದು ನಿರುಕ್ತಕಾರರು ಉದಾಹರಣೆ ಸಹಿತವಾಗಿ ವಿವರಿಸಿದಾರೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರಂ ಬೇಗನೆ, ಶೀಘ್ರವಾಗಿ ಎಂದರ್ಥವು.

ಜರಿತ್ರೇ—ಜರಿತೃಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯) ಜರಿತಾ ಗರಿತಾ (ನಿ. ೧-೭) ಎಂದು ನಿರ್ವಚನವೂ ಇರುವುದರಿಂದ ಜರಿತ್ರೇ ಎಂದರೆ ಇಲ್ಲಿ ಸ್ತೋತ್ರಮಾಡುವ ನನಗೆ ಎಂದರ್ಥವು.

ನ—ನ ಎಂಬ ಶಬ್ದಕ್ಕೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು—

ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯ್ಯಂ । ನೇಂದ್ರಂ ದೇವಮಮಂಸತ ಇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಂ ಇತ್ಯುಪಮಾರ್ಥೀಯಃ । ಉಪರಿಷ್ಟಾದುಪಚಾರಸ್ತಸ್ಯ ಯೇನೋಪಮಿಮೀತೇ ॥ (ನಿ. ೧-೪)

ಎಂದರೆ ನ ಎಂಬ ಶಬ್ದವು ಲೋಕವ್ಯವಹಾರದ ಭಾಷೆಯಲ್ಲಿ ಎಂದರೆ, ವೇದಭಾಷೆಯಲ್ಲದ ಆಧುನಿಕ ಸಂಸ್ಕೃತ ಭಾಷೆಯಲ್ಲಿ ನಿಷೇಧಾರ್ಥದಲ್ಲಿ (ಇಲ್ಲ, ಅಲ್ಲ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು. ಇದು ಎಲ್ಲರಿಗೂ ತಿಳಿದೇ ಇದೆ. ಆದರೆ

ವೇದಗಳಲ್ಲಿ ನಿಷೇಧಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ ನ ಎಂಬ ಶಬ್ದದ ಪ್ರಯೋಗವಿರುವುದು. ಹೇಗೆಂದರೆ— ನೇಂದ್ರಂ ದೇವಮಮಂಸತ ಎಂಬ ವಾಕ್ಯದಲ್ಲಿನ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿರುವುದು. ಪ್ರತಿಷೇಧವೆಂದರೆ ಒಬ್ಬ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಎದುರಿಗೆ ಹೊಗಳದೇ ಇರುವುದು. ಇಂದ್ರನನ್ನು ದೀಪ್ತಿಯುಕ್ತನಾದವನೆಂದು ತಿಳಿಯಲಾಗುವುದಿಲ್ಲ ಎಂಬ ವಾಕ್ಯದಲ್ಲಿ ಇಲ್ಲ (ನ ಎಂಬುದರ ಅರ್ಥ) ಎಂಬ ಶಬ್ದವು ಇಂದ್ರನ ವಿಷಯಕವಾದ ಉಪಚಾರೋಕ್ತಿಗೆ ವಿರುದ್ಧವಾದ ಅರ್ಥವನ್ನು ಸೂಚಿಸುವುದು. ಇದಕ್ಕೆ ಪ್ರತಿಷೇಧಾರ್ಥ ವೆಂದು ಹೆಸರು. ದುರ್ಮದಾಸೋ ನ ಸುರಾಯಾಂ ಎಂಬ ವಾಕ್ಯದಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು (ಹೋಲಿಕೆಯನ್ನು) ಸೂಚಿಸುವುದು. ಮದ್ಯವನ್ನು ಪಾನಮಾಡಿದ ಜನರಂತೆ ದುರಹಂಕಾರವುಳ್ಳವರು ಎಂದು ಈ ವಾಕ್ಯದ ಅರ್ಥವು. ಇಲ್ಲಿ ಒಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳನ್ನು ಮತ್ತೊಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳಿಗೆ ಹೋಲಿಸಿ ಹೇಳುವುದೇ ಉಪಮಾರ್ಥವು. ಮದ್ಯಪಾನಮಾಡಿದವರು ಮತಿಹೀನರಾಗಿ ಅಹಂಕಾರ ದಿಂದ ನೀಚಮಾರ್ಗದಲ್ಲಿ ವರ್ತಿಸುವರು. ಆ ಜನರಂತೆ ದುರಹಂಕಾರವುಳ್ಳವರು ಎಂಬುದೇ ಉಪಮಾರ್ಥವು. ಈ ವಿಧವಾದ ಅರ್ಥಗಳನ್ನು ವೇದಗಳಲ್ಲಿ ನ ಎಂಬ ಪದದಿಂದಲೂ, ಇವ ಎಂಬ ಪದದಿಂದಲೂ ನಿರ್ದೇಶಿಸಲ್ಪಡುವುದು. ಈ ವಿಧವಾದ ಉಪಮಾರ್ಥದಲ್ಲಿ ನ ಎಂಬ ಶಬ್ದದ ಪ್ರಯೋಗವು ವೇದಗಳಲ್ಲಿ ಮಾತ್ರ ಇರುವುದು. ಬಳಸುವ ಭಾಷೆಯಲ್ಲಿಲ್ಲ. ಅದಕ್ಕೆ ಬದಲಾಗಿ ಅಲ್ಲಿ ಇವ ಎಂಬ ಶಬ್ದದ ಪ್ರಯೋಗಮಾತ್ರವಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ವಾಮದೇವಋಷಿಯು ದೇವತೆಗೆ ಹೊಸದಾಗಿ ರಚಿತವಾದ ಸ್ತೋತ್ರವನ್ನರ್ಪಿಸಿ ದೇವತೆಯ ಅನುಗ್ರಹವನ್ನು ಪ್ರಾರ್ಥಿಸಿರುವುದು ಉಕ್ತವಾಗಿದೆ.



## ಇಪ್ಪತ್ತೆರಡನೆಯ ಸೂಕ್ತವು

ತತ್ರ ತೃತೀಯೋನುವಾಕ ಏಕಾದಶ ಸೂಕ್ತಾನಿ । ತತ್ರ ಯನ್ನ ಇಂದ್ರ ಇತ್ಯೇಕಾದಶರ್ಚಂ ಪ್ರಥಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಯನ್ನ ಇತ್ಯನುಕ್ರಮಣಿಕಾ ॥ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರೇ ದ್ವಿತೀಯ- ಮಿದಂ ಸಂಪಾತಸೂಕ್ತಂ । ಸೂತ್ರಿತಂ ಚ । ಏವಾ ತ್ವಾಮಿಂದ್ರ ಯನ್ನ ಇಂದ್ರಃ । ಆ. ೭-೫ । ಇತಿ ॥

ಅನುವಾದವು—ಚತುರ್ಥಮಂಡಲದ ಮೂರನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವವು. ಅವು ಗಳಲ್ಲಿ ಯನ್ನ ಇಂದ್ರಃ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— ಯನ್ನಃ ಎಂದು ಮೊದಲಾಗಿ ಹೇಳಿರುವುದು, ಪೃಷ್ಠ್ಯ ಮತ್ತು ಅಭಿಪ್ಲವ ಷಡಹವೆಂಬ ಯಾಗಗಳ ಮೊದಲನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಗಳ ಮಧ್ಯದಲ್ಲಿ ಪಠಿಸಬೇಕಾದ ಮೂರು ಸಂಪಾತಸೂಕ್ತ ಗಳಲ್ಲಿ ಈ ಸೂಕ್ತವು ಎರಡನೆಯದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—ಏವಾ ತ್ವಾಮಿಂದ್ರ ಯನ್ನ ಇಂದ್ರಃ ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

## ಸೂಕ್ತ—೨೨

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೨ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೭, ೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ವಾಮದೇವಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯನ್ನ ಇಂದ್ರೋ ಜುಜುಷೇ ಯಚ್ಚ ವಷ್ಟಿ ತನ್ನೋ ಮಹಾನ್ಕರತಿ ಶುಷ್ಮ್ಯಾ
ಚಿತ್ ।
ಬ್ರಹ್ಮ ಸ್ತೋಮಂ ಮಘವಾ ಸೋಮಮುಕ್ಥಾ ಯೋ ಅಶ್ಮಾನಂ ಶವಸಾ
ಬಿಭ್ರದೇತಿ ॥ ೧ ॥

॥ ಪದಪಾಠಃ ॥

ಯತ್ । ನಃ । ಇಂದ್ರಃ । ಜುಜುಷೇ । ಯತ್ । ಚ । ವಷ್ಟಿ । ತತ್ । ನಃ । ಮಹಾನ್ । ಕರತಿ । ಶುಷ್ಮೀ । ಆ । ಚಿತ್ ।
ಬ್ರಹ್ಮ । ಸ್ತೋಮಂ । ಮಘಽವಾ । ಸೋಮಂ । ಉಕ್ಥಾ । ಯಃ । ಅಶ್ಮಾನಂ । ಶವಸಾ । ಬಿಭ್ರತ್ । ಏತಿ ॥ ೧ ॥

॥ ಸಾಯಣಭಾಷ್ಯಂ ॥

ಇಂದ್ರೋ ನೋಽಸ್ಮದೀಯಂ ಯದ್ಧವಿರ್ಲಕ್ಷಣಾನ್ನಾದಿಕಂ ಜುಜುಷೇ ಸೇವತೇ ಯಚ್ಚ ಹವಿರಾದಿಕಂ ಚ ವಷ್ಟಿ ಕಾಮಯತೇ ಮಹಾನ್ ಪ್ರಭೂತಃ ಶುಷ್ಮೀ ಬಲವಾನಿಂದ್ರಃ । ಚಿದಿತಿ ಚಾರ್ಥೇ । ಬ್ರಹ್ಮ ಚಿತ್ ಹವಿರ್ಲಕ್ಷಣಪುರೋಡಾಶಾದಿಕಮನ್ನಂ ಚ ಸ್ತೋಮಂ ಸ್ತೋತ್ರಸಮೂಹಂ ಚ ಸೋಮಮಭಿಷುತಂ ಸೋಮಂ ಚೋಕ್ಥೋಕ್ಥಾನಿ ಶಸ್ತ್ರಾಣಿ ಚೇತ್ಯೇವಂಭೂತಂ ತದ್ಬ್ರಹ್ಮಾದಿಚತುಷ್ಟಯಮಾಕರತಿ । ಆಕರೋತು । ಸ್ವೀಕರೋತು । ಮಘವಾ ಧನವಾನ್ । ಅತ್ರಾಶ್ಮಶಬ್ದೋ ವಜ್ರವಾಚೀ । ಅಶ್ಮಾನಂ

ವಜ್ರಂ ಬಿಭ್ರತ್ ಧಾರಯನ್ ಶವಸಾ ಬಲೇನ ಯುಕ್ತೋ ಯ ಇಂದ್ರ ಏತಿ ಆಗಚ್ಛತಿ । ಸ ಇಂದ್ರಃ ಸ್ವೀಕರೋತ್ವಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಮಘವಾ—ಧನವಂತನೂ । ಅಶ್ಮಾನಂ—ವಜ್ರಾಯುಧವನ್ನು । ಬಿಭ್ರತ್—ಧರಿಸಿಕೊಂಡು । ಶವಸಾ—ಬಲದಿಂದ ಕೂಡಿರುವವನೂ ಆದ । ಯಃ—ಯಾವ ಇಂದ್ರನು । ಏತಿ—ಬರುತ್ತಾನೆಯೋ ಅಂತಹ ವನೂ । ಮಹಾನ್—ಮಹತ್ಸ್ವರೂಪವುಳ್ಳವನೂ । ಶುಷ್ಮೀ—ಬಲಶಾಲಿಯೂ ಆದ । ಇಂದ್ರಃ—ಇಂದ್ರನು । ನಃ—ನಮ್ಮ । ಯತ್—ಯಾವ ಹವಿರಾದಿಗಳನ್ನು । ಜುಜುಷೇ—ಸೇವಿಸುತ್ತಾನೆಯೋ । ಯತ್ ಚ—ಯಾವ ಹವಿರಾದಿಗಳನ್ನು । ವಷ್ಟಿ—ಅಪೇಕ್ಷಿಸುತ್ತಾನೆಯೋ ಅಂತಹ । ಬ್ರಹ್ಮಚಿತ್—ಪುರೋಡಾಶಾದಿರೂಪವಾದ ಅನ್ನವನ್ನೂ । ಸ್ತೋಮಂ—ಸ್ತೋತ್ರಸಮೂಹವನ್ನೂ । ಸೋಮಂ—ಹಿಂಡಿರುವ ಸೋಮವನ್ನೂ । ಉಕ್ಥಾ—ಶಸ್ತ್ರಗಳನ್ನೂ । ತತ್—ಈ ನಾಲ್ಕನ್ನು ಒಟ್ಟಿಗೆ । ಆ ಕರತಿ—ಸ್ವೀಕರಿಸಲಿ.

॥ ಭಾವಾರ್ಥ ॥

ಧನವಂತನೂ, ವಜ್ರಾಯುಧವನ್ನು ಹಿಡಿದುಕೊಂಡು ನಮ್ಮೆದುರಿಗೆ ಬರುವವನೂ ಆದರ ಸಹಾಯದಿಂದ ಅಧಿಕವಾದ ಶಕ್ತಿಯುಳ್ಳವನೂ, ಮಹತ್ಸ್ವರೂಪವುಳ್ಳವನೂ, ಬಲಶಾಲಿಯೂ ಆದ ಇಂದ್ರನು ಯಾವ ನಮ್ಮ ಹವಿರಾದಿಗಳನ್ನು ಸೇವಿಸಲು ಅಪೇಕ್ಷಿಸುತ್ತಾನೆಯೋ ಅಂತಹ ನಮ್ಮ ಸಮಸ್ತವಾದ ಪುರೋಡಾಶಾದಿರೂಪವಾದ ಅನ್ನವನ್ನೂ ಸ್ತೋತ್ರಸಮೂಹವನ್ನೂ, ಹಿಂಡಿರುವ ಸೋಮವನ್ನೂ, ಶಸ್ತ್ರಮಂತ್ರಗಳನ್ನೂ ಒಟ್ಟಿಗೆ ಸ್ವೀಕರಿಸಲಿ.

## English Translation.

Since the great and mighty Indra is propitiated by our (oblations), since he desires (them) from us, may he, the possessor of opulence, who comes wielding the thunderbolt by his strength, accept the (sacrificial) food, the hymn, the Soma libation, and the prayers.

॥ ವಿಶೇಷವಿಷಯಗಳು ॥

ಬಲವುಳ್ಳ ಇಂದ್ರನು ನಮ್ಮ ಯಜ್ಞಕ್ಕೆ ವಜ್ರಾಯುಧವನ್ನು ಹಿಡಿದು ಬಂದು ನಾವು ಸಮರ್ಪಿಸುವ ಹವೀರೂಪವಾದ ಅನ್ನವನ್ನೂ, ಪುರೋಡಾಶಾದಿ ಹವಿಸ್ಸುಗಳನ್ನೂ, ಸ್ತೋತ್ರಗಳನ್ನೂ, ಸೋಮವನ್ನೂ ಸ್ವೀಕರಿಸುವನೆಂದು ಋಷಿಯು ಪ್ರಾರ್ಥಿಸಿದಾನೆ. ಎಂದರೆ ಯಜಮಾನನ ಆಹ್ವಾನವನ್ನು ಸ್ವೀಕರಿಸಿ ಯಜ್ಞಭೂಮಿಗೆ ಶಕ್ತಿಯುತನೂ ವಜ್ರಾಯುಧವನ್ನು ಧರಿಸಿರುವವನೂ ಆದ ಇಂದ್ರನು ಯಜ್ಞಭೂಮಿಗೆ ಬಂದು ಋತ್ವಿಗ್ಜನರು ಮಾಡುವ ಸ್ತೋತ್ರಾದಿಗಳನ್ನು ಕೇಳಿ ಸಂತುಷ್ಟನಾಗಿ ಯಜ್ಞದಲ್ಲಿ ಅರ್ಪಿಸುವ ಹವಿರಾದಿ ಅನ್ನವನ್ನೂ, ಪುರೋಡಾಶವನ್ನೂ ಸ್ವೀಕರಿಸಿ ಸಿದ್ಧಪಡಿಸಿರುವ ಸೋಮರಸವನ್ನು ಪಾನಮಾಡಿ ತೃಪ್ತಿಯನ್ನು ಹೊಂದಲಿ ಎಂಬ ಆಶಂಸನೆಯನ್ನು ವಾಮದೇವ ಋಷಿಯು ವ್ಯಕ್ತಪಡಿಸಿದಾನೆ.

ಶುಷ್ಮ ಶಬ್ದವೂ, ಶವಃ ಶಬ್ದವೂ ಬಲನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ಉಕ್ಥಶಬ್ದವು :ಪ್ರಶಸ್ಯ ನಾಮಗಳಲ್ಲಿಯೂ (ನಿ. ೩-೧೩) ಬ್ರಹ್ಮಶಬ್ದವು ಧನನಾಮಗಳಲ್ಲಿಯೂ (ನಿ. ೩-೯) ಅಶ್ಮಾ ಎಂಬ ಶಬ್ದವು ಮೇಘ ನಾಮಗಳಲ್ಲಿಯೂ (ನಿ. ೨-೨೧) ಪಠಿತವಾಗಿದೆ. ಆದರೆ ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ, ಉಕ್ಥ ಶಬ್ದಕ್ಕೆ ಸ್ತೋತ್ರ ವೆಂದೂ, ಅಶ್ಮಾ ಎಂಬ ಶಬ್ದಕ್ಕೆ ವಜ್ರಾಯುಧವೆಂದೂ ಅರ್ಥವಿವರಣೆಮಾಡಿದೆ.

॥ ಸಂಹಿತಾಪಾಠಃ ॥

ವೃಷಾ ವೃಷಂಧಿಂ ಚತುರಶ್ರಿಮಸ್ಯನ್ನುಗ್ರೋ ಬಾಹುಭ್ಯಾಂ ನೃತಮಃ ಶಚೀವಾನ್ ।
ಶ್ರಿಯೇ ಪರುಷ್ಣೀಮುಷಮಾಣ ಊರ್ಣಾಂ ಯಸ್ಯಾಃ ಪರ್ವಾಣಿ ಸಖ್ಯಾಯ ವಿವ್ಯೇ ॥ ೨ ॥

॥ ಪದಪಾಠಃ ॥

ವೃಷಾ । ವೃಷಂಧಿಂ । ಚತುಃಽಅಶ್ರಿಂ । ಅಸ್ಯನ್ । ಉಗ್ರಃ । ಬಾಹುಽಭ್ಯಾಂ । ನೃಽತಮಃ । ಶಚೀಽವಾನ್ ।
ಶ್ರಿಯೇ । ಪರುಷ್ಣೀಂ । ಉಷಮಾಣಃ । ಊರ್ಣಾಂ । ಯಸ್ಯಾಃ । ಪರ್ವಾಣಿ । ಸಖ್ಯಾಯ । ವಿವ್ಯೇ ॥ ೨ ॥

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ವರ್ಷಿತಾ ವೃಷಂಧಿಂ ಮೇಘಭೇದನದ್ವಾರೇಣ ವರ್ಷಂ ಕುರ್ವಂತಂ ಚತುರಶ್ರಿಂ ಚತುಸ್ಸೃಭಿರಶ್ರಿಭಿರ್ಧಾರಾಭಿರುಪೇತಂ ವಜ್ರಂ ಬಾಹುಭ್ಯಾಂ ಹಸ್ತಾಭ್ಯಾಮಸ್ಯನ್ ಶತ್ರುಷು ಪ್ರಕ್ಷಿಪನ್ ಉಗ್ರ ಉದ್ಗೂರ್ಣಬಲೋ ನೃತಮಃ ನೇತೃತಮಃ ಶಚೀವಾನ್ ಕರ್ಮವಾನಿಂದ್ರ ಊರ್ಣಾ-ಮಾಚ್ಛಾದಿಕಾಂ ಪರುಷ್ಣೀಂ ಪರ್ವವತೀಂ ನದೀಂ ಶ್ರಿಯೆ ಆಶ್ರಯಣಾರ್ಥಮುಷಮಾಣಃ ಸೇವಮಾನೋ ಭವತಿ। ಯಸ್ಯಾ ನದ್ಯಾಃ ಪರ್ವಾಣಿ ಭಿನ್ನಾನ್ದೇಶಾನ್ ಸಖ್ಯಾಯ ಸಖಿಕರ್ಮಣೇ ವಿವ್ಯೇ ಸಂವೃತಾನ್ ॥

॥ ಪ್ರತಿಪದಾರ್ಥ ॥

ವೃಷಾ—ಕಾಮವರ್ಷಕನೂ । ವೃಷಂಧಿಂ—ಮೇಘವನ್ನು ಸೀಳುವುದರ ಮೂಲಕ ವೃಷ್ಟಿಯನ್ನು ಸುರಿಸುವುದೂ । ಚತುರಶ್ರಿಂ—ನಾಲ್ಕು ಹರಿತವಾದ ಅಲಗುಗಳಿಂದ ಕೂಡಿದುದೂ ಆದ ವಜ್ರಾಯುಧವನ್ನು । ಬಾಹುಭ್ಯಾಂ—ಕೈಗಳಿಂದ । ಅಸ್ಯನ್—ಶತ್ರುಗಳ ಮೇಲೆ ಎಸೆಯುತ್ತಾ । ಉಗ್ರಃ—ಪ್ರಕಟಿಸುತ್ತಿರುವ ಬಲವುಳ್ಳವನೂ । ನೃತಮಃ—ನೇತೃತಮನೂ । ಶಚೀವಾನ್—ಕರ್ಮವಂತನೂ ಆದ ಇಂದ್ರನು । ಯಸ್ಯಾಃ—

ಯಾವ ನದಿಯ | **ಪರ್ವಾಣಿ**—ವಿಭಾಗ ಪ್ರದೇಶಗಳನ್ನು | **ಸಖ್ಯಾಯ**—ತನ್ನ ಸಖಿತ್ವವನ್ನು ತೋರ್ಪಡಿಸಲು | **ವಿವ್ಯೇ**—ಸಂಚರಿಸಿ ವ್ಯಾಪಿಸುವನೋ ಅಂತಹ | **ಊರ್ಣಾಂ**—ಪ್ರವಾಹರೂಪದಲ್ಲಿ ವ್ಯಾಪಿಸಿರುವ | **ಪರುಷ್ಣೀಂ**—ಪರುಷ್ಣೀ ನದಿಯನ್ನು | **ಶ್ರಿಯೇ**—ಸಂಪದ್ವೃದ್ಧಿಗಾಗಿ | **ಉಷಮಾಣಃ**—ಸೇವಿಸುತ್ತಾನೆ.

॥ ಭಾವಾರ್ಥ ॥

ಕಾಮವರ್ಷಕನೂ, ಮೇಘವನ್ನು ಸೀಳುವುದರಮೂಲಕ ವೃಷ್ಟಿಯನ್ನು ಸುರಿಸುವುದೂ, ನಾಲ್ಕು ಹರಿತವಾದ ಅಲಗುಗಳಿಂದ ಕೂಡಿದುದೂ ಆದ ವಜ್ರಾಯುಧವನ್ನು ಕೈಗಳಿಂದ ಶತ್ರುಗಳ ಮೇಲೆ ಎಸೆಯುತ್ತಾ ತನ್ನ ಬಲವನ್ನು ಪ್ರಕಟಿಸುವವನೂ, ಭಯಂಕರನೂ, ನೇತೃತಮನೂ, ಕರ್ಮವಂತನೂ ಆದ ಇಂದ್ರನು ಯಾವ ನದಿಯ ವಿಭಾಗ ಪ್ರದೇಶಗಳನ್ನು ಸಂಚರಿಸಿ, ಅಲ್ಲೆಲ್ಲಾ ವ್ಯಾಪಿಸಿ ತನ್ನ ಸಖಿತ್ವವನ್ನು ತೋರ್ಪಡಿಸಿದನೋ, ಪ್ರವಾಹರೂಪದಲ್ಲಿ ವ್ಯಾಪಿಸಿರುವ ಅದೇ ಪರುಷ್ಣೀನದಿಯನ್ನು ಸಂಪದ್ವೃದ್ಧಿಗಾಗಿ ಸೇವಿಸುತ್ತಾನೆ.

## English Translation.

The showerer (of benefits), casting with his hands the quadrangular bolt that causes rain, fierce, the chief of leaders, the achiever of (glorious) acts, is desirous of the prosperity of the investing Parushni (river), whose (bordering) districts he has frequented through regard.

॥ ವಿಶೇಷವಿಷಯಗಳು ॥

**ಚತುರಶ್ರಿಂ**—ಈ ಋಕ್ಕಿನಲ್ಲಿ ವಜ್ರಾಯುಧಕ್ಕೆ ನಾಲ್ಕು ಅಲಗುಗಳಿರುವುದೆಂದು ಹೇಳಿದೆ. ಕೆಲವು ಕಡೆ ಎಂಟು ಅಲಗುಗಳಿವೆ ಎಂದೂ ವರ್ಣನೆ ಇದೆ. ಈ ವಜ್ರಾಯುಧವನ್ನು ಉಕ್ಕಿನಿಂದ (ಕಬ್ಬಿಣದಿಂದ) ದೇವಶಿಲ್ಪಿಯಾದ ತ್ವಷ್ಟೃವು ನಿರ್ಮಿಸಿ ತನಗೆ ಕೊಟ್ಟನೆಂದು—

ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋ ವೃಜನ್ನಪಿ ಕ್ರತುಂ |

(ಋ. ಸಂ. ೧೦-೪೮-೩)

ಎಂಬ ಋಕ್ಕಿನಲ್ಲಿ ಇಂದ್ರನೇ ಹೇಳಿದಾನೆ. ಅಂತರಿಕ್ಷದಲ್ಲಿ ಮೇಘಗಳ ಮಧ್ಯದಲ್ಲಿ ಗೋಚರವಾಗುವ ವಿದ್ಯುತ್ತು ಅಥವಾ ಮಿಂಚೇ ಇಂದ್ರನ ವಜ್ರಾಯುಧವೆಂದು ಅನೇಕಕಡೆ ವರ್ಣಿತವಾಗಿದೆ. ಸಾಧಾರಣವಾಗಿ ವಜ್ರಾಯುಧವು ವೃತ್ರನನ್ನು ಪ್ರಹರಿಸುವಾಗ ಉಪಯೋಗಿಸಲ್ಪಡುವುದಾದರೂ ಇತರ ಶತ್ರುಗಳ ನಿಗ್ರಹಕ್ಕಾಗಿಯೂ ಇಂದ್ರನು ತನ್ನ ವಜ್ರಾಯುಧವನ್ನು ಉಪಯೋಗಿಸುವನೆಂದು ಇಲ್ಲಲ್ಲಿ ಹೇಳಿದೆ. ಇದರ ವರ್ಣನೆಯನ್ನು ಮುಂದೆ ವಿವರಿಸಲಾಗುವುದು.



॥ ಸಂಹಿತಾಪಾಠಃ ॥

ಯೋ ದೇವೋ ದೇವತಮೋ ಜಾಯಮಾನೋ ಮಹೋ ವಾಜೇಭಿರ್ಮಹ-
ದ್ಭಿಶ್ಚ ಶುಷ್ಮೈಃ ।
ದಧಾನೋ ವಜ್ರಂ ಬಾಹ್ವೋರುಶಂತಂ ದ್ಯಾಮಮೇನ ರೇಜಯತ್ಪ್ರ
ಭೂಮ ॥ ೩ ॥

॥ ಪದಪಾಠಃ ॥

ಯಃ । ದೇವಃ । ದೇವತಮಃ । ಜಾಯಮಾನಃ । ಮಹಃ । ವಾಜೇಭಿಃ । ಮಹತ್ಽಭಿಃ । ಚ । ಶುಷ್ಮೈಃ ।
ದಧಾನಃ । ವಜ್ರಂ । ಬಾಹ್ವೋಃ । ಉಶಂತಂ । ದ್ಯಾಂ । ಅಮೇನ । ರೇಜಯತ್ । ಪ್ರ । ಭೂಮ ॥ ೩ ॥

॥ ಸಾಯಣಭಾಷ್ಯಂ ॥

ದೇವೋ ದೀಪ್ಯಮಾನೋ ದೇವತಮೋ ದಾತೃತಮೋ ಜಾಯಮಾನ ಉತ್ಪದ್ಯಮಾನೋ ಯ ಇಂದ್ರೋ ಮಹೋ ಮಹದ್ಭಿರ್ವಾಜೇಭಿರನ್ನೈರ್ಮಹದ್ಭಿಃ ಶುಷ್ಮೈರ್ಬಲೈಶ್ಚ । ಯುಕ್ತೋಽಭವದಿತಿ ಶೇಷಃ । ಸ ಇಂದ್ರೋ ಬಾಹ್ವೋರ್ಹಸ್ತಯೋರುಶಂತಂ ಕಾಮಯಮಾನಂ ವಜ್ರಂ ದಧಾನೋ ಧಾರಯನ್ ಅಮೇನ ಬಲೇನ ದ್ಯಾಂ ದ್ಯುಲೋಕಂ ಚ ಭೂಮ ಭೂಲೋಕಂ ಚ ಪ್ರ ರೇಜಯತ್। ಪ್ರಕಂಪಯತಿ ಸ್ಮ॥

॥ ಪ್ರತಿಪದಾರ್ಥ ॥

ದೇವಃ—ಪ್ರಕಾಶಮಾನನೂ । ದೇವತಮಃ– ಉದಾರವಾದ ದಾನಿಗಳಲ್ಲಿ ಶ್ರೇಷ್ಠನೂ ಆದ । ಯಃ—ಯಾವ ಇಂದ್ರನು । ಜಾಯಮಾನಃ—ಉತ್ಪನ್ನನಾದೊಡನೆಯೇ । ಮಹಃ—ಮಹತ್ತಾದ । ವಾಜೇಭಿಃ—ಅನ್ನಗಳೊಡನೆಯೂ । ಮಹದ್ಭಿಃ—ಅತಿಶಯವಾದ ಗುಣವುಳ್ಳ । ಶುಷ್ಮೈಃ—ಬಲಗಳಿಂದಲೂ ಕೂಡಿಕೊಂಡನೋ ಅಂತಹ ಇಂದ್ರನು । ಬಾಹ್ವೋಃ—ತೋಳುಗಳಿಂದ । ಉಶಂತಂ—ಅಪೇಕ್ಷಿಸಿದ । ವಜ್ರಂ—ವಜ್ರಾಯುಧವನ್ನು । ದಧಾನಃ—ಹಿಡಿದುಕೊಂಡು । ಅಮೇನ—ಬಲದಿಂದ । ದ್ಯಾಂ—ದ್ಯುಲೋಕವನ್ನೂ । ಭೂಮ—ಭೂಲೋಕವನ್ನೂ । ಪ್ರ ರೇಜಯತ್—ಕಂಪಿಸುವಂತೆ ಮಾಡುತ್ತಿದ್ದನು.

॥ ಭಾವಾರ್ಥ ॥

ಪ್ರಕಾಶಮಾನನೂ, ಉದಾರಿಗಳಾದ ದಾನಿಗಳಲ್ಲಿ ಶ್ರೇಷ್ಠನೂ ಆದ ಯಾವ ಇಂದ್ರನು ಉತ್ಪನ್ನನಾದೊಡನೆಯೇ ಮಹತ್ತಾದ ಅನ್ನಗಳೊಡನೆಯೂ, ಅತಿಶಯವಾದ ಗುಣಗಳುಳ್ಳ ಶಕ್ತಿಗಳೊಡನೆಯೂ ಕೂಡಿಕೊಂಡನೋ

ಅಂತಹ ಇಂದ್ರನು ತಾನು ಅಪೇಕ್ಷಿಸಿದ ವಜ್ರಾಯುಧವನ್ನು ತೋಳುಗಳಿಂದ ಹಿಡಿದುಕೊಂಡು ತನ್ನ ಸ್ವಶಕ್ತಿಯಿಂದ ದ್ಯುಲೋಕವನ್ನೂ ಭೂಲೋಕವನ್ನೂ ಕಂಪಿಸುವಂತೆ ಮಾಡುತ್ತಿದ್ದನು.

### English Translation.

Who divine, most divine, as soon as born (was endowed) with abundant viands, and great energies, holding in his arms the willing thunderbolt, and causing by his strength (both) heaven and earth to tremble.

॥ ವಿಶೇಷವಿಷಯಗಳು ॥

ಇಂದ್ರನು ತನ್ನ ಬಲದಿಂದ ದ್ಯಾವಾಪೃಥಿವಿಗಳನ್ನು ನಡುಗುವಂತೆ ಮಾಡಿದನು ಎಂದು ಇಲ್ಲಿ ಹೇಳಿದೆ. ಇದರಂತೆ—

ಅರೇಜೇತಾಂ ರೋದಸೀ ಭಿಯಾನೇ ಕನಿಕ್ರದತೋ ವೃಷ್ಣೋ ಅಸ್ಯ ವಜ್ರಾನ್ ।

(ಋ. ಸಂ. ೨–೧೧–೯)

ಇತ್ಯಾದಿ ಸ್ಥಳಗಳಲ್ಲಿ ವಜ್ರಾಯುಧವನ್ನು ಹಿಡಿದಿರುವ ಇಂದ್ರನ ಬಲಕ್ಕೆ ಹೆದರಿ ದ್ಯಾವಾಪೃಥಿವಿಗಳು ನಡುಗಿದವೆಂದು ಹೇಳಿದೆ.



॥ ಸಂಹಿತಾಪಾಠಃ ॥

ವಿಶ್ವಾ ರೋಧಾಂಸಿ ಪ್ರವತಶ್ಚ ಪೂರ್ವೀರ್ದ್ಯೌರ್ಋಷ್ವಾಜ್ಜನಿಮನ್ರೇಜತ ಕ್ಷಾಃ ।
ಆ ಮಾತರಾ ಭರತಿ ಶುಷ್ಮ್ಯಾ ಗೋರ್ನೃವತ್ಪರಿಜ್ಮನ್ನೋನುವಂತ ವಾತಾಃ ॥೪॥

॥ ಪದಪಾಠಃ ॥

ವಿಶ್ವಾ । ರೋಧಾಂಸಿ । ಪ್ರವತಃ । ಚ । ಪೂರ್ವೀಃ । ದ್ಯೌಃ । ಋಷ್ವಾತ್ । ಜನಿಮನ್ । ರೇಜತ । ಕ್ಷಾಃ ।
ಆ । ಮಾತರಾ । ಭರತಿ । ಶುಷ್ಮೀ । ಆ । ಗೋಃ । ನೃವತ್ । ಪರಿಜ್ಮನ್ । ನೋನುವಂತ । ವಾತಾಃ ॥ ೪ ॥

॥ ಸಾಯಣಭಾಷ್ಯಂ ॥

ವಿಶ್ವಾ ವಿಶ್ವಾನಿ ರೋಧಾಂಸಿ । ರೋಧಃಶಬ್ದೇನೋನ್ನತಪ್ರದೇಶಾ ಉಚ್ಯಂತೇ। ಉನ್ನತಪ್ರದೇಶಾಃ ಪರ್ವತಾಶ್ಚ ಪೂರ್ವೀಃ ಪೂರ್ವ್ಯೋ ಬಹೂನಿ ಪ್ರವತಃ ಪ್ರವಣಾನಿ । ಸಮುದ್ರಾಶ್ಚೇತ್ಯರ್ಥಃ । ದ್ಯೌರ್ದ್ಯು-

ಲೋಕಶ್ಚ ಕ್ಷಾಃ ಪೃಥಿವೀ ಚ ಜನಿಮನ್ನಿಂದ್ರಸ್ಯ ಜನ್ಮನಿ ಸತ್ಯೃಷ್ವಾನ್ಮಹತೋಽಸ್ಮಾದಿಂದ್ರಾದ್ರೇಜತ । ಅರೇಜಂತ । ಅಕಂಪಂತ । ಕಿಂಚ ಶುಷ್ಮೀ ಬಲವಾನಿಂದ್ರೋ ಗೋರ್ಗಂತುಃ ಸೂರ್ಯಸ್ಯ ಮಾತರಾ ಮಾತರೌ ಮಾತಾಪಿತೃಭೂತೌ ದ್ಯಾವಾಪೃಥಿವ್ಯೌ ಚ । ಆ ಇತಿ ಚಾರ್ಥೇ । ಆ ಭರತಿ । ಆ ಸಮಂತಾದ್ಬಿಭರ್ತಿ । ನೃವನ್ಮನುಷ್ಯಾ ಇವ ವಾತಾ ಇಂದ್ರೇಣ ಪ್ರೇರಿತಾ ವಾಯವಶ್ಚ ಪರಿಜ್ಮನ್ನಂತರಿಕ್ಷೇ ನೋನುವಂತ । ಶಬ್ದಾಯಂತೇ ॥

॥ ಪ್ರತಿಪದಾರ್ಥ ॥

ವಿಶ್ವಾ—ಸಮಸ್ತವಾದ । ರೋಧಾಂಸಿ—ಉನ್ನತಪ್ರದೇಶಗಳೂ (ಪರ್ವತಗಳೂ) । ಪೂರ್ವೀಃ—ಬಹುಸಂಖ್ಯಾತವಾದ । ಪ್ರವತಃ—ಪ್ರವಣಪ್ರದೇಶಗಳೂ (ಸಮುದ್ರಗಳೂ) । ದ್ಯೌಃ—ದ್ಯುಲೋಕವೂ । ಕ್ಷಾಃ—ಪೃಥಿವಿಯೂ । ಜನಿಮನ್—(ಇಂದ್ರನು) ಉತ್ಪನ್ನನಾದೊಡನೆಯೇ । ಋಷ್ವಾತ್—ಅದ್ಭುತ ಸ್ವರೂಪವುಳ್ಳ ಇಂದ್ರನಿಂದ । ರೇಜತ—(ಹೆದರಿ) ನಡಗಿದವು । ಶುಷ್ಮೀ—ಶಕ್ತಿವಂತನಾದ ಇಂದ್ರನು । ಗೋಃ—ಸಂಚಾರಾತ್ಮಕನಾದ ಸೂರ್ಯನ । ಮಾತರಾ—ಮಾತಾಪಿತೃರೂಪವಾದ ದ್ಯಾವಾಪೃಥಿವಿಗಳನ್ನು । ಆ ಭರತಿ—ಪೂರ್ಣವಾಗಿ ಧರಿಸಿದ್ದಾನೆ (ಅವುಗಳ ರಕ್ಷಣೆಯನ್ನು ವಹಿಸಿಕೊಂಡಿದ್ದಾನೆ) । ವಾತಾಃ—ಇಂದ್ರನಿಂದ ಪ್ರೇರಿತಗಳಾದ ವಾಯುಗಳು । ನೃವತ್—ಮನುಷ್ಯರಂತೆ । ಪರಿಜ್ಮನ್—ಅಂತರಿಕ್ಷದ ಸುತ್ತಲೂ । ನೋನುವಂತ—ಶಬ್ದವನ್ನು ಮಾಡುತ್ತವೆ.

॥ ಭಾವಾರ್ಥ ॥

ಇಂದ್ರನು ಉತ್ಪನ್ನನಾದೊಡನೆಯೇ ಇಂದ್ರನ ಅದ್ಭುತಸ್ವರೂಪವನ್ನು ನೋಡಿ ಸಮಸ್ತವಾದ ಪರ್ವತಗಳೂ, ಬಹುಸಂಖ್ಯಾಕವಾದ ಪ್ರವಣಪ್ರದೇಶಗಳೂ (ಸಮುದ್ರಗಳೂ) ದ್ಯುಲೋಕವೂ ಪೃಥಿವಿಯೂ ಸಹ ಹೆದರಿಕೊಂಡು ನಡುಗಿದವು. ಶಕ್ತಿಯುತನಾದ ಇಂದ್ರನು ಸಂಚಾರಾತ್ಮಕನಾದ ಸೂರ್ಯನ ಮಾತಾಪಿತೃರೂಪವಾದ ದ್ಯಾವಾಪೃಥಿವಿಗಳ ರಕ್ಷಣೆಯ ಭಾರವನ್ನು ವಹಿಸಿದ್ದಾನೆ. ಇಂದ್ರನಿಂದ ಪ್ರೇರಿತಗಳಾದ ವಾಯುಗಳು ಅಂತರಿಕ್ಷದ ಸುತ್ತಲೂ ಮಾನವರಂತೆ ಶಬ್ದವನ್ನು ಮಾಡುತ್ತವೆ.

## English Translation.

All the high places, and the many low places, the heaven and the earth, trembled (through fear) of the mighty (Indra) at his birth: the strong (Indra) cherishes the parents of the moveng (sun), and winds, like men, make a noise in their peregrination.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಇಂದ್ರನ ಅದ್ಭುತವಾದ ಸಾಮರ್ಥ್ಯದ ವರ್ಣನೆ ಇದೆ. ಇಂದ್ರನು ಉತ್ಪನ್ನನಾದ ಕೂಡಲೇ ದ್ಯಾವಾಪೃಥಿವಿಗಳೂ, ಪರ್ವತಗಳೂ, ಸಮುದ್ರಗಳೂ ಹೆದರಿ ನಡುಗಿದವೆಂದು ಈ ಋಕ್ಕಿನಲ್ಲಿ ಹೇಳಿರುವ ವಿಷಯವೇ ಅನೇಕ ಋಕ್ಕುಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ವರ್ಣಿತವಾಗಿದೆ—

ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ ಭೂಮಾ ಜನುಷಸ್ತುಜೇತೇ ।

(ಋ. ಸಂ. ೧-೬೧-೧೪)

ಎಂಬ ಋಕ್ಕಿನಲ್ಲಿ ಇಂದ್ರನು ಜನಿಸಿದ ಕೂಡಲೇ ಅವನಿಗೆ ಹೆದರಿ ದೃಢವಾದ ಪರ್ವತಗಳೂ ಸ್ವರ್ಗಲೋಕ ಭೂಲೋಕಗಳೂ ನಡುಗಿದವು ಎಂದಿದೆ.

ತವ ತ್ವಿಷೋ ಜನಿಮನ್ ರೇಜತ ದ್ಯೌ ರೇಜದ್ಭೂಮಿರ್ಭಿಯಸಾ ಸ್ವಸ್ಯ ಮನ್ಯೋಃ ।

(ಋ. ಸಂ. ೪-೧೭-೨)

ಇಂದ್ರನು ಉತ್ಪನ್ನನಾದ ಕೂಡಲೇ ಅವನ ಕೋಪಕ್ಕೆ ಹೆದರಿ ದ್ಯಾವಾಪೃಥಿವಿಗಳು ಭಯದಿಂದ ನಡುಗಿದವು.

ಅತಶ್ಚಿದಿಂದ್ರಾದಭಯಂತ ದೇವಾ ವಿಶ್ವಾ ಅಪೋ ಅಜಯದ್ದಾಸಪತ್ನೀಃ ।

(ಋ. ಸಂ. ೫-೩೦-೫)

ಎಂಬ ಋಕ್ಕಿನಲ್ಲಿ ದೇವತೆಗಳೂ ಇಂದ್ರನನ್ನು ಕಂಡು ಬಹಳವಾಗಿ ಹೆದರಿದರು ಎಂಬ ವರ್ಣನೆ ಇದೆ.

॥ ಸಂಹಿತಾಪಾಠಃ ॥

ತಾ ತೂ ತ ಇಂದ್ರ ಮಹತೋ ಮಹಾನಿ ವಿಶ್ವೇಷ್ವಿತ್ಸವನೇಷು ಪ್ರವಾಚ್ಯಾ ।

ಯಚ್ಛೂರ ಧೃಷ್ಣೋ ಧೃಷತಾ ದಧೃಷ್ವಾನಹಿಂ ವಜ್ರೇಣ ಶವಸಾವಿವೇಷೀಃ ॥

॥ ಪದಪಾಠಃ ॥

ತಾ । ತು । ತೇ । ಇಂದ್ರ । ಮಹತಃ । ಮಹಾನಿ । ವಿಶ್ವೇಷು । ಇತ್ । ಸವನೇಷು । ಪ್ರ‿ವಾಚ್ಯಾ ।

ಯತ್ । ಶೂರ । ಧೃಷ್ಣೋ ಇತಿ । ಧೃಷತಾ । ದಧೃಷ್ವಾನ್ । ಅಹಿಂ । ವಜ್ರೇಣ । ಶವಸಾ । ಅವಿವೇಷೀಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಹತಃ ಪ್ರಭೂತಸ್ಯ ತೇ ತ್ವದೀಯಾನಿ ತಾ ತಾನಿ ಕರ್ಮಾಣಿ ತು ಕ್ಷಿಪ್ರಂ ಮಹಾನಿ ಮಹಾಂತಿ ಭವಂತಿ। ವಿಶ್ವೇಷ್ವಿತ್ಸರ್ವೇಷ್ವೇವ ಸವನೇಷು ಪ್ರಾತಃಸವನಾದಿಕರ್ಮಸು ತ್ವದೀಯಾನಿ ಕರ್ಮಾಣಿ ಪ್ರವಾಚ್ಯಾ ಪ್ರವಾಚ್ಯಾನಿ ಸ್ತೋತೃಭಿಃ ಪ್ರಕರ್ಷೇಣ ವಕ್ತುಂ ಯೋಗ್ಯಾನಿ ಸ್ತುತ್ಯಾನೀತಿ ಯತ್। ಹೇ ಧೃಷ್ಣೋ ಪ್ರಗಲ್ಭ ಹೇ ಶೂರ ವಿಕ್ರಾಂತೇಂದ್ರ ದಧೃಷ್ವಾನ್ಪಾಲಕತ್ವೇನ ಲೋಕಾನ್ಧಾರಯನ್ ಶವಸಾ ಬಲೇನ ಯುಕ್ತಸ್ತ್ವಂ ಧೃಷತಾ ಧರ್ಷಕೇಣ ವಜ್ರೇಣಾಹಿಂ ವೃತ್ರಮಸುರಮವಿವೇಷೀಃ ಅವಧೀರಿತಿ ಯತ್। ಏತದಾದೀನಿ ಕರ್ಮಾಣಿ ಮಹಾಂತೀತಿ ಪೂರ್ವೇಣ ಸಂಬಂಧಃ। ಅತ್ರಾವಿವೇಷೀರಿತಿ ವಧಕರ್ಮಾ॥

‖ ಪ್ರತಿಪದಾರ್ಥ ‖

ಧೃಷ್ಣೋ—ಶತ್ರುಧರ್ಷಕನೂ | ಶೂರ—ಪರಾಕ್ರಮಿಯೂ ಆದ | ಇಂದ್ರ—ಎಲೈ ಇಂದ್ರನೇ | ಯತ್—ಯಾವ ನಿನ್ನ ಮಾಹಾತ್ಮ್ಯದಿಂದ | ದಧೃಷ್ವಾನ್—ಲೋಕಗಳನ್ನು ಧರಿಸಿ ಪಾಲಿಸುತ್ತ | ಶವಸಾ—ಬಲದಿಂದ ಕೂಡಿದ ನೀನು | ಧೃಷತಾ—ಶತ್ರುನಾಶಕವಾದ | ವಜ್ರೇಣ—ವಜ್ರಾಯುಧದಿಂದ | ಅಹಿಂ—ವೃತ್ರಾಸುರನನ್ನು | ಅವಿವೇಷೀಃ—ಕೊಂದೆಯೋ (ಅದೇ ಮಾಹಾತ್ಮ್ಯದ ಪ್ರಭಾವದಿಂದ) | ಮಹತಃ—ಪ್ರಭೂತಗುಣಗಳುಳ್ಳ | ತೇ—ನಿನ್ನ | ತಾ—ಅದೇ ಮಹತ್ಕಾರ್ಯಗಳು | ತು—ಕ್ಷಿಪ್ರವಾಗಿ | ಮಹಾನಿ—(ನಿನ್ನಂತೆಯೇ) ಮಾಹಾತ್ಮ್ಯವನ್ನು ಪಡೆಯುತ್ತವೆ | ವಿಶ್ವೇಷ್ವಿತ್—ಸಕಲವಾದ | ಸವನೇಷು—ಸವನಕಾಲಗಳಲ್ಲಿಯೂ | ಪ್ರವಾಚ್ಯಾ—ಅತಿಶಯವಾಗಿ ಸ್ತುತಿಸಲ್ಪಡುತ್ತವೆ.

‖ ಭಾವಾರ್ಥ ‖

ಶತ್ರುಧರ್ಷಕನೂ, ಪರಾಕ್ರಮಿಯೂ ಆದ ಎಲೈ ಇಂದ್ರನೇ, ಯಾವ ನಿನ್ನ ಮಾಹಾತ್ಮ್ಯದಿಂದ ಲೋಕಗಳನ್ನು ಧರಿಸಿ ಪಾಲಿಸುತ್ತ ಬಲದಿಂದ ಕೂಡಿದ ನೀನು ಶತ್ರುನಾಶಕವಾದ ವಜ್ರಾಯುಧದಿಂದ ವೃತ್ರಾಸುರನನ್ನು ಕೊಂದೆಯೋ ಅದೇ ಮಾಹಾತ್ಮ್ಯದ ಪ್ರಭಾವದಿಂದ ಪ್ರಭೂತವಾದ ಗುಣಗಳುಳ್ಳ ನಿನ್ನ ಅದೇ ಮಹತ್ಕಾರ್ಯಗಳು ಕ್ಷಿಪ್ರವಾಗಿ ನಿನ್ನಂತೆಯೇ ಮಾಹಾತ್ಮ್ಯವನ್ನೂ ಪಡೆಯುತ್ತವೆ. ಮತ್ತು ಸಕಲ ಸವನಕಾಲಗಳಲ್ಲಿಯೂ ಅತಿಶಯವಾಗಿ ಸ್ತುತಿಸಲ್ಪಡುತ್ತವೆ.

English Translation.

Of you, Indra, who are mighty, great are the deeds, and to be proclaimed at all sacrifices, inasmuch as, high-minded hero, you, sustaining (the world), have by your strength slain Ahi with the resistless thunderbolt.

‖ ವಿಶೇಷವಿಷಯಗಳು ‖

ಈ ಋಕ್ಕಿನಲ್ಲಿ ಲೋಕಗಳನ್ನು ಧರಿಸಿ ಪಾಲಿಸುವುದು, ವಜ್ರಾಯುಧದಿಂದ ವೃತ್ರನನ್ನು ಸಂಹಾರಮಾಡುವುದು ಇತ್ಯಾದಿ ಇಂದ್ರನ ಮಹತ್ಕಾರ್ಯಗಳು ಸವನಕಾಲಗಳಲ್ಲಿ ಸ್ತುತಿಸಲ್ಪಡುತ್ತವೆಂದು ಹೇಳಿದೆ. ಇಂದ್ರನ ಶಕ್ತಿಸಾಮರ್ಥ್ಯಗಳ ವಿಚಾರವಾಗಿ—

ನಹೀ ನ್ವಸ್ಯ ಪ್ರತಿಮಾನಮಸ್ತ್ಯಂತರ್ಜಾತೇಷೂತ ಯೇ ಜನಿತ್ವಾಃ |
(ಋ. ಸಂ. ೪-೧೮-೪)

ಹಿಂದೆ ಜನಿಸಿರುವವರಲ್ಲಿಯೂ ಈಗಲೂ ಇಂದ್ರನಿಗೆ ಸಮಾನರಾದವರು ಯಾರೂ ಇರುವುದಿಲ್ಲ.

ನ ತ್ವಾವಾँ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ |
(ಋ. ಸಂ. ೭-೩೨-೨೩)

ಇಂದ್ರನಿಗೆ ಸಮಾನರಾದವರು ಸ್ವರ್ಗದಲ್ಲಾಗಲಿ, ಭೂಮಿಯಲ್ಲಾಗಲಿ ಹಿಂದೆಯೂ ಜನಿಸಿಲ್ಲ, ಮುಂದೆಯೂ ಜನಿಸುವುದಿಲ್ಲ.

ಸತ್ಯಮಿತ್ಥಾನ್ನ ತ್ವಾವಾಁ ಅನ್ಯೋ ಅಸ್ತೀಂದ್ರ ದೇವೋ ನ ಮರ್ತ್ಯೋ ಜ್ಯಾಯಾನ್ ।
(ಋ. ಸಂ. ೬-೩೦-೪)

ಎಲೈ ಇಂದ್ರನೇ, ನಿನಗೆ ಸಮನಾದ ಬೇರೆ ದೇವತೆಯು ಇಲ್ಲವೇ ಇಲ್ಲ. ಮನುಷ್ಯರಲ್ಲಾಗಲಿ, ದೇವತೆಗಳಲ್ಲಾಗಲಿ ನಿನಗೆ ಸಮನಾದವರಾಗಲಿ, ನಿನಗಿಂತ ಅಧಿಕಬಲವುಳ್ಳವರಾಗಲಿ ಯಾರೂ ಇಲ್ಲ. ಇದು ಸತ್ಯವು.

ನ ತೇ ಪೂರ್ವೇ ಮಘವನ್ನಾಪರಾಸೋ ನ ವೀರ್ಯಂ೧ ನೂತನಃ ಕಶ್ಚನಾಪ ।
(ಋ. ಸಂ. ೫-೪೨-೬)

ಎಲೈ ಇಂದ್ರನೇ, ಹಿಂದೆ ಇದ್ದವರು, ಮುಂದೆ ಹುಟ್ಟುವವರು ಅಥವಾ ಈಗ ಇರುವವರು ಯಾರೂ ನಿನ್ನಷ್ಟು ಸಾಹಸಿಗಳಲ್ಲ. ಇತ್ಯಾದಿ ಅನೇಕ ಸ್ಥಳಗಳಲ್ಲಿ ಇಂದ್ರನ ಸರಿಸಮಾನರು ಯಾರೂ ಇಲ್ಲವೆಂಬ ವರ್ಣನೆಗಳಿವೆ.

॥ ಸಂಹಿತಾಪಾಠಃ ॥

ತಾ ತೂ ತೇ ಸತ್ಯಾ ತುವಿನೃಮ್ಣ ವಿಶ್ವಾ ಪ್ರ ಧೇನವಃ ಸಿಸ್ರತೇ ವೃಷ್ಣ ಊಧ್ನಃ ।
ಅಧಾ ಹ ತ್ವದ್ವೃಷಮಣೋ ಭಿಯಾನಾಃ ಪ್ರ ಸಿಂಧವೋ ಜವಸಾ ಚಕ್ರಮಂತ ॥ ೬ ॥

॥ ಪದಪಾಠಃ ॥

ತಾ । ತು । ತೇ । ಸತ್ಯಾ । ತುವಿಽನೃಮ್ಣ । ವಿಶ್ವಾ । ಪ್ರ । ಧೇನವಃ । ಸಿಸ್ರತೇ । ವೃಷ್ಣಃ । ಊಧ್ನಃ ।
ಅಧ । ಹ । ತ್ವತ್ । ವೃಷ್ಽಮನಃ । ಭಿಯಾನಾಃ । ಪ್ರ । ಸಿಂಧವಃ । ಜವಸಾ । ಚಕ್ರಮಂತ ॥ ೬ ॥

॥ ಸಾಯಣಭಾಷ್ಯಂ ॥

ಹೇ ತುವಿನೃಮ್ಣಾಧಿಕಬಲೇಂದ್ರ ತೇ ತ್ವದೀಯಾನಿ ವಿಶ್ವಾ ವಿಶ್ವಾನಿ ತಾ ತಾನಿ ಕರ್ಮಾಣಿ ತು ಕ್ಷಿಪ್ರಂ ಸತ್ಯಾ ಸತ್ಯಾನಿ ಭವಂತಿ । ಹೇ ಇಂದ್ರ ವೃಷ್ಣಃ ಕಾಮಾನಾಂ ವರ್ಷಿತುಸ್ತ್ವತ್ತೋ ಭಯಾದ್ಧೇನವೋ ಗಾವ ಊಧ್ನಃ ಸ್ವಕೀಯಾದಾಪೀನಾತ್ಪ್ರ ಸಿಸ್ರತೇ । ಪ್ರಕರ್ಷೇಣ ಕ್ಷೀರಂ ಕ್ಷರಂತಿ । ಅಥಾಪಿ ಚ ಹೇ ವೃಷಮಣಃ ಕಾಮಾನಾಂ ವರ್ಷಣಪರಮನಸ್ಕೇಂದ್ರ ಸಿಂಧವೋ ನದ್ಯಸ್ತ್ವತ್ತ್ವತ್ತೋ ಭಿಯಾನಾ ಬಿಭ್ಯತ್ಯಃ ಸತ್ಯೋ ಜವಸಾ ವೇಗೇನ ಪ್ರ ಚಕ್ರಮಂತ ಹ । ಪ್ರಕರ್ಷೇಣ ಗಚ್ಛಂತಿ ಖಲು ॥

॥ ಪ್ರತಿಪದಾರ್ಥ ॥

ತುವಿನೃಮ್ಣ—ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ। ತೇ—ನಿನ್ನ। ವಿಶ್ವಾ—ಸಮಸ್ತವಾದವೂ। ತಾ—ಪ್ರಸಿದ್ಧವಾದವೂ ಆದ ಕರ್ಮಗಳು। ತು—ಕ್ಷಿಪ್ರವಾಗಿಯೇ। ಸತ್ಯಾ—ಸತ್ಯಾತ್ಮಕವಾಗಿ ಆಗುತ್ತವೆ। ವೃಷ್ಣಃ—ಕಾಮವರ್ಷಕನಾದ ನಿನ್ನ ಭಯದಿಂದಲೇ। ಧೇನವಃ—ಧೇನುಗಳು। ಊಧ್ನಃ—ತಮ್ಮ ಕೆಚ್ಚಲುಗಳಿಂದ। ಪ್ರ ಸಿಸ್ರತೇ—ಕ್ಷೀರವನ್ನು ಕರೆಯುತ್ತವೆ। ಅಧ—ಮತ್ತು। ವೃಷಮನಃ—ಇಷ್ಟಾರ್ಥಗಳನ್ನು ಸುರಿಸುವ ಮನಸುಳ್ಳ, ಎಲೈ ಇಂದ್ರನೇ। ಸಿಂಧವಃ—ನದಿಗಳೂ। ತ್ವತ್—ನಿನ್ನಿಂದಲೇ। ಭಿಯಾನಾಃ—ಹೆದರಿದವುಗಳಾಗಿ। ಜವಸಾ—ವೇಗದಿಂದ। ಪ್ರ ಚಕ್ರಮಂತ ಹ—ಅತಿಶಯವಾಗಿ ಪ್ರವಹಿಸುತ್ತವೆಯಲ್ಲವೇ ?

॥ ಭಾವಾರ್ಥ ॥

ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ, ಪ್ರಸಿದ್ಧವಾದ ನಿನ್ನ ಸಮಸ್ತ ಕರ್ಮಗಳೂ ಸಹ ಕ್ಷಿಪ್ರವಾಗಿಯೇ ಸತ್ಯಾತ್ಮಕವಾಗಿ ಆಗುತ್ತವೆ. ಕಾಮವರ್ಷಕನಾದ ನಿನ್ನ ಭಯದಿಂದಲೇ ಧೇನುಗಳು ತಮ್ಮ ಕೆಚ್ಚಲುಗಳಿಂದ ಕ್ಷೀರವನ್ನು ಕರೆಯುತ್ತವೆ. ಮತ್ತು ಇಷ್ಟಾರ್ಥಗಳನ್ನು ಸುರಿಸುವ ಮನಸ್ಸುಳ್ಳ ಎಲೈ ಇಂದ್ರನೇ, ನದಿಗಳೂ ಸಹ ನಿನಗಾಗಿಯೇ ಹೆದರಿ ಅತಿಶಯವಾಗಿ ಪ್ರವಹಿಸುತ್ತಾ ಲೋಕೋಪಕಾರಕಗಳಾಗುತ್ತವೆ.

## English Translation.

Most powerful Indra, all these, your exploits, are verily true; through fear of you), the showerer (of benefits), the cows shed (milk) from their udders: then, benevolent-minded (Indra), the rivers, fearing you, flow with rapidity.

॥ ವಿಶೇಷವಿಷಯಗಳು ॥

ಇಂದ್ರನ ಭಯದಿಂದಲೇ ಧೇನುಗಳು ತಮ್ಮ ಕೆಚ್ಚಲುಗಳಿಂದ ಹಾಲನ್ನು ಕರೆಯುತ್ತವೆ ಎಂದೂ, ನದಿಗಳು ಇಂದ್ರನ ಭಯದಿಂದಲೇ ಪ್ರವಹಿಸುತ್ತವೆ ಎಂದೂ ಇಲ್ಲಿ ವರ್ಣಿತವಾಗಿದೆ. ಮೇಘಗಳಿಂದ ಜಲವಿಮೋಚನೆಮಾಡಿ ಭೂಮಿಯ ಮೇಲೆ ಉದಕಗಳು ಪ್ರವಾಹರೂಪದಲ್ಲಿ ಹರಿಯುವಂತೆ ಮಾಡುವುದು ಇಂದ್ರನ ಸಾಹಸಕಾರ್ಯಗಳಲ್ಲಿ ಮುಖ್ಯವಾದುದು. ಈ ವಿಷಯವು ಋ. ಸಂ. ೧-೫೭-೬ ; ೧೦-೮೯-೭ ; ೫-೩೨-೧, ೨ ಇತ್ಯಾದಿ ಋಕ್ಕುಗಳಲ್ಲಿ ವಿವರಿಸಲಾಗಿದೆ.

---

॥ ಸಂಹಿತಾಪಾಠಃ ॥

ಅತ್ರಾಹ ತೇ ಹರಿವಸ್ತಾ ಉ ದೇವೀರವೋಭಿರಿಂದ್ರ ಸ್ತವಂತ ಸ್ವಸಾರಃ।

ಯತ್ಸೀಮನು ಪ್ರ ಮುಚೋ ಬದ್ಬಧಾನಾ ದೀರ್ಘಾಮನು ಪ್ರಸಿತಿಂ ಸ್ಯಂದ-

ಯಧ್ಯೈ ॥ ೭ ॥

॥ ಪದಪಾಠಃ ॥

ಅತ್ರ । ಅಹ । ತೇ । ಹರಿऽವಃ । ತಾಃ । ಊಂ ಇತಿ । ದೇವೀಃ । ಅವಃऽಭಿಃ । ಇಂದ್ರ । ಸ್ತವಂತೆ । ಸ್ವಸಾರಃ ।

ಯತ್ । ಸೀಂ । ಅನು । ಪ್ರ । ಮುಚಃ । ಬದ್ಬಧಾನಾಃ । ದೀರ್ಘಾಂ । ಅನು । ಪ್ರऽಸಿತಿಂ । ಸ್ಯಂದಯಧ್ಯೈ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಯದ್ಯದಾ ಬದ್ಬಧಾನಾ ವೃತ್ರೇಣ ಬಧ್ಯಮಾನಾಃ ಸೀಮನು ಏನಾ ನದೀರುದ್ದಿಶ್ಯ ದೀರ್ಘಾಮತ್ಯಧಿಕಾಂ ಪ್ರಸಿತಿಂ ಬಂಧನಮನು ಸ್ಯಂದಯಧ್ಯೈ ಯಥಾಕಾಮಂ ಸ್ಯಂದಿತುಂ ಪ್ರ ಮುಚಃ । ಪ್ರಕರ್ಷೇಣಾಮೋಚಯಃ । ಹೇ ಹರಿವೋ ಹರಿವನ್ನಿಂದ್ರ ಅತ್ರಾಹಾತ್ರೈವ ಮೋಚನವೇಲಾಯಾಂ ತಾ ಉ ತಾಃ ಪ್ರಸಿದ್ಧಾ ಏವ ದೇವೀರ್ದೇವ್ಯೋ ದ್ಯೋತಮಾನಾಃ ಸ್ವಸಾರೋ ನದ್ಯಃ । ಅತ್ರ ಸ್ವಸೃಶಬ್ದೋ ನದೀವಾಚೀ । ಅವೋಭಿಸ್ತ್ವತ್ಕೃತೈ ರಕ್ಷಣೈಸ್ತೇ ತ್ವಾಂ ಸ್ತವಂತ । ಸ್ತಾವಯಂತಿ । ನದೀಪೂರಣಾದಿಭಿಃ ಕರ್ಮಭಿರ್ಜನಾ ಇಂದ್ರಂ ಸ್ತುವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಹರಿವಃ—ಹರಿನಾಮುಕಗಳಾದ ಅಶ್ವಗಳೊಡಗೂಡಿದ । ಇಂದ್ರ— ಎಲೈ ಇಂದ್ರನೇ । ಯತ್—ಯಾವಾಗ । ಬದ್ಬಧಾನಾಃ—ವೃತ್ರನಿಂದ ಬಂಧಿತಗಳಾದ । ಸೀಂ ಅನು—ಈ ನದಿಗಳನ್ನು ಕಟ್ಟಿದ್ದವೂ । ದೀರ್ಘಾಂ—ದೀರ್ಘವಾದವೂ ಆದ । ಪ್ರಸಿತಿಂ—ಬಂಧನವನ್ನು । ಅನು ಸ್ಯಂದಯಧ್ಯೈ—ಅವುಗಳು ಸ್ವಚ್ಛಂದವಾಗಿ ಪ್ರವಹಿಸಲು ಅನುಕೂಲವಾಗುವಂತೆ । ಪ್ರ ಮುಚಃ—ಬಿಡಿಸಿದೆಯೋ । ಅತ್ರಾ ಹ—ಆ ಮೋಚನಕಾಲದಲ್ಲಿಯೇ । ತಾ ಉ—ಪ್ರಸಿದ್ಧವಾದವೂ । ದೇವೀಃ—ಪ್ರಕಾಶಮಾನವಾದವೂ ಆದ । ಸ್ವಸಾರಃ—ನದಿಗಳು । ಅವೋಭಿಃ—ನಿನ್ನ ರಕ್ಷಣೆಗಳ ಪ್ರಭಾವಗಳಿಂದ । ತೇ—ನಿನ್ನನ್ನು । ಸ್ತವಂತೆ—ಸ್ತುತಿಸುತ್ತವೆ.

॥ ಭಾವಾರ್ಥ ॥

ಹರಿನಾಮುಕಗಳಾದ ಅಶ್ವಗಳಿಂದ ಕೂಡಿದ ಎಲೈ ಇಂದ್ರನೇ, ವೃತ್ರನಿಂದ ಬಂಧಿತಗಳಾದ ನದಿಗಳನ್ನು ಕಟ್ಟಿದ್ದವೂ, ದೀರ್ಘವಾದವೂ ಆದ ಬಂಧನವನ್ನು ಬಿಡಿಸಿ ಆ ನದಿಗಳು ಸ್ವಚ್ಛಂದವಾಗಿ ಪ್ರವಹಿಸಲು ಯಾವಾಗ ಅನುಕೂಲಮಾಡಿದೆಯೋ, ಆ ಒಡನೆಯೇ ಪ್ರಸಿದ್ಧವಾದವೂ ಪ್ರಕಾಶಮಾನವೂ ಆದ ಆ ನದಿಗಳು ನಿನ್ನ ರಕ್ಷಣೆಗಳ ಪ್ರಭಾವದಿಂದ ನಿನ್ನನ್ನು ಸ್ತುತಿಸುತ್ತವೆ.

## English Translation.

Then, Indra, lord of horses, the divine sister (rivers) praise(you) for your protection when you set them free to flow, after having been impeded (by Vritra) through a long confinement.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ, ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಪ್ರಕಾರಾಂತರದಿಂದ ಹೇಳಿದೆ. ಜಲ ವಿಮೋಚನೆಗಾಗಿ ನದಿಗಳು ಇಂದ್ರನಿಗೆ ತಮ್ಮ ಕೃತಜ್ಞತೆಯನ್ನು ಸೂಚಿಸುತ್ತಾ ಇಂದ್ರನನ್ನು ಸ್ತೋತ್ರಮಾಡಿದವು ಎಂಬ ವಿಶೇಷವಿವರಣೆ ಈ ಋಕ್ಕಿನಲ್ಲಿದೆ.



॥ ಸಂಹಿತಾಪಾಠಃ ॥

ಪಿಪೀಳೇ ಅಂಶುರ್ಮದ್ಯೋ ನ ಸಿಂಧುರಾ ತ್ವಾ ಶಮೀ ಶಶಮಾನಸ್ಯ ಶಕ್ತಿಃ ।
ಅಸ್ಮದ್ರ್ಯಕ್‌ಶುಶುಚಾನಸ್ಯ ಯಮ್ಯಾ ಆಶುರ್ನ ರಶ್ಮಿಂ ತುವ್ಯೋಜಸಂ
ಗೋಃ ॥ ೮ ॥

॥ ಪದಪಾಠಃ ॥

ಪಿಪೀಳೇ । ಅಂಶುಃ । ಮದ್ಯಃ । ನ । ಸಿಂಧುಃ । ಆ । ತ್ವಾ । ಶಮೀ । ಶಶಮಾನಸ್ಯ । ಶಕ್ತಿಃ ।

ಅಸ್ಮದ್ರ್ಯಕ್ । ಶುಶುಚಾನಸ್ಯ । ಯಮ್ಯಾಃ । ಆಶುಃ । ನ । ರಶ್ಮಿಂ । ತುವಿऽಓಜಸಂ । ಗೋಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮದ್ಯೋ ಮಾದಯಿತಾಂಶುಃ ಸೋಮಃ ಪಿಪೀಳೇ । ಅಪೀಡ್ಯತ । ಅಭ್ಯಸೂಯತೇತ್ಯರ್ಥಃ । ನೇತಿ ಸಂಪ್ರತ್ಯರ್ಥೇ । ನ ಇದಾನೀಂ ಸಿಂಧುಃ ಸ್ಯಂದಮಾನಃ ಸೋಮಸ್ತ್ವಾ ತ್ವಾಮಾಯಮ್ಯಾಃ । ಆಯಚ್ಛತು । ಶುಶುಚಾನಸ್ಯ ದೀಪ್ಯಮಾನಸ್ಯ ಶಶಮಾನಸ್ಯ ಸ್ತುವತಃ ಸಂಬಂಧ್ಯಸ್ಯದ್ರ್ಯಗಸ್ಮದಭಿಮುಖಂ ಶಮೀ ಶಮನಂ ಶಕ್ತಿಃ ಸ್ತುತಿಕರ್ಮ ಚಾಯಚ್ಛತು । ತತ್ರ ದೃಷ್ಟಾಂತಃ । ಆಶುಃ ಶೀಘ್ರಗಾಮೀ ಯಂತಾ ಗೋರ್ಗಂತುರಶ್ವಸ್ಯ ತುವ್ಯೋಜಸಂ ಬಹುಬಲಂ । ದೃಢಮಿತ್ಯರ್ಥಃ । ರಶ್ಮಿಂ ನ ಅಶ್ವಬಂಧನರಜ್ಜುಮಿವ ತದ್ವತ್ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಮದ್ಯಃ—ಹರ್ಷಕಾರಕವಾದ । ಅಂಶುಃ—ಸೋಮವು । ಪಿಪೀಳೇ—ಹಿಂಡಲ್ಪಟ್ಟದೆ । ನ—ಈಗಲೇ ಸಿಂಧುಃ—ಪ್ರವಹಿಸತಕ್ಕ ಸೋಮವು । ತ್ವಾ—ನಿನ್ನ ಅಭಿಮುಖವಾಗಿ । ಆ ಯಮ್ಯಾಃ—ಹರಿದುಬರಲಿ । ಶುಶುಚಾನಸ್ಯ—ಪ್ರಕಾಶಮಾನನೂ । ಶಶಮಾನಸ್ಯ—ನಿನ್ನನ್ನು ಸ್ತುತಿಸುವವನೂ ಆದ ಸ್ತೋತೃವಿನ ಸಂಬಂಧಿಯಾದುದೂ । ಶಮೀ—ಪಾಪನಾಶಕವಾದುದೂ ಆದ । ಶಕ್ತಿಃ—(ನಿನ್ನನ್ನು

ಸ್ತುತಿಸುವ) ಶಕ್ತಿಯು । ಆಶುಃ—ಶೀಘ್ರಗಾಮಿಯಾದ ಅಶ್ವವಾಹಕನು । ಗೋಃ—(ವೇಗವಾಗಿ) ಸಂಚರಿಸುವ ಅಶ್ವದ । ತುವ್ಯೋಜಸಂ—ಅತ್ಯಧಿಕವಾದ ಬಲವುಳ್ಳ । ರಶ್ಮಿಂ ನ—ಹಗ್ಗ (ಲಗಾಮನ್ನು) ವನ್ನು ಹಿಡಿಯುವಂತೆ । ಅಸ್ಮದ್ರ್ಯಕ್—ನಮಗೆ ಅಭಿಮುಖವಾಗಿ ಬರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಹರ್ಷಕಾರಕವಾದ ಸೋಮವು ನಿನಗಾಗಿ ಹಿಂಡಲ್ಪಟ್ಟಿದೆ. ಪ್ರವಹಿಸತಕ್ಕ ಸೋಮವು ಈಗಲೇ ನಿನ್ನ ಅಭಿಮುಖವಾಗಿ ಹರಿದುಬರಲಿ. ಪ್ರಕಾಶಮಾನನೂ, ನಿನ್ನನ್ನು ಸ್ತುತಿಸುವವನೂ ಆದ ಸ್ತುತಿಕರ್ತನ ಸಂಬಂಧಿಯಾದುದೂ ಆದ ಸ್ತುತಿಶಕ್ತಿಯು ನಮ್ಮ ಅಭಿಮುಖವಾಗಿ ಬರಲಿ. ನಮಗೆ ನಿನ್ನನ್ನು ಸ್ತುತಿಸುವ ಶಕ್ತಿಯನ್ನುಂಟುಮಾಡಲಿ. ಶೀಘ್ರಗಾಮಿಯಾದ ಅಶ್ವವಾಹಕನು ವೇಗವಾಗಿ ಸಂಚರಿಸುವ ಅಶ್ವದ ಅತ್ಯಧಿಕವಾದ ಬಲವುಳ್ಳ ಹಗ್ಗವನ್ನು (ಲಗಾಮನ್ನು) ಹಿಡಿಯುವಂತೆ ಆ ಶಕ್ತಿಯು ನಮ್ಮನ್ನು ಭದ್ರವಾಗಿ ಹಿಡಿದಿರಲಿ.

English Translation.

The exhilarating Soma juice has been expressed : now may the current flow to you and may the expiatory power of the illustrious utterer of praise be directed towards us as the quick rider holds firmly the reins of the steed.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನಿಗಾಗಿ ಸೋಮರಸವು ಹಿಂಡಿ ಸಿದ್ಧಮಾಡಲ್ಪಟ್ಟಿರುವದೆಂದು ವರ್ಣಿಸಿದೆ. ಸೋಮಪಾನದಿಂದ ತೃಪ್ತನಾದ ಇಂದ್ರನನ್ನು ಸ್ತುತಿಸುವ ಶಕ್ತಿಯು ನಮಗೆ ಉಂಟಾಗಲಿ ಎಂದು ಋಷಿಯು ಪ್ರಾರ್ಥಿಸಿದಾನೆ. ಈ ವಿಷಯದಲ್ಲಿ ಒಂದು ದೃಷ್ಟಾಂತವೂ ಇಲ್ಲಿ ಹೇಳಿದೆ. ಕುದುರೆಯ ಮೇಲೆ ಕುಳಿತು ಸವಾರಿಮಾಡುವ ಸವಾರನು ವೇಗವಾಗಿ ಓಡುತ್ತಿರುವ ಕುದುರೆಯನ್ನು ಹತೋಟಿಯಲ್ಲಿಡುವುದಕ್ಕಾಗಿ ಲಗಾಮುಗಳನ್ನು ಬಲವಾಗಿ ಹಿಡಿಯುವಂತೆ ಇಂದ್ರನನ್ನು ಸ್ತುತಿಸುವ ಶಕ್ತಿಯು ನಮ್ಮನ್ನು ಬಲವಾಗಿ ಹಿಡಿದಿರಲಿ ಎಂದರೆ ನಮಗೆ ಇಂದ್ರನನ್ನು ಸ್ತುತಿಸುವ ಬುದ್ಧಿ ಶಕ್ತಿಯೂ ಶ್ರದ್ಧೆಯೂ ಯಾವಾಗಲೂ ನಮ್ಮಲ್ಲಿರಲಿ ಎಂದಭಿಪ್ರಾಯವು ವ್ಯಕ್ತವಾಗಿದೆ.



॥ ಸಂಹಿತಾಪಾಠಃ ॥

ಅಸ್ಮೇ ವರ್ಷಿಷ್ಠಾ ಕೃಣುಹಿ ಜ್ಯೇಷ್ಠಾ ನೃಮ್ಣಾನಿ ಸತ್ರಾ ಸಹುರೇ ಸಹಾಂಸಿ ।
ಅಸ್ಮಭ್ಯಂ ವೃತ್ರಾ ಸುಹನಾನಿ ರಂಧಿ ಜಹಿ ವಧರ್ವನುಷೋ ಮರ್ತ್ಯಸ್ಯ ॥ ೯ ॥

॥ ಪದಪಾಠಃ ॥

ಅಸ್ಮೇ ಇತಿ । ವರ್ಷಿಷ್ಠಾ । ಕೃಣುಹಿ । ಜ್ಯೇಷ್ಠಾ । ನೃಮ್ಣಾನಿ । ಸತ್ರಾ । ಸಹುರೇ । ಸಹಾಂಸಿ ।

ಅಸ್ಮಭ್ಯಂ । ವೃತ್ರಾ । ಸುಽಹನಾನಿ । ರಂಧಿ । ಜಹಿ । ವಧಃ । ವನುಷಃ । ಮರ್ತ್ಯಸ್ಯ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸಹುರೇ ಸಹನಶೀಲೇಂದ್ರ ತ್ವಂ ಸತ್ರಾ ಸರ್ವದಾ ಸಹಾಂಸಿ ಶತ್ರೂನಭಿಭಾವುಕಾನಿ ವರ್ಷಿಷ್ಠಾ ವರ್ಷಿಷ್ಠಾನಿ ಪ್ರವೃದ್ಧಾನಿ ಜ್ಯೇಷ್ಠಾ ಜ್ಯೇಷ್ಠಾನಿ ಪ್ರಶಸ್ತಾನಿ ನೃಮ್ಣಾನಿ ಬಲಾನ್ಯಸ್ಮೇ ಅಸ್ಮಭ್ಯಂ ಕೃಣುಹಿ । ಕುರು । ಹೇ ಇಂದ್ರ ತ್ವಮಸ್ಮಭ್ಯಂ ಸುಹನಾನಿ ಶೋಭನವಧಾನಿ ವೃತ್ರಾ ವೃತ್ರಾಣಿ ಶತ್ರೂನ್ ರಂಧಿ । ರಂಧಯ । ವಶಂ ನಯ । ಕಿಂಚ ವನುಷೋ ಹಿಂಸಕಸ್ಯ ಮರ್ತ್ಯಸ್ಯ ಮರಣಧರ್ಮಣಃ ಶತ್ರೋಃ ಸಂಬಂಧಿ ವಧೋ ಹನನಸಾಧನಮಾಯುಧಂ ಜಹಿ । ನಾಶಯ ॥

॥ ಪ್ರತಿಪದಾರ್ಥ ॥

ಸಹುರೇ—ಶತ್ರುವಿನ ಪ್ರತಿಭಟನೆಯನ್ನು ಸಹಿಸಲು ಶಕ್ತಿಯುಳ್ಳ ಎಲೈ ಇಂದ್ರನೇ । ಸತ್ರಾ—ಯಾವಾಗಲೂ । ಸಹಾಂಸಿ—ಶತ್ರುಗಳನ್ನು ಎದುರಿಸಲು ಯೋಗ್ಯವಾದವೂ । ವರ್ಷಿಷ್ಠಾ—ಪ್ರವೃದ್ಧವಾದವೂ । ಜ್ಯೇಷ್ಠಾ—ಪ್ರಶಸ್ಯವಾದವೂ ಆದ । ನೃಮ್ಣಾನಿ—ಬಲಗಳನ್ನು । ಅಸ್ಮೇ—ನಮಗೆ । ಕೃಣುಹಿ—ಉಂಟುಮಾಡು । ಅಸ್ಮಭ್ಯಂ—ನಮಗೆ (ಕಲ್ಯಾಣ ಉಂಟುಮಾಡಲು) । ಸುಹನಾನಿ—ವಧಾರ್ಹರಾದ । ವೃತ್ರಾ—ಶತ್ರುಗಳನ್ನು । ರಂಧಿ—ನಾಶಮಾಡು । ವನುಷಃ—ಹಿಂಸಕನೂ । ಮರ್ತ್ಯಸ್ಯ—ಮಾನವನೂ ಆದ ಶತ್ರುವಿನ । ವಧಃ—ನಾಶಕಾರಕವಾದ ಆಯುಧವನ್ನು । ಜಹಿ—ನಾಶಮಾಡು.

॥ ಭಾವಾರ್ಥ ॥

ಶತ್ರುವಿನ ಪ್ರತಿಭಟನೆಯನ್ನು ಸಹಿಸಿ ಅವರನ್ನು ಸದೆಬಡಿಯುವ ಶಕ್ತಿಯುಳ್ಳ ಎಲೈ ಇಂದ್ರನೇ, ಶತ್ರುಗಳನ್ನು ಎದುರಿಸಲು ಯೋಗ್ಯವಾದವೂ, ಪ್ರವೃದ್ಧವಾದವೂ, ಪ್ರಶಸ್ಯವಾದವೂ ಆದ ಬಲಗಳನ್ನು ನಮಗೆ ಯಾವಾಗಲೂ ಕೊಡು. ನಮಗೆ ಕಲ್ಯಾಣವನ್ನುಂಟುಮಾಡಲು ವಧಾರ್ಹರಾದ ಶತ್ರುಗಳನ್ನು ನಾಶಮಾಡು. ಹಿಂಸಕನೂ ಮಾನವರ ಗುಂಪಿಗೆ ಸೇರಿದವನೂ ಆದ ಶತ್ರುವಿನ ನಾಶಕಾರಕವಾದ ಆಯುಧವನ್ನು ನಾಶಮಾಡು.

## English Translation.

Enduring Indra, bestow upon us energies, excellent, superior, powerful: bring under subjection to us enemies deserving of death: demolish the weapon of the malevolent man.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯ ಋಕ್ಕುಗಳಾದ ೯, ೧೦, ೧೧ನೆಯ ಋಕ್ಕುಗಳಲ್ಲಿ ಉಪಸಂಹಾರರೂಪವಾಗಿ ತನ್ನ ಇಷ್ಟಾರ್ಥಗಳನ್ನು ಸಲ್ಲಿಸಬೇಕೆಂಬ ಸಾಧಾರಣವರ್ಣನೆ ಇದೆ. ಈ ಋಕ್ಕಿನಲ್ಲಿ ಶತ್ರುಗಳನ್ನು ಗೆಲ್ಲುವುದಕ್ಕೆ ಸಹಾಯಕವಾದ ಶಕ್ತಿಸಾಮರ್ಥ್ಯಗಳನ್ನು ಕೊಡಬೇಕೆಂದೂ, ಶತ್ರುವಿನ ಆಯುಧವನ್ನು ನಾಶಮಾಡಬೇಕೆಂದೂ ಪ್ರಾರ್ಥಿಸಿದೆ.



॥ ಸಂಹಿತಾಪಾಠಃ ॥

ಅಸ್ಮಾಕಮಿತ್ಸು ಶೃಣುಹಿ ತ್ವಮಿಂದ್ರಾಸ್ಮಭ್ಯಂ ಚಿತ್ರಾँ ಉಪ ಮಾಹಿ ವಾಜಾನ್।
ಅಸ್ಮಭ್ಯಂ ವಿಶ್ವಾ ಇಷಣಃ ಪುರಂಧೀರಸ್ಮಾಕಂ ಸು ಮಘವನ್ಬೋಧಿ ಗೋದಾಃ ॥ ೧೦ ॥

॥ ಪದಪಾಠಃ ॥

ಅಸ್ಮಾಕಂ । ಇತ್ । ಸು । ಶೃಣುಹಿ । ತ್ವಂ । ಇಂದ್ರ । ಅಸ್ಮಭ್ಯಂ । ಚಿತ್ರಾನ್ । ಉಪ । ಮಾಹಿ । ವಾಜಾನ್ ॥
ಅಸ್ಮಭ್ಯಂ । ವಿಶ್ವಾಃ । ಇಷಣಃ । ಪುರಂऽಧೀಃ । ಅಸ್ಮಾಕಂ । ಸು । ಮಘऽವನ್ । ಬೋಧಿ । ಗೋऽದಾಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಸ್ಮಾಕಮಿತ್ ಅಸ್ಮದೀಯಾ ಏವ ಸ್ತುತೀಃ ಸು ಸುಷ್ಠು ಶೃಣುಹಿ । ತಥಾ ಹೇ ಇಂದ್ರ ತ್ವಂ ಚಿತ್ರಾನ್ ಚಾಯನೀಯಾನಿ ವಾಜಾನನ್ನಾನ್ಯಸ್ಮಭ್ಯಮುಪ ಮಾಹಿ । ದೇಹಿ । ಕಿಂಚ ಅಸ್ಮಭ್ಯಂ ವಿಶ್ವಾಃ ಸರ್ವಾಃ ಪುರಂಧೀರ್ಬುದ್ಧೀರಿಷಣಃ । ಪ್ರೇರಯ । ಅಪಿ ಚ ಹೇ ಮಘವನ್ಧನವನ್ನಿಂದ್ರ ಅಸ್ಮಾಕಂ ಗೋದಾ ಗವಾಂ ದಾತಾ ಸು ಸುಷ್ಠು ಬೋಧಿ । ಭವ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಅಸ್ಮಾಕಮಿತ್—ನಮ್ಮ ಸ್ತುತಿಗಳನ್ನೇ । ಸು—ಅತಿಶಯವಾಗಿ । ಶೃಣುಹಿ—ಕೇಳು । ಚಿತ್ರಾನ್—ಆಕರ್ಷಕಗಳಾದ । ವಾಜಾನ್—ಅನ್ನಗಳನ್ನು । ಅಸ್ಮಭ್ಯಂ—ನಮಗೆ । ಉಪ ಮಾಹಿ—ಒದಗಿಸಿಕೊಡು । ಅಸ್ಮಭ್ಯಂ—ನಮಗೆ । ವಿಶ್ವಾಃ—ಸಮಸ್ತವಾದ । ಪುರಂಧೀಃ—ಬುದ್ಧಿಗಳನ್ನೂ । ಇಷಣಃ—ಪ್ರೇರಿಸು । ಮಘವನ್—ಧನವಂತವಾದ ಎಲೈ ಇಂದ್ರನೇ । ಅಸ್ಮಾಕಂ—ನಮಗೆ । ಗೋದಾಃ—ಗೋವುಗಳನ್ನು ಕೊಡುವವನಾಗಿ । ಸು—ಶ್ರೇಷ್ಠನಾದ ದಾತೃವಾಗಿ । ಬೋಧಿ—ಆಗಿರು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಇತರರ ಸ್ತುತಿಗಳನ್ನು ಲಕ್ಷಿಸದೇ, ನಮ್ಮ ಸ್ತುತಿಗಳನ್ನೇ ಅತಿಶಯವಾಗಿ ಕೇಳು. ನಮಗೆ ಆಕರ್ಷಕವಾದ ಅನ್ನಗಳನ್ನು ಒದಗಿಸಿಕೊಡು ನಮಗೆ ಸಮಸ್ತವಾದ ಬುದ್ಧಿಗಳನ್ನೂ ಪ್ರೇರಿಸು. ಧನವಂತನಾದ ಎಲೈ ಇಂದ್ರನೇ, ಶ್ರೇಷ್ಠವಾದ ದಾತೃವಾಗಿ ನಮಗೆ ಗೋದಾತನಾಗಿರು.

English Translation.

Hear our praises, Indra, and bestow upon us many kinds of food : fulfil all over desires, and know yourself, Maghavan, to be to us the donor of cattle.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಶತ್ರುವಧೆಗೆ ಸಹಾಯಮಾಡಬೇಕೆಂದು ಪ್ರಾರ್ಥಿಸಿ, ಈ ಋಕ್ಕಿನಲ್ಲಿ ಇಂದ್ರನನ್ನುದ್ದೇಶಿಸಿ ತಮ್ಮ ಸ್ತುತಿಗಳನ್ನು ಕೇಳಿ ಹರ್ಷಿತನಾಗಿ ತಮಗೆ ಅನ್ನಾದ್ಯಾಹಾರಗಳನ್ನೂ, ಸದ್ಬುದ್ಧಿಯನ್ನೂ, ಗೋವುಗಳನ್ನೂ ಕೊಟ್ಟು ರಕ್ಷಿಸುತ್ತಿರಬೇಕೆಂದು ಪ್ರಾರ್ಥನೆಯು ಉಕ್ತವಾಗಿದೆ.



॥ ಸಂಹಿತಾಪಾಠಃ ॥

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।

ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥ ೧೧ ॥

॥ ಪದಪಾಠಃ ॥

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।

ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರ್ಋಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಸ್ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನಾದ್ಭಿರ್ನದೀರಿವ ಪೀಪೇಃ । ಪ್ಯಾಯಯ । ಪ್ರವೃದ್ಧಂ ಕುರು । ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ

ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ನು—ಅತಿಶಯವಾಗಿ । ಸ್ತುತಃ—ಹಿಂದಿನ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧೆಯಿಂದ । ಗೃಣಾನಃ—(ನಮ್ಮಿಂದಲೂ) ಸ್ತುತನಾಗತಕ್ಕವನೂ ಆಗಿ । ನದ್ಯಃ ನ—ನದಿಗಳನ್ನು ಉದಕಗಳಿಂದ ತುಂಬುವಂತೆ । ಜರಿತ್ರೇ—ಸ್ತೋತೃವಾದ ನನಗೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು । ಹರಿವಃ—ಹರಿಸಂಜ್ಞಕಗಳಾದ ಅಶ್ವಗಳುಳ್ಳ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಿರ್ಮಿತವಾಗುತ್ತದೆ । ರಥ್ಯಃ—ರಥಗಳನ್ನು ಹೊಂದಿರುವ ನಾವು । ಧಿಯಾ—ಪ್ರಜ್ಞಾಪೂರ್ವಕವಾದ ಸ್ತುತಿಯಿಂದ । ಸದಾಸಾಃ—ನಿನ್ನನ್ನು ಪೂಜಿಸಿ ಹವಿಸ್ಸನ್ನ ರ್ಪಿಸುವವರಾಗಿ । ಸ್ಯಾಮ—ಆಗುವಂತೆ ಅನುಗ್ರಹಿಸು.

। ಭಾವಾರ್ಥ ।

ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಅತಿಶಯವಾಗಿ ಸ್ತುತನಾದವನೂ, ಅದೇ ಶ್ರದ್ಧೆಯಿಂದ ನಮ್ಮಿಂದಲೂ ಸ್ತುತನಾಗತಕ್ಕವನೂ ಆಗಿ ನದಿಗಳನ್ನು ಉದಕಗಳಿಂದ ತುಂಬುವಂತೆ ಸ್ತೋತೃವಾದ ನನಗೆ ಅನ್ನವನ್ನು ತುಂಬಿಕೊಡು. ಹರಿಸಂಜ್ಞಕಗಳಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತೋತ್ರವು ನಿರ್ಮಿತವಾಗುತ್ತದೆ. ರಥಗಳನ್ನು ಹೊಂದಿರುವ ನಾವು ಪ್ರಜ್ಞಾಪೂರ್ವಕವಾದ ಸ್ತುತಿಯಿಂದ ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ ಆಗುವಂತಾಗಲಿ.

## English Translation.

Glorified (in the past), glorified, Indra, at present, satisfy your worshipper with food, as rivers (are filed with water) : lord of horses, a new hymn has been made for you : may we, possessed of chariots, be ever diligent in your praise.

। ವಿಶೇಷವಿಷಯಗಳು ।

ಈ ಋಕ್ಕು ಈ ಸೂಕ್ತದಲ್ಲಲ್ಲದೆ ೨೦–೨೪ ನೇ ಸೂಕ್ತಗಳಲ್ಲಿ ಕೊನೆಯ ಋಕ್ಕುಗಳಾಗಿ ಪಠಿತವಾಗಿದೆ.

ಇಂದ್ರ ನು ಸ್ತುತಃ ನು ಗೃಣಾನಃ ನದ್ಯಃ ನ ಜರಿತ್ರೇ ಇಷಂ ಪೀಪೇಃ—ಎಲೈ ಇಂದ್ರನೇ, ನೀನು ಹಿಂದೆ ಅನೇಕ ಋಷಿಗಳಿಂದ ಸ್ತುತಿಸಲ್ಪಟ್ಟಿರುವೆ. ಈಗ ನಮ್ಮಿಂದ ಸ್ತುತಿಸಲ್ಪಡುವೆ. ನದಿಗಳಿಗೆ ವೃಷ್ಟ್ಯುದಕವು ತುಂಬಿ ಪೂರ್ಣವಾಗಿ ಹರಿಯುವಂತೆ ನಿನ್ನನ್ನು ಸ್ತೋತ್ರಮಾಡುವ ನಮಗೆ ಅನ್ನವನ್ನು (ಅನ್ನಾದ್ಯಾಹಾರವನ್ನು) ತುಂಬಿ ಕೊಡು, ಎಂದರೆ ಯಥೇಚ್ಛವಾಗಿ ಕೊಡು.

ನು—ನು ಇತ್ಯೇಷೋಽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧–೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ

ಎನ್ನುವಾಗ ನು ಎಂಬ ಶಬ್ದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. ಕಥಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ ಅಥಾಪ್ಯುಪಮಾರ್ಥೇ ಭವತಿ । ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿರುವುದು ಉದಾಹರಣೆಗೆ—

> ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।
> ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ತಯೋ ರುರುಹುರಿಂದ್ರ ಪೂರ್ವೀಃ ॥
>
> (ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ (ನಿ. ೧-೪), ವೃಕ್ಷಸ್ಯ ನು ತೇ । ವೃಕ್ಷಸ್ಯೇವ ತೇ । ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಶಬ್ದಕ್ಕೆ ಉಪಮಾರ್ಥವನ್ನು ಹೇಳಿದೆಯೆಂದು ತಿಳಿಸಿದಾರೆ. ಹೀಗೆಯೇ—

> ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।
>
> (ಋ. ಸಂ. ೭-೧೦೦-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂಬ ಶಬ್ದಕ್ಕೆ ಕ್ಷಿಪ್ರಂ ಬೇಗನೆ, ಜಾಗ್ರತೆಯಾಗಿ ಎಂಬರ್ಥವೂ,

> ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।
>
> (ಋ. ಸಂ. ೭-೧೯-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂದರೆ ಅದ್ಯ, ಈಗ, ಒಡನೆಯೇ ಎಂಬ ಅರ್ಥವಿರುವುದೆಂದು ನಿರುಕ್ತಕಾರರು ಉದಾಹರಣೆ ಸಹಿತವಾಗಿ ವಿವರಿಸಿದಾರೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರಂ ಬೇಗನೆ, ಶೀಘ್ರವಾಗಿ ಎಂದರ್ಥವು.

ಜರಿತ್ರೇ—ಜರಿತೃಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯) ಜರಿತಾ ಗರಿತಾ (ನಿ. ೧-೭) ಎಂದು ನಿರ್ವಚನವೂ ಇರುವುದರಿಂದ ಜರಿತ್ರೇ ಎಂದರೆ ಇಲ್ಲಿ ಸ್ತೋತ್ರಮಾಡುವ ನನಗೆ ಎಂದರ್ಥವು.

ನ—ನ ಎಂಬ ಶಬ್ದಕ್ಕೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು—

> ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಾಧ್ಯಾಯಂ । ನೇಂದ್ರಂ ದೇವಮಮಂಸತ ಇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಂ ಇತ್ಯುಪಮಾರ್ಥೀಯಃ । ಉಪರಿಷ್ಟಾದುಪಚಾರಸ್ತಸ್ಯ ಯೇನೋಪಮಿಮೀತೇ ॥ (ನಿ. ೧-೪)

ಎಂದರೆ ನ ಎಂಬ ಶಬ್ದವು ಲೋಕವ್ಯವಹಾರದ ಭಾಷೆಯಲ್ಲಿ ಎಂದರೆ, ವೇದಭಾಷೆಯಲ್ಲದ ಆಧುನಿಕ ಸಂಸ್ಕೃತ ಭಾಷೆಯಲ್ಲಿ ನಿಷೇಧಾರ್ಥದಲ್ಲಿ (ಇಲ್ಲ, ಅಲ್ಲ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು. ಇದು ಎಲ್ಲರಿಗೂ ತಿಳಿದೇ ಇದೆ. ಆದರೆ ವೇದಗಳಲ್ಲಿ ನಿಷೇಧಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ ನ ಎಂಬ ಶಬ್ದದ ಪ್ರಯೋಗವಿರುವುದು. ಹೇಗೆಂದರೆ— ನೇಂದ್ರಂ ದೇವಮಮಂಸತ ಎಂಬ ವಾಕ್ಯದಲ್ಲಿನ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿರುವುದು.

ಪ್ರತಿಷೇಧವೆಂದರೆ ಒಬ್ಬ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಎದುರಿಗೆ ಹೊಗಳದೇ ಇರುವುದು. ಇಂದ್ರನನ್ನು ದೀಪ್ತಿಯುಕ್ತನಾದವನೆಂದು ತಿಳಿಯಲಾಗುವುದಿಲ್ಲ ಎಂಬ ವಾಕ್ಯದಲ್ಲಿ ಇಲ್ಲ (ನ ಎಂಬುದರ ಅರ್ಥ) ಎಂಬ ಶಬ್ದವು ಇಂದ್ರನ ವಿಷಯಕವಾದ ಉಪಚಾರೋಕ್ತಿಗೆ ವಿರುದ್ಧವಾದ ಅರ್ಥವನ್ನು ಸೂಚಿಸುವುದು. ಇದಕ್ಕೆ ಪ್ರತಿಷೇಧಾರ್ಥವೆಂದು ಹೆಸರು. ದುರ್ಮದಾಸೋ ನ ಸುರಾಯಾಂ ಎಂಬ ವಾಕ್ಯದಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು (ಹೋಲಿಕೆಯನ್ನು) ಸೂಚಿಸುವುದು. ಮದ್ಯವನ್ನು ಪಾನಮಾಡಿದ ಜನರಂತೆ ದುರಹಂಕಾರವುಳ್ಳವರು ಎಂದು ಈ ವಾಕ್ಯದ ಅರ್ಥವು. ಇಲ್ಲಿ ಒಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳನ್ನು ಮತ್ತೊಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳಿಗೆ ಹೋಲಿಸಿ ಹೇಳುವುದೇ ಉಪಮಾರ್ಥವು. ಮದ್ಯಪಾನಮಾಡಿದವರು ಮತಿಹೀನರಾಗಿ ಅಹಂಕಾರದಿಂದ ನೀಚಮಾರ್ಗದಲ್ಲಿ ವರ್ತಿಸುವರು. ಆ ಜನರಂತೆ ದುರಹಂಕಾರವುಳ್ಳವರು ಎಂಬುದೇ ಉಪಮಾರ್ಥವು. ಈ ವಿಧವಾದ ಅರ್ಥಗಳನ್ನು ವೇದಗಳಲ್ಲಿ ನ ಎಂಬ ಪದದಿಂದಲೂ, ಇವ ಎಂಬ ಪದದಿಂದಲೂ ನಿರ್ದೇಶಿಸಲ್ಪಡುವುದು. ಈ ವಿಧವಾದ ಉಪಮಾರ್ಥದಲ್ಲಿ ನ ಎಂಬ ಶಬ್ದದ ಪ್ರಯೋಗವು ವೇದಗಳಲ್ಲಿ ಮಾತ್ರ ಇರುವುದು. ಬಳಸುವ ಭಾಷೆಯಲ್ಲಿಲ್ಲ. ಆದಕ್ಕೆ ಬದಲಾಗಿ ಅಲ್ಲಿ ಇವ ಎಂಬ ಶಬ್ದದ ಪ್ರಯೋಗಮಾತ್ರವಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ವಾಮದೇವಋಷಿಯು ದೇವತೆಗೆ ಹೊಸದಾಗಿ ರಚಿತವಾದ ಸ್ತೋತ್ರವನ್ನರ್ಪಿಸಿ ದೇವತೆಯ ಅನುಗ್ರಹವನ್ನು ಪ್ರಾರ್ಥಿಸಿರುವುದು ಉಕ್ತವಾಗಿದೆ.

## ಇಪ್ಪತ್ತಮೂರನೆಯ ಸೂಕ್ತವು.

ಕಥಾ ಮಹಾಮಿತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಋತಸ್ಯ ಹೀತ್ಯಾದ್ಯಾಸ್ತಿಸ್ರ ಋತದೇವತಾಕಾ ವಾ । ತಥಾ ಚಾನುಕ್ರಾಂತಂ । ಕಥೋಪಾಂತ್ಯಾಸ್ತಿಸ್ರ ಋತದೇವ್ಯೋ ವೇತಿ ॥ ಆಭಿಪ್ಲವಿಕೇಽಹನಿ ದಶರಾತ್ರೇ ಪ್ರಥಮೇಽಹನಿ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರೇಽಹೀನಸೂಕ್ತಸ್ಯ ಸ್ಥಾನ ಇದಂ ತೃತೀಯಂ ಸಂಪಾತಸೂಕ್ತಂ । ಸೂತ್ರಿತಂ ಚ । ಕಥಾ ಮಹಾಮಿಂದ್ರಃ ಪೂರ್ಭಿದ್ಯ ಏಕ ಇತ್ । ಆ. ೭–೫ । ಇತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ । ತಥೈವ ಪಂಚಮಾರಣ್ಯಕೇ ಶೌನಕೇನ ಸೂತ್ರಿತಂ ಚ । ಕಥಾ ಮಹಾಮವೃಧತ್ಕಸ್ಯ ಹೋತುರಿತಿ ಸಂಪಾತಃ । ಐ. ಆ. ೫–೨–೨ । ಇತಿ ॥

ಅನುವಾದವು—ಕಥಾ ಮಹಾಂ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಈ ಸೂಕ್ತದ ಋತಸ್ಯ ಹಿ ಎಂದು ಮೊದಲಾಗುವ ಮೂರು ಋಕ್ಕುಗಳು (೮–೧೦ ಋಕ್ಕುಗಳು) ಇಂದ್ರ ಅಥವಾ ಋತುದೇವತಾಕವು. ಅನುಕ್ರಮಣಿಕೆಯಲ್ಲಿ—ಕಥೋಪಾಂತ್ಯಾಸ್ತಿಸ್ರ ಋತದೇವ್ಯೋ ವಾ ಎಂದು ಹೇಳಿರುವುದು. ಅಭಿಪ್ಲವವೆಂಬ ಯಾಗದಲ್ಲಿಯೂ, ದಶರಾತ್ರವೆಂಬ ಯಾಗದ ಮೊದಲನೆಯ ದಿವಸದಲ್ಲಿಯೂ ಮಾಧ್ಯಂದಿನ ಸವನಕಾಲದಲ್ಲಿ ಮೈತ್ರಾವರುಣ ಶಸ್ತ್ರಮಂತ್ರ ಪಠನಮಾಡುವಾಗ ಅಹೀನಸೂಕ್ತದ ಸ್ಥಾನದಲ್ಲಿ ಎಂದರೆ

ಅಹೀನ ಸೂಕ್ತಕ್ಕೆ ಬದಲಾಗಿ ಈ ಸೂಕ್ತವನ್ನು ಮೂರನೆಯ ಸಂಪಾತ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಕಥಾಮಹಾಮಿಂದ್ರಃ ಪೂರ್ಭಿದ್ಯ ಏಕ ಇತ್ ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು. ಮತ್ತು ಮಹಾವ್ರತದಲ್ಲಿಯೂ ನಿಷ್ಕೇವಲ್ಯಶಸ್ತ್ರದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು—ಕಥಾ ಮಹಾಮವೃಧತ್ಕಸ್ಯ ಹೋತುರಿತಿ ಸಂಪಾತಃ ಎಂಬ ಐತರೇಯಾರಣ್ಯಕ ವಾಕ್ಯದಲ್ಲಿ (ಐ. ಆ. ೫-೨-೨) ಪಂಚಮಾರಣ್ಯಕದಲ್ಲಿ ಶೌನಕಮಹರ್ಷಿಗಳಿಂದ ಸೂತ್ರಿತವಾಗಿರುವುದು.

## ಸೂಕ್ತ—೨೩

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೩ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ವಾಮದೇವಃ ॥

॥ ದೇವತಾ—೧-೭, ೧೧. ಇಂದ್ರಃ । ೮-೧೦ ಇಂದ್ರ ಋತದೇವೋ ವಾ ॥

ಛಂದಃ :—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕಥಾ ಮಹಾಮವೃಧತ್ಕಸ್ಯ ಹೋತುರ್ಯಜ್ಞಂ ಜುಷಾಣೋ ಅಭಿ ಸೋಮಮೂಧಃ ।
ಪಿಬನ್ನುಶಾನೋ ಜುಷಮಾಣೋ ಅಂಧೋ ವವಕ್ಷ ಋಷ್ವಃ ಶುಚತೇ ಧನಾಯ ॥ ೧ ॥

॥ ಪದಪಾಠಃ ॥

ಕಥಾ । ಮಹಾಂ । ಅವೃಧತ್ । ಕಸ್ಯ । ಹೋತುಃ । ಯಜ್ಞಂ । ಜುಷಾಣಃ । ಅಭಿ । ಸೋಮಂ । ಊಧಃ ।
ಪಿಬನ್ । ಉಶಾನಃ । ಜುಷಮಾಣಃ । ಅಂಧಃ । ವವಕ್ಷೇ । ಋಷ್ವಃ । ಶುಚತೇ । ಧನಾಯ ॥ ೧ ॥

॥ ಸಾಯಣಭಾಷ್ಯಂ ॥

ಮಹಾಂ ಮಹಾಂತಂ ಗುಣೈಃ ಪ್ರವೃದ್ಧಮಿಂದ್ರಂ ಕಥಾ ಕಥಂ ಕೇನ ಪ್ರಕಾರೇಣಾವೃಧತ್ । ವರ್ಧಯೇತ್ । ಅಸ್ಮತ್ಪ್ರೇರಿತಾ ಸ್ತುತಿರಿತಿ ಶೇಷಃ । ತಸ್ಯ ಮಹಿಮ್ನೋಽತಿಮಹತ್ತ್ವಾದಿತಿ ಭಾವಃ । ಸ

ಏವೇಂದ್ರೋ ಹೋತುರ್ಹೋಮನಿಷ್ಪಾದಕಸ್ಯ ಕಸ್ಯ ಯಜಮಾನಸ್ಯ ಯಜ್ಞಂ ಯಾಗಂ ಜುಷಾಣಃ ಪ್ರೀಯಮಾಣಃ ಸನ್ ಅಭಿ । ಗಚ್ಛೇದಿತಿ ಶೇಷಃ । ಉಪಸರ್ಗಶ್ರುತೇರುಚಿತಕ್ರಿಯಾಧ್ಯಾಹಾರಃ । ಕಿಂಚ ಊಧ ಉದ್ಧೃತಮತಿಪ್ರವೃದ್ಧಂ ಸೋಮಮಂಧಃ ಸೋಮಲಕ್ಷಣಮನ್ನಂ ಪಿಬನ್ನಾಸ್ವಾದಯನ್ ಉಶಾನಸ್ತದೇ-ವಾನ್ನಂ ಕಾಮಯಮಾನೋ ಜುಷಮಾಣಃ ಸೇವಮಾನಶ್ಚ ಋಷ್ವೋ ಮಹಾನಿಂದ್ರಃ ಶುಚತೇ ಪ್ರದೀ-ಪ್ತಾಯ ಧನಾಯ ಹಿರಣ್ಯಾದಿಲಕ್ಷಣಾಯ । ಉಕ್ತಲಕ್ಷಣಂ ಧನಂ ಕಸ್ಮೈ ಯಜಮಾನಾಯ ದಾತುಂ ವವಕ್ಷೇ । ವಹತಿ । ಪೀತಮೇವಾನ್ನಂ ಜಠರೇ ಧಾರಯತಿ । ಅನೇನ ವಾಕ್ಯದ್ವಯೇನೇಂದ್ರಸ್ಯಾಚಿಂತ್ಯ-ಚರಿತತ್ವಂ ಖ್ಯಾಪಿತಂ ಭವತಿ ॥

॥ ಪ್ರತಿಪದಾರ್ಥ ॥

ಮಹಾಂ—ಮಹದ್ಗುಣಗಳಿಂದ ಕೂಡಿದ ಇಂದ್ರನನ್ನು । ಕಥಾ—ಯಾವ ಪ್ರಕಾರವಾಗಿ । ಅವೃಧತ್—(ನಮ್ಮ ಸ್ತುತಿಗಳು) ಪ್ರವೃದ್ಧನಾಗಿ ಬೆಳೆಯುವಂತೆ ಮಾಡುತ್ತವೆ । (ಅದೇ ಮಹಾತ್ಮನಾದ ಇಂದ್ರನು) ಹೋತುಃ—ಹೋಮನಿಷ್ಪಾದಕನಾದ । ಕಸ್ಯ—ಯಾವ ಯಜಮಾನನ । ಯಜ್ಞಂ—ಯಾಗವನ್ನು । ಜುಷಾಣಃ—ಸೇವಿಸುತ್ತಾ । ಅಭಿ—(ಯಜಮಾನನ) ಅಭಿಮುಖನಾಗಿ ಹೋಗುತ್ತಾನೆ । ಊಧಃ—ಪ್ರಭೂತವಾದ । ಸೋಮಂ ಅಂಧಃ—ಸೋಮರೂಪವಾದ ಅನ್ನವನ್ನು । ಪಿಬನ್—ಪಾನಮಾಡುತ್ತಾ । ಉಶನ್—ಅದನ್ನೇ (ಪುನಃ) ಅಪೇಕ್ಷಿಸುತ್ತಲೂ । ಜುಷಮಾಣಃ—(ಪದೇಪದೇ) ಸೇವಿಸುತ್ತಲೂ । ಋಷ್ವಃ—ಮಹಾತ್ಮನಾದ ಇಂದ್ರನು । ಶುಚತೇ—ಪ್ರಕಾಶಮಾನವಾದ । ಧನಾಯ—ಧನವನ್ನು । ವವಕ್ಷೇ—(ಯಾವ ಯಜಮಾನನಿಗೆ ಕೊಡಲು) ತನ್ನಲ್ಲಿ ವಹಿಸಿದ್ದಾನೆ ?

॥ ಭಾವಾರ್ಥ ॥

ಮಹದ್ಗುಣಗಳಿಂದ ಕೂಡಿದ ಇಂದ್ರನನ್ನು ನಮ್ಮ ಸ್ತುತಿಗಳು ಯಾವಪ್ರಕಾರವಾಗಿ ಪ್ರವೃದ್ಧನಾಗುವಂತೆ ಮಾಡುತ್ತವೆ? ಮಹಾತ್ಮನಾದ ಇಂದ್ರನು ಹೋಮನಿಷ್ಪಾದಕನಾದ ಯಾವ ಯಜಮಾನನ ಯಾಗವನ್ನು ಸೇವಿಸುತ್ತಾ ಯಜಮಾನನ ಅಭಿಮುಖನಾಗಿ ಹೋಗುತ್ತಾನೆ? ಪ್ರಭೂತವಾದುದೂ ಸೋಮರೂಪವಾದುದೂ ಆದ ಅನ್ನವನ್ನು ಪಾನಮಾಡುತ್ತಲೂ, ಪುನಃ ಪುನಃ ಅದನ್ನೇ ಅಪೇಕ್ಷಿಸುತ್ತಲೂ, ಪದೇಪದೇ ಅದನ್ನೇ ಸೇವಿಸುತ್ತಲೂ ಮಹಾತ್ಮನಾದ ಇಂದ್ರನು ಪ್ರಕಾಶಮಾನವಾದ ಧನವನ್ನು ಯಾವ ಯಜಮಾನನಿಗೆ ಕೊಡಲು ತನ್ನಲ್ಲಿ ವಹಿಸಿದ್ದಾನೆ ?

## English Translation.

In what manner may (any one) extol the mighty Indra ? at the sacrifice of what worshipper may he, propitiated, be present drinking the sacificial Soma beverge, desirous of the (sacred) food, and pleased (by the oblation)? the mighty Indra is borne (to the rite) for the purpose of bestowing brilliant wealth.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ವಾಮದೇವಋಷಿಯು ಪ್ರಶ್ನೋತ್ತರರೂಪವಾದ ವಾಕ್ಯಗಳಿಂದ ಇಂದ್ರನ ಗುಣಗಳನ್ನು ವರ್ಣನೆ ಮಾಡುವನು.

**ಮಹಾಂ ಕಥಾ ಅವೃಧತ್**—ಮಹಾಮಹಿಮನಾದ ಇಂದ್ರನನ್ನು ಯಾವ ಪ್ರಕಾರವಾದ ಸ್ತೋತ್ರಗಳಿಂದ ಪ್ರವೃದ್ಧನಾಗುವಂತೆ ಮಾಡೋಣ ಎಂದು ಋಷಿಯು ಪ್ರಶ್ನಿಸುತ್ತಾನೆ. ದೇವತೆಗಳ ಗುಣಗಳನ್ನು ವರ್ಣಿಸುವುದರಿಂದ ಅವರು ಪ್ರವೃದ್ಧರಾಗುವರು ಎಂದರೆ ಸ್ತೋತ್ರಮಾಡುವವರ ವಿಷಯದಲ್ಲಿ ಅನುಗ್ರಹಾತ್ಮಕಬುದ್ಧಿಯುಳ್ಳವರಾಗುವರು ಎಂದಭಿಪ್ರಾಯವು. **ತಮಿದ್ವರ್ಧಂತು ನೋ ಗಿರಃ । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ** ಇತ್ಯಾದಿವಾಕ್ಯಗಳು—ಸ್ತೋತ್ರರೂಪವಾದ ವಾಕ್ಯಗಳು ದೇವತೆಗಳನ್ನು ವೃದ್ಧಿಪಡಿಸುವವು (ಸಂತೋಷಪಡಿಸುವವು) ಎಂಬ ವಿಷಯವನ್ನು ಸಮರ್ಥಿಸುತ್ತವೆ. ಇಂದ್ರನು ಮಹಾಗುಣವಿಶಿಷ್ಟನಾದ್ದರಿಂದ ಇವನನ್ನು ಯಾವವಿಧವಾದ ಸ್ತುತಿವಾಕ್ಯಗಳಿಂದ ಸಂತೋಷಪಡಿಸಬೇಕು? ಎಂದು ಋಷಿಯು ಪ್ರಶ್ನಿಸಿ ಇಂದ್ರನ ಮಹತ್ತ್ವವನ್ನೂ, ಸ್ತೋತ್ರಮಾಡುವ ಋಷಿಗಳ ಅಸಾಮರ್ಥ್ಯತೆಯನ್ನೂ ವ್ಯಕ್ತಪಡಿಸಿರುವನು.

**ಹೋತುಃ ಕಸ್ಯ ಯಜ್ಞಂ ಜುಷಾಣಃ ಅಭಿ**—ಇಂದ್ರನು ಯಜ್ಞಮಾಡುವ ಅಥವಾ ಆಹ್ವಾನಮಾಡುವ ಅನೇಕ ಯಜಮಾನರ ಯಜ್ಞಗೃಹಗಳಿಗೆ ಹೋಗುವನು. ಈಗ ಯಾವ ಯಜಮಾನನ ಯಜ್ಞದಲ್ಲಿ ಸೇವಿಸಲ್ಪಡಲು ಹೋಗಿರುವನು ? ಎಂದು ಋಷಿಯು ಪ್ರಶ್ನೆಮಾಡಿರುವನು. ಈ ವಾಕ್ಯದಲ್ಲಿ ಕ್ರಿಯಾಪದವಿಲ್ಲದಿದ್ದರೂ **ಉಪಸರ್ಗಶ್ರುತೇರುಚಿತಕ್ರಿಯಾಧ್ಯಾಹಾರಃ** ಎಂಬ ವ್ಯಾಕಾನುಸಾರವಾಗಿ ಅಭಿ ಎಂಬ ಉಪಸರ್ಗಕ್ಕೆ ಸರಿಹೋಗುವ **ಗಚ್ಛೇತ್** ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿ ಅರ್ಥವನ್ನು ಹೇಳಬೇಕೆಂದು ಭಾಷ್ಯಕಾರರು ವಿವರಿಸಿದ್ದಾರೆ.

**ಊಧಃ ಸೋಮಂ ಅಂಧಃ ಪಿಬನ್ ಉಶನ್ ಜುಷಮಾಣಃ ಋಷ್ವಃ ಶುಚತೇ ಜನಾಯ ವವಕ್ಷೇ**—ಇಂದ್ರನು ಸೋಮಪಾನದಲ್ಲಿ ಬಹಳವಾದ ಆಸಕ್ತಿಯುಳ್ಳವನಾದುದರಿಂದ ಸೋಮಪಾನವನ್ನು ಆಗಾಗ ಅಪೇಕ್ಷಿಸುವನು ಮತ್ತೂ ಮತ್ತು ಪಾನಮಾಡುವನು. ಸೋಮಪಾನಾನಂತರ ಮಹತ್ಸ್ವರೂಪವುಳ್ಳ ಇಂದ್ರನು ಸಂತುಷ್ಟನಾಗಿ ಯಜಮಾನನಿಗೆ ಇಷ್ಟವಾದ ಮತ್ತು ಉತ್ತಮವಾದ ಧನಗಳನ್ನು ಕೊಡುವನು. ಈಗ ಆ ರೀತಿ ಯಾವ ಯಜಮಾನನಿಗೆ ಧನಾದಿಗಳನ್ನು ಕೊಡಲು ಅವುಗಳನ್ನು ತೆಗೆದುಕೊಂಡು ಹೋಗುತ್ತಿರುವನು ಎಂಬ ಅಂಶವು ಈ ವಾಕ್ಯದಲ್ಲಿ ಉಕ್ತವಾಗಿದೆ.



॥ ಸಂಹಿತಾಪಾಠಃ ॥

ಕೋ ಅಸ್ಯ ವೀರಃ ಸಧಮಾದಮಾಪ ಸಮಾನಂಶ ಸುಮತಿಭಿಃ ಕೋ ಅಸ್ಯ ।
ಕದಸ್ಯ ಚಿತ್ರಂ ಚಿಕಿತೇ ಕದೂತೀ ವೃಧೇ ಭುವಚ್ಛಶಮಾನಸ್ಯ ಯಜ್ಯೋಃ ॥

॥ ಪದಪಾಠಃ ॥

ಕಃ । ಅಸ್ಯ । ವೀರಃ । ಸಧ್ಽಮಾದಂ । ಆಪ । ಸಂ । ಆನಂಶ । ಸುಮತಿ೽ಭಿಃ । ಕಃ । ಅಸ್ಯ ।

ಕತ್ । ಅಸ್ಯ । ಚಿತ್ರಂ । ಚಿಕಿತೇ । ಕತ್ । ಊತೀ । ವೃಧೇ । ಭುವತ್ । ಶಶಮಾನಸ್ಯ । ಯಜ್ಯೋಃ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಸಂಬಂಧಿನಂ ಸಧಮಾದಂ । ಸಹ ಮಾದ್ಯಂತೀತಿ ಸಧಮಾದಃ ಸಂಗ್ರಾಮಃ । ತಂ ಸಹ ಸೋಮಪಾನಂ ವಾ ವೀರಃ ಸ್ತೋತ್ರಾಣಾಮಮಿತ್ರಾಣಾಂ ವಾ ವೀರಯಿತಾ ಕಃ ಪುಮಾನಾಪ । ಪ್ರಾಪ್ನೋತಿ । ಕಶ್ಚಾಸ್ಯೇಂದ್ರಸ್ಯ ಸುಮತಿಭಿಃ ಶೋಭನಾಭಿರನುಗ್ರಹಬುದ್ಧಿಭಿಃ ಸಮಾನಂಶ । ಸಂಗಚ್ಛತೇ। ಕತ್ಕದಾ ವಾಸ್ಯೇಂದ್ರಸ್ಯ ಚಿತ್ರಂ ಚಾಯನೀಯಂ ಧನಂ ಚಿಕಿತೇ । ಪ್ರಜ್ಞಾಯತೇ । ತತ್ಪ್ರದಾನಸಮಯಂ ನ ಕೋ೽ಪಿ ಜಾನಾತೀತ್ಯರ್ಥಃ । ಕತ್ಕದಾ ವಾ ಶಶಮಾನಸ್ಯ ಸ್ತುವತೋ ಯಜ್ಯೋರ್ಯಷ್ಟುರ್ಯಜಮಾನಸ್ಯ ವೃಧೇ ವರ್ಧನಾಯೋತೀ ಊತ್ಯಾ ರಕ್ಷಯಾ ಭುವತ್ । ಭವೇತ್ ॥

॥ ಪ್ರತಿಪದಾರ್ಥ ॥

ಕಃ ವೀರಃ—ಯಾವ ವೀರಪುರುಷನು । ಅಸ್ಯ—ಈ ಇಂದ್ರನೊಡನೆ । ಸಧಮಾದಂ—ಯುದ್ಧದಲ್ಲಿ ಸಾಹಾಯ್ಯಕವಾದ ಸಾಹಚರ್ಯವನ್ನು । ಆಪ—ಹೊಂದುತ್ತಾನೆ ? ಕಃ—ಯಾವ ಸುಕೃತಿಯು । ಅಸ್ಯ—ಈ ಇಂದ್ರನ । ಸುಮತಿಭಿಃ—ಅನುಗ್ರಾಹಕವಾದ ಬುದ್ಧಿಗಳೊಡನೆ । ಸಮಾನಂಶ—ಸೇರಿಕೊಳ್ಳುತ್ತಾನೆ ? ಕತ್—ಯಾವಾಗ । ಅಸ್ಯ—ಈ ಇಂದ್ರನ । ಚಿತ್ರಂ—ಆಕರ್ಷಕವಾದ ಧನವು । ಚಿಕಿತೇ—ತಿಳಿಯಲ್ಪಡುತ್ತದೆ ? ಕತ್—ಯಾವಾಗ । ಶಶಮಾನಸ್ಯ—ಸ್ತುತಿಸುವವನೂ । ಯಜ್ಯೋಃ—ಯಜ್ಞಕರ್ತನೂ ಆದ ಯಜಮಾನನ । ವೃಧೇ—ವೃದ್ಧಿಗಾಗಿಯೂ । ಊತೀ—ರಕ್ಷಣೆಗಾಗಿಯೂ । ಭುವತ್—(ಇಂದ್ರನು) ಪ್ರತ್ಯಕ್ಷನಾಗುತ್ತಾನೆ.

॥ ಭಾವಾರ್ಥ ॥

ಯುದ್ಧಕಾಲದಲ್ಲಿ ಸಹಾಯಮಾಡತಕ್ಕ ಈ ಇಂದ್ರನ ಸಾಹಚರ್ಯವನ್ನು ಯಾವ ವೀರಪುರುಷನು ಯುದ್ಧ ಸಮಯದಲ್ಲಿ ಹೊಂದುತ್ತಾನೆ ? ಯಾವ ಸುಕೃತಿಯು ಈ ಇಂದ್ರನ ಅನುಗ್ರಾಹಕಗಳಾದ ಬುದ್ಧಿಗಳನ್ನು ಪಡೆಯುತ್ತಾನೆ ? ಈ ಇಂದ್ರನ ಆಕರ್ಷಕವಾದ ಧನವು ಯಾವಾಗ ತಿಳಿಯಲ್ಪಡುತ್ತದೆ? ಸ್ತುತಿಸುವವನೂ, ಯಜ್ಞಕರ್ತನೂ ಆದ ಯಜಮಾನನ ವೃದ್ಧಿಗಾಗಿಯೂ, ರಕ್ಷಣೆಗಾಗಿಯೂ ಇಂದ್ರನು ಯಾವಾಗ ಪ್ರತ್ಯಕ್ಷನಾಗುತ್ತಾನೆ.

## English Translation.

What hero has enjoyed his fellowship (in battle)? who has been a sharer in his benevolent thoughts? when does any one apprreciate his wonderful bounty? when is he (present) for the promotion of the prosperity of the man who glorifies and worships him?

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದೆ. ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ಋಷಿಯು ಇಂದ್ರನ ಗುಣಗಳನ್ನು ಪ್ರಶ್ನರೂಪವಾಗಿ ವರ್ಣಿಸಿದ್ದಾನೆ. ಅವುಗಳ ಅರ್ಥವು ಸುಲಭವಾಗಿಯೂ, ಸ್ಪಷ್ಟವಾಗಿಯೂ ಇರುವುದರಿಂದ ಹೆಚ್ಚು ವಿವರಣೆ ಅವಶ್ಯಕವಿಲ್ಲ.

॥ ಸಂಹಿತಾಪಾಠಃ ॥

ಕಥಾ ಶೃಣೋತಿ ಹೂಯಮಾನಮಿಂದ್ರಃ ಕಥಾ ಶೃಣ್ವನ್ನವಸಾಮಸ್ಯ ವೇದ ।
ಕಾ ಅಸ್ಯ ಪೂರ್ವೀರುಪಮಾತಯೋ ಹ ಕಥೈನಮಾಹುಃ ಪಪುರಿಂ ಜರಿತ್ರೇ ॥

॥ ಪದಪಾಠಃ ॥

ಕಥಾ । ಶೃಣೋತಿ । ಹೂಯಮಾನಂ । ಇಂದ್ರಃ । ಕಥಾ । ಶೃಣ್ವನ್ । ಅವಸಾಂ । ಅಸ್ಯ । ವೇದ ।
ಕಾಃ । ಅಸ್ಯ । ಪೂರ್ವೀಃ । ಉಪ್ಽಮಾತಯಃ । ಹ । ಕಥಾ । ಏನಂ । ಆಹುಃ । ಪಪುರಿಂ । ಜರಿತ್ರೇ ॥ ೩ ॥

॥ ಸಾಯಣಭಾಷ್ಯಂ ॥

ಇಂದ್ರಃ ಪರಮೈಶ್ವರ್ಯಯುಕ್ತೋ ಹೂಯಮಾನಮಾಹ್ವಯಂತಂ ಸ್ತೋತಾರಂ ಕಥಾ ಕಥಂ ಶೃಣೋತಿ । ಸ್ತೋತ್ರಾಣಿ ಶೃಣ್ವನ್ನಸ್ಯ ಸ್ತೋತುಃ ಸಂಬಂಧೀನ್ಯವಸಾಂ ರಕ್ಷಣಾನಿ ಕಥಾ ಕಥಂ ಚ ವೇದ । ವೇತ್ತಿ । ಪೂರ್ವೀಃ ಪುರಾತನಾನ್ಯಸ್ಯೇಂದ್ರಸ್ಯ ಸಂಬಂಧೀನ್ಯುಪಮಾತಯೋ ದಾನಾನಿ ಕಾ ಹ । ಕಾನಿ ಚಿತ್ ಸಂತೀತಿ ಶೇಷಃ । ತಾನಿ ದಾನಾನಿ ಜರಿತ್ರೇ ಸ್ತೋತುಃ ಸಂಬಂಧಿನಾಂ ಕಾಮಾನಾಂ ಪಪುರಿಂ ಪೂರಯಿತಾರಮೇನಮಿಂದ್ರಂ ಕಥಾ ಕಥಂ ಚಾಹುಃ । ವದಂತಿ ॥

॥ ಪ್ರತಿಪದಾರ್ಥ ॥

ಇಂದ್ರಃ—ಐಶ್ವರ್ಯಯುಕ್ತನಾದ ಇಂದ್ರನು । ಹೂಯಮಾನಂ—ಸ್ತುತಿಸಿ ಕರೆಯುವ ಸ್ತೋತೃವನ್ನು (ಅವನ ಸ್ತೋತ್ರವನ್ನು) । ಕಥಾ—ಯಾವ ಪ್ರಕಾರವಾಗಿ । ಶೃಣೋತಿ—ಕೇಳುತ್ತಾನೆ । ಶೃಣ್ವನ್—ಈ ಸ್ತುತಿಯನ್ನು ಕೇಳಿದನಂತರ । ಅಸ್ಯ—ಈ ಸ್ತೋತೃವಿಗೆ ಅಪೇಕ್ಷಿತಗಳಾದ । ಅವಸಾಂ—ರಕ್ಷಣೆಗಳನ್ನು । ಕಥಾ—ಯಾವಪ್ರಕಾರವಾಗಿ । ವೇದ—ತಿಳಿಯುತ್ತಾನೆ । ಅಸ್ಯ—ಈ ಇಂದ್ರನ । ಪೂರ್ವೀಃ—ಪುರಾತನಗಳಾದ । ಉಪಮಾತಯಃ—ದಾನಗಳು । ಕಾಃ ಹ—ಯಾವ ಪ್ರಕಾರವುಳ್ಳವಾಗಿವೆ । ಜರಿತ್ರೇ—ಸ್ತೋತೃವಿನಿಂದ ಅಪೇಕ್ಷಿತವಾದ ಕಾಮುಗಳನ್ನು । ಪಪುರಿಂ—ಪೂರೈಸತಕ್ಕ । ಏನಂ—ಈ ಇಂದ್ರನನ್ನು । ಕಥಾ - ಯಾವ ಬಗೆಯಲ್ಲಿ । ಆಹುಃ—ಸ್ತುತಿಸುತ್ತಾರೆ?

॥ ಭಾವಾರ್ಥ ॥

ಮಹದೈಶ್ವರ್ಯಯುಕ್ತನಾದ ಇಂದ್ರನು ಅವನನ್ನು ಸ್ತುತಿಸುವ ಸ್ತುತಿಕರ್ತನ ಸ್ತೋತ್ರವನ್ನು ಯಾವ ಪ್ರಕಾರ ಕೇಳುತ್ತಾನೆ? ಈ ರೀತಿ ಸ್ತುತನಾದನಂತರ ಆ ಸ್ತುತಿಗಳಿಗೆ ಪ್ರತಿಯಾಗಿ ಸ್ತೋತೃವಿಗೆ ಅಪೇಕ್ಷಿತಗಳಾದ ರಕ್ಷಣೆಗಳೇನೆಂಬುದನ್ನು ಯಾವ ರೀತಿ ತಿಳಿಯುತ್ತಾನೆ? ಈ ಇಂದ್ರನ ಪುರಾತನವಾದ ದಾನಗಳು ಯಾವ ಪ್ರಕಾರವುಳ್ಳವಾಗಿರುತ್ತವೆ? ಸ್ತೋತೃವಿನಿಂದ ಅಪೇಕ್ಷಿತವಾದ ಕಾಮುಗಳನ್ನು ಪೂರೈಸತಕ್ಕ ಇಂದ್ರನನ್ನು ಹೋತೃಗಳು ಯಾವ ರೀತಿ ಸ್ತುತಿಸಬಲ್ಲರು ?

## English Translation.

How is it that Indra hears (the worshipper) who invokes him? and hearing, how does he know his necessities? what are his gifts of old; why have they termed him the fulfuller (of the desires) of him who offers praise?



॥ ಸಂಹಿತಾಪಾಠಃ ॥

ಕಥಾ ಸಬಾಧಃ ಶಶಮಾನೋ ಅಸ್ಯ ನಶದಭಿ ದ್ರವಿಣಂ ದೀಧ್ಯಾನಃ ।
ದೇವೋ ಭುವನ್ನವೇದಾ ಮ ಋತಾನಾಂ ನಮೋ ಜಗೃಭ್ವಾँ ಅಭಿ
ಯಜ್ಜುಜೋಷತ್ ॥ ೪ ॥

॥ ಪದಪಾಠಃ ॥

ಕಥಾ । ಸ್ವಬಾಧಃ । ಶಶಮಾನಃ । ಅಸ್ಯ । ನಶತ್ । ಅಭಿ । ದ್ರವಿಣಂ । ದೀಧ್ಯಾನಃ ।
ದೇವಃ । ಭುವತ್ । ನವೇದಾಃ । ಮೇ । ಋತಾನಾಂ । ನಮಃ । ಜಗೃಭ್ವಾನ್ । ಅಭಿ । ಯತ್ ।
ಜುಜೋಷತ್ ॥ ೪ ॥

॥ ಸಾಯಣಭಾಷ್ಯಂ ॥

ಸಬಾಧಃ ಸಪತ್ನಾನಾಂ ಪೀಡಾಸಹಿತಃ ಶಶಮಾನ ಇಂದ್ರವಿಷಯಾಂ ಸ್ತುತಿಂ ಕುರ್ವನ್ ದೀಧ್ಯಾನಃ ಕರ್ಮಭಿರ್ದೀಪ್ಯಮಾನೋ ಯಜಮಾನೋಽಸ್ಯೇಂದ್ರಸ್ಯ ಸಂಬಂಧಿ ದ್ರವಿಣಂ ಪಶ್ವಾದಿಧನಂ ಕಥಾ ಕಥಮಭಿ ನಶತ್ । ಅಭಿಪ್ರಾಪ್ನೋತಿ । ನಮೋ ಹವಿರ್ಲಕ್ಷಣಮನ್ನಂ ಜಗೃಭ್ವಾನ್ ಗೃಹೀತವಾನಿಂದ್ರೋ

ಯದ್ಯದಾಭಿ ಜುಜೋಷತ್ ಮಾಮಭಿಸೇವೇತ ತದಾ ದೇವೋ ದೀಪ್ಯಮಾನ ಇಂದ್ರೋ ಮೇ ಮದೀ-ಯಾನಾಮೃತಾನಾಂ ಸ್ತೋತ್ರಾಣಾಂ ನವೇದಾ ಅತಿಶಯೇನ ಜ್ಞಾತಾ ಭುವತ್ । ಭವೇತ್ । ಅತ್ರ ನಿಪಾತಸ್ಥೋ ನಕಾರೋಽತಿಶಯವಾಚೀ ॥

॥ ಪ್ರತಿಪದಾರ್ಥ ॥

ಶಶಮಾನಃ—ಇಂದ್ರನನ್ನು ಸ್ತುತಿಸುವವನೂ । ದೀಧ್ಯಾನಃ—ಕರ್ಮಗಳಿಂದ ಪ್ರಕಾಶಿಸುವವನೂ ಆದ ಯಜಮಾನನು । ಸಬಾಧಃ—ಶತ್ರುಗಳಿಂದ ಪೀಡಿಸಲ್ಪಡುತ್ತಿದ್ದರೂ ಸಹ । ಅಸ್ಯ—ಇಂದ್ರಸಂಬಂಧಿಯಾದ । ದ್ರವಿಣಂ—ಪಶ್ವಾದಿ ಧನಗಳನ್ನು । ಕಥಾ—ಯಾವಪ್ರಕಾರವಾಗಿ । ಅಭಿ ನಶತ್—ಹೊಂದುತ್ತಾನೆ । ನಮಃ—ಹವಿಸ್ಸಿನ ರೂಪದ ಅನ್ನವನ್ನು । ಜಗೃಭ್ವಾನ್—ಹಿಡಿದಿರುವ ಇಂದ್ರನು । ಯತ್—ಯಾವಾಗ । ಅಭಿ ಜುಜೋಷತ್—ನನ್ನೆದುರಿಗೆ ಸೇವಿಸಲ್ಪಡುವನೋ ಆಗ । ದೇವಃ—ಪೂಜ್ಯನಾದ ಅದೇ ಇಂದ್ರನು । ಮೇ—ನನ್ನಿಂದ ಅರ್ಪಿತಗಳಾದ । ಋತಾನಾಂ—ಸ್ತೋತ್ರಗಳನ್ನು । ನವೇದಾಃ—ತಿಳಿಯುವವನಾಗಿ । ಭುವತ್—ಆಗಲಿ.

॥ ಭಾವಾರ್ಥ ॥

ಇಂದ್ರನನ್ನು ಸ್ತುತಿಸುತ್ತಲೂ, ಕರ್ಮಗಳಿಂದ ಪ್ರಕಾಶಿಸುತ್ತಲೂ ಇರುವ ಯಜಮಾನನು ಶತ್ರುಗಳಿಂದ ಪೀಡಿಸಲ್ಪಡುತ್ತಿದ್ದರೂ ಸಹ ಇಂದ್ರಸಂಬಂಧಿಯಾದ ಪಶ್ವಾದಿ ಧನಗಳನ್ನು ಯಾವಪ್ರಕಾರವಾಗಿ ಹೊಂದುತ್ತಾನೆ? ಹವಿಸ್ಸಿನ ರೂಪದ ಅನ್ನವನ್ನು ಹಿಡಿದಿರುವ ಇಂದ್ರನು ಯಾವಾಗ ನನಗೆ ಅಭಿಮುಖನಾಗಿದ್ದು ಸೇವಿಸಲ್ಪಡುವನೋ; ಆಗ ಪೂಜ್ಯನಾದ ಅದೇ ಇಂದ್ರನು ನನ್ನಿಂದ ಅರ್ಪಿತಗಳಾದ ಸ್ತೋತ್ರಗಳನ್ನು ತಿಳಿಯುವವನಾಗಿ ಆಗಲಿ.

## English Translation.

How does he who glorifies Indra, and is diligent in his worship, although encountering opposition, obtain from him wealth? may the divine Indra be the appreciator of my praises, when accepting the sacrificial food he is propitiated towords me.

---

॥ ಸಂಹಿತಾಪಾಠಃ ॥

ಕಥಾ ಕದಸ್ಯಾ ಉಷಸೋ ವ್ಯುಷ್ಟೌ ದೇವೋ ಮರ್ತಸ್ಯ ಸಖ್ಯಂ ಜುಜೋಷ ।
ಕಥಾ ಕದಸ್ಯ ಸಖ್ಯಂ ಸಖಿಭ್ಯೋ ಯೇ ಅಸ್ಮಿನ್ಕಾಮಂ ಸುಯುಜಂ ತತಸ್ರೇ ॥ ೫ ॥

॥ ಪದಪಾಠಃ ॥

ಕಥಾ । ಕತ್ । ಅಸ್ಯಾಃ । ಉಷಸಃ । ವಿಽಉಷ್ಟೌ । ದೇವಃ । ಮರ್ತಸ್ಯ । ಸಖ್ಯಂ । ಜುಜೋಷ ।

ಕಥಾ । ಕತ್ । ಅಸ್ಯ । ಸಖ್ಯಂ । ಸಖಿಽಭ್ಯಃ । ಯೇ । ಅಸ್ಮಿನ್ । ಕಾಮಂ । ಸುಽಯುಜಂ । ತತಸ್ರೇ ॥ ೫ ॥

॥ ಸಾಯಣಭಾಷ್ಯಂ ॥

ದೇವೋ ದ್ಯೋತಮಾನ ಇಂದ್ರೋಽಸ್ಯಾ ಉಷಸೋ ವ್ಯುಷ್ಟೌ ಪ್ರಭಾತೇ ಮರ್ತಸ್ಯ ಮರ್ತ್ಯಸ್ಯ ಮನುಷ್ಯಸ್ಯ ಸ್ತೋತುಃ ಸಂಬಂಧಿ ಸಖ್ಯಂ ಸಖಿಕರ್ಮ ಕಥಾ ಕಥಂ ಕೇನ ಪ್ರಕಾರೇಣ ಕತ್ಕದಾ ಜುಜೋಷ । ಸೇವೇತ । ಯೇ ಸ್ತೋತಾರೋಽಸ್ಮಿನ್ನಿಂದ್ರೇ ಸುಯುಜಂ ಸುಷ್ಠು ಪ್ರಯುಜ್ಯಮಾನಂ ಕಾಮಂ ಕಾಮನೀಯಂ ಹವಿಃ ಸ್ತೋತ್ರಂ ಚ ತತಸ್ರೇ ವಿತೇನಿರೇ ಅಸ್ಯೇಂದ್ರಸ್ಯ ಸಖ್ಯಂ ಸಖಿಕರ್ಮ ಸಖಿಭ್ಯಃ ಸ್ತೋತೃಭ್ಯಃ ಕಥಾ ಕಥಂ ಕತ್ಕದಾಚಿತ್ । ಭವೇದಿತಿ ಶೇಷಃ ॥

। ಪ್ರತಿಪದಾರ್ಥ ॥

ದೇವಃ—ಪ್ರಕಾಶಮಾನನಾದ ಇಂದ್ರನು । ಅಸ್ಯಾಃ ಉಷಸಃ—ಈ ಉಷಸ್ಸಿನ । ವ್ಯುಷ್ಟೌ—ಉದಯಕಾಲದಲ್ಲಿ । ಮರ್ತಸ್ಯ—ಮಾನವನಾದ ಸ್ತೋತೃವಿಗೆ ಸಹಾಯಮಾಡಲು । ಸಖ್ಯಂ—ಸುಹೃತ್ಕರ್ಮವನ್ನು । ಕಥಾ—ಯಾವ ರೀತಿಯಲ್ಲಿ । ಕತ್—ಯಾವಾಗ । ಜುಜೋಷ—ನೆರವೇರಿಸುತ್ತಾನೆ । ಯೇ—ಯಾವ ಸ್ತೋತೃಗಳು । ಅಸ್ಮಿನ್—ಈ ಇಂದ್ರನನ್ನುದ್ದೇಶಿಸಿ । ಸುಯುಜಂ—ಶ್ರೇಷ್ಠವಾಗಿ ಅರ್ಪಿತವಾಗತಕ್ಕ । ಕಾಮಂ—ಹವಿಸ್ಸನ್ನು (ಅಥವಾ ಸ್ತೋತ್ರವನ್ನು) । ತತಸ್ರೇ—ವಿಸ್ತರಿಸಿ ಹರಡಿದ್ದಾರೋ (ಅಂತಹ) । ಸಖಿಭ್ಯಃ—ಇಂದ್ರನ ಸುಹೃತ್ತುಗಳಾದ ಸ್ತೋತೃಗಳಿಗೆ । ಅಸ್ಯ—ಈ ಇಂದ್ರನ । ಸಖ್ಯಂ—ಸುಹೃದ್ರೂಪವಾದ ಸಾಹಾಯ್ಯಕ ಕರ್ಮವು । ಕಥಾ—ಯಾವ ಪ್ರಕಾರವಾಗಿ । ಕತ್—ಯಾವಾಗ (ಪ್ರಕಾಶಿತವಾಗುತ್ತವೆ)

ಭಾವಾರ್ಥ ॥

ಪ್ರಕಾಶಮಾನನಾದ ಇಂದ್ರನು ಈ ಉಷಸ್ಸಿನ ಉದಯಕಾಲದಲ್ಲಿ ಮಾನವನಾದ ಸ್ತೋತೃವಿಗೆ ಸಹಾಯ ಮಾಡಲು ತನ್ನ ಸುಹೃತ್‌ಕರ್ಮವನ್ನು ಯಾವ ರೀತಿಯಲ್ಲಿ ಯಾವಾಗ ನೆರವೇರಿಸುತ್ತಾನೆ. ಈ ಇಂದ್ರನನ್ನುದ್ದೇಶಿಸಿ ಶ್ರೇಷ್ಠವಾಗಿ ಅರ್ಪಿತವಾಗತಕ್ಕ ಹವಿಸ್ಸನ್ನಾಗಲಿ ಅಥವಾ ಸ್ತುತಿಯನ್ನಾಗಲಿ ಯಾರು ವಿಸ್ತೃತವಾಗಿ ಹರಡಿ ಅರ್ಪಿಸಿದ್ದಾರೋ ಅಂತಹ ಸ್ತೋತೃಗಳಿಗೆ ಸಹಾಯಮಾಡತಕ್ಕ ಇಂದ್ರನ ಸಖಿಕರ್ಮವು ಯಾವಾಗ ಯಾವ ಪ್ರಕಾರವಾಗಿ ಪ್ರಕಾಶಿತವಾಗುತ್ತದೆ.

## English Translation.

when, in what manner, at the dawning of this morning. has the divine Indra accepted the friendship of a mortal? when, and in what manner, (is) his friendship (manifested) to the friends who have spread out the desirable and suitable (offering) before him?

॥ ಸಂಹಿತಾಪಾಠಃ ॥

ಕಿಮಾದಮತ್ರಂ ಸಖ್ಯಂ ಸಖಿಭ್ಯಃ ಕದಾ ನು ತೇ ಭ್ರಾತ್ರಂ ಪ್ರ ಬ್ರವಾಮ ।
ಶ್ರಿಯೇ ಸುದೃಶೋ ವಪುರಸ್ಯ ಸರ್ಗಾಃ ಸ್ವರ್ಣ ಚಿತ್ರತಮಮಿಷ
ಆ ಗೋಃ ॥ ೬ ॥

॥ ಪದಪಾಠಃ ॥

ಕಿಂ । ಆತ್ । ಅಮತ್ರಂ । ಸಖ್ಯಂ । ಸಖಿಽಭ್ಯಃ । ಕದಾ । ನು । ತೇ । ಭ್ರಾತ್ರಂ । ಪ್ರ । ಬ್ರವಾಮ ।
ಶ್ರಿಯೇ । ಸುಽದೃಶಃ । ವಪುಃ । ಅಸ್ಯ । ಸರ್ಗಾಃ । ಸ್ವಃ । ನ । ಚಿತ್ರಽತಮಂ । ಇಷೇ । ಆ । ಗೋಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ಯಜಮಾನಾಸ್ತೇ ತ್ವದೀಯಮಮತ್ರಂ ಶತ್ರೂನಭಿಭಾವುಕಂ ಸಖ್ಯಂ ಸಖಿಕರ್ಮ ಸಖಿಭ್ಯಃ ಸ್ತೋತೃಭ್ಯಃ ಕಿಮಾತ್ ಕಿಂ ಸ್ವಿತ್ ಪ್ರ ಬ್ರವಾಮ । ಪ್ರಕರ್ಷೇಣ ವದೇಮ । ತೇ ತ್ವದೀಯಂ ಭ್ರಾತ್ರಂ ಭ್ರಾತೃಕರ್ಮ ಚ ಕದಾ ನು ಕದಾ ಖಲು ಪ್ರ ಬ್ರವಾಮ । ಸುದೃಶಃ ಶೋಭನದರ್ಶನಸ್ಯಾಸ್ಯೇಂದ್ರಸ್ಯ ಸಂಬಂಧಿನಃ ಸರ್ಗಾ ಉದ್ಯೋಗಾಃ ಶ್ರಿಯೇ ಸರ್ವೇಷಾಂ ಸ್ತೋತೄಣಾಂ ಶ್ರೇಯಸೇ । ಭವಂತೀತಿ ಶೇಷಃ । ಸ್ವರ್ಣ ಸೂರ್ಯೋ ಯಥಾ ದರ್ಶನೀಯತಮಸ್ತಥಾ ಗೋರ್ಗಂತುರಿಂದ್ರಸ್ಯ ಚಿತ್ರತಮಂ ದರ್ಶನೀಯತಮಂ ವಪುಃ ಶರೀರಮೇಷೇ । ಆ ಸಮಂತಾತ್ಸರ್ವೈರಿಷ್ಯತೇ ॥

॥ ಪ್ರತಿಪದಾರ್ಥ ॥

ಇಂದ್ರ—(ಎಲೈ ಇಂದ್ರನೇ) । ಅಮತ್ರಂ—ಶತ್ರುನಾಶಕವಾದ । ಸಖ್ಯಂ—ನಿನ್ನ ಸುಹೃತ್ಕರ್ಮವನ್ನು । ಸಖಿಭ್ಯಃ—ನಿನ್ನ ಸುಹೃತ್ತುಗಳಾದ ಸ್ತೋತೃಗಳಿಗೆ । ಕಿಮಾತ್—ಯಾವಪ್ರಕಾರದಲ್ಲಿಯಾದರೂ । ಪ್ರ ಬ್ರವಾಮ—ಪ್ರಶಂಸಿಸಿ ಹೇಳಬಹುದೇ । ತೇ—ನಿನ್ನ । ಭ್ರಾತ್ರಂ—ಭ್ರಾತೃಕರ್ಮವು । ಕದಾ ನು—ಯಾವಾಗ ಪ್ರಶಂಸಿಸಲ್ಪಡಬೇಕು । ಸುದೃಶಃ—ಉತ್ತಮವಾದ ಸ್ವರೂಪವುಳ್ಳ । ಅಸ್ಯ—ಈ ಇಂದ್ರನ । ಸರ್ಗಾಃ—ವ್ಯಾಪಾರಗಳೆಲ್ಲವೂ । ಶ್ರಿಯೇ—(ಸಕಲ ಸ್ತೋತೃಗಳ) ಶ್ರೇಯಸ್ಸಿಗೂ ಕಾರಣವಾಗಿವೆ । ಸ್ವಃ ನ—ಸೂರ್ಯನಂತೆ ಪ್ರಭಾಯುತನಾಗಿ । ಗೋಃ—ಸಂಚರಿಸತಕ್ಕ ಇಂದ್ರನ । ಚಿತ್ರತಮಂ—ಅತ್ಯಂತ ಆಕರ್ಷಕವಾದ । ವಪುಃ—ಶರೀರವು । ಆ ಇಷೇ—ಎಲ್ಲರಿಂದಲೂ ಆದರಿಸಲ್ಪಡುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುನಾಶಕವಾದ ನಿನ್ನ ಸುಹೃತ್ಕರ್ಮವನ್ನು ನಿನ್ನ ಸುಹೃತ್ತುಗಳಿಂದ ಸ್ತೋತೃಗಳಿಗೆ ಯಾವವಿಧದಲ್ಲಿಯಾದರೂ ಪ್ರಶಂಸಿಸಿ ಹೇಳಬಹುದೇ? ನಿನ್ನ ಭ್ರಾತೃಕರ್ಮವು ಯಾವಾಗ ಪ್ರಶಂಸಿತವಾಗಬೇಕು?

ಉತ್ತಮವಾದ ಸ್ವರೂಪವುಳ್ಳ ಈ ಇಂದ್ರನ ಕಾರ್ಯಗಳೆಲ್ಲವೂ ಸಕಲ ಸ್ತೋತೃಗಳ ಶ್ರೇಯಸ್ಸಿಗೂ ಕಾರಣವಾಗಿವೆ. ಸೂರ್ಯನಂತೆ ಪ್ರಭಾಯುತನಾಗಿ ಸಂಚರಿಸತಕ್ಕ ಇಂದ್ರನ ಅತ್ಯಂತ ಆಕರ್ಷಕವಾದ ಶರೀರವು ಎಲ್ಲರಿಂದಲೂ ಆದರಿಸಲ್ಪಡುತ್ತದೆ.

## English Translation.

May we in any manner proclaim your friendship for your friends? when may (we make known) your fraternal regard? the efforts of thc well-looking Indra are for the happiness of all : the wonderful form of moving (Indra) is, like the sun, ever wished for.



॥ ಸಂಹಿತಾಪಾಠಃ ॥

ದ್ರುಹಂ ಜಿಘಾಂಸನ್ ಧ್ವರಸಮನಿಂದ್ರಾಂ ತೇತಿಕ್ತೇ ತಿಗ್ಮಾ ತುಜಸೇ ಅನೀಕಾ।
ಋಣಾ ಚಿದ್ಯತ್ರ ಋಣಯಾ ನ ಉಗ್ರೋ ದೂರೇ ಅಜ್ಞಾತಾ ಉಷಸೋ ಬಬಾಧೇ ॥ ೭ ॥

॥ ಪದಪಾಠಃ ॥

ದ್ರುಹಂ । ಜಿಘಾಂಸನ್ । ಧ್ವರಸಂ । ಅನಿಂದ್ರಾಂ । ತೇತಿಕ್ತೇ । ತಿಗ್ಮಾ । ತುಜಸೇ । ಅನೀಕಾ ।
ಋಣಾ । ಚಿತ್ । ಯತ್ರ । ಋಣಽಯಾಃ । ನಃ । ಉಗ್ರಃ । ದೂರೇ । ಅಜ್ಞಾತಾಃ । ಉಷಸಃ । ಬಬಾಧೇ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ದ್ರುಹಂ ದ್ರೋಹಂ ಕುರ್ವತೀಂ ಧ್ವರಸಂ ಹಿಂಸಿಕಾಮನಿಂದ್ರಾಮಿಂದ್ರಮಜಾನತೀಂ ರಾಕ್ಷಸೀಂ ಜಿಘಾಂಸನ್ ಹಂತುಮಿಚ್ಛನ್ ತಿಗ್ಮಾ ತಿಗ್ಮಾನಿ ಪೂರ್ವಮೇವ ತೀಕ್ಷ್ಣಾನ್ಯನೀಕಾನೀಕಾನ್ಯಾಯುಧಾನಿ ತುಜಸೇ ತದ್ವಧಾಯ ತೇತಿಕ್ತೇ । ಅತ್ಯರ್ಥಂ ತೀಕ್ಷ್ಣೀಕರೋತಿ । ಯತ್ರ ಯಾಸೂಷಃಸು ತದುಪಲಕ್ಷಿತೇಷ್ವಹಃಸ್ವೃಣಾ ಚಿತ್ ಋಣಾನ್ಯಪಿ ನೋಽಸ್ಮಾನ್ಬಾಧಂತ ಇತಿ ಶೇಷಃ । ತಾ ಉಷಸಶ್ಚೋಗ್ರ ಉದ್ಗೂರ್ಣಬಲ ಋಣಯಾ ಋಣಸ್ಯ ಹಂತೇಂದ್ರಃ । ಯಾತಿರ್ವಧಕರ್ಮಾ । ದೂರೇಽಜ್ಞಾತಾ ಅನನುಭೂತಾಃ ಸತೀರ್ಬಬಾಧೇ । ಅಪೀಡಯತ್ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । ದ್ರುಹಂ—ದ್ರೋಹವನ್ನಾಚರಿಸುವವಳೂ । ಧ್ವರಸಂ—ಹಿಂಸಾಕಾರಕಳೂ । ಅನಿಂದ್ರಾಂ—ಇಂದ್ರನನ್ನು ಪೂಜಿಸದವಳೂ ಆದ ರಾಕ್ಷಸಿಯನ್ನು । ಜಿಘಾಂಸನ್—ಕೊಲ್ಲಲಿಚ್ಛಿಸಿ । ತಿಗ್ಮಾ—(ಮೊದಲೇ) ಹರಿತವಾಗಿದ್ದ । ಅನೀಕಾ—ಆಯುಧಗಳನ್ನು । ತುಜಸೇ—ಅವಳನ್ನು ಕೊಲ್ಲಲು । ಶೇತಿಕ್ತೇ—ಇನ್ನೂ ಹರಿತವಾಗುವಂತೆ ಮಾಡಿದನು । ಯತ್ರ—ಯಾವ ಉಷಃಕಾಲಗಳಲ್ಲಿ (ಯಾವ ದಿನಗಳಲ್ಲಿ) । ಋಣಾಚಿತ್—ಋಣಗಳೂ ಸಹ (ಶತ್ರುಗಳಂತೆ) । ನಃ—ನಮ್ಮನ್ನು ಹಿಂಸಿಸುವುವೋ ಅಂತಹ । ಉಷಸಃ—ಉಷಃಕಾಲಗಳನ್ನು (ಅಂತಹ ದಿನಗಳನ್ನು) । ಉಗ್ರಃ—ಭಯಂಕರವಾದ ಬಲವುಳ್ಳವನೂ । ಋಣಯಾಃ—ಋಣನಾಶಕನೂ ಆದ ಇಂದ್ರನು । ದೂರೇ—ಬಹಳ ದೂರದಲ್ಲಿ । ಅಜ್ಞಾತಾಃ—ನಮ್ಮ ಗೋಚರಕ್ಕೆ ಬರದಂತೆ । ಬಬಾಧೇ—ತಳ್ಳಿದ್ದಾನೆ.

॥ ಭಾವಾರ್ಥ ॥

ದ್ರೋಹವನ್ನಾಚರಿಸುವವಳೂ, ಹಿಂಸಾಕಾರಕಳೂ, ಇಂದ್ರನನ್ನು ಪೂಜಿಸದವಳೂ ಆದ ರಾಕ್ಷಸಿಯನ್ನು ಕೊಲ್ಲಲಿಚ್ಛಿಸಿ, ಇಂದ್ರನು, ಮೊದಲೇ ಹರಿತವಾಗಿದ್ದ ಆಯುಧಗಳನ್ನು ಅವಳ ನಾಶಕ್ಕಾಗಿ ಇನ್ನೂ ಹರಿತವಾಗುವಂತೆ ಮಾಡಿದನು. ಯಾವ ದಿನಗಳಲ್ಲಿ ಋಣಗಳೂ ಸಹ ನಮ್ಮನ್ನು ಶತ್ರುಗಳಂತೆ ಹಿಂಸಿಸುವುವೋ ಅಂತಹ ದಿನಗಳನ್ನು, ಭಯಂಕರವಾದ ಶಕ್ತಿಯುಳ್ಳವನೂ, ಋಣನಾಶಕನೂ ಆದ ಇಂದ್ರನು, ನಮ್ಮ ಗೋಚರಕ್ಕೇ ಬರದಂತೆ ದೂರ ತಳ್ಳಿದ್ದಾನೆ. ಎಂದರೆ, ನಾವು ಎಂದೂ ಋಣಬಾಧೆಯಿಂದ ನರಳದಂತೆ ನಮ್ಮನ್ನು ರಕ್ಷಿಸಿದ್ದಾನೆ.

## English Translation.

Resolving to kill the oppressing, malevolent (Rakshasi), not acknowleging Indra, he sharpened his sharp weapons for (her) destruction and the fierce (Indra), the canceller of debts, has kept afar the unknown dawns in which the debts (are to be paid).

॥ ವಿಶೇಷವಿಷಯಗಳು ॥

(ಇಂದ್ರಃ) ದ್ರುಹಂ ಧ್ವರಸಂ ಅನಿಂದ್ರಾಂ ಜಿಘಾಂಸನ್ ತಿಗ್ಮಾ ಅನೀಕಾ. ತುಜಸೇ ಶೇತಿಕ್ತೇ—. ಅಯಮಿಂದ್ರಃ ದ್ರೋಹಂ ಕುರ್ವತೀಂ ಹಿಂಸಿಕಾಂ ಇಂದ್ರಮಜಾನತೀಂ ರಾಕ್ಷಸೀಂ ಹಂತುಮಿಚ್ಛನ್ ಪೂರ್ವಮೇವ ತೀಕ್ಷ್ಣಾನಿ ಆಯುಧಾನಿ ತದ್ವಧಾಯ ಅತ್ಯರ್ಥಂ ತೀಕ್ಷ್ಣೀಕರೋತಿ । ಇತರರ ವಿಷಯದಲ್ಲಿ ದ್ರೋಹಬುದ್ಧಿಯಿಂದ ವರ್ತಿಸುವವಳೂ ಹಿಂಸೆಯನ್ನುಂಟುಮಾಡುವವಳೂ, ಇಂದ್ರನನ್ನು ಕಂಡರೆ ದ್ವೇಷಿಸುವವಳೂ ಆದ ಓರ್ವ ರಾಕ್ಷಸಿಯನ್ನು ಕೊಲ್ಲುವುದಕ್ಕಾಗಿ ಇಂದ್ರನು ತನ್ನ ಆಯುಧವನ್ನು ಮೊದಲೇ ಹರಿತವಾಗಿದ್ದರೂ, ಇನ್ನೂ ಹರಿತವಾಗುವಂತೆ ಮಾಡಿದನು. ಇಲ್ಲಿ ಹೇಳಿರುವ ರಾಕ್ಷಸಿಯು ಯಾರೆಂಬುದು ವಿಶದವಾಗಿಲ್ಲ. ಋಷಿಜನರಿಗೆ ಪೀಡೆಯನ್ನುಂಟುಮಾಡುತ್ತಿದ್ದ ದಸ್ಯುಜಾತಿಗೆ ಸೇರಿದ ದುಷ್ಟಸ್ವಭಾವದ ಸ್ತ್ರೀ ಇರಬಹುದು.

ಧ್ವರಶಬ್ದಕ್ಕೆ ಹಿಂಸೆಯೆಂಬರ್ಥವನ್ನು ಯಾಸ್ಕರು—ಧ್ವರತಿರ್ಹಿಂಸಾಕರ್ಮಾ (ನಿ. ೧–೮) ಎಂಬ ನಿರ್ವಚನದಿಂದ ಹೇಳಿರುವರು. ತಿಗ್ಮಂ ಎಂಬ ಶಬ್ದವು ವಜ್ರಾಯುಧನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೩–೧೧) ತಿಗ್ಮ ಶಬ್ದಕ್ಕೆ ಹರಿತವಾದ ಎಂಬರ್ಥವಿರುವುದನ್ನು ಯಾಸ್ಕರು—

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।
ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥
(ಋ. ಸಂ. ೭–೪೬–೧)

ಎಂಬ ಋಕ್ಕನ್ನುದಾಹರಿಸಿ ಆದರಲ್ಲಿರುವ ತಿಗ್ಮಾಯುಧಾಯ ಎಂಬ ಶಬ್ದಕ್ಕೆ ತೀಕ್ಷ್ಣಾಯುಧಾಯ ಎಂದರ್ಥ ವಿವರಣೆಮಾಡಿರುವರು (ನಿ. ೧೦–೭) ತುಜಃ ಎಂಬ ಶಬ್ದವೂ ವಜ್ರನಾಮಗಳಲ್ಲಿ ಪಠಿತವಾಗಿದೆ (ನಿ. ೩–೧೧) ಇಲ್ಲಿ **ತುಜ ಹಿಂಸಾಯಾಂ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು **ತುಜಸೇ** ಎಂಬ ಶಬ್ದಕ್ಕೆ, ಕೊಲ್ಲುವುದಕ್ಕೆ ಎಂಬರ್ಥವನ್ನು ಹೇಳಿದೆ.

ಯತ್ರ ಋಣಾಚಿತ್ ನಃ ಉಷಸಃ ಉಗ್ರಃ ಋಣಯಾಃ ದೂರೇ ಅಜ್ಞಾತಾಃ ಬಬಾಧೇ—ಈ ವಾಕ್ಯದ ಅರ್ಥವು ಸ್ಪಷ್ಟವಾಗಿಲ್ಲ. ಶತ್ರುಗಳಂತೆ ಮನಸ್ಸಿಗೆ ಹಿಂಸೆಯನ್ನುಂಟುಮಾಡುವ ಋಣಬಾಧೆಗಳು (ಸಾಲಗಳು) ಉಷಃಕಾಲಗಳು ಪ್ರತಿದಿನದಲ್ಲಿಯೂ ಪ್ರಾಪ್ತವಾಗುವಂತೆ, ಯಾವಾಗಲೂ ಎಂದರೆ ಪ್ರತಿದಿವಸದಲ್ಲಿಯೂ ನಮಗ ಕ್ಲೇಶವನ್ನುಂಡುಮಾಡುತ್ತವೆ. ಅವುಗಳ ಬಾಧೆಯನ್ನು ಇಂದ್ರನು ಪರಿಹರಿಸಿದ್ದಾನೆ, ಎಂದರೆ ನಮಗೆ ಧನಾದಿಗಳನ್ನು ಕೊಟ್ಟು ನಮಗೆ ಸಾಲಗಾರರ ಹಿಂಸೆಯಿಲ್ಲದಂತೆ ನಮಗೆ ಉಪಕಾರ ಮಾಡಿದ್ದಾನೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಋತಸ್ಯ ಹಿ ಶುರುಧಃ ಸಂತಿ ಪೂರ್ವೀರೃತಸ್ಯ ಧೀತಿರ್ವೃಜಿನಾನಿ ಹಂತಿ ।
ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥ ೮ ॥

॥ ಪದಪಾಠಃ ॥

ಋತಸ್ಯ । ಹಿ । ಶುರುಧಃ । ಸಂತಿ । ಪೂರ್ವೀಃ । ಋತಸ್ಯ । ಧೀತಿಃ । ವೃಜಿನಾನಿ । ಹಂತಿ ।
ಋತಸ್ಯ । ಶ್ಲೋಕಃ । ಬಧಿರಾ । ತತರ್ದ । ಕರ್ಣಾ । ಬುಧಾನಃ । ಶುಚಮಾನಃ । ಆಯೋಃ ॥ ೮ ॥

॥ ಸಾಯಣಭಾಷ್ಯಂ ॥

ಋತಪೇಯನಾಮ್ನ್ಯೇಕಾಹೇ ಮರುತ್ವತೀಯನಿಷ್ಕೇವಲ್ಯಶಸ್ತ್ರಯೋರ್ನಿವಿದ್ಧಾನಾತ್ಪುರಸ್ತಾದೃತಸ್ಯ ಹೀತ್ಯೇತದಾದಿಕೇ ದ್ವೇ ಋಚೌ ಕ್ರಮೇಣ ಶಂಸನೀಯೇ । ಸೂತ್ರಿತಂ ಚ । ಋತಸ್ಯ ಹಿ ಶುರುಧಃ ಸಂತಿ ಪೂರ್ವೀರಿತಿ ಸೂಕ್ತಮುಖೀಯೇ । ಆ. ೯-೭ । ಇತಿ ॥

ಅತ್ರ ಋತಶಬ್ದೇನೇಂದ್ರೋ ವಾದಿತ್ಯೋ ವಾ ಸತ್ಯಂ ವಾ ಯಜ್ಞೋ ವೋಚ್ಯತೇ ॥ ಋತಸ್ಯ ಋತದೇವಸ್ಯ ಸಂಬಂಧಿನ್ಯಃ ಪೂರ್ವೀರ್ಬಹ್ವ್ಯಃ ಶುರುಧ ಆಪಃ ಸಂತಿ ಹಿ । ಭವಂತಿ ಖಲು । ಋತಸ್ಯ ಋತದೇವಸ್ಯ ಸಂಬಂಧಿನೀ ಧೀತಿಃ ಪ್ರಜ್ಞಾ ತದ್ವಿಷಯಾ ಸ್ತುತಿರ್ವಾ ವೃಜಿನಾನಿ ವರ್ಜನೀಯಾನಿ ಪಾಪಾನಿ ಹಂತಿ । ಹಿನಸ್ತಿ । ಋತಸ್ಯ ಋತದೇವಸ್ಯ ಸಂಬಂಧಿನೀ ಶ್ಲೋಕಃ ಸ್ತುತಿರೂಪಾ ವಾಗಾಯೋರ್ಗಂತುರ್ಮನುಷ್ಯಸ್ಯ ಸಂಬಂಧಿನೌ ಬಧಿರಾ ಬಧಿರೌ ಪ್ರತಿಬದ್ಧೌ ಕರ್ಣಾ ಕರ್ಣೌ ತತರ್ದ । ತೃಣತ್ತಿ । ಕೀದೃಶಃ ಶ್ಲೋಕಃ । ಬುಧಾನೋ ಬುಧ್ಯಮಾನಃ ಶುಚಮಾನೋ ದೀಪ್ಯಮಾನಃ ॥

॥ ಪ್ರತಿಪದಾರ್ಥ ॥

ಋತಸ್ಯ—ಋತದೇವನ ಸಂಬಂಧಿಯಾದ । ಶುರುಧಃ—ಉದಕಗಳು । ಪೂರ್ವೀಃ—ಬಹುಪ್ರಕಾರವಾದವೆಂದು । ಸಂತಿ ಹಿ—ಪ್ರಸಿದ್ಧವಾಗಿವೆಯಲ್ಲವೇ? ಋತಸ್ಯ– ಋತದೇವನಿಗೆ ಸಂಬಂಧಿಸಿದ । ಧೀತಿಃ—ಪ್ರಜ್ಞೆಯು (ಅಥವಾ ತದ್ವಿಷಯಕವಾದ ಸ್ತುತಿಯು । ವೃಜಿನಾನಿ—ಪಾಪಗಳನ್ನು । ಹಂತಿ—ನಾಶಮಾಡುತ್ತದೆ । ಋತಸ್ಯ—ಋತದೇವನನ್ನುದ್ದೇಶಿಸಿದುದೂ । ಬುಧಾನಃ—ಪ್ರಜ್ಞಾಪೂರಿತವಾದುದೂ । ಶುಚಮಾನಃ—ಪ್ರಕಾಶಮಾನವಾದುದೂ ಆದ । ಶ್ಲೋಕಃ—ಸ್ತುತಿಯು । ಆಯೋಃ—ಮಾನವನ । ಬಧಿರಾ—ಕಿವುಡಾದ । ಕರ್ಣಾ—ಕಿವಿಗಳನ್ನು । ತತರ್ದ—ತೆರೆಯುತ್ತದೆ. (ಶ್ರವಣಶಕ್ತಿಯನ್ನು ಕೊಡುತ್ತದೆ).

॥ ಭಾವಾರ್ಥ ॥

ಋತದೇವನಿಗೆ ಸಂಬಂಧಿಗಳಾದ ಉದಕಗಳು ಬಹುಪ್ರಕಾರವಾಗಿವೆಯೆಂದು ಪ್ರಸಿದ್ಧವಾಗಿದೆ. ಋತದೇವನನ್ನುದ್ದೇಶಿಸಿದ ಸ್ತುತಿಯು ಪಾಪವನ್ನು ನಾಶಮಾಡುತ್ತದೆ. ಋತದೇವನನ್ನುದ್ದೇಶಿಸಿದುದೂ, ಪ್ರಜ್ಞಾಪೂರಿತವಾದುದೂ, ಪ್ರಕಾಶಮಾನವಾದುದೂ ಆದ ಸ್ತುತಿಯು ಮಾನವನ ಕಿವುಡಾದ ಕಿವಿಗಳನ್ನು ತೆರೆದು ಅವುಗಳಿಗೆ ಶ್ರವಣಶಕ್ತಿಯನ್ನು ಕೊಡುತ್ತದೆ.

## English Translation.

Many are the waters of Rita: the adoration of Rita destroys iniquities; the intelligent and brilliant praise of Rita has opened the deaf (ears) of man.

‖ ವಿಶೇಷವಿಷಯಗಳು ‖

ಈ ಋಕ್ಕಿನ ಭಾಷ್ಯದಲ್ಲಿ ಸಾಯಣರು— **ಅತ್ರ ಋತಶಬ್ದೇನೇಂದ್ರೋ ವಾದಿತ್ಯೋ ವಾ ಸತ್ಯಂ ವಾ ಯಜ್ಞೋ ವೋಚ್ಯತೇ** । ಎಂದರೆ, ಈ ಋಕ್ಕಿನಲ್ಲಿಯೂ, ಮುಂದಿನ ಎರಡು ಋಕ್ಕುಗಳಲ್ಲಿಯೂ ಇರುವ ಋತ ಶಬ್ದವು ಋತಶಬ್ದವಾಚ್ಯನಾದ ದೇವತೆಯನ್ನು ನಿರ್ದೇಶಿಸುವುದು. ಈ ದೇವತೆಯು—ಇಂದ್ರ, ಆದಿತ್ಯ, ಸತ್ಯ, ಯಜ್ಞ ಎಂಬ ದೇವತೆಗಳಲ್ಲಿ ಯಾರಾದರೂ ಆಗಬಹುದು ಎಂದು ಹೇಳಿದಾರೆ. ಋತ ಶಬ್ದಕ್ಕೆ—ಯಾಸ್ಕರು **ಸತ್ಯಂ ವಾ ಯಜ್ಞಂ ವಾ** ಎಂದು ನಿರ್ವಚನವನ್ನು ಹೇಳಿರುವರು. ಇಲ್ಲಿ ಉದಕ, ವೃಷ್ಟಿ, ಅನ್ನ, ಸ್ತುತಿ ಮೊದಲಾದ ವಿಷಯಗಳು ಪ್ರಸಕ್ತವಾಗಿರುವುದರಿಂದ ಇವೆಲ್ಲವೂ ಮೇಲೆ ಹೇಳಿದ ಯಾವ ದೇವತೆಗಾದರೂ ಅನ್ವಯಿಸಬಹುದು.

ಋತಪೇಯವೆಂಬ ಒಂದು ದಿವಸದ ಮಟ್ಟಿಗೆ ಮಾಡುವ ಯಾಗದಲ್ಲಿ ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರ ಮಂತ್ರಗಳ ಪಠನಕ್ಕೆ ಪ್ರಾರಂಭದಲ್ಲಿ ನಿವಿತ್ಸೂಕ್ತವನ್ನು ಪಠಿಸುವರು. ಆ ನಿವಿತ್ಸೂಕ್ತಕ್ಕೆ ಪೂರ್ವಭಾವಿಯಾಗಿ **ಋತಸ್ಯ ಹಿ** ಎಂದು ಮೊದಲಾದ ಈ ಸೂಕ್ತದ ಎರಡು ಋಕ್ಕುಗಳನ್ನು (ಈ ಸೂಕ್ತದ ೮-೯ ನೇ ಋಕ್ಕುಗಳನ್ನು) ಕ್ರಮವಾಗಿ ಎಂದರೆ ಒಂದೊಂದು ನಿವಿದ್ಧಾನೀಯಸೂಕ್ತಕ್ಕೆ ಮೊದಲು ಒಂದೊಂದು ಋಕ್ಕಿನಂತೆ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಋತಸ್ಯ ಹಿ ಶುರುಧಃ ಸಂತಿ ಪೂರ್ವೀರಿತಿ ಸೂಕ್ತಮುಖೀಯೇ** ಎಂಬ ಸೂತ್ರದಿಂದ (ಆ. ೯-೭) ವಿವೃತವಾಗಿರುವುದು.

---

‖ ಸಂಹಿತಾಪಾಠಃ ‖

ಋತಸ್ಯ ದೃಳ್ಹಾ ಧರುಣಾನಿ ಸಂತಿ ಪುರೂಣಿ ಚಂದ್ರಾ ವಪುಷೇ ವಪೂಂಷಿ ।
ಋತೇನ ದೀರ್ಘಮಿಷಣಂತ ಪೃಕ್ಷ ಋತೇನ ಗಾವ ಋತಮಾ ವಿವೇಶುಃ ‖೧‖

‖ ಪದಪಾಠಃ ‖

ಋತಸ್ಯ । ದೃಳ್ಹಾ । ಧರುಣಾನಿ । ಸಂತಿ । ಪುರೂಣಿ । ಚಂದ್ರಾ । ವಪುಷೇ । ವಪೂಂಷಿ ‖
ಋತೇನ । ದೀರ್ಘಂ । ಇಷಣಂತ । ಪೃಕ್ಷಃ । ಋತೇನ । ಗಾವಃ । ಋತಂ । ಆ । ವಿವೇಶುಃ ‖ ೯ ‖

‖ ಸಾಯಣಭಾಷ್ಯಂ ‖

ವಪುಷೇ ವಪುಷ್ಮತಃ । ಷಷ್ಠ್ಯರ್ಥೇ ಚತುರ್ಥೀ । ಋತಸ್ಯ ಋತದೇವಸ್ಯ ಸಂಬಂಧೀನಿ ದೃಳ್ಹಾ ದೃಢಾನಿ ಧರುಣಾನಿ ಧಾರಕಾಣಿ ಪುರೂಣಿ ಬಹೂನಿ ಚಂದ್ರಾ ಚಂದ್ರಾಣ್ಯಾಹ್ಲಾದಕಾನಿ ವಪೂಂಷಿ ರೂಪಾಣಿ ಸಂತಿ । ಭವಂತಿ । ಋತೇನ ಋತದೇವೇನ ದೀರ್ಘಮತ್ಯಧಿಕಂ ಪೃಕ್ಷೋಽನ್ನಮಿಷಣಂತ । ಸ್ತೋತಾರ ಇಚ್ಛಂತಿ । ಋತೇನ ಋತದೇವೇನ ಗಾವೋ ಧೇನವ ಋತಂ ಯಜ್ಞಂ ದಕ್ಷಿಣಾತ್ವೇನಾ ವಿವೇಶುಃ । ಪ್ರವಿಶಂತಿ । ಯದ್ವಾ । ಗಾವೋ ರಶ್ಮಯ ಋತಮುದಕಮಾ ವಿವೇಶುಃ ‖

॥ ಪ್ರತಿಪದಾರ್ಥ ॥

ವಪುಷೇ—ಉತ್ತಮವಾದ ರೂಪವುಳ್ಳ । ಋತಸ್ಯ—ಋತದೇವನ । ದೃಳ್ಹಾ—ದೃಢವಾದವೂ ಧರುಣಾನಿ—ಲೋಕವನ್ನು ಧರಿಸುವ ಶಕ್ತಿಯುಳ್ಳವೂ ಆದ । ವಪೂಂಷಿ—ರೂಪಗಳು । ಪುರೂಣಿ—ಬಹು ಪ್ರಕಾರವಾಗಿಯೂ । ಚಂದ್ರಾ—ಆಹ್ಲಾದಕಾರಕವಾಗಿಯೂ । ಸಂತಿ—ಇವೆ । ಋತೇನ—ಋತದೇವನ ಸಹಾಯದಿಂದ । ದೀರ್ಘಂ—ಅತಿಪ್ರಭೂತವಾದ । ಪೃಕ್ಷಃ—ಅನ್ನವನ್ನು । ಇಷಣಂತ—(ಸ್ತೋತೃಗಳು) ಇಚ್ಛಿಸಿ (ಪಡೆಯುತ್ತಾರೆ) । ಋತೇನ—ಋತದೇವನಿಂದಲೇ । ಗಾವಃ—ಧೇನುಗಳು । ಋತಂ—ಯಜ್ಞವನ್ನು । ಆ ವಿವೇಶುಃ—ಪ್ರವೇಶಿಸುತ್ತವೆ.

॥ ಭಾವಾರ್ಥ ॥

ಉತ್ತಮವಾದ ರೂಪವುಳ್ಳ ಋತದೇವನ ದೃಢವಾದವೂ, ಲೋಕವನ್ನು ಧರಿಸುವ ಶಕ್ತಿಯುಳ್ಳವೂ ಆದ ರೂಪಗಳು ಬಹುಪ್ರಕಾರವಾಗಿಯೂ ಆಹ್ಲಾದಕಾರಕವಾಗಿಯೂ ಇವೆ. ಋತದೇವನ ಸಹಾಯದಿಂದಲೇ ಸ್ತೋತೃಗಳು ಪ್ರಭೂತವಾದ ಅನ್ನವನ್ನು ಪಡೆಯುತ್ತಾರೆ. ಋತದೇವನ ಸಹಾಯದಿಂದಲೇ ಧೇನುಗಳು ಯಜ್ಞವನ್ನು ಪ್ರವೇಶಿಸುತ್ತವೆ.

## English Translation.

Many are the stable, sustaining, delightful forms of the embodied Rita : by Rita are (the pious) expectant of food ; by Rita have the cows entered into the sacrifice.



॥ ಸಂಹಿತಾಪಾಠಃ ॥

ಋತಂ ಯೇಮಾನ ಋತಮಿದ್ವನೋತ್ಯೃತಸ್ಯ ಶುಷ್ಮಸ್ತುರಯಾ ಉ ಗವ್ಯುಃ।
ಋತಾಯ ಪೃಥ್ವೀ ಬಹುಲೇ ಗಭೀರೇ ಋತಾಯ ಧೇನೂ ಪರಮೇ
ದುಹಾತೇ ॥ ೧೦ ॥

॥ ಪದಪಾಠಃ ॥

ಋತಂ । ಯೇಮಾನಃ । ಋತಂ । ಇತ್ । ವನೋತಿ । ಋತಸ್ಯ । ಶುಷ್ಮಃ । ತುರ್ರಯಾಃ । ಊಂ ಇತಿ । ಗವ್ಯುಃ ।
ಋತಾಯ । ಪೃಥ್ವೀ ಇತಿ । ಬಹುಲೇ ಇತಿ । ಗಭೀರೇ ಇತಿ । ಋತಾಯ । ಧೇನೂ ಇತಿ । ಪರಮೇ ಇತಿ ।
ದುಹಾತೇ ಇತಿ ॥ ೧೦ ॥

9

॥ ಸಾಯಣಭಾಷ್ಯಂ ॥

ಋತಮೃತದೇವಂ ಯೇಮಾನೋ ನಿಯಚ್ಛನ್ ಸ್ತುತಿಭಿರ್ವಶೀಕುರ್ವನ್ ಸ್ತೋತಾ ಋತಮಿತ್ ಋತದೇವಮೇವ ವನೋತಿ । ಸಂಭಜತೇ । ಋತಸ್ಯ ಋತದೇವಸ್ಯ ಸಂಬಂಧಿ ಶುಷ್ಮೋ ಬಲಂ ತುರಯಾಸ್ತೂರ್ಣಂ ಗವ್ಯುಃ । ಉ ಇತಿ ಚಾರ್ಥೇ । ಜಲಕಾಮಶ್ಚ ಭವತಿ । ಬಹುಲೇ ವಿಸ್ತೀರ್ಣೇ ಗಭೀರೇ ದುರವಗಾಹೇ ಪೃಥ್ವೀ ದ್ಯಾವಾಪೃಥಿವ್ಯಾವೃತಾಯ ಋತದೇವಾಯ ಭವತಃ । ಧೇನೂ ಪ್ರೀಣಯಿತ್ರ್ಯೌ ಪರಮೇ ಉತ್ಕೃಷ್ಟೇ ದ್ಯಾವಾಪೃಥಿವ್ಯಾವೃತಾಯ ಋತದೇವಾಯೈವ ದುಹಾತೇ । ದೋಹನಂ ಕುರ್ವಾತೇ ॥

॥ ಪ್ರತಿಪದಾರ್ಥ ॥

ಋತಂ—ಋತದೇವನನ್ನು । ಯೇಮಾನಃ—(ಸ್ತುತಿಗಳಿಂದ) ತನ್ನ ವಶಕ್ಕೆ ಬರಮಾಡಿಕೊಂಡು । ಋತಮಿತ್—ಅದೇ ಋತವನ್ನೇ । ವನೋತಿ—(ಸ್ತೋತೃವು) ಸೇವಿಸುತ್ತಾನೆ । ಋತಸ್ಯ—ಋತದೇವನ । ಶುಷ್ಮಃ—ಬಲವು । ತುರಯಾಃ—ವೇಗವಾಗಿ ಬೆಳೆಯತಕ್ಕದ್ದೂ । ಉ—ಮತ್ತು । ಗವ್ಯುಃ—ಉದಕವನ್ನು ಅಪೇಕ್ಷಿಸುವುದಾಗಿಯೂ ಇದೆ । ಬಹುಲೇ—ವಿಸ್ತೃತವಾದವೂ । ಗಭೀರೇ—ಅತ್ಯಗಾಧವಾದವೂ ಆದ । ಪೃಥ್ವೀ—ದ್ಯಾವಾಪೃಥಿವಿಗಳೂ । ಋತಾಯ—ಋತದೇವನ ಕಾರ್ಯಕ್ಕೆ ಸಹಾಯಮಾಡಲು ಸಿದ್ಧವಾಗಿವೆ । ಧೇನೂ—ಜಗತ್ತಿಗೆ ತೃಪ್ತಿಕಾರಕಗಳಾದವೂ । ಪರಮೇ—ಉತ್ಕೃಷ್ಟವೂ ಆದ ದ್ಯಾವಾಪೃಥಿವಿಗಳು ! ಋತಾಯ-ಋತುದೇವನನ್ನುದ್ದೇಶಿಸಿಯೇ । ದುಹಾತೇ—ವೃಷ್ಟಿರೂಪವಾದ ಉದಕವನ್ನು ಕರೆಯುತ್ತವೆ.

॥ ಭಾವಾರ್ಥ ॥

ಸ್ತೋತೃವು ಋತದೇವನನ್ನು ತನ್ನ ಸ್ತುತಿಯಿಂದ ತನ್ನ ವಶಮಾಡಿಕೊಂಡು ಅವನನ್ನೇ ಸೇವಿಸುತ್ತಾನೆ. ಋತದೇವನ ಬಲವು ವೇಗವಾಗಿ ಬೆಳೆಯತಕ್ಕದ್ದೂ ಮತ್ತು ಉದಕವನ್ನು ಅಪೇಕ್ಷಿಸತಕ್ಕದ್ದೂ ಆಗಿದೆ. ವಿಸ್ತೃತವಾದವೂ, ಅತ್ಯಗಾಧವಾದವೂ ಆದ ದ್ಯಾವಾಪೃಥಿವಿಗಳೂ ಋತುದೇವನ ಕಾರ್ಯಕ್ಕೆ ಸಹಾಯಮಾಡಲು ಸಿದ್ಧವಾಗಿವೆ. ಜಗತ್ತಿಗೆ ತೃಪ್ತಿಕಾರಕಗಳಾದವೂ, ಉತ್ಕೃಷ್ಟವಾದವೂ ಆದ ದ್ಯಾವಾಪೃಥಿವಿಗಳು ಋತದೇವನನ್ನುದ್ದೇಶಿಸಿಯೇ ವೃಷ್ಟಿರೂಪವಾದ ಉದಕವನ್ನೂ ಕರೆಯುತ್ತವೆ.

## English Translation.

The (worshipper) subjecting Rita (to his will) verily enjoys Rita: the strength of Rita is (developed) with speed, and is desirous of (possesing) water: to Rita belong the wide and profound heaven and earth: supreme milch cows, they yield their milk to Rita.

॥ ಸಂಹಿತಾಪಾಠಃ ॥

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।

ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥ ೧೧ ॥

॥ ಪದಪಾಠಃ ॥

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।

ಅಕಾರಿ । ತೇ । ಹರಿ್ವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾ್ಽಸಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರ್ಋಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಸ್ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನಾದ್ಭಿರ್ನದೀರಿವ ಪೀಪೇಃ । ಪ್ಯಾಯಯ । ಪ್ರವೃದ್ಧಂ ಕುರು । ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನು—ಅತಿಶಯವಾಗಿ । ಸ್ತುತಃ—ಹಿಂದಿನ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧೆಯಿಂದ । ಗೃಣಾನಃ—(ನಮ್ಮಿಂದಲೂ) ಸ್ತುತನಾಗತಕ್ಕವನೂ ಆಗಿ । ನದ್ಯಃ ನ—ನದಿಗಳನ್ನು ಉದಕಗಳಿಂದ ತುಂಬುವಂತೆ । ಜರಿತ್ರೇ—ಸ್ತೋತೃವಾದ ನನಗೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು ! ಹರಿವಃ—ಹರಿಸಂಜ್ಞಕಗಳಾದ ಅಶ್ವಗಳುಳ್ಳ ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಿರ್ಮಿತವಾಗುತ್ತದೆ । ರಥ್ಯಃ—ರಥಗಳನ್ನು ಹೊಂದಿರುವ ನಾವು । ಧಿಯಾ—ಪ್ರಜ್ಞಾಪೂರ್ವಕವಾದ ಸ್ತುತಿಯಿಂದ । ಸದಾಸಾಃ—ನಿನ್ನನ್ನು ಪೂಜಿಸಿ ಹವಿಸ್ಸನ್ನು ರ್ಪಿಸುವವರಾಗಿ । ಸ್ಯಾಮ—ಆಗುವಂತೆ ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಅತಿಶಯವಾಗಿ ಸ್ತುತನಾದವನೂ, ಅದೇ ಶ್ರದ್ಧೆಯಿಂದ ನಮ್ಮಿಂದಲೂ ಸ್ತುತನಾಗತಕ್ಕವನೂ ಆಗಿ ನದಿಗಳನ್ನು ಉದಕಗಳಿಂದ ತುಂಬುವಂತೆ ಸ್ತೋತೃವಾದ ನನಗೆ ಅನ್ನವನ್ನು ತುಂಬಿಕೊಡು. ಹರಿಸಂಜ್ಞಕಗಳಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತೋತ್ರವು ನಿರ್ಮಿತವಾಗುತ್ತದೆ.

ರಥಗಳನ್ನು ಹೊಂದಿರುವ ನಾವು ಪ್ರಜ್ಞಾಪೂರ್ವಕವಾದ ಸ್ತುತಿಯಿಂದ ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ ಆಗುವಂತಾಗಲಿ.

## English Translation.

Glorified (in the past), glorified, Indra, at present, satisfy your worshipper with food, as rivers (are filled with water): lord of horses, a new hymn has been made for you: may we, possessed of chariots, be ever diligent in your praise.

॥ ವಿಶೇಷವಿಷಯಗಳು ॥

ಈ ಋಕ್ಕು ಈ ಸೂಕ್ತದಲ್ಲಲ್ಲದೆ ೨೦-೨೪ ನೇ ಸೂಕ್ತಗಳಲ್ಲಿ ಕೊನೆಯ ಋಕ್ಕುಗಳಾಗಿ ಪಠಿತವಾಗಿದೆ.

ಇಂದ್ರ ನು ಸ್ತುತಃ ನು ಗೃಣಾನಃ ನದ್ಯಃ ನ ಜರಿತ್ರೇ ಇಷಂ ಪೀಪೇಃ—ಎಲೈ ಇಂದ್ರನೇ, ನೀನು ಹಿಂದೆ ಅನೇಕ ಋಷಿಗಳಿಂದ ಸ್ತುತಿಸಲ್ಪಟ್ಟಿರುವೆ. ಈಗ ನಮ್ಮಿಂದ ಸ್ತುತಿಸಲ್ಪಡುವೆ. ನದಿಗಳಿಗೆ ವೃಷ್ಟ್ಯುದಕವು ತುಂಬಿ ಪೂರ್ಣವಾಗಿ ಹರಿಯುವಂತೆ ನಿನ್ನನ್ನು ಸ್ತೋತ್ರಮಾಡುವ ನಮಗೆ ಅನ್ನವನ್ನು (ಅನ್ನಾದ್ಯಾಹಾರವನ್ನು) ತುಂಬಿ ಕೊಡು, ಎಂದರೆ ಯಥೇಚ್ಛವಾಗಿ ಕೊಡು.

ನು—ನು ಇತ್ಯೇಷೋಽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧-೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. ಕಥಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ ಅಥಾಪ್ಯುಪಮಾರ್ಥೇ ಭವತಿ । ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿರುವುದು. ಉದಾಹರಣೆಗೆ—

ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।
ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ತಯೋ ರುರುಹುರಿಂದ್ರ ಪೂರ್ವೀಃ ॥
(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ (ನಿ. ೧-೪), ವೃಕ್ಷಸ್ಯ ನು ತೇ । ವೃಕ್ಷಸ್ಯೇವ ತೇ । ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಶಬ್ದಕ್ಕೆ ಉಪಮಾರ್ಥವನ್ನು ಹೇಳಿದೆಯೆಂದು ತಿಳಿಸಿದಾರೆ. ಹೀಗೆಯೇ—

ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।
(ಋ. ಸಂ. ೭-೧೦೦-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂಬ ಶಬ್ದಕ್ಕೆ ಕ್ಷಿಪ್ರಂ ಬೇಗನೆ, ಜಾಗ್ರತೆಯಾಗಿ ಎಂಬರ್ಥವೂ,

ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।
(ಋ. ಸಂ. ೭-೧೯-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂದರೆ ಆದ್ಯ, ಈಗ, ಒಡನೆಯೇ ಎಂಬ ಅರ್ಥವಿರುವುದೆಂದು ನಿರುಕ್ತಕಾರರು ಉದಾಹರಣೆ ಸಹಿತವಾಗಿ ವಿವರಿಸಿದಾರೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರಂ ಬೇಗನೆ, ಶೀಘ್ರವಾಗಿ ಎಂದರ್ಥವು.

ಜರಿತ್ರೇ—ಜರಿತೃಶಬ್ದವು ಸ್ತೋತೃನಾಮುಗಳಲ್ಲಿ ಪಠಿತವಾಗಿದೆ (ನಿ. ೩-೧೯) ಜರಿತಾ ಗರಿತಾ (ನಿ. ೧-೭) ಎಂದು ನಿರ್ವಚನವೂ ಇರುವುದರಿಂದ ಜರಿತ್ರೇ ಎಂದರೆ ಇಲ್ಲಿ ಸ್ತೋತ್ರಮಾಡುವ ನನಗೆ ಎಂದರ್ಥವು.

ನ—ನ ಎಂಬ ಶಬ್ದಕ್ಕೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು—

> ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಾಧ್ಯಾಯ್ಯಂ । ನೇಂದ್ರಂ ದೇವಮಮಂಸತ ಇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಂ ಇತ್ಯುಪಮಾರ್ಥೀಯಃ । ಉಪರಿಷ್ಟಾದುಪಚಾರಸ್ತಸ್ಯ ಯೇನೋಪಮಿಮೀತೇ ॥　　(ನಿ. ೧-೪)

ಎಂದರೆ ನ ಎಂಬ ಶಬ್ದವು ಲೋಕವ್ಯವಹಾರದ ಭಾಷೆಯಲ್ಲಿ ಎಂದರೆ, ವೇದಭಾಷೆಯಲ್ಲದ ಆಧುನಿಕ ಸಂಸ್ಕೃತ ಭಾಷೆಯಲ್ಲಿ ನಿಷೇಧಾರ್ಥದಲ್ಲಿ (ಇಲ್ಲ, ಅಲ್ಲ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು. ಇದು ಎಲ್ಲರಿಗೂ ತಿಳಿದೇ ಇದೆ. ಆದರೆ ವೇದಗಳಲ್ಲಿ ನಿಷೇಧಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ ನ ಎಂಬ ಶಬ್ದದ ಪ್ರಯೋಗವಿರುವುದು. ಹೇಗೆಂದರೆ— ನೇಂದ್ರಂ ದೇವಮಮಂಸತ ಎಂಬ ವಾಕ್ಯದಲ್ಲಿನ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿರುವುದು. ಪ್ರತಿಷೇಧವೆಂದರೆ ಒಬ್ಬ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಎದುರಿಗೆ ಹೊಗಳದೇ ಇರುವುದು. ಇಂದ್ರನನ್ನು ದೀಪ್ತಿಯುಕ್ತನಾದವನೆಂದು ತಿಳಿಯಲಾಗುವುದಿಲ್ಲ ಎಂಬ ವಾಕ್ಯದಲ್ಲಿ ಇಲ್ಲ (ನ ಎಂಬುದರ ಅರ್ಥ) ಎಂಬ ಶಬ್ದವು ಇಂದ್ರನ ವಿಷಯಕವಾದ ಉಪಚಾರೋಕ್ತಿಗೆ ವಿರುದ್ಧವಾದ ಅರ್ಥವನ್ನು ಸೂಚಿಸುವುದು. ಇದಕ್ಕೆ ಪ್ರತಿಷೇಧಾರ್ಥವೆಂದು ಹೆಸರು. ದುರ್ಮದಾಸೋ ನ ಸುರಾಯಾಂ ಎಂಬ ವಾಕ್ಯದಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು (ಹೋಲಿಕೆಯನ್ನು) ಸೂಚಿಸುವುದು. ಮದ್ಯವನ್ನು ಪಾನಮಾಡಿದ ಜನರಂತೆ ದುರಹಂಕಾರವುಳ್ಳವರು ಎಂದು ಈ ವಾಕ್ಯದ ಅರ್ಥವು. ಇಲ್ಲಿ ಒಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳನ್ನು ಮತ್ತೊಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳಿಗೆ ಹೋಲಿಸಿ ಹೇಳುವುದೇ ಉಪಮಾರ್ಥವು. ಮದ್ಯಪಾನಮಾಡಿದವರು ಮತಿಹೀನರಾಗಿ ಅಹಂಕಾರದಿಂದ ನೀಚಮಾರ್ಗದಲ್ಲಿ ವರ್ತಿಸುವರು. ಆ ಜನರಂತೆ ದುರಹಂಕಾರವುಳ್ಳವರು ಎಂಬುದೇ ಉಪಮಾರ್ಥವು. ಈ ವಿಧವಾದ ಅರ್ಥಗಳನ್ನು ವೇದಗಳಲ್ಲಿ ನ ಎಂಬ ಪದದಿಂದಲೂ, ಇವ ಎಂಬ ಪದದಿಂದಲೂ ನಿರ್ದೇಶಿಸಲ್ಪಡುವುದು. ಈ ವಿಧವಾದ ಉಪಮಾರ್ಥದಲ್ಲಿ ನ ಎಂಬ ಶಬ್ದದ ಪ್ರಯೋಗವು ವೇದಗಳಲ್ಲಿ ಮಾತ್ರ ಇರುವುದು. ಬಳಸುವ ಭಾಷೆಯಲ್ಲಿಲ್ಲ. ಆದಕ್ಕೆ ಬದಲಾಗಿ ಅಲ್ಲಿ ಇವ ಎಂಬ ಶಬ್ದದ ಪ್ರಯೋಗಮಾತ್ರವಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ವಾಮದೇವಋಷಿಯು ದೇವತೆಗೆ ಹೊಸದಾಗಿ ರಚಿತವಾದ ಸ್ತೋತ್ರವನ್ನರ್ಪಿಸಿ ದೇವತೆಯ ಅನುಗ್ರಹವನ್ನು ಪ್ರಾರ್ಥಿಸಿರುವುದು ಉಕ್ತವಾಗಿದೆ.



# ಇಪ್ಪತ್ತನಾಲ್ಕನೆಯ ಸೂಕ್ತವು

ಕಾ ಸುಷ್ಟುತಿರಿತ್ಯೇಕಾದಶರ್ಚಂ ತೃತೀಯಂ ಸೂಕ್ತಂ ವಾಮದೇವಸ್ಯಾರ್ಷಮೈಂದ್ರಂ । ದಶಮ್ಯನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಮಣಿಕಾ । ಕಾ ಸುಷ್ಟುತಿರುಪಾಂತ್ಯಾನುಷ್ಟುಬಿತಿ । ವಿನಿಯೋಗೋ ಲೈಂಗಿಕಃ ॥

ಅನುವಾದವು—ಕಾ ಸುಷ್ಟುತಿಃ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಹತ್ತನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಕಾ ಸುಷ್ಟುತಿರುಪಾಂತ್ಯಾನುಷ್ಟುಪ್ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೨೪

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೪ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೧, ೧೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ವಾಮದೇವಃ ॥

ದೇವತಾ—ಇಂದ್ರಃ ॥

ಛಂದಃ—೧-೯, ೧೧ ತ್ರಿಷ್ಟುಪ್ । ೧೦ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಕಾ ಸುಷ್ಟುತಿಃ ಶವಸಃ ಸೂನುಮಿಂದ್ರಮರ್ವಾಚೀನಂ ರಾಧಸ ಆ ವವರ್ತತ್ ।
ದದಿರ್ಹಿ ವೀರೋ ಗೃಣತೇ ವಸೂನಿ ಸ ಗೋಪತಿರ್ನಿಷ್ಷಿಧಾಂ ನೋ ಜನಾಸಃ ॥ ೧ ॥

॥ ಪದಪಾಠಃ ॥

ಕಾ । ಸುऽಸ್ತುತಿಃ । ಶವಸಃ । ಸೂನುಂ । ಇಂದ್ರಂ । ಅರ್ವಾಚೀನಂ । ರಾಧಸೇ । ಆ । ವವರ್ತತ್ । ದದಿಃ । ಹಿ । ವೀರಃ । ಗೃಣತೇ । ವಸೂನಿ । ಸಃ । ಗೋऽಪತಿಃ । ನಿಃऽಸಿಧಾಂ । ನಃ । ಜನಾಸಃ ॥ ೧ ॥

॥ ಸಾಯಣಭಾಷ್ಯಂ ॥

ಕಾ ಕೀದೃಶೀ ಸುಷ್ಟುತಿಃ ಶವಸಃ ಸೂನುಂ ಬಲಸ್ಯ ಪುತ್ರಂ । ಅತಿಬಲಿನಮಿತ್ಯರ್ಥಃ । ಅರ್ವಾಚೀನಮಸ್ಮದಭಿಮುಖಮಿಂದ್ರಂ ಪರಮೈಶ್ವರ್ಯಯುಕ್ತಂ ರಾಧಸೇ ಧನಾಯಾಸ್ಮಭ್ಯಂ ಧನಂ ದಾತುಮಾ

ವವರ್ತತ್ । ಆವರ್ತಯೇತ್ । ಹೇ ಜನಾಸೋ ಜನಾ ಯಜಮಾನಾ ವೀರೋ ವಿಕ್ರಾಂತೋ ಗೋಪತಿಃ ಪಶ್ವಾದಿಧನಸ್ಯ ಪಾಲಕಃ ಸ ಇಂದ್ರೋ ನಿಷ್ಷಿಧಾಂ ನಿಷ್ಷೇದ್ಧೄಣಾಂ ಶತ್ರೂಣಾಂ ಸಂಬಂಧೀನಿ ವಸೂನಿ ಧನಾನಿ ಗೃಣತೇ ಗೃಣದ್ಭ್ಯಃ ಸ್ತೋತೃಭ್ಯೋ ನೋಽಸ್ಮಭ್ಯಂ ದದಿರ್ಹಿ । ದಾತಾ ಖಲು ಭವತಿ ॥

॥ ಪ್ರತಿಪದಾರ್ಥ ॥

ಕಾ—ಎಂತಹ । ಸುಷ್ಟುತಿಃ—ಶ್ರೇಷ್ಠವಾದ ಸ್ತುತಿಯು । ಶವಸಃ ಸೂನುಂ—ಶಕ್ತಿಪುತ್ರನಾದ (ಅತ್ಯಂತ ಶಕ್ತಿಯುಳ್ಳ) । ಇಂದ್ರಂ—ಇಂದ್ರನನ್ನು । ರಾಧಸೇ—ನಮಗೆ ಧನವನ್ನು ಕೊಡಲು । ಅರ್ವಾಚೀನಂ—ನಮಗೆ ಅಭಿಮುಖನಾಗಿರುವಂತೆ । ಆ ವವರ್ತತ್—ತಿರುಗಿಸಬಲ್ಲದು? । ಜನಾಸಃ—ಮಾನವರಾದ ಯಜಮಾನರೇ। ವೀರಃ—ಪರಾಕ್ರಮಿಯೂ । ಗೋಪತಿಃ—ಪಶ್ವಾದಿಧನಗಳಿಗೆ ಪಾಲಕನೂ ಆದ । ಸಃ—ಇಂದ್ರನು । ನಿಷ್ಷಿಧಾಂ—ತಡೆಗಟ್ಟತಕ್ಕ ಶತ್ರುಗಳಿಗೆ ಸೇರಿದ । ವಸೂನಿ—ಧನಗಳನ್ನು । ಗೃಣತೇ—ಅವನನ್ನು ಸ್ತುತಿಸತಕ್ಕ । ನಃ—ನಮಗೆ । ದದಿರ್ಹಿ—ಕೊಡತಕ್ಕವನಾಗಿದ್ದಾನೆ.

॥ ಭಾವಾರ್ಥ ॥

ನಮಗೆ ಧನಾದಿಗಳನ್ನು ಕೊಡಲು ಸಮರ್ಥನೂ ಅತ್ಯಂತಶಕ್ತನೂ ಆದ ಇಂದ್ರನನ್ನು ನಮಗೆ ಅಭಿಮುಖನಾಗಿ ತಿರುಗುವಂತೆಯೂ ನಮ್ಮನ್ನು ಅನುಗ್ರಹಿಸುವಂತೆಯೂ ಯಾವ ವಿಧವಾದ ಸ್ತುತಿಯು ಮಾಡಬಲ್ಲದು ? ಮಾನವರಾದ ಎಲೈ ಯಜಮಾನರೇ, ಪರಾಕ್ರಮಿಯೂ, ಪಶ್ವಾದಿಧನಗಳಿಗೆ ಪಾಲಕನೂ ಆದ ಇಂದ್ರನು ವಿರೋಧಿಗಳಾದ ಶತ್ರುಗಳಿಗೆ ಸೇರಿದ ಧನಗಳನ್ನು ಕಸಿದು ಅವನ್ನು ಸ್ತುತಿಸುವ ನಮಗೆ ಕೊಡುವವನಾಗಿದ್ದಾನೆ.

## English Translation.

What suitable praise may bring the son of strength, Indra, before us, to give us wealth : the hero, the lord of cattle, is the donor, oh man, of the wealth of his adversaries to him who glorifies him.

॥ ವಿಶೇಷವಿಷಯಗಳು ॥

ಶವಸಃ ಸೂನುಂ—ಶವಸಃ ಸೂನುಂ, ಸಹಸಃ ಪುತ್ರ ಇತ್ಯಾದಿ ಶಬ್ದಗಳು ಋಗ್ವೇದದಲ್ಲಿ ಅಗ್ನಿಪರವಾಗಿಯೇ ಉಪಯೋಗಿಸಲ್ಪಡುವವು. ಅಗ್ನಿಮಥನಮಾಡುವಾಗ ಬಲಪ್ರಯೋಗಮಾಡಿ ಕಡೆಯಬೇಕಾಗಿರುವುದರಿಂದ ಅಗ್ನಿಯನ್ನು ಬಲದ (ಬಲಪ್ರಯೋಗಮಾಡುವುದರಿಂದ ಹುಟ್ಟಿದ) ಪುತ್ರ ಎಂದು ಸಂಬೋಧಿತವಾಗಿರುವುದು ರೂಢಿಯಾಗಿದೆ. ಪ್ರಕೃತ ಋಕ್ಕಿನಲ್ಲಿ ಈ ಶಬ್ದಗಳು ಇಂದ್ರನ ಪರವಾಗಿ ಪ್ರಯುಕ್ತವಾಗಿದೆ. ಭಾಷ್ಯಕಾರರು ಹೇಳಿರುವಂತೆ ಅತಿಬಲಿನಮಿತ್ಯರ್ಥಃ। ಅತ್ಯಂತ ಬಲಶಾಲಿಯಾದ ಇಂದ್ರನನ್ನು ಎಂಬರ್ಥದಲ್ಲಿ ಈ ಶಬ್ದಗಳ ಪ್ರಯೋಗವಿರುವುದೆಂದು ಭಾವಿಸಬೇಕು.

ಸಃ ನಿಷ್ಷಿಧಾಂ ವಸೂನಿ ಗೃಣತೇ ನಃ ದದಿರ್ಹಿ—ಆ ಇಂದ್ರನು ನಮ್ಮನ್ನು ವಿರೋಧಿಸುವ ಶತ್ರುಗಳಿಗೆ ಸೇರಿದ ಧನಗಳನ್ನು ನಮಗೆ ಕೊಡುತ್ತಾನೆ ಎಂದು ಹೇಳಿದೆ. ಎಂದರೆ ನಾವು ಶತ್ರುಗಳೊಡನೆ ಯುದ್ಧಮಾಡುವಾಗ

ನಮಗೆ ಇಂದ್ರನ ಅನುಗ್ರಹದಿಂದ ಜಯವುಂಟಾಗಿ ಶತ್ರುಗಳಲ್ಲಿರುವ ಧನಗಳು ನಮಗೆ ದೊರಕುವವು ಎಂದಭಿಪ್ರಾಯವು ಸೂಚಿತವಾಗಿದೆ.



‖ ಸಂಹಿತಾಪಾಠಃ ‖

ಸ ವೃತ್ರಹತ್ಯೇ ಹವ್ಯಃ ಸ ಈಡ್ಯಃ ಸ ಸುಷ್ಟುತ ಇಂದ್ರಃ ಸತ್ಯರಾಧಾಃ ।
ಸ ಯಾಮನ್ನಾ ಮಘವಾ ಮರ್ತ್ಯಾಯ ಬ್ರಹ್ಮಣ್ಯತೇ ಸುಷ್ವಯೇ ವರಿವೋ ಧಾತ್ ‖ ೧ ‖

। ಪದಪಾಠಃ ‖

ಸಃ । ವೃತ್ರಽಹತ್ಯೇ । ಹವ್ಯಃ । ಸಃ । ಈಡ್ಯಃ । ಸಃ । ಸುಽಸ್ತುತಃ । ಇಂದ್ರಃ । ಸತ್ಯಽರಾಧಾಃ ।
ಸಃ । ಯಾಮನ್ । ಆ । ಮಘಽವಾ । ಮರ್ತ್ಯಾಯ । ಬ್ರಹ್ಮಣ್ಯತೇ । ಸುಸ್ವಯೇ । ವರಿವಃ । ಧಾತ್ ‖

। ಸಾಯಣಭಾಷ್ಯಂ ‖

ಸ ಇಂದ್ರೋ ವೃತ್ರಹತ್ಯೇ ವೃತ್ರಾಣಾಂ ಶತ್ರೂಣಾಂ ಹತ್ಯೇ ಹನನೇ ನಿಮಿತ್ತಭೂತೇ ಸತಿ ಯಾಮನ್ಯುದ್ಧೇ ಹವ್ಯ ಆಹ್ವಾತವ್ಯೋ ಭವತಿ । ಸ ಇಂದ್ರ ಈಡ್ಯಃ ಸ್ತುತ್ಯೋ ಭವತಿ । ಸ ಇಂದ್ರಃ ಸುಷ್ಟುತಃ ಸನ್ ಸತ್ಯರಾಧಾ ಯಜಮಾನೇಭ್ಯೋ ದಾತುಂ ಸತ್ಯಧನೋ ಭವತಿ । ಮಘವಾ ಧನವಾನ್ ಸ ಇಂದ್ರೋ ಬ್ರಹ್ಮಣ್ಯತೇ ಸ್ತೋತ್ರಮಿಚ್ಛತೇ ಸುಷ್ವಯೇ ಸೋಮಂ ಸುನ್ವತೇ ಮರ್ತ್ಯಾಯ ಮನುಷ್ಯಾಯ ಯಜಮಾನಾಯ ವರಿವೋ ಧನಂ । ವರಿವ ಇತಿ ಧನನಾಮ್ಯೇತತ್ । ಆ ಧಾತ್ । ಆ ಸಮಂತಾದ್ದದಾತಿ ‖

। ಪ್ರತಿಪದಾರ್ಥ ।

ಸಃ—ಇಂದ್ರನು । ವೃತ್ರಹತ್ಯೇ—ಶತ್ರುನಾಶಕವಾದ । ಯಾಮನ್—ಯುದ್ಧಕಾಲದಲ್ಲಿ । ಹವ್ಯಃ—ಸಹಾಯಕ್ಕಾಗಿ ಕರೆಯಲ್ಪಡುವವನಾಗಿದ್ದಾನೆ । ಸಃ—ಇಂದ್ರನು । ಈಡ್ಯಃ—ಪೂಜ್ಯನು । ಸಃ ಇಂದ್ರಃ—ಪೂಜ್ಯನಾದ ಅದೇ ಇಂದ್ರನು । ಸುಷ್ಟುತಃ—ಅತಿಶಯವಾಗಿ ಸ್ತುತನಾದಾಗ । ಸತ್ಯರಾಧಾಃ - ಸತ್ಯಾತ್ಮಕವಾದ ಧನದಾತನಾಗುತ್ತಾನೆ । ಮಘವಾ—ಧನವಂತನಾದ । ಸಃ—ಅದೇ ಇಂದ್ರನು । ಬ್ರಹ್ಮಣ್ಯತೇ—ಸ್ತುತಿಮಾಡತಕ್ಕವನೂ । ಸುಷ್ವಯೇ—ಸೋಮವನ್ನು ಹಿಂಡತಕ್ಕವನೂ ಆದ । ಮರ್ತ್ಯಾಯ—ಯಜಮಾನನಿಗೆ । ವರಿವಃ—ಧನವನ್ನು । ಆ ಧಾತ್—ಪೂರ್ಣವಾಗಿ ಕೊಡುತ್ತಾನೆ.

। ಭಾವಾರ್ಥ ‖

ಪರಾಕ್ರಮಿಯಾದ ಇಂದ್ರನು ಶತ್ರುನಾಶಕವಾದ ಯುದ್ಧದಲ್ಲಿ ಸಹಾಯಕ್ಕಾಗಿ ಕರೆಯಲ್ಪಡುತ್ತಾನೆ. ಅವನು ಅತ್ಯಂತ ಪೂಜ್ಯನಾಗಿದ್ದಾನೆ. ಈ ರೀತಿ ಪೂಜ್ಯನಾದ ಇಂದ್ರನು ಯಜಮಾನರಿಂದ ಪ್ರಶಂಸಿಸಲ್ಪಟ್ಟಾಗ ಸತ್ಯಾತ್ಮಕವಾದ

ಧನದಾತೃವಾಗುತ್ತಾನೆ. ಧನವಂತನಾದ ಅದೇ ಇಂದ್ರನು ತನ್ನನ್ನು ಸ್ತುತಿಸತಕ್ಕವನೂ, ಸೋಮವನ್ನು ಅರ್ಪಣೆಗಾಗಿ ಹಿಂಡತಕ್ಕವನೂ, ಮಾನವನೂ ಆದ ಯಜಮಾನನಿಗೆ ಪೂರ್ಣವಾಗಿ ಧನವನ್ನು ಕೊಡುತ್ತಾನೆ.

## English Translation.

He, Indra, is to be invoked for the destruction of Vritra : he, the deservedly praised, is to be worshipped : the real donor of wealth, he, Maghavan, gives wealth, (acquired) in battle, to the mortal who offers him prayer and libations.

॥ ವಿಶೇಷವಿಷಯಗಳು ॥

ಯುದ್ಧಾದಿಗಳಲ್ಲಿ ಜಯವಾಗುವುದಕ್ಕಾಗಿ ಇಂದ್ರನ ಅನುಗ್ರಹವು ಅವಶ್ಯಕವಾದುದರಿಂದ ಆ ಕಾಲದಲ್ಲಿ ಇಂದನನ್ನು ಜಯಲಾಭಕ್ಕಾಗಿ ಕರೆಯುತ್ತೇವೆ. ಇಂದ್ರನನ್ನು ಸ್ತುತಿಸುವುದರಿಂದ ಅವನು ಸಂತುಷ್ಟನಾಗಿ ನಮಗೆ ಧನಾದಿಗಳನ್ನು ಕೊಡುತ್ತಾನೆ. ಮತ್ತು ಸ್ತೋತ್ರಮಾಡತಕ್ಕವರೂ, ಸೋಮರಸವನ್ನು ಹಿಂಡಿ ಅದನ್ನು ಇಂದ್ರನಿಗೆ ಅರ್ಪಿಸುವವರೂ ಆದ ಯಜಮಾನರಿಗೆ ಇಂದ್ರನು ಧನಾದಿಗಳನ್ನು ಕೊಟ್ಟು ಸಂತೋಷಪಡಿಸುತ್ತಾನೆ ಎಂಬಭಿಪ್ರಾಯವು ಇಲ್ಲಿ ಸೂಚಿತವಾಗಿದೆ.



॥ ಸಂಹಿತಾಪಾಠಃ ॥

ತಮಿನ್ನರೋ ವಿ ಹ್ವಯಂತೇ ಸಮೀಕೇ ರಿರಿಕ್ವಾಂಸಸ್ತನ್ವಃ ಕೃಣ್ವತ ತ್ರಾಂ ।
ಮಿಥೋ ಯತ್ತ್ಯಾಗಮುಭಯಾಸೋ ಅಗ್ಮನ್ನರಸ್ತೋಕಸ್ಯ ತನಯಸ್ಯ ಸಾತೌ ॥ ೩ ॥

॥ ಪದಪಾಠಃ ॥

ತಂ । ಇತ್ । ನರಃ । ವಿ । ಹ್ವಯಂತೇ । ಸಂಽಈಕೇ । ರಿರಿಕ್ವಾಂಸಃ । ತನ್ವಃ । ಕೃಣ್ವತ । ತ್ರಾಂ ।
ಮಿಥಃ । ಯತ್ । ತ್ಯಾಗಂ । ಉಭಯಾಸಃ । ಅಗ್ಮನ್ । ನರಃ । ತೋಕಸ್ಯ । ತನಯಸ್ಯ । ಸಾತೌ ॥ ೩ ॥

॥ ಸಾಯಣಭಾಷ್ಯಂ ॥

ನರೋ ನೇತಾರೋ ಽಸ್ಮನುಷ್ಯಾಃ ಸಮೀಕೇ ಯುದ್ಧೇ ತಮಿತ್ತಮೇವೇಂದ್ರಂ ವಿ ಹ್ವಯಂತೇ । ವಿವಿಧಮಾಹ್ವಾನಂ ಕುರ್ವತೇ । ತನ್ವಃ ಸ್ವಕೀಯಾನಿ ಶರೀರಾಣಿ ರಿರಿಕ್ವಾಂಸಸ್ತಪಸಾ ರೇಚಯಂತೋ

ಯಜಮಾನಾಸ್ತಮೇವೇಂದ್ರಂ ತ್ರಾಂ ತ್ರಾತಾರಂ ಕೃಣ್ವತ । ಕೃಣ್ವತೇ । ಕುರ್ವತೇ । ಯದ್ಯದಾ ಮಿಥಃ ಪರಸ್ಪರಂ ಸಂಗತಾ ಉಭಯಾಸ ಉಭಯೇ ಯಜಮಾನಾಃ ಸ್ತೋತಾರಶ್ಚ ತ್ಯಾಗಂ ತ್ಯಾಗಕರ್ತಾರಂ ದಾತಾರಮಿಂದ್ರಮಗ್ಮನ್ ಉಪಗಚ್ಛಂತಿ ತದಾ ನರ ಉಭಯವಿಧಾ ಮನುಷ್ಯಾಸ್ತೋಕಸ್ಯ ಪುತ್ರಸ್ಯ ತನಯಸ್ಯ ಪೌತ್ರಸ್ಯ ಚ ಸಾತೌ ಲಾಭೇ ನಿಮಿತ್ತಭೂತೇ ಸತಿ ತಮೇವೇಂದ್ರಂ ತ್ರಾತಾರಂ ಕುರ್ವಂತೀತಿ ಸಂಬಂಧಃ ॥

। ಪ್ರತಿಪದಾರ್ಥ ।

ನರಃ—ಮಾನವರು । ಸಮೀಕೇ—ಯುದ್ಧದಲ್ಲಿ । ತಮಿತ್—ಅದೇ ಇಂದ್ರನನ್ನು (ಇಂದ್ರನನ್ನೇ) । ವಿ ಹ್ವಯಂತೇ—ವಿಧವಿಧವಾಗಿ ಸ್ತುತಿಸಿ ಕರೆಯುತ್ತಾರೆ । ತನ್ವಃ—ತಮ್ಮ ಶರೀರಗಳನ್ನು । ರಿರಿಕ್ವಾಂಸಃ—ತಪಸ್ಸಿನಿಂದ ಕೃಶಮಾಡಿಕೊಳ್ಳುವ ಯಜಮಾನರು । ತ್ರಾಂ—(ಇಂದ್ರನನ್ನೇ) ತಮ್ಮ ರಕ್ಷಕನಾಗಿರುವಂತೆ । ಕೃಣ್ವತೇ—ಮಾಡಿಕೊಳ್ಳುತ್ತಾನೆ । (ಮತ್ತು) ಯತ್—ಯಾವಾಗ । ಉಭಯಾಸಃ— ಯಜಮಾನರೂ, ಸ್ತೋತೃಗಳೂ । ಮಿಥಃ—ಒಟ್ಟಿಗೆ ಸೇರಿಕೊಂಡು । ತ್ಯಾಗಂ—ದಾನಿಯಾದ ಇಂದ್ರನನ್ನು । ಅಗ್ಮನ್—ಸಮೀಪಿಸುವರೋ ಆಗ । ನರಃ—ಎರಡು ಗುಂಪಿನವರೂ । ತೋಕಸ್ಯ—ಪುತ್ರರೂಪವಾದುದೂ । ತನಯಸ್ಯ—ಪೌತ್ರರೂಪವಾದುದೂ ಆದ ಧನವನ್ನು । ಸಾತೌ—ಪಡೆಯುವ ನಿಮಿತ್ತವಾಗಿ (ಇಂದ್ರನನ್ನು ಆರಿಸುವರು).

। ಭಾವಾರ್ಥ ।

ಮಾನವರಾದ ಯಜಮಾನರು ಯುದ್ಧದಲ್ಲಿ ಸಹಾಯಾರ್ಥವಾಗಿ ಇಂದ್ರನನ್ನೇ ವಿಧವಿಧವಾಗಿ ಸ್ತುತಿಸಿ ಕರೆಯುತ್ತಾರೆ. ತಮ್ಮ ಶರೀರಗಳನ್ನು ತಪಸ್ಸಿನಿಂದ ಕೃಶಮಾಡಿಕೊಂಡು ಇಂದ್ರನನ್ನು ಪೂಜಿಸುವ ಯಜಮಾನರು ಅವನನ್ನೇ ತಮ್ಮ ರಕ್ಷಕನನ್ನಾಗಿ ಮಾಡಿಕೊಳ್ಳುತ್ತಾರೆ. ಯಜಮಾನರೂ, ಸ್ತೋತೃಗಳೂ ಒಟ್ಟಿಗೆ ಸೇರಿಕೊಂಡು ದಾನಿಯಾದ ಇಂದ್ರನನ್ನು ಸಮೀಪಿಸಿದಾಗ ಎರಡು ಗುಂಪಿನವರೂ ಸಹ ಪುತ್ರರೂಪವಾದುದೂ, ಪೌತ್ರರೂಪವಾದುದೂ ಆದ ಧನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

## English Translation.

Men verily call upon him in battle : the (devout) inflicters of austerity upon their persons constitute him their preserver : when both (the worshipper and the priest) approach together the bountiful Indra, men (succeed) in (obtaining) the gift of sons and grandsons.



। ಸಂಹಿತಾಪಾಠಃ ॥

ಕ್ರತೂಯಂತಿ ಕ್ಷಿತಯೋ ಯೋಗ ಉಗ್ರಾಶುಷಾಣಾಸೋ ಮಿಥೋ ಅರ್ಣಸಾತೌ ।

ಸಂ ಯದ್ವಿಶೋಽವವೃತ್ರಂತ ಯುಧ್ಮಾ ಆದಿನ್ನೇಮ ಇಂದ್ರಯಂತೇ ಅಭೀಕೇ || ೪ ||

॥ ಪದಪಾಠಃ ॥

ಕ್ರತುಽಯಂತಿ । ಕ್ಷಿತಯಃ । ಯೋಗೇ । ಉಗ್ರ । ಆಶುಷಾಣಾಸಃ । ಮಿಥಃ । ಅರ್ಣಽಸಾತೌ ।

ಸಂ । ಯತ್ । ವಿಶಃ । ಅವವೃತ್ರಂತ । ಯುಧ್ಮಾಃ । ಆತ್ । ಇತ್ । ನೇಮೇ । ಇಂದ್ರಯಂತೇ ।

ಅಭೀಕೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಉಗ್ರೋದ್ಗೂರ್ಣಬಲೇಂದ್ರ ಆಶುಷಾಣಾಸೋ ವ್ಯಾಪ್ನುವಂತಃ ಕ್ಷಿತಯೋ ಮನುಷ್ಯಾಃ । ಕ್ಷಿತಯ ಇತಿ ಮನುಷ್ಯನಾಮೈತತ್ । ಅರ್ಣಸಾತೌ ಸಸ್ಯಾದಿಫಲಸಿದ್ಧ್ಯರ್ಥಮುದಕಲಾಭೇ ನಿಮಿತ್ತೇ ಸತಿ ಮಿಥಃ ಪರಸ್ಪರಂ ಯೋಗೇ ಸಂಬಂಧೇ ಸತಿ ಕ್ರತೂಯಂತಿ । ಕ್ರತೂನಿ ಕರ್ಮಾಣೀಚ್ಛಂತಿ । ಯದ್ಯದಾ ಯುಧ್ಮಾ ಯೋಧಯಿತ್ರ್ಯೋ ವಿಶಃ ಪ್ರಜಾ ಅಭೀಕೇ ಯುದ್ಧೇ । ಅಭೀಕ ಇತಿ ಸಂಗ್ರಾಮನಾಮೈತತ್ । ಸಮವವೃತ್ರಂತ ಸಂವರ್ತಂತೇ ಪರಸ್ಪರಂ ಸಂಗಚ್ಛಂತೇ ಆದಿತ್ ತದಾನೀಮೇವ ನೇಮೇ ಕೇಚನ ಭಾಗ್ಯವಂತೋ ಯೋಧಕಾ ಇಂದ್ರಯಂತೇ । ಯುದ್ಧ ಇಂದ್ರಮಿಚ್ಛಂತಿ ॥

॥ ಪ್ರತಿಪದಾರ್ಥ ॥

ಉಗ್ರ—ಪ್ರಕಟಸಲ್ಪಟ್ಟ ಶಕ್ತಿಯುಳ್ಳ ಎಲೈ ಇಂದ್ರನೇ। ಆಶುಷಾಣಾಸಃ—ವೃಷ್ಟಿಗಾಗಿ ತವಕಪಡುತ್ತಿರುವ। ಕ್ಷಿತಯಃ—ಮಾನವರು। ಅರ್ಣಸಾತೌ—ವೃಷ್ಟ್ಯರ್ಥವಾಗಿ। ಮಿಥಃ—ಒಟ್ಟಿಗೆ। ಯೋಗೇ—ಕೂಡಿಕೊಂಡು। ಋತೂಯಂತಿ—ಕರ್ಮವನ್ನು ಮಾಡಲಿಚ್ಛಿಸುತ್ತಾರೆ। ಯತ್—ಯಾವಾಗ। ಯುಧ್ಮಾಃ—ಯುದ್ಧಕಾಮರಾದ। ವಿಶಃ—ಪ್ರಜೆಗಳು। ಅಭೀಕೇ—ಯುದ್ಧದಲ್ಲಿ। ಸಂ ಅವವೃತ್ರಂತ—ಒಟ್ಟಿಗೆ ಸೇರುತ್ತಾರೋ। ಆದಿತ್—ಆಗಲೇ। ನೇಮೇ—ಕೆಲವು ಪುಣ್ಯವಂತರು ಮಾತ್ರ। ಇಂದ್ರಯಂತೇ—ಪ್ರಭುವಾದ ನಿನ್ನನ್ನು ಸಹಾಯಕ್ಕೆ ಅಪೇಕ್ಷಿಸುತ್ತಾರೆ.

॥ ಭಾವಾರ್ಥ ॥

ಪ್ರಕಟಿತವಾದುದೂ, ಭಯಂಕರವಾದುದೂ ಆದ ಶಕ್ತಿಯುಳ್ಳ ಎಲೈ ಇಂದ್ರನೇ, ವೃಷ್ಟಿಗಾಗಿ ತವಕಪಡುತ್ತಿರುವ ಮಾನವರು ವೃಷ್ಟ್ಯರ್ಥವಾಗಿ ಒಟ್ಟಿಗೆ ಕೂಡಿಕೊಂಡು ಕರ್ಮವನ್ನು ಮಾಡಲಿಚ್ಛಿಸುತ್ತಾರೆ. ಯಾವಾಗ ಯುದ್ಧಕಾಮರಾದ ಪ್ರಜೆಗಳು ಒಟ್ಟಿಗೆ ಯುದ್ಧಕ್ಕಾಗಿ ಸೇರುತ್ತಾರೋ ಆಗ ಕೆಲವು ಸುಕೃತಿಗಳು ಮಾತ್ರ ಪ್ರಭುವಾದ ನಿನ್ನನ್ನು ಸಹಾಯಕ್ಕಾಗಿ ಅಪೇಕ್ಷಿಸಿ ಕರೆಯುತ್ತಾರೆ.

## English Translation.

Powerful Indra, men variously dispersed, come mutually together to celebrate sacred rites for the sake of obtaining rain: when men who are combatants assemble in battle, there are some of them who rely upon Indra.



॥ ಸಂಹಿತಾಪಾಠಃ ॥

ಆದಿದ್ಧ ನೇಮ ಇಂದ್ರಿಯಂ ಯಜಂತ ಆದಿತ್ಪಕ್ತಿಃ ಪುರೋಳಾಶಂ ರಿರಿಚ್ಯಾತ್ ।
ಆದಿತ್ಸೋಮೋ ವಿ ಪಪೃಚ್ಯಾದಸುಷ್ವೀನಾದಿಜ್ಜುಜೋಷ ವೃಷಭಂ ಯಜಧ್ಯೈ ॥

॥ ಪದಪಾಠಃ ॥

ಆತ್ । ಇತ್ । ಹ । ನೇಮೇ । ಇಂದ್ರಿಯಂ । ಯಜಂತೇ । ಆತ್ । ಇತ್ । ಪಕ್ತಿಃ । ಪುರೋಳಾಶಂ । ರಿರಿಚ್ಯಾತ್ ।

ಆತ್ । ಇತ್ । ಸೋಮಃ । ವಿ । ಪಪೃಚ್ಯಾತ್ । ಅಸುಷ್ವೀನ್ । ಆತ್ । ಇತ್ । ಜುಜೋಷ । ವೃಷಭಂ । ಯಜಧ್ಯೈ ॥ ೫ ॥

॥ ಸಾಯಣಭಾಷ್ಯಂ ॥

ಆದಿತ್ತದಾನೀಮೇವ ಯುದ್ಧಕಾಲೇ ನೇಮೇಽನ್ಯೇ ಯೋಧಾ ಇಂದ್ರಿಯಂ ಬಲವಂತಮಿಂದ್ರಂ ಯಜಂತೇ ಹ । ಪೂಜಯಂತಿ ಖಲು । ಕಶ್ಚಿದಾದಿದನಂತರಮೇವ ಪುರೋಳಾಶಂ ಪಿಷ್ಟರೂಪಂ ಹವಿಃ ಪಕ್ತಿಃ ಪಚನ್ ರಿರಿಚ್ಯಾತ್ । ಇಂದ್ರಾಯ ದದ್ಯಾತ್ । ಆದಿದನಂತರಮೇವ ಸೋಮೋಽಭಿಷುತಸೋಮೋ ಯಜಮಾನೋಽಸುಷ್ವೀನನಭಿಷುತಸೋಮಾನ್ಯಜಮಾನಾನ್ವಿ ಪಪೃಚ್ಯಾತ್ । ಧನೈಃ ಪೃಥಕ್ಕುರ್ಯಾತ್ । ಆದಿದನಂತರಮೇವ ಕಶ್ಚಿದ್ವೃಷಭಂ ಕಾಮಾನಾಂ ವರ್ಷಿತಾರಮಿಂದ್ರಂ ಯಜಧ್ಯೈ ಯಷ್ಟುಂ ಜುಜೋಷ। ಸೇವತೇ ॥

। ಪ್ರತಿಪದಾರ್ಥ ।

ಆದಿತ್—ಯುದ್ಧವು ಪ್ರಾಪ್ತವಾದೊಡನೆಯೇ । ನೇಮೇ—ಕೆಲವು ಯೋಧರು । ಇಂದ್ರಿಯಂ—ಶಕ್ತಿವಂತನಾದ ಇಂದ್ರನನ್ನು । ಯಜಂತೇ ಹ—ಪೂಜಿಸುತ್ತಾರೆ । ಆದಿತ್—ಆ ಒಡನೆಯೇ । ಪುರೋಳಾಶಂ-ಪುರೋಡಾಶರೂಪವಾದ ಹವಿಸ್ಸನ್ನು । ಪಕ್ತಿಃ—ಪಾಕಮಾಡಿ । ರಿರಿಚ್ಯಾತ್—ಇಂದ್ರನಿಗೆ ಅರ್ಪಿಸುತ್ತಾರೆ ।

ಆದಿತ್—ಒಡನೆಯೇ | ಸೋಮಃ—ಸೋಮವನ್ನು ಹಿಂಡಿದ ಯಜಮಾನನು | ಅಸುಷ್ವೀನ್—(ಯಜ್ಞಕರ್ತ ನಲ್ಲದ ಆದುದರಿಂದಲೇ) ಸೋಮವನ್ನು ಹಿಂಡದಿರುವ ಮಾನವರನ್ನು | ಪಪೃಚ್ಯಾತ್—ತನ್ನಿಂದ ಬೇರೆಮಾಡುತ್ತಾನೆ | ಆದಿತ್—ಕೂಡಲೇ | ವೃಷಭಂ—ಕಾಮವರ್ಷಕನಾದ ಇಂದ್ರನನ್ನು ಉದ್ದೇಶಿಸಿ | ಯಜಧ್ಯೈ—ಯಾಗ ಮಾಡುವುದಕ್ಕೆ | ಜುಜೋಷ—ಅಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ಯುದ್ಧವು ಪ್ರಾಪ್ತವಾದೊಡನೆಯೇ, ಕೆಲವು ಯೋಧರು ಶಕ್ತಿವಂತನಾದ ಇಂದ್ರನನ್ನು ಪೂಜಿಸುತ್ತಾರೆ. ಆ ಒಡನೆಯೇ, ಪುರೋಡಾಶರೂಪವಾದ ಹವಿಸ್ಸನ್ನು ಪಾಕಮಾಡಿ ಇಂದ್ರನಿಗೆ ಅರ್ಪಿಸುತ್ತಾರೆ. ಒಡನೆಯೇ ಯಜ್ಞಕ್ಕಾಗಿ ಸೋಮವನ್ನು ಹಿಂಡಿದ ಯಜಮಾನನು ಯಜ್ಞಕರ್ತನಲ್ಲದ (ಆದುದರಿಂದಲೇ) ಸೋಮವನ್ನು ಹಿಂಡದಿರುವ ಮಾನವನಿಂದ ಬೇರೆಯಾಗುತ್ತಾನೆ. ಕೂಡಲೇ, ಕಾಮವರ್ಷಕನಾದ ಇಂದ್ರನನ್ನುದ್ದೇಶಿಸಿ ಯಾಗಮಾಡುವುದಕ್ಕೆ ಅಪೇಕ್ಷಿಸುತ್ತಾನೆ.

## English Translation.

Thereupon some verily worship the powerful (Indra); thereupon one man prepares the buttered cake that he may offer it to (Indra); thereupon the offerer of the Soma he distinguishes from him who presents no libation; thereupon some one rejoices to worship the showerer (of benefits).



॥ ಸಂಹಿತಾಪಾಠಃ ॥

ಕೃಣೋತ್ಯಸ್ಮೈ ವರಿವೋ ಯ ಇತ್ಥೇಂದ್ರಾಯ ಸೋಮಮುಶತೇ ಸುನೋತಿ ।
ಸಧ್ರೀಚೀನೇನ ಮನಸಾವಿವೇನಂ ತಮಿತ್ಸಖಾಯಂ ಕೃಣುತೇ ಸಮತ್ಸು ॥

॥ ಪದಪಾಠಃ ॥

ಕೃಣೋತಿ । ಅಸ್ಮೈ । ವರಿವಃ । ಯಃ । ಇತ್ಥಾ । ಇಂದ್ರಾಯ । ಸೋಮಂ । ಉಶತೇ । ಸುನೋತಿ ।
ಸಧ್ರೀಚೀನೇನ । ಮನಸಾ । ಅವಿऽವೇನಂ । ತಂ । ಇತ್ । ಸಖಾಯಂ । ಕೃಣುತೇ । ಸಮತ್ऽಸು ॥ ೬ ॥

। ಸಾಯಣಭಾಷ್ಯಂ ।

ಯೋ ಯಜಮಾನಃ ಸೋಮಮುಶತೇ ಕಾಮಯಮಾನಾಯೇತ್ಥಾಮುತ್ರ ಸ್ವರ್ಗಲೋಕೇ ಸ್ಥಿತಾಯೇಂದ್ರಾಯ ಸುನೋತಿ ಅಭಿಷವಂ ಕರೋತಿ ಇಂದ್ರೋऽಸ್ಯಸ್ಮೈ ಯಜಮಾನಾಯ ವರಿವೋ

ಧನಂ ಕೃಣೋತಿ । ಕರೋತಿ । ಸಧ್ರೀಚೀನೇನ ಸಂಗತೇನ ಮನಸಾ ಪ್ರವಣೇನ ಚಿತ್ತೇನಾವಿವೇನಂ । ವೇನತಿಃ ಕಾಂತಿಕರ್ಮಾ । ವಿವೇನೋ ವಿಗತೇಚ್ಛಃ । ತದನ್ಯೋಽವಿವೇನಃ । ಆತ್ಮಾನಂ ಕಾಮಯಮಾನಂ ತಮಿತ್ತಮೇವ ಸುನ್ವಂತಂ ಯಜಮಾನಂ ಸಖಾಯಂ ಮಿತ್ರಂ ಸಮತ್ಸು ಸಂಗ್ರಾಮೇಷ್ವಿಂದ್ರಃ ಕೃಣುತೇ । ಕರೋತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಯಜಮಾನನು । ಸೋಮಂ—ಸೋಮವನ್ನು । ಉಶತೇ—ಇಚ್ಛಿಸುವ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಸುನೋತಿ—ಸೋಮವನ್ನು ಹಿಂಡುವನೋ । ಅಸ್ಮೈ—ಅಂತಹ ಯಜಮಾನನಿಗಾಗಿ । ಇತ್ಥಾ—(ಇಂದ್ರನು) ಸ್ವರ್ಗದಲ್ಲಿದ್ದರೂ ಸಹ । ವರಿವಃ—ಧನವನ್ನು । ಕೃಣೋತಿ—ಒದಗಿಸಿಕೊಡುತ್ತಾನೆ । ಸಧ್ರೀಚೀನೇನ—ಯೋಗರೂಪದಲ್ಲಿ ತನ್ನಲ್ಲಿ ಸೇರಿಸಿದ । ಮನಸಾ—ಮನಸ್ಸಿನಿಂದ । ಅವಿವೇನಂ—ತನ್ನನ್ನೇ ಧ್ಯಾನಿಸಿ ಅಪೇಕ್ಷಿಸಿದ । ತಮಿತ್—ಆ ಯಜಮಾನನನ್ನೇ । ಸಖಾಯಂ—ಮಿತ್ರನನ್ನಾಗಿ । ಸಮತ್ಸು—ಯುದ್ಧಗಳಲ್ಲಿ । ಕೃಣುತೇ—ಮಾಡಿಕೊಳ್ಳುತ್ತಾನೆ.

॥ ಭಾವಾರ್ಥ ॥

ಪೃಥಿವಿಯಲ್ಲಿರುವ ಯಾವ ಯಜಮಾನನು ಸೋಮವನ್ನಿಚ್ಛಿಸುವ ಇಂದ್ರನನ್ನುದ್ದೇಶಿಸಿ ಅರ್ಪಣೆಗಾಗಿ ಸೋಮವನ್ನು ಹಿಂಡುವನೋ ಅಂತಹ ಯಜಮಾನನಿಗೆ ಇಂದ್ರನು ಸ್ವರ್ಗಧಲ್ಲಿದ್ದರೂ ಸಹ ಅಲ್ಲಿಂದಲೇ ಧನವನ್ನು ಒದಗಿಸುತ್ತಾನೆ. ಯೋಗರೂಪದಲ್ಲಿ ತನ್ನಲ್ಲಿ ಸೇರಿಸಿದ ಮನಸ್ಸಿನಿಂದ ತನ್ನನ್ನೇ ಧ್ಯಾನಿಸಿ ತನ್ನ ಸಹಾಯವನ್ನು ಅಪೇಕ್ಷಿಸಿದ ಯಜಮಾನನನ್ನೇ ಇಂದ್ರನು ಯುದ್ಧಗಳಲ್ಲಿ ಮಿತ್ರನನ್ನಾಗಿ ಮಾಡಿಕೊಳ್ಳುತ್ತಾನೆ.

## English Translation·

Indra bestows wealth upon him who offers a libation to him, desiring it, though in another sphere; and with an humble mind, makes him who is devoted to him his friend in combats.



॥ ಸಂಹಿತಾಪಾಠಃ ॥

ಯ ಇಂದ್ರಾಯ ಸುನವತ್ಸೋಮಮದ್ಯ ಪಚಾತ್ಪಕ್ತೀರುತ ಭೃಜ್ಜಾತಿ ಧಾನಾಃ ।

ಪ್ರತಿ ಮನಾಯೋರುಚಥಾನಿ ಹರ್ಯನ್ತಸ್ಮಿನ್ದಧದ್ವೃಷಣಂ ಶುಷ್ಮಮಿಂದ್ರಃ ॥

॥ ಪದಪಾಠಃ ॥

ಯಃ । ಇಂದ್ರಾಯ । ಸುನವತ್ । ಸೋಮಂ । ಅದ್ಯ । ಪಚಾತ್ । ಪಕ್ತೀಃ । ಉತ । ಭೃಜ್ಜಾತಿ । ಧಾನಾಃ ।
ಪ್ರತಿ । ಮನಾಯೋಃ । ಉಚಥಾನಿ । ಹರ್ಯನ್ । ತಸ್ಮಿನ್ । ದಧತ್ । ವೃಷಣಂ । ಶುಷ್ಮಂ । ಇಂದ್ರಃ ॥೭॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿವಸೇ ಯೋ ಯಜಮಾನ ಇಂದ್ರಾಯ ಪರಮೈಶ್ವರ್ಯಯುಕ್ತಾಯ ದೇವಾಯ ಸೋಮಂ ಸೋಮಲಕ್ಷಣಮನ್ನಂ ಸುನವತ್ ಸುನುಯಾತ್ ಅಭಿಷವಂ ಕುರ್ಯಾತ್ । ತಥಾ ಯಃ ಪಕ್ತೀಃ ಪಕ್ತವ್ಯಾಂಶ್ಚ ಪುರೋಡಾಶಾದೀನ್ಪಚಾತ್ ಪಚೇತ್ ಪಚನಂ ಕುರ್ಯಾತ್ । ಉತಾಪಿ ಚ ಯೋ ಧಾನಾ ಭರ್ಜನಯೋಗ್ಯಾನ್ಯವಾನ್ । ಅತ್ರ ಭೃಷ್ಟಯವವಾಚೀ ಧಾನಾಶಬ್ದಸ್ತದ್ಯೋಗ್ಯಂ ಯವಮಾತ್ರಂ ಲಕ್ಷಯತಿ । ಭೃಜ್ಜಾತಿ ಭೃಜ್ಜೇತ್ ಭರ್ಜನಂ ಕುರ್ಯಾತ್ । ಇಂದ್ರೋ ಮನಾಯೋಃ ಸ್ತುತಿಮಿಚ್ಛತೋ ಯಜಮಾನಸ್ಯೋಚಥಾನಿ ಸ್ತೋತ್ರಾಣಿ ಪ್ರತಿ ಹರ್ಯನ್ ಪ್ರತಿಕಾಮಯಮಾನಃ ಸನ್ ತಸ್ಮಿನ್ಯಜಮಾನೇ ವೃಷಣಂ ಕಾಮಾನಾಂ ವರ್ಷಣಸಮರ್ಥಂ ಶುಷ್ಮಂ ಬಲಂ ದಧತ್ । ಧಾರಯತಿ ॥

॥ ಪ್ರತಿಪದಾರ್ಥ ॥

ಅದ್ಯ—ಇಂದು । ಯಃ—ಯಾವ ಯಜಮಾನನು । ಇಂದ್ರಾಯ—ಇಂದ್ರನನ್ನುದ್ದೇಶಿಸಿ। ಸೋಮಂ—ಸೋಮವನ್ನು । ಸುನವತ್—ಹಿಂಡುವನೋ । ಪಕ್ತೀಃ—ಪಾಕಯೋಗ್ಯವಾದ ಪುರೋಡಾಶಾದಿಗಳನ್ನು । ಪಚಾತ್—ಪಕ್ವಮಾಡುವನೋ । ಉತ—ಮತ್ತು । ಧಾನಾಃ—ಯವಾದಿ ಧಾನ್ಯಗಳನ್ನು । ಭೃಜ್ಜಾತಿ—ಹುರಿದು ಭಕ್ಷಣಯೋಗ್ಯವನ್ನಾಗಿ ಮಾಡುವನೋ (ಅಂತಹ) । ಮನಾಯೋಃ—ಸ್ತುತಿಕರ್ತನಾದ ಯಜಮಾನನ । ಉಚಥಾನಿ—ಸ್ತೋತ್ರಗಳನ್ನು । ಇಂದ್ರಃ—ಇಂದ್ರನು । ಪ್ರತಿ ಹರ್ಯನ್—ಅಪೇಕ್ಷಿಸಿ ಸ್ವೀಕರಿಸುತ್ತಾ । ತಸ್ಮಿನ್—ಆ ಯಜಮಾನನಲ್ಲಿ । ವೃಷಣಂ—ಕಾಮವರ್ಷಕವಾದ । ಶುಷ್ಮಂ—ಬಲವನ್ನು । ದಧತ್—ಉಂಟುಮಾಡುತ್ತಾನೆ.

॥ ಭಾವಾರ್ಥ ॥

ಇಂದ್ರನನ್ನು ಸ್ತುತಿಸುವ ಯಾವ ಯಜಮಾನನು ಇಂದು ಇಂದ್ರನನ್ನು ಉದ್ದೇಶಿಸಿ ಸೋಮವನ್ನು ಹಿಂಡಿಯೂ, ಪಾಕಯೋಗ್ಯವಾದ ಪುರೋಡಾಶಾದಿಗಳನ್ನು ಪಕ್ವಮಾಡಿಯೂ, ಯವಾದಿ ಧಾನ್ಯಗಳನ್ನು ಹುರಿದು ಭಕ್ಷಣಕ್ಕೆ ಯೋಗ್ಯವನ್ನಾಗಿ ಮಾಡಿಯೂ, ತನ್ನ ಸ್ತುತಿಪೂರ್ವಕವಾಗಿ ಇಂದ್ರನಿಗೆ ಅರ್ಪಿಸುವನೋ, ಅಂತಹ ಯಜಮಾನನ ಸ್ತೋತ್ರಗಳನ್ನು ಇಂದ್ರನು ಅಪೇಕ್ಷಿಸಿ ಸ್ವೀಕರಿಸುತ್ತಾ ಅವನಲ್ಲಿ ಕಾಮವರ್ಷಕವಾದ ಬಲವನ್ನುಂಟುಮಾಡುತ್ತಾನೆ.

## English Translation.

Indra accepting graciously the praises of his devoted (worshipper), who to-day pours out the libation to him, who toasts the buttered cakes

or fries the barley for Indra, exercises towards him the power that grants his desires.

---

॥ ಸಂಹಿತಾಪಾಠಃ ॥

ಯದಾ ಸಮರ್ಯಂ ವ್ಯಚೇದೃಘಾವಾ ದೀರ್ಘಂ ಯದಾಜಿಮಭ್ಯಖ್ಯದರ್ಯಃ।
ಅಚಿಕ್ರದದ್ವೃಷಣಂ ಪತ್ನ್ಯಚ್ಛಾ ದುರೋಣ ಆ ನಿಶಿತಂ ಸೋಮಸುದ್ಭಿಃ ॥೮॥

॥ ಪದಪಾಠಃ ॥

ಯದಾ । ಸ್ವಮರ್ಯಂ । ವಿ । ಅಚೇತ್ । ಋಘಾವಾ । ದೀರ್ಘಂ । ಯತ್ । ಆಜಿಂ । ಅಭಿ । ಅಖ್ಯತ್। ಅರ್ಯಃ ।

ಅಚಿಕ್ರದತ್ । ವೃಷಣಂ । ಪತ್ನೀ । ಅಚ್ಛ । ದುರೋಣೇ । ಆ । ನಿೂಶಿತಂ । ಸೋಮಸುತ್ಽಭಿಃ ॥ ೮ ॥

॥ ಸಾಯಣಭಾಷ್ಯಂ ॥

ಯದಾ ಋಘಾವಾ ಶತ್ರೂಣಾಂ ಹಿಂಸಕ ಇಂದ್ರಃ ಸಮರ್ಯಂ ಸಹ ಮರ್ತವ್ಯಂ ಶತ್ರುಂ ವ್ಯಚೇತ್ ವ್ಯಜ್ಞಾಸೀತ್ ವಿಶೇಷೇಣ ಜಾನೀಯಾತ್ । ಯದ್ಯದಾರ್ಯಃ ಸ್ವಾಮೀಂದ್ರೋ ದೀರ್ಘಮತ್ಯಧಿಕಮಾಜಿಂ ಸಂಗ್ರಾಮಮಭ್ಯಖ್ಯತ್ ಅಭಿಪಶ್ಯೇತ್ ತದಾ ತಸ್ಯೇಂದ್ರಸ್ಯ ಪತ್ನೀ ದುರೋಣೇ ಯಜ್ಞಗೃಹೇ ಸೋಮಸುದ್ಭಿಃ ಸೋಮಂ ಸುನ್ವದ್ಭಿರ್ಋತ್ವಿಗ್ಭಿರ್ನಿಶಿತಂ ತೀಕ್ಷ್ಣೀಕೃತಂ । ಸೋಮಪಾನೇನೋತ್ಸಾಹವಂತಮಿತ್ಯರ್ಥಃ । ವೃಷಣಂ ಕಾಮಾನಾಂ ವರ್ಷಿತಾರಮಿಂದ್ರಮಚ್ಛಾಭಿ ಅಚಿಕ್ರದತ್ । ಅಕ್ರಂದತಿ। ಆಹ್ವಯತೇ ॥

॥ ಪ್ರತಿಪದಾರ್ಥ ॥

ಯದಾ — ಯಾವಾಗ । ಋಘಾವಾ— ಶತ್ರುಹಿಂಸಕನಾದ ಇಂದ್ರನು । ಸಮರ್ಯಂ— ಒಡನೆಯೇ ಸಾಯಿಸಲು ಯೋಗ್ಯನಾದ ಶತ್ರುವನ್ನು । ವ್ಯಚೇತ್— ಚೆನ್ನಾಗಿ ಅರಿತನೋ । ಯತ್— ಯಾವಾಗ । ಅರ್ಯಃ— ಸ್ವಾಮಿಯಾದ ಇಂದ್ರನು । ದೀರ್ಘಂ— ಅತ್ಯಧಿಕವಾಗಿ । ಆಜಿಂ— ಸಂಗ್ರಾಮದಲ್ಲಿ । ಅಭ್ಯಖ್ಯತ್— ವಿಶೇಷ ಆಸಕ್ತಿಯಿಂದ ವೀಕ್ಷಿಸುತ್ತಿರುವನೋ ಆಗ । ಪತ್ನೀ— ಅವನ ಪತ್ನಿಯು । ದುರೋಣೇ— ಯಜ್ಞಗೃಹದಲ್ಲಿ । ಸೋಮಸುದ್ಭಿಃ— ಸೋಮವನ್ನು ಹಿಂಡುವ ಋತ್ವಿಕ್ಕುಗಳಿಂದ । ನಿಶಿತಂ— ಉತ್ಸಾಹಿತನಾದವನೂ । ವೃಷಣಂ— ಕಾಮವರ್ಷಕನೂ ಆದ ಇಂದ್ರನನ್ನು । ಅಚ್ಛ— ತನ್ನಭಿಮುಖವಾಗಿ ಬರುವಂತೆ । ಆ ಚಿಕ್ರದತ್— ಕೂಗಿ ಕರೆಯುತ್ತಾಳೆ.

॥ ಭಾವಾರ್ಥ ॥

ಶತ್ರುಹಿಂಸಕನಾದ ಇಂದ್ರನು ಒಡನೆಯೇ ಸಾಯಿಸಲು ಯೋಗ್ಯನಾದ ಶತ್ರುವನ್ನು ಯಾವಾಗ ಚೆನ್ನಾಗಿ ಅರಿತನೋ ಮತ್ತು ಸ್ವಾಮಿಯಾದ ಇಂದ್ರನು ಸಂಗ್ರಾಮದಲ್ಲಿ ಅತ್ಯಧಿಕವಾದ ಆಸಕ್ತಿಯಿಂದ ಯಾವಾಗ ವೀಕ್ಷಿಸುತ್ತಾ ನಿಲ್ಲುವನೋ ಆಗ ಅವನ ಪತ್ನಿಯು ಯಜ್ಞಗೃಹದಲ್ಲಿ ಸೋಮವನ್ನು ಹಿಂಡುವ ಋತ್ವಿಕ್ಕುಗಳಿಂದ ಉತ್ಸಾಹಿತ ನಾದವನೂ, ಕಾಮವರ್ಷಕನೂ ಆದ ಇಂದ್ರನನ್ನು ತನ್ನಭಿಮುಖವಾಗಿ ಬರುವಂತೆ ಕೂಗಿ ಕರೆಯುತ್ತಾಳೆ.

## English Translation.

When the destroyer (of enemies) distinguishes a mortal foe; when the lord is engaged in the long (continued) battle, (his) bride summons to the dwelling the showerer (of benefits), encompassed by the offerers of the libation.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವಿವರಣೆಯು ಸ್ವಲ್ಪ ತೊಡಕಾಗಿರುವುದು. ಭಾಷ್ಯಕಾರರು ಅರ್ಯಃಶಬ್ದಕ್ಕೆ ಪ್ರಭುವಾದ ಇಂದ್ರನೆಂದೂ ಪತ್ನೀ ಎಂಬ ಶಬ್ದಕ್ಕೆ ಇಂದ್ರನ ಪತ್ನಿಯಾದ ಇಂದ್ರಾಣಿಯೆಂದೂ ಹೇಳಿ ಇಂದ್ರನು ತನ್ನನ್ನು ಸ್ತೋತ್ರ ಮಾಡುವವರ ಪರವಾಗಿ ದೀರ್ಘಕಾಲ ನಡೆಯುವ ಯುದ್ಧದಲ್ಲಿ ನಿರತನಾಗಿರುವಾಗ ಇಂದ್ರನಿಗಾಗಿ ಸೋಮರಸವನ್ನು ಅರ್ಪಿಸುತ್ತಿರುವ ಋತ್ವಿಗ್ಯಜಮಾನರಿಗೆ ಇಷ್ಟಾರ್ಥಗಳನ್ನು ಕೊಡುವುದಕ್ಕಾಗಿ ಇಂದ್ರನ ಪತ್ನಿಯಾದ ಇಂದ್ರಾಣಿಯು ದೂರಪ್ರದೇಶದಲ್ಲಿ ಯುದ್ಧಾಸಕ್ತನಾಗಿರುವ ಇಂದ್ರನನ್ನು ಬರುವಂತೆ ಆಹ್ವಾನಮಾಡುವಳು ಎಂದು ಮುಖ್ಯಾರ್ಥವನ್ನು ವಿವರಿಸಿರುವರು. ಆದರೆ ಕೆಲವು ಪಾಶ್ಚಾತ್ಯ ಪಂಡಿತರು ಅರ್ಯ ಶಬ್ದಕ್ಕೆ ಯಜ್ಞಮಾಡುವ ಯಜಮಾನನೆಂದು ಅರ್ಥಮಾಡಿ ಆ ಯಜಮಾನನು ಯುದ್ಧಕಾರ್ಯದಲ್ಲಿ ತೊಡಗಿದ್ದು ಬಹಳಕಾಲದವರೆಗೂ ಬರದಿರುವುದರಿಂದ ಅವನ ಪತ್ನಿಯು ಋತ್ವಿಜನರಿಂದ ಸೋಮರಸವನ್ನು ಸಿದ್ಧಪಡಿಸಿ ಇಂದ್ರನನ್ನು ಯಜಮಾನನ (ತನ್ನ ಪತಿಯ) ಪರವಾಗಿ ಆಹ್ವಾನಮಾಡುವಳು ಎಂಬರ್ಥವು ಈ ಋಕ್ಕಿನಲ್ಲಿ ಸೂಚಿತವಾಗಿದೆಯೆಂದು ಅಭಿಪ್ರಾಯಪಡುತ್ತಾರೆ. Wilson ಎಂಬ ಆಂಗ್ಲಪಂಡಿತನು—Sayana explains ಅರ್ಯ by ಸ್ವಾಮಿ, lord, that is Indra; and ಪತ್ನಿ in the following passage, he says is Indra's wife; but it would be more consistent with the concluding passage to render ಅರ್ಯ as the name of the orthodox Hindu, in whose behalf his wife propitiates Indra ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

॥ ಸಂಹಿತಾಪಾಠಃ ॥

ಭೂಯಸಾ ವಸ್ನಮಚರತ್ಕನೀಯೋಽವಿಕ್ರೀತೋ ಅಕಾನಿಷಂ ಪುನರ್ಯನ್ ।
ಸ ಭೂಯಸಾ ಕನೀಯೋ ನಾರಿರೇಚೀದ್ದೀನಾ ದಕ್ಷಾ ವಿ ದುಹಂತಿ ಪ್ರ ವಾಣಂ ॥ ೯ ॥

॥ ಪದಪಾಠಃ ॥

ಭೂಯಸಾ । ವಸ್ನಂ । ಅಚರತ್ । ಕನೀಯಃ । ಅವಿಽಕ್ರೀತಃ । ಅಕಾನಿಷಂ । ಪುನಃ । ಯನ್ ।
ಸಃ । ಭೂಯಸಾ । ಕನೀಯಃ । ನ । ಅರಿರೇಚೀತ್ । ದೀನಾಃ । ದಕ್ಷಾಃ । ವಿ । ದುಹಂತಿ । ಪ್ರ । ವಾಣಂ ॥

॥ ಸಾಯಣಭಾಷ್ಯಂ ॥

ಅತ್ರ ಋಗ್ದ್ವಯೇ ಸಂಪ್ರದಾಯವದ್ಭಿಃ ಪೂರ್ವಾಚಾರ್ಯೈಃ ಕೇಚಿತ್ ಶ್ಲೋಕಾಃ ಪಠ್ಯಂತೇ । ತ ಏವ ಲಿಖ್ಯಂತೇ ॥ ಅಲ್ಪಂ ಯಃ ಪರಿಗೃಹ್ಣಾತಿ ಮೂಲ್ಯಂ ಪಣ್ಯೇನ ಭೂಯಸಾ । ಸ ಕ್ರೇತಾರಂ ಪುನರ್ಗಚ್ಛನ್ನ ವಿಕ್ರೀತಸ್ತ್ವಯಂ ಮಯಾ ॥ ಇತಿ ಬ್ರುವನ್ಕಾಮಯತೇ ಪುನರ್ಮೂಲ್ಯಸ್ಯ ಪೂರಣಂ । ಸ ವಿಕ್ರೇತಾ ಪುನರ್ಮೂಲ್ಯಂ ಭೂಯಸಾ ನ ಪ್ರಪೂರಯೇತ್ । ಹೀನಂ ಸ ಲಭತೇ ವಸ್ನಂ ಯದಾ ವಿಕ್ರೀತವಾನ್ಪುರಾ । ಯಥಾಸಮಯಮೇವ ಸ್ಯಾತ್ತಯೋರ್ನ ಪುನರನ್ಯಥಾ ॥ ಅಯಂ ವಿಕ್ರಯ ಏವೇತಿ ಸಮಯಶ್ಚೇತ್ಕೃತೋ ಭವೇತ್ । ಅಥ ಮೂಲ್ಯಾರ್ಥಮೇಕತ್ರಾಸ್ಯ ದ್ವಿಚಾರ್ಯೈವ ತು ನಿರ್ಣಯಃ ॥ ಇತ್ಥಂ ಸಮಯೋಽಕಾರಿ ತದಾ ಮೂಲ್ಯಂ ಪ್ರಪೂರ್ಯತೇ । ತಸ್ಮಾದಾದೌ ಮಯಾ ಕಾರ್ಯಃ ಸಮಯೋಽತ್ರೇತಿ ಚಿಂತಯನ್ ॥ ವಾಮದೇವೋ ವಶೀಕೃತ್ಯ ಶಕ್ರಂ ಸ್ತೋತ್ರೇಣ ಭೂಯಸಾ । ವಿಕ್ರೇಣನ್ ಸಮಯಂ ಚಕ್ರೇ ಇಂದ್ರಂ ಕ ಇಮಮಿತ್ಯೃಚಿ ॥ ಅತಶ್ಚ ದ್ವ್ಯೃಚ ಏಕಾರ್ಥೋ ಭೂಯಸಾ ವಸ್ನಮಿತ್ಯಯಮಿತಿ ॥ ಅಯಮರ್ಥಃ ಪ್ರತಿಪಾದ್ಯತೇ । ಕಶ್ಚಿದ್ಭೂಯಸಾ ಭೂಮ್ನಾ ಪಣ್ಯೇನ ದ್ರವ್ಯೇಣ ಕನೀಯೋಽಲ್ಪತರಂ ವಸ್ನಂ ವಸು ಮೂಲ್ಯಂ ಧನಮಚರತ್ । ಪ್ರಾಪ್ನೋತಿ । ಪುನರ್ಯನ್ ಕ್ರೇತಾರಂ ಪುನರ್ಗಚ್ಛನ್ ಸ ವಿಕ್ರೇತಾಯಮರ್ಥೋ ಮಯಾವಿಕ್ರೀತ ಇತಿ ಬ್ರುವನ್ನಕಾನಿಷಂ । ಮೂಲ್ಯಪೂರ್ತಿಂ ಕಾಮಯತೇ ॥ ವ್ಯತ್ಯಯೇನೋತ್ತಮಪುರುಷಃ ॥ ಸ ವಿಕ್ರೇತಾ ಭೂಯಸಾ ಧನೇನ ಕನೀಯೋಽಲ್ಪತರಂ ಮೂಲ್ಯಂ ನಾರಿರೇಚೀತ್ । ಕ್ರೇತುಃ ಸಕಾಶಾನ್ನ ರಿಕ್ತೀಕರೋತಿ । ಸ ಲಭತ ಇತ್ಯರ್ಥಃ । ದೀನಾ ಅಸಮರ್ಥಾ ದಕ್ಷಾಃ ಸಮರ್ಥಾಶ್ಚ ವಾಣಂ ವಚನಂ ವಿ ಪ್ರ ದುಹಂತಿ । ಯಥೋಕ್ತಂ ಕ್ರಯಕಾಲೇ ತಥೈವ ಲಭಂತೇ ॥

॥ ಪ್ರತಿಪದಾರ್ಥ ॥

ಭೂಯಸಾ—ಅಧಿಕವಾದ ಬೆಲೆಯುಳ್ಳ ವಸ್ತುವಿಗಾಗಿ । ಕನೀಯಃ—ಬಹಳ ಸ್ವಲ್ಪವಾದ । ವಸ್ನಂ—ಮೂಲ್ಯವನ್ನು । ಅಚರತ್—(ಮಾರುವವನು) ಪಡೆಯುತ್ತಾನೆ । ಪುನರ್ಯನ್—(ತನಗೆ ನಷ್ಟವಾಯಿತೆಂದು

ತಿಳಿದನಂತರ) ಪುನಃ ಕೊಂಡವನಲ್ಲಿಗೆ ಹೋಗಿ । ಅವಿಕ್ರೀತಃ—ನಿನಗೆ ನನ್ನ ಪದಾರ್ಥವನ್ನು ಮಾರಿಯೇ ಇಲ್ಲ ಎಂದು ಹೇಳುತ್ತಾ । ಅಕಾನಿಷಂ—ಪದಾರ್ಥದ ಯೋಗ್ಯತೆಗೆ ಬರಬೇಕಾದ ಬಾಕಿಯನ್ನು (ಕೇಳುತ್ತಾನೆ) । ಸಃ—ಕೊಂಡುಕೊಂಡವನು । ಭೂಯಸಾ ಕನೀಯಃ ನಾರಿರೇಚೀತ್—ಅಧಿಕವಾದ ಧನವನ್ನು ಕೊಡೋಣದರಿಂದ (ಹಿಂದೆ ಕೊಟ್ಟ) ಅಲ್ಪವಾದ ಮೊಬಲಗನ್ನು ಪೂರ್ಣಮಾಡುವುದಿಲ್ಲ । ಅಥವಾ ಭೂಯಸಾ ಕನೀಯಃ ನಾರಿರೇಚಿತ್—ತನಗೆ ಲಭಿಸಿದ ಬೆಲೆಯುಳ್ಳ ಪದಾರ್ಥವನ್ನು ಹಿಂದಕ್ಕೆ ಕೊಟ್ಟು ತಾನು ಕೊಟ್ಟಿದ್ದ ಅಲ್ಪಮೊಬಲಗನ್ನು ಮಾರಿದವನಿಂದ ಪಡೆಯುವುದಿಲ್ಲ । ದೀನಾಃ—ಅಸಮರ್ಥರಾಗಲಿ । ದಕ್ಷಾಃ—ಸಮರ್ಥರಾಗಲಿ । ವಾಣಂ—ತಾವು ಆಡಿದ ಮಾತಿನಂತೆ । ವಿ ಪ್ರ ದುಹಂತಿ—ಕ್ರಯಕಾಲದಲ್ಲಿ ಒಪ್ಪಿದ ಬೆಲೆಯನ್ನೇ ಪಡೆಯಬೇಕು.

॥ ಭಾವಾರ್ಥ ॥

ಪದಾರ್ಥವನ್ನು ಮಾರುವವನು ತನ್ನ ಆತುರದಿಂದಾಗಲಿ ಅಥವಾ ಅಜ್ಞಾನದಿಂದಾಗಲಿ, ಬಹಳ ಬೆಲೆಯುಳ್ಳ ಪದಾರ್ಥವನ್ನು ಅಲ್ಪಬೆಲೆಗೆ ಮಾರಿ ನಂತರ ಅದರ ಪರಿಜ್ಞಾನವುಂಟಾಗಿ ಕೊಂಡವನಲ್ಲಿ ಬಂದು ನಿನಗೆ ನನ್ನ ಪದಾರ್ಥ ವನ್ನು ಮಾರಿಯೇ ಇಲ್ಲ, ಎಂದು ಹೇಳಿ ತನ್ನ ಪದಾರ್ಥವನ್ನಾಗಲಿ ಅಥವಾ ಅದರ ಯೋಗ್ಯತೆಗೆ ತಕ್ಕಂತೆ ಬರಬೇಕಾದ ಬಾಕಿಯನ್ನಾಗಲಿ ಅಪೇಕ್ಷಿಸುತ್ತಾನೆ ಆದರೆ ಕೊಂಡವನು ಅಂತಹ ಬೆಲೆಬಾಳುವ ವಸ್ತುವನ್ನು ಹಿಂದಕ್ಕೆ ಕೊಟ್ಟು ಅಲ್ಪವಾದ ಧನವನ್ನು ಪುನಃ ಪಡೆಯಲಿಚ್ಛಿಸುವುದಿಲ್ಲ. ಸಮರ್ಥರಾಗಲಿ, ಅಸಮರ್ಥರಾಗಲಿ ಕ್ರಯಕಾಲದಲ್ಲಿ ಮಾತನಾಡಿ ಯಾವ ಬೆಲೆಯನ್ನು ನಿಷ್ಕರ್ಷೆಮಾಡುತ್ತಾರೋ ಆ ಬೆಲೆಯನ್ನು ಮಾತ್ರ ಪಡೆಯಬೇಕು.

## English Translation.

A man has realized a small price for an article of great value, and again coming (to the buyer he says) this has not been sold ; I require the full price ; but he does not recover a small price by a large (equivalent) : whether helpless or clever they adhere to their bargain.

॥ ವಿಶೇಷವಿಷಯಗಳು ॥

ಈ ಋಕ್ಕು ಮತ್ತು ಮುಂದಿನ ಋಕ್ಕಿನ ವಿಷಯದಲ್ಲಿ ಸಂಪ್ರದಾಯಜ್ಞರಾದ ಪೂರ್ವಾಚಾರ್ಯರು ಕೆಲವು ಶ್ಲೋಕಗಳನ್ನು ಪಠಿಸುವರು ಎಂದು ಹೇಳಿ ಭಾಷ್ಯಕಾರರು ಆ ಶ್ಲೋಕಗಳನ್ನು ಇಲ್ಲಿ ವಿವರಿಸಿದಾರೆ—

ಅಲ್ಪಂ ಯಃ ಪರಿಗೃಹ್ಣಾತಿ ಮೂಲ್ಯಂ ಪಣ್ಯೇನ ಭೂಯಸಾ ।
ಸ ಕ್ರೇತಾರಂ ಪುನರ್ಗಚ್ಛೇನ್ನ ವಿಕ್ರೀತಸ್ತ್ವಯಂ ಮಯಾ ॥ ೧ ॥

ಇತಿ ಬ್ರುವನ್ ಕಾಮಯೇತೇ ಪುನರ್ಮೂಲ್ಯಸ್ಯ ಪೂರಣಂ ।
ಸ ವಿಕ್ರೇತಾ ಪುನರ್ಮೂಲ್ಯಂ ಭೂಯಸಾ ನ ಪ್ರಪೂರಯೇತ್ ॥ ೨ ॥

ಹೀನಂ ನ ಲಭತೇ ವಸ್ನಂ ಯದಾ ವಿಕ್ರೀತವಾನ್ ಪುರಾ ।
ಯಥಾ ಸಮಯಮೇವ ಸ್ಯಾತ್ತಯೋರ್ನ ಪುನರನ್ಯಥಾ ॥ ೩ ॥

ಅಯಂ ವಿಕ್ರಯ ಏವೇತಿ ಸಮಯಶ್ಚೇತ್ಕೃತೋ ಭವೇತ್ ।
ಅಥ ಮೂಲ್ಯಾರ್ಥಮೇತತ್ಸ್ಯಾದ್ವಿಚಾರ್ಯೈವ ತು ನಿರ್ಣಯಃ ॥ ೪ ॥

ಇತ್ಯೇವಂ ಸಮಯೋऽಕಾರಿ ತದಾ ಮೂಲ್ಯಂ ಪ್ರಪೂರ್ಯತೇ ।
ತಸ್ಮಾದಾದೌ ಮಯಾ ಕಾರ್ಯಃ ಸಮಯೋऽತ್ರೇತಿ ಚಿಂತಯೇನ್ ॥ ೫ ॥
ವಾಮದೇವೋ ವಶೀಕೃತ್ಯ ಶಕ್ರಂ ಸ್ತೋತ್ರೇಣ ಭೂಯಸಾ ।
ವಿಕ್ರೇಣನ್ ಸಮಯಂ ಚಕ್ರ ಇಂದ್ರಂ ಕ ಇಮಮಿತ್ಯೃಚಿ ॥ ೬ ॥
ಅತಶ್ಚ ಪ್ವೃಚ ಏಕಾರ್ಥೋऽ ಭೂಯಸಾ ವಸ್ನಮಿತ್ಯಯಂ ॥ ಇತಿ ॥

ಈ ಋಕ್ಕೂ ಮುಂದಿನ ಋಕ್ಕು ಒಟ್ಟು ಸೇರಿ ಒಂದಭಿಪ್ರಾಯವನ್ನು ಸೂಚಿಸುವುದಾಗಿದೆ. ಅದನ್ನು ಮೇಲಿನ ಶ್ಲೋಕಗಳು ಒಂದು ಉದಾಹರಣೆಯ ಮೂಲಕ ವಿಶದಪಡಿಸುತ್ತವೆ. ಹೇಗೆಂದರೆ—ಒಬ್ಬ ಪುರುಷನು ಅಥವಾ ವ್ಯಾಪಾರ ಮಾಡುವವನು ಇನ್ನೊಬ್ಬ ಪುರುಷನಿಗೆ ಒಂದು ವಸ್ತುವನ್ನು ಮಾರುವನು. ವಸ್ತುವನ್ನು ಕೊಂಡುಕೊಳ್ಳುವ ಪುರುಷನು ಆ ಕಾಲದಲ್ಲಿ ಅದರ ಬೆಲೆಯನ್ನು ಕೇಳಿ ತಿಳಿದುಕೊಂಡು ನಿಷ್ಕರ್ಷೆಮಾಡಿ, ಮಾರುವವನು ನಿಷ್ಕರ್ಷೆಮಾಡಿದ ಬೆಲೆಯನ್ನು ಕೊಟ್ಟು ವಸ್ತುವನ್ನು ತೆಗೆದುಕೊಂಡು ಹೋಗುವನು. ಅನಂತರ ಸ್ವಲ್ಪ ಹೊತ್ತಿನ ಮೇಲೆ ಆ ವ್ಯಾಪಾರಗಾರನು ಇಂತು ಯೋಚಿಸುವನು— ನಾನು ಮಾರಿದ ವಸ್ತುವು ಬಹಳ ಬೆಲೆ ಬಾಳುವುದು. ಅದನ್ನು ಅಲ್ಪ ಬೆಲೆಗೆ ಮಾರಿದ್ದು ಅನ್ಯಾಯವಾಯಿತು. ನನಗೆ ಇನ್ನೂ ಹೆಚ್ಚು ಬೆಲೆ ಬರಬೇಕು ಎಂದು ಮೊದಲಾಗಿ ಆಲೋಚಿಸಿ, ವಸ್ತುವನ್ನು ಕೊಂಡುಕೊಂಡ ಪುರುಷನ ಹತ್ತಿರ ಹೋಗಿ—ಎಲೈ ಪುರುಷನೇ, ನೀನು ಕೊಂಡುಕೊಂಡ ಪದಾರ್ಥದ ಬೆಲೆಯು ತೀರಾ ಕಮ್ಮಿ. ಆದುದರಿಂದ ಈಗ ನನಗೆ ಅದಕ್ಕಾಗಿ ಹೆಚ್ಚು ಬೆಲೆಯನ್ನು ಕೊಡು ಎನ್ನುವನು. ಆದರೆ ವಸ್ತುವನ್ನು ಕೊಂಡ ಪುರುಷನು ವ್ಯಾಪಾರಗಾರನನ್ನು ಕುರಿತು—ನೀನು ಹೇಳಿದ ಕ್ರಯವನ್ನು ಕೊಟ್ಟು ನಾನು ಕೊಂಡುಕೊಂಡಿದ್ದೇನೆ. ನನ್ನದೇನೂ ತಪ್ಪಿಲ್ಲ. ವ್ಯಾಪಾರಕಾಲದಲ್ಲಿ ನೀನು ಕೇಳಿದ ಕ್ರಯವನ್ನು ನಾನು ಕೊಡಲು ಒಪ್ಪಿ, ಅದರಂತೆ ಮೂಲ್ಯವನ್ನು ಕೊಟ್ಟಿರುವುದರಿಂದ ಅದು ನಮ್ಮಿಬ್ಬರಿಗೂ ನಡೆದ ಒಂದು ಒಪ್ಪಂದವು. ಅದನ್ನು ನಾವಿಬ್ಬರೂ ಪಾಲಿಸಬೇಕು ಎನ್ನುವನು. ಅದಕ್ಕೆ ವ್ಯಾಪಾರಗಾರನು ನ್ಯಾಯವನ್ನು ಬದಿಗೆ ಒತ್ತಿ, ನಾನು ನಿನಗೆ ಪದಾರ್ಥವನ್ನು ಮಾರಿಯೇ ಇಲ್ಲ. ಅದನ್ನು ನನಗೆ ಹಿಂದಕ್ಕೆ ಕೊಡು ಎಂದು ಒರಟುತನವನ್ನು ಪ್ರದರ್ಶಿಸುವನು. ಆಗ ಅದಕ್ಕೆ ಪ್ರತ್ಯುತ್ತರವಾಗಿ ಪದಾರ್ಥವನ್ನು ಕೊಂಡುಕೊಂಡ ಪುರುಷನು—ಎಲೈ ವ್ಯಾಪಾರಗಾರನೇ, ಪದಾರ್ಥವು ಹೆಚ್ಚು ಬೆಲೆ ಬಾಳುವುದಾದರೆ ಮಾರುವ ಕಾಲದಲ್ಲಿಯೇ ಅದಕ್ಕೆ ಹೆಚ್ಚು ಬೆಲೆಯನ್ನು ಕೇಳಬೇಕಾಗಿದ್ದಿತು. ನನಗೆ ಇಷ್ಟಬಂದರೆ ತೆಗೆದುಕೊಳ್ಳುತ್ತಿದ್ದೆ. ಇಲ್ಲವಾದರೆ ಇಲ್ಲ. ಅದನ್ನು ಬಿಟ್ಟು ಈಗ ಹೆಚ್ಚು ಬೆಲೆ ಕೇಳುವುದು ನ್ಯಾಯವೂ ಅಲ್ಲ. ಅದರಂತೆ ಕೊಡುವುದು ಸಾಧ್ಯವೂ ಇಲ್ಲ. ವ್ಯಾಪಾರವೆಂದರೆ ಮಾರುವವನು ಮತ್ತು ಕೊಂಡುಕೊಳ್ಳುವವನು ಎಂಬ ಇಬ್ಬರ ಮಧ್ಯದಲ್ಲಿ ನಡೆಯುವ ಒಂದು ಒಪ್ಪಂದವು. ಅದನ್ನು ಇಬ್ಬರೂ ಪಾಲಿಸಲೇಬೇಕು ಯಾರೂ ಅತಿಕ್ರಮಿಸಕೂಡದು ಎಂದು ಹೇಳುವನು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ, ಮಾರುವವನಿಗೂ, ಕೊಳ್ಳುವವನಿಗೂ ವ್ಯಾಪಾರದಲ್ಲಿ ಒಂದು ಒಪ್ಪಂದವಾದ ಮೇಲೆ ಇಬ್ಬರೂ ಅದರಂತೆ ನಡೆಯಬೇಕು. ಪದಾರ್ಥದ ಬೆಲೆ ಹೆಚ್ಚಾಗಿದ್ದು ಮಾರುವವನು ಅದನ್ನು ಆ ಕಾಲದಲ್ಲಿ ಕಾಣದೆ ಮಾರಿದರೆ ಆಮೇಲೆ ಅದರ ಹೆಚ್ಚು ಬೆಲೆಯನ್ನು ಕೇಳುವುದು ತಪ್ಪು. ಲಾಭವಾಗಲಿ ನಷ್ಟವಾಗಲಿ ಮಾರುವವನು ಅದನ್ನು ಅನುಭವಿಸಲೇಬೇಕು. ಅದರಂತೆ ಕೊಂಡುಕೊಳ್ಳುವವನು ಸಹ ತಾನು ಪಡೆದ ವಸ್ತುವು ಹೆಚ್ಚುಬೆಲೆಬಾಳುವುದಿಲ್ಲವೆಂದೂ ಕ್ರಯದ ಮೊಬಲಗು ಅತಿಹೆಚ್ಚೆಂದು ಹೇಳಿ ಮೂಲ್ಯವನ್ನು ಹಿಂದಕ್ಕೆ

ಕೊಡಬೇಕೆಂದು ಅಥವಾ ಬೆಲೆಯನ್ನು ಕಮ್ಮಿಮಾಡಬೇಕೆಂದು ಕೇಳುವುದೂ ತಪ್ಪು. ಪದಾರ್ಥದ ಬೆಲೆಯು ಹೆಚ್ಚೋ ಅಥವಾ ಕಡಿಮೆಯೋ ಎಂಬ ವಿಷಯವು ವ್ಯಾಪಾರಕಾಲದಲ್ಲಿಯೇ ಇತ್ಯರ್ಥವಾಗಿರುವುದರಿಂದ ಅಥವಾ ಇತ್ಯರ್ಥವಾಗಿದೆಯೆಂದು ಭಾವಿಸಲ್ಪಟ್ಟಿರುವುದರಿಂದ ಇಬ್ಬರಲ್ಲಿ ಯಾರೂ ಹೆಚ್ಚು ಬೆಲೆಯನ್ನು ಕೇಳುವುದಾಗಲಿ, ಕೊಡುವುದಾಗಲಿ ನ್ಯಾಯವಲ್ಲ. ಲಾಭವಾಗಲಿ, ನಷ್ಟವಾಗಲಿ ಇಬ್ಬರೂ ಅದನ್ನು ಅನುಭವಿಸಬೇಕು ಎಂದು ನ್ಯಾಯವು ಉಕ್ತವಾಗಿದೆ.

ಪ್ರಕೃತ ಋಕ್ಕುಗಳಲ್ಲಿ (ಅದರಲ್ಲಿಯೂ ೧೦ನೆಯ ಋಕ್ಕಿನಲ್ಲಿ) ಹೇಳಿರುವ ವಿಷಯವು ಈ ನ್ಯಾಯವನ್ನು ಅನುಸರಿಸಿದೆ. ಹೇಗೆಂದರೆ—ವಾಮದೇವಋಷಿಯು ಇಂದ್ರನನ್ನು ಒಂದು ಅಥವಾ ಎರಡು ಸ್ತೋತ್ರಗಳಿಂದ ಮೊದಲೇ ಸ್ತುತಿಸಿ ಒಲಿಸಿಕೊಂಡಿದ್ದಾನೆ. ಹೀಗಿರುವಾಗ ಇನ್ನೊಬ್ಬ ಪುರುಷನು (ಅಥವಾ ಯಜಮಾನನು) ಇಂದ್ರನನ್ನು ಹತ್ತು ಸ್ತೋತ್ರಗಳಿಂದ ಸ್ತುತಿಸಿ ಇಂದ್ರನು ತನ್ನವನೆಂದು ಹೇಳಿಕೊಳ್ಳುವುದು ಸರಿಯಲ್ಲ. ಏಕೆಂದರೆ ಮೇಲೆ ಹೇಳಿದ ನ್ಯಾಯದಂತೆ ವಾಮದೇವಋಷಿಯು ಇಂದ್ರನನ್ನು ಮೊದಲೇ ಸ್ತುತಿಸಿದಾನೆ. ಅವನು ಸ್ತುತಿಸಿರುವ ಸ್ತೋತ್ರಗಳು ಕಮ್ಮಿಯಾಗಿರಬಹುದು, ಆದರೂ ಅವನು ಇನ್ನೊಬ್ಬ ಯಜಮಾನನಿಗಿಂತ ಮೊದಲೇ ಸ್ತುತಿಸಿರುವುದರಿಂದ ಇಂದ್ರನು ವಾಮದೇವಋಷಿಗೇ ಮೊದಲು ಅನುಗ್ರಹಮಾಡಬೇಕು. ಹೆಚ್ಚು ಸ್ತೋತ್ರಗಳಿಂದ ಸ್ತುತಿಸಿದ ಹೊಸ ಯಜಮಾನನಿಗೆ ಇಂದ್ರನ ಅನುಗ್ರಹದ ವಿಷಯದಲ್ಲಿ ಹೆಚ್ಚು ಬಾಧ್ಯತೆ ಇರಲು ಕಾರಣವಿಲ್ಲ. ಆದುದರಿಂದ ವಾಮದೇವಋಷಿಯು ಹೊಸ ಯಜಮಾನನ ಅಥವಾ ಹತ್ತು ಸ್ತೋತ್ರಗಳಿಂದ ಸ್ತುತಿಸಿದ ಪುರುಷನ ಕೂಡ ಇಂತು ಒಪ್ಪಂದ ಮಾಡಿಕೊಳ್ಳುವನು—ಎಲೈ ಇಂದ್ರಭಕ್ತನೇ, ಈ ಇಂದ್ರನನ್ನು ನಾನು ಮೊದಲೇ ಎಂದರೆ ನಿನಗಿಂತ ಮುಂಚೆ ಸ್ತುತಿಸಿರುವುದರಿಂದ ಈ ಇಂದ್ರನು ನನ್ನವನು; ನೀನು ತಾತ್ಕಾಲಿಕವಾಗಿ ಇಂದ್ರನನ್ನು ಹೆಚ್ಚು ಸ್ತೋತ್ರಗಳಿಂದ (ಹತ್ತು ಸ್ತೋತ್ರಗಳಿಂದ) ಸ್ತುತಿಸಿ ಒಲಿಸಿಕೊಂಡಿದ್ದೀಯೆ. ಆದ್ದರಿಂದ ಇಂದ್ರನು ನೀನು ಮಾಡಿದ ಸ್ತೋತ್ರಗಳಿಗೆ ಪ್ರತ್ಯುಪಕಾರಾರ್ಥವಾಗಿ ನಿನ್ನ ಶತ್ರುಗಳನ್ನು ನಾಶಮಾಡಿದ ಕೂಡಲೇ ಇಂದ್ರನನ್ನು ಪುನಃ ಮೊದಲು ಸ್ತೋತ್ರಮಾಡಿದ ನನ್ನ ಬಳಿಗೇ ಕಳುಹಿಸಿಕೊಡಬೇಕು—ಎಂಬುದೇ ಆ ಒಪ್ಪಂದವು ಈ ವಿಷಯವನ್ನೇ ಈ ಎರಡು ಋಕ್ಕುಗಳಲ್ಲಿ ವ್ಯಾಪಾರದ ದೃಷ್ಟಾಂತದಿಂದ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಕ ಇಮಂ ದಶಭಿರ್ಮಮೇಂದ್ರಂ ಕ್ರೀಣಾತಿ ಧೇನುಭಿಃ ।
ಯದಾ ವೃತ್ರಾಣಿ ಜಂಘನದಥೈನಂ ಮೇ ಪುನರ್ದದತ್ ॥ ೧೦ ॥

॥ ಪದಪಾಠಃ ॥

ಕಃ । ಇಮಂ । ದಶಭಿಃ । ಮಮ । ಇಂದ್ರಂ । ಕ್ರೀಣಾತಿ । ಧೇನುಭಿಃ ॥
ಯದಾ । ವೃತ್ರಾಣಿ । ಜಂಘನತ್ । ಅಥ । ಏನಂ । ಮೇ । ಪುನಃ । ದದತ್ ॥ ೧೦ ॥

॥ ಸಾಯಣಭಾಷ್ಯಂ ॥

ಮಮ ಮದೀಯಮಿಮಂ ಸ್ವಭೂತಮಿಂದ್ರಂ ಧೇನುಭಿಃ ಪ್ರೀಣಯಿತ್ರೀಭಿರ್ದಶಭಿರ್ದಶಸಂಖ್ಯಾಕಾಭಿಃ ಸ್ತುತಿಭಿಃ ಕಃ ಕ್ರೀಣಾತಿ । ಕ್ರಯಂ ಕರೋತಿ । ತದಾನೀಂ ಹೇ ಕ್ರೇತಾರೋ ಯುಷ್ಮಾಕಂ ಮಧ್ಯ ಏವಮಪಿ ಸಮಯಃ ಕ್ರಿಯತೇ । ಯದಾಯಮಿಂದ್ರೋ ವೃತ್ರಾಣಿ ತ್ವದೀಯಾನ್ ಶತ್ರೂನ್ ಜಂಘನತ್ ಹನ್ಯಾತ್ ಅಥಾನಂತರಮೇವೈನಮಿಂದ್ರಂ ಮೇ ಮಹ್ಯಂ ಪುನರ್ದದತ್ । ಪುನರ್ದದ್ಯಾತ್ ॥

॥ ಪ್ರತಿಪದಾರ್ಥ ॥

ಮಮ ಇಮಂ--(ಸ್ತುತ್ಯಾದಿಗಳಿಂದ) ನನ್ನವನನ್ನಾಗಿಯೇ ಮಾಡಿಕೊಂಡಿರುವ । ಇಂದ್ರಂ—ಇಂದ್ರನನ್ನು । ಧೇನುಭಿಃ—ಪ್ರೀತಿಕಾರಕಗಳಾದವೂ । ದಶಭಿಃ—ದಶಸಂಖ್ಯಾಕವೂ ಆದ ಸ್ತುತಿಗಳಿಂದ । ಕಃ—ಯಾವ ಭಕ್ತನು । ಕ್ರೀಣಾತಿ—(ಸಹಾಯಾರ್ಥವಾಗಿ) ಕೊಂಡುಕೊಳ್ಳುವನೋ (ಅಂತಹ ಸ್ತುತಿಕರ್ತನೊಂದಿಗೆ ಕೆಳಗೆ ಕಂಡ ಈ ಸಮಯವನ್ನು ನಾನು ಮಾಡಿಕೊಳ್ಳುತ್ತೇನೆ. ಅದೇನೆಂದರೆ) । ಯದಾ—ಯಾವಾಗ । ವೃತ್ರಾಣಿ—(ಇಂದ್ರನನ್ನು ತಾತ್ಕಾಲಿಕವಾಗಿ ಕೊಂಡ ಸ್ತುತಿಕರ್ತನ) ಶತ್ರುಗಳನ್ನು । ಜಂಘನತ್—ನಾಶಪಡಿಸುವವನೋ । ಅಥ—ಆ ಒಡನೆಯೇ । ಏನಂ—ಈ ಇಂದ್ರನನ್ನು । ಮೇ—ನನಗೇನೇ । ಪುನರ್ದದತ್—ಹಿಂತಿರುಗಿ ವಾಪಸ್ಸು ಕಳುಹಬೇಕು.

॥ ಭಾವಾರ್ಥ ॥

ಸ್ತುತ್ಯಾದಿಗಳಿಂದ ನನ್ನವನನ್ನಾಗಿಯೇ ಮಾಡಿಕೊಂಡಿರುವ ಈ ಇಂದ್ರನನ್ನು ಪ್ರೀತಿಕಾರಕಗಳಾದವೂ ದಶಸಂಖ್ಯಾಕವಾದವೂ ಆದ ಸ್ತುತಿಗಳಿಂದ ಯಾವ ಭಕ್ತನು ಸಹಾಯಾರ್ಥವಾಗಿ ಕೊಂಡುಕೊಳ್ಳುವನೋ ಅಂತಹವನೊಂದಿಗೆ ನಾನು ಕೆಳಗೆ ಕಂಡ ಈ ಸಮಯವನ್ನು ಮಾಡಿಕೊಳ್ಳುವೆನು. ಅದೇನೆಂದರೆ, "ಎಲೈ ಇಂದ್ರಭಕ್ತನೇ, ಈ ಇಂದ್ರನು ನನ್ನವನು. ನೀನು ತಾತ್ಕಾಲಿಕವಾಗಿ ಮಾತ್ರ ಕೊಂಡಿದ್ದೀಯೆ, ಇವನು ನಿನ್ನ ಶತ್ರುಗಳನ್ನು ನಾಶಪಡಿಸಿದೊಡನೆಯೇ ಇವನನ್ನು ಪುನಃ ನನ್ನಲ್ಲಿಗೇ ಕಳುಹಿಸಿಕೊಡಬೇಕು" ಎಂಬುದೇ ಆ ಸಮಯವು.

## English Translation.

Who buys this, my Indra, with ten milch cows? when he shall have slain (your) foes, then let (the purchaser) give him again to me.

॥ ವಿಶೇಷವಿಷಯಗಳು ॥

೯ ಮತ್ತು ೧೦ ನೇ ಋಕ್ಕುಗಳಿಗೆ ಪರಸ್ಪರ ಸಂಬಂಧವಿರುವುದರಿಂದ ಈ ಎರಡು ಋಕ್ಕುಗಳಿಗೂ ಒಟ್ಟಿಗೆ ಹೊಂದುವಂತೆ ವಿಶೇಷವಿಷಯವನ್ನು ೯ ನೇ ಋಕ್ಕಿನಲ್ಲಿಯೇ ವಿವರಿಸಿದೆ. ಈ ಋಕ್ಕಿಗೆ ಪ್ರತ್ಯೇಕವಾದ ವಿವರಣೆ ಆವಶ್ಯಕವಿಲ್ಲ.

॥ ಸಂಹಿತಾಪಾಠಃ ॥

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।

ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥ ೧೧ ॥

॥ ಪದಪಾಠಃ ॥

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।

ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರ್ಋಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಸ್ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನಾದ್ಭಿರ್ನದೀರಿವ ಪೀಪೇಃ । ಪ್ಯಾಯಯ । ಪ್ರವೃದ್ಧಂ ಕುರು । ಹೇ ಹರಿವೋ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನು—ಅತಿಶಯವಾಗಿ । ಸ್ತುತಃ—ಹಿಂದಿನ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧೆಯಿಂದ । ಗೃಣಾನಃ—(ನಮ್ಮಿಂದಲೂ) ಸ್ತುತನಾಗತಕ್ಕವನೂ ಆಗಿ । ನದ್ಯಃ ನ—ನದಿಗಳನ್ನು ಉಧಕಗಳಿಂದ ತುಂಬುವಂತೆ । ಜರಿತ್ರೇ—ಸ್ತೋತೃವಾದ ನನಗೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು । ಹರಿವಃ—ಹರಿಸಂಜ್ಞಕಗಳಾದ ಅಶ್ವಗಳುಳ್ಳ ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಿರ್ಮಿತವಾಗುತ್ತದೆ । ರಥ್ಯಃ—ರಥಗಳನ್ನು ಹೊಂದಿರುವ ನಾವು । ಧಿಯಾ—ಪ್ರಜ್ಞಾಪೂರ್ವಕವಾದ ಸ್ತುತಿಯಿಂದ । ಸದಾಸಾಃ—ನಿನ್ನನ್ನು ಪೂಜಿಸಿ ಹವಿಸ್ಸನ್ನ ರ್ಪಿಸುವವರಾಗಿ । ಸ್ಯಾಮ—ಆಗುವಂತೆ ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಅತಿಶಯವಾಗಿ ಸ್ತುತನಾದವನೂ, ಅದೇ ಶ್ರದ್ಧೆಯಿಂದ ನಮ್ಮಿಂದಲೂ ಸ್ತುತನಾಗತಕ್ಕವನೂ ಆಗಿ ನದಿಗಳನ್ನು ಉದಕಗಳಿಂದ ತುಂಬುವಂತೆ ಸ್ತೋತೃವಾದ ನನಗೆ ಅನ್ನವನ್ನು ತುಂಬಿಕೊಡು. ಹರಿಸಂಜ್ಞಕಗಳಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತೋತ್ರವು ನಿರ್ಮಿತವಾಗುತ್ತದೆ.

ರಥಗಳನ್ನು ಹೊಂದಿರುವ ನಾವು ಪ್ರಜ್ಞಾಪೂರ್ವಕವಾದ ಸ್ತುತಿಯಿಂದ ನಿನ್ನನ್ನು ಪೂಜಿಸಿ ಹವಿಸ್ಸನ್ನರ್ಪಿಸುವವರಾಗಿ ಆಗುವಂತಾಗಲಿ.

## English Translation.

Glorified (in the past), glorified, Indra, at present, satisfy your worshipper with food, as rivers (are filled with water): lord of horses, a new hymn has been made for you: may we, possessed of chariots, be ever diligent in your praise.

॥ ವಿಶೇಷವಿಷಯಗಳು ॥

ಈ ಋಕ್ಕು ಈ ಸೂಕ್ತದಲ್ಲಲ್ಲದೆ ೨೦-೨೪ ನೇ ಸೂಕ್ತಗಳಲ್ಲಿ ಕೊನೆಯ ಋಕ್ಕುಗಳಾಗಿ ಪಠಿತವಾಗಿದೆ.

ಇಂಪ್ರ ನು ಸ್ತುತಃ ನು ಗೃಣಾನಃ ನದ್ಯಃ ನ ಜರಿತ್ರೇ ಇಷಂ ಪೀಪೇಃ—ಎಲೈ ಇಂದ್ರನೇ, ನೀನು ಹಿಂದೆ ಅನೇಕ ಋಷಿಗಳಿಂದ ಸ್ತುತಿಸಲ್ಪಟ್ಟಿರುವೆ. ಈಗ ನಮ್ಮಿಂದ ಸ್ತುತಿಸಲ್ಪಡುವೆ. ನದಿಗಳಿಗೆ ವೃಷ್ಟ್ಯುದಕವು ತುಂಬಿ ಪೂರ್ಣವಾಗಿ ಹರಿಯುವಂತೆ ನಿನ್ನನ್ನು ಸ್ತೋತ್ರಮಾಡುವ ನಮಗೆ ಅನ್ನವನ್ನು (ಅನ್ನಾದ್ಯಾಹಾರವನ್ನು) ತುಂಬಿ ಕೊಡು, ಎಂದರೆ ಯಥೇಚ್ಛವಾಗಿ ಕೊಡು.

ನು—ನು ಇತ್ಯೇಷೋಽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧-೪) ನು ಎಂಬ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಆದ್ದರಿಂದ ಎಂದು ಹೇತ್ವರ್ಥವಾಗುತ್ತದೆ. ಕಥಂ ನು ಕರಿಷ್ಯತಿ ಎನ್ನುವಾಗ ನು ಎಂಬ ಶಬ್ದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕವಾಗುತ್ತದೆ. ಹೀಗೆಯೇ ಅಥಾಪ್ಯುಪಮಾರ್ಥೇ ಭವತಿ । ಉಪಮಾನವನ್ನು ಸೂಚಿಸುವಾಗಲೂ ಸಹ ನು ಎಂಬ ಶಬ್ದದ ಪ್ರಯೋಗವಿರುವುದು. ಉದಾಹರಣೆಗೆ—

ಅಕ್ಷೋ ನ ಚಕ್ರ್ಯೋಃ ಶೂರ ಬೃಹನ್ಪ್ರ ತೇ ಮಹ್ನಾ ರಿರಿಚೇ ರೋದಸ್ಯೋಃ ।<br>ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂ೩ ತಯೋ ರುರುಹುರಿಂದ್ರ ಪೂರ್ವೀಃ ॥<br>(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಾಹರಿಸಿ (ನಿ. ೧-೪), ವೃಕ್ಷಸ್ಯ ನು ತೇ । ವೃಕ್ಷಸ್ಯೇವ ತೇ । ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಶಬ್ದಕ್ಕೆ ಉಪಮಾರ್ಥವನ್ನು ಹೇಳಿದೆಯೆಂದು ತಿಳಿಸಿದಾರೆ. ಹೀಗೆಯೇ—

ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।<br>(ಋ. ಸಂ. ೭-೧೦೦-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂಬ ಶಬ್ದಕ್ಕೆ ಕ್ಷಿಪ್ರಂ ಬೇಗನೆ, ಜಾಗ್ರತೆಯಾಗಿ ಎಂಬರ್ಥವೂ,

ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।<br>(ಋ. ಸಂ. ೭-೧೯-೧೧)

ಇತ್ಯಾದಿ ಋಕ್ಕುಗಳಲ್ಲಿ ನು ಎಂದರೆ ಅದ್ಯ, ಈಗ, ಒಡನೆಯೇ ಎಂಬ ಅರ್ಥವಿರುವುದೆಂದು ನಿರುಕ್ತಕಾರರು ಉದಾಹರಣೆ ಸಹಿತವಾಗಿ ವಿವರಿಸಿದಾರೆ. ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರಂ ಬೇಗನೆ, ಶೀಘ್ರವಾಗಿ ಎಂದರ್ಥವು.

ಜರಿತ್ರೇ—ಜರಿತೃಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯) ಜರಿತಾ ಗರಿತಾ (ನಿ. ೧-೭) ಎಂದು ನಿರ್ವಚನವೂ ಇರುವುದರಿಂದ ಜರಿತ್ರೇ ಎಂದರೆ ಇಲ್ಲಿ ಸ್ತೋತ್ರಮಾಡುವ ನನಗೆ ಎಂದರ್ಥವು.

ನ—ನ ಎಂಬ ಶಬ್ದಕ್ಕೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು—

> ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಾಧ್ಯಾಯಂ । ನೇಂದ್ರಂ ದೇವಮಮಂಸತ ಇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಂ ಇತ್ಯುಪಮಾರ್ಥೀಯಃ । ಉಪರಿಷ್ಟಾದುಪಚಾರಸ್ತಸ್ಯ ಯೇನೋಪಮಿಮೀತೇ ॥ (ನಿ. ೧-೪)

ಎಂದರೆ ನ ಎಂಬ ಶಬ್ದವು ಲೋಕವ್ಯವಹಾರದ ಭಾಷೆಯಲ್ಲಿ ಎಂದರೆ, ವೇದಭಾಷೆಯಲ್ಲದ ಆಧುನಿಕ ಸಂಸ್ಕೃತ ಭಾಷೆಯಲ್ಲಿ ನಿಷೇಧಾರ್ಥದಲ್ಲಿ (ಇಲ್ಲ, ಅಲ್ಲ ಎಂಬರ್ಥದಲ್ಲಿ) ಉಪಯೋಗಿಸಲ್ಪಡುವುದು. ಇದು ಎಲ್ಲರಿಗೂ ತಿಳಿದೇ ಇದೆ. ಆದರೆ ವೇದಗಳಲ್ಲಿ ನಿಷೇಧಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ ನ ಎಂಬ ಶಬ್ದದ ಪ್ರಯೋಗವಿರುವುದು. ಹೇಗೆಂದರೆ— ನೇಂದ್ರಂ ದೇವಮಮಂಸತ ಎಂಬ ವಾಕ್ಯದಲ್ಲಿನ ನ ಎಂಬ ಶಬ್ದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿರುವುದು. ಪ್ರತಿಷೇಧವೆಂದರೆ ಒಬ್ಬ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಎದುರಿಗೆ ಹೊಗಳದೇ ಇರುವುದು. ಇಂದ್ರನನ್ನು ದೀಪ್ತಿಯುಕ್ತನಾದವನೆಂದು ತಿಳಿಯಲಾಗುವುದಿಲ್ಲ ಎಂಬ ವಾಕ್ಯದಲ್ಲಿ ಇಲ್ಲ (ನ ಎಂಬುದರ ಅರ್ಥ) ಎಂಬ ಶಬ್ದವು ಇಂದ್ರನ ವಿಷಯಕವಾದ ಉಪಚಾರೋಕ್ತಿಗೆ ವಿರುದ್ಧವಾದ ಅರ್ಥವನ್ನು ಸೂಚಿಸುವುದು. ಇದಕ್ಕೆ ಪ್ರತಿಷೇಧಾರ್ಥವೆಂದು ಹೆಸರು. ದುರ್ಮದಾಸೋ ನ ಸುರಾಯಾಂ ಎಂಬ ವಾಕ್ಯದಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು (ಹೋಲಿಕೆಯನ್ನು) ಸೂಚಿಸುವುದು. ಮದ್ಯವನ್ನು ಪಾನಮಾಡಿದ ಜನರಂತೆ ದುರಹಂಕಾರವುಳ್ಳವರು ಎಂದು ಈ ವಾಕ್ಯದ ಅರ್ಥವು. ಇಲ್ಲಿ ಒಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳನ್ನು ಮತ್ತೊಂದು ವ್ಯಕ್ತಿಯಲ್ಲಿರುವ ಗುಣಾವಗುಣಗಳಿಗೆ ಹೋಲಿಸಿ ಹೇಳುವುದೇ ಉಪಮಾರ್ಥವು. ಮದ್ಯಪಾನಮಾಡಿದವರು ಮತಿಹೀನರಾಗಿ ಅಹಂಕಾರದಿಂದ ನೀಚಮಾರ್ಗದಲ್ಲಿ ವರ್ತಿಸುವರು. ಆ ಜನರಂತೆ ದುರಹಂಕಾರವುಳ್ಳವರು ಎಂಬುದೇ ಉಪಮಾರ್ಥವು. ಈ ವಿಧವಾದ ಅರ್ಥಗಳನ್ನು ವೇದಗಳಲ್ಲಿ ನ ಎಂಬ ಪದದಿಂದಲೂ, ಇವ ಎಂಬ ಪದದಿಂದಲೂ ನಿರ್ದೇಶಿಸಲ್ಪಡುವುದು. ಈ ವಿಧವಾದ ಉಪಮಾರ್ಥದಲ್ಲಿ ನ ಎಂಬ ಶಬ್ದದ ಪ್ರಯೋಗವು ವೇದಗಳಲ್ಲಿ ಮಾತ್ರ ಇರುವುದು. ಬಳಸುವ ಭಾಷೆಯಲ್ಲಿಲ್ಲ. ಅದಕ್ಕೆ ಬದಲಾಗಿ ಅಲ್ಲಿ ಇವ ಎಂಬ ಶಬ್ದದ ಪ್ರಯೋಗಮಾತ್ರವಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ವಾಮದೇವಋಷಿಯು ದೇವತೆಗೆ ಹೊಸದಾಗಿ ರಚಿತವಾದ ಸ್ತೋತ್ರವನ್ನರ್ಪಿಸಿ ದೇವತೆಯ ಅನುಗ್ರಹವನ್ನು ಪ್ರಾರ್ಥಿಸಿರುವುದು ಉಕ್ತವಾಗಿದೆ.



# ಇಪ್ಪತ್ತೈದನೆಯ ಸೂಕ್ತವು.

**ಕೋ ಅದ್ಯೇತ್ಯಷ್ಟರ್ಚಂ ಚತುರ್ಥಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ಕೋ ಅದ್ಯಾಷ್ಟಾವಿತಿ ॥ ದಶರಾತ್ರೇ ಚತುರ್ಥೇಽಹನಿ ಮಾಧ್ಯಂದಿನೇ ಸವನೇ ಸ್ತೋಮವೃದ್ಧೌ ಮೈತ್ರಾವರುಣಶಸ್ತ್ರ ಆರಂಭಣೀಯಾಯಾ ಉಪರಿಷ್ಟಾದಿದಂ ಸೂಕ್ತಮಾವಪನೀಯಂ ಚ । ಸೂತ್ರಿತಂ ಚ । ಸ್ತೋಮೇ ವರ್ಧಮಾನೇ ಕೋ ಅದ್ಯ ನರ್ಯಃ । ಆ. ೭-೧೨ । ಇತಿ ॥**

ಅನುವಾದವು—ಕೋ ಅದ್ಯ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಕೋ ಅದ್ಯಾಷ್ಟೌ ಎಂದು ಹೇಳಿರುವುದು. ದಶರಾತ್ರವೆಂಬ ಹತ್ತು ದಿವಸಗಳ ವರೆಗೆ ಮಾಡುವ ಯಾಗದ ನಾಲ್ಕನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಸೋಮವೃದ್ಧಿಗಾಗಿ ಮೈತ್ರಾವರುಣಶಸ್ತ್ರ ಮಂತ್ರಗಳ ಪಠನದ ಆರಂಭಮಂತ್ರದ ಕೊನೆಯಲ್ಲಿ ಈ ಸೂಕ್ತವನ್ನು ಆವಪನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಸ್ತೋಮೇ ವರ್ಧಮಾನೇ ಕೋ ಅದ್ಯ ನರ್ಯಃ ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

## ಸೂಕ್ತ—೨೫

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೫ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೩, ೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ವಾಮದೇವಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕೋ ಅದ್ಯ ನರ್ಯೋ ದೇವಕಾಮ ಉಶನ್ನಿಂದ್ರಸ್ಯ ಸಖ್ಯಂ ಜುಜೋಷ ।
ಕೋ ವಾ ಮಹೇಽವಸೇ ಪಾರ್ಯಾಯ ಸಮಿದ್ಧೇ ಅಗ್ನೌ ಸುತಸೋಮ ಈಟ್ಟೇ ॥ ೧ ॥

॥ ಪದಪಾಠಃ ॥

ಕಃ । ಅದ್ಯ । ನರ್ಯಃ । ದೇವऽಕಾಮಃ । ಉಶನ್ । ಇಂದ್ರಸ್ಯ । ಸಖ್ಯಂ । ಜುಜೋಷ ।
ಕಃ । ವಾ । ಮಹೇ । ಅವಸೇ । ಪಾರ್ಯಾಯ । ಸಂऽಇದ್ಧೇ । ಅಗ್ನೌ । ಸುತऽಸೋಮಃ । ಈಟ್ಟೇ ॥ ೧ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿವಸೇ ನರ್ಯೋ ಮನುಷ್ಯಹಿತೋ ದೇವಕಾಮೋ ದೇವಾನಿಚ್ಛನ್ ಉಶನ್ ಕಾಮಯಮಾನಃ ಕೋ ಯಜಮಾನ ಇಂದ್ರಸ್ಯ ಸಖ್ಯಂ ಸಖಿತ್ವಂ ಜುಜೋಷ । ಸೇವತೇ । ಕಿಂಚ ಸುತಸೋಮೋಽಭಿಷುತಸೋಮಃ ಕೋ ವಾ ಯಜಮಾನೋಽಗ್ನೌ ಸಮಿದ್ಧೇ ಪ್ರಜ್ವಲಿತೇ ಸತಿ ಮಹೇ ಮಹತೇ ಪ್ರವೃದ್ಧಾಯ ಪಾರ್ಯಾಯ ಪಾರಮರ್ಹತೇಽವಸೇ ತರ್ಪಣಾಯೇಟ್ಟೇ । ಇಂದ್ರಂ ಸ್ತೌತಿ ॥

॥ ಪ್ರತಿಪದಾರ್ಥ ॥

ಅದ್ಯ—ಇಂದು । ನರ್ಯಃ—ಮಾನವರ ಹಿತಕಾರಿಯೂ । ದೇವಕಾಮಃ—ದೇವತೆಗಳ ಸಹಾಯವನ್ನಿಚ್ಛಿಸುವವನೂ ಆದ । ಕಃ—ಯಾವ ಯಜಮಾನನು । ಇಂದ್ರಸ್ಯ—ಇಂದ್ರನ । ಸಖ್ಯಂ—ಸಖಿತ್ವವನ್ನು । ಉಶನ್—ಅಪೇಕ್ಷಿಸುತ್ತಾ । ಜುಜೋಷ—ಸೇವಿಸುತ್ತಾನೆ? ಸುತಸೋಮಃ—ಸೋಮರಸವನ್ನು ಹಿಂಡಿದ । ಕೋ ವಾ—ಯಾವ ಯಜಮಾನನು ತಾನೇ । ಅಗ್ನೌ ಸಮಿದ್ಧೇ—(ಯಾಗಕ್ಕಾಗಿ) ಅಗ್ನಿಯು ಪ್ರಜ್ವಲಿತನಾದಾಗ । ಮಹೇ—ಮಹತ್ತಾದುದೂ । ಪಾರ್ಯಾಯ—ಅಪರಿಮಿತವಾದುದೂ ಆದ । ಅವಸೇ—ರಕ್ಷಣೆಗಾಗಿ । ಈಟ್ಟೇ—ಇಂದ್ರನನ್ನು ಸ್ತುತಿಸುತ್ತಾನೆ?

॥ ಭಾವಾರ್ಥ ॥

ಮಾನವರ ಹಿತಕಾರಿಯೂ, ದೇವತೆಗಳ ಸಹಾಯವನ್ನಿಚ್ಛಿಸುವವನೂ ಆದ ಯಾವ ಯಜಮಾನನು ಇಂದು ಇಂದ್ರನ ಸಖಿತ್ವವನ್ನಪೇಕ್ಷಿಸಿ ಸೇವಿಸುತ್ತಾನೆ? ಸೋಮರಸವನ್ನು ಹಿಂಡಿದ ಯಾವ ಯಜಮಾನನು ತಾನೇ, ಯಾಗಕ್ಕಾಗಿ ಅಗ್ನಿಯು ಪ್ರಜ್ವಲಿತನಾದಾಗ ಮಹತ್ತಾದುದೂ, ಅಪರಿಮಿತವಾದುದೂ ಆದ ರಕ್ಷಣೆಗಾಗಿ ಇಂದ್ರನನ್ನು ಸ್ತುತಿಸುತ್ತಾನೆ.

## English Translation.

What friend of man, or worshipper of the gods, deserving the friendship of Indra, has to-day enjoyed (it)? or what offerer of the libation on the kindled fire praises him (sufficienlty) for his great and unbounded protection?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವಾಮದೇವಋಷಿಯು ಇಂದ್ರನನ್ನು ಸ್ತುತಿಸುತ್ತಾ ಯಜ್ಞಮಾಡುವ ಎಲ್ಲಾ ಯಜಮಾನರೂ ಇಂದ್ರನ ಸ್ನೇಹವನ್ನೂ, ಅನುಗ್ರಹವನ್ನೂ ಅಪೇಕ್ಷಿಸುವುದರಿಂದ ಮತ್ತು ಇಂದ್ರನು ಏಕಕಾಲದಲ್ಲಿ ನಡೆಯುತ್ತಿರುವ ಅನೇಕ ಯಜ್ಞಗಳಿಗೆ ಹೋಗಲು ಇಂದ್ರನು ಸಮರ್ಥನಾಗಿರುವುದರಿಂದ ಈಗ ಯಾವ ಯಜಮಾನನು ಇಂದ್ರನನ್ನು ತನ್ನ ಯಜ್ಞಭೂಮಿಗೆ ಬರಬೇಕೆಂದು ಆಹ್ವಾನಮಾಡಿದಾನೆ? ಯಾವ ಯಜಮಾನನು ಇಂದ್ರನ ಸ್ನೇಹವನ್ನು ಅಪೇಕ್ಷಿಸುತ್ತಾನೆ? ಯಾವ ಯಜಮಾನನು ಇಂದ್ರನ ತೃಪ್ತ್ಯರ್ಥವಾಗಿ ಸೋಮರಸವನ್ನು ಸಿದ್ಧಪಡಿಸಿಕೊಂಡು

ಯಜ್ಞದಲ್ಲಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಇಂದ್ರನ ರಕ್ಷಣೆಗಾಗಿ ಸ್ತೋತ್ರಮಾಡುತ್ತಿರುತ್ತಾನೆ ಎಂದು ತನ್ನ ಕುತೂಹಲವನ್ನು ವ್ಯಕ್ತಪಡಿಸಿದ್ದಾನೆ.

॥ ಸಂಹಿತಾಪಾಠಃ ॥

ಕೋ ನಾನಾಮ ವಚಸಾ ಸೋಮ್ಯಾಯ ಮನಾಯುರ್ವಾ ಭವತಿ ವಸ್ತ ಉಸ್ರಾಃ ।
ಕ ಇಂದ್ರಸ್ಯ ಯುಜ್ಯಂ ಕಃ ಸಖಿತ್ವಂ ಕೋ ಭ್ರಾತ್ರಂ ವಷ್ಟಿ ಕವಯೇ ಕ ಊತೀ ॥ ೨ ॥

॥ ಪದಪಾಠಃ ॥

ಕಃ । ನನಾಮ । ವಚಸಾ । ಸೋಮ್ಯಾಯ । ಮನಾಯುಃ । ವಾ । ಭವತಿ । ವಸ್ತೇ । ಉಸ್ರಾಃ ।
ಕಃ । ಇಂದ್ರಸ್ಯ । ಯುಜ್ಯಂ । ಕಃ । ಸಖಿऽತ್ವಂ । ಕಃ । ಭ್ರಾತ್ರಂ । ವಷ್ಟಿ । ಕವಯೇ । ಕಃ । ಊತೀ ॥

॥ ಸಾಯಣಭಾಷ್ಯಂ ॥

ಕೋ ಯಜಮಾನೋ ವಚಸಾ ವಾಗ್ರೂಪಯಾ ಸ್ತುತ್ಯಾ ಸೋಮ್ಯಾಯ ಸೋಮಾರ್ಹಾಯೇಂದ್ರಾಯ ನನಾಮ । ನಮತಿ । ಪ್ರಹ್ವೀಭವತಿ । ಕೋ ವೇಂದ್ರಾಯ ಮನಾಯುರ್ಭವತಿ । ಸ್ತುತಿಕಾಮೋಽಸ್ತಿ । ಕ ಉಸ್ರಾ ಇಂದ್ರೇಣ ದತ್ತಾ ಗಾ ವಸ್ತೇ । ಆಚ್ಛಾದಯತಿ । ಧಾರಯತೀತ್ಯರ್ಥಃ । ಕ ಇಂದ್ರಸ್ಯ ಯುಜ್ಯಂ ಸಾಹಾಯ್ಯಂ ವಷ್ಟಿ । ಇಚ್ಛತಿ । ಕಃ ಸಖಿತ್ವಂ ಕಃ ಭ್ರಾತ್ರಂ ಭ್ರಾತೃಭಾವಂ ವಷ್ಟಿ । ಇಚ್ಛತಿ। ಕವಯೇ ಕ್ರಾಂತದರ್ಶಿನ ಇಂದ್ರಾಯೋತೀ ಊತಯೇ ತರ್ಪಣಾಯ । ಕೋ ಭವತೀತಿ ಶೇಷಃ॥

॥ ಪ್ರತಿಪದಾರ್ಥ ॥

ಕಃ—ಯಾವ ಯಜಮಾನನು । ವಚಸಾ—ವಾಗ್ರೂಪವಾದ ಸ್ತುತಿಯಿಂದ । ಸೋಮ್ಯಾಯ—ಸೋಮಪಾನಕ್ಕೆ ಯೋಗ್ಯನಾದ ಇಂದ್ರನನ್ನು । ನನಾಮ—ಪೂಜಿಸಿ ನಮಸ್ಕರಿಸುತ್ತಾನೆ । (ಕೋ) ವಾ—ಯಾವನು ತಾನೇ । ಮನಾಯುಃ—ಸ್ತುತಿಕಾಮನಾಗಿ । ಭವತಿ—ಆಗುತ್ತಾನೆ । ಉಸ್ರಾಃ—(ಇಂದ್ರನಿಂದ) ದತ್ತವಾದ ಗೋವುಗಳನ್ನು । ವಸ್ತೇ—(ಯಾವನು) ಪೋಷಿಸುತ್ತಾನೆ । ಕಃ—ಯಾವನು । ಇಂದ್ರಸ್ಯ—ಇಂದ್ರನ । ಯುಜ್ಯಂ—ಸಾಹಾಯ್ಯವನ್ನು । ವಷ್ಟಿ—ಇಚ್ಛಿಸುತ್ತಾನೆ । ಕಃ—ಯಾವನು । ಸಖಿತ್ವಂ—ಸುಹೃದ್ಭಾವವನ್ನೂ । ಕಃ—ಯಾವನು । ಭ್ರಾತ್ರಂ—ಭ್ರಾತೃಭಾವವನ್ನು (ಇಚ್ಛಿಸುತ್ತಾನೆ) । ಕವಯೇ—ಕ್ರಾಂತದರ್ಶಿಯಾದ ಇಂದ್ರನ । ಊತೀ—ತೃಪ್ತಿಕಾರಕನಾಗಿ । ಕಃ—ಯಾರಿದ್ದಾರೆ.

|| ಭಾವಾರ್ಥ ||

ಸೋಮಪಾನಕ್ಕೆ ಯೋಗ್ಯನಾದ ಇಂದ್ರನನ್ನು ವಾಗ್ರೂಪವಾದ ಸ್ತುತಿಯಿಂದ ಯಾವ ಯಜಮಾನನು ಪೂಜಿಸಿ ನಮಸ್ಕರಿಸುತ್ತಾನೆ? ಯಾವನು ಇಂದ್ರನ ಸ್ತುತಿಕಾಮನಾಗುತ್ತಾನೆ? ಇಂದ್ರನಿಂದ ದತ್ತವಾದ ಗೋವುಗಳನ್ನು ಯಾವ ಯಜಮಾನನು ಪೋಷಿಸುತ್ತಾನೆ? ಇಂದ್ರನ ಸಾಹಾಯ್ಯವನ್ನು ಇಚ್ಛಿಸುವ ಯಜಮಾನನಾರು? ಇಂದ್ರನ ಸುಹೃದ್ಭಾವವನ್ನೂ, ಭ್ರಾತೃಭಾವವನ್ನೂ ಇಚ್ಛಿಸುವ ಯಜಮಾನನಾರು? ಕ್ರಾಂತದರ್ಶಿಯಾದ ಇಂದ್ರನಿಗೆ ತೃಪ್ತಿಕಾರಕನಾದ ಯಜಮಾನನಾರಿದ್ದಾನೆ?

## English Translation.

who has reverenced with (suitable) words the (deity) worthy of the libation? who supports the cattle (given by him)? who desires the society of Indra? who his friendship? who his fraternity? who (has recourse) to the sage Indra for protection?

|| ವಿಶೇಷವಿಷಯಗಳು ||

ಹಿಂದಿನ ಋಕ್ಕಿನಂತೆ ಈ ಋಕ್ಕಿನಲ್ಲಿಯೂ—ಯಾವ ಯಜಮಾನನು ಇಂದ್ರನನ್ನು ಸೋಮಪಾನಕ್ಕಾಗಿ ಆಹ್ವಾನಿಸಿ ಸ್ತುತಿಸುತ್ತಾನೆ, ಯಾವ ಪುರುಷನು ಇಂದ್ರನ ಸಹಾಯವನ್ನೂ, ಸ್ನೇಹವನ್ನೂ, ಭಾತ್ರಭಾವವನ್ನೂ ಅಪೇಕ್ಷಿಸುತ್ತಾನೆ ಎಂದು ಪ್ರಶ್ನೆಯ ಮೂಲಕ ತನ್ನ ಕುತೂಹಲವನ್ನು ವ್ಯಕ್ತಿಪಡಿಸಿದ್ದಾನೆ.



|| ಸಂಹಿತಾಪಾಠಃ ||

ಕೋ ದೇವಾನಾಮವೋ ಅದ್ಯಾ ವೃಣೀತೇ ಕ ಆದಿತ್ಯಾಁ ಅದಿತಿಂ ಜ್ಯೋತಿರೀಟ್ಟೇ |
ಕಸ್ಯಾಶ್ವಿನಾವಿಂದ್ರೋ ಅಗ್ನಿಃ ಸುತಸ್ಯಾಂಶೋಃ ಪಿಬಂತಿ ಮನಸಾವಿವೇನಂ ||

|| ಪದಪಾಠಃ ||

ಕಃ | ದೇವಾನಾಂ | ಅವಃ | ಅದ್ಯ | ವೃಣೀತೇ | ಕಃ | ಆದಿತ್ಯಾನ್ | ಅದಿತಿಂ | ಜ್ಯೋತಿಃ | ಈಟ್ಟೇ |
ಕಸ್ಯ | ಅಶ್ವಿನಾ | ಇಂದ್ರಃ | ಅಗ್ನಿಃ | ಸುತಸ್ಯ | ಅಂಶೋಃ | ಪಿಬಂತಿ | ಮನಸಾ | ಅವಿಽವೇನಂ || ೩ ||

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿನೇ ಕೋ ಯಜಮಾನೋ ದೇವಾನಾಂ ದ್ಯೋತಮಾನಾನಾಮಿಂದ್ರಾದೀನಾಮವೋ ರಕ್ಷಣಂ ವೃಣೀತೇ । ಪ್ರಾರ್ಥಯತೇ । ಕ ಆದಿತ್ಯಾನ್ದೇವಾನದಿತಿಂ ದೇವಮಾತರಂ ಚ ಜ್ಯೋತಿರುದಕಂ ಚೇಟ್ಟೇ । ಯಾಚತೇ । ಅಶ್ವಿನಾವಶ್ವಿದೇವಾವಿಂದ್ರಶ್ಚಾಗ್ನಿಶ್ಚ ಮನಸಾ ಸ್ತುತ್ಯಾ ಪ್ರೀತಾಃ ಸಂತೋऽವಿವೇನಮವಿಗತಕಾಮಂ । ಯಥಾಕಾಮಮಿತ್ಯರ್ಥಃ । ಕಸ್ಯ ಯಜಮಾನಸ್ಯ ಸಂಬಂಧಿನಂ ಸುತಸ್ಯಾಭಿಷುತಸ್ಯಾಂಶೋಃ ಸೋಮಸ್ಯ । ಸೋಮಮಿತ್ಯರ್ಥಃ । ಪಿಬಂತಿ । ಪಾನಂ ಕುರ್ವಂತಿ ॥

। ಪ್ರತಿಪದಾರ್ಥ ।

ಅದ್ಯ—ಇಂದು । ಕಃ—ಯಾವ ಯಜಮಾನನು । ದೇವಾನಾಂ—ಇಂದ್ರಾದಿ ದೇವತೆಗಳ । ಅವಃ—ರಕ್ಷಣವನ್ನು । ವೃಣೀತೇ—ಅಪೇಕ್ಷಿಸಿ ಪ್ರಾರ್ಥಿಸುತ್ತಾನೆ । ಕಃ—ಯಾವನು । ಆದಿತ್ಯಾನ್—ಅದಿತಿಯ ಪುತ್ರರಾದ ದೇವತೆಗಳನ್ನೂ । ಅದಿತಿಂ—ಅದಿತಿಯನ್ನೂ । ಜ್ಯೋತಿಃ—ತೇಜಸ್ಸನ್ನೂ । ಈಟ್ಟೇ—ಪ್ರಾರ್ಥಿಸುತ್ತಾನೆ । ಅಶ್ವಿನಾ—ಅಶ್ವಿನಿದೇವತೆಗಳೂ । ಇಂದ್ರಃ—ಇಂದ್ರನೂ । ಅಗ್ನಿಃ—ಅಗ್ನಿಯೂ । ಮನಸಾ—ಸ್ತುತಿಯಿಂದ ಪ್ರೀತರಾಗಿ । ಅವಿವೇನಂ—ತಮಗೆ ಪೂರ್ಣವಾಗಿ ತೃಪ್ತಿಯುಂಟಾಗುವ ವರೆಗೂ । ಕಸ್ಯ—ಯಾವ ಯಜಮಾನನ । ಸುತಸ್ಯ—ಹಿಂಡಲ್ಪಟ್ಟ । ಅಂಶೋಃ—ಸೋಮವನ್ನು । ಪಿಬಂತಿ—ಪಾನಮಾಡುತ್ತಾರೆ.

। ಭಾವಾರ್ಥ ।

ಯಾವ ಯಜಮಾನನು ಇಂದ್ರಾದಿದೇವತೆಗಳ ರಕ್ಷಣವನ್ನಪೇಕ್ಷಿಸಿ ಇಂದು ಪ್ರಾರ್ಥಿಸುತ್ತಾನೆ? ಯಾವನು ಅದಿತಿಪುತ್ರರಾದ ದೇವತೆಗಳನ್ನೂ, ಅದಿತಿಯನ್ನೂ. ತೇಜೋರೂಪವಾದ ಉದಕವನ್ನೂ ಪ್ರಾರ್ಥಿಸುತ್ತಾನೆ? ಅಶ್ವಿನೀದೇವತೆಗಳೂ, ಇಂದ್ರನೂ, ಅಗ್ನಿಯೂ, ಯಾವ ಯಜಮಾನನ ಸ್ತುತಿಯಂದ ಪ್ರೀತರಾಗಿ ಅವನಿಂದ ಹಿಂಡಿ ಅರ್ಪಿತವಾದ ಸೋಮವನ್ನು ತಮಗೆ ತೃಪ್ತಿಯುಂಟಾಗುವವರೆಗೂ ಪಾನಮಾಡುತ್ತಾರೆ?

English Translation.

who solicits to-day the protection of the gods? who glorifies the Adityas, Aditi, light? of whose effused libation do the Ashwins, Indra, Agni, drink at will, propitiated by his praise?

---

। ಸಂಹಿತಾಪಾಠಃ ।

ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ಪಶ್ಯಾತ್ಸೂರ್ಯಮುಚ್ಚರಂತಂ ।

ಯ ಇಂದ್ರಾಯ ಸುನವಾಮೇತ್ಯಾಹ ನರೇ ನರ್ಯಾಯ ನೃತಮಾಯ ನೃಣಾಂ ॥ ೪ ॥

॥ ಪದಪಾಠಃ ॥

ತಸ್ಮೈ । ಅಗ್ನಿಃ । ಭಾರತಃ । ಶರ್ಮ । ಯಂಸತ್ । ಜ್ಯೋಕ್ । ಪಶ್ಯಾತ್ । ಸೂರ್ಯಂ । ಉತ್ಽಚರಂತಂ ।

ಯಃ । ಇಂದ್ರಾಯ । ಸುನವಾಮ । ಇತಿ । ಆಹ । ನರೇ । ನರ್ಯಾಯ । ನೃಽತಮಾಯ । ನೃಣಾಂ ॥ ೪ ॥

॥ ಸಾಯಣಭಾಷ್ಯಂ ॥

ಭಾರತೋ ಹವಿಷೋ ಭರ್ತಾಗ್ನಿಃ । ಪ್ರಾಣೋ ಭೂತ್ವಾ ಪ್ರಜಾ ಧಾರಯನ್ ಭಾರತ ಇತಿ ವಾಜಸನೇಯಕಂ । ಅಗ್ನಿಸ್ತಸ್ಮೈ ಯಜಮಾನಾಯ ಶರ್ಮ ಸುಖಂ ಯಂಸತ್ । ಯಚ್ಛೇತ್ । ಕಿಂಚ ಅಯಮಗ್ನಿರ್ಜ್ಯೋಕ್ ಚಿರಕಾಲಮುಚ್ಚರಂತಮುದ್ಯಂತಂ ಸೂರ್ಯಂ ಪಶ್ಯಾತ್ । ಪಶ್ಯೇತ್ । ಯೋ ಯಜಮಾನ ಇಂದ್ರಾಯ ಸುನವಾಮೇತ್ಯಾಹ ಇಂದ್ರಾರ್ಥಂ ಸೋಮಾಭಿಷವಂ ಕುರ್ಯಾಮಿತಿ ಬ್ರವೀತಿ । ಕೀದೃಶಾಯೇಂದ್ರಾಯ । ನರೇ ನೇತ್ರೇ ನರ್ಯಾಯ ನರಹಿತಾಯ ನೃಣಾಂ ನರಾಣಾಂ ನೇತೄಣಾಂ ಮಧ್ಯೇ ನೃತಮಾಯ ನೇತೃತಮಾಯ ॥

॥ ಪ್ರತಿಪದಾರ್ಥ ॥

ಯಃ—ಯಾವ ಯಜಮಾನನು । ನರೇ—ನೇತೃವಾದವನೂ । ನರ್ಯಾಯ—ಮಾನವರಿಗೆ ಹಿತ ಕಾರಿಯೂ । ನೃಣಾಂ—ಮಾನವರ ನಡುವೆ (ನೇತೃಗಳೆಲ್ಲೆಲ್ಲಾ) । ನೃತಮಾಯ—ಅತ್ಯಂತ ಶ್ರೇಷ್ಠಪುರುಷನೂ (ಅತ್ಯಂತ ಶ್ರೇಷ್ಠವಾದ ನೇತೃವಾದವನೂ ಆದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಸುನವಾಮ—(ಯಜ್ಞಾರ್ಥ ವಾಗಿ) ಸೋಮವನ್ನು ಹಿಂಡೋಣ । ಇತ್ಯಾಹ—ಎಂದು ಸಂಕಲ್ಪಿಸುವನೋ । ತಸ್ಮೈ—ಆ ಯಜಮಾನನಿಗೆ । ಭಾರತಃ—ಹವಿಸ್ಸನ್ನು ಭರಿಸತಕ್ಕ । ಅಗ್ನಿಃ—ಅಗ್ನಿಯು । ಶರ್ಮ—ಸುಖವನ್ನು । ಯಂಸತ್—ಒದಗಿಸಿ ಕೊಡಲಿ । ಜ್ಯೋಕ್—ಬಹುದೀರ್ಘಕಾಲ । ಉಚ್ಚರಂತಂ—ಉದಯಿಸತಕ್ಕ । ಸೂರ್ಯಂ—ಸೂರ್ಯ ನನ್ನು । ಪಶ್ಯಾತ್—(ಅವನ ಗೃಹದಿಂದ) ನೋಡಲಿ.

॥ ಭಾವಾರ್ಥ ॥

ನೇತೃವಾದವನೂ, ಮಾನವರ ಹಿತಕಾರಿಯಾದವನೂ, ನೇತೃಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ನೇತೃವೂ ಆದ ಇಂದ್ರನನ್ನುದ್ದೇಶಿಸಿ ಸೋಮವನ್ನು ಯಜ್ಞಾರ್ಥವಾಗಿ ಹಿಂಡೋಣ ಎಂದು ಯಾವ ಯಜಮಾನನು ಸಂಕಲ್ಪಿಸು ವನೋ ಆ ಯಜಮಾನನಿಗೆ ಹವಿರ್ವಾಹಕನಾದ ಅಗ್ನಿಯು ಸುಖವನ್ನುಂಟುಮಾಡಲಿ. ಅವನು ತನ್ನ ಯಜ್ಞಗೃಹದಿಂದ ಬಹಳ ದೀರ್ಘಕಾಲ ಉದಯಿಸುವ ಸೂರ್ಯನನ್ನು ನೋಡಲಿ. (ಎಂದರೆ ಬಹುಕಾಲ ಜೀವಿಸಿರಲಿ)

## English Translation.

May Agni, the bearer of oblations, grant him felicity, and long behold the rising sun (in the dwelling of him) who says, let us offer libations to Indra, leader (of rites), the friend of man, the chief leader amongst leaders.

॥ ಸಂಹಿತಾಪಾಠಃ ॥

ನ ತಂ ಜಿನಂತಿ ಬಹವೋ ನ ದಭ್ರಾ ಉರ್ವಸ್ಮಾ ಅದಿತಿಃ ಶರ್ಮ ಯಂಸತ್ ।
ಪ್ರಿಯಃ ಸುಕೃತ್ಪ್ರಿಯ ಇಂದ್ರೇ ಮನಾಯುಃ ಪ್ರಿಯಃ ಸುಪ್ರಾವೀಃ ಪ್ರಿಯೋ
ಅಸ್ಯ ಸೋಮೀ ॥ ೫ ॥

॥ ಪದಪಾಠಃ ॥

ನ । ತಂ । ಜಿನಂತಿ । ಬಹವಃ । ನ । ದಭ್ರಾಃ । ಉರು । ಅಸ್ಮೈ । ಅದಿತಿಃ । ಶರ್ಮ । ಯಂಸತ್ ।
ಪ್ರಿಯಃ । ಸುಽಕೃತ್ । ಪ್ರಿಯಃ । ಇಂದ್ರೇ । ಮನಾಯುಃ । ಪ್ರಿಯಃ । ಸುಪ್ರಽಅವೀಃ । ಪ್ರಿಯಃ । ಅಸ್ಯ ।
ಸೋಮೀ ॥ ೫ ॥

॥ ಸಾಯಣಭಾಷ್ಯಂ ॥

ದಭ್ರಾ ಅಲ್ಪಾ ಬಹವೋ ನ ಬಹವೋಽಪಿ ಶತ್ರುಜನಾಸ್ತಂ ಯಜಮಾನಂ ನ ಜಿನಂತಿ । ನ ಹಿಂಸಂತು । ಯ ಇಂದ್ರಾಯ ಸುನವಾಮೇತ್ಯಾಹ ತಮಿತಿ ಪೂರ್ವೇಣ ಸಂಬಂಧಃ । ಅದಿತಿರಿಂದ್ರಮಾತಾಸ್ಮೈ ಯಜಮಾನಾಯೋರು ವಿಸ್ತೀರ್ಣಂ ಶರ್ಮ ಸುಖಂ ಯಂಸತ್ । ಯಚ್ಛತು । ಕಿಂಚ ಇಂದ್ರ ಇಂದ್ರಾಯ ಸುಕೃತ್ ಶೋಭನಯಾಗಾದೀನಾಂ ಕರ್ತಾ ಯಜಮಾನಃ ಪ್ರಿಯೋ ಭವತಿ । ಮನಾಯುರಿಂದ್ರವಿಷಯಸ್ತುತಿಕಾಮಶ್ಚಾಸ್ಯೇಂದ್ರಸ್ಯ ಪ್ರಿಯೋ ಭವತಿ । ಸುಪ್ರಾವೀಃ ಸುಷ್ಠು ಪ್ರಾವಿತಾ ಸುಷ್ಠು ಪ್ರಗಚ್ಛನ್ನುಪಗಚ್ಛನ್ವಾ ಯಜಮಾನೋಽಸ್ಯೇಂದ್ರಸ್ಯ ಪ್ರಿಯೋ ಭವತಿ । ಸೋಮೀ ಸೋಮವಾನ್ಯಜಮಾನೋಽಸ್ಯೇಂದ್ರಸ್ಯ ಪ್ರಿಯೋ ಭವತಿ ॥

॥ ಪ್ರತಿಪದಾರ್ಥ ॥

ದಭ್ರಾಃ—ಅಲ್ಪಸಂಖ್ಯೆಯುಳ್ಳವರೂ । ಬಹವಃ—ಅಧಿಕ ಸಂಖ್ಯೆಯುಳ್ಳವರೂ ಆದ ದುರ್ಜನರು । ತಂ—(ಇಂದ್ರನಿಗೆ ಸೋಮವನ್ನು ಅರ್ಪಿಸುವೆನು ಎಂದು ಸಂಕಲ್ಪಿಸಿದ) ಆ ಯಜಮಾನನನ್ನು । ನ ಜಿನಂತಿ—ಹಿಂಸಿಸ

ದಿರಲಿ । ಅದಿತಿಃ—ಇಂದ್ರಮಾತೆಯು । ಅಸ್ಮೈ—ಈ ಯಜಮಾನನಿಗೆ । ಉರು—ಅತ್ಯಧಿಕವಾದ । ಶರ್ಮ—ಸುಖವನ್ನು । ಯಂಸತ್—ಒದಗಿಸಲಿ । ಇಂದ್ರೇ—ಇಂದ್ರನನ್ನುದ್ದೇಶಿಸಿ । ಸುಕೃತ್—ಶ್ರೇಷ್ಠವಾದ ಯಾಗಾದಿ ಕರ್ಮಗಳನ್ನು ಮಾಡುವ ಯಜಮಾನನು । ಪ್ರಿಯಃ—ಇಂದ್ರನಿಗೆ ಪ್ರಿಯನಾಗುತ್ತಾನೆ । ಮನಾಯುಃ—ಇಂದ್ರನನ್ನು ಸ್ತುತಿಸಲಿಚ್ಛಿಸುವವನು । ಪ್ರಿಯಃ—ಬೇಕಾದವನಾಗುತ್ತಾನೆ । ಸುಪ್ರಾವೀಃ—ವಿನಯದಿಂದ ಇಂದ್ರನನ್ನು ಸಮೀಪಿಸುವವನು । ಪ್ರಿಯಃ—ಆದರಕ್ಕೆ ಪಾತ್ರನಾಗುತ್ತಾನೆ । ಸೋಮೀ—ಇಂದ್ರನಿಗೆ ಸೋಮವನ್ನರ್ಪಿಸುವ ಯಜಮಾನನು । ಅಸ್ಯ—ಈ ಇಂದ್ರನಿಗೆ । ಪ್ರಿಯಃ—ಪ್ರೀತಿಪಾತ್ರನಾಗುತ್ತಾನೆ.

॥ ಭಾವಾರ್ಥ ॥

ಇಂದ್ರನಿಗೆ ಸೋಮವನ್ನರ್ಪಿಸಲಿಚ್ಛೆಯುಳ್ಳ ಯಜಮಾನನನ್ನು ಅವನ ಶತ್ರುಗಳು ಹಿಂಸಿಸದಿರಲಿ. ಆ ಶತ್ರುಗಳ ಸಂಖ್ಯೆಯು ಅಧಿಕವಾಗಿರಲಿ ಅಥವಾ ಕಡಿಮೆಯಾಗಿರಲಿ, ಅವರಿಂದ ಈ ಯಜಮಾನನಿಗೆ ತೊಂದರೆಯುಂಟಾಗದಿರಲಿ. ಇಂದ್ರನ ತೃಪ್ತಿಗಾಗಿ ಉತ್ತಮವಾದ ಯಾಗಾದಿಗಳನ್ನು ಮಾಡುವವನೂ, ಇಂದ್ರನನ್ನು ಸ್ತುತಿಸುವವನೂ, ಭಯಭಕ್ತಿಗಳಿಂದ ಇಂದ್ರನನ್ನು ಸಮೀಪಿಸುವವನೂ, ಇಂದ್ರನಿಗೆ ಸೋಮವನ್ನರ್ಪಿಸುವವನೂ ಆದ ಯಜಮಾನನು ಇಂದ್ರನ ಪ್ರೀತಿಗೆ ಪಾತ್ರನಾಗುತ್ತಾನೆ. ಇವುಗಳಲ್ಲಿ ಒಂದು ವಿಧವಾಗಿಯಾದರೂ ಇಂದ್ರನಿಗೆ ತೃಪ್ತಿಕಾರಕನಾದರೂ ಸಹ ಅವನ ಆದರಕ್ಕೆ ಪಾತ್ರನಾಗುತ್ತಾನೆ.

## English Translation.

Him neither many nor few can molest: may Aditi grant him infinite happiness: the performer of pious acts is dear (to Indra): dear to Indra is he whose mind is intent upon him; dear is he who approaches him with homage; dear to him is the offerer of the libation.



॥ ಸಂಹಿತಾಪಾಠಃ ॥

ಸುಪ್ರಾವ್ಯಃ ಪ್ರಾಶುಷಾಳೇಷ ವೀರಃ ಸುಷ್ವೇಃ ಪಕ್ತಿಂ ಕೃಣುತೇ ಕೇವಲೇಂದ್ರಃ।

ನಾಸುಷ್ವೇರಾಪಿರ್ನ ಸಖಾ ನ ಜಾಮಿರ್ದುಷ್ಪ್ರಾವ್ಯೋಽವಹಂತೇದವಾಚಃ ॥

॥ ಪದಪಾಠಃ ॥

ಸುಪ್ರಽಅವ್ಯಃ । ಪ್ರಾಶುಷಾಟ್ । ಏಷಃ । ವೀರಃ । ಸುಸ್ವೇಃ । ಪಕ್ತಿಂ । ಕೃಣುತೇ । ಕೇವಲಾ । ಇಂದ್ರಃ । ನ । ಅಸುಸ್ವೇಃ । ಆಪಿಃ । ನ । ಸಖಾ । ನ । ಜಾಮಿಃ । ದುಃಪ್ರಽಅವ್ಯಃ । ಅವ್ಽಹಂತಾ । ಇತ್ । ಅವಾಚಃ ॥ ೭ ॥

॥ ಸಾಯಣಭಾಷ್ಯಂ ॥

ಪ್ರಾಶುಷಾಟ್ ಶತ್ರೂಣಾಂ ಪ್ರಕರ್ಷೇಣ ಶೀಘ್ರಮಭಿಭವತಾ ವೀರೋ ವಿಕ್ರಾಂತ ಏಷ ಇಂದ್ರಃ ಸುಪ್ರಾವ್ಯಃ ಸುಷ್ಠೂಪಗಚ್ಛತೋ ಹವಿರ್ಭಿಃ ಸುಷ್ಠು ಪ್ರತರ್ಪಯಿತುರ್ವಾ ಃಸುಷ್ವೇಃ ಸುನ್ವತೋ ಯಜಮಾನಸ್ಯ ಸಂಬಂಧಿನೀಂ ಕೇವಲಾ ಕೇವಲಾಮಸಾಧಾರಣಾಂ ಪಕ್ತಿಂ ಕೃಣುತೇ। ಆತ್ಮನಃ ಕುರುತೇ। ಕಿಂಚೇಂದ್ರೋಽಸುಷ್ವೇರಸುನ್ವತೋ ಯಜಮಾನಸ್ಯಾಪಿರ್ವ್ಯಾಪ್ತೋ ನ ಭವತಿ। ಇಂದ್ರೋಽಯಜಮಾನಸ್ಯ ಸಖಾ ನ ಭವತಿ। ಜಾಮಿರ್ಬಂಧುಶ್ಚ ನ ಭವತಿ। ಅಪಿ ಚ ದುಷ್ಪ್ರಾವ್ಯೋ ದುರುಪಗಮನಸ್ಯಾವಾಚಃ ಸ್ತುತಿರಹಿತಸ್ಯ ಪುರುಷಸ್ಯಾವಹಂತೇತ್ ಹಿಂಸಿತೈವ ಭವತಿ ॥

॥ ಪ್ರತಿಪದಾರ್ಥ ॥

ಪ್ರಾಶುಷಾಟ್—ಶತ್ರುಗಳನ್ನು ಅತಿಶೀಘ್ರದಲ್ಲಿ ನಾಶಪಡಿಸುವವನೂ। ವೀರಃ—ಪರಾಕ್ರಮಿಯೂ ಆದ। ಏಷಃ ಇಂದ್ರಃ—ಈ ಇಂದ್ರನು। ಸುಪ್ರಾವ್ಯಃ—ಅತ್ಯಂತ ವಿನಯದಿಂದ ಸಮೀಪಿಸಲ್ಪಡತಕ್ಕವನು। ಸುಷ್ವೇಃ—ಸೋಮವನ್ನು ಹಿಂಡುವ ಯಜಮಾನನ। ಪಕ್ತಿಂ—ಪಾಪಕ್ರಿಯೆಯನ್ನು (ಅನ್ನಸಂಪತ್ತನ್ನು)। ಕೇವಲಾ—ಬಹಳ ಅಸಾಧಾರಣವಾದುದನ್ನಾಗಿ। ಕೃಣುತೇ—ಮಾಡುತ್ತಾನೆ। ಅಸುಷ್ವೇಃ—ಸೋಮವನ್ನು ಹಿಂಡದಿರುವವನಿಗೆ। ಆಪಿಃ—ಹಿತಕಾರಿಯಾಗಿ। ನ—ಆಗುವುದಿಲ್ಲ। ಸಖಾ—ಸ್ನೇಹಿತನಾಗಿ। ನ—ಆಗುವುದಿಲ್ಲ। ಜಾಮಿಃ—ಅವನಿಗೆ ಬಂಧುವಾಗಿಯೂ। ನ—ಆಗುವುದಿಲ್ಲ। ಅವಾಚಃ—ಇಂದ್ರನನ್ನು ಸ್ತುತಿಸದಿರುವ ಯಜಮಾನನಿಗೆ। ದುಷ್ಪ್ರಾವ್ಯಃ—ಸಿಕ್ಕತಕ್ಕವನೇ ಅಲ್ಲ। ಅವಹಂತೇತ್—ಅವನನ್ನು ಖಂಡಿತವಾಗಿಯೂ ಹಿಂಸಿಸುವವನು.

॥ ಭಾವಾರ್ಥ ॥

ಶತ್ರುಗಳನ್ನು ಅತಿ ಶೀಘ್ರದಲ್ಲಿ ನಾಶಪಡಿಸುವವನೂ, ಪರಾಕ್ರಮಿಯೂ ಆದ ಇಂದ್ರನನ್ನು ಯಜಮಾನರು ಅತ್ಯಂತ ವಿನಯದಿಂದ ಸಮೀಪಿಸಬೇಕು. ಇಂದ್ರನು ತನಗಾಗಿ ಸೋಮವನ್ನು ಹಿಂಡುವವನಿಗೆ ಅಸಾಧಾರಣವಾದ ಅನ್ನಸಂಪತ್ತನ್ನೊದಗಿಸುತ್ತಾನೆ. ಸೋಮವನ್ನು ಹಿಂಡದೇ ಯಜ್ಞವನ್ನಾಚರಿಸದೇ ಇರುವ ಯಜಮಾನನಿಗೆ ಹಿತವನ್ನುಂಟುಮಾಡುವುದಿಲ್ಲ. ಅವನಿಗೆ ಸುಹೃತ್ತಾಗುವುದಿಲ್ಲ. ಬಂಧುವೂ ಆಗುವುದಿಲ್ಲ. ಮತ್ತು ಇಂದ್ರನನ್ನು ಸ್ತುತಿಸದಿರುವ ಯಜಮಾನನಿಗೆ ಲಭ್ಯವೇ ಅಲ್ಲ. ಅಂತಹವನನ್ನು ಖಂಡಿತ ಹಿಂಸಿಸುತ್ತಾನೆ.

## English Translation.

This hero, Indra, the prompt discomfiter (of foes), who is to be approached with homage, grants special maturity to the presenter of the libation : he is not the kinsmen, nor friend, nor relative, of him who offers no oblation (to him) : he is difficult of access, and the punisher of him who repeats not (his) praise.



॥ ಸಂಹಿತಾಪಾಠಃ ॥

ನ ರೇವತಾ ಪಣಿನಾ ಸಖ್ಯಮಿಂದ್ರೋಽಸುನ್ವತಾ ಸುತಪಾಃ ಸಂ ಗೃಣೀತೇ ।
ಆಸ್ಯ ವೇದಃ ಖಿದತಿ ಹಂತಿ ನಗ್ನಂ ವಿ ಸುಷ್ವಯೇ ಪಕ್ತಯೇ ಕೇವಲೋ ಭೂತ್ ॥ ೭ ॥

॥ ಪದಪಾಠಃ ॥

ನ । ರೇವತಾ । ಪಣಿನಾ । ಸಖ್ಯಂ । ಇಂದ್ರಃ । ಅಸುನ್ವತಾ । ಸುತಽಪಾಃ । ಸಂ । ಗೃಣೀತೇ ।
ಆ । ಅಸ್ಯ । ವೇದಃ । ಖಿದತಿ । ಹಂತಿ । ನಗ್ನಂ । ವಿ । ಸುಸ್ವಯೇ । ಪಕ್ತಯೇ । ಕೇವಲಃ । ಭೂತ್ ॥೭॥

॥ ಸಾಯಣಭಾಷ್ಯಂ ॥

ಸುತಪಾ ಅಭಿಷುತಂ ಸೋಮಂ ಪಿಬನ್ನಿಂದ್ರೋ ರೇವತಾ ಧನವತಾ ಪಣಿನಾ ವಣಿಜಾ ಲುಬ್ಧೇನಾಸುನ್ವತಾ ಸೋಮಾಭಿಷವಮಕುರ್ವತಾಯಜಮಾನೇನ ಸಹ ಸಖ್ಯಂ ಸಖಿತ್ವಂ ನ ಸಂ ಗೃಣೀತೇ । ನ ಸಂಸ್ತೌತಿ । ನಾನುಮನ್ಯತ ಇತ್ಯರ್ಥಃ । ಕಿಂಚ ಅಸ್ಯಾಯಜಮಾನಸ್ಯ ನಗ್ನಂ ನಿರರ್ಥಕಂ ವೇದೋ ಧನಂ ಜ್ಞಾನಂ ವಾ ಆ ಖಿದತಿ । ಉದ್ಧರತಿ । ಹಂತಿ । ಹಿನಸ್ತಿ ಚ । ಅಪಿ ಚ ಸುಷ್ವಯೇ ಸೋಮಂ ಸುನ್ವತೇ ಪಕ್ತಯೇ ಹವೀಂಷಿ ಪಚತೇ ಯಜಮಾನಾಯ ಕೇವಲೋಽಸಾಧಾರಣಃ ಸನ್ ವಿ ಭೂತ್ । ವಿಭವತಿ ॥

॥ ಪ್ರತಿಪದಾರ್ಥ ॥

ಸುತಪಾಃ—ಹಿಂಡಿದ ಸೋಮವನ್ನು ಪಾನಮಾಡತಕ್ಕ । ಇಂದ್ರಃ—ಇಂದ್ರನು । ರೇವತಾ—ಧನವಂತನೂ । ಪಣಿನಾ—ಲೋಭಿಯೂ । ಅಸುನ್ವತಾ—ಯಜ್ಞಕ್ಕಾಗಿ ಸೋಮವನ್ನು ಹಿಂಡದಿರುವವನೂ ಆದ ಪುರುಷನೊಡನೆ । ಸಖ್ಯಂ—ಮೈತ್ರಿಯನ್ನು । ನ ಸಂ ಗೃಣೀತೇ—ಒಪ್ಪುವುದಿಲ್ಲ । ಅಸ್ಯ—ಆದೇ ಪುರುಷನ । ನಗ್ನಂ—ನಿರರ್ಥಕವಾದ । ವೇದಃ—ಧನವನ್ನು । ಆ ಖಿದತಿ—ಅಪಹರಿಸುತ್ತಾನೆ । ಹಂತಿ—ನಾಶಪಡಿಸುತ್ತಾನೆ । ಸುಷ್ವಯೇ—ಸೋಮವನ್ನು ಹಿಂಡುವವನೂ । ಪಕ್ತಯೇ—ಯಜ್ಞಕ್ಕಾಗಿ ಹವಿಸ್ಸನ್ನು ಪಾಕಮಾಡುವವನೂ ಆದ ಯಜಮಾನನಿಗೆ । ಕೇವಲಃ—ಅಸಾಧಾರಣನಾಗಿ । ವಿ ಭೂತ್—ಅವನ ವೈಭವಕ್ಕೆ ಕಾರಣನಾಗುತ್ತಾನೆ.

॥ ಭಾವಾರ್ಥ ॥

ಹಿಂಡಿದ ಸೋಮವನ್ನು ಪಾನಮಾಡತಕ್ಕ ಇಂದ್ರನು ಧನವಂತನೂ, ಲೋಭಿಯೂ ಯಜ್ಞಕ್ಕಾಗಿ ಸೋಮವನ್ನು ಹಿಂಡದಿರುವವನೂ ಆದ ಪುರುಷನೊಡನೆ ಮೈತ್ರಿಯನ್ನು ಹೊಂದಲು ಇಚ್ಛಿಸುವುದಿಲ್ಲ. ಆ ಪುರುಷನ ಧನವು ನಿರರ್ಥಕವಾದುದರಿಂದ ಅದನ್ನು ಅಪಹರಿಸುತ್ತಾನೆ, ಅಥವಾ ನಾಶಪಡಿಸುತ್ತಾನೆ. ಸೋಮವನ್ನು ಹಿಂಡುವವನೂ ಯಜ್ಞಕ್ಕಾಗಿ ಹವಿಸ್ಸನ್ನು ಪಾಕಮಾಡುವವನೂ ಆದ ಯಜಮಾನನಿಗೆ ಅಸಾಧಾರಣವಾದ ವೈಭವವನ್ನುಂಟುಮಾಡುತ್ತಾನೆ.

## English Translation.

(Indra), the drinker of the effused Soma, contracts no friendship with the wealthy trader who offers not any libation; he takes away his wealth; destroys him when destitute; but he is a special (friend) to him who presents the libation and oblation.



॥ ಸಂಹಿತಾಪಾಠಃ ॥

ಇಂದ್ರಂ ಪರೇಽವರೇ ಮಧ್ಯಮಾಸ ಇಂದ್ರಂ ಯಾಂತೋಽವಸಿತಾಸ ಇಂದ್ರಂ।
ಇಂದ್ರಂ ಕ್ಷಿಯಂತ ಉತ ಯುಧ್ಯಮಾನಾ ಇಂದ್ರಂ ನರೋ ವಾಜಯಂತೋ ಹವಂತೇ ॥ ೮ ॥

॥ ಪದಪಾಠಃ ॥

ಇಂದ್ರಂ । ಪರೇ । ಅವರೇ । ಮಧ್ಯಮಾಸಃ । ಇಂದ್ರಂ । ಯಾಂತಃ । ಅವಽಸಿತಾಸಃ । ಇಂದ್ರಂ ।
ಇಂದ್ರಂ । ಕ್ಷಿಯಂತಃ । ಉತ । ಯುಧ್ಯಮಾನಾಃ । ಇಂದ್ರಂ । ನರಃ । ವಾಜಯಂತಃ । ಹವಂತೇ ॥ ೮ ॥

॥ ಸಾಯಣಭಾಷ್ಯಂ ॥

ಪರ ಉತ್ಕೃಷ್ಟಾ ಅವರೇ ನಿಕೃಷ್ಟಾಶ್ಚ ಜನಾ ಇಂದ್ರಂ ಹವಂತೇ । ಆಹ್ವಯಂತಿ । ಮಧ್ಯಮಾಸೋ ಮಧ್ಯಮಾಶ್ಚೇಂದ್ರಮೇವ ಹವಂತೇ । ಯಾಂತಃ ಕಾರ್ಯಸಿದ್ಧ್ಯರ್ಥಂ ಗಚ್ಛಂತೋ ಜನಾ ಇಂದ್ರಮೇವಾಹ್ವಯಂತಿ । ಅವಸಿತಾಸೋ ನಿವಿಷ್ಟಾಶ್ಚೇಂದ್ರಮೇವಾಹ್ವಯಂತಿ । ಕ್ಷಿಯಂತೋ ಗೃಹೇ ನಿವಸಂತೋ ಜನಾ ಇಂದ್ರಮೇವ ಹವಂತೇ । ಉತಾಪಿ ಚ ಯುಧ್ಯಮಾನಾ ಯುದ್ಧಂ ಕುರ್ವಾಣಾ ಜನಾ ಜಯಾರ್ಥಮಿಂದ್ರಮೇವಾಹ್ವಯಂತಿ । ವಾಜಯಂತೋ ವಾಜಮನ್ನಮಿಚ್ಛಂತೋ ನರೋ ನೇತಾರೋ ಮನುಷ್ಯಾ ಇಂದ್ರಮೇವ ಹವಂತೇ ॥

॥ ಪ್ರತಿಪದಾರ್ಥ ॥

ಪರೇ — ಉತ್ಕೃಷ್ಟರಾದವರೂ । ಅವರೇ — ನಿಕೃಷ್ಟರಾದವರೂ ಸಹ । ಇಂದ್ರಂ — ಇಂದ್ರನನ್ನು । ಹವಂತೇ — ಸಹಾಯಕ್ಕಾಗಿ ಪ್ರಾರ್ಥಿಸಿ ಕರೆಯುತ್ತಾರೆ । ಮಧ್ಯಮಾಸಃ — ಮಧ್ಯಮವರ್ಗಕ್ಕೆ ಸೇರಿದವರೂ । ಇಂದ್ರಂ — ಇಂದ್ರನನ್ನೇ ಕರೆಯುತ್ತಾರೆ । ಯಾಂತಃ — ಕಾರ್ಯಸಿದ್ಧಿಗೋಸ್ಕರ ಹೋಗುವವರೂ । ಅವಸಿತಾಸಃ —

ಕುಳಿತಿರುವವರೂ | ಇಂದ್ರಂ—ಇಂದ್ರನನ್ನೇ ಕರೆಯುತ್ತಾರೆ | ಕ್ಷಿಯಂತಃ—ಗೃಹದಲ್ಲಿ ವಾಸಿಸುವವರೂ | ಇಂದ್ರಂ—ಇಂದ್ರನನ್ನೇ ಕರೆಯುತ್ತಾರೆ | ಉತ—ಮತ್ತು | ಯುಧ್ಯಮಾನಾಃ—ಶತ್ರುಗಳೊಡನೆ ಯುದ್ಧ ಮಾಡುವವರೂ | ವಾಜಯಂತಃ—ಅನ್ನವನ್ನು ಇಚ್ಛಿಸುವವರೂ ಆದ | ನರಃ—ಮಾನವರು | ಇಂದ್ರಂ—ಇಂದ್ರನನ್ನೇ ಅಪೇಕ್ಷಿಸಿ ಕರೆಯುತ್ತಾರೆ.

॥ ಭಾವಾರ್ಥ ॥

ಉತ್ಕೃಷ್ಟರಾದವರೂ, ನಿಕೃಷ್ಟರಾದವರೂ, ಇಂದ್ರನನ್ನು ಸಹಾಯಕ್ಕಾಗಿ ಪ್ರಾರ್ಥಿಸಿ ಕರೆಯುತ್ತಾರೆ. ಮಧ್ಯಮವರ್ಗಕ್ಕೆ ಸೇರಿದವರೂ ಸಹ ಇವನ ಸಹಾಯವನ್ನೇ ಅಪೇಕ್ಷಿಸುತ್ತಾರೆ. ಕಾರ್ಯಸಿದ್ಧಿಗೋಸ್ಕರ ಹೊರಡುವವರೂ, ಕುಳಿತಿರುವವರೂ, ಗೃಹದಲ್ಲಿ ವಾಸಿಸುವವರೂ, ಶತ್ರುಗಳೊಡನೆ ಯುದ್ಧಮಾಡುವವರೂ, ಅನ್ನವನ್ನು ಇಚ್ಛಿಸುವವರೂ ಆದ ಸಕಲ ಮಾನವವರ್ಗವೂ ಸಹ ಇಂದ್ರನ ಸಹಾಯವನ್ನೇ ಅಪೇಕ್ಷಿಸಿ ಅವನನ್ನೇ ಪ್ರಾರ್ಥಿಸಿ ಕರೆಯುತ್ತಾರೆ.

English Translation.

The most exalted, the most humble, (invoke) Indra; the middle (classes) invoke Indra; those going, those stopping, (invoke) Indra; those dwelling at home, those going to battle, (invoke) Indra; men needing food invoke Indra.



## ಇಪ್ಪತ್ತಾರನೆಯ ಸೂಕ್ತವು.



ಅಹಂ ಮನುರಿತಿ ಸಪ್ತರ್ಚಂ ಪಂಚಮಂ ಸೂಕ್ತಂ ವಾಮದೇವಸ್ಯಾರ್ಷಂ | ಅತ್ರೇಯಮನುಕ್ರಮಣಿಕಾ| ಅಹಂ ಮನುಃ ಸಪ್ತಾದ್ಯಾಭಿಸ್ತಿಸೃಭಿರಿಂದ್ರಮಿವಾತ್ಮಾನಮೃಷಿಸ್ತುಷ್ಟಾವೇಂದ್ರೋ ವಾತ್ಮಾನಂ ಪರಾ ನವಾಷ್ಟೌ ವಾ ಶ್ಯೇನಸ್ತುತಿರಿತಿ | ಅತ್ರಾಹಂ ಮನುರಿತ್ಯಾದ್ಯಾಭಿಸ್ತಿಸೃಭಿರಾತ್ಮಾನಮಿಂದ್ರರೂಪೇಣ ವಾಮದೇವಃ ಸ್ತುತವಾನ್ | ಯದ್ವಾ | ಇಂದ್ರ ಏವಾತ್ಮಾನಂ ಸ್ತುತವಾನ್ | ಅತೋ ವಾಮದೇವವಾಕ್ಯಪಕ್ಷೇ ವಾಮದೇವ ಋಷಿರಿಂದ್ರೋ ದೇವತಾ | ಇಂದ್ರವಾಕ್ಯಪಕ್ಷೇ ತ್ವಿಂದ್ರ ಋಷಿಃ ಪರಮಾತ್ಮಾ ದೇವತಾ | ತ್ರಿಷ್ಟುಪ್ ಛಂದಃ | ಅವಶಿಷ್ಟಾನಾಂ ವಾಮದೇವ ಋಷಿಃ | ಅವಶಿಷ್ಟಾಭಿರುತ್ತರಸೂಕ್ತೇನ ಚ ಸುಪರ್ಣಾತ್ಮನಾ ಬ್ರಹ್ಮ ಸ್ತೂಯತೇ | ಅತಸ್ತಾಸಾಂ ಪರಬ್ರಹ್ಮ ದೇವತಾ ‖ ಶ್ಯೇನನಾಮ್ನ್ಯೇಕಾಹೇ ಮಾಧ್ಯಂದಿನಸವನೇ ಮರುತ್ವತೀಯಶಸ್ತ್ರ ಇದಂ ಸೂಕ್ತಂ | ಸೂತ್ರಿತಂ ಚ | ಶ್ಯೇನಾಜಿರಾಭ್ಯಾಮಭಿಚರನ್ಯಜೇತಾಹಂ ಮನುರ್ಗರ್ಭೇ ನು ಸನ್ | ಆ. ೯-೭ | ಇತಿ ‖

ಅನುವಾದವು—ಅಹಂ ಮನುಃ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಅನುಕ್ರಮಣಿಕೆಯಲ್ಲಿ—ಅಹಂ ಮನುಃ ಸಪ್ತಾದ್ಯಾಭಿಸ್ತಿಸೃಭಿರಿಂದ್ರಮಿವಾಸ್ಮಾನಮೃಷಿಸ್ತುಷ್ಟಾವೇಂದ್ರೋ ವಾತ್ಮಾನಂ ಪರಾ ನವಾಷ್ಟೌ ವಾ ಶ್ಯೇನಸ್ತುತಿಃ ಎಂದು ಹೇಳಿರುವುದು ಇಲ್ಲಿ ಅಹಂ ಮನುಃ ಎಂದು ಮೊದಲಾಗುವ ಮೂರು ಋಕ್ಕುಗಳಿಂದ ವಾಮದೇವಋಷಿಯು ತನ್ನನ್ನು ಇಂದ್ರರೂಪದಿಂದ ಸ್ತುತಿಸುವನು. ಅಥವಾ ಇಂದ್ರನೇ ತನ್ನನ್ನು ಸ್ತುತಿಸಿಕೊಂಡಿರುವನು ಎಂದೂ ಹೇಳಬಹುದು. ಆದ್ದರಿಂದ ವಾಮದೇವನ ವಾಕ್ಯಪಕ್ಷದಲ್ಲಿ ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರನು ದೇವತೆಯು ಎಂದು ಹೇಳಬೇಕಾಗುವುದು. ಇಂದ್ರನ ವಾಕ್ಯಪಕ್ಷದಲ್ಲಿ ಈ ಸೂಕ್ತದ ಮೂರು ಋಕ್ಕುಗಳಿಗೆ ಇಂದ್ರನೇ ಋಷಿಯು; ಪರಮಾತ್ಮನು ದೇವತೆಯು ಎಂದು ಹೇಳಬೇಕು. ತ್ರಿಷ್ಟುಪ್‌ಛಂದಸ್ಸು, ಉಳಿದ ಋಕ್ಕುಗಳಿಗೆ ಎಂದರೆ ೪-೭ ಋಕ್ಕುಗಳಿಗೆ ವಾಮದೇವನು ಋಷಿಯು. ಈ ೪-೭ ಋಕ್ಕುಗಳಿಗೂ ಮುಂದಿನ ಸೂಕ್ತದ ಋಕ್ಕುಗಳಿಗೂ—ಇವುಗಳಲ್ಲಿ ಸುಪರ್ಣಾತ್ಮಕನಾದ ಬ್ರಹ್ಮನು ಸ್ತುತಿಸಲ್ಪಟ್ಟಿರುವುದರಿಂದ—ಪರಬ್ರಹ್ಮನೇ ದೇವತೆಯು. ಶ್ಯೇನವೆಂಬ ಒಂದು ದಿನದ ಮಟ್ಟಿಗೆ ಮಾಡಲ್ಪಡುವ ಯಾಗದ ಮಾಧ್ಯಂದಿನಸವನಕಾಲದಲ್ಲಿ ಮರುತ್ವತೀಯಶಸ್ತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಶ್ಯೇನಾಜಿರಾಭ್ಯಾಮಭಿಚರನ್ನೇತಾಹಂ ಮನುರ್ಗರ್ಭೇ ನು ಸನ್ ಎಂಬ ಸೂತ್ರದಿಂದ (ಆ. ೯-೭) ವಿವೃತವಾಗಿರುವುದು.

## ಸೂಕ್ತ—೨೬

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೬ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—೧-೩ ವಾಮದೇವ ಇಂದ್ರೋ ವಾ । ೪-೭ ವಾಮದೇವಃ ॥

॥ ದೇವತಾ—೧-೩ ಇಂದ್ರ ಆತ್ಮಾ ವಾ । ೪-೭ ಶ್ಯೇನಃ ॥

ಛಂದಃ :—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।
ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ॥

॥ ಪದಪಾಠಃ ॥

ಅಹಂ । ಮನುಃ । ಅಭವಂ । ಸೂರ್ಯಃ । ಚ । ಅಹಂ । ಕಕ್ಷೀವಾನ್ । ಋಷಿಃ । ಅಸ್ಮಿ । ವಿಪ್ರಃ ।
ಅಹಂ । ಕುತ್ಸಂ । ಆರ್ಜುನೇಯಂ । ನಿ । ಋಂಜೇ । ಅಹಂ । ಕವಿಃ । ಉಶನಾ । ಪಶ್ಯತ । ಮಾ ॥ ೧ ॥

॥ ಸಾಯಣಭಾಷ್ಯಂ ॥

ಇದಮಾದಿಮಂತ್ರತ್ರಯೇಣ ಗರ್ಭೇ ವಸನ್ವಾಮದೇವ ಉತ್ಪನ್ನತತ್ತ್ವಜ್ಞಾನಃ ಸನ್ ಸಾರ್ವಾತ್ಮ್ಯಂ ಸ್ವಾನುಭವಂ ಮನ್ವಾದಿರೂಪೇಣ ಪ್ರದರ್ಶಯನ್ನಾಹ । ಅಹಂ ವಾಮದೇವ ಇಂದ್ರೋ ವಾ ಮನುರಭವಂ । ಸರ್ವಸ್ಯ ಮಂತಾ ಪ್ರಜಾಪತಿರಸ್ಮಿ । ಅಹಮೇವ ಸೂರ್ಯಶ್ಚ ಸರ್ವಸ್ಯ ಪ್ರೇರಕಃ ಸವಿತಾ ಚಾಸ್ಮಿ । ವಿಪ್ರೋ ಮೇಧಾವೀ ಕಕ್ಷೀವಾನ್ ದೀರ್ಘತಮಸಃ ಪುತ್ರ ಏತತ್ಸಂಜ್ಞಕ ಋಷಿರಪ್ಯಹಮೇವಾಸ್ಮಿ । ಆರ್ಜುನೇಯಮರ್ಜುನ್ಯಾಃ ಪುತ್ರಂ ಕುತ್ಸಮೇತನ್ನಾಮಕಮೃಷಿಮಹಮೇವ ನ್ಯೃಂಜೇ । ನಿತರಾಂ ಪ್ರಸಾಧಯಾಮಿ । ಕವಿಃ ಕ್ರಾಂತದರ್ಶ್ಯುಶನೈತದಾಖ್ಯ ಋಷಿರಹಮೇವಾಸ್ಮಿ । ಉಕ್ತಮುಪಲಕ್ಷಣಂ । ಪರಮಾರ್ಥದೃಷ್ಟ್ಯಾ ಕೃತ್ಸ್ನಮಪ್ಯಹಮೇವಾಸ್ಮೀತ್ಯರ್ಥಃ । ಹೇ ಜನಾ ಮಾ ಮಾಂ ಸರ್ವಾತ್ಮಕಂ ಪಶ್ಯತ । ಯೂಯಮಪ್ಯೇವಮೇವ ಸಸ್ವರೂಪಮನುಭವತೇತ್ಯುಕ್ತಂ ಭವತಿ ॥

॥ ಪ್ರತಿಪದಾರ್ಥ ॥

ಅಹಂ—ವಾಮದೇವನೆಂದು ಪ್ರಸಿದ್ಧನಾದ ನಾನು । ಮನುಃ ಅಭವಂ—ಸಕಲವನ್ನೂ ತಿಳಿದ ಪ್ರಜಾಪತಿಯಾಗಿದ್ದೇನೆ । ಅಹಂ—ನಾನೇ । ಸೂರ್ಯಶ್ಚ—ಜಗತ್ಪ್ರೇರಕನಾದ ಸೂರ್ಯನೂ ಆಗಿದ್ದೇನೆ । ವಿಪ್ರಃ—ಮೇಧಾವಿಯೂ । ಕಕ್ಷೀವಾನ್—ಕಕ್ಷೀವಾನ್ ಎಂಬ ಹೆಸರುಳ್ಳವನೂ ಆದ । ಋಷಿಃ ಅಸ್ಮಿ—ಋಷಿಯೂ ನಾನೇ । ಆರ್ಜುನೇಯಂ—ಅರ್ಜುನಿಯ ಪುತ್ರನಾದ । ಕುತ್ಸಂ—ಕುತ್ಸನನ್ನು । ಅಹಂ—ನಾನೇ । ನ್ಯೃಂಜೇ—ಅತಿಯಾಗಿ ಅನುಗ್ರಹಿಸುತ್ತೇನೆ । ಕವಿಃ—ಕ್ರಾಂತದರ್ಶಿಯಾದ । ಉಶನಾ—ಉಶನಸ್ಸೆಂಬ ಋಷಿಯೂ । ಅಹಂ—ನಾನೇ ಆಗಿದ್ದೇನೆ । (ಎಲೈ ಮಾನವರೇ) ಮಾ—ನನ್ನನ್ನೇ (ಸರ್ವವ್ಯಾಪಿಯೂ ಸರ್ವಾತ್ಮನೂ ಆಗಿರುವವನೆಂದು) । ಪಶ್ಯತ—ತಿಳಿಯಿರಿ.

॥ ಭಾವಾರ್ಥ ॥

ವಾಮದೇವನೆಂಬ ಹೆಸರಿನಿಂದ ಪ್ರಸಿದ್ಧನಾದ ನಾನು ಸಕಲವನ್ನೂ ತಿಳಿದ ಪ್ರಜಾಪತಿಯಾಗಿದ್ದೇನೆ. ಜಗತ್ಪ್ರೇರಕನಾದ ಸೂರ್ಯನೂ ನಾನೇ. ಮೇಧಾವಿಯೂ, ಕಕ್ಷೀವಾನ್ ಎಂಬ ಹೆಸರುಳ್ಳ ಋಷಿಯೂ ನಾನೇ. ಅರ್ಜುನಿಯ ಪುತ್ರನಾದ ಕುತ್ಸನನ್ನು ಅನುಗ್ರಹಿಸಿದವನೂ ನಾನೇ. ಕ್ರಾಂತದರ್ಶಿಯಾದ ಉಶನಸ್ಸೆಂಬ ಋಷಿಯೂ ನಾನೇ. ಎಲೈ ಮಾನವರೇ, ನನ್ನನ್ನೇ ಸರ್ವವ್ಯಾಪಿಯೂ ಸರ್ವಾತ್ಮನೂ ಆಗಿರುವವನೆಂದು ತಿಳಿಯಿರಿ.

## English Translation.

I have been Manu and Surya: I am the wise Rishi, Kakshivath; I have befriended Kutsa, the son of Arjuni: I am the far-seeing Ushanas; so behold me.

॥ ವಿಶೇಷವಿಷಯಗಳು ॥

ಕಕ್ಷೀವಾನ್—ಉಶಿಜಃ ಪುತ್ರಃ ಕಕ್ಷೀವಾನಹಂ । ಉಶಿಕ್ ಎಂಬವಳ ಮಗನೂ, ಕಕ್ಷೀವಂತನೆಂಬ ಹೆಸರುಳ್ಳವನೂ ಆದ ನಾನು ಎಂದು ಈ ಸೂಕ್ತದ್ರಷ್ಟೃವಾದ ಋಷಿಯು ಹೇಳಿಕೊಳ್ಳುತ್ತಾನೆ. ಇವನು ದೀರ್ಘತಮಸ್ಸೆಂಬ ಋಷಿಯಿಂದ ಉಶಿಕ್ ಎಂಬವಳಲ್ಲಿ ಉತ್ಪನ್ನನಾದವನು ಎಂದು ಬೃಹದ್ದೇವತೆಯ ಆಧಾರದಿಂದ ತಿಳಿಯುತ್ತದೆ.

ಅಂಗರಾಜಗೃಹೇ ಯುಕ್ತಾಂ ಉಶಿಜಂ ಪುತ್ರಕಾಮಯಾ ।
ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾ ಮಹಾತಪಾಃ ॥
ಜನಯಾಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನ್ ಋಷೀನ್ ॥

(ಬೃ. ದೇ. ೪–೨೪, ೨೫)

ಅಂಗರಾಜನ ಮನೆಯಲ್ಲಿ ಕೆಲಸಕ್ಕೆ ಇದ್ದ ಉಶಿಕ್ ಎಂಬವಳನ್ನು ದೊರೆಯು ಪುತ್ರೇಚ್ಛೆಯಿಂದ ದೀರ್ಘತಮಸ್ ಎಂಬ ಋಷಿಯ ಸಮೀಪಕ್ಕೆ ಕಳುಹಿಸಿದನು. ಇವಳು ಬಹಳ ಭಕ್ತಿಯುತಳಾಗಿ ಅವನಿಗೆ ಸೇವೆಯನ್ನು ಸಲ್ಲಿಸುತ್ತಿದ್ದುದರಿಂದ ಅವನು ಸಂತುಷ್ಟನಾಗಿ ಇವಳಲ್ಲಿ ಕಕ್ಷೀವತ್ಪ್ರಮುಖರಾದ ಋಷಿಗಳನ್ನು ಉತ್ಪನ್ನಮಾಡಿದನು ಎಂದು ಕಥೆಯು ಉಕ್ತವಾಗಿದೆ.

ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।

(ಋ. ಸಂ. ೧–೧೧೬–೭)

ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿಜ್ಮನ್ ।

(ಋ. ಸಂ. ೧–೧೧೭–೬)

ಇತ್ಯಾದಿ ಋಕ್ಕುಗಳಿಂದ ಇವನು ಪಜ್ರ ಸಂತತಿಯವನೆಂದು ತಿಳಿಯುತ್ತದೆ.

ಮದಚ್ಯುತಃ ಕೃಶನಾವತೋ ಅತ್ಯಾನ್ಕಕ್ಷೀವಂತ ಉದಮೃಕ್ಷಂತ ಪಜ್ರಾಃ ।

(ಋ. ಸಂ. ೧–೧೨೬–೩)

ಎಂಬ ಋಕ್ಕಿನಲ್ಲಿ ಇವನ ವಂಶದಲ್ಲಿ ಉತ್ಪನ್ನರಾದವರೂ ಪಜ್ರರೆಂದೇ ಕರೆಯಲ್ಪಡುವುದಾಗಿ ತಿಳಿಯುತ್ತದೆ.

ಕಕ್ಷೀವಾನ್ ಎಂಬ ಹೆಸರಿನವನು ಒಬ್ಬ ರಾಜನು. ಇವನ ಉತ್ಪತ್ತಿಯ ಇತಿಹಾಸವು ಹೀಗಿದೆ—ಹಿಂದೆ ಅಂಗದೇಶದ ರಾಜನು ಒಂದುಸಾರಿ ಪತ್ನೀದಾಸೀಯರೊಡನೆ ಜಲಕ್ರೀಡಾರ್ಥವಾಗಿ ಗಂಗಾನದಿಗೆ ಹೋಗಿದ್ದನು. ಆ ಸಮಯಕ್ಕೆ ಸರಿಯಾಗಿ ದೀರ್ಘತಮನೆಂಬ ಋಷಿಯು ಒಂದು ದೋಣಿಯಲ್ಲಿ ತೇಲಿಕೊಂಡು ಬರುತ್ತಿದ್ದನು. ಆ ಋಷಿಯು ಅತಿದುರ್ಬಲನಾಗಿದ್ದುದರಿಂದ ಆ ಋಷಿಯ ಪತ್ನಿಪುತ್ರಾದಿಗಳು, ಇಂತಹ ದುರ್ಬಲನು ತಮಗೆ ಬೇಡವೆಂದು ಅವನನ್ನು ಒಂದು ದೋಣಿಯಲ್ಲಿಟ್ಟು ಗಂಗಾನದಿಗೆ ಎಸೆದಿದ್ದರು. ಅಂಗರಾಜನು ಅಕಸ್ಮಾತ್ತಾಗಿ ತಾನಿದ್ದ ಸ್ಥಳಕ್ಕೆ ದೋಣಿಯಲ್ಲಿ ಬಂದ ದೀರ್ಘತಮ ಋಷಿಯನ್ನು ನೋಡಿ, ಅತ್ಯಂತ ಸಂತೋಷದಿಂದ ವಂದಿಸಿ ಅವನನ್ನು ದೋಣಿಯಿಂದಿಳಿಸಿ ಪೂಜಿಸಿ, " ಸ್ವಾಮಿ, ನನಗೆ ಬಹುಕಾಲದಿಂದ ಮಕ್ಕಳಿಲ್ಲ. ಇದೋ ನನ್ನ ಪತ್ನಿಯು ಇಲ್ಲಿಯೇ ಇರುವಳು. ಇವಳಲ್ಲಿ ಒಬ್ಬ ಪುತ್ರನನ್ನು ಉತ್ಪಾದನೆ ಮಾಡಿ " ಎಂದು ಪ್ರಾರ್ಥಿಸಿಕೊಂಡನು ಆಗ ರಾಣಿಯು ಅತ್ಯಂತ ವೃದ್ಧನಾಗಿರುವ ಈ ಋಷಿಯನ್ನು ನೋಡಿ ಅವನೊಡನೆ ಕೂಡಲು ಇಷ್ಟಪಡದೆ ಉಶಿಕ್ ಎಂಬ ಹೆಸರಿನ ತನ್ನ ದಾಸಿಯೊಬ್ಬಳನ್ನು ಕಳುಹಿಸಿಕೊಟ್ಟಳು. ಸರ್ವಜ್ಞನಾದ ಆ ಮಹರ್ಷಿಯು ಆಕೆಯ ಮೇಲೆ ಮಂತ್ರಪೂತವಾದ ಜಲವನ್ನು ಪ್ರೋಕ್ಷಿಸಲು ಆ ದಾಸಿಯು ಋಷಿಪತ್ನಿಯಂತೆ ಕಂಗೊಳಿಸಿದಳು. ಆಕೆಯಲ್ಲಿ ಜನಿಸಿದ ಮಗನೇ ಕಕ್ಷೀವಾನ್ ಎಂಬ ಋಷಿಯು. ಈತನು ರಾಜಸೂಯವೇ ಮೊದಲಾದ ಅನೇಕ ಯಾಗಗಳನ್ನು ಮಾಡಿದನು. ಆ ಯಾಗಗಳಿಂದ ತೃಪ್ತನಾದ ಇಂದ್ರನು ಕಕ್ಷೀವಂತನಿಗೆ ವೃಚಯಾ ಎಂಬ ಹೆಸರಿನ ತರುಣಿಯೊಬ್ಬಳನ್ನು ಅನುಗ್ರಹಿಸಿಕೊಟ್ಟನು.

ಕಕ್ಷ್ಯಾ ಶಬ್ದಕ್ಕೆ ಕುದುರೆಯನ್ನು ಕಟ್ಟುವ ಹಗ್ಗ ಎಂದೂ ಅರ್ಥವಿದೆ. **ಕಕ್ಷೀವಾನ್ ಕಕ್ಷಾವಾನ್** (ನಿರು. ೬-೧೦) ಎಂದು ನಿರುಕ್ತವಚನವಿರುವುದು.

ಈ ಕಕ್ಷೀವಾನನ ಹೆಸರು ಋಗ್ವೇದ ಸಂ. ೧-೧೮-೧ ; ೧-೫೧-೧೩ ; ೧-೧೧೨-೧೧ ; ೧-೧೧೬-೭ ; ೧-೧೧೭-೬ ; ೧-೧೨೬-೩ ; ೪-೨೬-೩ ; ೮-೯-೧೦ ; ೯-೭೪-೮ ; ೧೦-೨೫-೧೦ ; ೧೦-೬೧-೧೬ ಎಂಬ ಋಕ್ಕುಗಳಲ್ಲಿಯೂ ಅಥರ್ವವೇದ ೪-೨೯-೫ರಲ್ಲಿಯೂ ಪಠಿತವಾಗಿದೆ, ಇವನ ವಂಶವು ಪಜ್ರ ಎಂದಿರಬೇಕು. ಏಕೆಂದರೆ ಇವನನ್ನು ಪಜ್ರಿಯ ಎಂದು ಋ. ಸಂ. ೧-೧೧೬-೭ ೧-೧೧೭-೬ ; ರಲ್ಲಿ ಕರೆಯಲಾಗಿದೆ ಮತ್ತು ಋ. ಸಂ. ೧-೧೨೬-೪ ರಲ್ಲಿ ಇವನ ಸಂತತಿಯವರನ್ನು ಪಜ್ರಾ ಎಂದೂ ಕರೆದಿದ್ದಾರೆ. ಋ. ಸಂ. ೧-೧೨೬ ನೇ ಸೂಕ್ತದಲ್ಲಿ ಈ ಋಷಿಯು ಸ್ವನಯ ಭಾವ್ಯ ಎಂಬ ರಾಜನು ತನಗೆ ಕೊಟ್ಟ ದಾನವಸ್ತುಗಳ ವಿಷಯವಾಗಿ ಪ್ರಶಂಸೆಮಾಡಿದಾನೆ. ಮತ್ತು ಸಾಂಖ್ಯಾಯನ ಶ್ರೌತಸೂತ್ರ. ೧೬-೪-೫ರಲ್ಲಿ ನಾರಾಶಂಸಸೂಕ್ತಗಳೆಂಬ ವೀರರನ್ನು ಪ್ರಶಂಸೆಮಾಡುವ ಮಂತ್ರಗಳ ಸಮುದಾಯದಲ್ಲಿ ಉಶಿಜ ಪುತ್ರನಾದ ಕಕ್ಷೀವಾನ್ ಎಂಬುವನು ಮಾಡಿದ ಸ್ವನಯಭಾವಯವ್ಯ ಎಂಬ ರಾಜನ ದಾನಪ್ರಶಂಸೆಯ ಮಂತ್ರವೂ ಸೇರಿರುವುದು. ಇವನು ವಯಸ್ಸಾದ ಮೇಲೆ ವೃಚಯಾ ಎಂಬ ಕನ್ಯೆಯನ್ನು ಮದುವೆಯಾದ ವಿಷಯವು (ಋ. ಸಂ. ೧-೫೧-೧೩) ಎಂಬ ಋಕ್ಕಿನಲ್ಲಿ ವರ್ಣಿತವಾಗಿದೆ. ಇವನು ಒಂದುನೂರು ವರ್ಷಗಳವರೆಗೆ ಜೀವಿಸಿದ್ದನೆಂದು ಋ. ಸಂ. ೯-೭೪-೮ ಋಕ್ಕಿನಿಂದ ತಿಳಿದುಬರುವುದು ಋ. ಸಂ. ೪-೨೬-೧ರಲ್ಲಿ ಇವನ ಹೆಸರು ಕುತ್ಸ ಮತ್ತು ಕವಿ ಉಶನಸ್ ಎಂಬವರೊಡನೆ ಸೂಚಿತವಾಗಿದೆ. ಋ. ಸಂ. ೮-೯-೧೦ ಎಂಬ ಒಂದು ಋಕ್ಕಿನಲ್ಲಲ್ಲದೆ ಮತ್ತೆಲ್ಲಿಯೂ ದೀರ್ಘತಮಸ್ ಎಂಬ ಋಷಿಯೊಡನೆ ಸಂಬಂಧವಿರುವ ವಿಷಯವು ಕಂಡುಬರುವುದಿಲ್ಲ. ಆದರೆ ಬೃಹದ್ದೇವತಾ ಎಂಬ ಶೌನಕೋಕ್ತಗ್ರಂಥದಲ್ಲಿ ಈ ಕಕ್ಷೀವಾನ್ ಎಂಬವನು ದೀರ್ಘತಮಸ್ಸೆಂಬ ಋಷಿಗೆ ಉಶಿಜೆ ಎಂಬ ದಾಸಿಯಲ್ಲಿ ಜನಿಸಿದ ಪುತ್ರನೆಂದು ಹೇಳಿರುವುದು. (ಬೃ. ದೇ ೪-೧೧)

Weber ಎಂಬ ಪಾಶ್ಚಾತ್ಯ ಪಂಡಿತನು ತೈ. ಸಂ. ೫-೬-೫-೩; ಕಾಠಕಸಂಹಿತಾ ೧೩-೩; ಪಂಚವಿಂಶ ಬ್ರಾಹ್ಮಣ ೨೫-೧೬-೩ ಎಂಬ ಮಂತ್ರಗಳ ಆಧಾರದ ಮೇಲೆ ಈ ಕಕ್ಷೀವಾನ್ ಎಂಬುವನು ಮೊದಲು ಕ್ಷತ್ರಿಯನಾಗಿದ್ದನೆಂದೂ, ಆದುದರಿಂದಲೇ ಇವನ ಹೆಸರು ಮೇಲೆ ಕೊಟ್ಟಿರುವ ಮಂತ್ರಗಳಲ್ಲಿ ಪರ, ಆತ್ಣಾರ, ವೀತಹವ್ಯ, ಶ್ರಾಯಸ, ತ್ರಸದಸ್ಯು, ಪೌರುಕುತ್ಸ ಎಂಬ ರಾಜರ ಜತೆಯಲ್ಲಿ ಪಠಿತವಾಗಿರುವುದೆಂದೂ ಅಭಿಪ್ರಾಯಪಡುವನು. ಈ ಋಷಿಯು ಋಗ್ವೇದದ ಪ್ರಥಮ ಮಂಡಲದಲ್ಲಿ ೧೧೬ ರಿಂದ ೧೨೫ ವರೆಗಿನ ಸೂಕ್ತಗಳಲ್ಲಿರುವ ೧೪೬ ಋಕ್ಕುಗಳಿಗೂ ೧೨೬ ನೆಯ ಸೂಕ್ತದಲ್ಲಿ ೧-೫ ಋಕ್ಕುಗಳಿಗೂ ಒಟ್ಟು ೧೫೧ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಇದಲ್ಲದೆ ಒಂಭತ್ತನೆಯ ಮಂಡಲದ ೭೪ ನೆಯ ಸೂಕ್ತದಲ್ಲಿರುವ ೯ ಋಕ್ಕುಗಳಿಗೆ ಕಕ್ಷೀವಾನ್ ದೈರ್ಘತಮಸಃ—ದೀರ್ಘತಮಸ್ಸೆಂಬ ಋಷಿಯ ಪುತ್ರನಾದ ಕಕ್ಷೀವಾನ್ ಎಂಬುವನು ಋಷಿಯೆಂದು ಹೇಳಲ್ಪಟ್ಟಿರುವುದರಿಂದ ಅಲ್ಲಿ ಔಶಿಜನೆಂಬ ವಿಶೇಷಣವಿಲ್ಲದಿದ್ದರೂ ಪ್ರಸಕ್ತವಾದ ಸೂಕ್ತದ ಋಷಿಯು ಅದಕ್ಕೂ ಋಷಿಯೆಂದು ಹೇಳಬಹುದು.

ಸಿಂಧೂನದಿಯ ದಡದಲ್ಲಿದ್ದ ಭಾವಯವ್ಯನ ಮಗನಾದ ಸ್ವನಯನು ತನಗೆ ಅತಿಪ್ರಭೂತವಾದ ದಾನವನ್ನು ಕೊಟ್ಟುದಾಗಿ ಪ್ರಶಂಶಿಸಿದಾನೆ. ಈ ದಾನವನ್ನು ಕೊಡಬೇಕಾದ ಸಂದರ್ಭವೂ, ಇವರಿಬ್ಬರಿಗೂ ಉಂಟಾದ ನಿಕಟವಾದ ಸಂಬಂಧವೂ ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆಯಿಂದ ತಿಳಿಯುತ್ತದೆ.

ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ ಸ್ವನಿಲಯಂ ಕಿಲ ।
ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ ॥
ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ ।
ಕ್ರೀಡಾರ್ಥಂ ಸಾನುಗೋಽಪಶ್ಯತ್ ಸಭಾರ್ಯಃ ಸಪುರೋಹಿತಃ ॥
ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ ।
ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ ॥
ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।
ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ ॥
ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।
ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ ॥
ತಾವತಶ್ಚ ರಥಾಞ್ಛ್ಯಾವಾನ್ವೀಡ್ವಂಗಾನ್ಸ್ವೈ ಚತುರ್ಯುಜಃ ।
ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ ॥
ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಪುನಃ ।
ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ ॥
ಶತಮಶ್ವಾಞ್ಛತಂ ನಿಷ್ಕಾನ್ ರಥಾನ್ ದಶ ವಧೂಮತಃ ।
ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯಧಿಕಂ ॥
ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।
ಪ್ರತಿಗೃಹ್ಯ ಚ ತುಷ್ಟಾವ ಪ್ರಾತಃ ಪಿತ್ರೇ ಶಶಂಸ ಚ ॥

(ಬೃ. ದೇ. ೩–೧೪೩ ರಿಂದ ೧೫೦)

ಗುರುವಿನ ಮನೆಯಲ್ಲಿ ವಿದ್ಯಾಭ್ಯಾಸವಾದ ಮೇಲೆ ಕಕ್ಷೀವಂತನು ಮನೆಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ಬಳಲಿದವನಾಗಿ ಕಾಡಿನಲ್ಲಿ ಮಲಗಿ ನಿದ್ರೆಹೋಗುತ್ತಿದ್ದನು. ಆಗ ಭಾವಯವ್ಯಪುತ್ರನಾದ ಸ್ವನಯನೆಂಬ ರಾಜನು ತನ್ನ ಪತ್ನೀಭೃತ್ಯಾದಿಪರಿವಾರಗಳೊಡನೆ ಕ್ರೀಡಾರ್ಥವಾಗಿ ಅಲ್ಲಿಗೆ ಬಂದಾಗ ಅವನನ್ನು ನೋಡಿದನು. ಅವನ ಸೌಂದರ್ಯವನ್ನು ನೋಡಿ ಸಂತೋಷಗೊಂಡು ವರ್ಣ ಮತ್ತು ಗೋತ್ರಗಳ ದೃಷ್ಟಿಯಿಂದ ತನಗೆ ಏನೂ ವಿರೋಧ ವಿಲ್ಲದಿದ್ದರೆ ಅವನಿಗೆ ಮಗಳನ್ನು ಕೊಟ್ಟು ವಿವಾಹವನ್ನು ಮಾಡಬೇಕೆಂದಿಚ್ಛಿಸಿ ಅವನನ್ನು ಎಬ್ಬಿಸಿ ಅವನ ವಂಶಾದಿಗಳ ವಿಷಯವನ್ನು ಪ್ರಶ್ನಿಸಿದನು. ಆಗ ಕಕ್ಷೀವಂತನು ತಾನು ಅಂಗೀರಸನ ವಂಶದವನೆಂದೂ ಉಚಥ್ಯ ಪುತ್ರನಾದ ದೀರ್ಘತಮಸ್ಸಿನ ಮಗನೆಂದೂ ಹೇಳಿದೊಡನೆಯೇ ಸ್ವನಯನನು ಅವನಿಗೆ ಅಲಂಕೃತರಾದ ಹತ್ತುಜನ ಕನ್ಯೆಯರನ್ನು ದಾನಮಾಡಿದನು. ಜೊತೆಯಲ್ಲಿಯೇ ಅಶ್ವಗಳನ್ನೂ, ರಥಗಳನ್ನೂ, ಧನವನ್ನೂ, ಅಜಾದಿಸಂಪತ್ತುಗಳನ್ನೂ ಪ್ರಭೂತ ವಾಗಿ ದಾನಮಾಡಿದನು. ಈ ವಿಷಯವು

ಅಮಂದಾನ್ತ್ಸ್ತೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।
ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥

ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।
ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋಽಜರಸಾ ತತಾನ ॥
(ಋ. ಸಂ. ೧–೧೨೬–೧ ಮತ್ತು ೨)

ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಋಕ್ಸಂಹಿತೆಯಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಸಹ ಇವನು ಪ್ರಾಜ್ಞನೂ, ಪೂಜ್ಯನೂ ಆದ ಋಷಿಯೆಂದು ಇವನನ್ನು ಪ್ರಶಂಸಿಸಿದೆ.

ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।
(ಋ. ಸಂ. ೪–೨೬–೧)

ಅಯಂ ಕಕ್ಷೀವತೋ ಮಹೋ ವಿ ವೋ ಮದೇ ಮತಿಂ ವಿಪ್ರಸ್ಯ ವರ್ಧಯದ್ವಿವಕ್ಷಸೇ ॥
(ಋ. ಸಂ. ೧೦–೨೫–೧೦)

ಇತ್ಯಾದಿ ಋಕ್ಕುಗಳಲ್ಲಿಯೂ ಮತ್ತು

ಏತಾಭಿರ್ಹಾಶ್ವಿನೋಃ ಕಕ್ಷೀವಾನ್ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ ।
(ಐ. ಬ್ರಾ. ೧–೨೧)

(ಋ. ಸಂ. ೧–೧೨೦–೧ ರಿಂದ ೯ ರವರೆಗೆ ಋಕ್ಕುಗಳನ್ನು ಪಠಿಸಿಕೊಂಡು) ಕಕ್ಷೀವಂತನು ಅಶ್ವನೀದೇವತೆಗಳ ನಿವಾಸಕ್ಕೆ ಹೋಗಿ ಸೇರಿ ಅವನಿಂದ ಅನುಗ್ರಹೀತನಾಗಿ ಇನ್ನೂ ಉತ್ತಮವಾದ ಲೋಕವನ್ನು ಸೇರಿದನು ಎಂದು ಐತರೇಯ ಬ್ರಾಹ್ಮಣದಲ್ಲಿಯೂ,

ಕಕ್ಷೀವಂತಂ ಯ ಔಶಿಜಃ । ಯೋ ದೇವಾನ್ಯೋಽಮೀವಹಾ ।
ವಸುವಿತ್ಪುಷ್ಟಿವರ್ಧನಃ । ಸ ನಃ ಸಿಷಕ್ತು ಯಸ್ತುರಃ ॥
(ಶ. ಬ್ರಾ. ೨–೩–೪–೩೫)

ಪುಷ್ಟಿವಂತನೂ, ಶತ್ರುನಾಶಕನೂ, ಧನದಾತನೂ, ಸಂಪದ್ವರ್ಧಕನೂ ಉಶಿಜೆಯ ಪುತ್ರನೂ ಆದ ಕಕ್ಷೀವಂತನು ನಮ್ಮೊಂದಿಗಿರಲಿ ಎಂದು ಶತಪಥಬ್ರಾಹ್ಮಣವಾಕ್ಯಗಳಲ್ಲಿಯೂ ಸಹ ಕಕ್ಷೀವಂತನು ಶ್ರೇಷ್ಠವಾದ ವ್ಯಕ್ತಿಯೆಂದು ಸ್ತುತಿಸಿದೆ.

ಯಾಭಿಸ್ತ್ರಿಮಂತುರಭವದ್ವಿಚಕ್ಷಣಸ್ತಾಭಿರೂಷು ಊತಿಭಿರಶ್ವಿನಾ ಗತಂ ।
(ಋ ಸಂ. ೧–೧೧೨–೩)

ಎಂಬ ಋಕ್ಕಿನಲ್ಲಿ ಕಕ್ಷೀವಂತನು ಪಾಕಯಜ್ಞ, ಹವಿರ್ಯಜ್ಞ ಮತ್ತು ಸೋಮಯಜ್ಞಗಳ ವಿಷಯದಲ್ಲಿ ಪೂರ್ಣವಾದ ಜ್ಞಾನವನ್ನು ಪಡೆದಿದ್ದನೆಂದು ಹೇಳಿದೆ. ಇವನು ಮೊದಲು ಅತ್ಯಂತ ಮೂಢನಾಗಿದ್ದುದರಿಂದ ಹೇಗಾದರೂ ಪ್ರಯತ್ನಿಸಿ ಭೂತಭವಿಷ್ಯದ್ವರ್ತಮಾನ ಕಾಲಗಳ ವ್ಯವಹಾರಗಳ ವಿಷಯಗಳಲ್ಲೆಲ್ಲಾ ಅಪ್ರತಿಹತವಾದ ಜ್ಞಾನವನ್ನು ಸಂಪಾದಿಸಬೇಕೆಂಬ ಉತ್ಕಟವಾದ ಇಚ್ಛೆಯುಂಟಾಗಿ ಅಶ್ವಿನೀದೇವತೆಗಳನ್ನುದ್ದೇಶಿಸಿ ಯಜ್ಞಮಾಡಿದ ನಂತರ ಅವರು ಸಂತುಷ್ಟರಾಗಿ ಇವನಿಗೆ ತ್ರಿಕಾಲವಿಷಯಕವಾದುದೂ, ಸರ್ವಾರ್ಥವಿಷಯಕವಾದುದೂ ಆದ ಜ್ಞಾನವನ್ನು ಅನುಗ್ರಹಿಸಿದರು ಎಂಬ ಕಥೆಯಿದೆ.

ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।
(ಋ. ಸಂ. ೧-೧೧೬-೭)

ಎಂಬಲ್ಲಿ ಕಕ್ಷಿವಂತನೇ ಈ ಕಥೆಯನ್ನು ಸೂಚಿಸಿದ್ದಾನೆ ಶ್ರಿಮಂತುಃ ವಿಚಕ್ಷಣಃ ಎಂಬ ವಿಶೇಷಣಗಳಿಂದ ಕಕ್ಷೀವಂತನು ಸರ್ವಾರ್ಥಗಳನ್ನು ತಿಳಿದವನು ; ಪ್ರಾಜ್ಞನು ಎಂದು ವಿದಿತವಾಗುತ್ತದೆ.

ಕುತ್ಸಂ—ಇಲ್ಲಿ ಕುತ್ಸ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದೆಂದು ಸಾಯಣರ ವಿವರಣೆಯು ತಿಳಿಸುತ್ತದೆ. ಮೊದಲನೆಯದಾಗಿ, ಕುತ್ಸಂ-ಕರ್ತನಸಾಧನಂ ಕತ್ತರಿಸುವ ಸಾಧನವಾದ ಎಂದು ವಜ್ರಾಯುಧಕ್ಕೆ ವಿಶೇಷಣವಾಗಿಯೂ ಎರಡನೆಯದಾಗಿ, ಕುತ್ಸಂ ಕುತ್ಸನಾಮಾನಂ ಋಷಿಂ । ಕುತ್ಸನೆಂಬ ಋಷಿಯನ್ನು ಎಂದೂ ವಿವರಿಸಿದ್ದಾರೆ. ಋಷಿಯೆಂದರ್ಥಮಾಡಿದರೆ ಶುಷ್ಣನೆಂಬ ಅಸುರನನ್ನು ಕೊಂದು ಕುತ್ಸನಿಗೆ ಸಹಾಯಮಾಡಿದನೆಂದು ಇಂದ್ರನ ಪ್ರಶಂಸೆಯಾಗುತ್ತದೆ.

ಆರ್ಜುನೇಯಂ ಕುತ್ಸನಿಗೂ, ಇಂದ್ರನಿಗೂ ಇರತಕ್ಕ ಸಂಬಂಧವು ಅತ್ಯಂತ ನಿಕಟವಾದುದೆಂದು ಋಕ್ಸಂಹಿತೆ ಯಲ್ಲಿರುವ ವರ್ಣನೆಗಳಿಂದ ತಿಳಿಯುತ್ತದೆ. ಕುತ್ಸನಿಗೆ ಆರ್ಜನೇಯ ಎಂಬ ವಿಶೇಷಣವು ಅನೇಕ ಕಡೆಗಳಲ್ಲಿರುತ್ತದೆ. ಆರ್ಜುನೇಯ ಎಂಬ ಪದಕ್ಕೆ ಅರ್ಜುನೀ ಎಂಬ ಹೆಂಗಸಿನ ಮಗನೆಂದಾಗಬಹುದು. ಅಥವಾ ಅರ್ಜುನ ಇತೀಂದ್ರಸ್ಯ ನಾಮ । ತಸ್ಯ ಪುತ್ರಃ; ಇಂದ್ರನಿಗೆ ಅರ್ಜುನನೆಂದು ಹೆಸರು. ಕುತ್ಸನು ಇವನ ಪುತ್ರನಾದುದರಿಂದ ಆರ್ಜುನೇಯ ನೆಂಬ ವಿಶೇಷಣವು ಸಹಜವಾಗಿದೆ ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಬಹುದು. ಇಂದ್ರನಿಗೆ ಅರ್ಜುನ ಎಂಬ ಹೆಸರುಂಟು ಎಂದು ಸಮರ್ಥಿಸಲು ಸಾಯಣರು ಕೆಲವೆಡೆಗಳಲ್ಲಿ,

ಏತದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನಃ ।

ಎಂಬ ವಾಜಸನೇಯ ಸಂಹಿತಾಮಂತ್ರವನ್ನುದಾಹರಿಸಿದ್ದಾರೆ. ಆದರೆ,

ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ।
(ಋ. ಸಂ. ೪-೨೬-೧)

ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ।
(ಋ. ಸಂ. ೭-೧೯-೨)

ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ।

ಎಂಬ ಋಕ್ಕುಗಳಲ್ಲಿ ಇರತಕ್ಕ ಆರ್ಜುನೇಯ ಪದಗಳಿಗೆಲ್ಲಾ ಸಾಯಣರೂ ಸಹ ಅರ್ಜುನ್ಯಾಃ ಪುತ್ರಂ ಕುತ್ಸಂ । ಅರ್ಜುನೀ ಎಂಬ ಹೆಂಗಸಿನ ಪುತ್ರನಾದ ಕುತ್ಸನೆಂದೇ ಅರ್ಥಮಾಡಿದ್ದಾರೆ. ಅರ್ಜುನ, ಅರ್ಜುನೀ ಎಂಬ ಪದಗಳೂ ಇಂದ್ರಸಂಬಂಧವಾದವು ಎಂದು ಶ್ರುತ್ಯಂತರಗಳಲ್ಲಿ ಹೇಳಿರುವುದರಿಂದ ಮೇಲಿನ ಎರಡು ವಿಧವಾದ ವಿವರಣೆ ಗಳೂ ಒಂದೇ ಅರ್ಥವನ್ನು ಕೊಡುವುವು ಎಂದು ಹೇಳಬಹುದು. ಉದಾಹರಣೆಗೆ—

ಫಲ್ಗುನೀಷ್ವಗ್ನೀ ಆದಧೀತ । ಏತಾ ವಾ ಇಂದ್ರನಕ್ಷತ್ರಂ ಯತ್ಫಲ್ಗುನ್ಯೋಽಪ್ಯಸ್ಯ ಪ್ರತಿ- ನಾಮ್ನ್ಯೋಽರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮಾರ್ಜುನ್ಯೋ ವೈ ನಾವೈತಾಸ್ತಾ ಏತತ್ಪರೋಕ್ಷಮಾಚಕ್ಷತೇ ಫಲ್ಗುನ್ಯ ಇತಿ ಕೋ ಹೇತಸ್ಯಾರ್ಹತಿ ಗುಹ್ಯಂ ನಾಮ........................ ।
(ಶ. ಬ್ರಾ. ೨-೧-೨-೧೧)

ಇಂದ್ರೋ ಭವತಿ ಯಚ್ಛ ಕ್ಷತ್ರಿಯೋ ಯದು ಚ ಯಜಮಾನಸ್ತಸ್ಮಾದಾಹಾರಿಷ್ವೋऽರ್ಜುನೇ ಇತಿ । (ಶ. ಬ್ರಾ. ೫-೪-೩-೭)

ಫಲ್ಗುನಿಗಳು ಐಂದ್ರನಕ್ಷತ್ರಗಳು. ಹೆಸರಿನಲ್ಲಿಯೂ ಹೊಂದಿಕೆಯಿದೆ. ಇಂದ್ರನಿಗೂ ಅರ್ಜುನನೆಂಬ ಹೆಸರು. ಫಲ್ಗುನಿಗಳಿಗೂ ಅರ್ಜುನಿಗಳೆಂಬ ಹೆಸರು ಎಂಬುದಾಗಿ ಶತಪಥಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ಹೇಳಿರುವುದರಿಂದ ಕುತ್ಸನನ್ನು ಇಂದ್ರಪುತ್ರ, ಅರ್ಜುನೀಪುತ್ರ ಎಂದು ಎರಡು ವಿಧವಾಗಿಯೂ ಕರೆಯಬಹುದೆಂದು ಹೇಳಬಹುದು. ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಕುತ್ಸನು ಇಂದ್ರನ ಸಹಾಯದಿಂದಲೇ ತನ್ನ ಶತ್ರುಗಳನ್ನು ಜಯಿಸುತ್ತಾನೆಂದು ಇಂದ್ರಕುತ್ಸರ ಸಂಬಂಧವನ್ನು ತೋರಿಸಿದೆ.

ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ । (ಋ. ೧-೬೩-೩)

ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ । (ಋ. ಸಂ. ೮-೧೨೧-೯)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ಇತರ ಅನೇಕ ಕಡೆಗಳಲ್ಲಿಯೂ ಇಂದ್ರನು ಕುತ್ಸನಿಗೆ ಸಹಾಯಮಾಡಲು ಶುಷ್ಣನನ್ನು ಕೊಂದನು ಎಂದು ವರ್ಣನೆಯಿದೆ, ಮತ್ತು,

ಅಹಂ ಪಿತೇವ ವೇತಸೂँರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ । (ಋ. ಸಂ. ೧೦-೪೯-೪)

ಕುತ್ಸನಿಗಾಗಿ ನಾನು ವೇತಸು, ತುಗ್ರ, ಸ್ಮದಿಭ್ಯ ಇತ್ಯಾದಿ ಶತ್ರುಗಳನ್ನೆಲ್ಲಾ ಸೋಲಿಸಿ, ತನ್ನ ಮಿತ್ರನಿಗೆ ಸಹಾಯ ಮಾಡಿದೆನು ಎಂದು ಇಂದ್ರನೇ ಹೇಳಿಕೊಂಡಿದ್ದಾನೆ. ಆದರೆ,

ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ । (ಋ. ಸಂ. ೧-೫೩-೧೦)

ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ । (ಋ. ಸಂ. ೮-೫೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಕುತ್ಸಾದಿಗಳನ್ನು ಸೋಲಿಸಿದುದಾಗಿಯೂ ವರ್ಣಿತವಾಗಿದೆ. ಇವನ ವಿಷಯದಲ್ಲಿ Keith ಎಂಬ ಪಂಡಿತನು ತನ್ನ Religion and Philosophy of the Vedas ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದ್ದಾನೆ—

Sushan's chief rival is Kutsa, who appears as battling against him, and as victor by the aid of Indra, who, for his sake tore from the Sun a wheel, prolonging the daylight and thus enabling, it may be assumed, Kutsa to turn the issue of the battle. The feat of Indra is several times mentioned and the fact that Kutsa is a real hero is suggested' though not proved, by the fact that elsewhere he appears in hostile relation to Indra, just as Athithigva, who is normally the protege of Indra, in one or two places apyears

in the reverse relation. It is true that it is not to be expected that a god, or a hero of divine dimensions, would be thus placed in opposition to the God, though, as the God is the uncertain Indra, the argument is by no means conclusive, Kutsa, in the case of his real personality must be a king, aud this is not inconsistent with his being called a seer : royal seers are not unknown :

(Harwad Oriental Series Vol. 31. p. 130),

॥ ಸಂಹಿತಾಪಾಠಃ ॥

ಅಹಂ ಭೂಮಿಮದದಾಮಾರ್ಯಾಯಾಹಂ ವೃಷ್ಟಿಂ ದಾಶುಷೇ ಮರ್ತ್ಯಾಯ।
ಅಹಮಪೋ ಅನಯಂ ವಾವಶಾನಾ ಮಮ ದೇವಾಸೋ ಅನು ಕೇತಮಾ-
ಯನ್ ॥ ೨ ॥

॥ ಪದಪಾಠಃ ॥

ಅಹಂ । ಭೂಮಿಂ । ಅದದಾಂ । ಆರ್ಯಾಯ । ಅಹಂ । ವೃಷ್ಟಿಂ । ದಾಶುಷೇ । ಮರ್ತ್ಯಾಯ ।
ಅಹಂ । ಅಪಃ । ಅನಯಂ । ವಾವಶಾನಾಃ । ಮಮ । ದೇವಾಸಃ । ಅನು । ಕೇತಂ । ಆಯನ್ ॥ ೨ ॥

॥ ಸಾಯಣಭಾಷ್ಯಂ ॥

ಅಹಂ ವಾಮದೇವ ಇಂದ್ರೋ ವಾ ಆರ್ಯಾಯ ಮನವೇ ಭೂಮಿಂ ಪೃಥ್ವೀಮದದಾಂ । ದತ್ತವಾನಸ್ಮಿ । ದಾಶುಷೇ ಹವಿರ್ದತ್ತವತೇ ಮರ್ತ್ಯಾಯ ಮನುಷ್ಯಾಯ ಯಜಮಾನಾಯ ವೃಷ್ಟಿಂ ಸಸ್ಯಾದ್ಯಭಿವೃದ್ಧ್ಯರ್ಥಂ ವೃಷ್ಟಿಲಕ್ಷಣಮುದಕಮಹಮೇವಾದದಾಂ । ಕಿಂಚ ಅಹಂ ವಾವಶಾನಾಃ ಶಬ್ದಾಯಮಾನಾ ಅಪ ಉದಕಾನ್ಯನಯಂ । ಸರ್ವಮಪಿ ಪ್ರದೇಶಮಗಮಯಂ । ದೇವಾಸೋ ವಹ್ನ್ಯಾದಯೋ ದೇವಾ ಮಮ ಕೇಶಂ ಮದೀಯಂ ಸಂಕಲ್ಪಮನ್ವಾಯನ್ । ಅನುಯಂತಿ ॥

॥ ಪ್ರತಿಪದಾರ್ಥ ॥

ಅಹಂ— ವಾಮದೇವನಾದ ನಾನು । ಆರ್ಯಾಯ— ಪೂಜ್ಯನಾದ ಮನುವಿಗೆ । ಭೂಮಿಂ— ಪೃಥ್ವಿಯನ್ನು । ಅದದಾಂ— ಕೊಟ್ಟಿದ್ದೇನೆ । ದಾಶುಷೇ— ಹವಿಸ್ಸನ್ನರ್ಪಿಸುವವನೂ । ಮರ್ತ್ಯಾಯ— ಮಾನವನೂ ಆದ ಯಜಮಾನನಿಗಾಗಿ । ವೃಷ್ಟಿಂ— ಮಳೆಯನ್ನು । ಅಹಂ— ನಾನೇ ಸುರಿಸಿದ್ದೇನೆ । ಅಹಂ— ನಾನೇ । ವಾವಶಾನಾಃ— ಶಬ್ದಮಾಡತಕ್ಕ । ಅಪಃ— ಉದಕಗಳನ್ನು । ಅನಯಂ— ಸಕಲ ಪ್ರದೇಶಗಳಲ್ಲಿಯೂ ಹರಡಿದ್ದೇನೆ ।

ದೇವಾಸಃ ಅಗ್ನ್ಯಾದಿ ದೇವತೆಗಳೂ ಸಹ । ಮಮ—ನನ್ನ । ಕೇತಂ—ಆದೇಶವನ್ನೇ (ಸಂಕಲ್ಪವನ್ನೆ) । ಅನು ಆಯನ್—ಪಾಲಿಸುತ್ತಾರೆ (ನೆರವೇರಿಸುತ್ತಾರೆ).

॥ ಭಾವಾರ್ಥ ॥

ವಾಮದೇವಾಖ್ಯನಾದ ನಾನು ಪೂಜ್ಯನಾದ ಮನುವಿಗೆ ಪೃಥ್ವಿಯನ್ನು ಕೊಟ್ಟಿದ್ದೇನೆ. ಹವಿಸ್ಸನ್ನ ರ್ಪಿಸುವವನೂ ಮಾನವನೂ ಆದ ಯಜಮಾನನಿಗಾಗಿ ನಾನೇ ಮಳೆಯನ್ನು ಸುರಿಸಿದ್ದೇನೆ. ಶಬ್ದಮಾಡತಕ್ಕ ಉದಕಗಳನ್ನೂ ಸಹ ಸಕಲ ಪ್ರದೇಶಗಳಲ್ಲಿಯೂ ಹರಿಯುವಂತೆ ಹರಡಿರುವವನೂ ನಾನೇ. ಅಗ್ನ್ಯಾದಿ ಸಕಲ ದೇವತೆಗಳೂ ನನ್ನ ಸಂಕಲ್ಪವನ್ನೇ ಪಾಲಿಸುತ್ತಾರೆ.

English Translation.

I gave the earth to the venerable (Manu): I have bestowed rain upon the mortal who presents (oblations); I have let forth the sounding waters: the gods obey my will.



॥ ಸಂಹಿತಾಪಾಠಃ ॥

ಅಹಂ ಪುರೋ ಮಂದಸಾನೋ ವ್ಯೈರಂ ನವ ಸಾಕಂ ನವತೀಃ ಶಂಬರಸ್ಯ ।
ಶತತಮಂ ವೇಶ್ಯಂ ಸರ್ವತಾತಾ ದಿವೋದಾಸಮತಿಥಿಗ್ವಂ ಯದಾವಂ ॥ ೩ ॥

॥ ಪದಪಾಠಃ ॥

ಅಹಂ । ಪುರಃ । ಮಂದಸಾನಃ । ವಿ । ಐರಂ । ನವ । ಸಾಕಂ । ನವತೀಃ । ಶಂಬರಸ್ಯ ।
ಶತಽತಮಂ । ವೇಶ್ಯಂ । ಸರ್ವಽತಾತಾ । ದಿವಃಽದಾಸಂ । ಅತಿಥಿಽಗ್ವಂ । ಯತ್ । ಆವಂ ॥ ೩ ॥

॥ ಸಾಯಣಭಾಷ್ಯಂ ॥

ಅಹಂ ವಾಮದೇವ ಇಂದ್ರೋ ವಾ ಮಂದಸಾನಃ ಸೋಮೇನ ಮಾದ್ಯನ್ನೇವ ನವಸಂಖ್ಯಾಕಾ ನವತೀರ್ನವತಿಸಂಖ್ಯಾಕಾಶ್ಚ ಶಂಬರಸ್ಯೈತನ್ನಾಮಕಸ್ಯಾಸುರಸ್ಯ ಸಂಬಂಧೀನಿ ಪುರಃ ಪುರಾಣಿ ಸಾಕಂ ಯುಗಪದೇವ ವ್ಯೈರಂ । ಅಧ್ವಂಸಯಂ । ಶತತಮಂ ಶತಸಂಖ್ಯಾಪೂರಣಂ ಪುರಂ ವೇಶ್ಯಂ ದಿವೋದಾಸನಾಮ್ನೋ ಪ್ರವೇಶಾರ್ಹಮಕರವಂ । ಸರ್ವತಾತಾ ಸರ್ವತಾತೌ ಯಜ್ಞೇಽತಿಥಿಗ್ವಮತಿಥೀನಾಮಭಿಗಂತಾರಂ ದಿವೋದಾಸಂ ದಿವೋದಾಸನಾಮಕಂ ರಾಜರ್ಷಿಂ ಯದಾವಂ ಅಪಾಲಯಂ । ತದಾ ಪುರೋ ವ್ಯೈರಮಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಸರ್ವತಾತಾ—ಸರ್ವರಕ್ಷಕವಾದ ಯಜ್ಞದಲ್ಲಿ । ಅತಿಥಿಗ್ವಂ—ಅತಿಥಿಗಳನ್ನು ಎದುರುಗೊಳ್ಳುವ । ದಿವೋದಾಸಂ—ದಿವೋದಾಸನೆಂಬ ರಾಜರ್ಷಿಯನ್ನು । ಯತ್—ಯಾವಾಗ । ಆವಂ—ರಕ್ಷಿಸಿದನೋ (ಆಗ) । ಅಹಂ—ವಾಮದೇವನೆಂದು ಪ್ರಸಿದ್ಧನಾದ ನಾನು (ಅಥವಾ ಇಂದ್ರಾತ್ಮಕನಾದ ನಾನು) । ಮಂದಸಾನಃ—ಸೋಮಪಾನದಿಂದ ಹರ್ಷಿತನಾಗಿ । ಶಂಬರಸ್ಯ—ಶಂಬರಾಸುರನಿಗೆ ಸೇರಿದವೂ । ನವ ನವತೀಃ—ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ ಆದ । ಪುರಃ—ಪಟ್ಟಣಗಳನ್ನು । ಸಾಕಂ—ಒಟ್ಟಿಗೆ । ವ್ಯೈರಂ—ನಾಶಮಾಡಿದೆನು । ಶತತಮಂ—ನೂರನೆಯ ಪಟ್ಟಣವನ್ನು । ವೇಶ್ಯಂ—ದಿವೋದಾಸನಿಗೆ ಪ್ರವೇಶಯೋಗ್ಯವಾಗುವಂತೆ ಮಾಡಿದೆನು.

॥ ಭಾವಾರ್ಥ ॥

ವಾಮದೇವನೆಂದು ಪ್ರಸಿದ್ಧನಾದ (ಇಂದ್ರಾತ್ಮಕನಾದ) ನಾನು ಸರ್ವರಕ್ಷಕವಾದ ಯಜ್ಞದಲ್ಲಿ ಅತಿಥಿಗಳನ್ನು ಸತ್ಕರಿಸುವ ದಿವೋದಾಸನೆಂಬ ರಾಜರ್ಷಿಯನ್ನು ರಕ್ಷಿಸಿದಾಗ, ಸೋಮಪಾನದಿಂದ ಹರ್ಷಿತನಾಗಿ ಶಂಬರಾಸುರನಿಗೆ ಸೇರಿದವೂ ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ ಆದ ಪಟ್ಟಣಗಳನ್ನು ಒಟ್ಟಿಗೆ ನಾಶಮಾಡಿದನು. ಮತ್ತು ನೂರನೆಯ ಪಟ್ಟಣವನ್ನು ದಿವೋದಾಸನಿಗೆ ವಾಸಯೋಗ್ಯವಾಗುವಂತೆ ಮಾಡಿದೆನು.

## English Translation.

Exhilarated (by the soma beverage) I have destroyed the ninety and nine citiies of Shambara; the hundredth I gave to be occupied by Divodasa when I protected him, Atithigva, at his sacrifice.

॥ ವಿಶೇಷವಿಷಯಗಳು ॥

ಶಂಬರಂ (ಅಹನ್)—ಇಂದ್ರ ಶತ್ರುವಾದ ಶಂಬರನ ವಿಷಯವನ್ನು ಋಕ್ಸಂಹಿತೆಯ ೧-೫೧-೬, ೧-೫೪-೪, ೧-೫೯-೬, ೧-೧೦೩-೮, ೧-೧೧೨-೧೪, ೧-೧೩೦-೭ ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ. ಸಾಧಾರಣವಾಗಿ ಶುಷ್ಣ, ಪಿಪ್ರು, ವರ್ಚಿ ಎಂಬ ಅಸುರರ ಜೊತೆಯಲ್ಲಿ ಇವನ ಹೆಸರು ಬರುವುದು ವಾಡಿಕೆ.

ಅವ ಗಿರೇರ್ದಾಸಂ ಶಂಬರಂ ಹನ್ಪ್ರಾವೋ ದಿವೋದಾಸಂ ಚಿತ್ರಾಭಿರೂತೀ ।

(ಋ. ಸಂ. ೬-೨೬-೫)

ಎಂಬ ಋಕ್ಕಿನಲ್ಲಿ ಇವನನ್ನು ದಾಸನೆಂದು ಕರೆದಿದೆ.

ದಿವೋದಾಸಾಯ ನವತಿಂ ಚ ನವೇಂದ್ರಃ ಪುರೋ ವ್ಯೈರಚ್ಛಂಬರಸ್ಯ ।

(ಋ ಸಂ. ೨-೧೯-೬)

ಅಧ್ವರ್ಯವೋ ಯಃ ಶತಂ ಶಂಬರಸ್ಯ ಪುರೋ ಬಿಭೇದಾಶ್ಮನೇವ ಪೂರ್ವೀಃ ।

(ಋ. ಸಂ. ೨-೧೪-೬)

ಇತ್ಯಾದಿ ಋಕ್ಕುಗಳಲ್ಲಿ ದಿವೋದಾಸನೆಂಬುವನು ಇಂದ್ರನ ಆಪ್ತಮಿತ್ರನೂ, ಶಂಬರನ ಶಾಶ್ವತವಾದ ಶತ್ರುವೂ ಆಗಿದ್ದು, ಆ ದಿವೋದಾಸನೆಂಬ ರಾಜನಿಗಾಗಿ ಇಂದ್ರನು ಶಂಬರನ ತೊಂಭತ್ತೊಂಭತ್ತು, ನೂರು (ಎಂದರೆ ಅಸಂಖ್ಯಾಕವಾದ) ಕೋಟೆಗಳನ್ನೆಲ್ಲಾ ಉರುಳಿಸಿ ಆವನ ಸ್ವತ್ತನ್ನು ಸ್ವಾಧೀನಪಡಿಸಿಕೊಂಡನು ಎಂಬ ವರ್ಣನೆಯಿದೆ. ಹೀಗೆಯೇ,

ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ।

(ಋ. ಸಂ. ೧-೧೩೦-೭)

ಉತ ದಾಸಂ ಕೌಲಿತರಂ ಬೃಹತಃ ಪರ್ವತಾದಧಿ ।
ಅವಾಹನ್ನಿಂದ್ರ ಶಂಬರಂ ॥

(ಋ. ಸ. ೪-೩೦-೧೪)

ಅವ ಗಿರೇರ್ದಾಸಂ ಶಂಬರಂ ಹನ್ಪ್ರಾವೋ ದಿವೋದಾಸಂ ಚಿತ್ರಾಭಿರೂತೀ ॥

(ಋ. ಸಂ. ೬-೨೬-೫)

ಇತ್ಯಾದಿ ಋಕ್ಕುಗಳಿಂದ ಶಂಬರನು ಬೆಟ್ಟಗುಡ್ಡಗಳಲ್ಲಿ ಅವಿತುಕೊಂಡು ಅತಿಥಿಗ್ವನಿಗೂ ದಿವೋದಾಸನಿಗೂ ಅತ್ಯಂತವಾಗಿ ಹಿಂಸೆಯನ್ನು ಕೊಡುತ್ತಿದ್ದುದರಿಂದ ಅವನನ್ನು ಇಂದ್ರನು ನಾಶಮಾಡಿ ಇವರಿಬ್ಬರಿಗೂ ತನ್ನ ರಕ್ಷಣೆಯನ್ನು ನೀಡಿದನು ಎಂದು ತಿಳಿಸಿದೆ. ಹೀಗೆಯೇ ಇನ್ನೂ ಅನೇಕ ಕಡೆಗಳಲ್ಲಿ ಶಂಬರನ ವಧದ ವಿಷಯವನ್ನು ತಿಳಿಸಿದೆ.



॥ ಸಂಹಿತಾಪಾಠಃ ॥

ಪ್ರ ಸು ಷ ವಿಭ್ಯೋ ಮರುತೋ ವಿರಸ್ತು ಪ್ರ ಶ್ಯೇನಃ ಶ್ಯೇನೇಭ್ಯ ಆಶುಪತ್ವಾ ।
ಅಚಕ್ರಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ॥ ೪ ॥

॥ ಪದಪಾಠಃ ॥

ಪ್ರ । ಸು । ಸಃ । ವಿಽಭ್ಯಃ । ಮರುತಃ । ವಿಃ । ಅಸ್ತು । ಪ್ರ । ಶ್ಯೇನಃ । ಶ್ಯೇನೇಭ್ಯಃ । ಆಶುಽಪತ್ವಾ ।
ಅಚಕ್ರಯಾ । ಯತ್ । ಸ್ವಧಯಾ । ಸುಽಪರ್ಣಃ । ಹವ್ಯಂ । ಭರತ್ । ಮನವೇ । ದೇವಽಜುಷ್ಟಂ ॥೪॥

॥ ಸಾಯಣಭಾಷ್ಯಂ ॥

ಅಥೈತದಾದಿಭಿಃ ಶ್ಯೇನಃ ಸ್ತೂಯತೇ । ಹೇ ಮರುತೋ ವೇಗೇನ ಮರುತ್ಸದೃಶಾಃ ಪಕ್ಷಿಣಃ ಸ ಪ್ರಸಿದ್ಧಃ ಶ್ಯೇನಾಖ್ಯೋ ವಿಃ ಪಕ್ಷೀ ವಿಭ್ಯಃ ಪಕ್ಷಿಭ್ಯೋ ಯುಷ್ಮತ್ತಃ ಪ್ರ ಸು ಅಸ್ತು । ಬಲೇನ ಪ್ರಕೃಷ್ಟೋ ಭವತು । ಕಿಂಚ ಶ್ಯೇನೇಭ್ಯಃ ಶಂಸನೀಯಗಮನೇಭ್ಯಃ ಸ್ವಸಮಾನಜಾತಿಭ್ಯಃ ಪಕ್ಷಿಭ್ಯಃ ಸಕಾಶಾದಾಶುಪತ್ವಾಶುಪತನಃ ಶೀಘ್ರಗಾಮೀ ಶ್ಯೇನಃ ಪ್ರಕೃಷ್ಟೋ ಭವತು । ಸುಪರ್ಣಃ ಶೋಭನಪತನೋ ಯದ್ಯದಾ

ಶ್ಯೇನೋಽಚಕ್ರಯಾ ಚಕ್ರವರ್ಜಿತಯಾ ಸ್ವಧಯಾ ರಥೇನ ದೇವಜುಷ್ಟಂ ದೇವೈಃ ಸೇವಿತಂ ಹವ್ಯಂ ಸೋಮಲಕ್ಷಣಂ ಹವಿರ್ಮನವೇ ಪ್ರಜಾಪತಯೇ ಭರತ್ ಅಹರತ್ ದ್ಯುಲೋಕಸಕಾಶಾದಾಹೃತವಾನ್ । ಅತ್ರ ಸ್ವಧಾಶಬ್ದೋ ರಥವಾಚ್ಯಚಕ್ರಯಾ ಸ್ವಧಯಾ ವರ್ತಮಾನಮಿತ್ಯಾದೌ । ಋಗ್ವೇ. ೧೦-೨೭-೧೯ । ದರ್ಶನಾತ್ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ಯತ್—ಯಾವ ಸ್ವಶಕ್ತಿಯಿಂದ । ಸುಪರ್ಣಃ—ಶ್ರೇಷ್ಠವಾದ ಪಕ್ಷಗಳುಳ್ಳ । ಶ್ಯೇನಃ—ಈ ಶ್ಯೇನಪಕ್ಷಿಯು । ಅಚಕ್ರಯಾ—ಚಕ್ರರಹಿತವಾದ । ಸ್ವಧಯಾ—ರಥದಿಂದ । ದೇವಜುಷ್ಟಂ—ದೇವತೆಗಳಿಂದ ಸೇವಿಸಲ್ಪಡುವ । ಹವ್ಯಂ—ಸೋಮರೂಪವಾದ ಅನ್ನವನ್ನು । ಮನವೇ—ಮನುರೂಪನಾದ ಪ್ರಜಾಪತಿಗೆ । ಭರತ್—ವಹಿಸಿಕೊಂಡು ಹೋಯಿತೋ (ಆದ್ದರಿಂದಲೇ) । ಆಶುಪತ್ವಾ—ಶೀಘ್ರವಾಗಿ ಸಂಚರಿಸತಕ್ಕ । ಸಃ ವಿಃ—ಅದೇ ಶ್ಯೇನಪಕ್ಷಿಯು । ಶ್ಯೇನೇಭ್ಯಃ ವಿಭ್ಯಃ—ಇತರ ಶ್ಯೇನಪಕ್ಷಿಗಳಿಗಿಂತಲೂ । ಪ್ರ ಸು ಅಸ್ತು—ಉತ್ಕೃಷ್ಟವಾದುದಾಗಿರಲಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಯಾವ ಸ್ವಶಕ್ತಿಯಿಂದ ಉತ್ತಮವಾದ ರೆಕ್ಕೆಗಳುಳ್ಳ ಈ ಶ್ಯೇನಪಕ್ಷಿಯು ಚಕ್ರರಹಿತವಾದ ರಥದಿಂದ ದೇವತೆಗಳ ಸೇವನಕ್ಕೆ ಯೋಗ್ಯವಾದ ಸೋಮರೂಪವಾದ ಅನ್ನವನ್ನು ಮನುರೂಪನಾದ ಪ್ರಜಾಪತಿಗೆ ವಹಿಸಿಕೊಂಡು ಹೋಯಿತೋ, ಆ ಕಾರಣದಿಂದಲೇ ಶೀಘ್ರವಾಗಿ ಸಂಚರಿಸತಕ್ಕ ಶ್ಯೇನ ಪಕ್ಷಿಯು ಇತರ ಶ್ಯೇನಪಕ್ಷಿಗಳಿಗಿಂತಲೂ ಶ್ರೇಷ್ಠವಾದುದಾಗಿರಲಿ.

## English Translation.

May this bird, Maruts, be pre-eminent over (other) hawks, since with a wheelless car the swift-winged bore the Soma, accepted by the gods to Manu.

॥ ವಿಶೇಷವಿಷಯಗಳು ॥

ಮನುಃ—ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ. ಮನುವು ಮಾನವ ಕುಲಕ್ಕೆ ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದು ತಿಳಿಯಬರುವುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯ ಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಅವನಿಗೆ ಯಾವ ದಾಯಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸ ಮುಗಿಸಿಕೊಂಡು ಬಂದು ತಂದೆಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಇವನನ್ನು—ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರು ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು ಹೇಳಿ ಕಳುಹಿಸಿದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ

ವಿವರಿಸಿರುವುದು. ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದ ದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩; ೬-೫-೧೫-೩; ೨-೫-೯-೧; ೨-೬-೭-೧; ೩-೩-೨-೧; ೫-೪-೧೦-೫; ೬-೬-೬-೧;) ಕಾಠಕಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨) ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು.

ಮನುವಿಗೆ ವಿವಸ್ವಾನ್ (ಋ. ಸಂ. ೮-೫೨-೧) ಎಂದೂ ವಿವಸ್ವಂತನ (ಒಬ್ಬ ದೇವತೆ) ಮಗನಾದುದ ರಿಂದ ವೈವಸತ್ವನೆಂದೂ (ಅಥ. ೮-೧೦-೨೪; ಶ. ಬ್ರಾ. ೧೩-೪-೩-೩) ಸುವರ್ಣಾ ಎಂಬುವಳ ವಂಶಸ್ಥನಾದು ದರಿಂದ ಸಾವರ್ಣಿ ಎಂದೂ, ಸಂವರಣನ ವಂಶಸ್ಥನಾದುದರಿಂದ ಸಾಂವರಣಿ (ಋ. ಸಂ. ೮-೫೧-೧) ಎಂದೂ ಅನೇಕ ಹೆಸರುಗಳಿವೆ.



॥ ಸಂಹಿತಾಪಾಠಃ ॥

ಭರದ್ಯದಿ ವಿರತೋ ವೇವಿಜಾನಃ ಪಥೋರುಣಾ ಮನೋಜವಾ ಅಸರ್ಜಿ ।
ತೂಯಂ ಯಯೌ ಮಧುನಾ ಸೋಮ್ಯೇನೋತ ಶ್ರವೋ ವಿವಿದೇ ಶ್ಯೇನೋ ಅತ್ರ ॥ ೫ ॥

॥ ಪದಪಾಠಃ ॥

ಭರತ್ । ಯದಿ । ವಿಃ । ಅತಃ । ವೇವಿಜಾನಃ । ಪಥಾ । ಉರುಣಾ । ಮನಃऽಜವಾಃ । ಅಸರ್ಜಿ ।
ತೂಯಂ । ಯಯೌ । ಮಧುನಾ । ಸೋಮ್ಯೇನ । ಉತ । ಶ್ರವಃ । ವಿವಿದೇ । ಶ್ಯೇನಃ । ಅತ್ರ ॥ ೫ ॥

॥ ಸಾಯಣಭಾಷ್ಯಂ ॥

ಯದಿ ಯದಾ ವಿಃ ಪಕ್ಷೀ ಶ್ಯೇನೋऽತೋऽಮುಷ್ಮಾದ್ದ್ಯುಲೋಕಾದ್ವೇವಿಜಾನಃ ಸೋಮಪಾಲ-ಕಾನ್ ಭೀಷಯನ್ ಭರತ್ । ಅಹರತ್ । ಸೋಮಮಾಹೃತವಾನ್ । ತದೋರುಣಾ ವಿಸ್ತೀರ್ಣೇನ ಪಥಾಂತರಿಕ್ಷಮಾರ್ಗೇಣ ಮನೋಜವಾ ಮನೋವದ್ವೇಗಯುಕ್ತಃ ಸನ್ ಅಸರ್ಜಿ । ಸಂಸೃಷ್ಟ ಆಸೀತ್ । ಸೋಮ್ಯೇನ ಸೋಮಮಯೇನ ಮಧುನಾನ್ನೇನ ಸಹ ತೂಯಂ ಕ್ಷಿಪ್ರಂ ಯಯೌ । ಜಗಾಮ । ಉತಾಪಿ ಚ ಅತ್ರಾಸ್ಮಿನ್ ಲೋಕೇ ಶ್ಯೇನಃ ಸುಪರ್ಣಃ ಶ್ರವಃ ಸೋಮಾಹರಣನಿಮಿತ್ತಂ ಯಶೋ ವಿವಿದೇ । ಲೇಭೇ ॥

॥ ಪ್ರತಿಪದಾರ್ಥ ॥

ಯದಿ—ಯಾವಾಗ । ವಿಃ—ಶ್ಯೇನಪಕ್ಷಿಯು । ಅತಃ—ದ್ಯುಲೋಕದಿಂದ । ವೇವಿಜಾನಃ—(ಸೋಮಪಾಲಕರನ್ನು) ಬೆದರಿಸಿ । ಭರತ್—(ಸೋಮವನ್ನು) ಅಪಹರಿಸಿತೋ (ಆಗ) । ಉರುಣಾ— ವಿಸ್ತೃತವಾದ । ಪಥಾ—ಅಂತರಿಕ್ಷಮಾರ್ಗದಿಂದ । ಮನೋಜವಾ—ಮನೋವೇಗದಲ್ಲಿ । ಅಸರ್ಜಿ—ಕೂಡಿಕೊಂಡು (ಅತಿಶಯವಾದ ವೇಗದಿಂದ) । ಸೋಮ್ಯೇನ—ಸೋಮಾತ್ಮಕವಾದ । ಮಧುನಾ—ಅನ್ನದೊಡನೆ (ಅಥವಾ ಮಧುರವಾದ ಸೋಮದೊಡನೆ) । ತೂಯಂ—ಕ್ಷಿಪ್ರವಾಗಿ । ಯಯೌ--ಹಾರಿಬಂದಿತು । ಉತ—ಮತ್ತು । ಅತ್ರ—ಈ ಲೋಕದಲ್ಲಿ । ಶ್ಯೇನಃ—ಶ್ಯೇನವು । ಶ್ರವಃ—ತನ್ನಿಮಿತ್ತವಾದ ಯಶಸ್ಸನ್ನು । ವಿವಿದೇ—ಪಡೆಯಿತು.

॥ ಭಾವಾರ್ಥ ॥

ಶ್ಯೇನಪಕ್ಷಿಯು ಸೋಮಪಾಲಕರನ್ನು ಬೆದರಿಸಿ ದ್ಯುಲೋಕದಿಂದ ಸೋಮವನ್ನು ಅಪಹರಿಸಿದಾಗ, ಅದೇ ಮಧುರವಾದ ಸೋಮದೊಡನೆ ಕೂಡಿಕೊಂಡು ವಿಸ್ತೃತವಾದ ಅಂತರಿಕ್ಷಮಾರ್ಗದಿಂದ ಮನೋವೇಗದಿಂದ ಅತಿಶಯವಾದ ವೇಗದಿಂದ ಹಾರಿಬಂದಿತು. ಆ ಕಾರಣದಿಂದಲೇ ಈ ಲೋಕದಲ್ಲಿ ಶ್ಯೇನವು ಅತಿಶಯವಾದ ಕೀರ್ತಿಯನ್ನು ಪಡೆಯಿತು.

## English Translation.

when the bird, intimidating (its guardians), carried off from hence (the Soma) it was at large: (flying) swift as thought along the vast path of the firmament), it went rapidly with the sweet Soma plant, and the hawks thence acquired celebrity in this world.

॥ ವಿಶೇಷವಿಷಯಗಳು ॥

ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಪೂರ್ವದಲ್ಲಿ ಸೋಮವು ದೇವಲೋಕದಲ್ಲಿ ಇದ್ದಿತಷ್ಟೆ. ಅದನ್ನು ಭೂಮಿಗೆ ತರಬೇಕೆಂದು ದೇವತೆಗಳು ಯೋಚಿಸಿ ಇದನ್ನು ತರಲು ಶಕ್ತರಾರು ಎಂದು ಆಲೋಚಿಸಿದಾಗ ಗಾಯತ್ರ್ಯಾದಿಛಂದಸ್ಸುಗಳೇ ಸೋಮವನ್ನು ತರಲು ಸಮರ್ಥವಾಗಿರುವವು ಎಂದು ನಿಶ್ಚಯಿಸಲಾಯಿತು.

ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾऽಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮಿಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾ ಸತೀ ಸಾऽಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಃ ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯರುಂಧತ ತದಜಾಯಾ ಅಜತ್ವಗ್ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ

ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಹಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನಮೃಜೀಷ-ಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನಯತಿ ಸಶುಕ್ರತ್ವಾಯೊಥೋ ಸಂಭರತ್ಯೇವೈನತ್ ।

(ತೈ. ಸಂ. ೬-೧-೬-೨, ೩, ೪, ೫)

ಆಗ ಮೊದಲು ಜಗತೀ ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೊರಟು ಅಂತರಿಕ್ಷಕ್ಕೆ ನೆಗೆಯಿತು. ಆ ಕಾಲದಲ್ಲಿ ಜಗತೀಛಂದಸ್ಸಿನ ಒಂದೊಂದು ಪಾದಕ್ಕೂ ಹದಿನಾಲ್ಕು ಅಕ್ಷರಗಳಿದ್ದುವು. ಆದರೆ ಸೋಮವನ್ನು ತರಲು ಸಾಧ್ಯವಾಗದೆ ಬಳಲಿ ಆಯಾಸದಿಂದ ಹಿಂದಕ್ಕೆ ಬಂದಿತು. ಆಗ ಅದು ಹದಿನಾಲ್ಕು ಅಕ್ಷರಗಳಲ್ಲಿ ಎರಡು ಅಕ್ಷರಗಳನ್ನು ಕಳೆದುಕೊಂಡಿತು. ಆದರೆ ಬರುವಾಗ ಅಲ್ಲಿದ್ದ ಯಜ್ಞಪಶುಗಳನ್ನೂ ದೀಕ್ಷಾಕ್ರಮವನ್ನು (ಯಜ್ಞದಲ್ಲಿ ದೀಕ್ಷೆವಹಿಸುವ ವಿಧಿ) ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಲೋಕದಲ್ಲಿ ಜಗತೀಛಂದಸ್ಸು ಬಹುಪಶುಗಳುಳ್ಳದೆಂದು ಪ್ರಸಿದ್ಧಿಯಾಯಿತು. ಮತ್ತು ಪಶುಸಂಪತ್ತಿನಿಂದ ಕೂಡಿದ ಯಜಮಾನನನ್ನು ದೀಕ್ಷೆಯು ಅನುಸರಿಸಿಯೇ ಇರುವುದು. ಅನಂತರ ತ್ರಿಷ್ಟುಪ್‌ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಅಂತರಿಕ್ಷಕ್ಕೆ ನೆಗೆಯಿತು. ಆಗ ತ್ರಿಷ್ಟುಪ್‌ಛಂದಸ್ಸಿನ ಒಂದೊಂದು ಪಾದಕ್ಕೂ ಹದಿಮೂರು ಅಕ್ಷರಗಳಿದ್ದವು. ತ್ರಿಷ್ಟುಪ್ ಛಂದಸ್ಸೂ ಸಹ ಸೋಮವನ್ನು ತರಲಾರದೆ ಬಳಲಿ ಬೆಂಡಾಗಿ ತನ್ನಲ್ಲಿದ್ದ ಹದಿಮೂರು ಅಕ್ಷರಗಳಲ್ಲಿ ಎರಡಕ್ಷರಗಳನ್ನು ಕಳೆದುಕೊಂಡು ಹಿಂತಿರುಗಿ ಬಂದಿತು. ಬರುವಾಗ ಯಜ್ಞದಕ್ಷಿಣೆಯನ್ನೂ ತಪಸ್ಸನ್ನೂ ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಯಜ್ಞಮಾಡುವಾಗ ಮಾಧ್ಯಂದಿನಸವನದಲ್ಲಿ (ಋತ್ವಿಗ್ಜನರಿಗೆ) ದಕ್ಷಿಣೆಗಳನ್ನು ಕೊಡುವರು. ತನ್ನಲ್ಲಿರುವ ವಸ್ತುವನ್ನು ದಾನಮಾಡುವುದೇ ತಪಸ್ಸೆಂದು ಹೇಳಲ್ಪಡುವುದು. ಅನಂತರ ಗಾಯತ್ರೀಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೋರಟು ಅಂತರಿಕ್ಷಕ್ಕೆ ಶ್ಯೇನಪಕ್ಷಿರೂಪದಿಂದ ಹಾರಿತು. ಆಗ ಗಾಯಿತ್ರೀ ಛಂದಸ್ಸಿಗೆ ಒಂದೊಂದುಪಾದಕ್ಕೆ ನಾಲ್ಕು ಅಕ್ಷರಗಳಿದ್ದುವು. ಹೊರಡುವಾಗ ಗಾಯಿತ್ರಿಯು ತನ್ನ ಜೊತೆಯಲ್ಲಿ ಸಹಾಯಕ್ಕಾಗಿ ಪ್ರಕಾಶಮಾನವಾದ ಒಂದು ಹೆಣ್ಣು ಆಡನ್ನು ತೆಗೆದುಕೊಂಡುಹೋಯಿತು. ಆ ಆಡು ಸೋಮವನ್ನು ತರುವಾಗ ಗಾಯತ್ರಿಗೆ ಸಹಾಯಮಾಡಿತು. ಆದುದರಿಂದ ಆಡಿಗೆ ಅಜಾ ಎಂಬ ಹೆಸರು ಪ್ರಸಿದ್ಧವಾಯಿತು. ಅನಂತರ ಗಾಯತ್ರಿಯು ಸ್ವರ್ಗದಲ್ಲಿದ್ದ ಸೋಮವನ್ನೂ ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಕಳೆದುಕೊಂಡಿದ್ದ ನಾಲ್ಕು ಅಕ್ಷರಗಳನ್ನೂ ಹಿಂದಕ್ಕೆ ತಂದಿತು. ತಾನು ಹಿಂದಕ್ಕೆ ತಂದ ನಾಲ್ಕು ಅಕ್ಷರಗಳೂ ಸೇರಿ ಗಾಯತ್ರಿಗೆ ಎಂಟು ಅಕ್ಷರಗಳಾದುವು. (ಜಗತೀ ಛಂದಸ್ಸಿಗೆ ಹನ್ನೆರಡು ಅಕ್ಷರಗಳೂ ತ್ರಿಷ್ಟುಪ್ ಛಂದಸ್ಸಿಗೆ ೧೧ ಅಕ್ಷರಗಳೂ ಆದವು) ಬ್ರಹ್ಮವಾದಿಗಳು ಹೇಳುವಂತೆ ಇಲ್ಲಿ ಒಂದು ಸಂಶಯವು ತಲೆದೋರುವುದು· ಗಾಯತ್ರೀಛಂದಸ್ಸು ಎಲ್ಲಾ ಛಂದಸ್ಸುಗಳಿಗಿಂತಲೂ ಬಹಳ ಚಿಕ್ಕದಾಗಿದ್ದರೂ ಯಜ್ಞದಲ್ಲಿ ಹೇಗೆ ಪ್ರಾಮುಖ್ಯತೆಯನ್ನು ಪಡೆಯಿತು ? ಎಂದರೆ, ಈ ಗಾಯತ್ರಿಯು ಸೋಮವನ್ನು ತಂದಿತು. ಆದುದರಿಂದ ಯಜ್ಞಕರ್ಮಗಳಲ್ಲಿ ಗಾಯತ್ರಿಗೇ ಪ್ರಾಧಾನ್ಯತೆಯು ಉಂಟಾಗಿರುವುದು ಮತ್ತು ಇದು ಬಹಳ ತೇಜಸ್ಸಿನಿಂದಲೂ ಬೆಳಗುತ್ತಿರುವುದು. ಈ ಗಾಯತ್ರಿಯು ಸ್ವರ್ಗದಿಂದ ಸೋಮವನ್ನು ತರುವಾಗ ಶ್ಯೇನಪಕ್ಷಿಯ ರೂಪವನ್ನು ಧರಿಸಿ ತನ್ನ ಎರಡು ಪಾದಗಳಿಂದ (ಗಾಯತ್ರಿಯ ಎಂಟು ಅಕ್ಷರಗಳ ಮೂರುಪಾದಗಳಲ್ಲಿ ಎರಡು ಕಾಲುಗಳೆಂದೂ ಮೂರನೆಯದು ಮುಖವೆಂದೂ

ಹೇಳಲ್ಪಡುವುದು) ಪ್ರಾತಸ್ಸವನ ಮತ್ತು ಮಾಧ್ಯಂದಿನಸವನ ಎಂಬ ಎರಡು ವಿಧವಾದ ಸವನಗಳನ್ನು ಹಿಡಿದು ಕೊಂಡೂ ಮುಖದಿಂದ (ಕೊಕ್ಕಿನಿಂದ) ಮೂರನೆಯದಾದ ತೃತೀಯಸವನವನ್ನು ಕಚ್ಚಿಕೊಂಡೂ ತಂದಿತು. ಕಾಲುಗಳಲ್ಲಿ ಹಿಡಿದಿದ್ದ ಪ್ರಾತಸ್ಸವನ ಮತ್ತು ಮಾಧ್ಯಂದಿನ ಸವನಗಳು ಏನೂ ವ್ಯತ್ಯಾಸವನ್ನು ಹೊಂದದೆ ಹಾಗೆಯೇ ಇದ್ದುದರಿಂದ ಆ ಎರಡು ಸವನಗಳಲ್ಲಿಯೂ ಸೋಮಲತೆಗಳನ್ನು ಜಜ್ಜಿ ಪ್ರಕಾಶಮಾನವಾದ ಮತ್ತು ಶುದ್ಧವಾದ ರಸವನ್ನು ಹಿಂಡಿ ತೆಗೆಯುವರು. ಆದರೆ ಕೊಕ್ಕಿನಿಂದ ತೃತೀಯಸವನನನ್ನು ತರುವಾಗ ಆ ಸೋಮಲತೆಯನ್ನು ಸ್ವಲ್ಪ ಮಟ್ಟಿಗೆ ಕಚ್ಚಿ ರಸವನ್ನು ಹಿಂಡಿ ಪಾನಮಾಡಿತೆಂದು ಭಾವಿಸುವುದರಿಂದ ತೃತೀಯಸವನಕಾಲದಲ್ಲಿ ಹೊಸ ಸೋಮಲತೆಗಳನ್ನು ಉಪಯೋಗಿಸದೆ, ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ರಸವನ್ನು ಒಂದಾವರ್ತಿ ಹಿಂಡಿ ತೆಗೆದು ಉಳಿದ ಸಿಪ್ಪೆಯಂತಿರುವ (ಋಜೀಷ) ಜಜ್ಜಿದ ಲತೆಗಳಿಂದಲೇ ಅಳಿದುಳಿದಿರುವ ರಸವನ್ನು ಮತ್ತೊಂದಾವರ್ತಿ ಚೆನ್ನಾಗಿ ಹಿಂಡಿ ತೆಗೆಯುವರು. ಹೀಗೆ ತೆಗೆಯುವ ರಸವು ಹೆಚ್ಚಾಗಿರುವುದಿಲ್ಲವಾದ್ದರಿಂದ ಇದರ ಜೊತೆಗೆ ಆಶಿರದ್ರವ್ಯಗಳನ್ನು (ಹಾಲು, ಮೊಸರು, ಹಿಟ್ಟು) ಸೇರಿಸಿ ಪಾನಯೋಗ್ಯವಾಗುವಂತೆ ಮಾಡುವರು.



॥ ಸಂಹಿತಾಪಾಠಃ ॥

ಋಜೀಪೀ ಶ್ಯೇನೋ ದದಮಾನೋ ಅಂಶುಂ ಪರಾವತಃ ಶಕುನೋ ಮಂದ್ರಂ ಮದಂ ।
ಸೋಮಂ ಭರದ್ದಾದೃಹಾಣೋ ದೇವಾವಾನ್ದಿವೋ ಅಮುಷ್ಮಾದುತ್ತರಾ-ದಾದಾಯ ॥ ೬ ॥

॥ ಪದಪಾಠಃ ॥

ಋಜೀಪೀ । ಶ್ಯೇನಃ । ದದಮಾನಃ । ಅಂಶುಂ । ಪರಾವತಃ । ಶಕುನಃ । ಮಂದ್ರಂ । ಮದಂ । ಸೋಮಂ । ಭರತ್ । ದದೃಹಾಣಃ । ದೇವವಾನ್ । ದಿವಃ । ಅಮುಷ್ಮಾತ್ । ಉತ್ಽತರಾತ್ । ಆದಾಯ ॥ ೬ ॥

॥ ಸಾಯಣಭಾಷ್ಯಂ ॥

ಋಜೀಪ್ಯೃಜುಗಾಮೀ ಪರಾವತೋ ದೂರಾದಂಶುಂ ಸೋಮಂ ದದಮಾನೋ ಧಾರಯನ್ ಶ್ಯೇನಃ ಶಂಸನೀಯಗಮನೋ ದೇವವಾನ್ದೇವೈಃ ಸಹಿತಃ ಶಕುನಃ ಪಕ್ಷೀ ಮಂದ್ರಂ ಮದನೀಯಂ ಸ್ತುತ್ಯಂ

ಮದಂ ಮದಕರಂ ಸೋಮಮುತ್ತರಾದುದ್ಗತತರಾದಮುಷ್ಮಾದ್ದಿವೋ ದ್ಯುಲೋಕಾದಾದಾಯ ಸ್ವೀಕೃತ್ಯ ದದೃಹಾಣೋ ದೃಢೀಭವನ್ ಭರತ್ । ಅಹರತ್ ॥

॥ ಪ್ರತಿಪದಾರ್ಥ ॥

ಋಜೀಪೀ—ನೇರವಾಗಿ ಹಾರತಕ್ಕದ್ದೂ । ಶ್ಯೇನಃ—ಪ್ರಶಸ್ಯವಾದ ಗಮನವುಳ್ಳದ್ದೂ ಆದ । ಶಕುನಃ—(ಅದೇ) ಪಕ್ಷಿಯು । ಪರಾವತಃ—ಅತ್ಯಂತ ದೂರಪ್ರದೇಶದಿಂದ । ಅಂಶುಂ—ಸೋಮಲತೆಯನ್ನು । ದಧಮಾನಃ-ಹೊತ್ತುಕೊಂಡು ಬಂದಿತು । ದೇವವಾನ್—ದೇವತೆಗಳೊಡನೆ ಕೂಡಿಕೊಂಡು । ಮದಂ—ಹರ್ಷಜನಕವಾದುದೂ। ಮಂದ್ರಂ—ಪ್ರಶಸ್ಯವಾದುದೂ ಆದ । ಸೋಮಂ—ಸೋಮವನ್ನು । ಉತ್ತರಾತ್—ಅತ್ಯಂತ ಉನ್ನತ ಪ್ರದೇಶವೂ । ಅಮುಷ್ಮಾತ್—ದೂರದೇಶದಲ್ಲಿರುವುದೂ ಆದ । ದಿವಃ—ದ್ಯುಲೋಕದಿಂದ । ಆದಾಯ—ತೆಗೆದುಕೊಂಡು । ದದೃಹಾಣಃ—ದೃಢಸಂಕಲ್ಪದೊಡನೆ । ಭರತ್—ಅಪಹರಿಸಿತು.

॥ ಭಾವಾರ್ಥ ॥

ವಕ್ರಗಮನವಿಲ್ಲದೇ ನೇರವಾಗಿ ಹಾರತಕ್ಕದ್ದೂ, ಪ್ರಶಸ್ಯವಾದ ಹಾರಾಟವುಳ್ಳದ್ದೂ ಆದ ಅದೇ ಶ್ಯೇನ ಪಕ್ಷಿಯು ಸೋಮಲತೆಯನ್ನು ಅತ್ಯಂತ ದೂರಪ್ರದೇಶದಿಂದ ಹೊತ್ತುಕೊಂಡು ಬಂದಿತು. ಪ್ರಶಸ್ಯವಾದುದೂ ಹರ್ಷಜನಕವಾದುದೂ ಆದ ಸೋಮವನ್ನು ಅತ್ಯಂತ ಉನ್ನತಪ್ರದೇಶವಾದ ದ್ಯುಲೋಕದಿಂದ ತೆಗೆದುಕೊಂಡು ದೃಢಸಂಕಲ್ಪದೊಡನೆ ಅಪಹರಿಸಿತು.

English Translation.

The straight-flying hawk, conveying the Soma plant from afar; the bird, attended by the gods, brought, resolute of purpose, the adorable exhilarating Soma, having taken it from that lofty heaven.

॥ ಸಂಹಿತಾಪಾಠಃ ॥

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।
ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥

॥ ಪದಪಾಠಃ ॥

ಆ‿ದಾಯ । ಶ್ಯೇನಃ । ಅಭರತ್ । ಸೋಮಂ । ಸಹಸ್ರಂ । ಸವಾನ್ । ಅಯುತಂ । ಚ । ಸಾಕಂ ।
ಅತ್ರ । ಪುರಂ‿ಧಿಃ । ಅಜಹಾತ್ । ಅರಾತೀಃ । ಮದೇ । ಸೋಮಸ್ಯ । ಮೂರಾಃ । ಅಮೂರಃ ॥ ೭ ॥

॥ ಸಾಯಣಭಾಷ್ಯಂ ॥

ಶ್ಯೇನಃ ಶಂಸನೀಯಗಮನಃ ಪಕ್ಷೀ ಸವಾನ್ ಸವಾನಾಂ ಯಜ್ಞಾನಾಂ ಸಹಸ್ರಂ ಸಹಸ್ರಸಂಖ್ಯಾಕಮಯುತಂ ಚಾಯುತಸಂಖ್ಯಾಕಂ । ಅಪರಿಮಿತಸಂಖ್ಯಾಕಮಿತ್ಯರ್ಥಃ । ಸಾಕಂ ಸಹ ಸೋಮಂ ಸೋಮಲಕ್ಷಣಮನ್ನಮಾದಾಯೋದಾನಂ ಕೃತ್ವಾಭರತ್ । ಆಹರತ್ । ಆಜಹಾರ । ಅತ್ರಾಸ್ಮಿನ್ ಸೋಮ ಆಹೃತೇ ಸತಿ ಪುರಂಧಿಃ ಪುರಂಧೀರ್ಬಹುಕರ್ಮಾಮೂರೋಽಮೂಢಃ ಪ್ರಾಜ್ಞ ಇಂದ್ರಃ ಸೋಮಸ್ಯ ಸಂಬಂಧಿನಿ ಮದೇ ಹರ್ಷೇ ಸತಿ ಮೂರಾ ಮೂಢಾ ಅರಾತೀಃ ಶತ್ರೂನಜಹಾತ್ । ಅತ್ಯಜತ್ । ಜಘಾನೇತ್ಯರ್ಥಃ ॥ ಅತ್ರಾರಾತಿಶಬ್ದಃ ಸ್ತ್ರೀಲಿಂಗಃ ॥

॥ ಪ್ರತಿಪದಾರ್ಥ ॥

ಶ್ಯೇನಃ—ಶ್ಯೇನಪಕ್ಷಿಯು । ಸಾಕಂ—ತನ್ನೊಡನೆ । ಸೋಮಂ—ಸೋಮವನ್ನು । ಸಹಸ್ರಂ—ಸಹಸ್ರಸಂಖ್ಯಾಕವಾದುದೂ । ಅಯುತಂ—ಅಪರಿಮಿತವಾದ ಸಂಖ್ಯೆಯುಳ್ಳದ್ದೂ ಆದ । ಸವಾನ್—ಯಜ್ಞಗಳನ್ನುದ್ದೇಶಿಸಿ । ಆದಾಯ—ತೆಗೆದುಕೊಂಡು । ಅಭರತ್—ಅಪಹರಿಸಿತು । (ಅಥವಾ ಅಪರಿಮಿತವಾದ ಯಜ್ಞಗಳೊಡನೆ ಸೋಮವನ್ನು ಅಪಹರಿಸಿತು) ಅತ್ರ—ಈ ಸೋಮಾಹರಣವಾದೊಡನೆಯೇ । ಪುರಂಧಿಃ—ಅನೇಕ ಕರ್ಮಗಳನ್ನು ನೆರವೇರಿಸುವವನೂ । ಅಮೂರಃ—ಪ್ರಾಜ್ಞನೂ (ಸ್ಥಿರಚಿತ್ತನೂ) ಆದ ಇಂದ್ರನು । ಸೋಮಸ್ಯ—ಸೋಮಪಾನದಿಂದ ಉಂಟಾದ । ಮದೇ—ಹರ್ಷದಲ್ಲಿ । ಮೂರಾಃ—ಚಂಚಲಚಿತ್ತರಾದ । ಅರಾತೀಃ—ಶತ್ರುಗಳನ್ನು । ಅಜಹಾತ್—ನಾಶಮಾಡಿದನು.

॥ ಭಾವಾರ್ಥ ॥

ಶ್ಯೇನಪಕ್ಷಿಯು, ಸಹಸ್ರಸಂಖ್ಯಾತವೂ, ಅಪರಿಮಿತವಾದ ಸಂಖ್ಯೆಯುಳ್ಳವೂ ಆದ ಯಜ್ಞಾರ್ಥವಾಗಿ ಸೋಮವನ್ನು ಅಪಹರಿಸಿಕೊಂಡು ಬಂದಿತು. ಈ ಸೋಮಾಹರಣವಾದೊಡನೆಯೇ, ಅನೇಕ ಕರ್ಮಕರ್ತನೂ, ಪ್ರಾಜ್ಞನೂ, ಸ್ಥಿರಚಿತ್ತನೂ ಆದ ಇಂದ್ರನು ಸೋಮಪಾನದಿಂದ ಉಂಟಾದ ಹರ್ಷದಲ್ಲಿ ಮೂಢರೂ ಚಂಚಲಚಿತ್ತರೂ ಆದ ಶತ್ರುಗಳನ್ನು ನಾಶಮಾಡಿದನು.

## English Translation.

Having taken it, the hawk brought the Soma with him to a thousand and ten thousand sacrifices, and this being provided, the performer of many (great) deeds, the unbewildered (Indra) destroyed, in the exhilaration of the Soma, (his) bewildered foes.



# ಇಪ್ಪತ್ತೇಳನೆಯ ಸೂಕ್ತವು

ಗರ್ಭೇ ನ್ವಿತಿ ಪಂಚರ್ಚಂ ಷಷ್ಠಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಂ । ಅಂತ್ಯಾ ಶಕ್ವರೀ ಷಟ್‌ಪಂಚಾಶದಕ್ಷರಾ । ಶ್ಯೇನೋ ದೇವತಾ । ಪೂರ್ವಸೂಕ್ತೇಽಷ್ಟೌ ವೇತ್ಯುಕ್ತತ್ವಾದಂತ್ಯಾಯಾ ಇಂದ್ರೋ ವಾ ದೇವತಾ । ತಥಾ ಚಾನುಕ್ರಾಂತಂ । ಗರ್ಭೇ ನು ಪಂಚಾಂತ್ಯಾ ಶಕ್ವರೀತಿ ॥ ಶ್ಯೇನೇ ನಿಷ್ಕೇವಲ್ಯಶಸ್ತ್ರ ಇದಂ ಸೂಕ್ತಂ । ಸೂತ್ರಂ ತು ಪೂರ್ವಮುದಾಹೃತಂ ॥

ಅನುವಾದವು—ಗರ್ಭೇ ನು ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ತ್ರಿಷ್ಟುಪ್ ಛಂದಸ್ಸು; ಕೊನೆಯಋಕ್ಕು ಶಕ್ವರೀಛಂದಸ್ಕವು. ಇದರಲ್ಲಿ ಐವತ್ತಾರು ಅಕ್ಷರಗಳಿರುವವು. ಶ್ಯೇನವೆಂಬ ಪಕ್ಷಿಯು ಈ ಸೂಕ್ತಕ್ಕೆ ದೇವತೆಯು. ಅಥವಾ ಇಂದ್ರನೂ ದೇವತೆಯಾಗಬಹುದು. ಅನುಕ್ರಮಣಿಕೆಯಲ್ಲಿ—ಗರ್ಭೇ ನು ಪಂಚಾಂತ್ಯಾ ಶಕ್ವರೀ ಎಂದು ಹೇಳಿರುವುದು. ಶ್ಯೇನವೆಂಬ ಇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ವಿನಿಯೋಗದಲ್ಲಿಯೇ ಹೇಳಲಾಗಿದೆ.

## ಸೂಕ್ತ—೨೭

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೭ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ— ೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

ಋಷಿಃ—ವಾಮದೇವಃ ॥

ದೇವತಾ—೧-೪. ಶ್ಯೇನಃ । ೫. ಶ್ಯೇನ ಇಂದ್ರೋ ವಾ ॥

ಛಂದಃ—೧-೪. ತ್ರಿಷ್ಟುಪ್ । ೫. ಶಕ್ವರೀ ॥

॥ ಸಂಹಿತಾಪಾಠಃ ॥

ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ।

ಶತಂ ಮಾ ಪುರ ಆಯಸೀರರಕ್ಷನ್ನಧ ಶ್ಯೇನೋ ಜವಸಾ ನಿರದೀಯಂ ॥ ೧ ॥

॥ ಪದಪಾಠಃ ॥

ಗರ್ಭೇ । ನು । ಸನ್ । ಅನು । ಏಷಾಂ । ಅವೇದಂ । ಅಹಂ । ದೇವಾನಾಂ । ಜನಿಮಾನಿ । ವಿಶ್ವಾ ।

ಶತಂ । ಮಾ । ಪುರಃ । ಆಯಸೀಃ । ಅರಕ್ಷನ್ । ಅಧ । ಶ್ಯೇನಃ । ಜವಸಾ । ನಿಃ । ಅದೀಯಂ ॥ ೧ ॥

॥ ಸಾಯಣಭಾಷ್ಯಂ ॥

ಅತ್ರೈಷ ಶ್ಲೋಕಃ ಪಠ್ಯತೇ । ಶ್ಯೇನಭಾವಂ ಸಮಾಸ್ಥಾಯ ಗರ್ಭಾದ್ಯೋಗೇನ ನಿಃಸೃತಃ । ಋಷಿರ್ಗರ್ಭೇ ಶಯಾನಃ ಸನ್ ಬ್ರೂತೇ ಗರ್ಭೇ ನು ಸನ್ನಿತಿ । ಗರ್ಭೇ ನು ಗರ್ಭ ಏವ ಸನ್ ವಿದ್ಯಮಾನೋಽಹಂ ವಾಮದೇವ ಏಷಾಮಿಂದ್ರಾದೀನಾಂ ದೇವಾನಾಂ ವಿಶ್ವಾ ವಿಶ್ವಾನಿ ಸರ್ವಾಣಿ ಜನಿಮಾನಿ ಜನ್ಮಾನ್ಯನ್ವವೇದಂ । ಅನುಪೂರ್ವ್ಯೇಣಾಜ್ಞಾಸಿಷಂ । ಪರಮಾತ್ಮನಃ ಸಕಾಶಾತ್ಸರ್ವೇ ದೇವಾ ಜಾತಾ ಇತ್ಯವೇದಿಷಮಿತ್ಯರ್ಥಃ । ಇತಃ ಪೂರ್ವಂ ಶತಂ ಬಹೂನ್ಯಾಯಸೀರಯೋಮಯಾನ್ಯಭೇದ್ಯಾನಿ ಪುರಃ ಶರೀರಾಣಿ ಮಾ ಮಾಮರಕ್ಷನ್ । ಅಪಾಲಯನ್ । ಯಥಾಹಂ ಶರೀರಾದ್ವ್ಯತಿರಿಕ್ತಮಾತ್ಮಾನಂ ನ ಜಾನೀಯಾಂ ತಥಾ ಮಾಮರಕ್ಷನ್ನಿತ್ಯರ್ಥಃ । ಅಥಾಧುನಾ ಶ್ಯೇನಃ ಶ್ಯೇನವತ್ಸ್ಥಿತೋಽಹಂ ಜವಸಾ ವೇಗೇನ ನಿರದೀಯಂ । ಶರೀರಾನ್ನಿರಗಮಂ । ಅನಾವರಣಮಾತ್ಮಾನಂ ಜಾನನ್ನಿರ್ಗತೋಽಸ್ಮೀತ್ಯರ್ಥಃ । ಪುರುಷೇ ಹ ವಾ ಅಯಮಾದಿತ ಇತಿ ಖಂಡೇ ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚೇತ್ಯಾದಿನಾ । ಐ. ಆ. ೨-೫-೧ । ಅಯಮರ್ಥಃ ಸಮ್ಯಕ್ ಪ್ರತಿಪಾದಿತಃ ॥

॥ ಪ್ರತಿಪದಾರ್ಥ ॥

ಗರ್ಭೇ ನು ಸನ್—ಗರ್ಭದಲ್ಲಿರುವಾಗಲೇ । ಅಹಂ—ವಾಮದೇವಾಖ್ಯನಾದ ನಾನು । ಏಷಾಂ ದೇವಾನಾಂ—ಈ ಇಂದ್ರಾದಿ ದೇವತೆಗಳ । ವಿಶ್ವಾ—ಸಮಸ್ತವಾದ । ಜನಿಮಾನಿ— ಉತ್ಪತ್ತಿಸ್ವರೂಪಗಳನ್ನೂ । ಅನು ಅವೇದಂ—ಪೂರ್ಣವಾಗಿ ತಿಳಿದೆನು (ಇದಕ್ಕೆ ಮೊದಲು) । ಶತಂ—ಅನೇಕವಾದ । ಆಯಸೀಃ—ಕಬ್ಬಿಣದಂತೆ ಕಠಿಣಸ್ವರೂಪವುಳ್ಳ । ಪುರಃ—ಶರೀರಗಳು । ಮಾ—ನನ್ನನ್ನು । ಅರಕ್ಷನ್—ರಕ್ಷಿಸಿದವು (ಆತ್ಮಸಾಕ್ಷಾತ್ಕಾರಕ್ಕೆ ಅವಕಾಶಕೊಡದೇ ತಡೆದಿದ್ದವು)। ಅಧ—ಈಗ । ಶ್ಯೇನಃ—ಶ್ಯೇನರೂಪವನ್ನು ಧರಿಸಿ ನಾನು । ಜವಸಾ—ಬಹಳ ವೇಗದಿಂದ । ನಿರದೀಯಂ—ಶರೀರವನ್ನು ಭೇದಿಸಿಕೊಂಡು ಹೊರಕ್ಕೆ ಬಂದಿದ್ದೇನೆ.

॥ ಭಾವಾರ್ಥ ॥

ವಾಮದೇವಾಖ್ಯನಾದ ನಾನು ಗರ್ಭದಲ್ಲಿರುವಾಗಲೇ, ಇಂದ್ರಾದಿ ದೇವತೆಗಳ ಸಮಸ್ತವಾದ ಉತ್ಪತ್ತಿಸ್ವರೂಪಗಳನ್ನೂ ಅರಿತೆನು. ಇದಕ್ಕೆ ಮೊದಲು ಕಬ್ಬಿಣದ ಸಲಾಕೆಗಳಂತೆ ಕಠಿಣವಾದ ಅನೇಕ ಶರೀರಗಳು ನನ್ನನ್ನು ತಡೆದು ಆತ್ಮಸಾಕ್ಷಾತ್ಕಾರಕ್ಕೆ ಅವಕಾಶ ಕೊಡದಂತೆ ಪ್ರತಿಬಂಧಿಸಿದ್ದವು. ಶ್ಯೇನರೂಪವನ್ನು ಧರಿಸಿ ನಾನು ಈಗ ಬಹಳ ವೇಗದಿಂದ ತಾಯಿಯ ಶರೀರವನ್ನು ಭೇದಿಸಿಕೊಂಡು ಹೊರಕ್ಕೆ ಬಂದಿದ್ದೇನೆ.

## English Translation

Being still in the germ, I have known all the births of these divinities in their order: a hundred bodies of iron confined me, but as a hawk I came forth with speed.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ವಾಮದೇವ ಋಷಿಯು ತಾನು ತಾಯಿಯ ಗರ್ಭವಾಸದಲ್ಲಿರುವಾಗಲೇ ದೇವತೆಗಳ ಉತ್ಪತ್ತಿಕ್ರಮ ಮೊದಲಾದ ಸಮಸ್ತ ವಿಷಯಗಳನ್ನು ತಿಳಿದು ಸರ್ವಜ್ಞನಾಗಿರುವೆನು ಎಂದು ಹೇಳಿಕೊಂಡಿದಾನೆ. ಈ ಎರಡು ಋಕ್ಕುಗಳ ಮುಖ್ಯಾಭಿಪ್ರಾಯವನ್ನೂ ರಹಸ್ಯಾರ್ಥವನ್ನೂ ಈ ಮಂಡಲದ ಪೀಠಿಕೆಯಲ್ಲಿ ವಿವರಿಸಿದೇವೆ. (ಭಾಗ ೧೭. ಪೇಜು 659) ಈ ವಿಷಯವನ್ನೂ ವಾಮದೇವಋಷಿಯ ವೈಶಿಷ್ಟ್ಯವನ್ನೂ ಅಲ್ಲಿ ನೋಡಿ ತಿಳಿಯಬಹುದು.



॥ ಸಂಹಿತಾಪಾಠಃ ॥

ನ ಘಾ ಸ ಮಾಮಪ ಜೋಷಂ ಜಭಾರಾಭೀಮಾಸ ತ್ವಕ್ಷಸಾ ವೀರ್ಯೇಣ ।
ಈರ್ಮಾ ಪುರಂಧಿರಜಹಾದರಾತೀರುತ ವಾತಾँ ಅತರಚ್ಛೂಶುವಾನಃ ॥ ೨ ॥

॥ ಪದಪಾಠಃ ॥

ನ । ಘ । ಸಃ । ಮಾಂ । ಅಪ । ಜೋಷಂ । ಜಭಾರ । ಅಭಿ । ಈಂ । ಆಸ । ತ್ವಕ್ಷಸಾ । ವೀರ್ಯೇಣ ।
ಈರ್ಮಾ । ಪುರಂऽಧಿಃ । ಅಜಹಾತ್ । ಅರಾತೀಃ । ಉತ । ವಾತಾನ್ । ಅತರತ್ । ಶೂಶುವಾನಃ ॥ ೨ ॥

॥ ಸಾಯಣಭಾಷ್ಯಂ ॥

ಸ ಗರ್ಭೋ ಮಾಂ ವಾಮದೇವಂ ಜೋಷಂ ಪರ್ಯಾಪ್ತಂ ನ ಘ ನೈವಾಪ ಜಭಾರ। ಅಪಜಹಾರ। ಗರ್ಭೇऽಪಿ ವಸತೋ ಮೇ ಮೋಹೋ ನಾಭೂದಿತ್ಯರ್ಥಃ। ಅಹಂ ತು ಈಮಿದಂ ಗರ್ಭಸ್ಥಂ ದುಃಖಂ ತ್ವಕ್ಷಸಾ ತೀಕ್ಷ್ಣೇನ ವೀರ್ಯೇಣ ಜ್ಞಾನಸಾಮರ್ಥ್ಯೇನಾಭ್ಯಾಸ। ಅಭ್ಯಭವಂ। ಈರ್ಮಾ ಸರ್ವಸ್ಯ ಪ್ರೇರಕಃ ಪುರಂಧಿಃ ಪುರಾಂ ಧಾರಕಃ ಪರಮಾತ್ಮಾರಾತೀರ್ಗರ್ಭಸಂಶ್ರಿತಾನ್ ಶತ್ರೂನಜಹಾತ್। ಅತ್ಯಜತ್। ಜಘಾನ। ಉತಾಪಿ ಚ ಶೂಶುವಾನೋ ವರ್ಧಮಾನಃ ಪರಿಪೂರ್ಣಃ ಪರಮಾತ್ಮಾ ವಾತಾನ್ ಗರ್ಭಕ್ಲೇಶಕರಾನ್ವಾಯೂನತರತ್। ಅತಾರೀತ್ ॥

॥ ಪ್ರತಿಪದಾರ್ಥ ॥

ಸಃ—ಆ ಗರ್ಭವು। ಮಾಂ—ವಾಮದೇವಾಖ್ಯನಾದ ನನ್ನನ್ನು। ಜೋಷಂ—ಪೂರ್ಣವಾಗಿ। ನ ಘ ಅಪ ಜಭಾರ—ಅಪಹರಿಸಿಲ್ಲ (ನಾನು ಗರ್ಭಸ್ಥವಾದ ಮೋಹವನ್ನೂ, ಅಜ್ಞಾನವನ್ನೂ ಹೊಂದಲಿಲ್ಲ)। ಈಂ—ಆದ ಗರ್ಭಸ್ಥವಾದ ದುಃಖವನ್ನು। ತ್ವಕ್ಷಸಾ—ತೀಕ್ಷ್ಣವಾದುದೂ। ವೀರ್ಯೇಣ—ಜ್ಞಾನರೂಪವಾದುದೂ ಆದ

ಸಾಮರ್ಥ್ಯದಿಂದ | ಅಭಿ ಆಸ—ಜಯಿಸಿದೆನು | ಈರ್ಮಾ—ಜಗತ್ಪ್ರೇರಕನಾದ | ಪುರಂಧಿಃ—ಪರಮಾತ್ಮನು | ಅರಾತೀಃ—ಗರ್ಭಸ್ಥವಾದ ಶತ್ರುಗಳನ್ನು | ಅಜಹಾತ್—ನಾಶಮಾಡಿದನು | ಉತ—ಮತ್ತು | ಶೂಶುವಾನಃ—ಪೂರ್ಣವಾಗಿ ಬೆಳೆದ ಪರಮಾತ್ಮನು | ವಾತಾನ್—ಕ್ಲೇಶದಾಯಕಗಳಾದ ವಾತಗಳನ್ನು | ಅತರತ್—ದಾಟಿದನು.

| ಭಾವಾರ್ಥ |

ಆಯೋರೂಪವಾದ ಶರೀರಗಳು ಗರ್ಭಸ್ಥವಾದ ನನ್ನನ್ನು ಪ್ರತಿಬಂಧಿಸಿದ್ದರೂ ಸಹ ನಾನು ಅಜ್ಞಾನದಿಂದಲೂ, ಮೋಹದಿಂದಲೂ ಆವೃತನಾಗಲಿಲ್ಲ. ಗರ್ಭಸ್ಥವಾದ ದುಃಖವನ್ನು ತೀಕ್ಷ್ಣವಾದುದೂ, ಜ್ಞಾನರೂಪವಾದುದೂ ಆದ ಸಾಮರ್ಥ್ಯದಿಂದ ಜಯಿಸಿದೆನು. ಜಗತ್ಪ್ರೇರಕನೂ ಪರಿಪೂರ್ಣನೂ ಆದ ಪರಮಾತ್ಮನು ಗರ್ಭಸ್ಥವಾದ ಶತ್ರುಗಳನ್ನು ನಾಶಮಾಡಿದನು ಮತ್ತು ಕ್ಲೇಶದಾಯಕಗಳಾದ ಗರ್ಭಸ್ಥವಾಯುಗಳನ್ನು ದಾಟಿ ಬಂದನು.

## English Translation.

That embryo did not beguile me into satisfaction, but by the keen energy (of divine wisdom), I triumphed over it: the impeller of all, the sustainer of many, abandoned the foes (of knowledge), and, expanding, passed beyond the winds (of worldly troubles).



| ಸಂಹಿತಾಪಾಠಃ |

ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ |
ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ||

| ಪದಪಾಠಃ |

ಅವ | ಯತ್ | ಶ್ಯೇನಃ | ಅಸ್ವನೀತ್ | ಅಧ | ದ್ಯೋಃ | ವಿ | ಯತ್ | ಯದಿ | ವಾ | ಅತಃ | ಊಹುಃ | ಪುರಂऽಧಿಂ |
ಸೃಜತ್ | ಯತ್ | ಅಸ್ಮೈ | ಅವ | ಹ | ಕ್ಷಿಪತ್ | ಜ್ಯಾಂ | ಕೃಶಾನುಃ | ಅಸ್ತಾ | ಮನಸಾ | ಭುರಣ್ಯನ್ ||

॥ ಸಾಯಣಭಾಷ್ಯಂ ॥

ಅಥ ತದಾನೀಂ ಸೋಮಾಹರಣಕಾಲೇ ಯದ್ಯದಾ ಶ್ಯೇನೋ ದ್ಯೋರ್ದ್ಯುಲೋಕಾದವಾಸ್ವನೀತ್ ಅವಾಙ್ಮುಖಂ ಶಬ್ದಮಕರೋತ್। ಯದಿ ವಾ ಯದಾ ಚ। ವೇತಿ ಚಾರ್ಥೇ। ಯದ್ಯಂ ಪುರಂಧಿಂ ಸೋಮಮತೋಽಸ್ಮಾಚ್ಛ್ಯೇನಾದ್ವ್ಯೂಹುಃ। ಸೋಮಪಾಲಾ ವಿಕ್ಷಿಪ್ತವಂತಃ। ಯದ್ಯದಾಸ್ತಾ ಶರಾಣಾಂ ಕ್ಷೇಪ್ತಾ ಮನಸಾ ಮನೋವೇಗೇನ ಭುರಣ್ಯನ್ ಗಂತುಮಿಚ್ಛನ್ ಕೃಶಾನುರೇತನ್ನಾಮಕಃ ಸೋಮಪಾಲೋ ಜ್ಯಾಂ ಧನುಷಃ ಕೋಟೌ ಮೌರ್ವೀಂ ಕ್ಷಿಪದ್ಧ। ಚಿಕ್ಷೇಪ ಖಲು। ಅಸ್ಮೈ ಶ್ಯೇನಾಯ ಶರಮವಾಸೃಜತ್। ತ್ಯಕ್ತವಾನ್। ತಥಾ ಚ ಬ್ರಾಹ್ಮಣಂ। ತಸ್ಯಾ ಅನುವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದದಿತ್ಯಾದಿ। ಐ. ಬ್ರಾ. ೩-೨೬। ಯದಾ ಸೋಮಪಾಲಾ ಇತ್ಥಮಿತ್ಥಂ ಚಕ್ರುಸ್ತದಾ ಶ್ಯೇನಃ ಸೋಮಮಾಜಹಾರೇತ್ಯೈಚೋತ್ತರಯೋ ಸಂಬಂಧಃ॥

॥ ಪ್ರತಿಪದಾರ್ಥ ॥

ಅಧ—ಸೋಮಾಹರಣಕಾಲದಲ್ಲಿ। ಯತ್—ಯಾವಾಗ। ಶ್ಯೇನಃ—ಶ್ಯೇನಪಕ್ಷಿಯು। ದ್ಯೋಃ—ದ್ಯುಲೋಕದಿಂದ। ಅವ ಅಸ್ವನೀತ್—ಕೆಳಕ್ಕೆ ಇಳಿದು ಬರುವ ಶಬ್ದವನ್ನು ಮಾಡಿತೋ। ಯದಿ ವಾ—ಯಾವಾಗತಾನೇ। ಯತ್ ಪುರಂಧಿಂ—ಯಾವ ಅದೇ ಸೋಮವನ್ನು। ಅತಃ—ಈ ಶ್ಯೇನದಿಂದ। ವಿ ಊಹುಃ—ಅಪಹೃತವಾದುದನ್ನಾಗಿ ತಿಳಿದರೋ। ಯತ್—ಯಾವಾಗ। ಅಸ್ತಾ—ಶರಗಳನ್ನು ಬಿಡಲು। ಮನಸಾ—ಮನೋವೇಗದಿಂದ। ಭುರಣ್ಯನ್—ಅಟ್ಟಸಿಕೊಂಡು ಹೋಗಲಿಚ್ಛಿಸಿ! ಕೃಶಾನುಃ—ಕೃಶಾನುವೆಂಬ ಸೋಮಪಾಲಕನು। ಜ್ಯಾಂ—ಧನುಸ್ಸಿನ ಹೆದೆಯನ್ನು। ಕ್ಷಿಪತ್ ಹ—ಧನುಸ್ಸಿನಲ್ಲಿ ಸೇರಿಸಿದನೋ (ಆಗ)। ಅಸ್ಮೈ—ಶ್ಯೇನವನ್ನು ಲಕ್ಷಿಸಿ। ಅವ ಅಸೃಜತ್—ಬಾಣವನ್ನು ಬಿಟ್ಟನು.

॥ ಭಾವಾರ್ಥ ॥

ಸೋಮಾಹರಣಕಾಲದಲ್ಲಿ ದ್ಯುಲೋಕದಿಂದ ಇಳಿದುಬರುತ್ತಿರುವ ಶ್ಯೇನವು ಶಬ್ದಮಾಡಿದಾಗಲೇ ಸೋಮಪಾಲಕರಿಗೆ ಸೋಮವು ಅಪಹೃತವಾಯಿತೆಂದು ತಿಳಿಯಿತು. ಆಗ ಇದನ್ನಟ್ಟಿಸಿಕೊಂಡು ಕೃಶಾನುವೆಂಬ ಸೋಮಪಾಲಕನು ಮನೋವೇಗದಿಂದ ಓಡಿಬರುತ್ತಾ ತನ್ನ ಧನುಸ್ಸಿನಲ್ಲಿ ಹೆದೆಯನ್ನು ಸೇರಿಸಿದನು. ಮತ್ತು ಶ್ಯೇನವನ್ನು ಲಕ್ಷಿಸಿ ಬಾಣವನ್ನು ಬಿಟ್ಟನು.

English Translation.

When the hawk screamed (wita exultation) on his descent from heaven, and (the guardians of the Soma) perceived that the Soma was (carried away) by it, then, the archer Krishanu, pursuing with the speed of thought, and stringing his bow, let fly an arrow against it.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕಿನಲ್ಲಿಯೂ ಶ್ಯೇನಪಕ್ಷಿಯು ಸ್ವರ್ಗದಲ್ಲಿದ್ದ ಸೋಮವನ್ನು ಭೂಮಿಗೆ ತಂದ ವಿಷಯವೂ, ಅದನ್ನು ತರುವ ಕಾಲದಲ್ಲಿ ಸೋಮಪಾಲಕರಾದ ಕೃಶಾನುವೇ ಮೊದಲಾದವರು ಶ್ಯೇನಪಕ್ಷಿಯನ್ನು

ಎದುರಿಸಿ ಬಾಣವನ್ನು ಬಿಟ್ಟು ಅದರ ರೆಕ್ಕೆಯನ್ನು ಕತ್ತರಿಸಿದ ವಿಷಯವೂ ಹೇಳಲ್ಪಟ್ಟಿರುವುದು. ಶ್ಯೇನಪಕ್ಷಿಯು ಸೋಮವನ್ನು ತಂದ ವಿಧಾನವನ್ನು ನಾವು ಹಿಂದೆಯೇ ವಿವರಿಸಿದೇವೆ. ಆದರೆ ಆ ಕಾಲದಲ್ಲಿ ಕೃಶಾನು ಮೊದಲಾದವರ ಪ್ರತಿಭಟನೆಯನ್ನು ಪರಿಹರಿಸಿದ ವಿಷಯವನ್ನು ವಿವರಿಸಿಲ್ಲ. ಆದ್ದರಿಂದ ಆ ವಿಷಯವನ್ನು ಐತರೇಯಬ್ರಾಹ್ಮಣ ದಲ್ಲಿರುವಂತೆ ಸೂಕ್ಷ್ಮವಾಗಿ ಇಲ್ಲಿ ವಿವರಿಸಲಾಗುವುದು—

## ಸೋಮಾಹರಣೋಪಾಖ್ಯಾನ

ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ ।

(ಐ. ಬ್ರಾ. ೧೩-೨೫)

ಪೂರ್ವದಲ್ಲಿ ಸೋಮರಾಜನು (ಸೋಮಲತೆಯು ; ಗೌರವಾರ್ಥವಾಗಿ ಸೋಮಲತೆಯನ್ನು ಸೋಮರಾಜನೆಂದು ಕರೆಯುವ ರೂಢಿ ಇದೆ) ಎಂದರೆ ಸೋಮಲತೆಯು ಸ್ವರ್ಗಲೋಕದಲ್ಲಿದ್ದಿತು. ಈ ಲೋಕದಲ್ಲಿರಲಿಲ್ಲ. ಇದನ್ನು ತಿಳಿದು ದೇವತೆಗಳೂ ಋಷಿಗಳೂ ಈ ಸೋಮವನ್ನು ಇಲ್ಲಿಗೆ ತರುವ ಬಗೆ ಹೇಗೆ ಎಂದು ಆಲೋಚಿಸಿದರು. ಬಳಿಕ ಅವರು ಈ ವಿಚಾರವನ್ನು ವಿಮರ್ಶೆಮಾಡಿ ಸೋಮವನ್ನು ಸ್ವರ್ಗದಿಂದ ಭೂಮಿಗೆ ತರುವ ಶಕ್ತಿಯು ಛಂದಸ್ಸುಗಳಿಗೆ ಇರುವುದೆಂದು ತಿಳಿದು ಛಂದಸ್ಸುಗಳನ್ನು ಕುರಿತು—ಎಲೈ ಛಂದಸ್ಸುಗಳೇ, ನಮಗೋಸ್ಕರ ಎಂದರೆ ನಮ್ಮ ಯಜ್ಞದಲ್ಲಿ ಉಪಯೋಗಿಸುವುದಕ್ಕೋಸ್ಕರ ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನಂಗೀಕರಿಸಿ ಛಂದಸ್ಸುಗಳು ಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಪಕ್ಷಿಗಳ ರೂಪಗಳನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋದವು. ರೆಕ್ಕೆಗಳಿಂದ ಕೂಡಿದ ಪಕ್ಷಿಗಳಿಗೆ ಸುಪರ್ಣವೆಂದು ಹೆಸರಿರುವುದರಿಂದಲೂ ಈ ಪಕ್ಷಿಗಳು ಸೋಮಾಹರಣದಲ್ಲಿ ಪ್ರವೃತ್ತಿಸಿದ್ದರಿಂದಲೂ ಈ ಸೋಮಾಹರಣವೆಂಬ ಉಪಾಖ್ಯಾನಕ್ಕೆ ಸೌಪರ್ಣಾಖ್ಯಾನವೆಂದು ಕರೆಯುವುದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ.

ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಛಂದಾಂಸ್ಯಾಸನ್ತ್ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾರ್ಧಮಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯ ತ್ರೀಣ್ಯಕ್ಷರಾಣ್ಯೇಕಾಕ್ಷರಾ ಭೂತ್ವಾ ದೀಕ್ಷಾಂ ಚ ತಪಶ್ಚ ಹರಂತೀ ಪುನರಭ್ಯವಾಪತತ್ತಸ್ಮಾತ್ತಸ್ಯ ವಿತ್ತಾ ದೀಕ್ಷಾ ವಿತ್ತಂ ತಪೋ ಯಸ್ಯ ಪಶವಃ ಸಂತಿ ಜಾಗತಾ ಹಿ ಪಶವೋ ಜಗತೀ ಹಿ ತಾನಾಹರತ್ ॥

(ಐ. ಬ್ರಾ ೧೩-೨೫)

ಬಳಿಕ ಗಾಯತ್ರಿಯೇ ಮೊದಲಾದ ಛಂದಸ್ಸುಗಳು ಪಕ್ಷಿರೂಪಗಳನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋಗಲು ಸಿದ್ಧವಾದವು. ಆ ಕಾಲದಲ್ಲಿ ಗಾಯತ್ರಿಯೇ ಮೊದಲಾದ ಎಲ್ಲಾ ಛಂದಸ್ಸುಗಳಿಗೂ (ಪ್ರತಿಪಾದದಲ್ಲಿಯೂ) ನಾಲ್ಕು ಅಕ್ಷರಗಳು ಮಾತ್ರ ಇದ್ದುವು. ಯಾವ ಛಂದಸ್ಸಿಗೂ ನಾಲ್ಕು ಅಕ್ಷರಗಳಿಗಿಂತ ಹೆಚ್ಚಾಗಿರಲಿಲ್ಲ. ಮೊದಲು ಜಗತೀ

ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಸೋಮವಿರುವ ಸ್ವರ್ಗವನ್ನು ಕುರಿತು ಹಾರಿಹೋಯಿತು. ಅರ್ಧದಾರಿ ಹಾರಿಹೋಗುವಷ್ಟರಲ್ಲಿ ಅದು ಆಯಾಸದಿಂದ ಬಳಲಿ ಮುಂದಕ್ಕೆ ಹಾರಿಹೋಗಲು ಶಕ್ತಿಯಿಲ್ಲದೆ ಹಿಂತಿರುಗ ಬೇಕಾಯಿತು. ಅಷ್ಟು ದೂರ ಹೋದ ಆಯಾಸದಿಂದ ಜಗತೀಛಂದಸ್ಸಿನಲ್ಲಿದ್ದ ನಾಲ್ಕು ಅಕ್ಷರಗಳಲ್ಲಿ ಮೂರು ಅಕ್ಷರ ಗಳನ್ನು ಕಳೆದುಕೊಂಡಿತು. ಉಳಿದ ಒಂದೇ ಅಕ್ಷರದಿಂದ ಹಿಂತಿರುಗಬೇಕಾಯಿತು. ಈ ರೀತಿ ಸೋಮವನ್ನು ತರಲು ಶಕ್ತಿಯಿಲ್ಲದೆ ಹಿಂತಿರುಗಿ ಬರುವಾಗ ತನ್ನ ಜತೆಯಲ್ಲಿ ಸೋಮಯಾಗಸಂಬಂಧವಾದ ದೀಕ್ಷೆಯನ್ನೂ ಎಂದರೆ ದೀಕ್ಷಣೀಯೇಷ್ಟಿರೂಪವಾದ ದೀಕ್ಷಾವಿಧಿಯನ್ನೂ ಕ್ಷೀರಪಾನಾದಿರೂಪವಾದ ತಪಸ್ಸನ್ನೂ ತಂದಿತು. ಆದ್ದರಿಂದ ಜಗತೀಛಂದಸ್ಸಿನ ಋಕ್ಕುಗಳಿಂದ ದೀಕ್ಷೆಯನ್ನು ಕೈಗೊಳ್ಳುವರು. ಜಗತೀಛಂದಸ್ಸಿಗೆ ಪಶುಸಂಪತ್ತನ್ನು ವೃದ್ಧಿ ಪಡಿಸುವ ಶಕ್ತಿ ಇರುವುದು ಆದ್ದರಿಂದ ಪಶುಸಂಪತ್ತುಳ್ಳ ಪುರುಷನಿಗೆ ದೀಕ್ಷೆಯೂ ಧನವೂ ಸುಲಭವಾಗಿ ದೊರೆಯು ವುದು. ಜಗತೀಛಂದಸ್ಸು ಪಶುಗಳನ್ನು ತಂದದ್ದರಿಂದ ಜಗತೀಛಂದಸ್ಸಿಗೆ ಪಶುಗಳನ್ನು ಕೊಡುವ ಶಕ್ತಿ ಇರುವುದೆಂದು ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋ-ಪನಮತಿ (ತೈ. ಸಂ. ೬-೧-೬-೨) ಎಂದು ಯಜುರ್ವೇದದಲ್ಲಿ ಹೇಳಿದೆ.

ಅಥ ತ್ರಿಷ್ಟುಬುದಪತತ್ಸಾ ಪತಿತ್ವಾ ಭೂಯೋಽರ್ಧಾದಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯೈಕ-ಮಕ್ಷರಂ ತ್ರ್ಯಕ್ಷರಾ ಭೂತ್ವಾ ದಕ್ಷಿಣಾ ಹರಂತೀ ಪುನರಭ್ಯವಾಪತತ್ತಸ್ಮಾನ್ಮಧ್ಯಂದಿನೇ ದಕ್ಷಿಣಾ ನೀಯಂತೇ ತ್ರಿಷ್ಟುಭೋ ಲೋಕೇ ತ್ರಿಷ್ಟುಭ್ಭಿ ತಾ ಆಹರತ್ ॥

(ಐ. ಬ್ರಾ. ೧೩-೨೫)

ಬಳಿಕ ತ್ರಿಷ್ಟುಪ್‌ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಅರ್ಧ ದಾರಿಗಿಂತ ಸ್ವಲ್ಪ ದೂರ ಹೋಗುವುದರೊಳಗಾಗಿ ಆಯಾಸದಿಂದ ಬಳಲಿ, ತನ್ನಲ್ಲಿದ್ದ ನಾಲ್ಕು ಅಕ್ಷರಗಳಲ್ಲಿ ಒಂದನ್ನು ಅಲ್ಲಿಯೇ ಬಿಟ್ಟು ಉಳಿದ ಮೂರು ಅಕ್ಷರಗಳೊಡನೆ ಹಿಂತಿರುಗಿತು. ಬರುವಾಗ ದಕ್ಷಿಣೆಯನ್ನು (ಯಜ್ಞದಲ್ಲಿ ಋತ್ವಿಗ್ಜನರಿಗೆ ಕೊಡುವ ದಕ್ಷಿಣಾಕ್ರಮವನ್ನು) ತನ್ನ ಜತೆಯಲ್ಲಿ ತಂದಿತು. ಈ ರೀತಿ ತ್ರಿಷ್ಟುಪ್‌ಛಂದಸ್ಸು ದಕ್ಷಿಣೆಯನ್ನು ತಂದದ್ದರಿಂದಲೂ, ತ್ರಿಷ್ಟುಪ್‌ಛಂದಸ್ಸಿಗೂ ಮಾಧ್ಯಂದಿನಸವನಕ್ಕೂ ಸಂಬಂಧವಿರುವುದರಿಂದಲೂ, ಯಜ್ಞದಲ್ಲಿ ನೆರವೇರುವ ಮಾಧ್ಯಂದಿನಸವನಕಾಲದಲ್ಲಿ ಋತ್ವಿಗ್ಜನರಿಗೆ ದಕ್ಷಿಣೆಯನ್ನು (ಸಂಭಾವನೆ) ಕೊಡುವ ಪದ್ಧತಿ ಇರುವುದು.

ತೇ ದೇವಾ ಅಬ್ರುವನ್ ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇ-ತೇನಾನುಮಂತ್ರಯೇತ ಪ್ರೇತಿ ಚೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತಿ ಪುನರಾಗಚ್ಛತಿ ॥

(ಐ. ಬ್ರಾ. ೧೩-೨೬)

ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಸೋಮವನ್ನು ತರಲು ಸಾಮರ್ಥ್ಯವಿಲ್ಲದೆ ಹಿಂತಿರುಗಿ ಬಂದದ್ದನ್ನು ದೇವತೆಗಳು ನೋಡಿ ಗಾಯತ್ರೀಛಂದಸ್ಸಿನ ಸಮೀಪಕ್ಕೆ ಹೋಗಿ—ಎಲೈ ಗಾಯತ್ರಿಯೇ, ನಮಗಾಗಿ ನೀನು ಸ್ವರ್ಗದಿಂದ ಸೋಮ

ದೇವತೆಗಳನ್ನು ಕುರಿತು—ಎಲೈ ದೇವತೆಗಳೇ, ನಿಮ್ಮ ಮಾತಿನಂತೆ ನಾನು ಸೋಮವನ್ನು ತರಲು ಸ್ವರ್ಗಕ್ಕೆ ಹೋಗುವೆನು. ಆದರೆ ನಾನು ಪ್ರಯಾಣ ಮಾಡುವ ಕಾಲದಲ್ಲಿಯೂ, ನಾನು ಕ್ಷೇಮವಾಗಿ ಹಿಂತಿರುಗಿ ಬರುವುದಕ್ಕಾಗಿಯೂ ನೀವು ಆಶೀರ್ವಾದರೂಪವಾದ ಸ್ವಸ್ತ್ಯಯನಮಂತ್ರಗಳನ್ನು ಜಪಿಸುತ್ತಾ ನಾನು ಕ್ಷೇಮವಾಗಿ ಹಿಂತಿರುಗಿ ಬರಬೇಕೆಂದು ನಾನು ಬರುವವರಿಗೂ ಪ್ರಾರ್ಥಿಸುತ್ತಿರಬೇಕು. ಎಂದು ಹೇಳಿ ಶ್ಯೇನಪಕ್ಷಿಯ ರೂಪವನ್ನು ಧರಿಸಿ ಅಂತರಿಕ್ಷ ಮಾರ್ಗವಾಗಿ ಹಾರಿಹೋಯಿತು. ದೇವತೆಗಳು ಹಾಗೆಯೇ ಆಗಲೆಂದು ಅದರ ಮಾತನ್ನಂಗೀಕರಿಸಿ, ಗಾಯತ್ರಿಯು ಕ್ಷೇಮವಾಗಿ ಹಿಂತಿರುಗಿ ಬರಲೆಂದು ಸ್ವಸ್ತ್ಯಯನಮಂತ್ರಗಳನ್ನೂ ಜಪಿಸುತ್ತಿದ್ದರು. ಆ ಮಂತ್ರವು ಯಾವುದೆಂದರೆ ಪ್ರಾ ಚ ಚ ಎಂದು, ಎಲ್ಲಿ ಪ್ರ ಎಂಬುದು ಒಂದು ಮಂತ್ರ; ಆ ಎಂಬುದು ಎರಡನೆಯ ಮಂತ್ರ ಇವೆರಡನ್ನೂ ಸೇರಿಸುವ ಸಮುಚ್ಚಯಾರ್ಥ-ವನ್ನು ಸೂಚಿಸುವುದಕ್ಕಾಗಿ ಎರಡು ಚಕಾರಗಳಿರುವವು. ಕ್ಷೇಮವಾಗಿ ಸೋಮವಿದ್ದೆಡೆಗೆ ಹೋಗಿ ಅದನ್ನು ತೆಗೆದುಕೊಂಡು ಪುನಃ ಹಿಂದಕ್ಕೆ ಸುರಕ್ಷಿತವಾಗಿ ಬಾ ಎಂದು ಈ ಮಂತ್ರಗಳ ಅರ್ಥವು. ಇದಕ್ಕಿಂತಲೂ ಉತ್ತಮವಾದ ಸ್ವಸ್ತ್ಯಯನಮಂತ್ರವಿರುವುದಿಲ್ಲ. ಆದ್ದರಿಂದ ಲೋಕದಲ್ಲಿ ಸ್ನೇಹಿತರು, ಬಂಧುಗಳು ಮುಂತಾದವರು ಪ್ರಯಾಣಮಾಡಬೇಕಾದ ಸಂದರ್ಭದಲ್ಲಿ ಈ ಮಂತ್ರವನ್ನು ಪಠಿಸುವರು. ಈ ಮಂತ್ರಪಠನಸಾಮರ್ಥ್ಯದಿಂದ ಪ್ರಯಾಣಮಾಡಿದವರು ಸುರಕ್ಷಿತವಾಗಿ ಹಿಂದಕ್ಕೆ ಬಂದು ಸೇರುವರು ಎಂದು ಪ್ರಸಿದ್ಧಿಯು.

ವನ್ನು ತರಬೇಕೆಂದು ಪ್ರಾರ್ಥಿಸಿದರು. ಗಾಯತ್ರಿಯು ಹಾಗೆಯೇ ಆಗಲೆಂದೊಪ್ಪಿ

> ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ॥

ಬಳಿಕ ಶ್ಯೇನಪಕ್ಷಿ ರೂಪದಲ್ಲಿದ್ದ ಗಾಯತ್ರಿಯು ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿ ಸೋಮವನ್ನು ಕಾಯುತ್ತಿದ್ದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರನ್ನು ತನ್ನ ಕರ್ಕಶವಾದ ಧ್ವನಿಯಿಂದಲೂ, ತೀಕ್ಷ್ಣವಾದ ಕೊಕ್ಕೆ, ಉಗುರು ಮೊದಲಾದ ಆಯುಧಗಳಿಂದಲೂ ಹೆದರಿಸಿತು. ಅದನ್ನು ನೋಡಿ ಸೋಮಪಾಲಕರು ಸ್ವಲ್ಪದೂರ ಓಡಿಹೋಗಲು ಆಗ ಶ್ಯೇನಪಕ್ಷಿಯು ಅಲ್ಲಿದ್ದ ಸೋಮವನ್ನು (ಸೋಮಲತೆಗಳನ್ನು) ತನ್ನ ಎರಡು ಕಾಲುಗಳಿಂದಲೂ, ಕೊಕ್ಕಿನಿಂದಲೂ ಕಚ್ಚಿ ಹಿಡಿದುಕೊಂಡು ಹಿಂದಕ್ಕೆ ಎಂದರೆ ಭೂಮಿಗೆ ಹಾರಿಬರಲು ಪ್ರಯತ್ನಿಸಿತು. ಸ್ವರ್ಗದಲ್ಲಿ ಸೋಮವನ್ನು ರಕ್ಷಿಸುತ್ತಿದ್ದ ಸೋಮಪಾಲಕರು ಯಾರು? ಅವರ ಹೆಸರುಗಳೇನು? ಎಂಬ ವಿಷಯವನ್ನು—

> ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾಸ್ತಾನ್ ರಕ್ಷಧ್ವಂ ಮಾ ವೋ ದಭನ್
>
> (ತೈ. ಸಂ. ೧-೨-೭-೧)
>
> ಸ್ವಾನ ಭ್ರಾಜೇತ್ಯಾಹೈತೇ ವಾ ಅಮುಷ್ಮಿನ್ ಲೋಕೇ ಸೋಮಮರಕ್ಷನ್
>
> (ತೈ. ಸಂ. ೬-೧-೧೦-೫)

ಎಂಬ ಯಜುರ್ವೇದ ಮಂತ್ರಗಳಲ್ಲಿ ಹೇಳಿರುವುದು. ಎಂದರೆ—ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬುವರು ಸೋಮಪಾಲಕರು. ಎಲೈ ಸೋಮಪಾಲಕರೇ ನಿಮ್ಮ ಆಧೀನದಲ್ಲಿರುವ ಈ ಸೋಮವನ್ನು ಯಾರೂ ಅಪಹರಿಸದಂತೆ ಅದನ್ನು ಜಾಗರೂಕತೆಯಿಂದ ರಕ್ಷಿಸಿ, ಎಂದು ಮೊದಲನೆಯ ಮಂತ್ರದ ಅರ್ಥವು. ಸ್ವಾನ, ಭ್ರಾಜ ಮೊದಲಾದ ಸೋಮರಕ್ಷಕರು ಸ್ವರ್ಗದಲ್ಲಿದ್ದ ಸೋಮವನ್ನು ರಕ್ಷಿಸುತ್ತಿದ್ದರು ಎಂದು ಎರಡನೆಯ ಮಂತ್ರದ

ಅರ್ಥವು. ಮೇಲೆ ಹೇಳಿದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರ ರಕ್ಷಣೆಗೊಳಪಟ್ಟಿದ್ದ ಸೋಮವನ್ನು ಶ್ಯೇನಪಕ್ಷಿಯು ಈರೀತಿ ಅಪಹರಿಸಿ ಭೂಮಿಗೆ ತರುವಾಗ ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸುಗಳು ಕಳೆದುಕೊಂಡಿದ್ದ ನಾಲ್ಕು ಅಕ್ಷರಗಳನ್ನು ಹಿಂದಕ್ಕೆ ತಂದಿತು. ಈ ನಾಲ್ಕು ಅಕ್ಷರಗಳೂ, ಗಾಯತ್ರಿಗೆ ಪೂರ್ವದಲ್ಲಿದ್ದ ನಾಲ್ಕು ಅಕ್ಷರಗಳೂ ಸೇರಿ ಗಾಯತ್ರಿಯ ಪಾದಕ್ಕೆ ಎಂಟಕ್ಷರಗಳಾದವು.

> ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯ-ಕೋಽಭವತ್ತಸ್ಮಾತ್ಸ ನಖಮಿವ ಯದ್ವಶಮಸ್ರವತ್ಸಾ ವಶಾಭವತ್ತಸ್ಮಾತ್ಸಾ ಹವಿರಿವಾಥ ಯಃ ಶಲ್ಯೋ ಯದನೀಕಮಾಸೀತ್ಸ ಸರ್ಪೋ ನಿರ್ದಂಶ್ಯಭವತ್ಸಹಸಃ ಸ್ವಜೋ ಯಾನಿ ಪರ್ಣಾನಿ ತೇ ಮಂಥಾವಲಾ ಯಾನಿ ಸ್ನಾವಾನಿ ತೇ ಗಂಡೂಪದಾ ಯತ್ತೇಜನಂ ಸೋಽಂಧಾಹಿಃ ಸೋ ಸಾ ತಥೇಷುರಭವತ್ ॥
>
> (ಐ. ಬ್ರಾ. ೧೩-೨೬)

ಸ್ವರ್ಗದಲ್ಲಿ ಸೋಮವನ್ನು ರಕ್ಷಿಸುತ್ತಿದ್ದ ಗಂಧರ್ವರು ಸ್ವಾನ, ಭ್ರಾಜ ಮೊದಲಾದ ಏಳುಮಂದಿ. ಇವರಲ್ಲಿ ಕೃಶಾನು ಎಂಬುವನು ಏಳನೆಯವನು. ಈ ಕೃಶಾನುವು-- ಗಾಯತ್ರಿಯು ಶ್ಯೇನರೂಪದಿಂದ ಸೋಮವನ್ನು ಅಪಹರಿಸಿಕೊಂಡು ಹೋಗುತ್ತಿರುವುದನ್ನು ನೋಡಿ, ಅದನ್ನು ಅಟ್ಟಿಸಿಕೊಂಡು ಹೋಗಿ ಅದನ್ನು ಹಿಡಿಯಲು ಸಾಧ್ಯವಾಗದ್ದರಿಂದ ತನ್ನ ಕೈಲಿದ್ದ ಧನುಸ್ಸಿನಿಂದ ಒಂದು ಬಾಣವನ್ನು ಬಿಟ್ಟನು. ಅದು ಆ ಶ್ಯೇನಪಕ್ಷಿಯ ಎಡಗಾಲಿನ ಉಗುರಿಗೆ ತಗಲಿ ಅದು ಕತ್ತರಿಸಿಹೋಯಿತು. ಕತ್ತರಿಸಿಹೋದ ಆ ನಖವು (ಉಗುರು) ಒಂದು ಕೋತಿಯ ಗಾತ್ರವಿರುವ ಒಂದು ಮುಳ್ಳು ಹಂದಿಯಾಗಿ (Porcupine) ಪರಿಣಮಿಸಿತು. ಈ ಮುಳ್ಳುಹಂದಿಯ ಪುಚ್ಛಾಗ್ರಭಾಗದಲ್ಲಿ ಪ್ರಾದೇಶಮಾತ್ರಪರಿಮಿತವಾದ ತೀಕ್ಷ್ಣಾಗ್ರಭಾಗವುಳ್ಳ ಮತ್ತು ಕಬ್ಬಿಣದ ಸಲಾಕೆಗಳಂತೆ ಕಠಿನವಾಗಿಯೂ ಮೊನುಚಾಗಿಯೂ ಇರುವ ಅನೇಕ ಮುಳ್ಳುಗಳಿರುವವು. ಇಂತಹ ಮೃಗಕ್ಕೆ ಶಲಲ್ಯ ಅಥವಾ ಶಲ್ಯಕ (ಮುಳ್ಳುಹಂದಿ) ಎಂದು ಹೆಸರು. ಈ ಮೃಗವು ಶ್ಯೇನಪಕ್ಷಿಯ ಕತ್ತರಿಸಿದ ನಖದಿಂದ ಉತ್ಪನ್ನವಾದಕಾರಣ ಇದರ ಮುಳ್ಳುಗಳು ಉಗುರಿನಂತೆ ಅತಿ ತೀಕ್ಷ್ಣವಾಗಿರುವವು. ಬಾಣದಿಂದ ಉಗುರು ಕತ್ತರಿಸಿ ಬೀಳುವಾಗ ಉಗುರಿನ ಸಮೀಪದಲ್ಲಿದ್ದ ದ್ರವರೂಪವಾದ ವಶಾ ಅಥವಾ ಮೇದಸ್ಸು ಸ್ರವಿಸುತ್ತಿದ್ದಿತು. ಈ ಮೇದಸ್ಸು ಅಜಾ, ಅವಿ (ಹೆಣ್ಣು ಆಡು) ಯಾಗಿ ಪರಿವರ್ತಿತವಾಯಿತು. ಶ್ಯೇನರೂಪದಲ್ಲಿದ್ದ ಗಾಯತ್ರಿಯಿಂದ ಈ ಅಜವು ಉತ್ಪನ್ನವಾದುದರಿಂದ ಇದು ದೇವತಾಯೋಗ್ಯವಾಗಿ ಯಜ್ಞಾದಿಗಳಲ್ಲಿ ಯೋಗ್ಯವಾದ ಹವಿಸ್ಸೆಂದು ನಿಶ್ಚಯಿಸಲ್ಪಟ್ಟಿತು. ಯಜುರ್ವೇದಾದಿಗಳಲ್ಲಿ ಈ ವಿಷಯವು—ಏತಾಮೇವ ವಶಾ-ಮಾದಿತ್ಯೇಭ್ಯಃ ಕಾಮಾಯಾಲಭೇತ ಇತ್ಯಾದಿ ಮಂತ್ರಗಳಿಂದ ನಿರ್ದೇಶಿಸಲ್ಪಟ್ಟಿರುವುದು. ಕೃಶಾನುವೆಂಬ ಗಂಧರ್ವನಿಂದ ಶ್ಯೇನಪಕ್ಷಿಯ ಮೇಲೆ ಬಿಟ್ಟ ಬಾಣವು ಅದರ ನಖವನ್ನು ಕತ್ತರಿಸುವಾಗ ಕಠಿಣವಾದ ನಖಕ್ಕೆ ತಗಲಿ, ಆ ಬಾಣದ ಮೊನುಚಾದ ತುದಿಯು ಮೊಂಡಾಯಿತು. ಬಾಣದ ಶಲಾಕ ಅಥವಾ ಕಡ್ಡಿಯು ಕಚ್ಚಲು ಶಕ್ತಿಯಿಲ್ಲದ ಒಂದು ಸರ್ಪವಾಗಿ ಪರಿಣಮಿಸಿತು. ಇದಕ್ಕೆ ದುಂದುಭವೆಂದು ಹೆಸರು. ಈ ದುಂದುಭವೆಂಬ ಸರ್ಪವು ಯಾವಾಗಲೂ ನೀರಿನಲ್ಲಿಯೇ ಸಂಚರಿಸುವ ಹಾವಾಗಿ ವಿಷವಿಲ್ಲದಿರುವುದರಿಂದ ಇದು ಯಾವ ಪ್ರಾಣಿಯನ್ನೂ ಕಚ್ಚಿ ಕೊಲ್ಲಲು ಸಮರ್ಥವಾಗಿರುವುದಿಲ್ಲ. ಬಾಣದ ಮೊನುಚಾಗಿರುವ ಲೋಹಮಯವಾದ (ಕಬ್ಬಿಣದ) ತುದಿಯು ತನ್ನ ಹರಿತವನ್ನು ಕಳೆದುಕೊಂಡು ಮೊಂಡಾಗಿ ಸ್ವಜವೆಂಬ ಎರಡು ಶಿರಸ್ಸುಗಳುಳ್ಳ ಹಾವಾಯಿತು. ಬಾಣವು ವೇಗವಾಗಿ ಹೋಗುವುದಕ್ಕಾಗಿ

ಅದರ ಬುಡದಲ್ಲಿ ಕಟ್ಟಿದ್ದ ಪಕ್ಷಿಯ ರೆಕ್ಕೆಗಳು ಆಲ ಮೊದಲಾದ ವೃಕ್ಷಗಳ ಬೀಳುಗಳಾದವು. ಆಲದ ಮರದ ಶಾಖೆಗಳಿಂದ ಅಧೋಮುಖವಾಗಿ ಬೀಳು ಬಿಟ್ಟು ಭೂಮಿಯನ್ನು ಸಂಸ್ಪರ್ಶಮಾಡಿ ಬೇರುಗಳಾಗುವ ಬೀಳು ಅಥವಾ ಜೋಲುಗಳಿಗೆ ಮಂಥಾವಲಾ ಎಂದು ಹೆಸರು. ಬಾಣದಲ್ಲಿ ಕಟ್ಟಿದ್ದ ರೆಕ್ಕೆಗಳೇ ಈ ಮಂಥಾವಲಗಳಾದವು. ಬಾಣಕ್ಕೆ ರೆಕ್ಕೆಗಳನ್ನು ಸೇರಿಸಿ ಕಟ್ಟಿದ್ದ ದಾರದಂತಿರುವ ಸ್ನಾಯುಗಳು (ನರಗಳು) ಗಂಡೂಪದವೆಂಬ ಕ್ರಿಮಿವಿಶೇಷಗಳಾದವು. ಆ ಬಾಣವನ್ನು ನಿರ್ಮಿಸುವುದಕ್ಕಾಗಿ ಉಪಯೋಗಿಸಿದ ಮರದ ಕಡ್ಡಿಯು ದೃಷ್ಟಿರಹಿತವಾದ, ಕಣ್ಣುಗಳಿಲ್ಲದ ಅಂಧಾಹಿಃ ಎಂಬ ಸರ್ಪವಾಯಿತು. ಕೃಶಾನುವೆಂಬ ಗಂಧರ್ವನಿಂದ ಬಿಟ್ಟ ಆ ಬಾಣವು ಮೇಲೆ ಹೇಳಿದ ಅನೇಕ ವಿಧ ಪ್ರಾಣಿಗಳಾದವು.

> ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ನಖೇನ ಸಮಗೃಭ್ಣಾತ್ತತ್ತೃತೀಯಸವನಮಭವತ್ ॥

ಶ್ಯೇನಪಕ್ಷಿಯು ಸ್ವರ್ಗದಿಂದ ಸೋಮವನ್ನು ತರುವಾಗ ಸೋಮಲತೆಗಳನ್ನು ತನ್ನ ಎರಡು ಕಾಲುಗಳಿಂದಲೂ, ಕೊಕ್ಕಿನಿಂದಲೂ ಕಚ್ಚಿಕೊಂಡು ತಂದಿತೆಂದು ಹಿಂದೆಯೇ ಹೇಳಿದೆಯಷ್ಟೆ. ಆರೀತಿ ತರುತ್ತಿರುವಾಗ ಪಕ್ಷಿಯು ತನ್ನ ಬಲಗಾಲಿನಿಂದ ಹಿಡಿದುಕೊಂಡು ತಂದ ಸೋಮವು (ಅಥವಾ ಸೋಮಲತೆಯು) ಪ್ರಾತಃಸವನವಾಯಿತು. ಗಾಯತ್ರಿಯು ಅದನ್ನು ಎಂದರೆ ಪ್ರಾತಸ್ಸವನವನ್ನು ತನ್ನ ಸ್ವಕೀಯಸ್ಥಾನವನ್ನಾಗಿ ಮಾಡಿಕೊಂಡಿತು. ಆದ್ದರಿಂದ ಸಮಸ್ತ ಸವನಗಳಲ್ಲಿಯೂ ಪ್ರಾತಃಸವನವೇ ಸರ್ವಶ್ರೇಷ್ಠವೆಂದು ಯಾಜ್ಞಿಕರ ಅಭಿಮತವು. ಆ ಪ್ರಾತಸ್ಸವನಕರ್ಮದಲ್ಲಿ ಮಂತ್ರಾದಿಗಳ ಪ್ರಯೋಗವೂ ವಿಶೇಷವಾಗಿರುವುದು. ಆದುದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವ ಪುರುಷನು ತನ್ನ ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನೂ ಮುಖ್ಯನೂ ಆಗಿರುವನೆಂದು ಪರಿಗಣಿಸಲ್ಪಡುವನು. ಗಾಯತ್ರಿಯು ಎಡಗಾಲಿನಿಂದ ಹಿಡಿದುಕೊಂಡು ತಂದ ಸೋಮದ ಭಾಗವು ಮಾಧ್ಯಂದಿನಸವನವೆಂದು ಪ್ರಸಿದ್ಧವಾಯಿತು. ಎಡಗಾಲಿನಿಂದ ಸೋಮಲತೆಯನ್ನು ಹಿಡಿದುಕೊಂಡು ತರುವಾಗ ಬಲಗಾಲಿಗಿರುವಷ್ಟು ಶಕ್ತಿಯು ಎಡಗಾಲಿಗಿಲ್ಲದಿರುವುದರಿಂದ ಆ ಲತೆಗಳು ಕಾಲಿನಿಂದ ಆಗಾಗ ಸ್ವಲ್ಪ ಸ್ವಲ್ಪ ಜಾರುತ್ತಿದ್ದಿತು. ಈ ಕಾರಣದಿಂದ ಈ ಮಾಧ್ಯಂದಿನಸವನವು ಪ್ರಾತಃಸವನದಂತೆ ಶಕ್ತಿಸಾಮರ್ಥ್ಯಗಳಲ್ಲಿ ಸರಿಸಮನಾಗಲಿಲ್ಲ. ಇದನ್ನು ಕಂಡು ದೇವತೆಗಳು ವಿಚಾರವಿಮರ್ಶೆಮಾಡಿ ಮಾಧ್ಯಂದಿನಸವನಕರ್ಮದಲ್ಲಿ ಉಪಯೋಗಿಸುವ ಛಂದಸ್ಸುಗಳಿಗಾಗಿ ತ್ರಿಷ್ಟುಪ್‌ಛಂದಸ್ಸನ್ನೂ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನನ್ನೂ ಸ್ಥಾಪಿಸಿದರು. ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಮತ್ತು ಅವನಿಗೆ ಪ್ರಿಯವಾದ ತ್ರಿಷ್ಟುಪ್‌ಛಂದಸ್ಸಿನ ಸಾಹಚರ್ಯದಿಂದ ಮಾಧ್ಯಂದಿನಸವನವು ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಪ್ರಾತಸ್ಸವನಕ್ಕೆ ಸರಿಸಮನಾದ ಸ್ಥಾನವನ್ನು ಪಡೆಯಿತು. ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳ ಈ ವಿಧವಾದ ಸರಿಸಮಾನತೆ

ಯನ್ನೂ, ಶಕ್ತಿಸಾಮರ್ಥ್ಯಗಳನ್ನೂ, ಶ್ರೇಷ್ಠತೆಯನ್ನೂ ತಿಳಿದಿರುವ ಪುರುಷನು ಧನಾದಿಗಳಲ್ಲಿ ಸಮೃದ್ಧಿಯನ್ನೂ, ಶ್ರೇಯಸ್ಸನ್ನೂ ಪಡೆದು ಸುಖಿಸುವನು. ಬಳಿಕ ಶ್ಯೇನರೂಪದಿಂದಿದ್ದ ಆ ಗಾಯತ್ರಿಯು ತನ್ನ ಕೊಕ್ಕಿನಿಂದ ಕಚ್ಚಿತಂದ ಸೋಮದ ಭಾಗವು ತೃತೀಯಸವನವೆಂದು ಪ್ರಸಿದ್ಧವಾಯಿತು.

> ತಸ್ಯ ಪತಂತೀ ರಸಮಧಯತ್ತದ್ವಿತೀಯರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯದಾಶಿರಮವನಯಂತ್ಯಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನೈಃ ಸಮಾವದ್ವೀ-ರ್ಯೈಃ ಸಮಾವಜ್ಞಾಮಿಭೀ ರಾಧ್ನೋತಿ ಯ ಏವಂ ವೇದ ॥
>
> (ಐ. ಬ್ರಾ. ೧೩-೨೭)

ಗಾಯತ್ರಿಯು (ಶ್ಯೇನವು) ತನ್ನ ಕೊಕ್ಕಿನಿಂದ ಸೋಮಲತೆಯನ್ನು ಕಚ್ಚಿಕೊಂಡು ಬರುತ್ತಿರುವಾಗ ಆ ಲತೆಯಲ್ಲಿದ್ದ ರಸವನ್ನು ಸ್ವಲ್ಪ ಸ್ವಲ್ಪವಾಗಿ ಹೀರಿ ಕುಡಿಯುತ್ತಿದ್ದಿತು. ಆದ್ದರಿಂದ ಎಂದರೆ ಕೊಕ್ಕಿನಿಂದ ತಂದ ಸೋಮಲತೆಗಳಲ್ಲಿ ರಸವು ಹೆಚ್ಚಾಗಿಲ್ಲದೆ ಕಮ್ಮಿಯಾಗಿದ್ದುದರಿಂದ ಈ ತೃತೀಯಸವನವು ಶಕ್ತಿಸಾಮರ್ಥ್ಯಾದಿಗಳಲ್ಲಿ ಪ್ರಾತಃಸವನ ಮಾಧ್ಯಂದಿನಸವನಗಳಿಗೆ ಸರಿಸಮನಾಗಲಿಲ್ಲ. ಆದ್ದರಿಂದ ಈ ವಿಷಯವನ್ನು ಕಂಡ ದೇವತೆಗಳು ವಿಚಾರಮಾಡಿ ಇದಕ್ಕೆ ತಕ್ಕ ಸಾಧನೋಪಾಯವು ಪಶುಗಳಲ್ಲಿರುವುದೆಂದು ಕಂಡುಕೊಂಡರು. ಪಶುಗಳಲ್ಲಿ ಹಾಲು, ಅದರಿಂದ ಲಬ್ಧವಾಗುವ ಆಜ್ಯ (ತುಪ್ಪ) ಮೊದಲಾದ ಹವಿರ್ದ್ರವ್ಯಗಳು ದೊರಕುವವು. ಕ್ಷೀರವನ್ನು ಅಥವಾ ಹಾಲನ್ನು ಲತೆಗಳಲ್ಲಿ ಕಮ್ಮಿಯಾಗಿರುವ ಸೋಮರಸಕ್ಕೆ ಬೆರಸಿದರೆ ಆ ರಸವು ಶಕ್ತಿಯುತವಾಗುವುದು. ಆಜ್ಯದಿಂದಲೂ, ಪಶುಗಳ ಅವಯವ ಗಳಿಂದಲೂ ಹೋಮಾದಿಗಳನ್ನು ಮಾಡಿದರೆ ಸವನಕರ್ಮವು ಸಾಂಗವಾಗುವುದು. ಆದುದರಿಂದ ಯಜ್ಞಕ್ರಮವನ್ನು ತಿಳಿದವರು ತೃತೀಯಸವನದಲ್ಲಿ ಉಪಯೋಗಿಸುವ ಋಜೀಷಕ್ಕೆ (ಪ್ರಾತಃಸವನ ಮಾಧ್ಯಂದಿನಸವನಗಳಲ್ಲಿ ರಸವನ್ನು ತೆಗೆದ ಬಳಿಕ ಉಳಿದಿರುವ ಸೋಮಲತೆಯ ಸಿಪ್ಪೆಗಳಿಗೆ ಋಜೀಷವೆಂದು ಹೇಳುವರು) ಹಾಲು ಮೊದಲಾದ ಆಶಿರ ದ್ರವ್ಯಗಳನ್ನು ಸೇರಿಸುವುದರಿಂದ, ಪಶುಗಳಿಂದ ಲಭಿಸತಕ್ಕ ಆಜ್ಯದಿಂದ ಮತ್ತು ಪಶುಗಳ ಹೃದಯಾದ್ಯಂಗಗಳಿಂದ ಹೋಮಗಳನ್ನು ಮಾಡುವುದರಿಂದಲೂ ತೃತೀಯಸವನಕರ್ಮವು ಪ್ರಾತಸ್ಸವನಮಾಧ್ಯಂದಿನಸವನಗಳಿಗೆ ಶಕ್ತಿ ಸಾಮರ್ಥ್ಯಾದಿಗಳಲ್ಲಿ ಸರಿಸಮನಾಗುವುದು ಎಂದು ತಿಳಿದು ಅದರಂತೆ ಆಚರಿಸುವರು. ಈ ವಿಷಯವು ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—

> ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್‌ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾ-ತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನ-ಯತಿ ಸಶುಕ್ರತ್ವಾಯ ॥
>
> (ತೈ. ಸಂ. ೬-೧-೬-೪)

ಎಂದು ತೈತ್ತಿರೀಯಸಂಹಿತೆಯಲ್ಲಿ ಇದೇ ಅಭಿಪ್ರಾಯವು ಉಕ್ತವಾಗಿದೆ. ಈ ವಿಷಯವನ್ನು ಎಂದರೆ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳೂ ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಸರಿಸಮನಾದ ಸ್ಥಾನವನ್ನು ಪಡೆದಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಸರ್ವ ಸಮೃದ್ಧಿಯುಕ್ತನಾಗಿ ಸುಖಿಸುವನು.

ತೇ ವಾ ಇಮೇ ಇತರೇ ಛಂದಸೀ ಗಾಯತ್ರೀಮಭ್ಯವದೇತಾಂ ವಿತ್ತಂ ನಾವಕ್ಷರಾಣ್ಯನುಪರ್ಯಾಗುರಿತಿ ನೇತ್ಯಬ್ರವೀದ್ಗಾಯತ್ರೀ ಯಥಾವಿತ್ತಮೇವ ನ ಇತಿ ತೇ ದೇವೇಷು ಪ್ರಶ್ನಮೈತಾಂ ತೇ ದೇವಾ ಅಬ್ರುವನ್ಯಥಾವಿತ್ತಮೇವ ಪ ಇತಿ ತಸ್ಮಾದ್ಧಾಪ್ಯೇತರ್ಹಿ ವಿತ್ತ್ಯಾಂ ವ್ಯಾಹುರ್ಯಥಾವಿತ್ತಮೇವ ನ ಇತಿ ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭತ್ತ್ರ್ಯಕ್ಷರಾ ತ್ರಿಷ್ಟುಬೇಕಾಕ್ಷರಾ ಜಗತೀ ||

(ಐ. ಬ್ರಾ. ೧೩-೩೮)

ಹಿಂದೆ ತ್ರಿಷ್ಟುಪ್ ಜಗತೀ ಛಂದಸ್ಸುಗಳು ಸೋಮವನ್ನು ತರುವುದಕ್ಕಾಗಿ ಸ್ವರ್ಗಕ್ಕೆ ಹಾರಿಹೋಗುವಾಗ ಸ್ವರ್ಗವನ್ನು ತಲಪದೆ ಅರ್ಧದಾರಿಯಲ್ಲಿಯೇ ಬಳಲಿ ಹಿಂತಿರುಗಬೇಕಾಯಿತೆಂದೂ, ಆ ಕಾರಣಕ್ಕಾಗಿ ಅವು ತಮ್ಮ ನಾಲ್ಕು ಅಕ್ಷರಗಳಲ್ಲಿ ಜಗತೀಛಂದಸ್ಸು ಮೂರು ಅಕ್ಷರಗಳನ್ನೂ, ತ್ರಿಷ್ಟುಪ್‌ಛಂದಸ್ಸು ಒಂದು ಅಕ್ಷರವನ್ನೂ ಕಳೆದುಕೊಂಡವೆಂದು ಹಿಂದೆಯೇ ಹೇಳಲಾಗಿದೆಯಷ್ಟೆ. ಗಾಯತ್ರಿಯು ಸೋಮವನ್ನು ತಂದಾಗ ತ್ರಿಷ್ಟುಬ್ಜಗತಿಗಳು ಕಳೆದುಕೊಂಡಿದ್ದ ನಾಲ್ಕು ಅಕ್ಷರಗಳನ್ನು ಹಿಂದಕ್ಕೆ ತಂದು ಅದನ್ನು ತನ್ನ ಸ್ವಕೀಯವಾದ ನಾಲ್ಕು ಅಕ್ಷರಗಳ ಜತೆಗೆ ಸೇರಿಸಿಕೊಂಡು, ತನಗೆ ಒಟ್ಟು ಎಂಟು ಅಕ್ಷರಗಳಾಗುವಂತೆ ಮಾಡಿಕೊಂಡಿತೆಂದೂ ಸಹ ಹಿಂದೆ ಹೇಳಿದೆ. ಇದನ್ನು ಕಂಡು ತ್ರಿಷ್ಟುಬ್ಜಗತೀಛಂದಸ್ಸುಗಳು ಗಾಯತ್ರಿಯ ಸಮೀಪಕ್ಕೆ ಬಂದು - ಎಲೈ ಗಾಯತ್ರಿಯೇ, ಸ್ವರ್ಗದಲ್ಲಿ ನಾವು ಬಿಟ್ಟುಬಂದ ನಾಲ್ಕು ಅಕ್ಷರಗಳನ್ನು ನೀನು ಹಿಂದಕ್ಕೆ ತಂದದ್ದೇನೋ ಸರಿಹೋಯಿತು. ಆದರೆ ಅವುಗಳನ್ನು ನಿನ್ನ ನಾಲ್ಕು ಅಕ್ಷರಗಳ ಜತೆಗೆ ಸೇರಿಸಿಕೊಂಡಿರುವುದು ಮಾತ್ರ ಸರಿಯಲ್ಲ. ಆ ಅಕ್ಷರಗಳು ನಮಗೆ ಸೇರಿದ್ದಾದುದರಿಂದ ಅದನ್ನು ನಮಗೆ ನೀನು ಹಿಂದಕ್ಕೆ ಕೊಡಬೇಕು ಎಂದು ಕೇಳಿದವು. ಅವುಗಳ ಮಾತನ್ನು ಗಾಯತ್ರಿಯು ನಿರಾಕರಿಸುತ್ತಾ ಇಂತೆಂದಿತು—ನಮ್ಮ ವಶದಲ್ಲಿ ಯಾವ ಪದಾರ್ಥವಿರುವುದೋ ಎಂದರೆ, ಯಾವುದನ್ನು ನಾವು ಸಂಪಾದಿಸಿರುವೆವೋ ಅದು ನಮಗೇ ಸೇರಬೇಕಾದುದು ಧರ್ಮವು. ಲೋಕವ್ಯವಹಾರದಲ್ಲಿಯೂ ಸಹ ಒಂದು ವಸ್ತುವು ಒಬ್ಬನ ಸ್ವಾಧೀನಾನುಭವದಲ್ಲಿದ್ದರೆ ಅದು ಅವನಿಗೇ ಸೇರಿರುವುದೆಂದು ನ್ಯಾಯವನ್ನು ತಿಳಿದವರು ಹೇಳುವರು. ಸ್ವರ್ಗಲೋಕಕ್ಕೆ ಹೋಗಿ ಸೋಮವನ್ನು ತರುವುದರಲ್ಲಿ ಕಾರ್ಯಸಿದ್ಧಿಯನ್ನು ಮಾಡಿಕೊಂಡು, ನೀವು ಕಳೆದುಕೊಂಡಿದ್ದ ಅಕ್ಷರಗಳನ್ನು ಹಿಂದಕ್ಕೆ ತಂದ ನನಗೆ ಮಾತ್ರ ಆ ಅಕ್ಷರಗಳು ಸೇರಬೇಕು. ಅವುಗಳನ್ನು ನಿಮಗೆ ಕೊಡುವುದಕ್ಕಾಗುವುದಿಲ್ಲ ಎಂದಿತು. ಇದನ್ನು ಕೇಳಿ ಆ ತ್ರಿಷ್ಟುಬ್ಜಗತಿಗಳು ದೇವತೆಗಳ ಸಮೀಪಕ್ಕೆ ಹೋಗಿ ಅವರಲ್ಲಿ ತಮ್ಮ ದೂರನ್ನು ಹೇಳಿಕೊಂಡವು. ಅವರೂ ಸಹ ಲೋಕವ್ಯವಹಾರದಲ್ಲಿ ಬಳಕೆಯಲ್ಲಿರುವ ಎಂದರೆ, ಒಂದು ವಸ್ತುವು ಯಾರ ಸ್ವಾಧೀನದಲ್ಲಿರುವುದೋ ಅದು ಅವರಿಗೇ ಸೇರಿದ್ದು ಎಂಬ ನ್ಯಾಯವನ್ನೇ ಎತ್ತಿಹಿಡಿದು ಅದನ್ನು ಸಮರ್ಥಿಸಿಸುತ್ತಾ, ಗಾಯತ್ರಿಯು ಹೇಳುವ ನ್ಯಾಯವೇ ಸರಿ. ಆ ಅಕ್ಷರಗಳನ್ನು ತಂದದ್ದರಿಂದ ಅವುಗಳು ಅದಕ್ಕೇ (ಗಾಯತ್ರಿಗೇ) ಸೇರಬೇಕು ಎಂದು ನುಡಿದರು. ಹೇಗೆಂದರೆ— ಯುದ್ಧಾದಿಗಳಲ್ಲಿ ಸೋತು ಓಡಿಹೋಗುತ್ತಿರುವ ಶತ್ರುಸೇನೆಗಳು ಬಿಟ್ಟುಹೋದ ವಸ್ತುಗಳನ್ನು ಗೆದ್ದವರಲ್ಲಿ ಯಾರಿಗೆ ಯಾವುದು ಸಿಕ್ಕುವುದೋ ಅದು ಅವರದೇ ಎಂದು ಎಲ್ಲರೂ ಒಪ್ಪುವರು. ಅದರಂತೆ ಇಲ್ಲಿಯೂ ಸಹ ನಡೆಯಬೇಕು.

ಎಂದು ದೇವತೆಗಳು ನ್ಯಾಯವನ್ನು ಪ್ರತಿಪಾದಿಸಿದರು. ಆದ್ದರಿಂದ ಗಾಯತ್ರಿಗೆ ತನ್ನ ಸ್ವಂತ ನಾಲ್ಕು ಅಕ್ಷರಗಳ ಜತೆಗೆ ಸ್ವರ್ಗದಿಂದ ತಂದ ತ್ರಿಷ್ಟುಬ್ಜಗತಿಗಳ ನಾಲ್ಕು ಅಕ್ಷರಗಳೂ ಸೇರಿ ಒಟ್ಟು ಎಂಟಕ್ಷರಗಳಾದವು. ತ್ರಿಷ್ಟುಪ್‌ಛಂದಸ್ಸಿಗೆ ಮೂರು ಅಕ್ಷರಗಳೇ ಉಳಿದವು. ಜಗತೀಛಂದಸ್ಸಿಗೆ ಒಂದು ಅಕ್ಷರ ಮಾತ್ರ ಉಳಿಯಿತು.

> ಸಾಷ್ಟಾಕ್ಷರಾ ಗಾಯತ್ರೀ ಪ್ರಾತಸ್ಸವನಮುದಯಚ್ಛನ್ನಾಶಕ್ನೋತ್ತ್ರಿಷ್ಟುಪ್ ತ್ರ್ಯಕ್ಷರಾ ಮಾಧ್ಯಂದಿನಂ ಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀತ್ತ್ರಿಷ್ಟುಪ್ತಾಂ ವೈ ಮೈತೈರಷ್ಟಾಭಿರಕ್ಷರೈರುಪಸಂಧೇಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾಯತ್ರ್ಯೈ ಮಧ್ಯಂದಿನೇ ಯನ್ಮರುತ್ವತೀಯಸ್ಯೋತ್ತರೇ ಪ್ರತಿಪದೋ ಯಶ್ಚಾನುಚರಃ ಸೈಕಾದಶಾಕ್ಷರಾ ಭೂತ್ವಾ ಮಾಧ್ಯಂದಿನಂ ಸವನಮುದಯಚ್ಛತ್ ॥

ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಮೂರು ಸವನಗಳಿರುವುವು ಎಂಬುದನ್ನು ಹಿಂದೆಯೇ ವಿವರಿಸಿದೆ. ಪ್ರಾತಸ್ಸವನದಲ್ಲಿ ನಡೆಯಬೇಕಾಗಿರುವ ಕಾರ್ಯಕಲಾಪಗಳನ್ನು ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೂ, ಮಾಧ್ಯಂದಿನಸವನದ ಕಾರ್ಯಕಲಾಪಗಳನ್ನು ತ್ರಿಷ್ಟುಪಛಂದಸ್ಸಿನ ಮಂತ್ರಗಳಿಂದಲೂ, ತೃತೀಯಸವನದ ಕಾರ್ಯ ಕಲಾಪಗಳನ್ನು ಜಗತೀಛಂದಸ್ಸಿನ ಮಂತ್ರಗಳಿಂದಲೂ ನೆರವೇರಿಸಬೇಕೆಂಬ ವಿಧಿ ಇರುವುದು.

ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳಾದುದರಿಂದ ಅದು ಪೂರ್ಣವಾದಂತಾಗಿ ಪ್ರಾತಸ್ಸವನದ ಕಾರ್ಯ ಕಲಾಪಗಳನ್ನು ನಿರ್ವಹಿಸಲು ಸಮರ್ಥವಾಯಿತು. ಆದರೆ ತ್ರಿಷ್ಟುಪ್‌ಛಂದಸ್ಸು ಒಂದು ಅಕ್ಷರವನ್ನು ಕಳೆದುಕೊಂಡು ಮೂರೇ ಅಕ್ಷರಗಳುಳ್ಳದ್ದಾಗಿರುವುದರಿಂದ ಅದಕ್ಕೆ ಮಾಧ್ಯಂದಿನಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಸಾಮರ್ಥ್ಯವಿಲ್ಲವಾಯಿತು. ಈ ರೀತಿ ಸಾಮರ್ಥ್ಯವಿಲ್ಲದಿದ್ದ ತ್ರಿಷ್ಟುಪ್‌ಛಂದಸ್ಸನ್ನು ನೋಡಿ ಗಾಯತ್ರಿಯು—ಎಲೈ ತ್ರಿಷ್ಟುಪ್ ಛಂದಸ್ಸೇ, ನಿನಗೆ ಕಾರ್ಯನಿರ್ವಾಹಶಕ್ತಿ ಇಲ್ಲದ್ದರಿಂದ ನಾನು ಮಾಧ್ಯಂದಿನಸವನಕಾರ್ಯಕಲಾಪಗಳಲ್ಲಿ ನಿನಗೆ ಸಹಾಯಾರ್ಥವಾಗಿ ಬರುವೆನು. ಆದರೆ ಆ ಸಹಾಯಕ್ಕೆ ಪ್ರತಿಫಲವಾಗಿ ಮಾಧ್ಯಂದಿನಸವನದಲ್ಲಿ ನನಗೂ ಒಂದು ಭಾಗವಿರಬೇಕು. ಅದಕ್ಕೆ ನೀನು ಒಪ್ಪುವಿಯಾದರೆ ನಾನು ನಿನಗೆ ಸಹಾಯಮಾಡುವೆನು ಎಂದಿತು. ಇದನ್ನು ಕೇಳಿ ತ್ರಿಷ್ಟುಪ್‌ಛಂದಸ್ಸು ಹಾಗೆಯೇ ಆಗಲೆಂದೊಪ್ಪಿ, ಎಲೈ ಗಾಯತ್ರಿಯೇ, ಈಗ ನನ್ನಲ್ಲಿ ಮೂರು ಅಕ್ಷರಗಳು ಮಾತ್ರವಿರುವವು. ಅವುಗಳ ಜತೆಗೆ ನಿನ್ನ ಎಂಟು ಅಕ್ಷರಗಳನ್ನು ಸೇರಿಸಿದರೆ ನನಗೆ ಹನ್ನೊಂದು ಅಕ್ಷರಗಳಾಗುವುದರಿಂದ ಕಾರ್ಯ ನಿರ್ವಾಹಮಾಡಲು ಶಕ್ತಿಯುಂಟಾಗುವುದು ಎಂದು ಹೇಳಿತು. ಆದರಂತೆ ಗಾಯತ್ರಿಯು ತನ್ನ ಎಂಟು ಅಕ್ಷರಗಳನ್ನು ತ್ರಿಷ್ಟುಪ್‌ಛಂದಸ್ಸಿನ ಮೂರು ಅಕ್ಷರಗಳೊಡನೆ ಸೇರಿಸಿತು. ಈ ರೀತಿ ಮಾಡಿದ್ದರಿಂದ ತ್ರಿಷ್ಟುಪ್‌ಛಂದಸ್ಸೂ ಸಹ ಮಾಧ್ಯಂದಿನಸವನದಲ್ಲಿ ಕಾರ್ಯನಿರ್ವಾಹವನ್ನು ಮಾಡಲು ಸಮರ್ಥವಾಯಿತು. ಮಾಧ್ಯಂದಿನಸವನದಲ್ಲಿ ತನಗೂ ಒಂದು ಭಾಗವಿರಬೇಕೆಂದು ಗಾಯತ್ರಿಯು ಕೇಳಿದ್ದಕ್ಕೆ ತ್ರಿಷ್ಟುಪ್ ಹಾಗೆಯೇ ಆಗಲೆಂದು ಹೇಳಿರುವುದು ಸರಿಯಷ್ಟೆ. ಮಾಧ್ಯಂದಿನಸವನದಲ್ಲಿ ಗಾಯತ್ರಿಯ ಭಾಗವು ಯಾವುದು ಎಂದರೆ—ಮಾಧ್ಯಂದಿನಸವನಕಾಲದಲ್ಲಿ ಪಠಿಸುವ ಮರುತ್ವತೀಯ ಶಸ್ತ್ರಮಂತ್ರಗಳ ಕೊನೆಯ ಭಾಗದಲ್ಲಿ ಆ ತ್ವಾ ರಥಂ ಯಥೋತಯೇ (ಋ. ಸಂ. ೮–೬೮–೧) ಎಂದು ಪ್ರಾರಂಭವಾಗುವ ತೃಚದಲ್ಲಿಯೂ (ತೃಚವೆಂದರೆ ೩ ಋಕ್ಕುಗಳು) ಅದರ ಮುಂದಿನ ವಿಶ್ವಾನರಸ್ಯ ವಸ್ಪತಿಃ (ಋ. ಸಂ. ೮–೬೮–೪) ಎಂಬ ತೃಚದಲ್ಲಿಯೂ ಎರಡೆರಡು ಋಕ್ಕುಗಳು ಗಾಯತ್ರೀಛಂದಸ್ಕಗಳಾಗಿರುವವು. ಎಂದರೆ, ಆ ತ್ವಾ ರಥಂ ಯಥೋತಯೇ ಎಂಬ ತೃಚದಲ್ಲಿ ತುವಿಶುಷ್ಮ ತುವಿಕ್ರತೋ ಮತ್ತು ಯಸ್ಯ ತೇ ಮಹಿನಾ

ಮಹಃ (ಋ. ಸಂ. ೬-೬೮-೨, ೩ನೆಯ ಋಕ್ಕುಗಳು) ಎಂಬ ಎರಡು ಋಕ್ಕುಗಳೂ, ವಿಶ್ವಾನರಸ್ಯ ವಸ್ಪತಿಃ ಎಂಬ ಎರಡನೆಯ ತೃಚದಲ್ಲಿ ಅಭಿಷ್ಟಯೇ ಸದಾವೃಧಂ ಮತ್ತು ಪರೋಮಾತ್ರಮೃಚೀಷಂ (ಋ. ಸಂ. ೮-೬೮-೫, ೬ನೆಯ ಋಕ್ಕುಗಳು) ಎಂಬ ಎರಡು ಋಕ್ಕುಗಳೂ. ಸೇರಿ ಪ್ರತಿಪತ್ತೃಚದಲ್ಲಿ ನಾಲ್ಕು ಗಾಯತ್ರೀಛಂದಸ್ಸಿನ ಮಂತ್ರಗಳಿರುವವು. ಪ್ರತಿಪತ್ತೃಚವೆಂದರೆ—ಪ್ರಾರಂಭದಲ್ಲಿ ಪಠಿಸುವ ಋಕ್ಕುಗಳು. ಇನ್ನು ಅನುಚರವೆಂಬ ಕೊನೆಯಲ್ಲಿ ಪಠಿಸುವ ತೃಚದ ಮೊದಲನೆಯ ಋಕ್ಕಾದ ಇದಂ ವಸೋ ಸುತಮಂಧಃ ಎಂಬ ಮಂತ್ರವೂ ಗಾಯತ್ರೀಛಂದಸ್ಕವು. ಆದ್ದರಿಂದ ಪ್ರತಿಪತ್ತೃಚಗಳಲ್ಲಿರುವ ೪ ಗಾಯತ್ರೀಛಂದಸ್ಸಿನ ಋಕ್ಕುಗಳೂ, ಅನುಚರಸ್ತೃಚದಲ್ಲಿರುವ ೧ ಗಾಯತ್ರೀ ಛಂದಸ್ಸಿನ ಋಕ್ಕೂ ಸೇರಿ ಒಟ್ಟು ೫ ಗಾಯತ್ರೀಛಂದಸ್ಕವಾದ ಋಕ್ಕುಗಳು ಮಾಧ್ಯಂದಿನಸವನದಲ್ಲಿರುವವು. ಈ ೫ ಋಕ್ಕುಗಳೇ ಮಾಧ್ಯಂದಿನಸವನದಲ್ಲಿ ಗಾಯತ್ರಿಗೆ ಸಲ್ಲಬೇಕಾದ ಭಾಗವೆಂದು ನಿರ್ದಿಷ್ಟವಾಗಿರುವುದು.

> ನಾಶಕ್ನೋಜ್ಜಗತ್ಯೇಕಾಕ್ಷರಾ ತೃತೀಯಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀಜ್ಜಗತೀ ತಾಂ ವೈ ಮೈತೈರೇಕಾದಶಭಿರಕ್ಷರೈರುಪಸಂಧೇಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾಯತ್ರ್ಯೈ ತೃತೀಯಸವನೇ ಯದ್ವೈಶ್ವದೇವಸ್ಯೋತ್ತರೇ ಪ್ರತಿಪದೋ ಯಶ್ಚಾನುಚರಃ ಸಾ ದ್ವಾದಶಾಕ್ಷರಾ ಭೂತ್ವಾ ತೃತೀಯಸವನಮುದಯಚ್ಛತ್ ॥

ಜಗತೀಛಂದಸ್ಸೂ ಸಹ ಮೂರುಅಕ್ಷರಗಳನ್ನು ಕಳೆದುಕೊಂಡು ಒಂದೇ ಅಕ್ಷರವುಳ್ಳದ್ದಾಗಿದ್ದಿತು. ಆದ್ದರಿಂದ ಅದೂ ಸಹ ತೃತೀಯಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಅಸಮರ್ಥವಾಯಿತು. ಆಗಲೂ ಗಾಯತ್ರಿಯು ಜಗತಿಯನ್ನುದ್ದೇಶಿಸಿ—ಎಲೈ ಜಗತಿಯೇ, ತೃತೀಯಸವನದ ಕಾರ್ಯಕಲಾಪಗಳಲ್ಲಿ ನಾನು ನಿನಗೆ ಸಹಾಯಮಾಡುವೆನು. ಆದರೆ ಅದರಲ್ಲಿ ನನಗೂ ಒಂದುಭಾಗವಿರಬೇಕೆಂದಿತು. ಜಗತಿಯು ಅದಕ್ಕೊಪ್ಪಿ ಹಾಗೆಯೇಮಾಡೆಂದಿತು. ಎಂದರೆ ಗಾಯತ್ರಿಯ ಎಂಟು ಅಕ್ಷರಗಳೂ, ತ್ರಿಷ್ಟುಪಿನ ಮೂರು ಅಕ್ಷರಗಳು ಸೇರಿ ಹನ್ನೊಂದು ಅಕ್ಷರಗಳಾಗಿ ಮಾಧ್ಯಂದಿನ ಸವನದಲ್ಲಿ ಕಾರ್ಯವನ್ನು ನಿರ್ವಹಿಸಲು ಸಮರ್ಥವಾಯಿತಷ್ಟೆ. ಆ ಹನ್ನೊಂದಕ್ಷರಗಳೂ ಈಗ ತೃತೀಯಸವನದಲ್ಲಿ ಜಗತಿಯ ಒಂದು ಅಕ್ಷರಕ್ಕೆ ಸೇರಿ ಹನ್ನೆರಡಕ್ಷರಗಳಾಗಿ ತೃತೀಯಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಸಮರ್ಥವಾಯಿತು. ಹೇಗೆಂದರೆ, ತೃತೀಯಸವನಕಾಲದಲ್ಲಿ ಪಠಿಸುವ ವೈಶ್ವದೇವ ಶಸ್ತ್ರಮಂತ್ರಗಳ ಕೊನೆಯಲ್ಲಿ ಪ್ರತಿಪತ್ತೃಚಗಳಿಗಾಗಿ ಪಠಿಸುವ ಋಕ್ಕುಗಳೂ, ಅನುಚರರೂಪವಾಗಿ ಪಠಿಸುವ ಋಕ್ಕುಗಳೂ ಸಹ ಗಾಯತ್ರೀಛಂದಸ್ಸಿನ ಮಂತ್ರಗಳು. ಈರೀತಿ ಈ ಮಂತ್ರಗಳು ಒಟ್ಟು ಹನ್ನೆರಡು ಅಕ್ಷರಗಳುಳ್ಳ ಜಗತೀಛಂದಸ್ಕಗಳಾಗಿ ತೃತೀಯಸವನ ಕಾರ್ಯಗಳನ್ನು ನೆರವೇರಿಸಲು ಸಮರ್ಥವಾದವು ಎಂದಭಿಪ್ರಾಯವು.

> ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವದೇಕಾದಶಾಕ್ಷರಾ ತ್ರಿಷ್ಟುಬ್ದ್ವಾದಶಾಕ್ಷರಾ ಜಗತೀ । ಸರ್ವೈಶ್ಛಂದೋಭಿಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ । ಏಕಂ ವೈ ಸತ್ತ್ರೇಧಾಭವತ್ತಸ್ಮಾದಾಹುರ್ದಾತವ್ಯಮೇವಂ ವಿದುಷ ಇತ್ಯೇಕಂ ಹಿ ಸತ್ತ್ರೇಧಾಭವತ್ ॥
>
> (ಐ. ಬ್ರಾ. ೧೩-೨೮).

ಆದ್ದರಿಂದ ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳೂ, ತ್ರಿಷ್ಟುಪ್‌ಛಂದಸ್ಸಿಗೆ ಹನ್ನೊಂದಕ್ಷರಗಳೂ, ಜಗತೀಛಂದಸ್ಸಿಗೆ ಹನ್ನೆರಡು ಅಕ್ಷರಗಳೂ ಉಂಟಾದವು. ಈ ಮೂರು ಛಂದಸ್ಸುಗಳೂ ಇತರ ಸಮಸ್ತಛಂದಸ್ಸುಗಳಿಗೆ ಸರಿಸಮನಾದ ಸ್ಥಾನಮಾನಗಳನ್ನೂ ಶ್ರೇಷ್ಠತೆಯನ್ನೂ ಪಡೆದವು. ಈ ವಿಷಯವನ್ನು ತಿಳಿದ ಪುರುಷನು ಶ್ರೇಷ್ಠತೆಯನ್ನೂ ಗಣ್ಯಸ್ಥಾನವನ್ನೂ ಪಡೆಯುವನು. ಗಾಯತ್ರಿಯ ಸ್ವರೂಪವು ಪೂರ್ವದಲ್ಲಿ ನಾಲ್ಕು ಅಕ್ಷರಮಾತ್ರವಿದ್ದು ಅನಂತರ ಮತ್ತೆ ನಾಲ್ಕು ಅಕ್ಷರಗಳನ್ನು ಅಧಿಕವಾಗಿ ಸಂಪಾದನೆಮಾಡಿ ತ್ರಿಷ್ಟುಪ್ ಮತ್ತು ಜಗತೀಛಂದಸ್ಸುಗಳಲ್ಲಿಯೂ ಪ್ರವೇಶಮಾಡಿದ್ದರಿಂದ (ಎಂದರೆ ತನ್ನ ಎಂಟು ಅಕ್ಷರಗಳನ್ನು ತ್ರಿಷ್ಟುಪ್ ಮತ್ತು ಜಗತೀಛಂದಸ್ಸಿನ ಅಕ್ಷರಗಳೊಡನೆ ಬೆರೆತಿದ್ದರಿಂದ) ಅದರ ಸ್ವರೂಪವು ಎಂದರೆ ಅದರ ಮಹಿಮೆಯು ಮೂರರಷ್ಟು ಅಧಿಕವಾಯಿತು. ಆದ್ದರಿಂದ ಈ ವಿಧವಾದ ಗಾಯತ್ರಿಯ ಮಹಿಮೆಯನ್ನು ತಿಳಿದ ಪುರುಷನಿಗೆ ಸುವರ್ಣಾದಿಗಳನ್ನು ದಾನವಾಗಿ ಕೊಡಬೇಕೆಂದು ಧರ್ಮರಹಸ್ಯವನ್ನು ತಿಳಿದ ಪ್ರಾಜ್ಞರು ಹೇಳುವರು.

ಸೋಮಾಹರಣೋಪಾಖ್ಯಾನವು (ಸೌಪರ್ಣಾಖ್ಯಾನವು) ಸಮಾಪ್ತವು.



॥ ಸಂಹಿತಾಪಾಠಃ ॥

ಋಜಿಪ್ಯ ಈಮಿಂದ್ರಾವತೋ ನ ಭುಜ್ಯುಂ ಶ್ಯೇನೋ ಜಭಾರ ಬೃಹತೋ ಅಧಿ ಷ್ಣೋಃ ।
ಅಂತಃ ಪತತ್ಪತತ್ರ್ಯಸ್ಯ ಪರ್ಣಮಧ ಯಾಮನಿ ಪ್ರಸಿತಸ್ಯ ತದ್ವೇಃ ॥ ೪ ॥

॥ ಪದಪಾಠಃ ॥

ಋಜಿಪ್ಯಃ । ಈಂ । ಇಂದ್ರ್ಽವತಃ । ನ । ಭುಜ್ಯುಂ । ಶ್ಯೇನಃ । ಜಭಾರ । ಬೃಹತಃ । ಅಧಿ । ಸ್ನೋಃ ।
ಅಂತರಿತಿ । ಪತತ್ । ಪತತ್ರಿ । ಅಸ್ಯ । ಪರ್ಣಂ । ಅಧ । ಯಾಮನಿ । ಪ್ರಽಸಿತಸ್ಯ । ತತ್ । ವೇರಿತಿ ವೇಃ ॥

॥ ಸಾಯಣಭಾಷ್ಯಂ ॥

ಋಜಿಪ್ಯ ಋಜುಗಾಮೀ ಶ್ಯೇನ ಇಂದ್ರವತ ಇಂದ್ರೋ ರಕ್ಷಕೋ ಯಸ್ಯ ತಸ್ಮಾದ್ಬೃಹತೋ ಮಹತೋಽಧಿ ಉಪರಿ ಸ್ನೋಃ ಸ್ಥಿತಾದ್ದ್ಯುಲೋಕಾದೀಮೇನಂ ಸೋಮಂ ಜಭಾರ । ಆಜಹಾರ । ತತ್ರ ದೃಷ್ಟಾಂತಃ । ಇಂದ್ರವತಃ । ಇಂದ್ರಃ ಸಮರ್ಥಃ । ತದ್ವತೋ ದೇಶಾದ್ಭುಜ್ಯುಂ ನ ಭುಜ್ಯುನಾಮಕಂ ರಾಜಾನಂ ಯಥಾಶ್ವಿನಾವಾಜಹ್ರತುಸ್ತದ್ವತ್ । ಅಧ ತದಾನೀಂ ಯಾಮನಿ ಯುದ್ಧೇ ಪ್ರಸಿತಸ್ಯ ಕೃಶಾನೋರಸ್ತ್ರೈರ್ಬದ್ಧಸ್ಯ ವೇರ್ಗಂತುರಸ್ಯ ಶ್ಯೇನಸ್ಯಾಂತರ್ಮಧ್ಯೇ ಸ್ಥಿತಂ ಪತತ್ರಿ ಪತನಶೀಲಂ ತತ್ಪರ್ಣಂ ಪತತ್ । ಅಪತತ್ ॥

॥ ಪ್ರತಿಪದಾರ್ಥ ॥

ಋಜಿಪ್ಯಃ—ನೇರವಾಗಿ ಹಾರತಕ್ಕ । ಶ್ಯೇನಃ—ಗಿಡುಗವು । ಇಂದ್ರವತಃ—ಇಂದ್ರನಿಂದ ರಕ್ಷಿತವಾದುದೂ । ಬೃಹತಃ—ಮಹತ್ತಾದುದೂ । ಅಧಿ ಷ್ಣೋಃ—ಅತ್ಯುನ್ನತವಾದ ಪ್ರದೇಶದಲ್ಲಿರತಕ್ಕದ್ದೂ ಆದ ಅಂತರಿಕ್ಷದಿಂದ । ಈಂ—ಈ ಸೋಮವನ್ನು । ಭುಜ್ಯುಂ ನ—(ಅಶ್ವಿನೀದೇವತೆಗಳು) ಭುಜ್ಯುವನ್ನು ಹೊತ್ತುಕೊಂಡು ಬಂದಂತೆ । ಜಭಾರ—ಹೊತ್ತುಕೊಂಡು ಬಂದಿತು । ಅಧ—ತತ್ಕಾಲದಲ್ಲಿ ಪ್ರಾಪ್ತವಾದ । ಯಾಮನಿ—ಯುದ್ಧದಲ್ಲಿ । ಪ್ರಸಿತಸ್ಯ—ಅಸ್ತ್ರದಿಂದ ಪ್ರಹತವಾದ । ಅಸ್ಯ ವೇಃ—ಈ ಶ್ಯೇನಪಕ್ಷಿಯ । ಅಂತಃ—ಮಧ್ಯಭಾಗವರ್ತಿಯಾದುದೂ । ಪತತ್ರಿ—ಪತನಶೀಲವಾದುದೂ ಆದ । ತತ್ ಪರ್ಣಂ—ಒಂದು ಗರಿಯು । ಪತತ್—ಕೆಳಕ್ಕೆ ಬಿದ್ದುಹೋಯಿತು.

॥ ಭಾವಾರ್ಥ ॥

ಅಶ್ವಿನೀದೇವತೆಗಳು ಭುಜ್ಯುವನ್ನು ಹೊತ್ತುಕೊಂಡು ಬಂದಂತೆ ಋಜುಗಾಮಿಯಾದ ಈ ಶ್ಯೇನವೂ ಸಹ ಇಂದ್ರರಕ್ಷಿತವಾದುದೂ, ಮಹತ್ತಾದುದೂ, ಅತ್ಯುನ್ನತವಾದ ಪ್ರದೇಶದಲ್ಲಿರತಕ್ಕದ್ದೂ ಆದ ಅಂತರಿಕ್ಷದಿಂದ ಸೋಮವನ್ನು ಹೊತ್ತುಕೊಂಡು ಬಂದಿತು. ಆದರೆ ತತ್ಕಾಲದಲ್ಲಿ ಪ್ರಾಪ್ತವಾದ ಹೋರಾಟದಲ್ಲಿ ಅಸ್ತ್ರದಿಂದ ಪ್ರಹತವಾದ ಈ ಪಕ್ಷಿಯ ಮಧ್ಯಭಾಗದಿಂದ ಪತನಶೀಲವಾದ ಒಂದು ಗರಿಯು ಕೆಳಕ್ಕೆ ಬಿದ್ದುಹೋಯಿತು.

English Translation.

The straight-flying hawk carried off the Soma from above the vast heaven, as (the Ashwins carried off) Bhujyu from the region of Indra, and a falling feather from the middle of the bird dropped from him wounded in the conflict.

॥ ಸಂಹಿತಾಪಾಠಃ ॥

ಅಧ ಶ್ವೇತಂ ಕಲಶಂ ಗೋಭಿರಕ್ತಮಾಪಿಪ್ಯಾನಂ ಮಘವಾ ಶುಕ್ರಮಂಧಃ ।
ಅಧ್ವರ್ಯುಭಿಃ ಪ್ರಯತಂ ಮಧ್ವೋ ಅಗ್ರಮಿಂದ್ರೋ ಮದಾಯ ಪ್ರತಿ
ಧತ್ಪಿಬಧ್ಯೈ ಶೂರೋ ಮದಾಯ ಪ್ರತಿ ಧತ್ಪಿಬಧ್ಯೈ ॥ ೫ ॥

॥ ಪದಪಾಠಃ ॥

ಅಧ । ಶ್ವೇತಂ । ಕಲಶಂ । ಗೋಭಿಃ । ಅಕ್ತಂ । ಆಽಪಿಪ್ಯಾನಂ । ಮಘಽವಾ । ಶುಕ್ರಂ । ಅಂಧಃ ।
ಅಧ್ವರ್ಯುಽಭಿಃ । ಪ್ರಽಯತಂ । ಮಧ್ವಃ । ಅಗ್ರಂ । ಇಂದ್ರಃ । ಮದಾಯ । ಪ್ರತಿ । ಧತ್ । ಪಿಬಧ್ಯೈ ।
ಶೂರಃ । ಮದಾಯ । ಪ್ರತಿ । ಧತ್ । ಪಿಬಧ್ಯೈ ॥ ೫ ॥

॥ ಸಾಯಣಭಾಷ್ಯಂ ॥

ಅಥಾಧುನಾ ಶೂರೋ ವಿಕ್ರಾಂತೋ ಮಘವಾ ಧನವಾನಿಂದ್ರಃ ಶ್ವೇತಂ ಶುಭ್ರಂ ಕಲಶಂ ಕಲಶೇ ಪಾತ್ರೇ ಸ್ಥಿತಂ ಗೋಭಿರ್ಗವ್ಯೇನ ಪಯಸಾಕ್ತಂ ಸಿಕ್ತಮಾಪಿಪ್ಯಾನಮಾಪ್ಯಾಯಯಂತಂ ಶುಕ್ರಂ ಸಾರೋಪೇತಮಧ್ವರ್ಯುಭಿಃ ಪ್ರಯತಂ ದತ್ತಮಂಧಃ ಸೋಮಲಕ್ಷಣಮನ್ನಂ ಮಧ್ವೋ ಮಧುರಸ್ಯ ಸೋಮರಸಸ್ಯಾಗ್ರಮಗ್ರೇ ಮದಾಯ ಮದಾರ್ಥಂ ಪಿಬಧ್ಯೈ ಪಾತುಂ ಪ್ರತಿ ಧತ್ । ಪ್ರತಿದಧಾತು । ಪುನರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

ಅಧ—ಈಗ । ಶೂರಃ—ಪರಾಕ್ರಮಿಯೂ । ಮಘವಾ—ಧನವಂತನೂ ಆದ । ಇಂದ್ರಃ—ಇಂದ್ರನು । ಶ್ವೇತಂ—ಶುಭ್ರವಾದುದೂ । ಕಲಶಂ—ಕಲಶಪಾತ್ರೆಯಲ್ಲಿರುವುದೂ । ಗೋಭಿಃ—ಹಾಲಿನಿಂದ । ಅಕ್ತಂ—ಮಿಶ್ರಿತವಾದುದೂ । ಆಪಿಪ್ಯಾನಂ—ತೃಪ್ತಿದಾಯಕವಾದುದೂ । ಶುಕ್ರಂ—ಸಾರಭೂತವಾದುದೂ । ಅಧ್ವರ್ಯುಭಿಃ—ಅಧ್ವರ್ಯುಗಳಿಂದ । ಪ್ರಯತಂ—ಅರ್ಪಿತವಾದುದೂ ಆದ । ಅಂಧಃ—ಸೋಮರೂಪವಾದ ಅನ್ನವನ್ನು । ಮದಾಯ—ಹರ್ಷಲಾಭಕ್ಕಾಗಿ । ಪಿಬಧ್ಯೈ—ಪಾನಮಾಡುವುದಕ್ಕೆ । ಪ್ರತಿ ಧತ್—ಸ್ವೀಕರಿಸಲಿ । ಮಧ್ವಃ—ಮಧುರವಾದ ಸೋಮರಸದ । ಅಗ್ರಂ—ಮೇಲಿನಭಾಗವನ್ನು । ಪ್ರತಿ ಧತ್—ಸ್ವೀಕರಿಸಲಿ.

॥ ಭಾವಾರ್ಥ ॥

ಪರಾಕ್ರಮಿಯೂ ಧನವಂತನೂ ಆದ ಇಂದ್ರನು, ಶುಭ್ರವಾದುದೂ, ಕಲಶಪಾತ್ರೆಯಲ್ಲಿಟ್ಟಿರುವುದೂ, ಪಯಸ್ಸಿನಿಂದ ಮಿಶ್ರಿತವಾದುದೂ, ತೃಪ್ತಿದಾಯಕವಾದುದೂ, ಸಾರಭೂತವಾದುದೂ, ಅಧ್ವರ್ಯುಗಳಿಂದ ಅರ್ಪಿತವಾದುದೂ ಆದ ಸೋಮರಸವನ್ನು ತನ್ನ ಹರ್ಷಾರ್ಥವಾಗಿ ಪಾನಮಾಡಲು ಸ್ವೀಕರಿಸಲಿ. ಮಧುರವಾದ ಸೋಮರಸದ ಅಗ್ರಭಾಗವನ್ನು ಪಾನಮಾಡಲಿ.

English Translation.

Now may Maghavan accept the pure nutritious (sacrificial) food in a white pitcher, mixed with milk and curds, offered by the priests; the upper part of the sweet (beverage) to drink for his exhilaration: may the hero accept (it) to drink for (his) exhilaration.



# ಇಪ್ಪತ್ತೆಂಟನೆಯ ಸೂಕ್ತವು

ತ್ವಾ ಯುಜೇತಿ ಪಂಚರ್ಚಂ ಸಪ್ತಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಿಂದ್ರಾಸೋಮದೇವತಾಕಂ । ಅನುಕ್ರಾಂತಂ ಚ । ತ್ವಾ ಯುಜ್ಯೆಂದ್ರಾಸೋಮಮಿತಿ । ವಿನಿಯೋಗೋ ಲೈಂಗಿಕಃ ॥

ಅನುವಾದವು—ತ್ವಾ ಯುಜಾ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರ ಮತ್ತು ಸೋಮ ಎಂಬುವರು ದೇವತೆಗಳು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ತ್ವಾ ಯುಜೈಂದ್ರಾಸೋಮಂ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೨೮

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೮ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೭ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

ಋಷಿಃ—ವಾಮದೇವಃ ॥

ದೇವತಾ—ಇಂದ್ರಾಸೋಮೌ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಾ ಯುಜಾ ತವ ತತ್ಸೋಮ ಸಖ್ಯ ಇಂದ್ರೋ ಅಪೋ ಮನವೇ ಸಸ್ರುತಸ್ಕಃ ।

ಅಹನ್ನಹಿಮರಿಣಾತ್ಸಪ್ತ ಸಿಂಧೂನಪಾವೃಣೋದಪಿಹಿತೇವ ಖಾನಿ ॥ ೧ ॥

॥ ಪದಪಾಠಃ ॥

ತ್ವಾ । ಯುಜಾ । ತವ । ತತ್ । ಸೋಮ । ಸಖ್ಯೇ । ಇಂದ್ರಃ । ಅಪಃ । ಮನವೇ । ಸಸ್ರುತಃ । ಕರಿತಿ। ಕಃ ।

ಅಹನ್ । ಅಹಿಂ । ಅರಿಣಾತ್ । ಸಪ್ತ । ಸಿಂಧೂನ್ । ಅಪ । ಅವೃಣೋತ್ । ಅಪಿಹಿತಾಽಇವ । ಖಾನಿ ॥

॥ ಸಾಯಣಭಾಷ್ಯಂ ॥

ಹೇ ಸೋಮ ತವ ತ್ವದೀಯೇ ತತ್ತಸ್ಮಿನ್ ಸಖ್ಯೇ ಸಖಿತ್ವೇ ಸತಿ ತ್ವಾ ತ್ವಯಾ ಯುಜಾ ಸಹಾಯೇನೇಂದ್ರಃ ಸಸ್ರುತಃ ಸರಣಶೀಲಾ ಅಪೋ ವೃಷ್ಟಿಲಕ್ಷಣಾನ್ಯುದಕಾನಿ ಮನವೇ ಮನುಷ್ಯೇಭ್ಯಃ ಕಃ । ಅಕರೋತ್ । ಕಿಂಚ ಅಹಿಂ ವೃತ್ರಮಸುರಮಹನ್ । ಹತವಾನ್ । ಸಪ್ತ ಸರ್ಪಣಶೀಲಾಃ ಸಿಂಧೂನಪೋಽರಿಣಾತ್ । ಪ್ರೈರಯತ್ । ಅಪಿಹಿತೇವಾಪಿಹಿತಾನೀವ ವೃತ್ರೇಣ ತಿರೋಹಿತಾನಿ ಚ । ಅತ್ರೇವಶಬ್ದಶ್ಚಾರ್ಥೇ । ಖಾನಿ ಸ್ರೋತಸಾಂ ದ್ವಾರಾಣ್ಯಪಾವೃಣೋತ್ । ಉದ್ಘಾಟಿತವಾನ್ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮನೇ । ತವ—ನಿನ್ನ । ತತ್ ಸಖ್ಯೇ—ಸಖಿತ್ವವು ಇಂದ್ರನೊಡನಿರುವುದರಿಂದಲೇ । ತ್ವಾ—ನಿನ್ನೊಡನೆ । ಯುಜಾ—ಸೇರಿಕೊಂಡು (ನಿನ್ನ ಸಹಾಯದಿಂದ) । ಇಂದ್ರಃ—ಇಂದ್ರನು । ಸಸ್ರುತಃ—ಪ್ರವಹಿಸಲು ಯೋಗ್ಯವಾದ । ಅಪಃ—ಉದಕಗಳನ್ನು । ಮನವೇ—ಮಾನವರ ಹಿತಕ್ಕಾಗಿ । ಕಃ—ಪ್ರವಹಿಸುವಂತೆ ಮಾಡಿದನು । ಅಹಿಂ—ವೃತ್ರಾಸುರನನ್ನು । ಅಹನ್—ಕೊಂದನು । ಸಪ್ತ ಸಿಂಧೂನ್—ಸಪ್ತನದಿಗಳನ್ನೂ । ಅರಿಣಾತ್—ಪ್ರವಹಿಸುವಂತೆ ಪ್ರೇರಿಸಿದನು । ಅಪಿಹಿತೇವ—(ವೃತ್ರನಿಂದ) ಮುಚ್ಚಲ್ಪಟ್ಟಿದ್ದರೂ ಸಹ । ಖಾನಿ— ಪ್ರವಾಹರೂಪವಾಗಿ ಹರಿಯುವ ನದಿಗಳ ದ್ವಾರಗಳನ್ನು (ಮಾರ್ಗಗಳನ್ನು)। ಅಪಾವೃಣೋತ್—ತೆರೆದನು (ಉದಕಗಳು ಪ್ರವಹಿಸುವಂತೆ ಮಾಡಿದನು).

॥ ಭಾವಾರ್ಥ ॥

ಎಲೈ ಸೋಮನೇ, ಇಂದ್ರನೊಡನೆ ನಿನ್ನ ಸಖಿತ್ವವಿರುವುದರಿಂದಲೇ ಇಂದ್ರನು ನಿನ್ನೊಡನೆ ಸೇರಿ ನಿನ್ನ ಸಹಾಯದಿಂದ ಪ್ರವಾಹಯೋಗ್ಯವಾದ ಉದಕಗಳನ್ನು ಮಾನವರ ಹಿತಕ್ಕಾಗಿ ಪ್ರವಹಿಸುವಂತೆ ಮಾಡಿದನು. ವೃತ್ರಾಸುರನನ್ನು ಕೊಂದು, ಪ್ರವಾಹದ ಬಾಗಿಲುಗಳನ್ನು ಅವನು ಮುಚ್ಚಿದ್ದರೂ ಸಹ ಅವನ್ನು ತೆರೆದು ಸಪ್ತ ಮಹಾನದಿಗಳನ್ನೂ ಪ್ರವಹಿಸುವಂತೆ ಮಾಡಿದನು.

English Translation.

Through that friendship, Soma, which has united you with your (friend) Indra, he has made the waters flow for man; he has slain Ahi; he has sent forth the seven rivers, and has opened the shut-up sources (of the stream).



॥ ಸಂಹಿತಾಪಾಠಃ ॥

ತ್ವಾ ಯುಜಾ ನಿ ಖಿದತ್ಸೂರ್ಯಸ್ಯೇಂದ್ರಶ್ಚಕ್ರಂ ಸಹಸಾ ಸದ್ಯ ಇಂದೋ ।
ಅಧಿ ಷ್ಣುನಾ ಬೃಹತಾ ವರ್ತಮಾನಂ ಮಹೋ ದ್ರುಹೋ ಅಪ ವಿಶ್ವಾಯು
ಧಾಯಿ ॥ ೨ ॥

॥ ಪದಪಾಠಃ ॥

ತ್ವಾ । ಯುಜಾ । ನಿ । ಖಿದತ್ । ಸೂರ್ಯಸ್ಯ । ಇಂದ್ರಃ । ಚಕ್ರಂ । ಸಹಸಾ । ಸದ್ಯಃ । ಇಂದೋ ಇತಿ ।
ಅಧಿ । ಸ್ನುನಾ । ಬೃಹತಾ । ವರ್ತಮಾನಂ । ಮಹಃ । ದ್ರುಹಃ । ಅಪ । ವಿಶ್ವಽಆಯು । ಧಾಯಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಇಂದ್ರಃ ಸದ್ಯಃ ಸಪದಿ ತ್ವಾ ತ್ವಯಾ ಯುಜಾ ಸಹಾಯೇನ ಸೂರ್ಯಸ್ಯ ಪ್ರೇರಕಸ್ಯ ಸವಿತುಃ ಸಂಬಂಧಿನಃ ಪೂರ್ವಂ ದ್ವಿಚಕ್ರಸ್ಯ ರಥಸ್ಯೈಕಂ ಚಕ್ರಂ ಸಹಸಾಭಿಭಾವುಕೇನ ಬಲೇನ ನಿ ಖಿದತ್ । ಆಚ್ಛಿನತ್ । ಕೀದೃಶಂ । ಅಧಿ ಉಪರಿ ಸ್ನುನಾ ಸ್ಥಿತೇನ ಬೃಹತಾ ಮಹತಾಂತರಿಕ್ಷೇಣ ವರ್ತಮಾನಂ । ಕಿಂಚ ಮಹೋ ಮಹತಃ ಪ್ರಭೂತಸ್ಯ ದ್ರುಹೋ ದ್ರೋಗ್ಧುಃ ಸೂರ್ಯಸ್ಯ ಸಂಬಂಧಿ ವಿಶ್ವಾಯು ಸರ್ವತೋ ಗಂತೃ ಚಕ್ರಮಪ ಧಾಯಿ । ಇಂದ್ರೇಣಾಪಾಹಾರಿ ॥

॥ ಪ್ರತಿಪದಾರ್ಥ ॥

ಇಂದೋ—ಎಲೈ ಸೋಮನೇ । ಇಂದ್ರಃ—ಇಂದ್ರನು । ಸದ್ಯಃ—ಒಡನೆಯೇ । ತ್ವಾ—ನಿನ್ನ । ಯುಜಾ—ಸಹಾಯದಿಂದ । ಸೂರ್ಯಸ್ಯ—ಸೂರ್ಯನ । ಅಧಿ ಸ್ನುನಾ—ಅತ್ಯುನ್ನತಪ್ರದೇಶದಲ್ಲಿರುವುದೂ । ಬೃಹತಾ—ಮಹತ್ಸ್ವರೂಪವುಳ್ಳದ್ದೂ ಆದ ಅಂತರಿಕ್ಷದಲ್ಲಿ । ವರ್ತಮಾನಂ—ಇರತಕ್ಕ । ಚಕ್ರಂ—ಸೂರ್ಯರಥದ ಚಕ್ರವನ್ನು । ಸಹಸಾ—ಬಲಾತ್ಕಾರದಿಂದ । ನಿ ಖಿದತ್—ಕಿತ್ತುಕೊಂಡನು । ಮಹಃ—ಮಹತ್ಸ್ವರೂಪವುಳ್ಳ । ದ್ರುಹಃ—ಸೂರ್ಯಸಂಬಂಧಿಯೂ । ವಿಶ್ವಾಯು—ಸರ್ವತ್ರ ಸಂಚರಿಸುವುದೂ ಆದ ಆ ಚಕ್ರವು । ಅಪ ಧಾಯಿ—ಅಪಹರಿಸಲ್ಪಟ್ಟಿತು.

॥ ಭಾವಾರ್ಥ ॥

ಎಲೈ ಸೋಮನೇ, ನಿನ್ನ ಸಹಾಯದಿಂದಲೇ ಇಂದ್ರನು ಅತ್ಯುನ್ನತಪ್ರದೇಶದಲ್ಲಿರುವುದೂ, ಮಹತ್ಸ್ವರೂಪವುಳ್ಳದ್ದೂ ಆದ ಅಂತರಿಕ್ಷದಲ್ಲಿರತಕ್ಕ ಸೂರ್ಯಚಕ್ರವನ್ನು ಬಲಾತ್ಕಾರದಿಂದ ಕಿತ್ತುಕೊಂಡನು. ಸೂರ್ಯಸಂಬಂಧಿಯೂ, ಸರ್ವತ್ರ ಸಂಚರಿಸುವುದೂ ಆದ ಆ ಸೂರ್ಯಚಕ್ರವು ಅಪಹರಿಸಲ್ಪಟ್ಟಿತು.

English Translation.

With you, Soma, for his ally, Indra has quickly taken off by force the wheel of the chariot of the sun, abiding above with the vast and stationary (firmament): the everywhere-going wheel (of the car) of the great oppressor has been taken away.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ಸೋಮದೇವತೆಯ ಸಹಾಯದಿಂದ ಅಂತರಿಕ್ಷದಲ್ಲಿರತಕ್ಕ ಸೂರ್ಯರಥದ ಚಕ್ರವನ್ನು ಬಲಾತ್ಕಾರದಿಂದ ಅಪಹರಿಸಿದನೆಂದು ಹೇಳಿದೆ.

ಯತ್ರೋತ ಬಾಧಿತೇಭ್ಯಶ್ಚಕ್ರಂ ಕುತ್ಸಾಯ ಯುಧ್ಯತೇ ।
ಮುಷಾಯ ಇಂದ್ರ ಸೂರ್ಯಂ ॥

(ಋ. ಸಂ. ೪-೩೦-೪)

ಎಂಬ ಋಕ್ಕಿನಲ್ಲಿ ಅಸುರರೊಡನೆ ಯುದ್ಧಮಾಡುತ್ತಿದ್ದು ಅವರಿಂದ ಹಿಂಸೆಗೆ ಒಳಗಾದ ಕುತ್ಸ ಎಂಬ ರಾಜರ್ಷಿಗೆ ಸಹಾಯಮಾಡುವ ಉದ್ದಿಶ್ಯದಿಂದ ಇಂದ್ರನು ಸೂರ್ಯರಥದ ಚಕ್ರವನ್ನು ಅಪಹರಿಸಿ ಕುತ್ಸನಿಗೆ ಯುದ್ಧದಲ್ಲಿ ಸಹಾಯ ಮಾಡಿದನೆಂದು ಹೇಳಿದೆ. ಇಂದ್ರನು ಸೂರ್ಯನ ರಥಚಕ್ರವನ್ನು ಉಪಯೋಗಿಸಿ ಶತ್ರುವನ್ನು ಜಯಿಸಿದ ವಿಷಯದಲ್ಲಿ ಒಂದು ಕಥೆ ಇದೆ—

> ಕೇಚನ ಅಸುರಾಃ ಇಂದ್ರಸ್ಯ ವಜ್ರಾಯುಧೇನ ಅಸ್ಮಾಕಂ ವಧೋ ಮಾ ಭೂದಿತಿ ಬ್ರಹ್ಮಣಾ ವರಂ ಲಬ್ಧ್ವಾ ಇಂದ್ರಮಗಣಯ್ಯ ಉದ್ವೃತ್ತಾಃ ಸ್ಥಿತಾಃ । ತಾನ್ ಹಂತುಮಿಂದ್ರಃ ಸೂರ್ಯ-ರಥಸ್ಯ ಚಕ್ರಂ ಆದಾಯ ಅವಧೀತ್ ।

ಕೆಲವು ಅಸುರರು ಇಂದ್ರನ ವಜ್ರಾಯುಧದಿಂದ ತಮಗೆ ಮರಣಭಯವುಂಟಾಗದಂತೆ ಬ್ರಹ್ಮನಿಂದ ವರವನ್ನು ಪಡೆದು, ಇಂದ್ರನನ್ನು ಲಕ್ಷ್ಯಮಾಡದೆ ದುರ್ಮಾರ್ಗದಿಂದ ವರ್ತಿಸುತ್ತಿದ್ದರು. ಆಗ ಇಂದ್ರನು ಸೂರ್ಯನ ರಥದ ಚಕ್ರವನ್ನೇ ಆಯುಧವನ್ನಾಗಿ ಮಾಡಿಕೊಂಡು ಅವರೆಲ್ಲರನ್ನೂ ಸಂಹರಿಸಿದನು ಎಂಬ ಇತಿಹಾಸವಿದೆ. ಇದನ್ನೇ ಈ ಋಕ್ಕಿನಲ್ಲಿ ವಿವರಿಸಲಾಗಿದೆ.



॥ ಸಂಹಿತಾಪಾಠಃ ॥

ಅಹನ್ನಿಂದ್ರೋ ಅದಹದಗ್ನಿರಿಂದೋ ಪುರಾ ದಸ್ಯೂನ್ಮಧ್ಯಂದಿನಾದಭೀಕೇ ।
ದುರ್ಗೇ ದುರೋಣೇ ಕ್ರತ್ವಾ ನ ಯಾತಾಂ ಪುರೂ ಸಹಸ್ರಾ ಶರ್ವಾ ನಿ ಬರ್ಹೀತ್ ॥ ೩ ॥

॥ ಪದಪಾಠಃ ॥

ಅಹನ್ । ಇಂದ್ರಃ । ಅದಹತ್ । ಅಗ್ನಿಃ । ಇಂದೋ ಇತಿ । ಪುರಾ । ದಸ್ಯೂನ್ । ಮಧ್ಯಂದಿನಾತ್ । ಅಭೀಕೇ ।
ದುಃऽಗೇ । ದುರೋಣೇ । ಕ್ರತ್ವಾ । ನ । ಯಾತಾಂ । ಪುರು । ಸಹಸ್ರಾ । ಶರ್ವಾ । ನಿ । ಬರ್ಹೀತ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಅಭೀಕೇ ಸಂಗ್ರಾಮೇ ದಸ್ಯೂನ್ ಶತ್ರೂನಿಂದ್ರೋऽಹನ್ । ಅವಧೀತ್ । ಅಗ್ನಿಃ ಕಾಂಶ್ಚಿಚ್ಛತ್ರೂನದಹತ್ । ದದಾಹ । ಕೀದೃಶಾವಿಂದ್ರಾಗ್ನೀ । ಮಧ್ಯಂದಿನಾನ್ಮಧ್ಯಾಹ್ನಾತ್ಪುರಾ ಪುರಸ್ತಾತ್ಪೂರ್ವಾಹ್ಣೇ ತವ ಪಾನಾಲ್ಲಬ್ಧಬಲಾವಿತಿ ಶೇಷಃ । ಯಾತಾಂ ಗಚ್ಛತಾಮಸುರಾಣಾಂ ಪುರು ಪುರೂಣಿ ಬಹೂನಿ ಸರ್ವಾ ಸರ್ವಾಣಿ ನಿರವಶೇಷಾಣಿ ಸಹಸ್ರಾ ಸಹಸ್ರಾಣ್ಯಪರಿಮಿತಾನಿ ನಿ ಬರ್ಹೀತ್ ।

ನ್ಯಬರ್ಹೀತ್ । ಇಂದ್ರೋऽವಧೀತ್ । ತತ್ರ ದೃಷ್ಟಾಂತಃ । ದುರೋಣೇ ದುರವನೇ ರಕ್ಷಿತುಮಶಕ್ಯೇ ದುರ್ಗೇ ದುರವಗಾಹೇ ದೇಶೇ ಕ್ರತ್ವಾ ನ ಕರ್ಮಣಾ ಸ್ವಕೀಯೇಂ ಕಾರ್ಯಮುದ್ದಿಶ್ಯ ಗಚ್ಛತಃ ಪಥಿಕಾನ್ಯಥಾ ಧನಲೋಲುಪಶ್ಚೋರೋ ಹಂತಿ ತದ್ವತ್ ॥

॥ ಪ್ರತಿಪದಾರ್ಥ ॥

ಇಂದೋ—ಎಲೈ ಸೋಮವೇ, । ಮಧ್ಯಂದಿನಾತ್—ಮಧ್ಯಾಹ್ನಕಾಲಕ್ಕಿಂತಲೂ । ಪುರಾ—ಮೊದಲೇನೆ (ನಿನ್ನನ್ನು ಪಾನಮಾಡಿದ) । ಇಂದ್ರಃ—ಇಂದ್ರನು । ಅಭೀಕೇ—ಯುದ್ಧದಲ್ಲಿ । ದಸ್ಯೂನ್—ಶತ್ರುಗಳನ್ನು । ಅಹನ್—ಕೊಂದನು । ಅಗ್ನಿಃ—ಅಗ್ನಿಯೂ ಸಹ (ಅದೇ ರೀತಿ) । ಅದಹತ್—ದಹಿಸಿ ನಾಶಮಾಡಿದನು । ದುರೋಣೇ—ರಕ್ಷಿಸಲಸಾಧ್ಯವಾದುದೂ । ದುರ್ಗೇ—ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದುದೂ ಆದ ದುರ್ಗಪ್ರದೇಶದಲ್ಲಿ । ಕ್ರತ್ವಾ ನ—ತಮ್ಮ ಕಾರ್ಯವನ್ನುದ್ದೇಶಿಸಿ ಹೋಗುತ್ತಿರುವ ಪ್ರಯಾಣಿಕರನ್ನು ಚೋರರು ಹೊಡೆದು ಹಿಂಸಿಸುವಂತೆ । ಯಾತಾಂ—ಸಂಚರಿಸುತ್ತಿರುವ ಅಸುರರ । ಪುರು ಸಹಸ್ರಾ—ಅನೇಕ ಸಹಸ್ರ ಸಂಖ್ಯೆಯುಳ್ಳ ಶತ್ರುಗಳನ್ನು । ಶರ್ವಾ—ನಿಶ್ಶೇಷವಾಗಿ । ನಿ ಬರ್ಹೀತ್—ಇಂದ್ರನು ನಾಶಮಾಡಿದನು.

॥ ಭಾವಾರ್ಥ ॥

ಎಲೈ ಸೋಮವೇ, ಮಧ್ಯಾಹ್ನಕಾಲಕ್ಕಿಂತಲೂ ಮೊದಲೇ ನಿನ್ನನ್ನು ಪಾನಮಾಡಿದ ಇಂದ್ರನು ಸಂಗ್ರಾಮದಲ್ಲಿ ಶತ್ರುಗಳನ್ನು ಕೊಂದನು. ಅಗ್ನಿಯೂ ಸಹ ನಿನ್ನ ಸಹಾಯದಿಂದಲೇ ಶತ್ರುಗಳನ್ನೆಲ್ಲಾ ನಾಶಮಾಡಿದನು. ರಕ್ಷಿಸಲಸಾಧ್ಯವಾದುದೂ, ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದುದೂ ಆದ ಗಹನವಾದ ದುರ್ಗಪ್ರದೇಶದಲ್ಲಿ ಸ್ವಕಾರ್ಯಕ್ಕಾಗಿ ಹೋಗುತ್ತಿರುವ ಪ್ರಯಾಣಿಕರನ್ನು ಚೋರರು ಹೊಡೆದು ಹಿಂಸಿಸುವಂತೆ ಸಂಚರಿಸುತ್ತಿರುವ ಸಹಸ್ರಾರು ಅಸುರರನ್ನೂ ಇಂದ್ರನು ನಿಶ್ಶೇಷವಾಗಿ ನಾಶಮಾಡಿದನು.

## English Translation.

Indra has slain the Dasyus, Soma, in battle: Agni has consumed them before the noon: he (Indra) has destroyed the whcle of many thousands, as (robbers are the destroyers of those) going upon (their own) business, in a difficult and dangerous (place).

॥ ಸಂಹಿತಾಪಾಠಃ ॥

ವಿಶ್ವಸ್ಮಾತ್ಸೀಮಧಮಾಁ ಇಂದ್ರ ದಸ್ಯೂನ್ವಿಶೋ ದಾಸೀರಕೃಣೋರಪ್ರಶಸ್ತಾಃ ।
ಅಬಾಧೇಥಾಮಮೃಣತಂ ನಿ ಶತ್ರೂನವಿಂದೇಥಾಮಪಚಿತಿಂ ವಧತ್ರೈಃ ॥೪॥

॥ ಪದಪಾಠಃ ॥

ವಿಶ್ವಸ್ಮಾತ್ । ಸೀಂ । ಅಧಮಾನ್ । ಇಂದ್ರ । ದಸ್ಯೂನ್ । ವಿಶಃ । ದಾಸೀಃ । ಅಕೃಣೋಃ । ಅಪ್ರ-ಶಸ್ತಾಃ ।

ಅಬಾಧೇಥಾಂ । ಅಮೃಣತಂ । ನಿ । ಶತ್ರೂನ್ । ಅವಿಂದೇಥಾಂ । ಅಪಚಿತಿಂ । ವಧತ್ರೈಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಸೀಮೇನಾನ್ದಸ್ಯೂನ್ವಿಶ್ವಸ್ಮಾತ್ಸರ್ವಸ್ಮಾದ್ಗುಣಾದಧಮಾನ್ ಹೀನಾನಕೃಣೋಃ। ಅಕರೋಃ। ಕಿಂಚ ದಾಸೀಃ ಕರ್ಮಹೀನಾ ವಿಶೋ ಮಾನುಷೀಃ ಪ್ರಜಾ ಅಪ್ರಶಸ್ತಾ ಗರ್ಹಿತಾ ಅಕೃಣೋಃ। ಹೇ ಇಂದ್ರಾಸೋಮೌ ಯುವಾಂ ಶತ್ರೂನಬಾಧೇಥಾಂ । ನ್ಯಮೃಣತಂ । ನಿತರಾಂ ಹಿಂಸಿತವಂತೌ। ಅಪಿ ಚ ವಧತ್ರೈಸ್ತೇಷಾಂ ಶತ್ರೂಣಾಂ ಪ್ರಹಾರೈರಪಚಿತಿಂ ಪೂಜಾಂ ಜನೇಭ್ಯೋಽವಿಂದೇಥಾಂ । ಅಲಭೇಥಾಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸೀಂ ದಸ್ಯೂನ್—ಈ ಶತ್ರುಗಳನ್ನು (ದಸ್ಯುಗಳನ್ನು) । ವಿಶ್ವಸ್ಮಾತ್—ಸಮಸ್ತಸದ್ಗುಣಗಳಿಂದಲೂ । ಅಧಮಾನ್—ಭ್ರಷ್ಟರಾಗುವಂತೆ । ಅಕೃಣೋಃ—ಮಾಡಿದೆ । ದಾಸೀಃ—ಕರ್ಮಹೀನರಾದ । ವಿಶಃ—ಮಾನವಪ್ರಜೆಗಳನ್ನು । ಅಪ್ರಶಸ್ತಾಃ—ನಿಂದಾಯೋಗ್ಯರನ್ನಾಗಿ ಮಾಡಿದೆ (ಎಲೈ ಇಂದ್ರ ಮತ್ತು ಸೋಮರೇ) । ಶತ್ರೂನ್—ಶತ್ರುಗಳನ್ನು । ಅಬಾಧೇಥಾಃ—ಹಿಂಸಿಸಿರಿ । ನಿ ಅಮೃಣತಂ—ಪೂರ್ಣವಾಗಿ ನಾಶಪಡಿಸಿರಿ । ವಧತ್ರೈಃ—ಶತ್ರುನಾಶದಿಂದ (ಉಪಕೃತರಾದ ಜನಗಳ) । ಅಪಚಿತಿಂ—ಕೃತಜ್ಞತಾ ಪೂರ್ವಕವಾದ ಪೂಜೆಯನ್ನು । ಅವಿಂದೇಥಾಂ—ಪಡೆಯಿರಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಈ ದಸ್ಯುಗಳನ್ನು ಸಮಸ್ತ ಸದ್ಗುಣಗಳಿಂದಲೂ ಭ್ರಷ್ಟರಾಗುವಂತೆ ಮಾಡಿದೆ. ಕರ್ಮಹೀನರಾದ ಮಾನವಪ್ರಜೆಗಳನ್ನು ನಿಂದಾಯೋಗ್ಯರನ್ನಾಗಿ ಮಾಡಿದೆ. ಎಲೈ ಇಂದ್ರಾಸೋಮರೇ, ಶತ್ರುಗಳನ್ನು ಪೂರ್ಣವಾಗಿ ಹಿಂಸಿಸಿ ನಾಶಪಡಿಸಿರಿ. ಶತ್ರುನಾಶದಿಂದ ಉಪಕೃತರಾದ ಜನಗಳ ಕೃತಜ್ಞತಾಪೂರ್ವಕವಾದ ಪೂಜೆಯನ್ನು ಸ್ವೀಕರಿಸಿರಿ.

## English Translation.

Indra, you have made these Dasyus devoid of all (good qualities); you have made the servile races abject: may you, (Soma and Indra), repel (and) destroy (your) enemies: accept (our) homage for their destruction.



॥ ಸಂಹಿತಾಪಾಠಃ ॥

ಏವಾ ಸತ್ಯಂ ಮಘವಾನಾ ಯುವಂ ತದಿಂದ್ರಶ್ಚ ಸೋಮೋರ್ವಮಶ್ವ್ಯಂ ಗೋಃ ।
ಆದರ್ದೃತಮಪಿಹಿತಾನ್ಯಶ್ನಾ ರಿರಿಚಥುಃ ಕ್ಷಾಶ್ಚಿತ್ತತೃದಾನಾ ॥ ೫ ॥

॥ ಪದಪಾಠಃ ॥

ಏವ । ಸತ್ಯಂ । ಮಘಽವಾನಾ । ಯುವಂ । ತತ್ । ಇಂದ್ರಃ । ಚ । ಸೋಮ । ಊರ್ವಂ । ಅಶ್ವ್ಯಂ । ಗೋಃ ।
ಆ । ಅದರ್ದೃತಂ । ಅಪಿಽಹಿತಾನಿ । ಅಶ್ನಾ । ರಿರಿಚಥುಃ । ಕ್ಷಾಃ । ಚಿತ್ । ತತೃದಾನಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಚೇಂದ್ರಶ್ಚೇತಿ ಯುವಾಮುಭಾವೂರ್ವಂ ಮಹಾಂತಮಶ್ವ್ಯಮಶ್ವಸಮೂಹಂ ಗೋರ್ಗವಾಂ ಸಮೂಹಂ ಚಾದರ್ದೃತಂ। ಆದರಯತಂ। ಅಪಿಹಿತಾನಿ ಪಣಿಭಿರಾಚ್ಛಾದಿತಾನಿ ಗವಾಂ ವೃಂದಾನಿ ಕ್ಷಾಶ್ಚಿತ್ ಪಣೀನಾಂ ಭೂಮೀಶ್ಚಾಶ್ನಾಶನಪರೇಣ ಬಲೇನ ರಿರಿಚಥುಃ। ರೇಚಿತವಂತೌ। ಹೇ ಮಘವಾನೌ ಧನವಂತಾವಿಂದ್ರಾಸೋಮೌ ತತೃದಾನಾ ಶತ್ರೂಣಾಂ ಹಿಂಸಕೌ ಯುವಂ ಯುವಾಮೇವ್ಮೇವಮುಕ್ತಪ್ರಕಾರೇಣ ಯತ್ಕೃತವಂತೌ ತತ್ಸರ್ವಂ ಸತ್ಯಮೇವ॥

॥ ಪ್ರತಿಪದಾರ್ಥ ॥

ಮಘವಾನಾ—ಧನವಂತರೂ। ತತೃದಾನಾ—ಶತ್ರುಹಿಂಸಕರೂ ಆದ। ಸೋಮ ಇಂದ್ರಶ್ಚ—ಎಲೈ ಸೋಮ ಮತ್ತು ಇಂದ್ರರೇ। ಯುವಂ—ನೀವಿಬ್ಬರೂ ಸಹ। ಅಪಿಹಿತಾನಿ—ಪಣಿಗಳಿಂದ ಬಚ್ಚಿಡಲ್ಪಟ್ಟದ್ದೂ। ಊರ್ವಂ—ಮಹತ್ತಾದುದೂ ಆದ। ಅಶ್ವ್ಯಂ—ಅಶ್ವಸಮೂಹಗಳನ್ನೂ। ಗೋಃ—ಗೋವುಗಳ ಸಮೂಹಗಳನ್ನೂ। ಆದರ್ದೃತಂ—ಬಿಡಿಸಿ ಹಂಚಿದಿರಿ ಎಂಬುದೂ। ಕ್ಷಾಶ್ಚ—ಪಣಿಗಳ ಭೂಮಿಗಳನ್ನೂ ಸಹ। ಅಶ್ನಾ—ನಿಮ್ಮ ಬಲದಿಂದ। ರಿರಿಚಥುಃ—ಬಿಡಿಸಿ ನಿಮ್ಮ ವಶಮಾಡಿಕೊಂಡಿರಿ ಎಂಬುದೂ। ಏವ ತತ್—ಇವೆಲ್ಲವೂ। ಸತ್ಯಂ—ಸತ್ಯವೇ ಆಗಿದೆ.

॥ ಭಾವಾರ್ಥ ॥

ಧನವಂತರೂ, ಶತ್ರುಹಿಂಸಕರೂ ಆದ ಎಲೈ ಸೋಮ ಮತ್ತು ಇಂದ್ರರೇ, ನೀವಿಬ್ಬರೂ ಸಹ ಪಣಿಗಳಿಂದ ಬಚ್ಚಿಡಲ್ಪಟ್ಟದ್ದೂ, ಮಹತ್ತಾದುದೂ ಆದ ಅಶ್ವಸಮೂಹಗಳನ್ನೂ, ಗೋವುಗಳ ಸಮೂಹವನ್ನೂ ಬಿಡಿಸಿ ಹಂಚಿದಿರಿ ಎಂಬುದೂ, ಪಣಿಗಳ ಭೂಮಿಗಳನ್ನೂ ನಿಮ್ಮ ಬಲದಿಂದ ಬಿಡಿಸಿ ನಿಮ್ಮ ವಶಮಾಡಿಕೊಂಡಿರಿ ಎಂಬುದೂ ಇವೆಲ್ಲವೂ ಸತ್ಯವೇ ಆಗಿದೆ. ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

## English Translation.

Possessors of wealth, destroyers of foes, Indra and Soma, it is indeed true that you have distributed great numbers of horses, and of the cattle which has been concealed, and the land which you had recovered by your strength.

# ಇಪ್ಪತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಆ ನಃ ಸ್ತುತ ಇತಿ ಪಂಚರ್ಚಮಷ್ಟಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಂ। ಆ ನಃ ಸ್ತುತ ಇತ್ಯನುಕ್ರಮಣಿಕಾ । ವಿನಿಯೋಗೋ ಲೈಂಗಿಕಃ ॥

ಅನುವಾದವು—ಆ ನಃ ಸ್ತುತಃ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಆ ನಃ ಸ್ತುತಃ ಎಂದು ಮೊದಲಾಗಿ ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೨೯

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೨೯ ॥
ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ವಾಮದೇವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ನಃ ಸ್ತುತ ಉಪ ವಾಜೇಭಿರೂತೀ ಇಂದ್ರ ಯಾಹಿ ಹರಿಭಿರ್ಮಂದಸಾನಃ।
ತಿರಶ್ಚಿದರ್ಯಃ ಸವನಾ ಪುರೂಣ್ಯಾಂಗೂಷೇಭಿರ್ಗೃಣಾನಃ ಸತ್ಯರಾಧಾಃ ॥೧॥

॥ ಪದಪಾಠಃ ॥

ಆ । ನಃ । ಸ್ತುತಃ । ಉಪ । ವಾಜೇಭಿಃ । ಊತೀ । ಇಂದ್ರ । ಯಾಹಿ । ಹರಿಽಭಿಃ । ಮಂದಸಾನಃ ।
ತಿರಃ । ಚಿತ್ । ಅರ್ಯಃ । ಸವನಾ । ಪುರೂಣಿ । ಆಂಗೂಷೇಭಿಃ । ಗೃಣಾನಃ । ಸತ್ಯಽರಾಧಾಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ್ತುತಸ್ತ್ವಂ ವಾಜೇಭಿರ್ವಾಜ್ಯೈರನ್ನೈಃ ಸಹ ತಿರಶ್ಚಿತ್ ಪ್ರಾಪ್ತಾನಿ । ತಿರಃ ಸತ ಇತಿ ಪ್ರಾಪ್ತಸ್ಯ । ನಿ. ೩-೨೦ । ಇತಿ ಯಾಸ್ಕಃ । ಪುರೂಣಿ ಪೂರ್ಣಾನಿ ಸವನಾ ಸವನಾನಿ ನೋಽಸ್ಮದೀಯಾನ್ಯಜ್ಞಾನುಪ ಪ್ರತ್ಯೂತೀ ಊತ್ಯೈ ನೋಽಸ್ಮಾಕಂ ರಕ್ಷಣಾರ್ಥಂ ಹರಿಭಿರಶ್ವೈರಾ ಯಾಹಿ । ಆಗಚ್ಛ । ಕೀದೃಶಃ । ಮಂದಸಾನೋ ಮೋದಮಾನೋಽರ್ಯಃ ಸ್ವಾಮ್ಯಾಂಗೂಷೇಭಿಃ ಸ್ತೋತ್ರೈರ್ಗೃಣಾನಃ ಸ್ತೂಯಮಾನಃ ಸತ್ಯರಾಧಾಃ ಸತ್ಯಧನಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮಂದಸಾನಃ—ಹರ್ಷಗೊಂಡವನೂ । ಅರ್ಯಃ—ಸ್ವಾಮಿಯೂ । ಆಂಗೂಷೇಭಿಃ—ಸ್ತೋತ್ರಗಳಿಂದ । ಗೃಣಾನಃ—ಸ್ತುತಿಸಲ್ಪಡುವವನೂ । ಸತ್ಯರಾಧಾಃ—ಸತ್ಯಾತ್ಮಕವಾದ ಧನವುಳ್ಳವನೂ । ಸ್ತುತಃ—ಸ್ತೋತೃಗಳಿಂದ ಸ್ತುತನಾದವನೂ ಆದ ನೀನು । ವಾಜೇಭಿಃ—ಅನ್ನಗಳೊಡನೆ । ತಿರಶ್ಚಿತ್—ಪ್ರಾಪ್ತವಾದವೂ । ಪುರೂಣಿ—ಅನೇಕಸಂಖ್ಯಾಕವಾದವೂ ಆದ । ನಃ—ನಮ್ಮ । ಸವನಾ ಉಪ—ಯಜ್ಞಗಳನ್ನು ಕುರಿತು । ಊತೀ—ನಮ್ಮ ರಕ್ಷಣೆಗಾಗಿ । ಹರಿಭಿಃ—ಅಶ್ವಗಳೊಡನೆ । ಆ ಯಾಹಿ—ದಯಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮಪಾನದಿಂದ ಹರ್ಷಗೊಂಡವನೂ, ಸಕಲರಿಗೂ ಸ್ವಾಮಿಯೂ, ಸ್ತೋತ್ರಗಳಿಂದ ಸ್ತುತಿಸಲ್ಪಡುವವನೂ, ಸತ್ಯಾತ್ಮಕವಾದ ಧನವುಳ್ಳವನೂ, ಸ್ತೋತೃಗಳಿಂದ ಸ್ತುತನಾದವನೂ ಆದ ನೀನು ಅನ್ನಗಳೊಡನೆ ಪ್ರಾಪ್ತವಾದವೂ, ಅನೇಕಸಂಖ್ಯಾಕವಾದವೂ ಆದ ನಮ್ಮ ಯಜ್ಞಗಳಿಗಭಿಮುಖವಾಗಿ ಅಶ್ವಗಳೊಡನೆ ನಮ್ಮ ರಕ್ಷಣೆಗಾಗಿ ದಯಮಾಡು.

## English Translation.

Honoured with accepted (sacrificial) viands, come, Indra, exulting, with your steeds, to our many rites for our protection; you who are the lord, glorified by hymns, whose wealth is truth.

---

॥ ಸಂಹಿತಾಪಾಠಃ ॥

ಆ ಹಿ ಷ್ಮಾ ಯಾತಿ ನರ್ಯಶ್ಚಿಕಿತ್ವಾನ್ಹೂಯಮಾನಃ ಸೋತೃಭಿರುಪ ಯಜ್ಞಂ ।
ಸ್ವಶ್ವೋ ಯೋ ಅಭೀರುರ್ಮನ್ಯಮಾನಃ ಸುಷ್ವಾಣೇಭಿರ್ಮದತಿ ಸಂ ಹ ವೀರೈಃ ॥ ೨ ॥

|| ಪದಪಾಠಃ ||

ಆ | ಹಿ | ಸ್ಮ | ಯಾತಿ | ನರ್ಯಃ | ಚಿಕಿತ್ವಾನ್ | ಹೂಯಮಾನಃ | ಸೋತೃಽಭಿಃ | ಉಪ | ಯಜ್ಞಂ | ಸುಽಅಶ್ವಃ | ಯಃ | ಅಭೀರುಃ | ಮನ್ಯಮಾನಃ | ಸುಸ್ವಾನೇಭಿಃ | ಮದತಿ | ಸಂ | ಹ | ವೀರೈಃ || ೨ ||

| ಸಾಯಣಭಾಷ್ಯಂ |

ನರ್ಯೋ ನೃಭ್ಯೋ ಹಿತಶ್ಚಿಕಿತ್ವಾನ್ ಸರ್ವಂ ಜಾನನ್ ಸೋತೃಭಿಃ ಸೋಮಮಭಿಷುಣ್ವದ್ಭಿ-ಋರ್ತ್ವಿಗ್ಭಿರ್ಹೂಯಮಾನ ಆಹೂಯಮಾನ ಇಂದ್ರೋಽಸ್ಮದೀಯಂ ಯಜ್ಞಮುಪ ಪ್ರತಿ ಆ ಯಾತಿ | ಆಗಚ್ಛತು | ಹಿ ಸ್ಮೇತಿ ಪೂರಣೌ | ಸ್ವಶ್ವಃ ಶೋಭನಾಶ್ವೋಪೇತೋಽಭೀರುರ್ನಿರ್ಭಯಶೀಲಃ ಸುಸ್ವಾನೇಭಿಃ ಸುಸ್ವದ್ಭಿರ್ಯಜಮಾನೈರ್ಮನ್ಯಮಾನಃ ಸ್ತೂಯಮಾನೋ ಯ ಇಂದ್ರೋ ವೀರೈಃ ಶೂರೈರ್ಮರುದ್ಭಿಃ ಸಹ ಸಂ ಮದತಿ ಹ ಸಹ ಮಾದ್ಯತ್ಯೇವ | ಸ ಇಂದ್ರ ಆಗಚ್ಛತ್ವಿತಿ ಪೂರ್ವೇಣ ಸಂಬಂಧಃ ||

| ಪ್ರತಿಪದಾರ್ಥ |

ಸ್ವಶ್ವಃ—ಶ್ರೇಷ್ಠವಾದ ಅಶ್ವಗಳಿಂದ ಕೂಡಿದವನೂ | ಅಭೀರುಃ—ಭಯರಹಿತನೂ | ಸುಸ್ವಾನೇಭಿಃ—ಶ್ರೇಷ್ಠವಾದ ಸೋಮವನ್ನು ಹಿಂಡುವವರಿಂದ | ಮನ್ಯಮಾನಃ—ಸ್ತುತಿಸಲ್ಪಡುವವನೂ | ನರ್ಯಃ—ಮಾನವರಿಗೆ ಹಿತಕಾರಿಯೂ | ಚಿಕಿತ್ವಾನ್—ಸರ್ವಜ್ಞನೂ ಮತ್ತು | ಯಃ—ಯಾರು | ವೀರೈಃ—ಶೂರರಾದ ಮರುತ್ತುಗಳೊಂದಿಗೆ | ಸಂ ಮದತಿ ಹ—ಹರ್ಷಯುಕ್ತನಾಗಿರುವನೋ ಅಂತಹವನೂ ಆದ ಇಂದ್ರನು | ಸೋತೃಭಿಃ—ಸೋಮವನ್ನು ಹಿಂಡುವ ಋತ್ವಿಕ್ಕುಗಳಿಂದ | ಹೂಯಮಾನಃ—ಪ್ರಾರ್ಥಿಸಿ ಕರೆಯಲ್ಪಡುವವನಾಗಿ | ಯಜ್ಞಂ ಉಪ—ನಮ್ಮ ಯಜ್ಞಕ್ಕೆ ಅಭಿಮುಖನಾಗಿ | ಆ ಯಾತಿ—ದಯಮಾಡಲಿ.

| ಭಾವಾರ್ಥ |

ಶ್ರೇಷ್ಠವಾದ ಅಶ್ವಗಳಿಂದ ಕೂಡಿದವನೂ, ಭಯರಹಿತನೂ, ಶ್ರೇಷ್ಠವಾದ ಸೋಮವನ್ನು ಹಿಂಡುವವರಿಂದ ಸ್ತುತಿಸಲ್ಪಡುವವನೂ, ಮಾನವರಿಗೆ ಹಿತಕಾರಿಯೂ, ಸರ್ವಜ್ಞನೂ, ಶೂರರಾದ ಮರುತ್ತುಗಳೊಡನೆ ಹರ್ಷಚಿತ್ತನಾಗಿರುವವನೂ ಆದ ಇಂದ್ರನು ಸೋಮವನ್ನು ಹಿಂಡುವ ಋತ್ವಿಕ್ಕುಗಳಿಂದ ಪ್ರಾರ್ಥಿತನಾಗಿ ನಮ್ಮ ಯಜ್ಞಕ್ಕೆ ಅಭಿಮುಖನಾಗಿ ದಯಮಾಡಲಿ.

## English Translation.

May Indra, the friend of man, the omniscient, come to the sacrifice when invoked by the offerers of libations; he who is possessed of good horses, who is fearless, honoured by the effusers of libations, who rejoices with the heroes (the Maruts).

॥ ಸಂಹಿತಾಪಾಠಃ ॥

ಶ್ರಾವಯೇದಸ್ಯ ಕರ್ಣಾ ವಾಜಯಧ್ಯೈ ಜುಷ್ಟಾಮನು ಪ್ರ ದಿಶಂ ಮಂದ-
ಯಧ್ಯೈ ॥
ಉದ್ವಾವೃಷಾಣೋ ರಾಧಸೇ ತುವಿಷ್ಮಾನ್ಕರನ್ನ ಇಂದ್ರಃ ಸುತೀರ್ಥಾಭಯಂ
ಚ ॥ ೩ ॥

॥ ಪದಪಾಠಃ ॥

ಶ್ರವಯ । ಇತ್ । ಅಸ್ಯ । ಕರ್ಣಾ । ವಾಜಯಧ್ಯೈ । ಜುಷ್ಟಾಂ । ಅನು । ಪ್ರ । ದಿಶಂ । ಮಂದ-
ಯಧ್ಯೈ ।
ಉತ್ಽವವೃಷಾಣಃ । ರಾಧಸೇ । ತುವಿಷ್ಮಾನ್ । ಕರತ್ । ನಃ । ಇಂದ್ರಃ । ಸುಽತೀರ್ಥಾ । ಅಭಯಂ ।
ಚ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಸ್ತ್ವಮಸ್ಯೇಂಪ್ರಸ್ಯ ಸಂಬಂಧಿನೌ ಕರ್ಣಾ ಕರ್ಣೌ ವಾಜಯಧ್ಯಾ ಇಂದ್ರಂ ಬಲಿನಂ ಕರ್ತುಂ ಜುಷ್ಟಾಮನು ದಿಶಂ ಸೇವಿತಾಸು ಸರ್ವಾಸು ದಿಕ್ಷು ಪ್ರ ಮಂದಯಧ್ಯೈ ಪ್ರಕರ್ಷೇಣೇಂದ್ರಂ ಮಾದಯಿತುಂ ಚ ಶ್ರವಯ । ಸ್ತೋತ್ರಾಣಿ ಶ್ರಾವಯ । ಇದಿತಿ ಪೂರಣಃ । ಉದ್ವವೃಷಾಣಃ ಸೋಮೇನೋತ್ಸಿಚ್ಯಮಾನಸ್ತುವಿಷ್ಮಾನ್ಬಲವಾನಿಂದ್ರೋ ನೋಽಸ್ಮಾಕಂ ರಾಧಸೇ ಧನಾರ್ಥಂ ಸುತೀರ್ಥಾ ಶೋಭನಾನಿ ತೀರ್ಥಾನ್ಯಭಯಂ ಚ ಭಯರಾಹಿತ್ಯಂ ಚ ಕರತ್ । ಕರೋತು ॥

॥ ಪ್ರತಿಪದಾರ್ಥ ॥

( ಎಲೈ ಸ್ತೋತೃವೇ ) । ಅಸ್ಯ—ಈ ಇಂದ್ರನ । ಕರ್ಣಾ—ಕಿವಿಗಳನ್ನು । ವಾಜಯಧ್ಯೈ—(ಸ್ತುತಿಶ್ರವಣಮಾಡಲು) ಶಕ್ತಿಯುತವನ್ನಾಗಿ ಮಾಡುವುದಕ್ಕೂ । ಜುಷ್ಟಾಂ ಅನು ದಿಶಂ—ಅವನನ್ನು ಸೇವಿಸುವ ಸಕಲ ದಿಕ್ಕುಗಳಲ್ಲಿಯೂ । ಪ್ರ ಮಂದಯಧ್ಯೈ—ಪೂರ್ಣವಾಗಿ ಹರ್ಷಗೊಳಿಸುವುದಕ್ಕೂ । ಶ್ರವಯ—ಅವನನ್ನು ಸ್ತುತಿಸಿ ನಿನ್ನ ಸ್ತುತಿಯನ್ನು ಅವನು ಕೇಳುವಂತೆ ಮಾಡು । ಉದ್ವವೃಷಾಣಃ—ಸೋಮದಿಂದ ತೊಯ್ಯಲ್ಪಟ್ಟವನೂ । ತುವಿಷ್ಮಾನ್—ಶಕ್ತಿವಂತನೂ ಆದ । ಇಂದ್ರಃ—ಇಂದ್ರನು । ಸುತೀರ್ಥಾ—ಪವಿತ್ರಪ್ರದೇಶಗಳನ್ನು । ನಃ—ನಮಗೆ । ರಾಧಸೇ—ಧನಸಂಪತ್ಪ್ರದವಾಗುವಂತೆಯೂ । ಅಭಯಂ ಚ—ಭಯರಹಿತವಾಗಿರುವಂತೆಯೂ । ಕರತ್—ಉಂಟುಮಾಡಲಿ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಇಂದ್ರನ ಕಿವಿಗಳನ್ನು ಶ್ರುತಿಶ್ರವಣಮಾಡಲು ಶಕ್ತಿಯುತವನ್ನಾಗಿ ಮಾಡುವುದಕ್ಕೂ, ಅವನನ್ನು ಸೇವಿಸುವ ಸಕಲ ದಿಕ್ಕುಗಳಲ್ಲಿಯೂ ಪೂರ್ಣವಾಗಿ ಹರ್ಷಗೊಳಿಸುವುದಕ್ಕೂ ಸ್ತುತಿಸಿ, ಅವನು ನಿನ್ನ

ಸ್ತುತಿಯನ್ನು ಕೇಳುವಂತೆ ಮಾಡು. ಸೋಮದಿಂದ ತೊಯ್ಯಲ್ಪಟ್ಟವನೂ, ಶಕ್ತಿವಂತನೂ ಆದ ಇಂದ್ರನು ಪವಿತ್ರ ಪ್ರದೇಶಗಳನ್ನು ನಮಗೆ ಧನಸಂಪತ್ಪ್ರದವಾಗುವಂತೆಯೂ ಮತ್ತು ಭಯರಹಿತವಾಗಿರುವಂತೆಯೂ ಮಾಡಲಿ.

### English Translation.

Let (his worshipper) cause his ears to listen so as to invigorate him (by praise), and to give him pleasure in every acceptable place; and being well moistened with the Soma juice, may the vigorous Indra render the holy places (conducive) to our wealth, and free from danger.

॥ ಸಂಹಿತಾಪಾಠಃ ॥

ಅಚ್ಛಾ ಯೋ ಗಂತಾ ನಾಧಮಾನಮೂತೀ ಇತ್ಥಾ ವಿಪ್ರಂ ಹವಮಾನಂ ಗೃಣಂತಂ ।

ಉಪ ತ್ಮನಿ ದಧಾನೋ ಧುರ್ಯಾ೩ಶೂನ್‌ತ್ಸಹಸ್ರಾಣಿ ಶತಾನಿ ವಜ್ರಬಾಹುಃ ॥

॥ ಪದಪಾಠಃ ॥

ಅಚ್ಛ । ಯಃ । ಗಂತಾ । ನಾಧಮಾನಂ । ಊತೀ । ಇತ್ಥಾ । ವಿಪ್ರಂ । ಹವಮಾನಂ । ಗೃಣಂತಂ ।

ಉಪ । ತ್ಮನಿ । ದಧಾನಃ । ಧುರಿ । ಆಶೂನ್ । ಸಹಸ್ರಾಣಿ । ಶತಾನಿ । ವಜ್ರಽಬಾಹುಃ ॥ ೪ ॥

॥ ಸಾಯಣಭಾಷ್ಯಂ ॥

ವಜ್ರಬಾಹುರ್ವಜ್ರಹಸ್ತೋ ಯ ಇಂದ್ರಸ್ತ್ಮನ್ಯಾತ್ಮನಿ ಸ್ಥಿತಾನಾತ್ಮವಶ್ಯಾನ್ ಸಹಸ್ರಾಣಿ ಸಹಸ್ರಸಂಖ್ಯಾಕಾನ್ ಶತಾನಿ ಶತಸಂಖ್ಯಾಕಾನಾಶೂನ್ ಶೀಘ್ರಗಾಮಿನೋಽಶ್ವಾನ್ಧುರಿ ರಥವಹನಪ್ರದೇಶ ಉಪ ದಧಾನಃ ಸಂಸ್ಥಾಪಯನ್ನೂತೀ ರಕ್ಷಣಾರ್ಥಂ ನಾಧಮಾನಂ ಯಾಚಮಾನಂ ವಿಪ್ರಂ ಮೇಧಾವಿನಂ ಹವಮಾನಮಾಹ್ವಯಂತಮಿತ್ಥೇತ್ಥಮನೇನ ಪ್ರಕಾರೇಣ ಗೃಣಂತಂ ಸ್ತುವಂತಂ ಯಜಮಾನಮುಚ್ಛಾಭಿಮುಖ್ಯೇನ ಗಂತಾ ಗಮನಶೀಲಃ । ಭವತೀತಿ ಶೇಷಃ । ಸ ಇಂದ್ರಃ ಸುತೀರ್ಥಾನ್ಯಭಯಂ ಚ ಕರೋತ್ವಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ವಜ್ರಬಾಹುಃ—ವಜ್ರಾಯುಧವನ್ನು ಕೈಯ್ಯಲ್ಲಿ ಹಿಡಿದಿರುವ । ಯಃ—ಯಾವ ಇಂದ್ರನು । ತ್ಮನಿ—ತನ್ನಧೀನದಲ್ಲಿಯೇ ಇರತಕ್ಕವೂ (ಅಥವಾ ಸ್ವಯಂ ಪ್ರೇರಿತನಾಗಿಯೇ) । ಸಹಸ್ರಾಣಿ—ಸಹಸ್ರಾರು ಸಂಖ್ಯೆಯುಳ್ಳವೂ । ಶತಾನಿ—ಶತಸಂಖ್ಯಾಕವುಳ್ಳವೂ । ಆಶೂನ್—ವೇಗಗಾಮಿಗಳೂ ಆದ ಅಶ್ವಗಳನ್ನು । ಧುರಿ—ರಥದ ಮುಂಭಾಗದಲ್ಲಿ । ಉಪ ದಧಾನಃ—ಸೇರಿಸಿ । ಊತೀ—ರಕ್ಷಣಾರ್ಥವಾಗಿ । ನಾಧಮಾನಂ—ಪ್ರಾರ್ಥಿಸುತ್ತಿರುವವನೂ । ವಿಪ್ರಂ—ಮೇಧಾವಿಯೂ । ಹವಮಾನಂ—ಸಹಾಯಕ್ಕಾಗಿ ಕರೆಯುತ್ತಿರುವವನೂ । ಇತ್ಥಾ—ಇಂದ್ರನ ಗುಣವರ್ಣನದೊಂದಿಗೆ । ಗೃಣಂತಂ ಅಚ್ಛ—ಸ್ತುತಿಸುವವನೂ ಆದ ಯಜಮಾನನಿಗಭಿಮುಖನಾಗಿ ಹೊರಡುವನೋ (ಆ ಇಂದ್ರನು ಅಭಯವನ್ನುಂಟುಮಾಡುವವನಾಗಲಿ).

॥ ಭಾವಾರ್ಥ ॥

ವಜ್ರಧಾರಿಯಾದ ಯಾವ ಇಂದ್ರನು ತನ್ನಧೀನದಲ್ಲಿಯೇ ಇರತಕ್ಕವೂ ಸಹಸ್ರಾರು ಸಂಖ್ಯಾಕವೂ ವೇಗಗಾಮಿಗಳೂ ಆದ ಅಶ್ವಗಳನ್ನು ರಥದ ಮುಂಭಾಗದಲ್ಲಿ ಸೇರಿಸಿ, ರಕ್ಷಣಾರ್ಥವಾಗಿ ಪ್ರಾರ್ಥಿಸುತ್ತಿರುವವನೂ, ಮೇಧಾವಿಯೂ, ಸಹಾಯಕ್ಕಾಗಿ ಕರೆಯುತ್ತಿರುವವನೂ, ಇಂದ್ರನ ನಾನಾ ಗುಣಗಳನ್ನೂ ಪ್ರಶಂಸಿಸಿ ಸ್ತುತಿಸುವವನೂ ಆದ ಯಜಮಾನನಿಗಭಿಮುಖನಾಗಿ ಹೊರಡುವನೋ ಅದೇ ಇಂದ್ರನು ಅಭಯವನ್ನುಂಟು ಮಾಡಲಿ.

## English Translation.

(That Indra), who repairs to the suppliant for (his) protection, to the sage in this manner invoking and praising him ; he who, armed with the thuderbolt, places, of his own accord, hundred and thousands of swift-going (horses) in the shafts (of their cars).

---

॥ ಸಂಹಿತಾಪಾಠಃ ॥

ತ್ವೋತಾಸೋ ಮಘವನ್ನಿಂದ್ರ ವಿಪ್ರಾ ವಯಂ ತೇ ಸ್ಯಾಮ ಸೂರಯೋ ಗೃಣಂತಃ ।

ಭೇಜಾನಾಸೋ ಬೃಹದ್ದಿವಸ್ಯ ರಾಯ ಆಕಾಯ್ಯಸ್ಯ ದಾವನೇ ಪುರುಕ್ಷೋಃ ॥

॥ ಪದಪಾಠಃ ॥

ತ್ವಾऽಊತಾಸಃ । ಮಘ್ಽವನ್ । ಇಂದ್ರ । ವಿಪ್ರಾಃ । ವಯಂ । ತೇ । ಸ್ಯಾಮ । ಸೂರಯಃ । ಗೃಣಂತಃ ।
ಭೇಜಾನಾಸಃ । ಬೃಹತ್ऽದಿವಸ್ಯ । ರಾಯಃ । ಆऽಕಾಯ್ಯಸ್ಯ । ದಾವನೇ । ಪುರುऽಕ್ಷೋಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮಘವನ್ಧನವನ್ನಿಂದ್ರ ತ್ವೋತಾಸಸ್ತ್ವಯಾ ರಕ್ಷಿತಾ ವಿಪ್ರಾ ಮೇಧಾವಿನೋ ಗೃಣಂತಸ್ತ್ವಾಂ ಸ್ತುವಂತಃ ಸೂರಯಃ ಸ್ತೋತಾರೋ ವಯಂ ಬೃಹದ್ದಿವಸ್ಯ ಮಹದ್ದೀಪ್ತೇರಾಕಾಯ್ಯಸ್ಯ ಆ ಸಮಂತಾತ್ಸ್ತುತ್ಯಸ್ಯ ಪುರುಕ್ಷೋರ್ಬಹ್ವನ್ನಸ್ಯ ಬಹುಕೀರ್ತೇರ್ವಾ ತೇ ತ್ವದೀಯಸ್ಯ ರಾಯೋ ಧನಸ್ಯ ದಾವನೇ ದಾನೇ ನಿಮಿತ್ತೇ ಸತಿ ಭೇಜಾನಾಸಸ್ತ್ವಾಂ ಭಜಮಾನಾಃ ಸ್ಯಾಮ । ಭವೇಮ ॥

॥ ಪ್ರತಿಪದಾರ್ಥ ॥

ಮಘವನ್—ಧನವಂತನಾದ । ಇಂದ್ರ—ಇಂದ್ರನೇ । ತ್ವೋತಾಸಃ—ನಿನ್ನಿಂದ ರಕ್ಷಿತರಾದವರೂ । ವಿಪ್ರಾಃ—ಮೇಧಾವಿಗಳೂ । ಗೃಣಂತಃ—ನಿನ್ನನ್ನು ಸ್ತುತಿಸುವವರೂ । ಸೂರಯಃ—ಸ್ತೋತೃಗಳೂ ಆದ । ವಯಂ—ನಾವು । ಬೃಹದ್ದಿವಸ್ಯ—ಅತಿಶಯವಾಗಿ ಪ್ರಕಾಶಿಸುವವನೂ । ಆಕಾಯ್ಯಸ್ಯ—ಸರ್ವತ್ರ ಸ್ತುತಿಸಿಲ್ಪಡುವವನೂ । ಪುರುಕ್ಷೋಃ—ಪ್ರಭೂತವಾದ ಅನ್ನವುಳ್ಳವನೂ ಆದ । ತೇ—ನಿನ್ನ । ರಾಯಃ—ಧನದ । ದಾವನೇ—ದಾನವನ್ನು ಪಡೆಯಲು । ಭೇಜಾನಾಸಃ—ನಿನ್ನನ್ನು ಸ್ತುತಿಸುವವರಾಗಿ । ಸ್ಯಾಮ—ಇರುವಂತಾಗಲಿ.

॥ ಭಾವಾರ್ಥ ॥

ಧನವಂತನಾದ ಇಂದ್ರನೇ, ನಿನ್ನಿಂದ ರಕ್ಷಿತರಾದವರೂ, ಮೇಧಾವಿಗಳೂ, ನಿನ್ನನ್ನು ಸ್ತುತಿಸುವವರೂ, ಸ್ತೋತೃಗಳೂ ಆದ ನಾವು ಅತಿಶಯವಾಗಿ ಪ್ರಕಾಶಿಸುವವನೂ, ಸರ್ವತ್ರ ಸ್ತುತಿಸಲ್ಪಡುವವನೂ, ಪ್ರಭೂತವಾದ ಅನ್ನವುಳ್ಳವನೂ ಆದ ನಿನ್ನ ಧನದ ದಾನವನ್ನು ಪಡೆಯಲು ನಿನ್ನನ್ನು ಸ್ತುತಿಸುತ್ತಾ ಇರುವಂತೆ ಅನುಗ್ರಹಿಸು.

## English Translation.

Opulent Indra, may we, who are protected by you, who are intelligent, devout, and offerers of praise, be participant with you for the sake of distributing brilliant wealth, and abundant food, entitled to (our) commendation.



# ಮೂವತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ನಕಿರಿಂದ್ರೇತಿ ಚತುರ್ವಿಂಶತ್ಯೃಚಂ ನವಮಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರಂ। ಅಷ್ಟಮೀ ಚತುರ್ವಿಂಶೀ ಚ ದ್ವೇ ಅನುಷ್ಟುಭೌ। ಇಂದ್ರೋ ದೇವತಾ। ದಿವಶ್ಚಿದ್ಘೇತ್ಯಯಂ ತೃಚ ಉಷೋದೇವತಾಕ ಇಂದ್ರದೇವತಾಕಶ್ಚ। ತಥಾ ಚಾನುಕ್ರಾಂತಂ। ನಕಿಶ್ಚತುರ್ವಿಂಶತಿರ್ದಿವಶ್ಚಿತ್ತೃಚ ಉಷಸ್ಯಶ್ಚ ಗಾಯತ್ರಂ ಹ್ಯಷ್ಟಮ್ಯಂತ್ಯೇ ಚಾನುಷ್ಟುಭಾವಿತಿ॥ ಅತಿರಾತ್ರೇ ತೃತೀಯೇ ಪರ್ಯಾಯೇ ಮೈತ್ರಾವರುಣಶಸ್ತ್ರ ಉತ್ತಮಾವರ್ಜಮಿದಂ ಸೂಕ್ತಂ ತಥಾ ಚ ಸೂತ್ರಿತಂ। ನಕಿರಿಂದ್ರ ತ್ವದುತ್ತರ ಇತ್ಯುತ್ತಮಾಮುದ್ಧರೇತ್। ಆ. ೬-೪। ಇತಿ॥

ಅನುವಾದವು—ನಕಿರಿಂದ್ರ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಗಾಯತ್ರೀಛಂದಸ್ಸು; ಆದರೆ ಎಂಟನೆಯ ಮತ್ತು ಇಪ್ಪತ್ತನಾಲ್ಕನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಇಂದ್ರನು ದೇವತೆಯು. ದಿವಶ್ಚಿದ್ಘಾ ಎಂಬ ತೃಚವು (ಈ ಸೂಕ್ತದ ೯-೧೧ ಎಂಬ ಮೂರು ಋಕ್ಕುಗಳು) ಉಷೋದೇವತಾಕವೂ ಮತ್ತು ಇಂದ್ರದೇವತಾಕವೂ ಆಗಿದೆ. ಅನುಕ್ರಮಣಿಕೆಯಲ್ಲಿ—ನಕಿಶ್ಚತುರ್ವಿಂಶತಿರ್ದಿವಶ್ಚಿತ್ತೃಚ ಉಷಸ್ಯಶ್ಚ ಗಾಯತ್ರಂ ಹ್ಯಷ್ಟಮ್ಯಂತ್ಯೇ ಚಾನುಷ್ಟುಭೌ ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದ ತೃತೀಯಪರ್ಯಾಯದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ನಕಿರಿಂದ್ರ ತ್ವದುತ್ತರ ಇತ್ಯುತ್ತಮಾಮುದ್ಧರೇತ್ ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ ೩೦

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೩೦ ॥
ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೧೯, ೨೦, ೨೧, ೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥
॥ ಋಷಿಃ—ವಾಮದೇವಃ ॥
॥ ದೇವತಾ—೧-೮, ೧೨-೨೪, ಇಂದ್ರಃ ॥ ೯-೧೧. ಇಂದ್ರ ಉಷಾಶ್ಚ ॥
॥ ಛಂದಃ—೧-೭, ೯-೨೩, ಗಾಯತ್ರೀ। ೮, ೨೪ ಅನುಷ್ಟುಪ್।

॥ ಸಂಹಿತಾಪಾಠಃ ॥

ನಕಿರಿಂದ್ರ ತ್ವದುತ್ತರೋ ನ ಜ್ಯಾಯಾँ ಅಸ್ತಿ ವೃತ್ರಹನ್।
ನಕಿರೇವಾ ಯಥಾ ತ್ವಂ॥ ೧॥

‖ ಪದಪಾಠಃ ‖

ನಕಿಃ । ಇಂದ್ರ । ತ್ವತ್ । ಉತ್ಽತರಃ । ನ । ಜ್ಯಾಯಾನ್ । ಅಸ್ತಿ । ವೃತ್ರಽಹನ್ ।

ನಕಿಃ । ಏವ । ಯಥಾ । ತ್ವಂ ‖ ೧ ‖

‖ ಸಾಯಣಭಾಷ್ಯಂ ‖

ಹೇ ವೃತ್ರಹನ್ನಿಂದ್ರವೃತ್ರಸ್ಯ ನಾಶಕೇಂದ್ರ । ಲೋಕೇ ಏಕೋಽಪೀತಿ ಶೇಷಃ । ತ್ವತ್ತ್ವತ್ತ ಉತ್ತರ ಉತ್ಕೃಷ್ಟತರೋ ನಕಿರಸ್ತಿ । ನ ಭವತಿ । ತ್ವತ್ತೋ ಜ್ಯಾಯಾನ್ ಪ್ರಶಸ್ಯತರ ಏಕೋಽಪಿ ನಾಸ್ತಿ । ಹೇ ಇಂದ್ರ ತ್ವಂ ಲೋಕೇ ಯಥಾ ಪ್ರಸಿದ್ಧೋ ಭವಸಿ ತಥಾವಿಧ ಏಕೋಽಪಿ ನಕಿರೇವಾಸ್ತಿ । ನೈವ ಭವತಿ । ಕಶ್ಚಿದಪಿ ಲೋಕ ಇಂದ್ರಸದೃಶೋ ನಾಸ್ತೀತ್ಯರ್ಥಃ ‖

‖ ಪ್ರತಿಪದಾರ್ಥ ‖

ವೃತ್ರಹನ್—ವೃತ್ರಹಂತಕನಾದ । ಇಂದ್ರ—ಎಲೈ ಇಂದ್ರನೇ । ತ್ವತ್—ನಿನಗಿಂತಲೂ । ಉತ್ತರಃ—ಹೆಚ್ಚು ಉತ್ಕೃಷ್ಟನಾದವನು । ನಕಿಃ ಅಸ್ತಿ—ಯಾರೂ ಇಲ್ಲ । ಜ್ಯಾಯಾನ್—ನಿನಗಿಂತಲೂ ಹೆಚ್ಚು ಪ್ರಶಸ್ಯನು । ನ (ಅಸ್ತಿ)—ಇಲ್ಲ । ತ್ವಂ—ನೀನು । ಯಥಾ—ಯಾವ ಗುಣಗಳಿಂದ ಪ್ರಸಿದ್ಧನಾಗಿದ್ದೀಯೋ । (ಹಾಗೆ ಪ್ರಸಿದ್ಧ ಗುಣಗಳಿಂದ ಕೂಡಿದವನೂ, ನಿನ್ನನ್ನು ಬಿಟ್ಟರೆ) ನಕಿಃ ಏವ—ಖಂಡಿತವಾಗಿಯೂ ಬೇರೊಬ್ಬನಿಲ್ಲ.

‖ ಭಾವಾರ್ಥ ‖

ವೃತ್ರಹಂತಕನಾದ ಎಲೈ ಇಂದ್ರನೇ, ನಿನಗಿಂತಲೂ ಹೆಚ್ಚು ಉತ್ಕೃಷ್ಟನಾದವನು ಯಾರೂ ಇಲ್ಲ. ನಿನಗಿಂತಲೂ ಹೆಚ್ಚು ಸ್ತುತಿಪಾತ್ರನೂ ಯಾರೂ ಇಲ್ಲ. ಯಾವ ಸದ್ಗುಣಗಳಿಂದ ನೀನು ಪ್ರಸಿದ್ಧನಾಗಿದ್ದೀಯೋ ಅಂತಹ ಸದ್ಗುಣಗಳಿಂದ ಕೂಡಿದವನೂ ಸಹ ನಿನ್ನನ್ನು ಬಿಟ್ಟರೆ ಬೇರೊಬ್ಬನಿಲ್ಲ.

English Translation.

There is no one, Indra, superior to you; no one more excellent (than you); slayer of Vritra there is no one, verily, such as you are.

---

‖ ಸಂಹಿತಾಪಾಠಃ ‖

ಸತ್ರಾ ತೇ ಅನು ಕೃಷ್ಟಯೋ ವಿಶ್ವಾ ಚಕ್ರೇವ ವಾವೃತುಃ

ಸತ್ರಾ ಮಹಾಁ ಅಸಿ ಶ್ರುತಃ ‖ ೨ ‖

॥ ಪದಪಾಠಃ ॥

ಸತ್ರಾ । ತೇ । ಅನು । ಕೃಷ್ಟಯಃ । ವಿಶ್ವಾ । ಚಕ್ರಾಽಇವ । ವವೃತುಃ ।

ಸತ್ರಾ । ಮಹಾನ್ । ಅಸಿ । ಶ್ರುತಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಕೃಷ್ಟಯಃ ಪ್ರಜಾಸ್ತೇ ತ್ವಾಮನು ಲಕ್ಷೀಕೃತ್ಯ ಸತ್ರಾ ಸತ್ಯಮೇವ ವವೃತುಃ । ವರ್ತಂತೇ । ತತ್ರ ದೃಷ್ಟಾಂತಃ । ವಿಶ್ವಾ ವಿಶ್ವಾನಿ ವ್ಯಾಪ್ತಾನಿ ಚಕ್ರೇವ ಚಕ್ರಾಣೀವ । ಯಥಾ ಚಕ್ರಾಣಿ ಶಕಟಮನುವರ್ತಂತೇ ತದ್ವತ್। ಹೇ ಇಂದ್ರ ಮಹಾಂಸ್ತ್ವಂ ಸತ್ರಾ ಸತ್ಯಮೇವ ಶ್ರುತೋ ವಿಶ್ರುತೋಽಸಿ। ಗುಣೈಃ ಪ್ರಖ್ಯಾತೋ ಭವಸಿ ॥

॥ ಪ್ರತಿಪದಾರ್ಥ ॥

ಇಂದ್ರ—(ಎಲೈ ಇಂದ್ರನೇ) । ವಿಶ್ವಾ—ಸಮಸ್ತವಾದ । ಚಕ್ರೇವ—ಚಕ್ರಗಳೂ (ಬಂಡಿಯನ್ನೇ ಆಶ್ರಯಿಸಿರುವಂತೆ) । ಕೃಷ್ಟಯಃ—ಸಕಲ ಪ್ರಜೆಗಳೂ ಸಹ । ತೇ ಅನು—ನಿನ್ನನ್ನೇ ನಿರೀಕ್ಷಿಸುತ್ತಾ। ಸತ್ರಾ—ಖಂಡಿತವಾಗಿಯೂ । ವವೃತುಃ—ನಿನ್ನನ್ನೇ ಆಶ್ರಯಿಸಿದ್ದಾರೆ । (ಎಲೈ ಇಂದ್ರನೇ) (ತ್ವಂ—ನೀನು) । ಮಹಾನ್—ಮಹದ್ಗುಣಗಳುಳ್ಳವನೂ । ಶ್ರುತಃ—ಪ್ರಸಿದ್ಧನೂ । ಅಸಿ—ಆಗಿದ್ದೀಯೆಂಬುದು । ಸತ್ರಾ—ಸತ್ಯವೇ ಆಗಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸಮಸ್ತವಾದ ಚಕ್ರಗಳೂ ಬಂಡಿಯನ್ನೇ ಆಶ್ರಯಿಸಿರುವಂತೆ, ಸಕಲ ಪ್ರಜೆಗಳೂ ಸಹ ನಿನ್ನನ್ನೇ ನಿರೀಕ್ಷಿಸುತ್ತಾ ಖಂಡಿತವಾಗಿಯೂ ನಿನ್ನನ್ನೇ ಆಶ್ರಯಿಸಿದ್ದಾರೆ. ಎಲೈ ಇಂದ್ರನೇ, ನೀನು ಸತ್ಯವಾಗಿಯೂ ಮಹದ್ಗುಣಗಳುಳ್ಳವನೂ ಪ್ರಸಿದ್ಧನೂ ಆಗಿದ್ದೀಯೆ.

## English Translation.

Verily men are attached to you as are all the wheels (to the body of the waggon): in truth you are great and renowned.

॥ ಸಂಹಿತಾಪಾಠಃ ॥

ವಿಶ್ವೇ ಚನೇದನಾ ತ್ವಾ ದೇವಾಸ ಇಂದ್ರ ಯುಯುಧುಃ

ಯದಹಾ ನಕ್ತಮಾತಿರಃ ॥ ೩ ॥

॥ ಪದಪಾಠಃ ॥

ವಿಶ್ವೇ । ಚನ । ಇತ್ । ಅನಾ । ತ್ವಾ । ದೇವಾಸಃ । ಇಂದ್ರ । ಯುಯುಧುಃ ।

ಯತ್ । ಅಹಾ । ನಕ್ತಂ । ಆ । ಅತಿರಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಿಶ್ವೇ ಚನೇತ್ಸರ್ವ ಏವ ದೇವಾಸೋಽಸುರಾನ್ವಿಜಿಗೀಷವೋ ದೇವಾ ಅನಾ ಪ್ರಾಣರೂಪೇಣ ಬಲೇನ ತ್ವಾ ತ್ವಾಂ ಸಹಾಯಂ ಲಬ್ಧ್ವಾ ಯುಯುಧುಃ । ಅಸುರೈಃ ಸಹ ಯುದ್ಧಂ ಚಕ್ರುಃ । ಯದ್ಯಸ್ಮಾತ್ಕಾರಣಾದಹಾ ಅಹಃಸು ನಕ್ತಂ ರಾತ್ರಿಷು ಚಾತಿರಃ । ಆ ಸಮಂತಾತ್ ಶತ್ರೂನವಧೀಃ । ಅತಃ ಕಾರಣಾದ್ಯುಯುಧುರಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯತ್—ಯಾವ ನಿನ್ನ ಪ್ರಭಾವದಿಂದ । ಅಹಾ—ಅಹಸ್ಸುಗಳಲ್ಲಿಯೂ ನಕ್ತಂ—ರಾತ್ರಿಕಾಲಗಳಲ್ಲಿಯೂ । ಆ ಅತಿರಃ—(ಶತ್ರುಗಳನ್ನು) ಪೂರ್ಣವಾಗಿ ನಾಶಮಾಡಿದೆಯೋ (ಆದುದರಿಂದಲೇ) ವಿಶ್ವೇ ಚನ ಇತ್—ಸಮಸ್ತವಾದ । ದೇವಾಸಃ—ದೇವತೆಗಳೂ ಸಹ । ತ್ವಾ—ನಿನ್ನನ್ನೇ । ಅನಾ—ಪ್ರಾಣರೂಪವಾದ ಸಹಾಯವನ್ನಾಗಿ ಹೊಂದಿ । ಯುಯುಧುಃ—ಶತ್ರುಗಳೊಡನೆ ಯುದ್ಧಮಾಡಿದರು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನಿನ್ನ ಪ್ರಭಾವದಿಂದ ನೀನು ಅಹೋರಾತ್ರಗಳಲ್ಲೆಲ್ಲಾ ಎಡಬಿಡದೆ ಹೋರಾಡಿ ಶತ್ರುಗಳನ್ನು ನಾಶಮಾಡಿದೆಯೋ, ಆ ಮಹತ್ವವಿರುವುದರಿಂದಲೇ ಸಮಸ್ತವಾದ ದೇವತೆಗಳೂ ಸಹ ನಿನ್ನನ್ನೇ ತಮ್ಮ ಪ್ರಾಣರೂಪವಾದ ಸಹಾಯವನ್ನಾಗಿ ಹೊಂದಿ ಶತ್ರುಗಳೊಡನೆ ಯುದ್ಧಮಾಡಿದರು.

English Translation.

Verily all the gods, with you (for) their strength, have warred (with the Asuras); wherefore you have destroyed them by day and by night.

॥ ಸಂಹಿತಾಪಾಠಃ ॥

ಯತ್ರೋತ ಬಾಧಿತೇಭ್ಯಶ್ಚಕ್ರಂ ಕುತ್ಸಾಯ ಯುಧ್ಯತೇ ।

ಮುಷಾಯ ಇಂದ್ರ ಸೂರ್ಯಂ ॥ ೪ ॥

॥ ಪದಪಾಠಃ ॥

ಯತ್ರ । ಉತ । ಬಾಧಿತೇಭ್ಯಃ । ಚಕ್ರಂ । ಕುತ್ಸಾಯ । ಯುಧ್ಯತೇ ।

ಮುಷಾಯಃ । ಇಂದ್ರ । ಸೂರ್ಯಂ ॥ ೪ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಯುದ್ಧೇ ಉತಾಪಿ ಚ ಹೇ ಇಂದ್ರ ತ್ವಂ ಬಾಧಿತೇಭ್ಯಃ ಕುತ್ಸಸಹಾಯೇಭ್ಯೋ ಯುಧ್ಯತೇ ಯುದ್ಧಂ ಕುರ್ವತೇ ಕುತ್ಸಾಯ ಚ ಸೂರ್ಯಂ ಸೂರ್ಯಸಂಬಂಧಿ ಚಕ್ರಂ ಮುಷಾಯಃ । ಅಮುಷ್ಣಾಃ । ಅಪಹೃತವಾನಸೀತ್ಯರ್ಥಃ । ತಸ್ಮಿನ್ಯುದ್ಧೇ ಪ್ರಾವಃ ಶಚೀಭಿರೇತಶಮಿತಿ ಪರೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಉತ—ಮತ್ತು । ಯತ್ರ—ಯಾವ ಯುದ್ಧದಲ್ಲಿ । ಯುಧ್ಯತೇ—ಯುದ್ಧವನ್ನು ಮಾಡುತ್ತಿದ್ದ । ಕುತ್ಸಾಯ—ಕುತ್ಸನಿಗಾಗಿಯೂ । ಬಾಧಿತೇಭ್ಯಃ—(ಶತ್ರುಗಳಿಂದ) ಹಿಂಸಿತರಾದ ಕುತ್ಸನ ಅನುಯಾಯಿಗಳಿಗಾಗಿಯೂ । ಸೂರ್ಯಂ—ಸೂರ್ಯಸಂಬಂಧಿಯಾದ । ಚಕ್ರಂ—ಚಕ್ರವನ್ನು । ಮುಷಾಯಃ—ಅಪಹರಿಸಿದೆಯೋ (ಆ ಯುದ್ಧದಲ್ಲಿ ಆವನನ್ನು ರಕ್ಷಿಸಿದೆ).

॥ ಭಾವಾರ್ಥ ॥

ಎಲೈ ಇಂದ್ರನೇ, ಯುದ್ಧವನ್ನು ಮಾಡಿ ಶತ್ರುಗಳಿಂದ ಹಿಂಸಿತರಾದ ಕುತ್ಸನ ಅನುಯಾಯಿಗಳಿಗಾಗಿಯೂ, ಕುತ್ಸನಿಗೆ ಸಹಾಯಮಾಡಬೇಕೆಂಬುದ್ದಿಶ್ಯದಿಂದಲೂ ನೀನು ಸೂರ್ಯಸಂಬಂಧಿಯಾದ ಚಕ್ರವನ್ನು ಅಪಹರಿಸಿದೆಯೋ ಆ ಯುದ್ಧದಲ್ಲಿ ನೀನು ಅವನನ್ನು ರಕ್ಷಿಸಿದೆ.

**English Translation.**

In which (contests), for the sake of Kutsa and his allies you have stolen, Indra, the (wheel of the car) of the sun.

---

॥ ಸಂಹಿತಾಪಾಠಃ ॥

ಯತ್ರ ದೇವಾಁ ಋಘಾಯತೋ ವಿಶ್ವಾಁ ಅಯುಧ್ಯ ಏಕ ಇತ್ ।

ತ್ವಮಿಂದ್ರ ವನೂಁರಹನ್ ॥ ೫ ॥

॥ ಪದಪಾಠಃ ॥

ಯತ್ರ । ದೇವಾನ್ । ಋಘಾಯತಃ । ವಿಶ್ವಾನ್ । ಅಯುಧ್ಯಃ । ಏಕಃ । ಇತ್ ।

ತ್ವಂ । ಇಂದ್ರ । ವನೂನ್ । ಅಹನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮೇಕ ಇದಸಹಾಯ ಏವ ಯತ್ರ ಯಸ್ಮಿನ್ ಸಂಗ್ರಾಮೇ ದೇವಾನಿಂದ್ರಾದೀನೃಘಾಯತೋ ಬಾಧಮಾನಾನ್ವಿಶ್ವಾನ್ ಸರ್ವಾನ್ರಾಕ್ಷಸಾದೀನಯುಧ್ಯಃ । ಯುದ್ಧಮಕರೋಃ । ತಥಾ ವನೂನ್ ಹಿಂಸಕಾನಹನ್ । ಅವಧೀಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಏಕ ಇತ್—ಇತರರ ಸಹಾಯವೇನೂ ಇಲ್ಲದೇ ನೀನೊಬ್ಬನೇ । ಯತ್ರ—ಯಾವ ಯುದ್ಧದಲ್ಲಿ । ದೇವಾನ್—ದೇವತೆಗಳನ್ನು । ಋಘಾಯತಃ—ಹಿಂಸಿಸುತ್ತಿದ್ದ । ವಿಶ್ವಾನ್—ಸಮಸ್ತ ಅಸುರರನ್ನೂ । ಅಯುಧ್ಯಃ—ಎದುರಿಸಿ ಯುದ್ಧಮಾಡಿದೆಯೋ (ಮತ್ತು) । ವನೂನ್—ಹಿಂಸಕರಾದ ಅವರನ್ನು । ಅಹನ್—ಕೊಂದೆಯೋ (ಆ ಯುದ್ಧದಲ್ಲಿ ಕುತ್ಸನನ್ನು ರಕ್ಷಿಸಿದೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಇತರ ಯಾವ ದೇವತೆಗಳ ಅಥವಾ ಮಾನವರ ಸಹಾಯವನ್ನೂ ಅಪೇಕ್ಷಿಸದೇ ನೀನೊಬ್ಬನೇ ಯಾವ ಯುದ್ಧದಲ್ಲಿ ದೇವಮಾನವಾದಿಗಳನ್ನು ಹಿಂಸಿಸುತ್ತಿದ್ದ ಸಮಸ್ತ ಅಸುರರನ್ನೂ ಎದುರಿಸಿ ಯುದ್ಧಮಾಡಿ ಹಿಂಸಕರಾದ ಅವರನ್ನೆಲ್ಲಾ ಕೊಂದೆಯೋ ಆ ಯುದ್ಧದಲ್ಲಿ ಕುತ್ಸನನ್ನು ಸಂರಕ್ಷಿಸಿದೆ.

## English Translation.

In which (contests), you singly indeed have warred with all those opposing the gods : you, Indra, have slain the malignant.



॥ ಸಂಹಿತಾಪಾಠಃ ॥

ಯತ್ರೋತ ಮರ್ತ್ಯಾಯ ಕಮರಿಣಾ ಇಂದ್ರ ಸೂರ್ಯಂ ॥

ಪ್ರಾವಃ ಶಚೀಭಿರೇತಶಂ ॥ ೬ ॥

॥ ಪದಪಾಠಃ ॥

ಯತ್ರ । ಉತ । ಮರ್ತ್ಯಾಯ । ಕಂ । ಅರಿಣಾಃ । ಇಂದ್ರ । ಸೂರ್ಯಂ ।

ಪ್ರ । ಆವಃ । ಶಚೀಭಿಃ । ಏತಶಂ ॥ ೬ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ ಸಂಗ್ರಾಮ ಉತಾಪಿ ಚ ಹೇ ಇಂದ್ರ ತ್ವಂ ಮರ್ತ್ಯಾಯ ಮನುಷ್ಯಾಯೈತಶಾಖ್ಯಾಯ ಋಷಯೇ ಸೂರ್ಯಮರಿಣಾಃ । ಅಹಿಂಸೀಃ । ಕಮಿತಿ ಪೂರಣಃ । ತದಾನೀಂ ಶಚೀಭಿರ್ಯುದ್ಧಕರ್ಮಭಿರೇತಶಮೇತತ್ಸಂಜ್ಞಕಮೃಷಿಂ ಪ್ರಾವಃ । ಪ್ರಕರ್ಷೇಣಾರಕ್ಷಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಯತ್ರ—ಯಾವ ಯುದ್ಧದಲ್ಲಿ । ಇಂದ್ರ—ಎಲೈ ಇಂದ್ರನೇ । ಮರ್ತ್ಯಾಯ—ಮಾನವನೂ ಏತಶನೆಂಬ ಹೆಸರುಳ್ಳವನೂ ಆದ ಋಷಿಗಾಗಿ । ಸೂರ್ಯಂ—ಸೂರ್ಯನನ್ನು । ಅರಿಣಾಃ—ಹಿಂಸಿಸಿದೆಯೋ (ಆ ಯುದ್ಧದಲ್ಲಿ) । ಶಚೀಭಿಃ—ನಿನ್ನ ಯುದ್ಧಕರ್ಮಗಳಿಂದ । ಏತಶಂ—ಏತಶನೆಂಬ ಋಷಿಯನ್ನು । ಪ್ರಾವಃ—ಪೂರ್ಣವಾಗಿ ರಕ್ಷಿಸಿದೆ

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಾವ ಯುದ್ಧದಲ್ಲಿ ಮಾನವನಾದ ಏತಶನೆಂಬ ಋಷಿಗಾಗಿ ಸೂರ್ಯನನ್ನು ಹಿಂಸಿಸಿದೆಯೋ, ಆ ಯುದ್ಧದಲ್ಲಿ ನಿನ್ನ ಯುದ್ಧಕರ್ಮಗಳಿಂದ ಏತಶನನ್ನು ಪೂರ್ಣವಾಗಿ ರಕ್ಷಿಸಿದೆ.

## English Translation.

In which (contests), Indra, you have, for the sake of a mortal, discomfited the sun, and have protected Etasa by (your) exploits.

॥ ವಿಶೇಷವಿಷಯಗಳು ॥

ಇಂದ್ರನು ಏತಶನೆಂಬ ಋಷಿಯನ್ನು ರಕ್ಷಿಸಿದ ವಿಷಯದಲ್ಲಿ—

ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರಃ ।

(ಋ. ಸಂ. ೧-೬೧-೧೫)

ಎಂಬ ಋಕ್ಕಿನಲ್ಲಿ—ಹಿಂದೆ ಸ್ವಶ್ವನೆಂಬ ರಾಜನು ಪುತ್ರಾಭಿಲಾಷೆಯಿಂದ ಸೂರ್ಯನನ್ನು ಕುರಿತು ತಪಸ್ಸುಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಸೂರ್ಯನೇ ಆ ರಾಜನ ಮಗನಾಗಿ ಹುಟ್ಟಿದನು. ಅವನಿಗೂ ಏತಶನೆಂಬ ಮಹರ್ಷಿಗೂ ಘೋರವಾದ ಯುದ್ಧವಾಯಿತು. ಆ ಯುದ್ಧದಲ್ಲಿ ಏತಶನು ಸೋಲುವಹಾಗಾಗಲು ಅವನು ಇಂದ್ರನಿಗೆ ಸೋಮರಸ

ವನ್ನರ್ಪಿಸಿ ಸ್ತೋತ್ರಮಾಡಿದನು. ಇಂದ್ರನು ಅವನ ಸ್ತುತಿಗೆ ಮೆಚ್ಚಿ ಅವನನ್ನು ಸೂರ್ಯ (ಸೂರ್ಯಪುತ್ರ) ನಿಂದ ರಕ್ಷಣೆಮಾಡಿದನು ಎಂದು ಹೇಳಿದೆ. ಏತಶ ಶಬ್ದಕ್ಕೆ ಸೂರ್ಯಾಶ್ವವೆಂದೂ ಹೆಸರು. ಈ ವಿಷಯವಾದ ವಿವರಣೆಯನ್ನು ಋ. ಸಂ. ಭಾಗ ೯, ಪೇಜು 593 ರಲ್ಲಿ ನೋಡಿ.



॥ ಸಂಹಿತಾಪಾಠಃ ॥

ಕಿಮಾದುತಾಸಿ ವೃತ್ರಹನ್ಮಘವನ್ಮನ್ಯುಮತ್ತಮಃ ।

ಅತ್ರಾಹ ದಾನುಮಾತಿರಃ ॥ ೭ ॥

॥ ಪದಪಾಠಃ ॥

ಕಿಂ । ಆತ್ । ಉತ । ಅಸಿ । ವೃತ್ರऽಹನ್ । ಮಘऽವನ್ । ಮನ್ಯುಮತ್ऽತಮಃ ।

ಅತ್ರ । ಅಹ । ದಾನುಂ । ಆ । ಅತಿರಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ ವೃತ್ರಾಣಾಮಾವರಕಾಣಾಂ ತಮಸಾಂ ಹಂತರ್ಮಘವನ್ಧನವನ್ನಿಂದ್ರ ತ್ವಮಾದನಂತರಮೇವ ಉತಾಪಿ ಚ । ಕಿಮಿತಿಃ ಪ್ರಶ್ನೇ । ಮನ್ಯುಮತ್ತಮೋಽಸಿ । ಅತ್ಯಂತಂ ಕ್ರೋಧವಾನ್ ಭವಸಿ । ಅತ್ರಾಸ್ಮಿನ್ನಂತರಿಕ್ಷೇಽಹೈವ ದಾನುಂ ದನೋಃ ಪುತ್ರಂ ವೃತ್ರಮಾತಿರಃ । ಆ ಸಮಂತಾದಹಿಂಸೀಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ವೃತ್ರಹನ್—ವೃತ್ರಹಂತಕನೂ । ಮಘವನ್—ಧನವಂತನೂ ಆದ ಎಲೈ ಇಂದ್ರನೇ । ಆತ್—ಆ ಒಡನೆಯೇ । ಕಿಂ—ಯಾವ ಉದ್ದಿಶ್ಯದಿಂದ । ಮನ್ಯುಮತ್ತಮಃ—ಅತ್ಯಂತ ಕ್ರೋಧಯುಕ್ತನಾಗಿ । ಅಸಿ—ಆಗುತ್ತೀಯೋ । ಅತ್ರ ಅಹ—ಆ ಅಂತರಿಕ್ಷದಲ್ಲಿಯೇ । ದಾನುಂ—ದನುಪುತ್ರನಾದ ವೃತ್ರನನ್ನು । ಆ ತಿರಃ—ಪೂರ್ಣವಾಗಿ ಹಿಂಸಿಸಿದೆ.

॥ ಭಾವಾರ್ಥ ॥

ವೃತ್ರಹಂತಕನೂ, ಧನವಂತನೂ ಆದ ಎಲೈ ಇಂದ್ರನೇ, ನೀನು ಯಾವ ಉದ್ದಿಶ್ಯದಿಂದ ಎಲ್ಲಿ ಅತ್ಯಂತ ಕ್ರೋಧಯುಕ್ತನಾಗಿ ಆಗುತ್ತೀಯೋ ಅದೇ ಅಂತರಿಕ್ಷದಲ್ಲಿಯೇ ದನುಪುತ್ರನಾದ ವೃತ್ರನನ್ನು ಪೂರ್ಣವಾಗಿ ಹಿಂಸಿಸಿದೆ.

## English Translation.

Wherefore, slayer of Vritra, opulent Indra, have you thereupon become most incensed, and, in conseqence, have slain the son of Danu (Vritra) in this firmament.

|| ವಿಶೇಷವಿಷಯಗಳು ||

ದಾನುಂ—ದನು ಎಂಬುವಳು ಒಬ್ಬ ಅಸುರಸ್ತ್ರೀ. ಅವಳ ಪುತ್ರನಿಗೆ ದಾನುವೆಂದು ಹೆಸರು. ಇಲ್ಲಿ ವೃತ್ರನೆಂದು ಅರ್ಥವಿವರಣೆ ಮಾಡಿದಾರೆ.



|| ಸಂಹಿತಾಪಾಠಃ ||

ಏತದ್ಘೇದುತ ವೀರ್ಯ೧ಮಿಂದ್ರ ಚಕರ್ಥ ಪೌಂಸ್ಯಂ ।
ಸ್ತ್ರಿಯಂ ಯದ್ದುರ್ಹಣಾಯುವಂ ವಧೀರ್ದುಹಿತರಂ ದಿವಃ ॥ ೮ ॥

|| ಪದಪಾಠಃ ||

ಏತತ್ । ಘ । ಇತ್ । ಉತ । ವೀರ್ಯಂ । ಇಂದ್ರ । ಚಕರ್ಥ । ಪೌಂಸ್ಯಂ ।
ಸ್ತ್ರಿಯಂ । ಯತ್ । ದುಃಽಹನಾಯುವಂ । ವಧೀಃ । ದುಹಿತರಂ । ದಿವಃ ॥ ೮ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಉತಾಪಿ ಚ ಯದ್ಯಸ್ತ್ವಮೇತದುಪಲಕ್ಷಿತಂ ಪೌಂಸ್ಯಂ ಬಲಂ ವೀರ್ಯಂ ಸಾಮರ್ಥ್ಯೋಪೇತಂ ಚಕರ್ಥ । ಕೃತವಾನಸಿ । ಘೇದಿತಿ ಪೂರಣೌ । ಕಿಂಚ ದುರ್ಹಣಾಯುವಂ ದುಷ್ಟಂ ಹನನಮಿಚ್ಛಂತೀಂ ದಿವೋ ದುಹಿತರಂ ದ್ಯುಲೋಕಸಕಾಶಾದುತ್ಪನ್ನಾಂ ಸ್ತ್ರಿಯಮುಷಸಂ ವಧೀಃ । ಅವಧೀಃ ॥

|| ಪ್ರತಿಪದಾರ್ಥ ||

ಉತ—ಮತ್ತು । ಇಂದ್ರ—ಎಲೈ ಇಂದ್ರನೇ । ಯತ್—ಯಾವ ನೀನು । ಏತತ್—ಈ ರೀತಿ ನಿರ್ದಿಷ್ಟವಾದುದೂ । ಪೌಂಸ್ಯಂ—ಪುರುಷಲಕ್ಷಣವಾದುದೂ ಆದ । ವೀರ್ಯಂ—ಸಾಮರ್ಥ್ಯವನ್ನು । ಚಕರ್ಥ—ಪ್ರಕಟಿಸಿದೆಯೋ (ಆಗ) । ದುರ್ಹಣಾಯುವಂ—ದುಷ್ಟವಾದ ರೀತಿಯಲ್ಲಿ ಹಿಂಸಿಸಲು ಉದ್ಯುಕ್ತಳಾದವಳೂ । ದಿವಃ—ಅಂತರಿಕ್ಷದ । ದುಹಿತರಂ—ಪುತ್ರಿಯೂ ಆದ । ಸ್ತ್ರಿಯಂ—ಸ್ತ್ರೀಯನ್ನು । ವಧೀಃ—ಕೊಂದಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಮೇಲೆ ವರ್ಣಿತವಾದಂತೆ ನಿರ್ದಿಷ್ಟವಾದುದೂ, ಪುರುಷಲಕ್ಷಣವುಳ್ಳದ್ದೂ ಆದ ಸಾಮರ್ಥ್ಯವನ್ನು ಯಾವಾಗ ಪ್ರಕಟಿಸಿದೆಯೋ, ಆಗ ದುಷ್ಟವಾದ ರೀತಿಯಲ್ಲಿ ಹಿಂಸಿಸಲು ಉದ್ಯುಕ್ತಳಾದವಳೂ, ಅಂತರಿಕ್ಷದ ಪುತ್ರಿಯೂ ಆದ ಸ್ತ್ರೀಯನ್ನು ಕೊಂದಿರುವೆ.

English Translation.

Inasmvch, Indra, as you have displayed such manly prowess, you have slain the woman, the daughter of the sky, when meditating mischief.

॥ ವಿಶೇಷವಿಷಯಗಳು ॥

ದಿವಃ ದುಹಿತರಂ ಸ್ತ್ರಿಯಂ—ಇಲ್ಲಿ ಸ್ತ್ರೀ ಎಂದರೆ ವೃತ್ರಾಸುರನ ಮಾತೆಯಾದ ದನು ಎಂಬ ಅಸುರ ಸ್ತ್ರೀಯು. ಅಥವಾ ದಿವೋ ದುಹಿತರಂ ಎಂಬ ಶಬ್ದಕ್ಕೆ ಅಂತರಿಕ್ಷದ (ಸ್ವರ್ಗದ) ಪುತ್ರಿಯಾದ ಉಷಸ್ಸೆಂದೂ ಅರ್ಥವು. ಈ ವಿಷಯವು ಮುಂದಿನ ಋಕ್ಕುಗಳಲ್ಲಿ ಹೇಳಿರುವ ವಿಷಯಗಳಿಂದ ಸಮರ್ಥಿತವಾಗಿರುವುದು.

॥ ಸಂಹಿತಾಪಾಠಃ ॥

ದಿವಶ್ಚಿದ್ಘಾ ದುಹಿತರಂ ಮಹಾನ್ಮಹೀಯಮಾನಾಂ ।
ಉಷಾಸಮಿಂದ್ರ ಸಂ ಪಿಣಕ್ ॥ ೯ ॥

॥ ಪದಪಾಠಃ ॥

ದಿವಃ । ಚಿತ್ । ಘ । ದುಹಿತರಂ । ಮಹಾನ್ । ಮಹೀಯಮಾನಾಂ ।
ಉಷಸಂ । ಇಂದ್ರ । ಸಂ । ಪಿಣಕ್ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಹಾಂಸ್ತ್ವಂ ದಿವೋ ದುಹಿತರಂ ದ್ಯುಲೋಕಸ್ಯ ಪುತ್ರೀಂ ಮಹೀಯಮಾನಾಂ ಪೂಜ್ಯಮಾನಾಮುಷಸಮುಷೋದೇವೀಂ ಸಂ ಪಿಣಕ್ ಚಿದ್ಘ । ಸಂಪಿಷ್ಟವಾನಸಿ ಖಲು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮಹಾನ್—ಮಹತ್ಸ್ವರೂಪವುಳ್ಳ ನೀನು । ದಿವಃ—ದ್ಯುಲೋಕದ । ದುಹಿತರಂ—ಪುತ್ರಿಯೂ । ಮಹೀಯಮಾನಾಂ—ಪೂಜ್ಯತೆಯನ್ನು ಹೊಂದಿದವಳೂ ಆದ । ಉಷಸಂ—ಉಷೋದೇವಿಯನ್ನು । ಸಂ ಪಿಣಕ್ ಚಿತ್—ಪೂರ್ಣವಾಗಿ ಹಿಂಡಿ ಹಿಂಸಿಸಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹತ್ಸ್ವರೂಪವುಳ್ಳ ನೀನು ದ್ಯುಲೋಕದ ಪುತ್ರಿಯೂ ಪೂಜ್ಯತೆಯನ್ನು ಹೊಂದಿದವಳೂ ಆದ ಉಷೋದೇವಿಯನ್ನು ಪೂರ್ಣವಾಗಿ ಹಿಂಸಿಸಿರುವೆ.

English Translation.

You, Indra, who are mighty, have enriched the glorious dawn, the daughter of heaven.

---

॥ ಸಂಹಿತಾಪಾಠಃ ॥

ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ ।

ನಿ ಯತ್ಸೀಂ ಶಿಶ್ನಥದ್ವೃಷಾ ॥ ೧೦ ॥

॥ ಪದಪಾಠಃ ॥

ಅಪ । ಉಷಾಃ । ಅನಸಃ । ಸರತ್ । ಸಂಽಪಿಷ್ಟಾತ್ । ಅಹ । ಬಿಭ್ಯುಷೀ ।

ನಿ । ಯತ್ । ಸೀಂ । ಶಿಶ್ನಥತ್ । ವೃಷಾ ॥ ೧೦ ॥

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ವರ್ಷಿತೇಂದ್ರೋ ಯದ್ಯದಾ ಸೀಮೇತದುಷಃಸಂಬಂಧಿ ಶಕಟಂ ನಿ ಶಿಶ್ನಥತ್ । ನ್ಯವಧೀತ್ । ತದೋಷಾ ಉಷೋದೇವತಾ ಬಿಭ್ಯುಷೀಂದ್ರಸಕಾಶಾದ್ಭೀತಾ ಸತೀ ಸಂಪಿಷ್ಟಾದಿಂದ್ರೇಣ ಸಂಚೂರ್ಣಿತಾದನಸಃ ಶಕಟಾದಪ ಸರತ್ । ಅಪಾಸರತ್ । ಅಪಜಗಾಮ । ಅಹೇತಿ ಪೂರಣಃ ॥

॥ ಪ್ರತಿಪದಾರ್ಥ ॥

ವೃಷಾ—ಕಾಮವರ್ಷಕನಾದ ಇಂದ್ರನು । ಯತ್—ಯಾವಾಗ । ಸೀಂ—ಉಷಸ್ಸಿನ ಈ ರಥವನ್ನು । ನಿ ಶಿಶ್ನಥತ್—ಪೂರ್ಣವಾಗಿ ನಾಶಮಾಡಿದನೋ (ಆಗ) । ಉಷಾಃ—ಉಷೋದೇವಿಯು । ಬಿಭ್ಯುಷೀ—ಬಹಳವಾಗಿ ಹೆದರಿದವಳಾಗಿ । ಸಂಪಿಷ್ಟಾತ್—ಇಂದ್ರನಿಂದ ಪುಡಿಮಾಡಲ್ಪಟ್ಟ । ಅನಸಃ—ಬಂಡಿಯಿಂದ । ಅಪ ಸರತ್—ಇಳಿದುಹೋದಳು.

॥ ಭಾವಾರ್ಥ ॥

ಕಾಮವರ್ಷಕನಾದ ಇಂದ್ರನು, ಉಷಸ್ಸಿನ ರಥವನ್ನು ಪೂರ್ಣವಾಗಿ ನಾಶಮಾಡಿದೊಡನೆಯೇ, ಉಷೋದೇವಿಯು ಬಹಳವಾಗಿ ಹೆದರಿ, ಇಂದ್ರನಿಂದ ಪುಡಿಮಾಡಲ್ಪಟ್ಟ ಬಂಡಿಯಿಂದ ಇಳಿದುಹೋದಳು.

English Translation.

The terrified Ushas descended from the broken waggon when the (showerer of benefits) had smashed it.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ, ಮುಂದಿನ ಮತ್ತು ಹಿಂದಿನ ಋಕ್ಕಿನಲ್ಲಿಯೂ ಇಂದ್ರನು ಉಷೋದೇವಿಯ ರಥವನ್ನು ಪುಡಿಪುಡಿಮಾಡಿದನೆಂಬ ವರ್ಣನೆ ಇದೆ. ಈ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ.



॥ ಸಂಹಿತಾಪಾಠಃ ॥

ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ ।
ಸಸಾರ ಸೀಂ ಪರಾವತಃ ॥ ೧೧ ॥

॥ ಪದಪಾಠಃ ॥

ಏತತ್ । ಅಸ್ಯಾಃ । ಅನಃ । ಶಯೇ । ಸುऽಸಂಪಿಷ್ಟಂ । ವಿऽಪಾಶಿ । ಆ ।
ಸಸಾರ । ಸೀಂ । ಪರಾऽವತಃ ॥ ೧೧ ॥

॥ ಸಾಯಣಭಾಷ್ಯಂ ॥

ಸುಸಂಪಿಷ್ಟಮಿಂದ್ರೇಣ ಸುಷ್ಠು ಸಂಚೂರ್ಣಿತಮಸ್ಯಾ ಉಷಸಃ ಸಂಬಂಧ್ಯೇತದನಃ ಶಕಟಂ ವಿಪಾಶಿ । ವಿಪಾಡಾಖ್ಯಾ ನದೀ । ತಸ್ಯಾಂ ತತ್ತೀರ ಆ ಶಯೇ । ಆ ಸಮಂತಾಚ್ಛೇತೇ । ಅಶೇತ । ಸೀಮಿಯಮುಷೋದೇವತಾ ಶಕಟೇ ಭಗ್ನೇ ಸತಿ ಪರಾವತೋ ದೂರದೇಶಾತ್ಸಸಾರ । ಅಪಸಸಾರ ॥

॥ ಪ್ರತಿಪದಾರ್ಥ ॥

ಸು ಸಂಪಿಷ್ಟಂ— ಪೂರ್ಣವಾಗಿ ನಾಶಮಾಡಲ್ಪಟ್ಟುದೂ । ಅಸ್ಯಾಃ— ಉಷಸ್ಸಿಗೆ ಸೇರಿದುದೂ ಆದ । ಏತತ್ ಅನಃ— ಈ ಬಂಡಿಯು (ರಥವು) । ವಿಪಾಶಿ— ವಿಪಾಟ್ ಎಂಬ ನದಿಯ ದಡದ ಮೇಲೆ । ಆ ಶಯೇ—

ಉರುಳಿ ಬಿದ್ದಿತೋ । ಸೀಂ— ಆ ಒಡನೆಯೇ (ಉಷೋದೇವತೆಯು) । ಪರಾವತಃ—ಬಹಳ ದೂರಪ್ರದೇಶದಿಂದ (ಬಹಳ ದೂರಪ್ರದೇಶಕ್ಕೆ) । ಸಸಾರ—ಹೊರಟುಹೋದಳು.

॥ ಭಾವಾರ್ಥ ॥

ಉಷಸ್ಸಿನ ರಥವು ಇಂದ್ರನಿಂದ ಪೂರ್ಣವಾಗಿ ನಾಶಮಾಡಲ್ಪಟ್ಟು ವಿಪಾಟ್ ಎಂಬ ನದಿಯ ದಡದ ಮೇಲೆ ಉರುಳಿ ಬಿದ್ದೊಡನೆಯೇ, ಉಷೋದೇವಿಯು ಬಹಳ ದೂರದೇಶಕ್ಕೆ ಹೊರಟುಹೋದಳು.

English Translation.

Then her shattered waggon reposed (on the bank) of the Vipash (river), and she departed from afar.

॥ ಸಂಹಿತಾಪಾಠಃ ॥

ಉತ ಸಿಂಧುಂ ವಿಬಾಲ್ಯಂ ವಿತಸ್ಥಾನಾಮಧಿ ಕ್ಷಮಿ ।
ಪರಿ ಷ್ಠಾ ಇಂದ್ರ ಮಾಯಯಾ ॥ ೧೨ ॥

॥ ಪದಪಾಠಃ ॥

ಉತ । ಸಿಂಧುಂ । ವಿऽಬಾಲ್ಯಂ । ವಿऽತಸ್ಥಾನಾಂ । ಅಧಿ । ಕ್ಷಮಿ ।
ಪರಿ । ಸ್ಥಾಃ । ಇಂದ್ರ । ಮಾಯಯಾ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಉತಾಪಿ ಚ ವಿಬಾಲ್ಯಂ ವಿಗತಬಾಲ್ಯಾವಸ್ಥಾಂ ಸಂಪೂರ್ಣಜಲಾಂ ವಿತಸ್ಥಾನಾಂ ವಿತಿಷ್ಠಮಾನಾಂ ಸಿಂಧುಂ ನದೀಮಧಿ ಕ್ಷಮಿ ಕ್ಷಮಾಯಾಂ ಮಾಯಯಾ ಪ್ರಜ್ಞಯಾ ಪರಿ ಷ್ಠಾಃ । ಪರ್ಯಸ್ಥಾಃ । ಸರ್ವತಃ ಸ್ಥಾಪನಂ ಕೃತವಾನಸಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಇಂದ್ರ—ಇಂದ್ರನೇ । ವಿಬಾಲ್ಯಂ—ಬಾಲ್ಯಾವಸ್ಥೆಯನ್ನು ದಾಟಿದುದೂ (ಪೂರ್ಣ ಪ್ರವಾಹವುಳ್ಳದ್ದೂ) । ವಿತಸ್ಥಾನಾಂ—(ಅಸುರರಿಂದ) ತಡೆದು ನಿಲ್ಲಿಸಲ್ಪಟ್ಟದ್ದೂ ಆದ । ಸಿಂಧುಂ—ಸಿಂಧೂನದಿಯನ್ನು । ಅಧಿ ಕ್ಷಮಿ—ಭೂಮಿಯ ಮೇಲೆ । ಮಾಯಯಾ—ನಿನ್ನ ಪ್ರಜ್ಞಾಬಲದಿಂದ । ಪರಿ ಷ್ಠಾಃ—ಸುತ್ತಲೂ ಹರಡಿ ಪ್ರವಹಿಸುವಂತೆ ಮಾಡಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿನ್ನ ಪ್ರಜ್ಞಾಬಲದಿಂದ ಪೂರ್ಣಪ್ರವಾಹವುಳ್ಳದ್ದೂ, ಅಸುರರಿಂದ ತಡೆದು ನಿಲ್ಲಿಸಲ್ಪಟ್ಟದ್ದೂ ಆದ ಸಿಂಧೂನದಿಯನ್ನು ಭೂಮಿಯ ಮೇಲೆ ಸುತ್ತಲೂ ಹರಡಿ ಪ್ರವಹಿಸುವಂತೆ ಮಾಡಿರುವೆ.

English Translation.

You have spread abroad upon the earth, by your contrivance, the swollen Sindhu when arrested (on its course).



॥ ಸಂಹಿತಾಪಾಠಃ ॥

ಉತ ಶುಷ್ಣಸ್ಯ ಧೃಷ್ಣುಯಾ ಪ್ರ ಮೃಕ್ಷೋ ಅಭಿ ವೇದನಂ ।

ಪುರೋ ಯದಸ್ಯ ಸಂಪಿಣಕ್ ॥ ೧೩ ॥

॥ ಪದಪಾಠಃ ॥

ಉತ । ಶುಷ್ಣಸ್ಯ । ಧೃಷ್ಣುಽಯಾ । ಪ್ರ । ಮೃಕ್ಷಃ । ಅಭಿ । ವೇದನಂ ।

ಪುರಃ । ಯತ್ । ಅಸ್ಯ । ಸಂಽಪಿಣಕ್ ॥ ೧೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಧೃಷ್ಣುಯಾ ಧೃಷ್ಣುಃ ಧರ್ಷಕಸ್ತ್ವಂ ಶುಷ್ಣಸ್ಯ ಶುಷ್ಣನಾಮ್ನೋಽಸುರಸ್ಯ ಸಂಬಂಧಿ ವೇದನಂ ವಿತ್ತಮಭಿ ಅಭಿತಃ ಸರ್ವತಃ ಪ್ರ ಮೃಕ್ಷಃ । ಪ್ರಕರ್ಷೇಣಾಬಾಧಥಾಃ । ಯದ್ಯದಾಸ್ಯ ಶುಷ್ಣಸ್ಯ ಪುರಃ ಪುರಾಣಿ ನಗರಾಣಿ ಸಂಪಿಣಕ್ । ಸಂಪಿಷ್ಟವಾನಸಿ । ತದಾ ಪ್ರ ಮೃಕ್ಷ ಇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಉತ—ಮತ್ತು (ಎಲೈ ಇಂದ್ರನೇ) । ಧೃಷ್ಣುಯಾ—ಶತ್ರುಧರ್ಷಕನಾದ ನೀನು । ಯತ್—ಯಾವಾಗ । ಅಸ್ಯ—ಈ ಶುಷ್ಣನ । ಪುರಃ—ಪಟ್ಟಣಗಳನ್ನು । ಸಂ ಪಿಣಕ್—ಪೂರ್ಣವಾಗಿ ನಾಶಮಾಡಿದೆಯೋ (ಆಗ) । ಶುಷ್ಣಸ್ಯ—ಶುಷ್ಣನೆಂಬ ಆಸುರನ । ವೇದನಂ—ಧನವನ್ನು । ಅಭಿ—ಪೂರ್ಣವಾಗಿ । ಪ್ರ ಮೃಕ್ಷಃ—(ಅಪಹರಿಸಿದ್ದೀಯೇ) ನಾಶಪಡಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಧರ್ಷಕನಾದ ನೀನು ಶುಷ್ಣನೆಂಬ ಅಸುರನ ಪಟ್ಟಣಗಳನ್ನು ಯಾವಾಗ ಪೂರ್ಣವಾಗಿ ನಾಶಮಾಡಿದೆಯೋ ಆಗ ಆ ಅಸುರನ ಧನವನ್ನೂ ಸಹ ಪೂರ್ಣವಾಗಿ ನಾಶಮಾಡಿದೆ. (ನೀನೂ ಅಪಹರಿಸಿದೆ).

## English Translation.

By valour you have carried off the wealth of Shushna, when you had demolished his cities.

॥ ವಿಶೇಷವಿಷಯಗಳು ॥

ಶುಷ್ಣ—ಇವನ ಹೆಸರು ಸುಮಾರು ೪೦ ಸಲ ಬರುತ್ತದೆ. ಕುತ್ಸನ ಮುಖ್ಯ ಶತ್ರು. ಈ ಕುತ್ಸನಿಗೋಸ್ಕರ ಅಥವಾ ಕುತ್ಸನ ಜೊತೆಯಲ್ಲಿ, ಇಂದ್ರನು ಶುಷ್ಣನನ್ನು ನಿರ್ಮೂಲಮಾಡುತ್ತಾನೆ: (೪-೧೬-೧೨, ೫-೨೯-೯, ಇತ್ಯಾದಿ). ಅವನಿಗೆ ಕೊಂಬುಗಳಿಗೆ (೧-೩೩-೧೨). ಮೊಟ್ಟೆಗಳಿವೆ. (೬-೪೦-೧೦, ೧೧). ಎಂದರೆ ಮೊಟ್ಟೆಗಳಿಂದಾದ ಮರಿಗಳು (೧೦-೧೨-೧೧ ನ್ನು ಹೋಲಿಸಿ), ಇದರಿಂದ ಶುಷ್ಣನೂ ಒಂದು ಸರ್ಪವೆನ್ನಬಹುದು. ಬುಸುಗುಟ್ಟುತ್ತಾನೆ (ಶ್ವಸನಃ ೧-೫೪-೫)· ಆರುಸಲ ಇವನಿಗೆ ಅಶುಷ (ನುಂಗುವ) ಎಂಬ (ಅಗ್ನಿಯ) ವಿಶೇಷಣವು ಉಪಯೋಗಿಸಲ್ಪಟ್ಟಿದೆ. ಅವನಿಗೆ ಬಲವಾದ ಕೋಟೆಗಳು (೧-೫೧-೧೧) ಅಥವಾ ಕೋಟೆ (೪-೩೦-೧೩) ಇದೆ, ಇವು ಚಲಿಸುವ ಕೋಟೆಗಳು (೮-೧-೨೮). ಇಂದ್ರನು ಶುಷ್ಣನ ಕೋಟೆಗಳನ್ನು ನಾಶಮಾಡಿ ನೀರುಗಳನ್ನು ಬಿಡುಗಡೆ ಮಾಡುತ್ತಾನೆ (೧-೫೧-೧೧). ಶುಷ್ಣನನ್ನು ಬಡಿದು ಜಲಧಿಯನ್ನು ಸಂಪಾದಿಸುತ್ತಾನೆ (ವಾಲ.೩-೮) ಅಥವಾ ಶುಷ್ಣನ ವಂಶವನ್ನು ನಿರ್ಮೂಲಮಾಡಿ, ಸ್ವರ್ಗೀಯೋದಕವನ್ನು (ಸ್ವರ್ವತೀಃ) ಗಳಿಸುತ್ತಾನೆ (೮-೪೦-೧೦). ನಾಲ್ಕುಸಲ ಶುಷ್ಣಗೆ 'ಕುಯವ' (ಕೆಟ್ಟ ಧಾನ್ಯವನ್ನುಂಟುಮಾಡುವವನು) ಎಂಬ ವಿಶೇಷಣವಿದೆ. ಕುಯವ ಎಂಬುದೇ ಎರಡು ಸಲ ಪ್ರಾಯಶಃ ಶುಷ್ಣನಿಗೆ ಬದಲಾಗಿ ಉಪಯೋಗಿಸಿರುವಂತೆ ಇದೆ (೧-೧೦೩-೮, ೧-೧೦೪-೩). ಇಂದ್ರ ಶುಷ್ಣರ ಯುದ್ಧದ ಪರಿಮಾಣವು ಜಲವಿಮೋಚನೆ ಮಾತ್ರವಲ್ಲ. ಗೋವುಗಳ ಅಥವಾ ಸೂರ್ಯನ ಪ್ರಾಪ್ತಿಯೂ ಆಗಬಹುದು (೮-೮೫-೧೭). ಇಂದ್ರನೊಡನೆ ಯುದ್ಧಮಾಡುವಾಗ, ಶುಷ್ಣನು ಅಂಧಕಾರದಲ್ಲಿ ಓಡಾಡುತ್ತಾನೆ. ಹಿಮದ ಮಗ ಮತ್ತು ದಾನವವೆನ್ನಿಸಿ ಕೊಳ್ಳುತ್ತಾನೆ (೫-೩೨-೪). ಶುಷ್ಣನು ಅಮೃತವನ್ನು ತನ್ನಲ್ಲಿ ಇಟ್ಟುಕೊಂಡಿರುವ ದಾನವನು (ಕಾಠಕ).

ಮೇಲೆ ಹೇಳಿದ ವಾಕ್ಯಗಳಿಂದ ಶುಷ್ಣನು ಅನಾವೃಷ್ಟಿಕಾರಕನೆನ್ನಬಹುದು. ಶುಷ್ಣಪದದ ಮೂಲವಾದ ಶುಷ್ ಧಾತುವಿಗೆ ಬುಸುಗುಟ್ಟು ಅಥವಾ ಒಣಗಿಸು ಎಂದರ್ಥ. ಇದು ಅನಾವೃಷ್ಟಿಕಾರಕನೆಂಬುದನ್ನು ಸಮರ್ಥಿಸುತ್ತದೆ.

॥ ಸಂಹಿತಾಪಾಠಃ ॥

ಉತ ದಾಸಂ ಕೌಲಿತರಂ ಬೃಹತಃ ಪರ್ವತಾದಧಿ ।

ಅವಾಹನ್ನಿಂದ್ರ ಶಂಬರಂ ॥ ೧೪ ॥

॥ ಪದಪಾಠಃ ॥

ಉತ । ದಾಸಂ । ಕೌಲಿ॒ತರಂ । ಬೃ॒ಹತಃ । ಪರ್ವ॑ತಾತ್ । ಅಧಿ॑ ।

ಅವ॑ । ಅ॒ಹನ್ । ಇ॒ಂದ್ರ॒ । ಶಂಬ॑ರಂ ॥ ೧೪ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ತ್ವಂ ದಾಸಮುಪಕ್ಷಪಯಿತಾರಂ ಕೌಲಿತರಂ ಕುಲಿತರನಾಮ್ನೋಽಪತ್ಯಂ ಶಂಬರಮಸುರಂ ಬೃಹತೋ ಮಹತಃ ಪರ್ವತಾದದ್ರೇರಧ್ಯುಪರಿ ಅವ ಅವಾಚೀನಂ ಕೃತ್ವಾಹನ್ । ಹತವಾನಸಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಇಂದ್ರ—ಇಂದ್ರನೇ । ದಾಸಂ—ಹಿಂಸಕನೂ । ಕೌಲಿತರಂ—ಕುಲಿತರನ ಪುತ್ರನೂ ಆದ । ಶಂಬರಂ—ಶಂಬರಾಸುರನನ್ನು । ಬೃಹತಃ—ಮಹತ್ತಾದ (ಅತ್ಯುನ್ನತವಾದ) । ಪರ್ವತಾತ್ ಅಧಿ—ಪರ್ವತದ ಮೇಲ್ಭಾಗದಿಂದ । ಅವ—ತಲೆಕೆಳಗಾಗಿ ಮಾಡಿ ತಳ್ಳಿ । ಅಹನ್—ಕೊಂದಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂಸಕನೂ, ಕುಲಿತರನ ಪುತ್ರನೂ ಆದ ಶಂಬರಾಸುರನನ್ನು ನೀನು ಅತ್ಯುನ್ನತವಾದ ಪರ್ವತದ ಮೇಲ್ಭಾಗದಿಂದ ತಲೆಕೆಳಗಾಗಿ ಮಾಡಿ ಕೆಳಕ್ಕೆ ತಳ್ಳಿ ಕೊಂದಿರುವೆ.

## English Translation.

You have slain the slave Shambara, the son of Kulitara, hurling him from off the huge mountain.

॥ ವಿಶೇಷವಿಷಯಗಳು ॥

ಶಂಬರಃ—ಈ ಹೆಸರು ಸುಮಾರು ಇಪ್ಪತ್ತುಸಲ ಬರುತ್ತದೆ. ಇತರ ಪಿಶಾಚಿಗಳೊಡನೆಯೇ ಶಂಬರನು ಪ್ರಸಕ್ತನಾಗಿರುವುದು. ಆದರಲ್ಲಿಯೂ ಹೆಚ್ಚಾಗಿ ಶುಷ್ಣ, ಪಿಪ್ರು (೧-೧೦೧-೨, ೧-೧೦೩-೮), ೨-೧೯-೬, ೬-೧೮-೮) ಮತ್ತು ವರ್ಚಿಗಳೊಡನೆ; ಅಹಿ ಮತ್ತು ಶಂಬರನ ಮೇಲೆ ಯುದ್ಧಮಾಡುವಾಗ ಮರುತರು ಇಂದ್ರನಿಗೆ ಸಹಾಯಮಾಡಿದರು (೩-೪೭-೪), ಶಂಬರನನ್ನು ಭೇದಿಸಿದಾಗ, ಇಂದ್ರನು ಆಕಾಶವನ್ನೇ ನಡುಗಿಸಿದನು (೧-೫೪-೪). ಪರ್ವತದ ಮೇಲೆ ವಾಸಿಸುತ್ತಿದ್ದ ಶಂಬರನನ್ನು ಹುಡುಕಿ (೨-೧೨-೧೧), ಪರ್ವತದಿಂದ ಕೆಳಕ್ಕುರುಳಿಸಿದನು (೧-೧೩೦-೭, ೬-೨೬-೫). ಕುಲಿತರನ ಪುತ್ರನಾದ ಶಂಬರನೆಂಬ ದಾಸನನ್ನು ಇಂದ್ರನು ದೊಡ್ಡ ಪರ್ವತದಿಂದ ಉರುಳಿಸಿದನು. (೪-೩೦-೧೪). ತಾನೊಬ್ಬ ಸಣ್ಣದೇವತೆಯೆಂದು ತಿಳಿದುಕೊಂಡಿದ್ದು, ಶಂಬರನನ್ನು ಹೊಡೆದು; ಉನ್ನತಪ್ರದೇಶದಿಂದ

ಬೀಳಿಸಿದನು (೭-೧೮-೨೦). ತೊಂಭತ್ತು (೧-೧೩೦-೭), ಸಾಧಾರಣವಾಗಿ ತೊಂಭತೊಂಭತ್ತು (೨-೧೯-೬, ಇತ್ಯಾದಿ) ಅಥವಾ ನೂರು (೨-೧೪-೬, ಇತ್ಯಾದಿ) ದುರ್ಗಗಳು ಅವನ ಅಧೀನದಲ್ಲಿವೆ. ಒಂದುಸಲ, ನಪುಂಸಕಾಂತವಾದ ಈ ಪದಕ್ಕೆ ಶಂಬರನ ಕೋಟೆಗಳು ಎಂದರ್ಥವಿದೆ. ಇವುಗಳನ್ನು ಬೃಹಸ್ಪತಿಯು ಭೇದಿಸಿ, ನಿಧಿಗಳಿಂದ ಯುಕ್ತವಾಗಿದ್ದ ಪರ್ವತ ಪ್ರದೇಶವನ್ನು ಪ್ರವೇಶಿಸದನು (೨-೨೪-೨). ಅತಿಥಿಗ್ವ (೧-೫೧-೬), ಸಾಧಾರಣವಾಗಿ ದಿವೋದಾಸ (೨-೧೯-೬, ಇತ್ಯಾದಿ), ಒಂದೊಂದುಸಲ ಇಬ್ಬರೂ (೧-೧೩೦-೭, ೪-೨೬-೩), ಇವರುಗಳಿಗೋಸ್ಕರ, ಇಂದ್ರನು ಶಂಬರನನ್ನು ಧ್ವಂಸಮಾಡುತ್ತಾನೆ. ಶಂಬರ ಮತ್ತು ದಿವೋದಾಸ ಎಂಬ ಎರಡೂ ಒಬ್ಬನ ಹೆಸರಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

॥ ಸಂಹಿತಾಪಾಠಃ ॥

ಉತ ದಾಸಸ್ಯ ವರ್ಚಿನಃ ಸಹಸ್ರಾಣಿ ಶತಾವಧೀಃ ।

ಅಧಿ ಪಂಚ ಪ್ರಧೀಁರಿವ ॥ ೧೫ ॥

॥ ಪದಪಾಠಃ ॥

ಉತ । ದಾಸಸ್ಯ । ವರ್ಚಿನಃ । ಸಹಸ್ರಾಣಿ । ಶತಾ । ಅವಧೀಃ ।

ಅಧಿ । ಪಂಚ । ಪ್ರಧೀನ್ಽಇವ ॥ ೧೫ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ತ್ವಂ ಪ್ರಧೀನಿವ ಚಕ್ರಸ್ಯ ಪರಿತಃ ಸ್ಥಿತಾನ್ ಶಂಕೂನಿವ ಹಿಂಸಕಾನ್ಪಂಚ ಶತಾ ಪಂಚಶತಾನಿ ಪಂಚಶತಸಂಖ್ಯಾಕಾನ್ ಸಹಸ್ರಾಣಿ ಸಹಸ್ರಸಂಖ್ಯಾಕಾನ್ದಾಸಸ್ಯ ಲೋಕಾನಾಮುಪಕ್ಷಪಯಿತುರ್ವರ್ಚಿನೋ ವರ್ಚಿನಾಮಕಸ್ಯಾಸುರಸ್ಯ ಸಂಬಂಧಿನೋಽನುಚರಾನ್ಪುರುಷಾನಧ್ಯಧಿಕಮವಧೀಃ । ಹತವಾನಸಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । (ಇಂದ್ರ—ಇಂದ್ರನೇ) । ಪ್ರಧೀನಿವ—ಚಕ್ರದ ಸುತ್ತುವಲೆಯವು ಚಕ್ರವನ್ನು ಸುತ್ತಿರುವಂತೆ ತಮ್ಮ ನಾಯಕನನ್ನು ಸುತ್ತಿ ನಿಂತಿರುವವರೂ । ಪಂಚ ಶತಾ—ಪಂಚಶತ (ಐನೂರು) ಸಂಖ್ಯೆಯುಳ್ಳವರೂ । ಸಹಸ್ರಾಣಿ—ಸಹಸ್ರ ಸಂಖ್ಯೆಯುಳ್ಳವರೂ ಆದ । ದಾಸಸ್ಯ—ಲೋಕನಾಶಕನಾದ । ವರ್ಚಿನಃ—ವರ್ಚಿಯೆಂಬ ಹೆಸರುಳ್ಳ ಅಸುರನ ಅನುಚರರನ್ನು । ಅಧಿ—ಪೂರ್ಣವಾಗಿ । ಅವಧೀಃ—ಕೊಂದಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಚಕ್ರದ ಸುತ್ತುವಲಯವು ಚಕ್ರವನ್ನು ಸುತ್ತಿರುವಂತೆ ತಮ್ಮ ನಾಯಕನನ್ನು ಸುತ್ತಿ ನಿಂತಿರುವವರೂ, ಐನೂರು ಮತ್ತು ಸಾವಿರಾರು ಸಂಖ್ಯೆಯುಳ್ಳವರೂ ಆದ ಲೋಕಕಂಟಕನಾದ ವರ್ಚಿಯೆಂಬ ಹೆಸರುಳ್ಳ ಅಸುರನ ಅನುಚರರನ್ನು ಪೂರ್ಣವಾಗಿ ಕೊಂದಿದ್ದೀಯೆ.

English Translation.

You have slain the five hundreds and thousands (of the followers) of the slave Varchin, (surrounding) him like the fellies (round the spokes of a wheel).

॥ ವಿಶೇಷವಿಷಯಗಳು ॥

ವರ್ಚಿನಃ— ಈ ವರ್ಚಿ ಎಂಬುವನು ಇಂದ್ರನಿಗೆ ಶತ್ರುವಾದ ಒಬ್ಬ ಅಸುರನು ಇವನಿಗೆ ವ್ಯಂಸನೆಂದೂ ಕೆಲವು ಕಡೆ ಹೇಳಿದೆ. ಶಂಬರನೆಂಬ ಅಸುರನ ಜತೆಯಲ್ಲಿಯೂ ಇವನ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಋ. ಸಂ. ೨-೧೯-೬; ೪-೪೭-೨೧; ೭-೯೯-೫; ೬-೪೭-೨೧; ಇತ್ಯಾದಿ ಋಕ್ಕುಗಳಲ್ಲಿ ಇವನ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ.



॥ ಸಂಹಿತಾಪಾಠಃ ॥

ಉತ ತ್ಯಂ ಪುತ್ರಮಗ್ರುವಃ ಪರಾವೃಕ್ತಂ ಶತಕ್ರತುಃ ।
ಉಕ್ಥೇಷ್ವಿಂದ್ರ ಆಭಜತ್ ॥ ೧೬ ॥

॥ ಪದಪಾಠಃ ॥

ಉತ । ತ್ಯಂ । ಪುತ್ರಂ । ಅಗ್ರುವಃ । ಪರಾऽವೃಕ್ತಂ । ಶತऽಕ್ರತುಃ ।
ಉಕ್ಥೇಷು । ಇಂದ್ರಃ । ಆ । ಅಭಜತ್ ॥ ೧೬ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಶತಕ್ರತುಃ ಶತಕರ್ಮೇಂದ್ರಸ್ತ್ಯಂ ತಂ ಪ್ರಸಿದ್ಧಮಗ್ರುವ ಏತನಾಮ್ನ್ಯಾಃ ಪುತ್ರಂ ಪರಾವೃಕ್ತಮೇತನ್ನಾಮಕಮುಕ್ಥೇಷು ಸ್ತೋತ್ರೇಷ್ವಾಭಜತ್ । ಭಾಗಿನಂ ಕೃತವಾನ್ । ಅಯಮರ್ಥೋ ವಮ್ರೀಭಿಃ ಪುತ್ರಮಗ್ರುವಃ । ಋಗ್ವೇ. ೪-೧೯-೯ । ಇತಸ್ಯಾಮೃಚಿ ಪ್ರತಿಪಾದಿತ ಇತಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಶತಕ್ರತುಃ—ಅನೇಕ ಕರ್ಮಕರ್ತನಾದ । ಇಂದ್ರಃ—ಇಂದ್ರನು । ತ್ಯಂ—ಪ್ರಸಿದ್ಧನಾದವನೂ । ಅಗ್ರುವಃ—ಅಗ್ರೂ ಎಂಬ ಹೆಸರುಳ್ಳ ಸ್ತ್ರೀಯ । ಪುತ್ರಂ—ಪುತ್ರನೂ ಆದ । ಪರಾವೃಕ್ತಂ—ಪರಾವೃಜನನ್ನು । ಉಕ್ಥೇಷು—ತನ್ನನ್ನುದ್ದೇಶಿಸಿದ ಸ್ತೋತ್ರಗಳಲ್ಲಿ । ಆಭಜತ್—ಭಾಗಿಯಾಗುವಂತೆ ಮಾಡಿದನು.

॥ ಭಾವಾರ್ಥ ॥

ಅನೇಕ ಕರ್ಮಕರ್ತನಾದ ಇಂದ್ರನು ಅಗ್ರೂ ಎಂಬ ಹೆಸರುಳ್ಳ ಸ್ತ್ರೀಯ ಪುತ್ರನೂ ಪ್ರಸಿದ್ಧನೂ ಆದ ಪರಾವೃಜನನ್ನು ತನ್ನನ್ನುದ್ದೇಶಿಸಿದ ಸ್ತೋತ್ರಗಳಲ್ಲಿ ಭಾಗಿಯಾಗುವಂತೆ ಮಾಡಿದನು.

## English Translation.

You, Indra, are Shatakratu; you have made Paravrij, the son of Aggru, participant in sacred hymns.

॥ ವಿಶೇಷವಿಷಯಗಳು ॥

ಇಂದ್ರನು ಪರಾವೃಕ್ತನನ್ನು ಸ್ತುತಿಗೆ ಭಾಗಿಯಾಗುವಂತೆ ಮಾಡಿದನು ಎಂಬುದೇ ಈ ಮಂತ್ರದ ತಾತ್ಪರ್ಯ. ಪರಾವೃಕ್ತನು ಅಗ್ರೂ ಎಂಬುವಳ ಪುತ್ರನೆಂದು ಮಂತ್ರವು ತಿಳಿಸುತ್ತದೆ. "ವಮ್ರೀಭಿಃ ಪುತ್ರಮಗ್ರುವಃ, ಇತ್ಯಸ್ಯಾಂ ಋಚಿ ಅಯಮರ್ಥಃ ಪ್ರತಿಪಾದಿತಃ", ಋ. ಸಂ. ೪-೧೯-೯ ನೇ ಮಂತ್ರದಲ್ಲಿ ಈ ಅರ್ಥವು ಪ್ರತಿಪಾದಿತವಾಗಿದೆಯೆಂದು ಭಾಷ್ಯಕಾರರು ತಿಳಿಸಿದ್ದಾರೆ. "ಅಗ್ರೂ ಎಂಬುವಳ ಪುತ್ರನ ದೇಹವನ್ನು ವಮ್ರೀ ಎಂಬ ಇರುವೆಗಳು ಕಿತ್ತುತಿನ್ನುತ್ತಿದ್ದವು. ಇಂದ್ರನು ಅವನನ್ನು ಅವುಗಳ ಹುತ್ತದಿಂದ ಹೊರಕ್ಕೆ ತಂದನು. ಇರುವೆಗಳು ತಿಂದಿದ್ದ ಅವನ ಶಿಥಿಲವಾದ ಅವಯವಗಳನ್ನೆಲ್ಲಾ ಇಂದ್ರನು ಸರಿಪಡಿಸಿದನು" ಎಂಬುದೇ ಆ ಮಂತ್ರದ ತಾತ್ಪರ್ಯ. ಆದರೆ, ಅಗ್ರೂಪುತ್ರನ ಹೆಸರೇನೆಂದು ಅಲ್ಲಿ ಹೇಳಿಲ್ಲ. ಪ್ರಕೃತವಾದ ಮಂತ್ರದಲ್ಲಿ ಪರಾವೃಕ್ತನು ಅಗ್ರೂವಿನ ಪುತ್ರನೆಂದು ತಿಳಿಸಿದೆ. ಆದರೆ ಇದು ಒಬ್ಬ ವ್ಯಕ್ತಿಯ ಹೆಸರನ್ನು ಸೂಚಿಸುವುದೇ, ಇದು ಅಂಕಿತನಾಮವೇ ಅಥವಾ ಈ ಪದಕ್ಕೆ ಬೇರೆ ಅರ್ಥವಿದೆಯೇ ಎಂಬುದು ಸಂಶಯಾಸ್ಪದವಾದ ವಿಷಯವಾಗಿದೆ. ಪ್ರಕೃತದಲ್ಲಿ ಅಗ್ರುವಃಪುತ್ರಂ ಎಂಬುದಕ್ಕೆ ಅರ್ಥವೇನಿರಬಹುದು ಎಂಬುದನ್ನು ನಿಷ್ಕರ್ಷಿಸಬೇಕು.

ಅಗ್ರುವಃ ಎಂಬ ಪದವು ಋಕ್ಸಂಹಿತೆಯಲ್ಲಿ ಒಂಭತ್ತು ಸನ್ನಿವೇಶಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಅವುಗಳಲ್ಲಿ ಎರಡು ಕಡೆಗಳಲ್ಲಿ ಮಾತ್ರ ಸಾಯಣರು ಈ ಪದವು ಅಂಕಿತನಾಮವೆಂದು ತಿಳಿಸಿದ್ದಾರೆ. ಉಳಿದೆಡೆಗಳಲ್ಲೆಲ್ಲ, ಬೇರೆ ಬೇರೆ ಸನ್ನಿವೇಶಗಳಲ್ಲಿ ಈ ಪದಕ್ಕೆ ಅರ್ಥವನ್ನು ಈ ರೀತಿ ಹೇಳಿದೆ.

ಋ. ಸಂ. ೧-೧೪೦- ೮. ತಮಗ್ರುವಃ ಕೇಶಿನೀಃ—ಅಂಗುಲಿಗಳಂತಿರುವ ಜ್ವಾಲೆಗಳು.
,, ೧-೧೯೧-೧೪. ಸಪ್ತ ಸ್ವಸಾರೋ ಅಗ್ರುವಃ—ಸುರಗಂಗಾದ್ಯಾಃ ಸಪ್ತ ನದ್ಯಃ
,, ೩- ೨೯-೧೩. ದಶ ಸ್ವಸಾರೋ ಅಗ್ರುವಃ—ದಶಾಂಗುಲಯಃ
,, ೪- ೧೯- ೭. ಪ್ರಾಗ್ರುವೋ ನಭನ್ವಃ—ಅಗ್ರಗಾಮಿನೀಃ ನದೀಃ

| | | |
|---|---|---|
| ,, | ೪– ೧೯– ೯. | ವಮ್ರಾಭಿಃ ಪುತ್ರಮಗ್ರುವಃ—ಅಗ್ರೂ ನಾಮ ಕಾಚಿತ್ । ತಸ್ಯಾಃ ಪುತ್ರಂ |
| ,, | ೪– ೩೦–೧೬. | ಪುತ್ರಮಗ್ರುವಃ ಪರಾವೃಕ್ತಂ—ಏತನ್ನಾಮ್ನ್ಯಾಃ ಪುತ್ರಂ |
| ,, | ೭– ೨– ೫. | ಸಮಗ್ರುವೋ ನ ಸಮನೇಷು—ನದ್ಯಃ |
| ,, | ೯– ೧– ೮. | ತಮೀಂ ಹಿನ್ವಂತ್ಯಗ್ರುವಃ—ಅಂಗುಲಯಃ |
| ,, | ೯– ೬೬– ೯. | ಮೃಜಂತಿ ತ್ವಾ ಸಮಗ್ರುವಃ—ಅಂಗುಲಯಃ |

ಹೀಗೆ, ೪–೧೯–೯; ಮತ್ತು ೪–೩೦–೧೬. ಈ ಎರಡು ಸನ್ನಿವೇಶಗಳಲ್ಲಿ ಬಿಟ್ಟು ಉಳಿದ ಸ್ಥಳಗಳಲ್ಲೆಲ್ಲಾ ಅಗ್ರಗಾಮಿ ಸ್ವಭಾವವಿರುವುದರಿಂದ ಅಗ್ರುವಃ ಎಂಬ ಹೆಸರು ಎಂದು 'ನಿರ್ವಚನವನ್ನು ತಿಳಿಸಿದೆ. ಈ ಸ್ವಭಾವವು ಅಂಗುಲ ಮತ್ತು ನದೀ ಎರಡಕ್ಕೂ ಇರುವುದು. ಯಜ್ಞಕಾರ್ಯಗಳಲ್ಲಿ ಹವಿಸ್ಸನ್ನರ್ಪಿಸಲು ಮುಂದಾಗಿ ಹೋಗಿ ಕಾರ್ಯ ತತ್ಪರವಾಗಿರುವುದರಿಂದ ಅಂಗುಲಿಗಳು ಅಗ್ರುವಗಳಾಗುವುವು. ನಿಮ್ನ ಪ್ರದೇಶದಲ್ಲಿ ಮುಂದಾಗಿ ಹೋಗಿ ಹರಿಯುವುದ ರಿಂದ ನದಿಗಳೂ ಅಗ್ರುವಗಳಾಗುವುವು. ಇದು ಆಯಾ ಸನ್ನಿವೇಶಗಳಲ್ಲಿ ಸಾಯಣರು ಹೇಳಿರುವ ವಿವರಣೆ. ಇದಲ್ಲದೇ, 'ವೇತ್ಯಗ್ರುರ್ಜನಿವಾನ್' ಎಂಬಲ್ಲಿ ಅಗ್ರು ಶಬ್ದವು ಸೂರ್ಯನಿಗೆ ವಿಶೇಷಣವಾಗಿದೆ. ಆದರೆ, ಸದ್ಯಃ ಆ ಪದದ ವಿವರಣೆಯು ಅಪ್ರಕೃತ.

ಮೇಲೆ ಹೇಳಿರುವ ಎರಡು ಕಡೆಗಳಲ್ಲಿ ಸಾಯಣರ ವಾಕ್ಯಗಳಲ್ಲಲ್ಲದೇ, ಸಂಹಿತೆಗಳಲ್ಲಾಗಲಿ, ಬ್ರಾಹ್ಮಣಾದಿ ಗಳಲ್ಲಾಗಲಿ ಅಗ್ರೂ ಎಂಬ ಹೆಸರಿನ ವ್ಯಕ್ತಿಯ ವಿಷಯವಾಗಲಿ, ನಿರ್ದೇಶವಾಗಲಿ ಇರುವುದಿಲ್ಲ. ಆದುದರಿಂದ ಅಗ್ರುವಃ ಪುತ್ರಂ ಪರಾವೃಕ್ತಂ ಎಂಬ ವಾಕ್ಯದಲ್ಲಿ ಅಗ್ರೂ ಎಂಬುವಳ ಪುತ್ರ ಎಂಬರ್ಥವಲ್ಲದೇ ಬೇರೆ ಯಾವುದಾದರೂ ಅರ್ಥವು ಸಾಧ್ಯವಾಗಬಹುದೇ ಎಂಬ ವಿಷಯವನ್ನು ಶ್ರುತಿವಾಕ್ಯಗಳ ಆಧಾರದ ಮೇಲೆ ಪರಿಶೀಲಿಸ ಬಹುದು. ಈ ಸಂದರ್ಭದಲ್ಲಿ ಮುಖ್ಯವಾಗಿ ಅಗ್ರುವಃ, ಪರಾವೃಕ್ತಂ ಎಂಬ ಪದಗಳಿಗೂ ಮತ್ತು ಸಾಯಣರು ಉದ್ಧರಿಸಿರುವ ಋ. ಸಂ. ೪–೧೯–೯ ನೇ ಮಂತ್ರದ ವಮ್ರೀ ಎಂಬ ಪದಕ್ಕೂ ತಾತ್ಪರ್ಯವೇನಿರಬಹುದನ್ನು ವಿವರಿಸಬೇಕಾಗಿರುತ್ತದೆ.

ಪರಾ ಎಂಬ ಉಪಸರ್ಗದೊಡನೆ ಕೂಡಿರುವ ವೃಜ್ ಧಾತುವಿಗೆ ಪರಿತ್ಯಜಿಸು, ದೂರ ತಳ್ಳು, ಅಥವಾ ಹಿಂತಿರುಗಿಸು ಇತ್ಯಾದ್ಯರ್ಥಗಳಾಗುತ್ತವೆ. ಉದಾಹರಣೆಗೆ—

ಸ ಈಂ ವೃಷಾ ನ ಫೇನಮಸ್ಯದಾಜೌ ಸ್ಮದಾ ಪರೈದಪ ದಭ್ರಚೇತಾಃ ।
ಸರತ್ಪದಾ ನ ದಕ್ಷಿಣಾ ಪರಾವೃಙ್ ನ ತಾ ನು ಮೇ ಪೃಶನ್ಯೋ ಜಗೃಭ್ರೇ ॥

(ಋ. ಸಂ. ೧೦–೬೧–೮)

ಎಂಬಲ್ಲಿ ದಕ್ಷಿಣಾರ್ಥವಾಗಿ ದತ್ತವಾದ ಗೋವುಗಳನ್ನು ಪರಿತ್ಯಜಿಸಿ (ಅಥವಾ ಹಿಂತಿರುಗಿಸಿ) ಒಂದು ಹೆಜ್ಜೆಯನ್ನು ಮುಂದಿಡಲಿಲ್ಲ ಎಂದು ನಾಭಾನೇದಿಷ್ಟನ ವಾಕ್ಯವಿದೆ. ಈ ಸನ್ನಿವೇಶದಲ್ಲಿ ಪರಾವೃಙ್ ಎಂಬ ಪದಕ್ಕೆ ಪರಾವರ್ಜ–ಯಿತಾ ಸನ್ ಎಂದು ಯಾವ ರೀತಿ ಅರ್ಥಮಾಡಿದೆಯೋ ಅದೇ ರೀತಿ ಪ್ರಕೃತವಾದ ಮಂತ್ರದಲ್ಲಿಯೂ ಸಾಧ್ಯವೇ ಎಂಬುದನ್ನು ಪರಿಶೀಲಿಸಬೇಕು. ಇದೇ ರೀತಿ ಪರಾವೃಜ ಶಬ್ದದ ಪ್ರಯೋಗವಿರುವ ಸಂದರ್ಭಗಳಲ್ಲೂ ಸಹ ಈ ಅರ್ಥವೇ ಸಹಜವಾಗಿರುತ್ತದೆ. ಉದಾಹರಣೆಗೆ—

ಯಾಭಿಃ ಶುಚೀರ್ಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ ಚಕ್ಷಸ ಏತವೇ ಕೃಥಃ ||
(ಋ. ಸಂ. ೧-೧೧೨-೮)

ಎಂಬಲ್ಲಿ ಅಶ್ವಿನೀದೇವತೆಗಳು ಕುಂಟನಾಗಿದ್ದ ಪರಾವೃಜನೆಂಬ ಋಷಿಯನ್ನು ನೇರವಾಗಿ ನಡೆಯುವಂತೆ ಮಾಡಿದರು ಎಂಬ ವರ್ಣನೆಯಿದೆ. ಈ ಋಕ್ಕಿನ ವಿಶೇಷವಿಷಯದಲ್ಲಿ ಪರಾವೃಜ ಶಬ್ದಕ್ಕೆ ಸಾಯಣರ ಅರ್ಥವನ್ನು ವಿವರಿಸಿ ನಂತರ ಸ್ಕಂದಸ್ವಾಮಿಗಳ ವಿವರಣೆಯು ಸಾಯಣರ ವಿವರಣೆಗೆ ವ್ಯತ್ಯಸ್ತವಾಗಿದೆಯೆಂದೂ ತೋರಿಸಿದೆ. ಪ್ರಕೃತ ಈ ವಿವರಣೆಯು ಅವಶ್ಯವಾಗಿರುವುದರಿಂದ ಸೂಕ್ಷ್ಮವಾಗಿ ಆ ಎರಡು ವಿವರಣೆಗಳನ್ನೂ ಪರಿಶೀಲಿಸಲಾಗುತ್ತದೆ.

"ಪರಾವೃಜಂ—ವೃಜೀ ವರ್ಜನೇ । ಪರಾವೃಣಕ್ತಿ ತಪಸಾ ಪಾಪಂ ವಿನಾಶಯತೀತಿ ಪರಾವೃಕ್" ತನ್ನ ತಪೋಮಹಿಮೆಯಿಂದ ಪಾಪವನ್ನು ದೂರಮಾಡುವುದರಿಂದ ಈ ಋಷಿಗೆ ಪರಾವೃಜನೆಂದು ಹೆಸರು ಎಂದು ಸಾಯಣರು ತಿಳಿಸಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಪರಾವರ್ಜಿತಂ ಪರಿತ್ಯಜಿಸಲ್ಪಟ್ಟವನು ಎಂದರ್ಥಮಾಡಿದ್ದಾರೆ. ಇದು ಅಂಕಿತನಾಮವೆಂದು ತಿಳಿಸಿಲ್ಲ. ಇದೇ ಅರ್ಥವನ್ನೇ ಆಂಗ್ಲವ್ಯಾಖ್ಯಾಕಾರರೂ ಅನುಸರಿಸಿದ್ದಾರೆ. ಉದಾಹರಣೆಗೆ– Macdonell and Keith ಎಂಬುವರು ಸಿದ್ಧಪಡಿಸಿರುವ Vedic Index ಎಂಬ ಗ್ರಂಥದಲ್ಲಿ ಈ ಪದದ ವಿವರಣೆಯನ್ನು ಈರೀತಿ ತಿಳಿಸಿದ್ದಾರೆ.

"Paravraj is a term found in four passages of the Reg-Veda, (೧-೧೧೨-೮; ೨-೧೩-೧೨; ೨-೧೫-೭; ೧೦-೬೧-೮), in all of which, it refers to a person in a forlorn Condition, while one of them also speaks of him as going south. Sayana's View that the Word is a proper name is most unlikely, while Grassman's explanation of it as cripple is still less probable Roth's interpratation of it as "exile" seems clearly right in the passage."

ಮೇಲೆ ತಿಳಿಸಿರುವ ನಾಲ್ಕು ಸನ್ನಿವೇಶಗಳಲ್ಲಿ ಪರಾವೃಜಶಬ್ದದ ಪ್ರಯೋಗವಿದೆ. ಅವುಗಳಲ್ಲೆಲ್ಲಾ ಸಾಯಣರು ಹೇಳುವಂತೆ ಅಂಕಿತನಾಮವೆಂದು ಹೇಳುವುದು ಸರಿಯಲ್ಲ. ಪರಿತ್ಯಕ್ತನಾದ ಪುರುಷನೆಂದು ಹೇಳಬಹುದೇ ಹೊರತು ಪರಾವೃಜನೆಂಬ ಹೆಸರಿನ ವ್ಯಕ್ತಿಯೆಂದು ಹೇಳಿದರೆ ತಪ್ಪಾಗಬಹುದು. ಆದುದರಿಂದ, ಆ ಸಂದರ್ಭಗಳಲ್ಲೆಲ್ಲಾ "ಪರಿತ್ಯಾಗ" ಅಥವಾ "ಪ್ರದೇಶತ್ಯಾಗ" ಎಂದರ್ಥವು ಸಹಜವಾಗಿರುತ್ತದೆಂದು ಹೇಳಿದರೆ ತಪ್ಪಾಗಲಾರದೆಂದಭಿಪ್ರಾಯವಿದೆ. ಇತರ ಶ್ರುತಿವಾಕ್ಯಗಳೂ ಸಹ ಈ ಅರ್ಥವನ್ನೇ ಸಮರ್ಥಿಸುತ್ತವೆ. ಮೇಲಿನ ವಾಕ್ಯಗಳಲ್ಲಿ ಉದಾಹರಿಸಿರುವ ಸನ್ನಿವೇಶಗಳೇ ಈ ಅರ್ಥವನ್ನು ವಿಶದಪಡಿಸುವುವು. ಉಪಲಬ್ಧವಾಗಿರುವ ಸ್ಕಂದಸ್ವಾಮಿ ಭಾಷ್ಯದಲ್ಲಿ ಹೇಳಿರುವ ಅರ್ಥವೇ ಮುಂದೆಯೂ ಹೇಳಲ್ಪಟ್ಟಿದೆಯೆಂದು ಧಾರಾಳವಾಗಿ ಹೇಳಬಹುದು. ಮುಂದಿನ ಭಾಗಗಳಿಗೂ ಆ ಭಾಷ್ಯದ ಸಹಾಯವಿದ್ದಿದ್ದರೆ ಅನೇಕ ಸಂದಿಗ್ಧಸನ್ನಿವೇಶಗಳಿಗೆ ವಿಶದವಾದ ತಾತ್ಪರ್ಯವನ್ನು ಹೇಳಬಹುದಾಗಿದ್ದಿತು. ಆದುದರಿಂದ, ಪರಾವೃಜ್ ಎಂಬುದಕ್ಕೆ ಪರಿತ್ಯಕ್ತ ಎಂಬರ್ಥವನ್ನು ಹೇಳಿದರೆ ಆಗ ಪ್ರಕೃತವಾದ ಮಂತ್ರದ ತಾತ್ಪರ್ಯವೇನೆಂಬುದನ್ನು ಪರಿಶೀಲಿಸಬೇಕಾಗುತ್ತದೆ. ಮತ್ತು ಈ ಪರಾವೃಕ್ತನು ಅಗ್ರುವಿನ ಪುತ್ರನೆಂದರೇನರ್ಥ ಎಂಬಂಶವನ್ನು ತಿಳಿಯಬೇಕಾಗುತ್ತದೆ. ಇದನ್ನು ತಿಳಿಯಲು ಇಂದ್ರನಿಗೂ ಪರಾವೃಕ್ತನಿಗೂ ಸಂಬಂಧವನ್ನು ತಿಳಿಸುವ ಎರಡು ಸಂದರ್ಭಗಳನ್ನು ಪರಿಶೀಲಿಸಬೇಕು. ಮೊದಲನೆಯದಾಗಿ, ಮಖದ (ಯಜ್ಞದ) ಶಿರಶ್ಛೇದನ, ಎರಡನೆಯದಾಗಿ ಅಗ್ನಿಯ ಪರಾವೃಕ್ತತ್ವ.

ಇವುಗಳಲ್ಲಿ ಮೊದಲನೆಯದಾದ ಮಖದ ಶಿರಶ್ಛೇದನದ ಸನ್ನಿವೇಶವು ವಮ್ರಿರೂಪನಾದ ಇಂದ್ರನೇ ಈ ಪರಾವೃಕ್ತನನ್ನು ವಮ್ರಿಗಳ ಹಿಂಸೆಯಿಂದ ಬಿಡಿಸಿದನು ಎಂಬ ಸಂದರ್ಭವನ್ನು ತಿಳಿಸುತ್ತದೆ. ಮತ್ತು ಇಂದ್ರನು ಯಾವ ಮಖದ ಶಿರವನ್ನು ಛೇದಿಸಿದನೋ ಅದೇ ಸೂರ್ಯಾತ್ಮಕವಾಯಿತು. ಪುನಃ ಅದೇ ಸೂರ್ಯನನ್ನು ಇಂದ್ರನೇ ಕರೆತಂದು ಯಜ್ಞಭಾಗಿಯಾಗುವಂತೆ ಮಾಡುತ್ತಾನೆ ಎಂಬಲ್ಲಿ ಈ ಎರಡಂಶಗಳೂ ಸೂಚಿತವಾಗಿವೆ.

ತ್ವಂ ಮಖಸ್ಯ ದೋಧತಃ ಶಿರೋಽವ ತ್ವಚೋ ಭರಃ ।
ಅಗಚ್ಛಃ ಸೋಮಿನೋ ಗೃಹಂ ॥

(ಋ. ಸಂ. ೧೦-೧೭೧-೨)

ಎಲೈ ಇಂದ್ರನೇ, ದೇವತೆಗಳಿಂದ ಭೀತಿಗೊಂಡುದೂ ಅವರಿಂದ ದೂರವಾಗಿ ಪಲಾಯನಮಾಡಿದುದೂ ಆದ ಯಜ್ಞದ ಶಿರವನ್ನು ನೀನು ಅದರ ಚರ್ಮದಿಂದ ಬೇರೆಮಾಡಿ ತಂದೆ ಎಂಬಲ್ಲಿ ಮಖದ ಶಿರಶ್ಛೇದನವೂ, ಪುನಃ ಮಖದ ಅದೇ ಶಿರಸ್ಸನ್ನು ಇಂದ್ರನು ವಾಪಸ್ಸು ತಂದುದೂ ಸೂಚಿತವಾಗಿದೆ. ಈ ಮಖದ ಶಿರಸ್ಸೇ ಸೂರ್ಯನು, ಆ ಸೂರ್ಯನನ್ನೇ ಪುನಃ ಇಂದ್ರನು ಕರೆತಂದು ಯಜ್ಞಭಾಗಿಯಾಗುವಂತೆ ಮಾಡಿದನು.

ತ್ವಂ ತ್ಯಮಿಂದ್ರ ಸೂರ್ಯಂ ಪಶ್ಚಾ ಸಂತಂ ಪುರಸ್ಕೃಧಿ ।
ದೇವಾನಾಂ ಚಿತ್ತಿರೋ ವಶಂ ॥

(ಋ ಸಂ. ೧೦-೧೭೧-೪)

ಎಲೈ ಇಂದ್ರನೇ, ದೇವತೆಗಳಿಂದಲೂ ಮರೆಯಾಗಿ ಹೋಗಿ ಯಾರ ಅರಿವಿಗೂ ತಿಳಿಯದಿದ್ದ ಸೂರ್ಯನನ್ನು ಕರೆತಂದು ನಮ್ಮ ಪೂಜಾರ್ಹನನ್ನಾಗಿ ಮಾಡು ಎಂದಿರುವ ಪ್ರಾರ್ಥನೆಯಲ್ಲಿ ಮರೆಯಾಗಿರುವ ಎಂದರೆ ಪರಾವೃತ್ತನಾದ ಸೂರ್ಯನನ್ನು ಹಿಂದಕ್ಕೆ ಕರೆತರಲು ಇಂದ್ರನೇ ಸಮರ್ಥನೆಂಬಂಶವು ತಿಳಿಸಲ್ಪಟ್ಟಿದೆ. ಆದರೆ ಮೇಲೆ ಯಾವ ಮಖದ ಶಿರಶ್ಛೇದನವಾಯಿತೋ ಅದೇ ಮಖದ ಶಿರಸ್ಸೇ ಸೂರ್ಯರೂಪದಲ್ಲಿ (ಅಥವಾ ಆಗ್ನ್ಯಾತ್ಮಕವಾದ ಸೂರ್ಯರೂಪದಲ್ಲಿ) ಪರಾವೃಕ್ತವಾಯಿತು ಎಂಬುದು ಹೇಗೆ? ಈ ಪರಾವೃಕ್ತನು ಅಗ್ರುವಿನ ಪುತ್ರನು ಎಂಬುದು ಹೇಗೆ? ಇವು ಮುಖ್ಯವಾಗಿ ಅರಿಯಬೇಕಾದ ಅಂಶ.

ಮೇಲೆ ಸೂಚಿತವಾದ ಮಖದ ಶಿರಶ್ಛೇದನದ ಸನ್ನಿವೇಶವು ಪಂಚವಿಂಶಬ್ರಾಹ್ಮಣ (೭-೫-೬); ತೈತ್ತಿರೀಯಾರಣ್ಯಕ (೫-೧-೧-೫); ಶತಪಥಬ್ರಾಹ್ಮಣ (೧೪-೧-೨-೧೭) ಇತ್ಯಾದಿ ಸ್ಥಳಗಳಲ್ಲಿ ವರ್ಣಿತವಾಗಿದೆ. ಇದರ ವಿವರವನ್ನು ಹಿಂದೆ ತಿಳಿಸಿದೆ. (ಋಗ್ವೇದಸಂಹಿತಾ ಭಾಗ ೧೨, ಪುಟ 486-489) ಮತ್ತು ಇದೇ ಸಂದರ್ಭದಲ್ಲಿ ಪ್ರವರ್ಗ್ಯ, ಘರ್ಮ ಎಂಬ ಹೆಸರುಗಳ ಪ್ರಸಿದ್ಧವೂ, ಪೂಜ್ಯವೂ ಆದ ಕ್ರಮವನ್ನೂ ವಿವರಿಸಿ ತಿಳಿಸಿದೆ. ಸೋಮಾತ್ಮಕನೂ, ಮಖಾತ್ಮಕನೂ ಆದ ಯಾವ ವಿಷ್ಣುವಿನ ಶಿರಸ್ಸು ಛಿನ್ನವಾಯಿತೋ, ಯಾವುದು ಪ್ರವರ್ಗ್ಯವೆಂದು ಪ್ರಸಿದ್ಧವಾಯಿತೋ ಅದೇ ಆದಿತ್ಯನಲ್ಲದೇ ಬೇರೆಯಲ್ಲ.

" ಸಂವತ್ಸರ ಏಷ ಯ ಏಷ ತಪತ್ಯೇಷ ಉ ಪ್ರವರ್ಗ್ಯಃ "

(ಶ. ಬ್ರಾ. ೧೪-೧-೨-೧೪)

ಅಂತರಿಕ್ಷದಲ್ಲಿ ಪ್ರಕಾಶಿಸುವ ಸೂರ್ಯನೇ ಪ್ರವರ್ಗ್ಯವು. ಪ್ರವರ್ಗ್ಯರೂಪವಾದ ಈ ಸೂರ್ಯನೇ ಪರಾವೃಕ್ತನಾದವನು. ಪರಾವೃಕ್ತನಾದ ಈ ಸೂರ್ಯರೂಪದ ಪ್ರವರ್ಗ್ಯವನ್ನೇ ಅಶ್ವಿನೀದೇವತೆಗಳು ಪುನಃ ಸಂಪಾದಿಸಿದರು. ಆ ವಿಷಯವನ್ನೇ ಋ. ಸಂ. ೧-೧೧೨-೮ ನೇ ಮಂತ್ರದಲ್ಲಿ "ಯಾಭಿಃ ಶಚೀಭಿರ್ವೃಷಣಾ ಪರಾವೃಜಂ" ಎಂಬ ವಾಕ್ಯದಿಂದ ಅಶ್ವಿನೀದೇವತೆಗಳು ಪರಾವೃಜನನ್ನು ಹಿಂತಿರುಗಿಸಿ ಪೂಜಾರ್ಹನನ್ನಾಗಿ ಮಾಡಿದ ವಿಷಯವು ತಿಳಿಸಿದೆ. ಸೂರ್ಯರೂಪನಾದ ಈ ಪ್ರವರ್ಗ್ಯವು ಪರಾವೃಕ್ತವಾದುದು ಹೇಗೆ ಅದನ್ನು ಅಶ್ವಿನೀದೇವತೆಗಳು ಪುನಃ ಸಂಪಾದಿಸಿದುದು ಹೇಗೆ ಎಂಬ ವಿಷಯವನ್ನೂ ಸಹ ಹಿಂದೆ (ಋಗ್ವೇದಸಂಹಿತಾ, ಭಾಗ ೧೨, ಪುಟ 486-487) ತಿಳಿಸಿದೆ. "ಯಜ್ಞೋ ವೈ ದೇವೇಭ್ಯ ಉದಕ್ರಾಮತ್" (ಐ. ಬ್ರಾ. ೧-೧೮) ಇತ್ಯಾದಿಯಾಗಿ ಐತರೇಯ ಬ್ರಾಹ್ಮಣದಲ್ಲಿ ವರ್ಣಿತವಾಗಿರುವಂತೆ, ಯಜ್ಞಶಿರಸ್ಸಾದ ಪ್ರವರ್ಗ್ಯದ ಪರಾವೃಕ್ತತ್ವವು ದೇವತೆಗಳಿಗೆ ಶ್ರೇಯಸ್ಕರವಾಗಲಿಲ್ಲ ಎಂದು ಯಾವ ರೀತಿ ತಿಳಿಸಿದೆಯೋ, ಅದೇ ರೀತಿ ಅಗ್ನಿಯ ಪರಾವೃಕ್ತತ್ವವೂ ಸಹ ದೇವತೆಗಳಿಗೆ ಶ್ರೇಯಸ್ಕರವಾಗಲಿಲ್ಲ. ಆಗ ದೇವತೆಗಳು ಮರೆಯಾದ ಅಗ್ನಿಯನ್ನು ಪ್ರಾರ್ಥಿಸಲು ಇಂದ್ರನನ್ನು ದೂತನನ್ನಾಗಿ ಕಳುಹಿಸಿದರು. ಇಂದ್ರನು ಅಗ್ರೂಪುತ್ರನಾದ ಅಗ್ನಿಯನ್ನೂ ಹಿಂದಕ್ಕೆ ಕರೆತಂದು ಅವನನ್ನು ಪುನಃ ಯಜ್ಞದಲ್ಲಿ ಭಾಗಿಯಾಗುವಂತೆ ಮಾಡಿದನು ಎಂದಿರುವ ವಿಷಯವೇ ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿತವಾಗಿರಬಹುದು.

> ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ ।
>
> (ತೈ. ಸಂ. ೨-೬-೬-೧)

ಅಗ್ನಿಯ ಮೂರು ಜನ ಭ್ರಾತೃಗಳೂ ದೇವತೆಗಳಿಗೆ ಹವಿಸ್ಸನ್ನು ವಹಿಸುವ ವೇಳೆಯಲ್ಲಿ ಶ್ರಾಂತರಾಗಿ ನಷ್ಟರಾದರು. ಅಗ್ನಿಯು ತನಗೂ ಅದೇ ಅವಸ್ಥೆಯು ಪ್ರಾಪ್ತವಾಗಬಹುದೆಂದು ಭೀತಿಗೊಂಡು ನೀರಿನಲ್ಲಿ ಅವಿತುಕೊಂಡು ಮರೆಯಾದನು. ಅದೇ ಅಗ್ನಿಯ ಪರಾವೃಕ್ತತ್ವೆ ಪುನಃ ಇವನು ಹಿಂತಿರುಗಿ ಯಜ್ಞದಲ್ಲಿ ಭಾಗವಹಿಸಲು ಇವನನ್ನು ದೇವತೆಗಳು "ಮಹತ್ತದುಲ್ಬಂ ಸ್ಥವಿರಂ" ಎಂಬ ಸೂಕ್ತದಿಂದ (ಋ. ಸಂ. ೧೦-೫೧) ಪ್ರಾರ್ಥಿಸಿದ್ದಾರೆ. ಈ ಅಗ್ನಿಯು ಅಗ್ರುವಃ ಪುತ್ರನಾದುದು ಹೇಗೆಂದರೆ, ಇವನು ಉದಕಜನಿತನಾದುದರಿಂದ ಅಪಾಂನಪಾತ್ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಆಪ ಏವೇದಮಗ್ರ ಆಸುಃ (ಬೃ. ಉ. ೫-೫-೧) ಸಕಲ ತತ್ತ್ವಗಳಿಗಿಂತಲೂ ಅಗ್ರವಾಗಿದ್ದುದರಿಂದ ನೀರಿಗೆ ಅಗ್ರೂ ಎಂಬ ಹೆಸರಿರಲು ಸಹಜವಾಗಿದೆ. ಅಥವಾ ಸಹಜವಾಗಿ ಪ್ರವಹಿಸುವ ಪ್ರವೃತ್ತಿಯಿರುವುದರಿಂದಲೇ ನದಿಗಳಿಗೆ ಅಗ್ರೂ ಎಂಬ ಹೆಸರಿರುವುದು ಋಕ್ಸಂಹಿತೆಯಲ್ಲಿ ಪ್ರಸಿದ್ಧವಾಗಿದೆ (ಋ. ಸಂ. ೪-೧೯-೭ ಇತ್ಯಾದಿ). ಅಗ್ನಿಯು ಇಂತಹ ಅಗ್ರುವಿನ ಪುತ್ರನು ಮತ್ತು ಅಗ್ನಿಯೇ ಅಗ್ರಿಯೆಂದೂ ಕರೆಯಲ್ಪಡುವ ವಿಷಯವನ್ನೂ ಸಹ ಹಿಂದೆ ತಿಳಿಸಿದೆ (ಶ. ಬ್ರಾ. ೬-೧-೧-೧೧)

ಈ ರೀತಿ, ಸ್ಥಳಾಂತರದಲ್ಲಿ ಮರೆಯಾಗುವುದರಿಂದಾಗಲಿ, ಅಥವಾ ಮೇಲೆ ತಿಳಿಸಿರುವಂತೆ ಶಿರಶ್ಛೇದನಾದಿಗಳಿಂದ ಮುಖ್ಯಾಂಗಗಳು (ಮುಖ್ಯ ತತ್ತ್ವವು) ಮರೆಯಾಗುವುದರಿಂದಾಗಲಿ ಪರಾವೃಕ್ತತ್ವವು ಪ್ರಾಪ್ತವಾಗಬಹುದು. ಶೀರ್ಷಾ ಪರಾ ವರ್ಕ್ (ಋ. ಸಂ. ೧೦-೮-೯) ಇತ್ಯಾದಿ ಪ್ರಯೋಗಗಳು ಈ ಅರ್ಥವನ್ನು ಸಮರ್ಥಿಸುತ್ತವೆ. ತಿರಸ್ಕೃತವಾದುದು. ಪರಿತ್ಯಕ್ತವಾದುದು, ಎಂಬರ್ಥಗಳಲ್ಲಿಯೂ ಸಹ ಈ ಪದದ ಪ್ರಯೋಗವಿರುತ್ತದೆ. ಪರಿತ್ಯಕ್ತ

ವಾದ ವ್ಯಕ್ತಿಯನ್ನು ಇಂದ್ರನು ಪುನಃ ಪೂಜ್ಯನಾಗುವಂತೆ ಮಾಡಿದನು, ಎಂಬ ವರ್ಣನವೂ ಅನೇಕ ಕಡೆಗಳಲ್ಲಿರುತ್ತದೆ. ಉದಾಹರಣೆಗೆ—

ಅರಮಯಃ ಸರಪಸಸ್ತರಾಯ ಕಂ ತುರ್ವೀತಯೇ ಚ ವಯ್ಯಾಯ ಚ ಸ್ರುತಿಂ ।
ನೀಚಾ ಸಂತಮುದನಯಃ ಪರಾವೃಜಂ ಪ್ರಾಂಧಂ ಶ್ರೋಣಂ ಶ್ರವಯನ್ತ್ಸಾಸ್ಯುಕ್ಥಃ ॥
(ಋ. ಸಂ. ೨-೧೩-೧೨)

ಎಂಬಲ್ಲಿ ಅಂಧನೂ, ಶ್ರೋಣನೂ (ಕುಂಟನೂ) ಆದ ಪರಾವೃಜನು ಇಂದ್ರನಿಂದ ಸಹಾಯವನ್ನು ಪಡೆದನೆಂದಿದೆ. ಇವನು ಯಾರು ? ಎಂಬುದೇ ಪ್ರಶ್ನೆ. ಸಾಯಣರು ಪರಾವೃಜನೆಂಬ ಋಷಿಯೆಂದಿದ್ದಾರೆ. ಇದು ಅಂಕಿತನಾಮ ವಾಗಿರಲು ಕಾರಣವಿಲ್ಲವೆಂದು ಮೇಲೆ ತಿಳಿಸಿದೆ. ಆದರೆ ಇಲ್ಲಿ ಪರಾವೃಜಶಬ್ದಕ್ಕೆ ಅರ್ಥವೇನು ? ಅಂಧ, ಶ್ರೋಣ, ಎಂಬ ಶಬ್ದಗಳಿಗೆ ಅರ್ಥವೇನು ? ಎಂಬ ಪ್ರಶ್ನೆಯು ಸಹಜವಾಗಿದೆ. ಈ ಸಂದರ್ಭದಲ್ಲಿ ಪರಾವೃಜ, ವಶ ಇತ್ಯಾದಿಯಾಗಿ ಅಶ್ವಿನೀದೇವತೆಗಳಿಂದ ಯಾರು ಯಾರು ರಕ್ಷಿತರಾದರೆಂದು ಹೇಳಿದೆಯೋ ಅವರೆಲ್ಲರೂ ಇಂದ್ರನಿಂದಲೂ ರಕ್ಷಿತರೆಂದು ಪ್ರಸಿದ್ಧವಾಗಿದೆ. ಮೇಲೆ ೧-೧೧೨-೮ ರಲ್ಲಿ ಅಶ್ವಿನೀದೇವತೆಗಳು ಪರಾವೃಜನನ್ನು ರಕ್ಷಿಸಿದಂತೆಯೇ, ೧-೧೧೨-೧೦ ರಲ್ಲಿ ವಶನೆಂಬುವನನ್ನು ರಕ್ಷಿಸಿದರೆಂದಿದೆ. ಅದೇ ವಶನು ಇಂದ್ರರಕ್ಷಿತನೂ ಆಗಿದ್ದಾನೆ. " ಮದಂತೀಂದ್ರಗೋಪಾಃ ॥ .... .........ಪ್ರತೀಚೀ ವಶಮಶ್ವ್ಯಂ " (ಋ. ಸಂ. ೮-೪೬-೩೨, ೩೩) ಎಂಬಲ್ಲಿ ವಶಶಬ್ದವು ಸೂರ್ಯನಿರ್ದೇಶಕ ವಾದ ಪದವಾಗಿದೆ. ೧-೧೧೨-೧೮ ರಲ್ಲೂ ಅದೇ ರೀತಿ ಅರ್ಥಮಾಡಬಹುದು. ಆದರೆ ಈ ವಶಶಬ್ದಸೂಚಿತವಾದ ಆದಿತ್ಯನೇ ಪರಾವೃಜಶಬ್ದವಾಚ್ಯನೂ ಆದರೆ, ಅವನಿಗೆ ಅಂಧತ್ವವೂ, ಶ್ರೋಣತ್ವವೂ ಹೇಗೆ? ತಮಸಾ ಅಪಗೂಳ್ಹಮ್ ; ಗುಹಾ ಹಿತಂ ಇತ್ಯಾದಿ ವಿಶೇಷಣಗಳು ಆದಿತ್ಯನ ಅಂಧತ್ವವನ್ನು ಸೂಚಿಸುತ್ತವೆ. ಅದೇ ರೀತಿ ಅಪಾದ್ ಎಂಬ ವಿಶೇಷಣವು ಸೋಮ, ಸೂರ್ಯ, ಅಗ್ನಿ ಈ ದೇವತೆಗಳ ಸ್ವರೂಪವನ್ನು ವರ್ಣಿಸುತ್ತದೆ. ಈ ಮೂರು ದೇವತೆಗಳೂ ಮಖಾತ್ಮಕಗಳು. ಮಖವೇ ವಿಷ್ಣುವು. ಆದುದರಿಂದ ಸೋಮ, ಅಗ್ನಿ, ಸೂರ್ಯ ಮತ್ತು ವಿಷ್ಣು ಈ ದೇವತೆಗಳೆಲ್ಲಾ ಒಂದಲ್ಲ ಒಂದು ವಿಧದಲ್ಲಿ ಪರಾವೃಕ್ತರಾದವರು. ಇವರನ್ನು ಇಂದ್ರನು ಯಜ್ಞಭಾಗಿಗಳಾಗಿ ಮಾಡುವ ಪ್ರಯತ್ನವನ್ನು ಅನೇಕ ಸಂದರ್ಭಗಳಲ್ಲಿ ನಡೆಸಿದ್ದಾನೆ. ಉದಾಹರಣೆಗೆ—

ನಿಧೀಯಮಾನಮಪಗೂಳ್ಹಮಪ್ಸು ಪ್ರ ಮೇ ದೇವಾನಾಂ ವ್ರತಪಾ ಉವಾಚ ।
ಇಂದ್ರೋ ವಿದ್ವಾಂ ಅನು ಹಿ ತ್ವಾ ಚಚಕ್ಷ ತೇನಾಹಮಗ್ನೇ ಅನುಶಿಷ್ಟ ಆಗಾಂ ॥
(ಋ. ಸಂ. ೧೦-೩೨-೬)

ಇತ್ಯಾದಿ ಋಕ್ಕುಗಳಲ್ಲಿ ಮೇಲಿನ ಅಂಶವು ಸೂಚಿತವಾಗಿದೆ. ಉದಾಹೃತವಾಗಿರುವ ಈ ಮಂತ್ರದಲ್ಲೂ ಮೇಲೆ ತಿಳಿಸಿರುವ ಕೆಲವು ಮಂತ್ರಗಳಲ್ಲೂ ಪರಾಙ್ಮುಖನಾಗಿ ಓಡಿಹೋಗಿ ಅವಿತುಕೊಂಡ ಅಗ್ನಿಯನ್ನು ನಿರ್ದೇಶಿಸಿರಬಹುದು. ಅವನೇ ಅಗ್ರೂಪುತ್ರನಾಗಬಹುದು. ಅಗ್ರಗಾಮಿಯಾದ ಉದಕದ ಪುತ್ರನೆಂದಾಗಲಿ, ಅಥವಾ ಕರ್ಮತತ್ಪರವಾದ ಅಂಗುಲಿಗಳ ಪುತ್ರನೆಂದಾಗಲಿ ಆಗಬಹುದು. ಅಥವಾ ಈ ಪರಾವೃಕ್ತನು ಸೂರ್ಯನಾಗಬಹುದು, ಎಂದು ಉದ್ಧೃತ ವಾದ ಶ್ರುತಿವಾಕ್ಯಗಳ ಆಧಾರದ ಮೇಲೆ ಊಹಿಸಿ ಹೇಳಬಹುದೇ ಹೊರತು ಇದಮಿತ್ಥಂ ಎಂದು ನಿಷ್ಕೃಷ್ಟವಾಗಿ ಹೇಳುವುದು ಸುಲಭಸಾಧ್ಯವಲ್ಲ.



॥ ಸಂಹಿತಾಪಾಠಃ ॥

ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ ।
ಇಂದ್ರೋ ವಿದ್ವಾ೦ ಅಪಾರಯತ್ ॥ ೧೭ ॥

॥ ಪದಪಾಠಃ ॥

ಉತ । ತ್ಯಾ । ತುರ್ವಶಾಯದೂ ಇತಿ । ಅಸ್ನಾತಾರಾ । ಶಚೀಽಪತಿಃ ।
ಇಂದ್ರಃ । ವಿದ್ವಾನ್ ಅಪಾರಯತ್ ॥ ೧೭ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಅಸ್ನಾತಾರಾಸ್ನಾತಾರೌ ಯಯಾತಿಶಾಪಾದನಭಿಷಿಕ್ತೌ ತ್ಯಾ ತ್ಯೌ ತೌ ಪ್ರಸಿದ್ಧೌ ತುರ್ವಶಾಯದೂ ತುರ್ವಶನಾಮಾನಂ ಯದುನಾಮಕಂ ಚ ರಾಜಾನೌ ಶಚೀಪತಿಃ ಕರ್ಮಣಾಂ ಪಾಲಕಃ। ಯದ್ವಾ । ಶಚೀಂದ್ರಸ್ಯ ಭಾರ್ಯಾ । ತಸ್ಯಾಃ ಪತಿರ್ಭರ್ತಾ ವಿದ್ವಾನ್ ಸಕಲಮಪಿ ಜಾನನ್ನಿಂದ್ರೋಽಪಾರಯತ್ । ಅಭಿಷೇಕಾರ್ಹಾವಕರೋತ್ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಅಸ್ನಾತಾರಾ—(ಯಯಾತಿ ಶಾಪದಿಂದ) ಪಟ್ಟಾಭಿಷೇಕರಹಿತರಾದವರೂ । ತ್ಯಾ—ಪ್ರಸಿದ್ಧರೂ ಆದ । ತುರ್ವಶಾಯದೂ—ತುರ್ವಶ ಮತ್ತು ಯದು ಎಂಬ ಹೆಸರುಳ್ಳ ರಾಜರನ್ನು । ಶಚೀಪತಿಃ—ಕರ್ಮಪಾಲಕನೂ । ವಿದ್ವಾನ್—ಸಕಲವನ್ನೂ ತಿಳಿದವನೂ ಆದ । ಇಂದ್ರಃ—ಇಂದ್ರನು । ಅಪಾರಯತ್—ಅವರನ್ನು ಅಭಿಷೇಕಾರ್ಹರನ್ನಾಗಿ ಮಾಡಿದನು.

॥ ಭಾವಾರ್ಥ ॥

ಯಯಾತಿ ಶಾಪದಿಂದ ಅಭಿಷೇಕಕ್ಕೆ ಅನರ್ಹರಾದವರೂ, ಪ್ರಸಿದ್ಧರೂ ಆದ ತುರ್ವಶ ಮತ್ತು ಯದು ಎಂಬ ಹೆಸರುಳ್ಳ ರಾಜರನ್ನು ಕರ್ಮಪಾಲಕನೂ, ಸಕಲವನ್ನೂ ತಿಳಿದವನೂ ಆದ ಇಂದ್ರನು ಅವರನ್ನು ಅಭಿಷೇಕಾರ್ಹರನ್ನಾಗಿ ಮಾಡಿದನು.

English Translation.

The lord of acts, the wise Indra, has borne across (their difficulties), Turvasas and Yadu, when denied inauguration.

। ವಿಶೇಷವಿಷಯಗಳು ।

ತುರ್ವಶಾಯದೂ—ಯದು ಇತ್ಯಾದೀನಿ ಪಂಚಮನುಷ್ಯನಾಮಾನಿ । ಯದು, ತುರ್ವಶ, ದ್ರುಹ್ಯ, ಅನು ಮತ್ತು ಪೂರು ಇವು ಐದೂ ಮನುಷ್ಯನಾಮಗಳು. ಅವುಗಳಲ್ಲಿ ಯದುವೆಂಬ ಗುಂಪಿನವರು ಯಾವಾಗಲೂ

ಇತರರಿಗೆ ಅಹಿಂಸಕರಾಗಿದ್ದವರು, ಯದುಷು, ನಿಯತೇಷು, ಪರೇಷಾಂ ಅಹಿಂಸಕೇಷು । ಎಂದು ಸಾಯಣರು ವಿವರಿಸಿದ್ದಾರೆ. ಇದು ಒಂದು ವ್ಯಕ್ತಿಯ ಹೆಸರೂ ಆಗಬಹುದು; ಅಥವಾ ಒಂದು ಗುಂಪಿನ ಹೆಸರೂ ಆಗಬಹುದು. ಯದುವೆಂಬ ರಾಜನ ಹೆಸರು ಪ್ರಸಿದ್ಧವಾಗಿರುವಂತೆಯೇ ಯದುವೆಂಬ ಒಂದು ಗುಂಪಿನ ಹೆಸರೂ ಪ್ರಸಿದ್ಧವಾಗಿದೆ.

ತುರ್ವಶೇಷು—ತುರ್ವಶ ಎಂಬ ಹೆಸರೂ ಸಹ ವ್ಯಕ್ತಿನಾಮವಾಗಿಯೂ ಸಂಘನಾಮವಾಗಿಯೂ ಪ್ರಸಿದ್ಧ ವಾಗಿದೆ. ಇಲ್ಲಿ ಸಾಯಣರು ಹಿಂಸಕೇಷು ಮನುಷ್ಯೇಷು ಹಿಂಸಕರಾದ ಮಾನವರ ಗುಂಪಿನಲ್ಲಿ ಎಂದ ತುರ್ವಶರ ಸ್ವಭಾವವನ್ನು ಹೇಳಿದ್ದಾರೆ. ಯದು ಮತ್ತು ತುರ್ವಶ ಎಂಬ ಎರಡು ವ್ಯಕ್ತಿಗಳ ಹೆಸರು ಬರುವ ಕಡೆಗಳಲ್ಲೆಲ್ಲಾ ಅವರಿಬ್ಬರೂ ರಾಜರ್ಷಿಗಳೆಂದೂ ಇಂದ್ರಾಗ್ನಿಗಳ ಅನುಗ್ರಹಕ್ಕೆ ಪಾತ್ರರಾದವರೆಂದೂ ತಿಳಿಯುತ್ತದೆ. ಯದುಷು, ತುರ್ವಶೇಷು ಎಂದು ಬಹುವಚನಗಳಲ್ಲಿ ಈ ಎರಡು ಹೆಸರುಗಳೂ ಜೊತೆಯಲ್ಲಿ ಬಂದಿರುವುದು ಋಕ್ಸಂಹಿತೆಯಲ್ಲೆಲ್ಲಾ ಇದೊಂದೇ ಸ್ಥಳದಲ್ಲಿ ಎಂದು ಹೇಳಬಹುದು.

ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।

(ಋ. ಸಂ. ೧-೩೬-೧೮)

ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।

(ಋ. ಸಂ. ೧-೫೪-೬)

ಇತ್ಯಾದಿ ಋಕ್ಕುಗಳಲ್ಲಿ ಇಬ್ಬರು ರಾಜರ್ಷಿಗಳೂ ಅಗ್ನಿಯ ಮತ್ತು ಇಂದ್ರನ ರಕ್ಷಣೆಯನ್ನು ಪಡೆದುದು ಹೇಳಲ್ಪಟ್ಟಿದೆ. ತುರ್ವಶನ ಮುಖ್ಯವಾದ ಸಾಹಸಕೃತ್ಯವು ಸುದಾಸನೊಂದಿಗೆ ಯುದ್ಧಮಾಡಿದುದು.

ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ ।
ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ ಸಖಾ ಸಖಾಯಮತರದ್ವಿಷೂಚೋಃ ॥

(ಋ. ಸಂ. ೭-೧೮-೬)

ಎಂಬ ಋಕ್ಕಿನಲ್ಲಿ ತೆರ್ವಶನ ಯುದ್ಧವು ವರ್ಣಿತವಾಗಿದೆ. ಆದರೆ ತುರ್ವಶನು ಇಲ್ಲಿ ಇಂದ್ರನಿಂದ ಸಹಾಯವನ್ನು ಪಡೆದನೇ ಅಥವಾ ನಿಗ್ರಹವನ್ನು ಪಡೆದನೇ ಎಂಬುದೇ ವಿಶದವಾಗಿಲ್ಲ. ಸಾಯಣರು ಎರಡುವಿಧವಾದ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದಾಗಿ ತುರ್ವಶನು ಇಂದ್ರನ ಸಖನಾದ ಸುದಾಸನೊಂದಿಗೆ ಯುದ್ಧಕ್ಕೆ ಹೋದಾಗ ಇಂದ್ರನು ತುರ್ವಶನನ್ನ ನಿಗ್ರಹಿಸಿ ತನ್ನ ಸ್ನೇಹಿತನನ್ನು ರಕ್ಷಿಸಿವನು ಎಂದೂ, ಎರಡನೆಯದಾಗಿ ತುರ್ವಶನಿಗೂ ಅವನ ವಿರೋಧಿಗಳಿಗೂ ಯುದ್ಧವು ಸಂಭವಿಸಿದ ಕಾಲದಲ್ಲಿ ಇಂದ್ರನು ಸಖನಾದ ತುರ್ವಶನಿಗೆ ಸಹಾಯಮಾಡಿದನೆಂದೂ ಹೇಳಿದೆ. ಆದ್ದರಿಂದ ಈ ಋಕ್ಕಿನ ತಾತ್ಪರ್ಯವು ವಿಶದವಾಗಿಲ್ಲ. ಇದೇ ರೀತಿ ಯದು ಮತ್ತು ತುರ್ವಶ ಇಬ್ಬರೂ ಸಹ ಇಂದ್ರನಿಂದ ಪರಾಜಯವನ್ನು ಪಡೆದುದಾಗಿ,

ಪುರಃ ಸದ್ಯ ಇತ್ಥಾ ಧಿಯೇ ದಿವೋದಾಸಾಯ ಶಂಬರಂ ।
ಅಧ ತ್ಯಂ ತುರ್ವಶಂ ಯದುಂ ॥

(ಋ. ಸಂ. ೯-೬೧-೨)

ಎಂಬ ಋಕ್ಕಿನಲ್ಲಿ ಹೇಳಿದೆ. ಇದರಿಂದ ಇಂದ್ರನು ತನ್ನ ಸಖನಾದ ದಿವೋದಾಸನಿಗಾಗಿ ಯದುವನ್ನೂ ತುರ್ವಶನನ್ನೂ ನಿಗ್ರಹಿಸಿದುದಾಗಿ ತಿಳಿಯುತ್ತದೆ. ಆದರೆ,

ಪ್ರಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ।

(ಋ. ಸಂ. ೧-೧೭೪-೯)

ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ ।
ಇಂದ್ರೋ ವಿದ್ವಾँ ಅಪಾರಯತ್ ।

(ಋ. ಸಂ. ೪-೩೦-೧೭)

ತ್ವಮಪೋ ಯದವೇ ತುರ್ವಶಾಯಾರಮಯಃ ಸುದುಘಾಃ ಪಾರ ಇಂದ್ರ ।

(ಋ. ಸಂ. ೫-೩೧-೮)

ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।

(ಋ. ಸಂ. ೮-೪-೭)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಯದು ಮತ್ತು ತುರ್ವಶರಿಬ್ಬರೂ ಇಂದ್ರನಿಂದ ಸಾಕ್ಷಾತ್ತಾಗಿ ಸಹಾಯವನ್ನು ಪಡೆದ ವಿಷಯವು ಹೇಳಿದೆ.

ಬಹುವಚನದಲ್ಲಿ ಈ ಹೆಸರುಗಳು ಬಂದಾಗೆಲ್ಲಾ ಇವೆರಡೂ ಬೇರೆ ಬೇರೆ ಸಂತತಿಯೆಂದೂ ಮತ್ತು ಎರಡು ಗುಂಪುಗಳಿಗೂ ನಿಕಟವಾದ ಸಂಬಂಧವಿತ್ತೆಂದೂ ತಿಳಿಯುತ್ತದೆ.

ತ್ರಿಂಶಚ್ಛತಂ ವರ್ಮಿಣ ಇಂದ್ರ ಸಾಕಂ ಯವ್ಯಾವತ್ಯಾಂ ಪುರುಹೂತ ಶ್ರವಸ್ಯಾ ।
ವೃಚೀವಂತಃ ಶರವೇ ಪತ್ಯಮಾನಾಃ ಪಾತ್ರಾ ಭಿಂದಾನಾ ನ್ಯರ್ಥಾನ್ಯಾಯನ್ ॥
ಯಸ್ಯ ಗಾವಾವರುಷಾ ಸೂಯವಸ್ಯೂ ಅಂತರೂ ಷು ಚರತೋ ರೇರಿಹಾಣಾ ।
ಸ ಸೃಂಜಯಾಯ ತುರ್ವಶಂ ಪರಾದಾದ್ವೃಚೀವತೋ ದೈವವಾತಾಯ ಶಿಕ್ಷನ್ ॥

(ಋ. ಸಂ. ೬-೨೭-೬, ೭)

ಎಂಬ ಋಕ್ಕುಗಳಲ್ಲಿ ಕಾಣುವ ಸನ್ನಿವೇಶಗಳಿಂದ ವೃಚೀವತ್ಸಂತತಿಯೂ ತುರ್ವಶ ಸಂತತಿಯೂ ಸಹ ಒಂದೇ ವಂಶದ ಎರಡು ಹೆಸರುಗಳೆಂದು Zimmer ಎಂಬ ಪಂಡಿತನು ಅಭಿಪ್ರಾಯಪಟ್ಟಿರುತ್ತಾನೆ. ಆದರೆ ಇಲ್ಲಿ ಆ ಎರಡು ಹೆಸರುಗಳೂ ಒಂದೇ ವಂಶದ ಹೆಸರುಗಳೆಂದು ತಾದಾತ್ಮ್ಯವನ್ನು ಸೂಚಿಸುವುದಿಲ್ಲ. ಆದುದರಿಂದ ಅವೆರಡೂ ಸಮೀಪ ಸಂಬಂಧವುಳ್ಳ ಬೇರೆ ಬೇರೆ ಹೆಸರುಗಳೆಂದು ಹೇಳಬಹುದು. ಮತ್ತು

ಶೋಣಃ ಸಾತ್ರಾ ಸಹ ಈಜೇ ಪಾಂಚಾಲೋ ರಾಜಾ ತದೇತದ್ಗಾಥಯಾಭಿಗೀತಂ ಸಾತ್ರಾಸಹೇ ಯಜಮಾನೇಽಶ್ವಮೇಧೇನ ತೌರ್ವಶಾಃ ।

(ಶ. ಬ್ರಾ. ೧೩-೫-೪-೧೬)

ಎಂಬ ಬ್ರಾಹ್ಮಣವಾಕ್ಯದಿಂದ ತುರ್ವಶರು ಪಾಂಚಾಲರ ಸಖರೆಂದೂ ಅವರ ಯಾಗಕಾಲದಲ್ಲಿ ಸಹಾಯಮಾಡಿದರೆಂದೂ ತಿಳಿಯುತ್ತದೆ. ತುರ್ವಶರ ಯುದ್ಧವನ್ನು ವರ್ಣಿಸುವಾಗ ಪರುಷ್ಣೀ ನದಿಯನ್ನು ದಾಟಿದರೆಂದು (ಋ. ಸಂ. ೭-೧೮)

ಸೂಚಿಸಿದೆ. ಆದರೆ ಯಾವ ದಿಕ್ಕಿನಿಂದ ಎನ್ನುವುದು ಸರಿಯಾಗಿ ತಿಳಿಯುವುದಿಲ್ಲ. ಇತರ ಆಧಾರಗಳಿಂದ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ದಾಟಿದರೆಂದು ಹೇಳಬಹುದು. ಯದುಗಳಿಗೂ ಇವರಿಗೂ ಇರತಕ್ಕ ಸಂಬಂಧ ವಾವುದೆಂಬುದನ್ನೂ ಸರಿಯಾಗಿ ಹೇಳಲು ಆಗುವುದಿಲ್ಲ.



॥ ಸಂಹಿತಾಪಾಠಃ ॥

ಉತ ತ್ಯಾ ಸದ್ಯ ಆರ್ಯಾ ಸರಯೋರಿಂದ್ರ ಪಾರತಃ ।

ಅರ್ಣಾಚಿತ್ರರಥಾವಧೀಃ ॥ ೧೮ ॥

॥ ಪದಪಾಠಃ ॥

ಉತ । ತ್ಯಾ । ಸದ್ಯಃ । ಆರ್ಯಾ । ಸರಯೋಃ । ಇಂದ್ರ । ಪಾರತಃ ।

ಅರ್ಣಾಚಿತ್ರರಥಾ । ಅವಧೀಃ ॥ ೧೮ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಸದ್ಯಃ ಸಪದಿ ಹೇ ಇಂದ್ರ ತ್ವಂ ತ್ಯಾ ತೌ ತಾವಾರ್ಯಾರ್ಯೌವಾರ್ಯತ್ವಾಭಿಮಾನಿನೌ ಸಂತಾವಪಿ । ಇಂದ್ರವಿಷಯಭಕ್ತಿಶ್ರದ್ಧಾರಹಿತಾವಿತ್ಯರ್ಥಃ । ಸರಯೋಃ ಸರಯ್ವಾ ನದ್ಯಾಃ ಪಾರತಃ ಪಾರೇ ತೀರೇ ವಸಂತಾವರ್ಣಾಚಿತ್ರರಥಾ ಅರ್ಣನಾಮಕಂ ಚಿತ್ರರಥನಾಮಕಂ ಚ ರಾಜಾನಾವವಧೀಃ । ಅಹಿಂಸೀಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಇಂದ್ರ—ಎಲೈ ಇಂದ್ರನೇ । ತ್ಯಾ—ಪ್ರಸಿದ್ಧರೂ । ಆರ್ಯಾ—ಆರ್ಯರ ಗುಂಪಿಗೆ ಸೇರಿದರೂ ನಿನ್ನನ್ನು ಆರಾಧಿಸದಿದ್ದವರೂ । ಸರಯೋಃ—ಸರಯೂ ನದಿಯ । ಪಾರತಃ—ದಡದಲ್ಲಿ ವಾಸಿಸುತ್ತಿದ್ದವರೂ ಆದ । ಅರ್ಣಾಚಿತ್ರರಥಾ—ಅರ್ಣ ಮತ್ತು ಚಿತ್ರರಥ ಎಂಬ ಹೆಸರುಳ್ಳ ರಾಜರನ್ನು । ಸದ್ಯಃ—ನೀನು ಸಂಕಲ್ಪಿಸಿದೊಡನೆಯೇ । ಅವಧೀಃ—ಕೊಂದಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಆರ್ಯರ ಗುಂಪಿಗೆ ಸೇರಿದ್ದರೂ ಸಹ ನಿನ್ನನ್ನು ಆರಾಧಿಸದಿದ್ದವರೂ, ಸರಯೂ ನದಿಯ ದಡದಲ್ಲಿ ವಾಸಿಸುತ್ತಿದ್ದವರೂ, ಪ್ರಸಿದ್ಧರೂ ಆದ ಅರ್ಣ ಮತ್ತು ಚಿತ್ರರಥ ಎಂಬ ಹೆಸರುಳ್ಳ ರಾಜರನ್ನು ನೀನು ಸಂಕಲ್ಪಿಸಿದೊಡನೇ ನಾಶಮಾಡಿದೆ.

## English Translation.

You have slain at once those two Aryas, Arna and Chitraratha, (dwelling) on the opposite (bank) of the Sarayu.

॥ ವಿಶೇಷವಿಷಯಗಳು ॥

ಅರ್ಣಾಚಿತ್ರರಥಾ—ಚಿತ್ರರಥ ಮತ್ತು ಅರ್ಣ ಎಂಬುವರು ಆರ್ಯವಂಶದ ರಾಜರು. ಇವರು ತುರ್ವಶ ಮತ್ತು ಯದು ಎಂಬುವರೊಡನೆ ಸರಯೂ ನದೀ ದಡದ ಮೇಲೆ ಯುದ್ಧಮಾಡುತ್ತಿರುವಾಗ ಇಂದ್ರನು ತುರ್ವಶ ಮತ್ತು ಯದುಗಳ ಪಕ್ಷವನ್ನು ವಹಿಸಿ ಅರ್ಣ ಮತ್ತು ಚಿತ್ರರಥರನ್ನು ಸೋಲಿಸಿದನೆಂದು ಹೇಳಿದೆ.

॥ ಸಂಹಿತಾಪಾಠಃ ॥

ಅನು ದ್ವಾ ಜಹಿತಾ ನಯೋಽಂಧಂ ಶ್ರೋಣಂ ಚ ವೃತ್ರಹನ್ ।

ನ ತತ್ತೇ ಸುಮ್ನಮಷ್ಟವೇ ॥ ೧೯ ॥

॥ ಪದಪಾಠಃ ॥

ಅನು । ದ್ವಾ । ಜಹಿತಾ । ನಯಃ । ಅಂಧಂ । ಶ್ರೋಣಂ । ಚ । ವೃತ್ರಹನ್ ।

ನ । ತತ್ । ತೇ । ಸುಮ್ನಂ । ಅಷ್ಟವೇ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ ವೃತ್ರಸ್ಯ ಹಿಂಸಕೇಂದ್ರ ತ್ವಂ ಜಹಿತಾ ಜಹಿತೌ ಸರ್ವೈರ್ಬಂಧುಭಿಸ್ತ್ಯಕ್ತಾವಂಧಂ ಚಕ್ಷುರ್ಹೀನಮೇಕಂ ಶ್ರೋಣಂ ಚ ಪಂಗುಮಪರಂ ಚ ದ್ವಾ ಏತೌ ದ್ವಾವನು ನಯಃ । ಅಂಧಪಂಗುತ್ವ ಪರಿಹಾರೇಣಾನುನೀತವಾನಸಿ । ಹೇ ಇಂದ್ರ ತೇ ತ್ವಯಾ ದತ್ತಂ ತತ್ಸುಮ್ನಂ ಸುಖಮಷ್ಟವೇ ವ್ಯಾಪ್ತುಂ ಕೋಽಪಿ ನ ಪ್ರಭವತೀತಿ ಶೇಷಃ ॥

॥ ಪ್ರತಿಪದಾರ್ಥ ॥

ವೃತ್ರಹನ್—ವೃತ್ರಹಂತಕನಾದ ಇಂದ್ರನೇ । ಜಹಿತಾ—ಬಂಧುಗಳಿಂದ ತ್ಯಜಿಸಲ್ಪಟ್ಟವರೂ । ಅಂಧಂ—ಕಣ್ಣಿಲ್ಲದ ಕುರುಡನಾದವನೊಬ್ಬನೂ । ಶ್ರೋಣಂ ಚ—ಕಾಲಿಲ್ಲದ ಕುಂಟನಾದವನೊಬ್ಬನೂ ಆದ । ದ್ವಾ—ಈ ಇಬ್ಬರನ್ನೂ । ಅನುನಯಃ—ಅನುಗ್ರಹಿಸಿದೆ (ಕುರುಡನಿಗೆ ಕಣ್ಣನ್ನೂ ಕುಂಟನಿಗೆ ಕಾಲನ್ನೂ ಬರಮಾಡಿದೆ) । (ಇಂದ್ರ—ಎಲೈ ಇಂದ್ರನೇ) । ತೇ—ನಿನ್ನಿಂದ ದತ್ತವಾದ । ತತ್ ಸುಮ್ನಂ—ಆ ಸುಖವನ್ನು । ಅಷ್ಟವೇ—ಅತಿಕ್ರಮಿಸಲು । ನ—ಇನ್ನಾವುದರಿಂದಲೂ ಸಾಧ್ಯವಿಲ್ಲ.

॥ ಭಾವಾರ್ಥ ॥

ವೃತ್ರಹಂತಕನಾದ ಇಂದ್ರನೇ, ಕಣ್ಣಿಲ್ಲದ ಕುರುಡನೊಬ್ಬನೂ, ಕಾಲಿಲ್ಲದ ಕುಂಟನೊಬ್ಬನೂ ಸಹ ಬಂಧುಗಳಿಂದ ತ್ಯಜಿಸಲ್ಪಟ್ಟಾಗ ನೀನು ಆ ಇಬ್ಬರನ್ನೂ ಅನುಗ್ರಹಿಸಿ ಕುರುಡನಿಗೆ ಕಣ್ಣನ್ನೂ ಕುಂಟನಿಗೆ ಕಾಲನ್ನೂ ಬರಮಾಡಿದೆ. ಮತ್ತು ನಿನ್ನಿಂದ ದತ್ತವಾದ ಆ ಸುಖವನ್ನತಿಕ್ರಮಿಸಲು ಇನ್ನಾವ ವಿಧವಾದ ಸುಖದಿಂದಲೂ ಸಾಧ್ಯವಿಲ್ಲ.

English Translation.

Slayer of Vritra, you have restored the (one who was) blind, the (other who was) lame, both abandoned (by their kin) : (it is not possible) to exceeed the happiness that is given by you.

॥ ಸಂಹಿತಾಪಾಠಃ ॥

ಶತಮಶ್ಮನ್ಮಯೀನಾಂ ಪುರಾಮಿಂದ್ರೋ ವ್ಯಾಸ್ಯತ್ ।
ದಿವೋದಾಸಾಯ ದಾಶುಷೇ ॥ ೨೦ ॥

॥ ಪದಪಾಠಃ ॥

ಶತಂ । ಅಶ್ಮನ್ಽಮಯೀನಾಂ । ಪುರಾಂ । ಇಂದ್ರಃ । ವಿ । ಆಸ್ಯತ್ ।
ದಿವಃಽದಾಸಾಯ । ದಾಶುಷೇ ॥ ೨೦ ॥

॥ ಸಾಯಣಭಾಷ್ಯಂ ॥

ಇಂದ್ರೋಽಶ್ಮನ್ಮಯೀನಾಂ ಪಾಷಾಣೈರ್ನಿರ್ಮಿತಾನಾಂ ಪುರಾಂ ಶಂಬರಸ್ಯ ಸಂಬಂಧಿನಾಂ ನಗರಾಣಾಂ ಶತಂ ಶತಸಂಖ್ಯಾಕಂ ದಿವೋದಾಸಾಯೈತನ್ನಾಮಕಾಯ ದಾಶುಷೇ ಹವಿರ್ದತ್ತವತೇ ಯಜಮಾನಾಯ ವ್ಯಾಸ್ಯತ್ । ವ್ಯಕ್ಷಿಪತ್ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಶತಂ—ನೂರಾರು ಸಂಖ್ಯೆಗಳುಳ್ಳವೂ । ಅಶ್ಮನ್ಮಯೀನಾಂ—ಬಂಡೆಗಳಿಂದ ನಿರ್ಮಿತವಾದವೂ ಆದ । ಪುರಾಂ—ಶಂಬರಾಸುರನ ಪಟ್ಟಣಗಳನ್ನು । ದಾಶುಷೇ—ಹವಿಸ್ಸನ್ನರ್ಪಿಸತಕ್ಕ । ದಿವೋದಾಸಾಯ—ದಿವೋದಾಸನೆಂಬ ಯಜ್ಞಕರ್ತನಿಗಾಗಿ । ವ್ಯಾಸ್ಯತ್—ಉರುಳಿಸಿದನು.

॥ ಭಾವಾರ್ಥ ॥

ನೂರಾರು ಸಂಖ್ಯೆಯುಳ್ಳವೂ, ಬಂಡೆಗಳಿಂದ ನಿರ್ಮಿತವಾದವೂ ಆದ ಶಂಬರಾಸುರನ ಪಟ್ಟಣಗಳನ್ನು ಇಂದ್ರನು ಉರುಳಿಸಿ ಹವಿಸ್ಸನ್ನರ್ಪಿಸತಕ್ಕ ದಿವೋದಾಸನೆಂಬ ಯಜ್ಞಕರ್ತನಿಗೆ ಸಹಾಯಮಾಡಿದನು.

English Translation.

Indra has overturned a hundred stone-built cities for Divodas, the donor of oblations.

॥ ಸಂಹಿತಾಪಾಠಃ ॥

ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ ।

ದಾಸಾನಾಮಿಂದ್ರೋ ಮಾಯಯಾ ॥ ೨೧ ॥

॥ ಪದಪಾಠಃ ॥

ಅಸ್ವಾಪಯತ್ । ದಭೀತಯೇ । ಸಹಸ್ರಾ । ತ್ರಿಂಶತಂ । ಹಥೈಃ ।

ದಾಸಾನಾಂ । ಇಂದ್ರಃ । ಮಾಯಯಾ ॥ ೨೧ ॥

॥ ಸಾಯಣಭಾಷ್ಯಂ ॥

ಇಂದ್ರೋ ಮಾಯಯಾ ಸ್ವಕೀಯಯಾ ಶಕ್ತ್ಯಾ ದಾಸಾನಾಂ ಲೋಕಾನಾಮುಪಕ್ಷಪಯಿತೄಣಾಂ ರಾಕ್ಷಸಾದೀನಾಂ ತ್ರಿಂಶತಂ ತ್ರಿಂಶತ್ಸಂಖ್ಯಾಕಾನಿ ಸಹಸ್ರಾ ಸಹಸ್ರಾಣಿ ದಭೀತಯೇ ದಭೀತಿನಾಮಕಸ್ಯಾರ್ಥಾಯ ಹಥೈರ್ಹನನಸಾಧನೈರಾಯುಧೈರಸ್ವಾಪಯತ್ । ಅವಧೀತ್ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಮಾಯಯಾ—ತನ್ನ ಪ್ರಜ್ಞಾರೂಪವಾದ ಶಕ್ತಿಯಿಂದ । ದಾಸಾನಾಂ—ಲೋಕನಾಶಕರಾದ ರಾಕ್ಷಸರ । ತ್ರಿಂಶತಂ ಸಹಸ್ರಾ—ಮುವತ್ತು ಸಹಸ್ರ ಸಂಖ್ಯೆಯನ್ನೂ । ದಭೀತಯೇ—ದಭೀತಿಯೆಂಬ ಆರ್ಯನಿಗೆ ಸಹಾಯಮಾಡಲು । ಹಥೈಃ—ಹನನಸಾಧನವಾದವೂ, ಹರಿತವಾದವೂ ಆದ ಆಯುಧಗಳಿಂದ । ಅಸ್ವಾಪಯತ್—ನಾಶಪಡಿಸಿದನು.

॥ ಭಾವಾರ್ಥ ॥

ಇಂದ್ರನು ತನ್ನ ಪ್ರಜ್ಞಾರೂಪವಾದ ಶಕ್ತಿಯಿಂದ ಲೋಕನಾಶಕರಾದ ಮುವತ್ತು ಸಹಸ್ರ ಸಂಖ್ಯೆಯ ರಾಕ್ಷಸರನ್ನು ದಭೀತಿಯೆಂಬ ಆರ್ಯನಿಗೆ ಸಹಾಯಮಾಡಲು ಹನನಸಾಧನವೂ, ಹರಿತವಾದವೂ ಆದ ಆಯುಧಗಳಿಂದ ನಾಶಪಡಿಸಿದನು.

## English Translation.

He put to sleep, by delusion, with his destructive (weapons), thirty thousand of the servile (races) for the sake of Dabhiti.

॥ ವಿಶೇಷವಿಷಯಗಳು ॥

ದಭೀತಿಂ—ದಭೀತಿಯು ಯೋಧನೆಂದು ಕೆಲವು ಕಡೆಯೂ ಋಷಿಯೆಂದು ಕೆಲವೆಡೆಯೂ ಹೇಳಿದೆ.

ಇಂದ್ರೋ ಧುನಿಂ ಚ ಚುಮುರಿಂ ಚ ದಂಭಯಞ್ಛ್ರದ್ಧಾಮನಸ್ಯಾ ಶೃಣುತೇ ದಭೀತಯೇ ।
(ಋ. ಸಂ. ೧೦-೧೧೩-೯)

ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚ ಜಘಂಥ ದಸ್ಯುಂ ಪ್ರ ದಭೀತಿಮಾವಃ ।
(ಋ. ಸಂ. ೨-೧೫-೯)

ಎಂಬ ಋಕ್ಕುಗಳಲ್ಲಿ ದಭೀತಿಯನ್ನು ರಾಜರ್ಷಿಯೆಂದೂ ಅವನಿಗಾಗಿ ಇಂದ್ರನು ಚುಮುರಿ ಮತ್ತು ಧುನಿಗಳನ್ನು ಜಯಿಸಿದುದಾಗಿಯೂ ಹೇಳಿದೆ. ಅವನು ಇಂದ್ರನಿಗೆ ಸೋಮರಸವನ್ನು ಹಿಂಡಿ ಅರ್ಪಿಸಿದುದಕ್ಕೆ ಇಂದ್ರನ ಅನುಗ್ರಹವನ್ನು ಪಡೆದನೆಂದು ಗೊತ್ತಾಗುತ್ತದೆ.

ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ । ದಾಸಾನಾಮಿಂದ್ರೋ ಮಾಯಯಾ ।
(ಋ. ಸಂ. ೪-೩೦-೨೧)

ಆರಜ್ಞಾ ದಸ್ಯೂನ್ತ್ಸಮುನಬ್ದಭೀತಯೇ ಸುಪ್ರಾವ್ಯೋ ಅಭವಃ ಸಾಸ್ಯುಕ್ಥ್ಯಃ ।
(ಋ. ಸಂ. ೨-೧೩-೯)

ಎಂಬ ಋಕ್ಕುಗಳಿಂದ ಇಂದ್ರನು ದಭೀತಿಗಾಗಿ ಮೂವತ್ತು ಸಹಸ್ರ ದಾಸರುಗಳನ್ನು ನಿದ್ರಾವಶರನ್ನಾಗಿ ಮಾಡಿದುದೂ, ದಸ್ಯುಗಳನ್ನೆಲ್ಲಾ ಹಗ್ಗವಿಲ್ಲದೇ ಬಂಧಿಸಿದುದೂ ವರ್ಣಿತವಾಗಿದೆ.



॥ ಸಂಹಿತಾಪಾಠಃ ॥

ಸ ಘೇದುತಾಸಿ ವೃತ್ರಹನ್ತ್ಸಮಾನ ಇಂದ್ರ ಗೋಪತಿಃ ।

ಯಸ್ತಾ ವಿಶ್ವಾನಿ ಚಿಚ್ಯುಷೇ ॥ ೨೨ ॥

॥ ಪದಪಾಠಃ ॥

ಸಃ । ಘ । ಇತ್ । ಉತ । ಅಸಿ । ವೃತ್ರ್ಽಹನ್ । ಸಮಾನಃ । ಇಂದ್ರ । ಗೋಽಪತಿಃ ।

ಯಃ । ತಾ । ವಿಶ್ವಾನಿ । ಚಿಚ್ಯುಷೇ ॥ ೨೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಯಸ್ತ್ವಂ ತಾ ತಾನಿ ವಿಶ್ವಾನಿ ಸಮಸ್ತಾನ್ ಶತ್ರೂನ್ ಚಿಚ್ಯುಷೇ । ಪ್ರಚ್ಯಾವಯಃ । ಹೇ ವೃತ್ರಹನ್ ವೃತ್ರಾಣಾಂ ಶತ್ರೂಣಾಂ ಹಿಂಸಕೇಂದ್ರ ಗೋಪತಿರ್ಗವಾಂ ಪಾಲಕಃ ಸ ತ್ವಂ ಸಮಾನಃ ಸರ್ವೇಷಾಂ ಯಜಮಾನಾನಾಂ ಸಮಃ ಸನ್ ಪ್ರಖ್ಯಾತೋಽಸಿ । ಘೇದಿತಿ ಪೂರಣೌ ॥

॥ ಪ್ರತಿಪದಾರ್ಥ ॥

ವೃತ್ರಹನ್—ವೃತ್ರಹಂತಕನಾದ । ಇಂದ್ರ—ಇಂದ್ರನೇ । ಗೋಪತಿಃ—ಗೋವುಗಳಿಗೆ ಪಾಲಕನಾದ । ಯಃ—ಯಾವ ನೀನು । ತಾ—ಹಿಂದೆ ಹೇಳಿದ । ವಿಶ್ವಾನಿ—ಸಮಸ್ತ ಅಸುರರನ್ನೂ । ಚಿಚ್ಯುಷೇ—ಕೆಳಕ್ಕೆ ಉರುಳಿಸಿದೆಯೋ । ಸಃ—ಅಂತಹ ನೀನು । ಸಮಾನಃ—ಸಕಲ ಯಜಮಾನರಲ್ಲಿಯೂ ಸಮಾನವಾದ ಪ್ರೀತಿಯುಳ್ಳವನಾಗಿ । ಅಸಿ—ಆಗಿದ್ದೀಯೆ.

॥ ಭಾವಾರ್ಥ ॥

ವೃತ್ರಹಂತಕನಾದ ಎಲೈ ಇಂದ್ರನೇ, ಗೋಪಾಲಕನಾದ ಯಾವ ನೀನು ಮೇಲೆ ನಿರ್ದೇಶಿಸಿದ ಸಮಸ್ತ ಅಸುರರನ್ನೂ ಕೆಳಕ್ಕೆ ಉರುಳಿಸಿ ನಾಶಮಾಡಿದೆಯೋ ಅದೇ ನೀನು ಸಕಲ ಯಜಮಾನರಲ್ಲಿಯೂ ಸಮಾನವಾದ ಪ್ರೀತಿಯುಳ್ಳವನಾಗಿದ್ದೀಯೆ.

## English Translation.

Slayer of Vritra, you are the same (to all your worshippers) the lord of cattle, who cast down all these (your enemies).



॥ ಸಂಹಿತಾಪಾಠಃ ॥

ಉತ ನೂನಂ ಯದಿಂದ್ರಿಯಂ ಕರಿಷ್ಯಾ ಇಂದ್ರ ಪೌಂಸ್ಯಂ ।

ಅದ್ಯಾ ನಕಿಷ್ಟದಾ ಮಿನತ್ ॥ ೨೩ ॥

॥ ಪದಪಾಠಃ ॥

ಉತೆ । ನೂನಂ । ಯತ್ । ಇಂದ್ರಿಯಂ । ಕರಿಷ್ಯಾಃ । ಇಂದ್ರ । ಪೌಂಸ್ಯಂ ।

ಅದ್ಯ । ನಕಿಃ । ತತ್ । ಆ । ಮಿನತ್ ॥ ೨೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಯತ್ಪೌಂಸ್ಯಂ ತ್ವದೀಯಂ ಬಲಮಿಂದ್ರಿಯಂ ಸಾಮರ್ಥ್ಯೋಪೇತಂ ನೂನಂ ಕರಿಷ್ಯಾಃ । ಕೃತವಾನಸಿ ಖಲು । ಅದ್ಯಾದ್ಯತನಃ ಕಶ್ಚಿತ್ತದ್ಬಲಂ ನಕಿರಾ ಮಿನತ್ । ನ ಹಿಂಸ್ಯಾತ್ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಇಂದ್ರ—ಎಲೈ ಇಂದ್ರನೇ । ಯತ್—ಯಾವ ನಿನ್ನ । ಪೌಂಸ್ಯಂ—ಪುರುಷ ಲಕ್ಷಣವನ್ನು ಸೂಚಿಸುವ । ಇಂದ್ರಿಯಂ—ಸಾಮರ್ಥ್ಯವನ್ನು । ನೂನಂ—ನಿಶ್ಚಯವಾಗಿಯೂ । ಕರಿಷ್ಯಾಃ—ಪ್ರಕಟಿಸಿದೆಯೋ । ತತ್—ಆ ಸಾಮರ್ಥ್ಯವನ್ನು । ಅದ್ಯ—ಈಗಿನ ಕಾಲದವರಲ್ಲಿ । ನಕಿಃ—ಯಾರೂ ಕೂಡ । ಆ ಮಿನತ್—ಹಿಂಸಿಸಲಾರರು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಾವ ನಿನ್ನ ಪುರುಷಲಕ್ಷಣವನ್ನು ತೋರಿಸುವ ಸಾಮರ್ಥ್ಯವನ್ನು ಪ್ರಕಟಿಸಿದೆಯೋ ಅದನ್ನು ಪ್ರತಿಭಟಿಸುವವರು ಈಗಿನ ಕಾಲದಲ್ಲಿ ಯಾರೂ ಇಲ್ಲ.

## English Translation.

When, indeed, Indra, you excite your vigorous manhood, there is no one at the present time who may resist it.



॥ ಸಂಹಿತಾಪಾಠಃ ॥

ವಾಮಂವಾಮಂ ತ ಆದುರೇ ದೇವೋ ದದಾತ್ವರ್ಯಮಾ ।

ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಳತೀ ॥೨೪॥

‖ ಪದಪಾಠಃ ‖

ವಾಮಂऽವಾಮಂ । ತೇ । ಆऽದುರೇ । ದೇವಃ । ದದಾತು । ಅರ್ಯಮಾ ।

ವಾಮಂ । ಪೂಷಾ । ವಾಮಂ । ಭಗಃ । ವಾಮಂ । ದೇವಃ । ಕರೂಳತೀ ‖ ೨೪ ‖

‖ ಸಾಯಣಭಾಷ್ಯಂ ‖

ಹೇ ಆದುರೇ ಶತ್ರೂಣಾಮಾದಾರಯಿತರಿಂದ್ರ ತೇ ತವ ವಾಮಂ ವಾಮಂ ಯದ್ಯದ್ವನನೀಯಂ ಸಂಭಜನೀಯಂ ಧನಮಸ್ತಿ ಲೋಕೇ ತದ್ವಾಮಂ ವಸ್ವರ್ಯಮಾರೀಣಾಂ ನಿಯಮಯಿತ್ರೈತನ್ನಾಮಕೋ ದೇವೋ ದದಾತು । ಪ್ರಯಚ್ಛತು । ತಥಾ ಕರೂಳತೀ ಕೃತ್ತದಂತಃ ಪೂಷಾ ಪೋಷಕೋ ದೇವೋ ವಾಮಂ ಧನಂ ದದಾತು । ಭಗೋऽಪಿ ಧನಂ ದದಾತು । ನನು ಕರೂಳತೀತ್ಯೇತತ್ಸಂನಿಹಿತತ್ವಾದ್ಭಗ ಇತ್ಯನೇನ ಸಂಬಂಧನೀಯಂ । ಅಥವಾರ್ಯಮಾದೀನಾಂ ತ್ರಯಾಣಾಮಪಿ ವಿಶೇಷಣತ್ವೇನ ಭಾವ್ಯಂ ' ಕಥಂ ಪೂಷ್ಣೋ ವಿಶೇಷಣಂ ಸ್ಯಾದಿತಿ ಸಾಕಾಂಕ್ಷತ್ವಾತ್ ನ । ಸಾಂನಿಧ್ಯಾಕಾಂಕ್ಷಯೋಃ ಸದ್ಭಾವೇऽಪಿ ಯೋಗ್ಯತಾಮಂತರೇಣಾನ್ವಯಾಯೋಗಾತ್ । ತಸ್ಮಾತ್ಪೂಷಾ ಪ್ರಪಿಷ್ಟಭಾಗೋऽದಂತಕೋ ಹಿ । ತೈ.ಸಂ. ೨-೬-೮-೫ । ಇತ್ಯಾದಿಶ್ರುತಿಷು ಪೂಷ್ಣ ಏವಾದಂತಕತ್ವೇನ ಪ್ರಸಿದ್ಧೇರ್ವ್ಯವಹಿತಸ್ಯಾಪಿ ತಸ್ಯೈವ ವಿಶೇಷತ್ವಂ ಯುಕ್ತಂ । ವಾಮಂ ವನನೀಯಂ ಭವತೀತ್ಯಾದಿ ನಿರುಕ್ತಂ । ೬-೩೧ । ಅತ್ರ ದ್ರಷ್ಟವ್ಯಂ ‖

‖ ಪ್ರತಿಪದಾರ್ಥ ‖

ಆದುರೇ—ಶತ್ರುಗಳನ್ನು ಸೀಳಿ ನಾಶಪಡಿಸತಕ್ಕ ಎಲೈ ಇಂದ್ರನೇ । ತೇ—ನಿನಗೆ ಸಂಬಂಧಿಸಿದುದೂ । ವಾಮಂವಾಮಂ—ಸಕಲರಿಗೂ ಪೂಜ್ಯವಾದುದೂ ಆದ ಯಾವ ಯಾವ ಧನವಿದೆಯೋ ಅದನ್ನು । ಅರ್ಯಮಾ—ಅರ್ಯಮನೆಂಬ । ದೇವಃ—ದೇವನು । ದದಾತು—(ನಮಗೆ) ಹಂಚಿಕೊಡಲಿ । ಕರೂಳತೀ—ದಂತರಹಿತನಾದ । ಪೂಷಾ ದೇವಃ—ಪೂಷದೇವನು । ವಾಮಂ—ಪೂಜ್ಯವಾದ ಆ ಧನವನ್ನು (ಹಂಚಿಕೊಡಲಿ) । ಭಗಃ—ಭಗನೆಂಬ ದೇವನೂ ಸಹ । ವಾಮಂ—ಅದ್ಭುತವಾದ ಆ ಧನವನ್ನು (ನಮಗೆ ಹಂಚಲಿ)

‖ ಭಾವಾರ್ಥ ‖

ಶತ್ರುಗಳನ್ನು ಸೀಳಿ ನಾಶಪಡಿಸತಕ್ಕ ಎಲೈ ಇಂದ್ರನೇ, ಸಕಲರಿಗೂ ಪೂಜ್ಯನಾದ ನಿನ್ನ ಯಾವ ಯಾವ ಧನವಿದೆಯೋ ಆ ಧನವನ್ನು ಶತ್ರುವನ್ನು ನಿಯಮಿಸಿ ದಂಡಿಸತಕ್ಕ ಆರ್ಯಮನೂ, ಕೃತ್ತದಂತನಾದ ಪೂಷನೂ, ಭಗನೂ ಸಹ ನಮಗೆಲ್ಲರಿಗೂ ಹಂಚಿಕೊಡಲಿ.

## English Translation.

Destroyer of foes, may the devine Aryaman distribute your precious wealth ; (may) Pushan (bestow it), (may) Bhaga (bestow it) ; may the toothless deity bestow the desired wealth.

# ಮೂವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಕಯಾ ನ ಇತಿ ಪಂಚದಶರ್ಚಂ ದಶಮಂ ಸೂಕ್ತಂ ವಾಮದೇವಸ್ಯಾರ್ಷಮೈಂದ್ರಂ ಗಾಯತ್ರಂ। ಅಭೀ ಷು ಣ ಇತ್ಯೇಷಾ ಪಾದನಿಚೃನ್ನಾಮ ಗಾಯತ್ರೀ ತ್ರಯಃ ಸಪ್ತಕಾಃ ಪಾದನಿಚೃದಿತಿ ತಲ್ಲಕ್ಷಣಯುಕ್ತತ್ವಾತ್ । ತಥಾ ಚಾನುಕ್ರಮಣಿಕಾ। ಕಯಾ ಪಂಚೋನಾಭೀ ಷು ಪಾದನಿಚೃದಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ । ಅಗ್ನಿಷ್ಟೋಮೇ ಚಾತುರ್ವಿಂಶಿಕೇಽಹನಿ ಚ ಮಾಧ್ಯಂದಿನೇ ಸವನೇ ಮೈತ್ರಾವರುಣಸ್ಯ ಕಯಾ ನ ಇತ್ಯಾದ್ಯಸ್ತೃಚಃ ಸ್ತೋತ್ರಿಯಃ । ಸೂತ್ರಿತಂ ಚ । ಹೋತ್ರಕಾಣಾಂ ಕಯಾ ನಶ್ಚಿತ್ರ ಆ ಭುವತ್ । ಆ. ೭-೪ । ಇತಿ ॥ ವರುಣಪ್ರಘಾಸೇಷು ಕಾಯಸ್ಯ ಹವಿಷೋಽನುವಾಕ್ಯಾ ಕಯಾ ನ ಇತ್ಯೇಷಾ । ತಥಾ ಚ ಸೂತ್ರಿತಂ । ಕಯಾ ನಶ್ಚಿತ್ರ ಆ ಭುವದ್ಧಿರಣ್ಯಗರ್ಭಃ ಸಮವರ್ತತಾಗ್ರೇ ॥ ಆ. ೨-೧೭ । ಇತಿ ॥

ಅನುವಾದವು—ಕಯಾ ನ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಇಂದ್ರನು ದೇವತೆಯು ; ಗಾಯತ್ರೀ ಛಂದಸ್ಸು. ಅಭೀ ಷು ಣಃ ಎಂಬ ಋಕ್ಕು (ಈ ಸೂಕ್ತದ ಮೂರನೆಯ ಋಕ್ಕು) ಪಾದನಿಚೃತ್ ಎಂಬ ಗಾಯತ್ರೀಛಂದಸ್ಸಿನ ಪ್ರಭೇದವು. ತ್ರಯಃ ಸಪ್ತಕಾಃ ಪಾದನಿಚೃತ್ (ಅನು. ೪-೪) ಎಂದರೆ ಏಳೇಳು ಅಕ್ಷರಗಳ ಮೂರು ಪಾದಗಳಿರುವ ಋಕ್ಕಿಗೆ ಪಾದನಿಚೃತ್ ಎಂದು ಅನುಕ್ರಮಣಿಕೆಯಲ್ಲಿ ಈ ಛಂದಸ್ಸಿನ ಲಕ್ಷಣವನ್ನು ಹೇಳಿರುವುದು. ಈ ಸೂಕ್ತದ ವಿಷಯವಾಗಿ ಅನುಕ್ರಮಣಿಕೆಯಲ್ಲಿ - ಕಯಾ ಪಂಚೋನಾಭೀ ಷು ಪಾದನಿಚೃತ್ ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಅಗ್ನಿಷ್ಟೋಮಯಾಗದಲ್ಲಿಯೂ ಚಾತುರ್ವಿಂಶಕವೆಂಬ ಯಾಗದಲ್ಲಿಯೂ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸಬೇಕಾದ ಸ್ತೋತ್ರಿಯ ತೃಚಕ್ಕಾಗಿ ಕಯಾ ನಃ ಎಂದು ಮೊದಲಾಗುವ ಈ ಸೂಕ್ತದ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಹೋತ್ರಕಾಣಾಂ ಕಯಾ ನಶ್ಚಿತ್ರ ಆ ಭುವತ್ ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು. ವರುಣಪ್ರಘಾಸವೆಂಬ ಇಷ್ಟಿಯಲ್ಲಿಯೂ ಸಹ ಹವಿಸ್ಸನ್ನು ಹೋಮಮಾಡುವಾಗ ಕಯಾ ನಃ ಎಂಬ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಕಯಾ ನಶ್ಚಿತ್ರ ಆ ಭುವದ್ಧಿರಣ್ಯಗರ್ಭಃ ಸಮವರ್ತತಾಗ್ರೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೭)

## ಸೂಕ್ತ—೩೧

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೩೧ ॥

ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ— ೨೪, ೨೫, ೨೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

ಋಷಿಃ—ವಾಮದೇವಃ ॥

ದೇವತಾ—ಇಂದ್ರಃ ॥

ಛಂದಃ—೧, ೨, ೪-೧೫ ಗಾಯತ್ರೀ । ೩ ಪಾದನಿಚೃತ್ ॥

॥ ಸಂಹಿತಾಪಾಠಃ ॥

ಕಯಾ ನಶ್ಚಿತ್ರ ಆ ಭುವದೂತೀ ಸದಾವೃಧಃ ಸಖಾ ।

ಕಯಾ ಶಚಿಷ್ಠಯಾ ವೃತಾ ॥ ೧ ॥

॥ ಪದಪಾಠಃ ॥

ಕಯಾ । ನಃ । ಚಿತ್ರಃ । ಆ । ಭುವತ್ । ಊತೀ । ಸದಾऽವೃಧಃ । ಸಖಾ ।

ಕಯಾ । ಶಚಿಷ್ಠಯಾ । ವೃತಾ । ೧ ॥

॥ ಸಾಯಣಭಾಷ್ಯಂ ॥

ಸದಾವೃಧಃ ಸದಾ ವರ್ಧಮಾನಶ್ಚಿತ್ರಶ್ಚಾಯನೀಯಃ ಪೂಜನೀಯಃ ಸಖಾ ಮಿತ್ರಭೂತ ಇಂದ್ರಃ ಕಯೋತೀ ಊತ್ಯಾ ತರ್ಪಣೇನ ನೋऽಸ್ಮಾನಾ ಭುವತ್ । ಅಭಿಮುಖ್ಯೇನ ಭವೇತ್ । ಶಚಿಷ್ಠಯಾ ಪ್ರಜ್ಞಾವತ್ತಮಯಾ ಪ್ರಜ್ಞಾಸಹಿತಮನುಷ್ಠೀಯಮಾನೇನ ಕಯಾ ವೃತಾ ಕೇನ ವರ್ತನೇನ ಕರ್ಮಣಾ ಚಾಭಿಮುಖೋ ಭವೇತ್ ॥

॥ ಪ್ರತಿಪದಾರ್ಥ ॥

ಸದಾವೃಧಃ—ಸರ್ವದಾ ವೃದ್ಧಿಯನ್ನು ಹೊಂದುತ್ತಿರುವವನೂ । ಚಿತ್ರಃ—ಪೂಜ್ಯನೂ । ಸಖಾ—ಮಿತ್ರಭೂತನೂ ಆದ ಇಂದ್ರನು । ಕಯಾ—ಯಾವ ವಿಧವಾದ । ಊತೀ—ತೃಪ್ತಿಗಳಿಂದ । ನಃ—ನಮ್ಮನ್ನು । ಆ ಭುವತ್—ಎದುರುಗೊಂಡು ಬರುತ್ತಾನೆ । ಶಚಿಷ್ಠಯಾ—ಪ್ರಜ್ಞೆಯೊಡಗೂಡಿದ । ಕಯಾ—ಯಾವ ವಿಧವಾದ । ವೃತಾ—ಕರ್ಮದಿಂದ (ನಮ್ಮ ಅಭಿಮುಖನಾಗಿ ಬರುವನು ?).

॥ ಭಾವಾರ್ಥ ॥

ಸರ್ವದಾ ವೃದ್ಧಿಯನ್ನು ಹೊಂದುತ್ತಿರುವವನೂ, ಪೂಜ್ಯನೂ, ಮಿತ್ರಭೂತನೂ ಆದ ಇಂದ್ರನು ಯಾವ ವಿಧವಾದ ತೃಪ್ತಿಗಳಿಂದ ನಮ್ಮ ಅಭಿಮುಖವಾಗಿ ಬರುತ್ತಾನೆ? ಪ್ರಜ್ಞಾಪೂರ್ವಕವಾದ ಯಾವ ಕರ್ಮದಿಂದ ನಮ್ಮ ಅಭಿಮುಖನಾಗಿ ಬರುತ್ತಾನೆ?

## English Translation.

By what means may he who is ever augmenting, who is wonderful who is our friend, be present with us, by what most effective rite ?



॥ ಸಂಹಿತಾಪಾಠಃ ॥

ಕಸ್ತ್ವಾ ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ ।

ದೃಳ್ಹಾ ಚಿದಾರುಜೇ ವಸು ॥ ೨ ॥

॥ ಪದಪಾಠಃ ॥

ಕಃ । ತ್ವಾ । ಸತ್ಯಃ । ಮದಾನಾಂ । ಮಂಹಿಷ್ಠಃ । ಮತ್ಸತ್ । ಅಂಧಸಃ ।

ದೃಳ್ಹಾ । ಚಿತ್ । ಆಽರುಜೇ । ವಸು ॥ ೨ ॥

॥ ಸಾಯಣಭಾಷ್ಯಂ ॥

ಮಂಹಿಷ್ಠಃ ಪೂಜನೀಯಃ ಸತ್ಯಃ ಸತ್ಯಭೂತೋ ಮದಾನಾಂ ಮಾದಯಿತ್ರೀಣಾಂ ಮಧ್ಯೇ ಕೋ ಮದಕರೋಽಂಧಸಃ ಸೋಮಸ್ಯ ರಸೋ ದೃಳ್ಹಾ ಚಿತ್ ದೃಢಾನ್ಯಪಿ ವಸು ವಸೂನಿ ಶತ್ರೂಣಾಂ ಧನಾನ್ಯಾರುಜ ಆ ಸಮಂತಾದ್ಭಂಕ್ತುಂ ಹೇ ಇಂದ್ರ ತ್ವಾ ತ್ವಾಂ ಮತ್ಸತ್ । ಮಾದಯೇತ್ ॥

॥ ಪ್ರತಿಪದಾರ್ಥ ॥

ಮದಾನಾಂ—ಮದಕಾರಕಗಳಾದ ರಸಗಳಲ್ಲಿ । ಮಂಹಿಷ್ಠಃ—ಅತ್ಯಂತಪೂಜ್ಯವಾದುದೂ । ಸತ್ಯಃ—ಸತ್ಯಾತ್ಮಕವಾದುದೂ ಆದ । ಕಃ ಅಂಧಸಃ—ಯಾವ ಸೋಮರಸವು । ದೃಳ್ಹಾ ಚಿತ್—ಅತ್ಯಂತ ದೃಢವಾಗಿದ್ದರೂ ಸಹ । ವಸು—ಶತ್ರುಧನಗಳನ್ನು । ಆರುಜೇ—ಪೂರ್ಣವಾಗಿ ನಾಶಮಾಡುವುದಕ್ಕೆ । ತ್ವಾ—ನಿನ್ನನ್ನು । ಮತ್ಸತ್—ಹುರಿದುಂಬಿಸಬಲ್ಲದು ?

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಮದಕಾರಕಗಳಾದ ರಸಗಳಲ್ಲಿ ಅತ್ಯಂತ ಪೂಜ್ಯವಾದುದೂ, ಸತ್ಯಾತ್ಮಕವಾದುದೂ ಆದ ಯಾವ ಸೋಮರಸವು ಅತ್ಯಂತ ದೃಢವಾಗಿದ್ದರೂ ಸಹ ಶತ್ರುಧನಗಳನ್ನು ಪೂರ್ಣವಾಗಿ ನಾಶಮಾಡುವುದಕ್ಕೆ ನಿನ್ನನ್ನು ಹುರಿದುಂಬಿಸಬಲ್ಲದು ?

English Translation.

What genuine and most esteemed of the exhilarating juice of the (sacrificial) beverage may inspirit you to demolish the substantial treasures (of the foe).

॥ ಸಂಹಿತಾಪಾಠಃ ॥

ಅಭೀ ಷು ಣಃ ಸಖೀನಾಮವಿತಾ ಜರಿತೄಣಾಂ ।

ಶತಂ ಭವಾಸ್ಯೂತಿಭಿಃ ॥ ೩ ॥

॥ ಪದಪಾಠಃ ॥

ಅಭಿ । ಸು । ನಃ । ಸಖೀನಾಂ । ಅವಿತಾ । ಜರಿತೄಣಾಂ ।

ಶತಂ । ಭವಾಸಿ । ಊತಿಽಭಿಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಸಖೀನಾಂ ಸಮಾನಖ್ಯಾತೀನಾಂ ಜರಿತೄಣಾಂ ಸ್ತೋತೄಣಾಮವಿತಾ ರಕ್ಷಿತಾ ತ್ವಂ ಶತಂ ಶತೇನ ಬಹ್ವೀಭಿರೂತಿಭೀ ರಕ್ಷಾಭಿಃ ಸಹ ನೋಽಸ್ಮಾಕಂ ಸು ಸುಷ್ಠ್ವಭಿ ಭವಾಸಿ । ಅಭಿಮುಖೋ ಭವ ॥ .

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಸಖೀನಾಂ—ನಿನ್ನ ಮಿತ್ರಭೂತರಾದ । ಜರಿತೄಣಾಂ—ಸ್ತೋತೃಗಳಿಗೆ । ಅವಿತಾ—ರಕ್ಷಕನಾದ ನೀನು । ಶತಂ—ಅನೇಕ ವಿಧವಾದ । ಊತಿಭಿಃ—ರಕ್ಷಣೆಗಳೊಂದಿಗೆ । ನಃ—ನಮಗೆ । ಸು—ಅತಿಶಯವಾಗಿ । ಅಭಿ ಭವಾಸಿ—ಅಭಿಮುಖನಾಗು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿನ್ನ ಮಿತ್ರಭೂತರಾದ ಸ್ತೋತೃಗಳಿಗೆ ಪೂರ್ಣವಾದ ರಕ್ಷಕನು. ನಾವೂ ಸಹ ನಿನ್ನನ್ನು ಸ್ತುತಿಸುವುದರಿಂದ ನಿನ್ನ ಮಿತ್ರರು. ಆದುದರಿಂದ ಅನೇಕವಿಧವಾದ ರಕ್ಷಣೆಗಳೊಂದಿಗೆ ನಮ್ಮ ಅಭಿಮುಖನಾಗು

English Translation.

The protector of us your friends and praisers, be present with a hundred protections.

॥ ಸಂಹಿತಾಪಾಠಃ ॥

ಅಭೀ ನ ಆ ವವೃತ್ಸ್ವ ಚಕ್ರಂ ನ ವೃತ್ತಮರ್ವತಃ ।

ನಿಯುದ್ಭಿಶ್ಚರ್ಷಣೀನಾಂ ॥ ೪ ॥

॥ ಪದಪಾಠಃ ॥

ಅಭಿ । ನಃ । ಆ । ವವೃತ್ಸ್ವ । ಚಕ್ರಂ । ನ । ವೃತ್ತಂ । ಅರ್ವತಃ ।

ನಿಯುತ್ಽಭಿಃ । ಚರ್ಷಣೀನಾಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ವೃತ್ತಂ ಚಕ್ರಂ ನ ವರ್ತಮಾನಂ ಚಕ್ರಮಿವಾರ್ವತೆ ಉಪಗಂತ್ರ್ಯಾನ್ನೋಽಸ್ಮಾನ್ ಚರ್ಷಣೀನಾಮಸ್ಮದೀಯಾನಾಂ ಮನುಷ್ಯಾಣಾಂ ನಿಯುದ್ಭಿಃ ಸ್ತುತಿಭಿರಭ್ಯಾ ವವೃತ್ಸ್ವ। ಅಭ್ಯಾವರ್ತಸ್ವ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಚರ್ಷಣೀನಾಂ—ಮಾನವರ । ನಿಯುದ್ಭಿಃ—ಸ್ತುತಿಗಳಿಂದ (ಹರ್ಷಿತನಾಗಿ) । ವೃತ್ತಂ—ಸುತ್ತುತ್ತಿರುವ । ಚಕ್ರಂ ನ—ಚಕ್ರದಂತೆ । ಅರ್ವತಃ—ನಿನ್ನನ್ನೇ ಸಹಾಯಕ್ಕಾಗಿ ಮರೆಹೊಗುವ । ನಃ—ನಮ್ಮನ್ನು । ಅಭಿ—ಎದುರುಕೊಂಡು । ಆ ವವೃತ್ಸ್ವ—ಹಿಂತಿರುಗಿ ಬಾ.

॥ ಭಾವಾರ್ಥ ॥

ಎಲೈ ಇಂದ್ರನೇ, ಮಾನವರ ಸ್ತುತಿಗಳಿಂದ ಹರ್ಷಿತನಾಗಿ ನೀನು, ಸುತ್ತುತ್ತಲಿರುವ ಚಕ್ರದಂತೆ, ನಿನ್ನನ್ನೇ ಸಹಾಯಾರ್ಥವಾಗಿ ಮರೆಹೋಗುವ ನಮ್ಮನ್ನು ಎದುರುಕೊಂಡು ಹಿಂತಿರುಗಿ ಬಾ.

English Translation.

(Induced) by the praises of men, return like a revolving wheel to us, dependent (upon your favour).



॥ ಸಂಹಿತಾಪಾಠಃ ॥

ಪ್ರವತಾ ಹಿ ಕ್ರತೂನಾಮಾ ಹಾ ಪದೇವ ಗಚ್ಛಸಿ ।

ಅಭಕ್ಷಿ ಸೂರ್ಯೇ ಸಚಾ ॥ ೫ ॥

॥ ಪದಪಾಠಃ ॥

ಪ್ರವತಾ । ಹಿ । ಕ್ರತೂನಾಂ । ಆ । ಹ । ಪದಾಽಇವ । ಗಚ್ಛಸಿ ।

ಅಭಕ್ಷಿ । ಸೂರ್ಯೇ । ಸಚಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಕ್ರತೂನಾಂ ಕರ್ಮಣಾಂ ಯಜಮಾನಾನಾಂ ಸಂಬಂಧಿನಃ ಪ್ರವತಾ ಪ್ರವತಃ ಪ್ರವಣಾನ್ದೇಶಾನ್ಪದೇವ ಪದಾನಿ ಸ್ವಕೀಯಾನಿ ಸ್ಥಾನಾನೀವಾ ಗಚ್ಛಸಿ ಹಿ । ಆಗತೋ ಭವಸಿ ಖಲು । ಹೇತಿ ಪೂರಣಃ । ಹೇ ಇಂದ್ರ ತ್ವಾಮಹಂ ಸೂರ್ಯೇ ಸೂರ್ಯೇಣ ಸಚಾ ಸಹಾಭಕ್ಷಿ। ಭಜೇ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಕ್ರತೂನಾಂ—ಕರ್ಮಕರ್ತರಾದ ಯಜಮಾನರಿಗೆ ಸೇರಿದ । ಪ್ರವತಾ—ಅಧೋ ಭಾಗದ ಪ್ರದೇಶಗಳಿಗೆ । ಪದೇವ—ನಿನ್ನ ಸ್ವತಂತ್ರಪ್ರದೇಶಗಳೇ ಎಂದು ತಿಳಿದು । ಆ ಗಚ್ಛಸಿ ಹಿ—ನೀನು ಬರುತ್ತೀಯಲ್ಲವೇ (ಎಲೈ ಇಂದ್ರನೇ) । ಸೂರ್ಯೇ ಸಚಾ—ಸೂರ್ಯನೊಂದಿಗೆ । ಅಭಕ್ಷಿ—ನಿನ್ನನ್ನು ಪೂಜಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಕರ್ಮಕರ್ತರಾದ ಯಜಮಾನರಿಗೆ ಸೇರಿದ ಅಧೋ ಭಾಗದ ಯಜ್ಞಪ್ರದೇಶಗಳಿಗೆ ನೀನು, ಅವು ನಿನ್ನ ಸ್ವಂತ ಪ್ರದೇಶಗಳೇ ಎಂದು ತಿಳಿದು ಬರುವುದು ಖಂಡಿತ. ಆ ಕಾಲದಲ್ಲಿ ಸೂರ್ಯನೊಂದಿಗೆ ಸೇರಿಸಿ ನಿನ್ನನ್ನು ಪೂಜಿಸುತ್ತೇವೆ.

## English Translation.

Come in a downward (direction) to sacred rites, as if to your own station : I glorify you together with the sun.

---

॥ ಸಂಹಿತಾಪಾಠಃ ॥

ಸಂ ಯತ್ತ ಇಂದ್ರ ಮನ್ಯವಃ ಸಂ ಚಕ್ರಾಣಿ ದಧನ್ವಿರೇ ।
ಅಧ ತ್ವೇ ಅಧ ಸೂರ್ಯೇ ॥ ೬ ॥

॥ ಪದಪಾಠಃ ॥

ಸಂ । ಯತ್ । ತೇ । ಇಂದ್ರ । ಮನ್ಯವಃ । ಸಂ । ಚಕ್ರಾಣಿ । ದಧನ್ವಿರೇ ।
ಅಧ । ತ್ವೇ ಇತಿ । ಅಧ । ಸೂರ್ಯೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದರ್ಥಂ ಮನ್ಯವಃ ಸ್ತುತಯೋ ಯದ್ಯದಾ ಸಂ ದಧನ್ವಿರೇ । ಅಸ್ಮಾಭಿರನುಮನ್ಯಂತೇ। ಚಕ್ರಾಣಿ ಚಂಕ್ರಮಣಾನಿ ಕರ್ಮಾಣಿ ಚ ಸಂ ದಧನ್ವಿರೇ ಅಥ ತದಾನೀಂ ತಾಃ ಸ್ತುತಯಸ್ತಾನಿ ಕರ್ಮಾಣಿ ಚ ತ್ವೇ ತ್ವಯಿ ಭವಂತಿ । ಅಥ ತದನಂತರಂ ಸೂರ್ಯೇ ಚ ಭವಂತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿದ । ಮನ್ಯವಃ—ಸ್ತುತಿಗಳು । ಯತ್—ಯಾವಾಗ । ಸಂ ದಧನ್ವಿರೇ—ನಮ್ಮಿಂದ ಪಠಿಸಲ್ಪಡುವುವೋ (ಮತ್ತು) । ಚಕ್ರಾಣಿ—ಯಾಗಾದಿ ಕರ್ಮಗಳೂ । ಸಂ (ದಧನ್ವಿರೇ)—ಆಚರಿಸಲ್ಪಡುವುವೋ । ಅಥ—ಆ ಒಡನೆಯೇ (ಆ ಸ್ತುತಿಗಳೂ ಮತ್ತು ಕರ್ಮಗಳೂ) । ತ್ವೇ—ನಿನ್ನಲ್ಲೇ ಅರ್ಪಿತವಾಗುತ್ತವೆ । ಅಥ—ಅನಂತರ । ಸೂರ್ಯೇ—ಸೂರ್ಯನಲ್ಲಿ ಅರ್ಪಿತವಾಗುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನಾವು ಯಾವಾಗ ಸ್ತುತಿಗಳನ್ನು ಪಠಿಸುವೆವೋ ಮತ್ತು ಯಾಗಾದಿ ಕರ್ಮಗಳನ್ನಾಚರಿಸುವೆವೋ ಆಗ ಆ ಸ್ತುತಿಗಳೂ, ಕರ್ಮಗಳೂ ಸಹ ಮೊದಲು ನಿನ್ನಲ್ಲಿ ಅರ್ಪಿತವಾಗಿ ಅನಂತರ ಸೂರ್ಯನಲ್ಲಿ ಅರ್ಪಿತವಾಗುತ್ತವೆ.

## English Translation.

When your praises, and these sacred rites Indra, are addressed to you, thay first belong to you, and next to Surya.

॥ ಸಂಹಿತಾಪಾಠಃ ॥

ಉತ ಸ್ಮಾ ಹಿ ತ್ವಾಮಾಹುರಿನ್ಮಘವಾನಂ ಶಚೀಪತೇ ।

ದಾತಾರಮವಿದೀಧಯುಂ ॥ ೭ ॥

॥ ಪದಪಾಠಃ ॥

ಉತ । ಸ್ಮ । ಹಿ । ತ್ವಾಂ । ಆಹುಃ । ಇತ್ । ಮಘವಾನಂ । ಶಚೀಽಪತೇ ।

ದಾತಾರಂ । ಅವಿಽದೀಧಯುಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಶಚೀಪತೇ ಕರ್ಮಪಾಲಕೇಂದ್ರ ಉತಾಪಿ ಚ ಮಘವಾನಂ ಧನವಂತಂ ದಾತಾರಂ ಸ್ತೋತೃಭ್ಯೋಽಭೀಷ್ಟಪ್ರದಂ ತ್ವಾ ತ್ವಾಮವಿದೀಧಯುಂ। ವಿದೀಧಯುರದೀಪ್ಯಮಾನಃ । ನ ವಿದೀಧಯುರವಿದೀಧಯುಃ । ತಂ ದೀಪ್ಯಮಾನಮಾಹುಃ ಸ್ಮ । ಪ್ರವದಂತಿ ಖಲು । ಹೀದಿತಿ ದ್ವಯಂ ಪೂರಣಾರ್ಥಂ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಶಚೀಪತೇ—ಕರ್ಮಪಾಲಕನಾದ ಇಂದ್ರನೇ । ಮಘವಾನಂ—ಧನವಂತನಾದ । ತ್ವಾಂ—ನಿನ್ನನ್ನು । ದಾತಾರಂ—ದಾತೃವೆಂದೂ । ಅವಿದೀಧಯುಂ—ಪ್ರಕಾಶಮಾನನೆಂದೂ । ಆಹುಃ ಸ್ಮ—ಕರೆಯುತ್ತಾರಲ್ಲವೇ ?

॥ ಭಾವಾರ್ಥ ॥

ಕರ್ಮಪಾಲಕನಾದ ಎಲೈ ಇಂದ್ರನೇ, ಧನವಂತನಾದ ನಿನ್ನನ್ನು ದಾತೃವೆಂದೂ ಪ್ರಕಾಶಮಾನನೆಂದೂ ನಿನ್ನ ಸ್ತೋತೃಗಳು ನಿನ್ನನ್ನು ಕರೆಯುತ್ತಾರೆ. ಇದು ಖಂಡಿತ.

English Translation.

Lord of holy acts, they call you Maghvan, the munificent, the resplendent.

॥ ಸಂಹಿತಾಪಾಠಃ ॥

ಉತ ಸ್ಮಾ ಸದ್ಯ ಇತ್ಪರಿ ಶಶಮಾನಾಯ ಸುನ್ವತೇ ।
ಪುರೂ ಚಿನ್ಮಂಹಸೇ ವಸು ॥ ೮ ॥

॥ ಪದಪಾಠಃ ॥

ಉತ । ಸ್ಮ । ಸದ್ಯಃ । ಇತ್ । ಪರಿ । ಶಶಮಾನಾಯ । ಸುನ್ವತೇ ।
ಪುರು । ಚಿತ್ । ಮಂಹಸೇ । ವಸು ॥ ೮ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ತ್ವಂ ಸದ್ಯ ಇತ್ಸದ್ಯ ಏವ ಶಶಮಾನಾಯ ಸ್ತುತಿಂ ಕುರ್ವತೇ । ಶಶಮಾನಃ ಶಂಸಮಾನಃ । ನಿ. ೬-೮ । ಇತಿ ಯಾಸ್ಕೇನೋಕ್ತತ್ವಾತ್ । ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ಪುರು ಚಿತ್ಪುರೂಣಿ ಬಹೂನ್ಯಪಿ ವಸು ವಸೂನಿ ಧನಾನಿ ಪರಿ ಪರಿತೋ ಮಂಹಸೇ ಸ್ಮ । ಪ್ರಯಚ್ಛಸಿ ಖಲು ॥

॥ ಪ್ರತಿಪದಾರ್ಥ ॥

ಉತ—ಮತ್ತು । (ಇಂದ್ರ—ಎಲೈ ಇಂದ್ರನೇ) । ಶಶಮಾನಾಯ—ನಿನ್ನನ್ನು ಸ್ತುತಿಸುವವನೂ । ಸುನ್ವತೇ—ನಿನಗಾಗಿ ಸೋಮವನ್ನು ಹಿಂಡುವವನೂ ಆದ ಯಜಮಾನನಿಗೆ । ಸದ್ಯ ಇತ್—ನೀನು ಸಂಕಲ್ಪಿಸಿ ದೊಡನೆಯೇ । ಪುರು ಚಿತ್—ಅನೇಕವಾದ । ವಸು—ಧನಗಳನ್ನು । ಪರಿ—ಸುತ್ತಲೂ (ಅನೇಕ ಪ್ರಕಾರವಾಗಿ)। ಮಂಹಸೇ ಸ್ಮ—ಕೊಡುತ್ತೀಯಲ್ಲವೆ ?

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ಸ್ತುತಿಸುವವನೂ, ನಿನಗಾಗಿ ಸೋಮವನ್ನು ಹಿಂಡುವವನೂ ಆದ ಯಜಮಾನನಿಗೆ ನೀನು ಸಂಕಲ್ಪಿಸಿದೊಡನೆಯೇ ಅನೇಕ ರೂಪವಾದ ಧನಗಳನ್ನು ಅನೇಕಪ್ರಕಾರವಾಗಿ ಕೊಡುತ್ತೀ ಯೆಂಬುದು ಖಂಡಿತ.

English Translation.

And verily you give promptly abundant wealth to him who praises you and offers you libations.

॥ ಸಂಹಿತಾಪಾಠಃ ॥

ನಹಿ ಷ್ಮಾ ತೇ ಶತಂ ಚನ ರಾಧೋ ವರಂತ ಆಮುರಃ ।
ನ ಚ್ಯೌತ್ನಾನಿ ಕರಿಷ್ಯತಃ ॥ ೯ ॥

॥ ಪದಪಾಠಃ ॥

ನಹಿ । ಸ್ಮ । ತೇ । ಶತಂ । ಚನ । ರಾಧಃ । ವರಂತೇ । ಆ೭ಮುರಃ ।
ನ । ಚ್ಯೌತ್ನಾನಿ । ಕರಿಷ್ಯತಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಮುರೋ ಬಾಧಕಾ ರಾಕ್ಷಸಾದಯಸ್ತೇ ತ್ವದೀಯಂ ಶತಂ ಚನ ಶತಪರಿಮಿತಮಪಿ ರಾಧೋ ಧನಂ ನಹಿ ವರಂತೇ ಸ್ಮ । ನ ವಾರಯಂತಿ ಖಲು । ಕಿಂಚ ಶತ್ರೂಣಾಂ ಹಿಂಸನಂ ಕರಿಷ್ಯತಸ್ತವ ಚ್ಯೌತ್ನಾನಿ ಬಲಾನಿ ನ ವಾರಯಂತಿ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಅಮುರಃ—ಹಿಂಸಕರಾದ ರಾಕ್ಷಸರು । ತೇ—ನಿನ್ನ । ಶತಂ ಚನ—ಅನೇಕವಿಧವಾದ । ರಾಧಃ—ಧನವನ್ನು । ನಹಿ ವರಂತೇ—ಖಂಡಿತ ತಡೆಗಟ್ಟಲಾರರು (ನಾಶಪಡಿಸಲಾರರು) । ಕರಿಷ್ಯತಃ—(ಶತ್ರುಗಳಿಗೆ) ಹಿಂಸೆಯನ್ನುಂಟುಮಾಡುವ । ಚ್ಯೌತ್ನಾನಿ—ನಿನ್ನ ಶಕ್ತಿಗಳನ್ನು । ನ—ಖಂಡಿತ ತಡೆಯಲಾರರು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂಸಕರಾದ ರಾಕ್ಷಸರು ನಿನ್ನ ಅನೇಕವಿಧವಾದ ಧನವನ್ನು ಖಂಡಿತ ತಡೆಗಟ್ಟಲಾರರು, ಎಂದರೆ ನಾಶಪಡಿಸಲಾರರು. ಅವರಿಗೆ ಹಿಂಸಾಕಾರಿಗಳಾದ ನಿನ್ನ ಶಕ್ತಿಗಳನ್ನೂ ಸಹ ತಡೆಯಲಾರರು.

## English Translation.

Adversaries diminish not your hundred-fold opulence, nor resist the energies of you opposing (them).



॥ ಸಂಹಿತಾಪಾಠಃ ॥

ಅಸ್ಮಾಁ ಅವಂತು ತೇ ಶತಮಸ್ಮಾನ್ತ್ಸಹಸ್ರಮೂತಯಃ ।
ಅಸ್ಮಾನ್ವಿಶ್ವಾ ಅಭಿಷ್ಟಯಃ ॥ ೧೦ ॥

॥ ಪದಪಾಠಃ ॥

ಅಸ್ಮಾನ್ । ಅವಂತು । ತೇ । ಶತಂ । ಅಸ್ಮಾನ್ । ಸಹಸ್ರಂ । ಊತಯಃ ।
ಅಸ್ಮಾನ್ । ವಿಶ್ವಾಃ । ಅಭಿಷ್ಟಯಃ ॥ ೧೦ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತೇ ತ್ವದೀಯಾಃ ಶತಂ ಶತಸಂಖ್ಯಾಕಾ ಊತಯೋ ರಕ್ಷಾ ಅಸ್ಮಾನವಂತು | ರಕ್ಷಂತು | ಸಹಸ್ರಂ ಸಹಸ್ರಸಂಖ್ಯಾಕಾಸ್ತ್ವದೀಯಾ ರಕ್ಷಾ ಅಸ್ಮಾನವಂತು | ವಿಶ್ವಾಃ ಸರ್ವಾಣ್ಯಭಿಷ್ಟಯಸ್ತ್ವದೀಯಾನ್ಯಭಿಗಮನಾನ್ಯಸ್ಮಾನವಂತು ||

|| ಪ್ರತಿಪದಾರ್ಥ ||

(ಇಂದ್ರ—ಎಲೈ ಇಂದ್ರನೇ) | ತೇ—ನಿನ್ನ | ಶತಂ—ಶತಸಂಖ್ಯಾಕವಾದ | ಊತಯಃ—ರಕ್ಷಣೆಗಳು | ಅಸ್ಮಾನ್—ನಮ್ಮನ್ನು | ಅವಂತು—ರಕ್ಷಿಸಲಿ | ಸಹಸ್ರಂ—ಸಹಸ್ರಸಂಖ್ಯಾಕವಾದ ರಕ್ಷಣೆಗಳು | ಅಸ್ಮಾನ್—ನಮ್ಮನ್ನು ರಕ್ಷಿಸಲಿ | ವಿಶ್ವಾಃ—ಸಮಸ್ತವಾದ | ಅಭಿಷ್ಟಯಃ—ನಿನ್ನ ಉದ್ದೇಶಗಳೆಲ್ಲಾ | ಅಸ್ಮಾನ್—ನಮ್ಮನ್ನು ರಕ್ಷಿಸಲಿ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ನೂರಾರು ರಕ್ಷಣೆಗಳು ನಮ್ಮನ್ನು ರಕ್ಷಿಸಲಿ. ನಿನ್ನ ರಕ್ಷಣಾಕ್ರಮಗಳು ಇನ್ನೂ ಅಪಾರವಾಗಿವೆ. ಅಂತಹ ಸಹಸ್ರಾರು ರಕ್ಷಣೆಗಳೂ ನಮ್ಮನ್ನು ರಕ್ಷಿಸಲಿ. ನಿನ್ನ ಸಕಲ ಉದ್ದೇಶಗಳೂ ನಮಗೆ ರಕ್ಷಕವಾಗಿಯೇ ಇರಲಿ.

English Translation.

May your hundred, your thousand, protections preserve us; may all (your) desires (be for our defence).



|| ಸಂಹಿತಾಪಾಠಃ ||

ಅಸ್ಮೆ ಇಹಾ ವೃಣೀಷ್ವ ಸಖ್ಯಾಯ ಸ್ವಸ್ತಯೇ |

ಮಹೋ ರಾಯೇ ದಿವಿತ್ಮತೇ || ೧೧ ||

|| ಪದಪಾಠಃ ||

ಅಸ್ಮಾನ್ | ಇಹ | ವೃಣೀಷ್ವ | ಸಖ್ಯಾಯ | ಸ್ವಸ್ತಯೇ |

ಮಹಃ | ರಾಯೇ | ದಿವಿತ್ಮತೇ || ೧೧ ||

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಿಹಾಸ್ಮಿನ್ಯಜ್ಞೇಽಸ್ಮಾನ್ಯಜಮಾನಾನ್ ಸಖ್ಯಾಯ ಸಖಿಭಾವಾಯ ಸ್ವಸ್ತಯೇಽ-ವಿನಾಶಾಯ ಚ ಮಹೋ ಮಹತೇ ದಿವಿತ್ಮತೇ ದೀಪ್ತಿಮತೇ ರಾಯೇ ಧನಾಯ ಚ ವೃಣೀಷ್ವ । ಸಂಭಜಸ್ವ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಇಹ—ಈ ಯಜ್ಞದಲ್ಲಿ । ಸಖ್ಯಾಯ—ನಿನ್ನೊಡನೆ ಸಖಿತ್ವವನ್ನು ಸಂಪಾದಿಸುವುದಕ್ಕೂ । ಸ್ವಸ್ತಯೇ—ನಮ್ಮ ಕಲ್ಯಾಣಕ್ಕಾಗಿಯೂ । ಮಹಃ—ಮಹತ್ತಾದುದೂ । ದಿವಿತ್ಮತೇ—ಕಾಂತಿಯುತವಾದುದೂ ಆದ । ರಾಯೇ—ಧನಕ್ಕಾಗಿಯೂ । ಅಸ್ಮಾನ್—ಯಜಮಾನರಾದ ನಮ್ಮನ್ನು । ವೃಣೀಷ್ವ—ಸೇವಿಸು (ಸತ್ಕರಿಸು).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನೊಡನೆ ಸಖಿತ್ವವನ್ನು ಹೊಂದಿರುವುದಕ್ಕೂ, ನಮಗೆ ಕಲ್ಯಾಣವುಂಟಾಗುವುದಕ್ಕೂ, ಮತ್ತು ನಮಗೆ ಮಹತ್ತಾದುದೂ ಕಾಂತಿಯುತವಾದುದೂ ಆದ ಧನಲಾಭಕ್ಕಾಗಿಯೂ ಯಜಮಾನರಾದ ನಮ್ಮನ್ನು ಈ ಯಜ್ಞದಲ್ಲಿ ಸತ್ಕರಿಸು.

## English Translation.

Select us, Indra, on this occasion, for your friendship, for (our) welfare, for vast and splendid riches.

---

॥ ಸಂಹಿತಾಪಾಠಃ ॥

ಅಸ್ಮಾಁ ಅವಿಡ್ಢಿ ವಿಶ್ವಹೇಂದ್ರ ರಾಯಾ ಪರೀಣಸಾ ।
ಅಸ್ಮಾನ್ವಿಶ್ವಾಭಿರೂತಿಭಿಃ ॥ ೧೨ ॥

॥ ಪದಪಾಠಃ ॥

ಅಸ್ಮಾನ್ । ಅವಿಡ್ಢಿ । ವಿಶ್ವಹಾ । ಇಂದ್ರ । ರಾಯಾ । ಪರೀಣಸಾ ।
ಅಸ್ಮಾನ್ । ವಿಶ್ವಾಭಿಃ । ಊತಿಽಭಿಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ವಿಶ್ವಹಾ ಸರ್ವೇಷ್ವಹಃಸು ಪರೀಣಸಾ ಮಹತಾ ರಾಯಾ ಧನೇನಾಸ್ಮಾನ್ಯಜ-ಮಾನಾನವಿಡ್ಢಿ । ರಕ್ಷ । ಕಿಂಚ ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿರಸ್ಮಾನವಿಡ್ಢಿ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ | ವಿಶ್ವಹಾ—ಸಕಲದಿನಗಳಲ್ಲಿಯೂ | ಪರೀಣಸಾ—ಪ್ರಭೂತವಾದ | ರಾಯಾ—ಧನದಿಂದ | ಅಸ್ಮಾನ್—ಯಜಮಾನರಾದ ನಮ್ಮನ್ನು | ಅವಿಡ್ಢಿ—ರಕ್ಷಿಸು | ವಿಶ್ವಾಭಿಃ—ಸಮಸ್ತವಾದ | ಊತಿಭಿಃ—ರಕ್ಷಣೆಗಳಿಂದಲೂ | ಅಸ್ಮಾನ್—ನಮ್ಮನ್ನು (ರಕ್ಷಿಸು).

|| ಭಾವಾರ್ಥ ||

ಎಲೈ ಇಂದ್ರನೇ, ಯಜಮಾನರಾದ ನಮ್ಮನ್ನು ಪ್ರಭೂತವಾದ ಧನದಾನದಿಂದ ಸಕಲದಿನಗಳಲ್ಲಿಯೂ ರಕ್ಷಿಸು. ಮತ್ತು ಸಮಸ್ತವಾದ ರಕ್ಷಣೆಗಳಿಂದಲೂ ರಕ್ಷಿಸು.

English Translation.

Favour us, Indra, daily with infinite riches; (protect) us with all protections.

---

|| ಸಂಹಿತಾಪಾಠಃ ||

ಅಸ್ಮಭ್ಯಂ ತಾँ ಅಪಾ ವೃಧಿ ವ್ರಜಾँ ಅಸ್ತೇವ ಗೋಮತಃ |
ನವಾಭಿರಿಂದ್ರೋತಿಭಿಃ || ೧೩ ||

|| ಪದಪಾಠಃ ||

ಅಸ್ಮಭ್ಯಂ | ತಾನ್ | ಅಪ | ವೃಧಿ | ವ್ರಜಾನ್ | ಅಸ್ತಾಽಇವ | ಗೋಽಮತಃ |
ನವಾಭಿಃ | ಇಂದ್ರ | ಊತಿಽಭಿಃ || ೧೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ನವಾಭಿರ್ನೂತನೈರ್ಭಿರೂತಿಭೀ ರಕ್ಷಾಭಿರಸ್ತೇವ ಕ್ಷೇಪ್ತಾ ಶೂರ ಇವ ಗೋಮತೋ ಗೋಭಿರ್ಯುಕ್ತಾನ್ ತಾನ್ ಪ್ರಸಿದ್ಧಾನ್ವ್ರಜಾನ್ ಗೋನಿವಾಸಾನಸ್ಮಭ್ಯಮಪಾ ವೃಧಿ | ಉದ್ಘಾಟಯ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ | ನವಾಭಿಃ—ನೂತನಗಳಾದ | ಊತಿಭಿಃ—ರಕ್ಷಣೆಗಳೊಂದಿಗೆ | ಅಸ್ತೇವ—ಶೂರನಂತೆ | ಗೋಮತಃ—ಗೋವುಗಳಿಂದ ಕೂಡಿದುದೂ | ತಾನ್—ಪ್ರಸಿದ್ಧವಾದವೂ ಆದ | ವ್ರಜಾನ್—ಗೋವಿನ ಕೊಟ್ಟಿಗೆಗಳನ್ನು | ಅಸ್ಮಭ್ಯಂ—ನಮಗಾಗಿ ಅಪಾ ವೃಧಿ—ತೆರೆಯುವವನಾಗು.

॥ ಭಾವಾರ್ಥ ॥

ಎಲೈ ಇಂದ್ರನೇ, ಶೂರನಾದ ನೀನು ನಿನ್ನ ನೂತನವಾದ ರಕ್ಷಣೆಗಳೊಡನೆ ನಮಗಾಗಿ ಗೋವಿನಿಂದ ತುಂಬಿದ ಗೋವ್ರಜಗಳನ್ನೂ ತೆರೆ. (ಒದಗಿಸಿಕೊಡು)

English Translation.

With fresh protections, Indra, like a warrior, open for us those pastures filled with cattle.

॥ ಸಂಹಿತಾಪಾಠಃ ॥

ಅಸ್ಮಾಕಂ ಧೃಷ್ಣುಯಾ ರಥೋ ದ್ಯುಮಾँ ಇಂದ್ರಾನಪಚ್ಯುತಃ ।

ಗವ್ಯುರಶ್ವಯುರೀಯತೇ ॥ ೧೪ ॥

॥ ಪದಪಾಠಃ ॥

ಅಸ್ಮಾಕಂ । ಧೃಷ್ಣುಯಾ । ರಥಃ । ದ್ಯುಽಮಾನ್ । ಇಂದ್ರ । ಅನಪಽಚ್ಯುತಃ ।
ಗವ್ಯುಃ । ಅಶ್ವಽಯುಃ । ಈಯತೇ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಧೃಷ್ಣುಯಾ ಧೃಷ್ಣುಃ ಶತ್ರೂಣಾಂ ಧರ್ಷಕೋ ದ್ಯುಮಾನ್ದೀಪ್ತಿಮಾನನಪಚ್ಯುತೋ ವಿನಾಶರಹಿತೋ ಗವ್ಯುರ್ಗೋಮಾನಶ್ವಯುರಶ್ವವಾನಸ್ಮಾಕಮಸ್ಮತ್ಸಂಬಂಧೀ ರಥ ಈಯತೇ । ಸರ್ವತ್ರ ಗಚ್ಛತು । ತೇನ ರಥೇನಾಸ್ಮಾನ್ರಕ್ಷೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಅಸ್ಮಾಕಂ—ನಮ್ಮ । ಧೃಷ್ಣುಯಾ—ಶತ್ರುಧರ್ಷಕವಾದುದೂ । ದ್ಯುಮಾನ್—ಕಾಂತಿಯುತವಾದುದೂ । ಅನಪಚ್ಯುತಃ—ನಾಶರಹಿತವಾದುದೂ । ಗವ್ಯುಃ—ಗೋವುಗಳಿಂದ ತುಂಬಿದುದೂ । ಅಶ್ವಯುಃ—ಅಶ್ವಗಳುಳ್ಳದ್ದೂ ಆದ । ರಥಃ—ರಥವು । ಈಯತೇ—ಸರ್ವತ್ರ ಸಂಚರಿಸಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಶತ್ರುನಾಶಕವಾದುದೂ, ಕಾಂತಿಯುತವಾದುದೂ, ನಾಶರಹಿತವಾದುದೂ, ಗೋವುಗಳಿಂದ ತುಂಬಿದುದೂ, ಅಶ್ವಗಳುಳ್ಳದ್ದೂ ಆದ ರಥವು ಸರ್ವತ್ರ ಸಂಚರಿಸಲಿ.

## English Translation.

May our chariot, Indra, foe-repelling, brilliant, unfailing, proceed (everywhere), possessing us of cattle and of horses.

---

॥ ಸಂಹಿತಾಪಾಠಃ ॥

ಅಸ್ಮಾಕಮುತ್ತಮಂ ಕೃಧಿ ಶ್ರವೋ ದೇವೇಷು ಸೂರ್ಯ ।
ವರ್ಷಿಷ್ಠಂ ದ್ಯಾಮಿವೋಪರಿ ॥ ೧೫ ॥

॥ ಪದಪಾಠಃ ॥

ಅಸ್ಮಾಕಂ । ಉತ್ಽತಮಂ । ಕೃಧಿ । ಶ್ರವಃ । ದೇವೇಷು । ಸೂರ್ಯ ।
ವರ್ಷಿಷ್ಠಂ । ದ್ಯಾಂಽಇವ । ಉಪರಿ ॥ ೧೫ ॥

॥ ಸಾಯಣಭಾಷ್ಯಂ ॥

ಅಸ್ಮಾಕಮುತ್ತಮಂ ಕೃಧೀತ್ಯನಯಾದಿತ್ಯಂ ದೃಷ್ಟ್ವಾ ರಥಾದವರೋಹೇತ್। ತಥಾ ಚ ಸೂತ್ರಿತಂ। ಅಸ್ಮಾಕಮತ್ತಮಂ ಕೃಧೀತ್ಯಾದಿತ್ಯಮೀಕ್ಷಮಾಣೋ ಜಪಿತ್ವಾವರೋಹೇತ್ । ಆ: ಗೃ. ೨-೬-೧೨ । ಇತಿ ॥

ಹೇ ಸೂರ್ಯ ಸರ್ವಸ್ಯ ಪ್ರೇರಕೇಂದ್ರ ಹೇ ಆದಿತ್ಯ ವಾ ತ್ವಂ ದೇವೇಷು ದ್ಯೋತಮಾನೇಷು ವಹ್ನ್ಯಾದಿಷು ಮಧ್ಯೇಽಸ್ಮಾಕಮಸ್ಮತ್ಸಂಬಂಧಿ ಶ್ರವೋ ಯಶ ಉತ್ತಮಮುತ್ಕೃಷ್ಟಂ ಕೃಧಿ । ಕುರು । ತತ್ರ ದೃಷ್ಟಾಂತಃ । ವರ್ಷಿಷ್ಠಮತಿಶಯೇನ ಪ್ರವೃದ್ಧಂ ಸೇಚನಸಮರ್ಥಂ ವಾ ದ್ಯಾಮಿವ ದ್ಯುಲೋಕಂ ಯಥಾ ಸರ್ವೇಷಾಂ ಲೋಕಾನಾಮುಪರಿ ಸ್ಥಿತಮುತ್ಕೃಷ್ಟಮಕರೋಸ್ತದ್ವತ್ ॥

॥ ಪ್ರತಿಪದಾರ್ಥ ॥

ಸೂರ್ಯ—ಎಲೈ ಸೂರ್ಯನೇ । ವರ್ಷಿಷ್ಠಂ—ಅತಿಶಯವಾಗಿ ವೃಷ್ಟಿಯನ್ನು ಸುರಿಸುವ । ದ್ಯಾಂ ಇವ ಉಪರಿ—ದ್ಯುಲೋಕವನ್ನು ಎಲ್ಲಾ ಲೋಕಗಳಿಗಿಂತಲೂ ಉನ್ನತಪ್ರದೇಶದಲ್ಲಿಟ್ಟಿರುವಂತೆ । ಅಸ್ಮಾಕಂ—ನಮ್ಮ । ಶ್ರವಃ—ಕೀರ್ತಿಯನ್ನು । ದೇವೇಷು—ದೇವತೆಗಳಲ್ಲಿ । ಉತ್ತಮಂ—ಅತ್ಯುತ್ತಮವಾದುದನ್ನಾಗಿ । ಕೃಧಿ—ಮಾಡು.

॥ ಭಾವಾರ್ಥ ॥

ಎಲೈ ಸೂರ್ಯನೇ. ಅತಿಶಯವಾಗಿ ವೃಷ್ಟಿಯನ್ನು ಸುರಿಸುವ ದ್ಯುಲೋಕವನ್ನು ಎಲ್ಲಾ ಲೋಕಗಳಿಗಿಂತಲೂ ಉನ್ನತಪ್ರದೇಶದಲ್ಲಿಟ್ಟಿರುವಂತೆ, ನಮ್ಮ ಕೀರ್ತಿಯನ್ನೂ ಸಹ ದೇವತೆಗಳಲ್ಲಿ ಹರಡಿ ಅತ್ಯುತ್ಕೃಷ್ಟವಾಗಿರುವಂತೆ ಮಾಡು.

English Translation.

Surya, make our fame exalted among the gods, as (you have placed) the sky, the shedder of most copious rain, above (all other regions).



## ಮೂವತ್ತೆರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಆ ತೂ ನ ಇಂದ್ರೇತಿ ಚತುರ್ವಿಂಶತ್ಯೃಚಮೇಕಾದಶಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರಮೈಂದ್ರಂ । ಅಂತ್ಯೇ ಕನೀನಕೇವೇತ್ಯಾದಿಕೇ ದ್ವೇ ಇಂದ್ರಸ್ಯಾಶ್ವದೇವತಾಕೇ । ತಥಾ ಚಾನುಕ್ರಾಂತಂ । ಆ ತೂ ನಶ್ಚತುರ್ವಿಂಶತಿರಂತ್ಯಾಭ್ಯಾಮಿಂದ್ರಾಶ್ವೌ ಸ್ತುತಾವಿತಿ । ಗತೋ ವಿನಿಯೋಗಃ ॥

ಅನುವಾದವು—ಆ ತೂ ನ ಇಂದ್ರ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಇಂದ್ರನು ದೇವತೆಯು ; ಗಾಯತ್ರೀಛಂದಸ್ಸು ಕನೀನಕೇವ ಎಂಬ ಈ ಸೂಕ್ತದ ಕೊನೆಯ ಎರಡು ಋಕ್ಕುಗಳಿಗೆ ಇಂದ್ರನ ಅಶ್ವಗಳು ದೇವತೆಗಳು. ಅನುಕ್ರಮಣಿಕೆಯಲ್ಲಿ—ಆ ತೂ ನಶ್ಚತುರ್ವಿಂಶತಿರಂತ್ಯಾಭ್ಯಾಮಿಂದ್ರಾಶ್ವೌ ಸ್ತುತಾ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

ಸೂಕ್ತ—೩೨

ಮಂಡಲ—೪ ॥ ಅನುವಾಕ—೩ ॥ ಸೂಕ್ತ—೩೨ ॥
ಅಷ್ಟಕ—೩ ॥ ಅಧ್ಯಾಯ—೬ ॥ ವರ್ಗ—೨೭, ೨೮, ೨೯, ೩೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥
॥ ಋಷಿಃ—ವಾಮದೇವಃ ॥
॥ ದೇವತಾ—೧-೨೨. ಇಂದ್ರಃ । ೨೩-೨೪. ಇಂದ್ರಾಶ್ವೌ ॥
। ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಆ ತೂ ನ ಇಂದ್ರ ವೃತ್ರಹನ್ನಸ್ಮಾಕಮರ್ಧಮಾ ಗಹಿ ।
ಮಹಾನ್ಮಹೀಭಿರೂತಿಭಿಃ ॥ ೧ ॥

॥ ಪದಪಾಠಃ ॥

ಆ । ತು । ನಃ । ಇಂದ್ರ । ವೃತ್ರ್ಽಹನ್ । ಅಸ್ಮಾಕಂ । ಅರ್ಧಂ । ಆ । ಗಹಿ ।

ಮಹಾನ್ । ಮಹೀಭಿಃ । ಊತಿಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ ವೃತ್ರಾಣಾಂ ಶತ್ರೂಣಾಂ ಹಿಂಸಕೇಂದ್ರ ತ್ವಂ ನೋಽಸ್ಮಾನ್ಪ್ರತಿ ತು ಕ್ಷಿಪ್ರಮಾಗಚ್ಛ । ಹೇ ಇಂದ್ರ ಮಹಾನ್ಪ್ರಭೂತಸ್ತ್ವಂ ಮಹೀಭಿರ್ಮಹತೀಭಿರೂತಿಭೀ ರಕ್ಷಾಭಿಃ ಸಹಾಸ್ಮಾಕಮರ್ಧಂ ಸಮೀಪಮಾ ಗಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

ವೃತ್ರಹನ್—ವೃತ್ರಹಂತಕನಾದ । ಇಂದ್ರ—ಎಲೈ ಇಂದ್ರನೇ ! ನಃ—ನಮಗೆ ಅಭಿಮುಖನಾಗಿ । ತು—ಶೀಘ್ರವಾಗಿ । ಆ ಗಹಿ—ದಯಮಾಡು । ಮಹಾನ್—ಮಹತ್ಸ್ವರೂಪವುಳ್ಳ ನೀನು । ಮಹೀಭಿಃ—ಪ್ರಭೂತಗಳಾದ (ಅಥವಾ ಮಹಿಮೆಯುಳ್ಳ) । ಊತಿಭಿಃ—ರಕ್ಷಣೆಗಳೊಂದಿಗೆ । ಅಸ್ಮಾಕಮರ್ಧಂ—ನಮ್ಮ ಸಮೀಪಕ್ಕೆ । ಆ (ಗಹಿ)—ದಯಮಾಡು.

॥ ಭಾವಾರ್ಥ ॥

ವೃತ್ರಹಂತಕನಾದ ಎಲೈ ಇಂದ್ರನೇ, ಶೀಘ್ರವಾಗಿ ನಮಗೆ ಅಭಿಮುಖನಾಗಿ ಬಾ. ಮಹತ್ಸ್ವರೂಪವುಳ್ಳ ನೀನು ಮಹಿಮೆಯಿಂದ ಕೂಡಿದ ನಿನ್ನ ಪ್ರಭೂತರಕ್ಷಣೆಗಳೊಂದಿಗೆ ನಮ್ಮ ಸಮೀಪಕ್ಕೆ ದಯಮಾಡು.

## English Translation.

Indra, slayer of Vritra, come to us quickly : you who are mighty, (come) with mighty protections.

॥ ಸಂಹಿತಾಪಾಠಃ ॥

ಭೃಮಿಶ್ಚಿದ್ಘಾಸಿ ತೂತುಜಿರಾ ಚಿತ್ರ ಚಿತ್ರಿಣೀಷ್ವಾ ।

ಚಿತ್ರಂ ಕೃಣೋಷ್ಯೂತಯೇ ॥ ೨ ॥

‖ ಪದಪಾಠಃ ‖

ಭೃಮಿಃ । ಚಿತ್ । ಘ । ಅಸಿ । ತೂತುಜಿಃ । ಆ । ಚಿತ್ರ । ಚಿತ್ರಿಣೀಷು । ಆ ।

ಚಿತ್ರಂ । ಕೃಣೋಷಿ । ಊತಯೇ ‖ ೨ ‖

‖ ಸಾಯಣಭಾಷ್ಯಂ ‖

ಹೇ ಚಿತ್ರ ಚಾಯನೀಯ ಪೂಜನೀಯೇಂದ್ರ ತ್ವಂ ಭೃಮಿಶ್ಚಿತ್ ಭ್ರಮಣಶೀಲೋಽಪಿ ತೂತುಜಿರ್ಘಾಸಿ । ಅಸ್ಮದಭೀಷ್ಟಪ್ರದಾತಾ ಚ ಭವಸಿ । ಆಕಾರಶ್ಚಾರ್ಥೇ । ಚಿತ್ರಿಣೀಷು ಚಿತ್ರ-ಕರ್ಮಯುಕ್ತಾಸ್ವಸ್ಮತ್ಪ್ರಸಾಸು ಪ್ರಜಾಸು ಚಿತ್ರಂ ಚಾಯನೀಯಂ ಧನಮೂತಯೇ ರಕ್ಷಣಾಯ ಆ ಕೃಣೋಷಿ । ಆ ಸಮಂತಾತ್ಕರೋಷಿ । ಘೇತಿ ಪೂರಣಃ ‖

‖ ಪ್ರತಿಪದಾರ್ಥ ‖

ಚಿತ್ರ—ಪೂಜ್ಯನಾದ ಇಂದ್ರನೇ । (ನೀನು) ಭೃಮಿಶ್ಚಿತ್—ಸರ್ವತ್ರ ಸಂಚರಿಸುವ ಸ್ವಭಾವವುಳ್ಳವನಾದರೂ ಸಹ । ತೂತುಜಿಃ ಘಾಸಿ—ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುವವನಾಗಿದ್ದೀಯೆ । ಚಿತ್ರಿಣೀಷು—ನಾನಾವಿಧವಾದ ಕರ್ಮಯುಕ್ತರಾದ ಪ್ರಜೆಗಳಲ್ಲಿ । ಚಿತ್ರಂ—ಆಕರ್ಷಕವಾದ ಧನವನ್ನು । ಊತಯೇ—ರಕ್ಷಣಾರ್ಥವಾಗಿ । ಆ ಕೃಣೋಷಿ—ತುಂಬಿಕೊಡುತ್ತೀಯೆ.

‖ ಭಾವಾರ್ಥ ‖

ಪೂಜ್ಯನಾದ ಇಂದ್ರನೇ, ನೀನು ಸರ್ವತ್ರ ಸಂಚರಿಸುವ ಸ್ವಭಾವವುಳ್ಳವನಾದರೂ ಸಹ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವವನಾಗಿದ್ದೀಯೆ. ನಿನ್ನನ್ನು ಪೂಜಿಸಲು ನಾನಾವಿಧವಾದ ಕರ್ಮಗಳಲ್ಲಿ ಉದ್ಯುಕ್ತರಾದ ಪ್ರಜೆಗಳಿಗೆ ರಕ್ಷಣಾರ್ಥವಾಗಿ ಆಕರ್ಷಕವಾದ ಧನವನ್ನು ತುಂಬಿಕೊಡುತ್ತೀಯೆ.

## English Translation.

Wonderful Indra, wanderer at times (through space), you are verily the granter of (our) desires, and do what is marvellous for the protection (of those who are engaged) in wondrous works.

‖ ಸಂಹಿತಾಪಾಠಃ ‖

ದಭ್ರೇಭಿಶ್ಚಿಚ್ಛಶೀಯಾಂಸಂ ಹಂಸಿ ವ್ರಾಧಂತಮೋಜಸಾ ।

ಸಖಿಭಿರ್ಯೇ ತ್ವೇ ಸಚಾ ‖ ೩ ‖

॥ ಪದಪಾಠಃ ॥

ದಭ್ರೇಭಿಃ । ಚಿತ್ । ಶಶೀಯಾಂಸಂ । ಹಂಸಿ । ವ್ರಾಧಂತಂ । ಓಜಸಾ ।

ಸಖಿಭಿಃ । ಯೇ । ತ್ವೇ ಇತಿ । ಸಚಾ ।

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದಭ್ರೇಭಿಶ್ಚಿದಲ್ಪೈರಪಿ ಸಖಿಭಿರ್ಯಜಮಾನೈಃ ಸಹ ಶಶೀಯಾಂಸಂ ॥ ಶಶ ಪ್ಲುತಗತೌ ॥ ಉತ್ಪ್ಲವಮಾನಂ ವ್ರಾಧಂತಂ ಮಹಾಂತಮಪಿ ಶತ್ರುಮೋಜಸಾ ಬಲೇನ ಹಂಸಿ । ನಾಶಯಸಿ । ಯೇ ಯಜಮಾನಾಸ್ತ್ವೇ ತ್ವಯಿ ಸಚಾ ಸಂಗತಾಃ । ತೈರಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

(ಇಂದ್ರ—ಇಂದ್ರನೇ) । ಯೇ—ಯಾವ ಯಜಮಾನರು । ತ್ವೇ—ನಿನ್ನಲ್ಲಿ । ಸಚಾ—ಕೂಡಿಕೊಂಡಿದ್ದಾರೋ ಅಂತಹವರು । ದಭ್ರೇಭಿಶ್ಚಿತ್—ಅಲ್ಪರಾಗಿದ್ದರೂ ಸಹ । ಸಖಿಭಿಃ—ಅಂತಹ ಮಿತ್ರಭೂತರಾದ ಯಜಮಾನರೊಡನೆ ಸೇರಿಕೊಂಡು । ಶಶೀಯಾಂಸಂ—ಹಾರುವಂತೆ ಓಡಿಹೋಗುವವನೂ । ವ್ರಾಧಂತಂ—ಮಹಚ್ಛಕ್ತಿಯುಳ್ಳವನೂ ಆದ ಶತ್ರುವನ್ನೂ ಸಹ । ಓಜಸಾ—ನಿನ್ನ ಶಕ್ತಿಯಿಂದ । ಹಂಸಿ—ನಾಶಮಾಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಯಜಮಾನರು ನಿನ್ನಲ್ಲಿ ಕೂಡಿಕೊಂಡಿದ್ದಾರೋ ಅಂತಹವರು ಅಲ್ಪರಾಗಿದ್ದರೂ ಸಹ ಅಂತಹ ನಿನ್ನ ಮಿತ್ರಭೂತವಾದ ಯಜಮಾನರೊಡನೆ ಸೇರಿಕೊಂಡು ನೀನು ಹಾರುವಂತೆ ಓಡಿಹೋಗುವವನೂ, ಮಹಚ್ಛಕ್ತಿಯುಳ್ಳವನೂ ಆದ ಶತ್ರುವನ್ನು ನಿನ್ನ ಶಕ್ತಿಯಿಂದ ನಾಶಮಾಡುತ್ತೀಯೆ.

## English Translation.

You destroy by your might the fierce assailing foe, associated with the humble friends who are along with you.



॥ ಸಂಹಿತಾಪಾಠಃ ॥

ವಯಮಿಂದ್ರ ತ್ವೇ ಸಚಾ ವಯಂ ತ್ವಾಭಿ ನೋನುಮಃ ।

ಅಸ್ಮಾಂಅಸ್ಮಾಂ ಇದುದವ ॥ ೪ ॥

॥ ಪದಪಾಠಃ ॥

ವಯಂ । ಇಂದ್ರ । ತ್ವೇ ಇತಿ । ಸಚಾ । ವಯಂ । ತ್ವಾ । ಅಭಿ । ನೋನುಮಃ ।

ಅಸ್ಮಾನ್ಽಅಸ್ಮಾನ್ । ಇತ್ । ಉತ್ । ಅವ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ಯಜಮಾನಾಸ್ತ್ವೇ ತ್ವಯಿ ಸಚಾ ಸಂಗತಾಃ ಸ್ಮಃ । ವಯಂ ತ್ವಾ ತ್ವಾಮಭಿ ನೋನುಮಃ । ಅತಿಶಯೇನಾಭಿಷ್ಟುಭಃ । ಹೇ ಇಂದ್ರ ತ್ವಮುಪ್ಯಸ್ಮಾನಸ್ಮಾನಿತ್ ಸರ್ವಾನಸ್ಮಾನೇವೋದವ । ಉತ್ಕರ್ಷೇಣ ರಕ್ಷ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವಯಂ—ಯಜಮಾನರಾದ ನಾವು । ತ್ವೇ—ನಿನ್ನಲ್ಲಿ । ಸಚಾ—ಕೂಡಿಕೊಂಡಿರುವೆವು । ವಯಂ—ನಾವು । ತ್ವಾ—ನಿನ್ನನ್ನು । ಅಭಿ –ಅತಿಶಯವಾಗಿ । ನೋನುಮಃ—ಸ್ತುತಿಸುತ್ತೇವೆ । ಅಸ್ಮಾನಸ್ಮಾನ್ ಇತ್—ನಮ್ಮೆಲ್ಲರನ್ನು ಮಾತ್ರವೇ । ಉತ್ ಅವ—ಪೂರ್ಣವಾಗಿ ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಜಮಾನರಾದ ನಾವು ನಿನ್ನನ್ನು ಸೇರಿ ಕೂಡಿಕೊಂಡಿರುವೆವು ಮತ್ತು ನಿನ್ನನ್ನು ಅತಿಶಯವಾಗಿ ಸ್ತುತಿಸುತ್ತೇವೆ. ನೀನು ನಮ್ಮೆಲ್ಲರನ್ನು ಮಾತ್ರವೇ ಪೂರ್ಣವಾಗಿ ರಕ್ಷಿಸು.

English Translation.

We, Indra, are along with you; we zealously glorify you: do verily protect us all.



॥ ಸಂಹಿತಾಪಾಠಃ ॥

ಸ ನಶ್ಚಿತ್ರಾಭಿರದ್ರಿವೋಽನವದ್ಯಾಭಿರೂತಿಭಿಃ ।

ಅನಾಧೃಷ್ಟಾಭಿರಾ ಗಹಿ ॥ ೫ ॥

॥ ಪದಪಾಠಃ ॥

ಸಃ । ನಃ । ಚಿತ್ರಾಭಿಃ । ಅದ್ರಿಽವಃ । ಅನವದ್ಯಾಭಿಃ । ಊತಿಽಭಿಃ ।

ಅನಾಧೃಷ್ಟಾಭಿಃ । ಆ ಗಹಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವೋ ವಜ್ರವನ್ನಿಂದ್ರ ಸ ತ್ವಂ ಚಿತ್ರಾಭಿಶ್ಚಾಯನೀಯಾಭಿರನವದ್ಯಾಭಿರನಿಂದಿತಾಭಿರನಾಧೃಷ್ಟಾಭಿಃ ಶತ್ರುಭಿರಪ್ರಧರ್ಷಿತೈರೂತಿಭೀ ರಕ್ಷಣೈಃ ಸಹಿತಃ ಸನ್ನೋಽಸ್ಮಾನಾ ಗಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

ಅದ್ರಿವಃ—ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರನೇ। ಸಃ—ಪ್ರಸಿದ್ಧನಾದ ನೀನು। ಚಿತ್ರಾಭಿಃ—ಆಕರ್ಷಕವಾದವೂ । ಅನವದ್ಯಾಭಿಃ—ನಿಂದಾರಹಿತವಾದವೂ । ಅನಾಧೃಷ್ಟಾಭಿಃ—ಶತ್ರುಗಳಿಂದ ಅಪ್ರತಿಹತವಾದವೂ ಆದ । ಊತಿಭಿಃ—ನಿನ್ನ ರಕ್ಷಣೆಗಳೊಡನೆ ಕೂಡಿಕೊಂಡು । ನಃ—ನಮಗಭಿಮುಖನಾಗಿ । ಆ ಗಹಿ—ದಯಮಾಡು.

॥ ಭಾವಾರ್ಥ ॥

ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರನೇ, ಪ್ರಸಿದ್ಧನಾದ ನೀನು ಆಕರ್ಷಕವಾದವೂ, ನಿಂದಾರಹಿತವಾದವೂ, ಶತ್ರುಗಳಿಂದ ಅಪ್ರತಿಹತವಾದವೂ ಆದ ನಿನ್ನ ರಕ್ಷಣೆಗಳೊಡನೆ ಕೂಡಿಕೊಂಡು ನಮುಗಭಿಮುಖನಾಗಿ ದಯಮಾಡು.

## English Translation.

Wielder of the thunderbolt, come to us with wondrous, irreproachable, irresistible protections.



॥ ಸಂಹಿತಾಪಾಠಃ ॥

ಭೂಯಾಮೋ ಷು ತ್ವಾವತಃ ಸಖಾಯ ಇಂದ್ರ ಗೋಮತಃ ।
ಯುಜೋ ವಾಜಾಯ ಘೃಷ್ವಯೇ ॥ ೬ ॥

॥ ಪದಪಾಠಃ ॥

ಭೂಯಾಮೋ ಇತಿ । ಸು । ತ್ವಾಽವತಃ । ಸಖಾಯಃ । ಇಂದ್ರ । ಗೋಽಮತಃ ।
ಯುಜಃ । ವಾಜಾಯ । ಘೃಷ್ವಯೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾವತಸ್ತ್ವತ್ಸದೃಶಸ್ಯ ಗೋಮತೋ ಗೋಭಿರ್ಯುಕ್ತಸ್ಯ ದೇವಸ್ಯ ಸಂಬಂಧಿನಃ ಸಖಾಯಃ ಸ್ತೋತಾರೋ ವಯಂ ಘೃಷ್ವಯೇ ಮಹತೇ ವಾಜಾಯಾನ್ನಾಯ ಯುಜಃ ಸಂಯುಕ್ತಾಃ ಸು ಸುಷ್ಠು ಭೂಯಾಮೋ । ಭವಾಮೈವ ॥

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನೇ । ತ್ವಾವತಃ—ನಿನಗೆ ಸದೃಶನಾದವನೂ । ಗೋಷುತಃ-ಗೋವುಗಳಿಂದ ಕೂಡಿದವನೂ ಆದ ದೇವತೆಗೆ । ಸಖಾಯಃ—ಸ್ನೇಹಿತರಾಗಿ । ಭೃಷ್ಣಯೇ—ಮಹತ್ತಾದ । ವಾಜಾಯೆ—ಅನ್ನಕ್ಕಾಗಿ । ಯುಜಃ—ನಾವೆಲ್ಲರೂ ಒಟ್ಟಿಗೆ ಸೇರಿ । ಸು—ಒಳ್ಳೆಯ ಸ್ಥಿತಿಯಲ್ಲಿ । ಭೂಯಾಮೋ—ಇರುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹತ್ತಾದ ಅನ್ನಕ್ಕಾಗಿ ನಾವೆಲ್ಲರೂ ಒಟ್ಟಿಗೆ ಸೇರಿ, ನಿನಗೆ ಸದೃಶನಾದವನೂ, ಗೋವುಗಳಿಂದ ಕೂಡಿದವನೂ ಆದ ದೇವತೆಗೆ ಸ್ನೇಹಿತರಾಗಿ ಆ ಕಾರಣದಿಂದಲೇ ನಾವೆಲ್ಲರೂ ಒಳ್ಳೆಯ ಸ್ಥಿತಿಯಲ್ಲಿರುವಂತಾಗಲಿ.

English Translation·

May we, Indra, be the friends of one like you, possessed of cattle, allied (to him) for (the sake of) abundant food.

॥ ಸಂಹಿತಾಪಾಠಃ ॥

ತ್ವಂ ಹ್ಯೇಕ ಈಶಿಷ ಇಂದ್ರ ವಾಜಸ್ಯ ಗೋಮತಃ ।
ಸ ನೋ ಯಂಧಿ ಮಹೀಮಿಷಂ ॥ ೭ ॥

॥ ಪದಪಾಠಃ ॥

ತ್ವಂ । ಹಿ । ಏಕಃ । ಈಶಿಷೇ । ಇಂದ್ರ । ವಾಜಸ್ಯ । ಗೋಽಮತಃ ।
ಸಃ । ನಃ । ಯಂಧಿ । ಮಹೀಂ । ಇಷಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹಿ ಯಸ್ಮಾತ್ಕಾರಣಾತ್ತ್ವಮೇಕ ಏವ ಗೋಮತೋ ಗೋಭಿರ್ಯುಕ್ತಸ್ಯ ವಾಜಸ್ಯಾನ್ನಸ್ಯೇಶಿಷೇ । ಪ್ರಭವಸಿ । ಅತಃ ಕಾರಣಾತ್ಸ ತ್ವಂ ನೋಽಸ್ಮಭ್ಯಂ ಮಹೀಂ ಮಹತೀಮಿಷಮನ್ನಂ ಯಂಧಿ । ಪ್ರಯಚ್ಛ ॥

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನೇ । ಹಿ—ಯಾವ ಕಾರಣದಿಂದ । ತ್ವಂ—ನೀನು । ಏಕಃ—ಒಬ್ಬನೇ । ಗೋಮತಃ—ಗೋವುಗಳಿಂದ ಕೂಡಿದ । ವಾಜಸ್ಯ—ಅನ್ನಕ್ಕೆ । ಈಶಿಷೇ—ಪ್ರಭುವಾಗಿದ್ದೀಯೋ (ಆದುದರಿಂದಲೇ) । ಸಃ—ಅಂತಹ ನೀನು । ನಃ—ನಮಗೆ । ಮಹೀಂ—ಪ್ರಭೂತವಾದ । ಇಷಂ—ಅನ್ನವನ್ನು । ಯಂಧಿ—ಒದಗಿಸಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಗೋವುಗಳಿಂದೊಡಗೂಡಿದ ಅನ್ನಕ್ಕೆ ನೀನೊಬ್ಬನೇ ಪ್ರಭುವಾಗಿದ್ದೀಯೆ. ಆದುದರಿಂದ ನಮಗೆ ಪ್ರಭೂತವಾದ ಅನ್ನವನ್ನು ಕೊಡಲು ನೀನೇ ಸಮರ್ಥನು.

**English Translation.**

**For you alone, Indra, are lord over food combained with cattle; therefore grant us ample food.**



॥ ಸಂಹಿತಾಪಾಠಃ ॥

ನ ತ್ವಾ ವರಂತೇ ಅನ್ಯಥಾ ಯದ್ದಿತ್ಸಸಿ ಸ್ತುತೋ ಮಘಂ ।
ಸ್ತೋತೃಭ್ಯ ಇಂದ್ರ ಗಿರ್ವಣಃ ॥ ೮ ॥

॥ ಪದಪಾಠಃ ॥

ನ । ತ್ವಾ । ವರಂತೇ । ಅನ್ಯಥಾ । ಯತ್ । ದಿತ್ಸಸಿ । ಸ್ತುತಃ । ಮಘಂ ।
ಸ್ತೋತೃಽಭ್ಯಃ । ಇಂದ್ರ । ಗಿರ್ವಣಃ ॥ ೮ ॥

। ಸಾಯಣಭಾಷ್ಯಂ ।

ಹೇ ಇಂದ್ರ ಗಿರ್ವಣೋ ಗಿರಾಂ ಸಂಭಕ್ತಃ ಸ್ತುತೋಽಸ್ಮಾಭಿಃ ಸಂಸ್ತುತೋ ಯದ್ಯದಾ ಸ್ತೋತೃಭ್ಯೋಽಸ್ಮಭ್ಯಂ ಮಘಂ ಧನಂ ದಿತ್ಸಸಿ । ದಾತುಮಿಚ್ಛಸಿ । ತದಾ ತ್ವಾ ತ್ವಾಮನ್ಯಥಾ ಪ್ರಕಾರಾಂತರೇಣ ನ ವರಂತೇ । ನ ನಿವಾರಯಂತಿ । ಕಿಂತು ಸರ್ವೇಽಪ್ಯನುಕೂಲಾ ಏವ ಭವಂತಿ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಗಿರ್ವಣಃ—ಸ್ತುತಿಗೆ ಪಾತ್ರನೂ । ಸ್ತುತಃ—ನಮ್ಮಿಂದ ಸ್ತುತಿಸಲ್ಪಡುವವನೂ ಆದ ನೀನು । ಯತ್—ಯಾವಾಗ । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಮಘಂ—ಧನವನ್ನು । ದಿತ್ಸಸಿ—ಕೊಡಲಿಚ್ಛಿಸುತ್ತೀಯೋ ಆಗ । ತ್ವಾ—ನಿನ್ನನ್ನು । ಅನ್ಯಥಾ—ಬೇರೆ ವಿಧದಲ್ಲಿ । ನ ವರಂತೇ—ಯಾರೂ ತಡೆಯುವುದಿಲ್ಲ.

18

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಗೆ ಪಾತ್ರನೂ, ನಮ್ಮಿಂದ ಸ್ತುತಿಸಲ್ಪಡುವವನೂ ಆದ ನೀನು ಸ್ತೋತೃಗಳಾದ ನಮಗೆ ಯಾವಾಗ ಧನವನ್ನು ಕೊಡಲಿಚ್ಛಿಸುತ್ತೀಯೋ, ಆಗ ನಿನ್ನನ್ನು ಬೇರೆ ವಿಧದಲ್ಲಿ ಯಾರೂ ತಡೆಯುವುದಿಲ್ಲ.

English Translation.

None change your purpose, Indra, object of laudation, when, being praised, you desire to bestow wealth upon the praisers.



॥ ಸಂಹಿತಾಪಾಠಃ ॥

ಅಭಿ ತ್ವಾ ಗೋತಮಾ ಗಿರಾನೂಷತ ಪ್ರ ದಾವನೇ ॥

ಇಂದ್ರ ವಾಜಾಯ ಘೃಷ್ವಯೇ ॥ ೯ ॥

॥ ಪದಪಾಠಃ ॥

ಅಭಿ । ತ್ವಾ । ಗೋತಮಾಃ । ಗಿರಾ । ಅನೂಷತ । ಪ್ರ । ದಾವನೇ ।

ಇಂದ್ರ । ವಾಜಾಯ । ಘೃಷ್ವಯೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಮಭಿ ಲಕ್ಷೀಕೃತ್ಯ ಗೋತಮಾ ಏತನ್ನಾಮಕಾ ಋಷಯೋ ಗಿರಾ ಸ್ತುತಿರೂಪಯಾ ವಾಚಾ ದಾವನೇ ಧನದಾನಾರ್ಥಂ ಪ್ರಾನೂಷತ । ಪ್ರಕರ್ಷೇಣ ಸ್ತುವಂತಿ । ಘೃಷ್ವಯೇ ಮಹತೇ ವಾಜಾಯಾನ್ನಾಯ ಪ್ರಸ್ತುವಂತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಅಭಿ—ಉದ್ದೇಶಿಸಿ । ಗೋತಮಾಃ—ಗೋತಮರೆಂದು ಹೆಸರುಳ್ಳ ಋಷಿಗಳು (ನಾವು) । ಗಿರಾ—ಸ್ತುತಿರೂಪವಾದ ವಾಕ್ಕಿನಿಂದ । ದಾವನೇ—ಧನವನ್ನು ಕೊಡುವುದಕ್ಕಾಗಿ । ಪ್ರ ಅನೂಷತ—ಪೂರ್ಣವಾಗಿ ಸ್ತುತಿಸುತ್ತಾರೆ । ಘೃಷ್ವಯೇ—ಮಹತ್ತಾದ । ವಾಜಾಯ—ಅನ್ನಕ್ಕಾಗಿಯೂ ಸಹ (ನಿನ್ನನ್ನು ಸ್ತುತಿಸುತ್ತಾರೆ).

॥ ಭಾವಾರ್ಥ ॥

ಎಲೈ ಇಂದ್ರನೇ, ಗೋತಮರೆಂದು ಪ್ರಖ್ಯಾತರಾದ ಋಷಿಗಳು (ನಾವು) ನಿನ್ನಿಂದ ಧನವನ್ನು ಪಡೆಯುವುದಕ್ಕಾಗಿ ನಿನ್ನನ್ನು ಪೂರ್ಣವಾಗಿ ಸ್ತುತಿಸುತ್ತಾರೆ. ಮತ್ತು ಮಹತ್ತಾದ ಅನ್ನವನ್ನು ಪಡೆಯುವುದಕ್ಕಾಗಿಯೂ ಸ್ತುತಿಸುತ್ತಾರೆ.

## English Translation.

The Gotamas glorify you, Indra, with praise, that you may grant wealth, and for the sake of abundant food.

॥ ಸಂಹಿತಾಪಾಠಃ ॥

ಪ್ರ ತೇ ವೋಚಾಮ ವೀರ್ಯಾ೩ ಯಾ ಮಂದಸಾನ ಆರುಜಃ ।
ಪುರೋ ದಾಸೀರಭೀತ್ಯ ॥ ೧೦ ॥

॥ ಪದಪಾಠಃ ॥

ಪ್ರ । ತೇ । ವೋಚಾಮ । ವೀರ್ಯಾ । ಯಾಃ । ಮಂದಸಾನಃ । ಆ । ಅರುಜಃ ।
ಪುರಃ । ದಾಸೀಃ । ಅಭಿಽಇತ್ಯ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಂದಸಾನಃ ಸೋಮೇನ ಮೋದಮಾನಸ್ತ್ವಂ ದಾಸೀಃ ಕ್ಷೇಪ್ತುರಸುರಸ್ಯ ಸ್ವಭೂತಾ ಯಾಃ ಪುರೋ ಯಾನಿ ನಗರಾಣ್ಯಭೀತ್ಯಾಭಿಗಮ್ಯಾರುಜಃ । ಆ ಸಮಂತಾದಭಾಂಕ್ಷೀಃ । ಹೇ ಇಂದ್ರ ತೇ ತ್ವದೀಯಾನಿ ತತ್ರತ್ಯಾನಿ ವೀರ್ಯಾ ವೀರ್ಯಾಣಿ ವಯಂ ಸ್ತೋತಾರಃ ಪ್ರ ವೋಚಾಮ । ಪ್ರಕರ್ಷೇಣ ವದಾಮ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ಮಂದಸಾನಃ—ಸೋಮಪಾನದಿಂದ ಹರ್ಷಿತನಾದ ನೀನು । ದಾಸೀಃ—ಕಂಟಕರಾದ ಅಸುರರಿಗೆ ಸೇರಿದ । ಯಾಃ—ಯಾವ । ಪುರಃ—ಪಟ್ಟಣಗಳನ್ನು । ಅಭೀತ್ಯ—ಎದುರಿಸಿ ಹೋಗಿ । ಆ ಅರುಜಃ—ಅವುಗಳನ್ನು ಪೂರ್ಣವಾಗಿ ನಾಶಮಾಡಿದೆಯೋ । ತೇ—ಅಂತಹ ನಿನ್ನ । ವೀರ್ಯಾ—ಸಾಹಸಕರ್ಮಗಳನ್ನು । ಪ್ರ ವೋಚಾಮ—ನಾವು ಪೂರ್ಣವಾಗಿ ವರ್ಣಿಸಿ ಸ್ತುತಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮಪಾನದಿಂದ ಹರ್ಷಿತನಾದ ನೀನು ಕಂಟಕರಾದ ಅಸುರರಿಗೆ ಸೇರಿದ ಯಾವ ಪಟ್ಟಣಗಳನ್ನು ಎದುರಿಸಿ ಹೋಗಿ ಅವುಗಳನ್ನು ಪೂರ್ಣವಾಗಿ ನಾಶಮಾಡಿದೆಯೋ, ಅಂತಹ ನಿನ್ನ ವೀರ್ಯಕರ್ಮಗಳನ್ನು ನಾವು ಪೂರ್ಣವಾಗಿ ವರ್ಣಿಸುತ್ತಾ ಸ್ತುತಿಸುತ್ತೇವೆ.

## English Translation.

We proclaim your prowess, whereby exhilarated (by the Soma), and having gone against them, you have demolished the servile cities.



॥ ಸಂಹಿತಾಪಾಠಃ ॥

ತಾ ತೇ ಗೃಣಂತಿ ವೇಧಸೋ ಯಾನಿ ಚಕರ್ಥ ಪೌಂಸ್ಯಾ ।

ಸುತೇಷ್ವಿಂದ್ರ ಗಿರ್ವಣಃ ॥ ೧೧ ॥

॥ ಪದಪಾಠಃ ॥

ತಾ । ತೇ । ಗೃಣಂತಿ । ವೇಧಸಃ । ಯಾನಿ । ಚಕರ್ಥ । ಪೌಂಸ್ಯಾ ।

ಸುತೇಷು । ಇಂದ್ರ । ಗಿರ್ವಣಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಗಿರ್ವಣೋ ಗಿರಾಂ ಸ್ತುತಿರೂಪಾಣಾಂ ವಾಚಾಂ ಸಂಭಕ್ತಾ ತ್ವಂ ಯಾನಿ ಪೌಂಸ್ಯಾ. ಪೌಂಸ್ಯಾನಿ ಬಲಾನಿ ಚಕರ್ಥ । ಕೃತವಾನಸಿ । ಹೇ ಇಂದ್ರ ವೇಧಸಃ ಪ್ರಾಜ್ಞಾಃ ಸುತೇಷ್ವಭಿಷುತೇಷು. ಸೋಮೇಷು ತೇ ತ್ವದೀಯಾನಿ ತಾ ತಾನಿ ಬಲಾನಿ ಗೃಣಂತಿ । ಕೀರ್ತಯಂತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಗಿರ್ವಣಃ—ಸ್ತುತಿಗೆ ಪಾತ್ರನಾದ ನೀನು । ಯಾನಿ—ಯಾವ ಯಾವ । ಪೌಂಸ್ಯಾ—ಪುರುಷಲಕ್ಷಣವನ್ನು ಸೂಚಿಸುವ ವೀರ್ಯಕರ್ಮಗಳನ್ನು । ಚಕರ್ಥ—ಮಾಡಿದ್ದೀಯೋ । ತೇ—ಅಂತಹ । ತಾ—ನಿನ್ನ ವೀರ್ಯಕರ್ಮಗಳನ್ನು । ವೇಧಸಃ—ಪ್ರಾಜ್ಞರು । ಸುತೇಷು—ಸೋಮವನ್ನು ಹಿಂಡಿ ಅರ್ಪಿಸುವ ಕಾಲದಲ್ಲಿ । ಗೃಣಂತಿ—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಗೆ ಪಾತ್ರನಾದ ನೀನು ಯಾವ ಯಾವ ಪುರುಷಲಕ್ಷಣವನ್ನು ಸೂಚಿಸುವ ವೀರ್ಯಕರ್ಮಗಳನ್ನು ಮಾಡಿದ್ದಿಯೋ, ಅಂತಹ ನಿನ್ನ ವೀರ್ಯಕರ್ಮಗಳನ್ನು ಪ್ರಾಜ್ಞರು ಸೋಮವನ್ನು ಹಿಂಡಿ ನಿನಗೆ ಅರ್ಪಿಸುವ ಕಾಲದಲ್ಲಿ ಸ್ತುತಿಸುತ್ತಾರೆ.

## English Translation.

The pious celebrate your manly exploits, Indra, object of laudation when the juices (of the Soma) are effused.

॥ ಸಂಹಿತಾಪಾಠಃ ॥

ಅವೀವೃಧಂತ ಗೋತಮಾ ಇಂದ್ರ ತ್ವೇ ಸ್ತೋಮವಾಹಸಃ ।
ಐಷು ಧಾ ವೀರವದ್ಯಶಃ ॥ ೧೨ ॥

॥ ಪದಪಾಠಃ ॥

ಅವೀವೃಧಂತ । ಗೋತಮಾಃ । ಇಂದ್ರ । ತ್ವೇ ಇತಿ । ಸ್ತೋಮಽವಾಹಸಃ ॥
ಆ । ಏಷು । ಧಾಃ । ವೀರಽವತ್ । ಯಶಃ ॥ ೧೨ ॥

॥ ಸಾಯಣಭಾಷ್ಯಂ ॥

ಸ್ತೋಮವಾಹಸಃ ಸ್ತೋಮಾನಾಂ ಸ್ತೋತ್ರಾಣಾಂ ವೋಢಾರೋ ಗೋತಮಾ ಋಷಯೋ ಹೇ ಇಂದ್ರ ತ್ವೇ ತ್ವಾಮವೀವೃಧಂತ । ಸ್ತೋತ್ರೈರ್ವರ್ಧಯಂತಿ । ತ್ವಮೇಷು ಗೋತಮೇಷು ವೀರವತ್ಪುತ್ರ-ಪೌತ್ರಾದಿಯುಕ್ತಂ ಯಶೋಽನ್ನಮಾ ಧಾಃ । ನಿಧೇಹಿ ॥

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನೇ । ಸ್ತೋಮವಾಹಸಃ—ಸ್ತುತಿಗಳನ್ನು ನಿರ್ಮಿಸಿ ಅರ್ಪಿಸತಕ್ಕ । ಗೋತಮಾಃ—ಗೋತಮ ಋಷಿಗಳು । ತ್ವೇ—ನಿನ್ನನ್ನು । ಅವೀವೃಧಂತ—ಅನೇಕ ವಿಧದಲ್ಲಿ ಸ್ತುತಿಸುತ್ತಾನೆ । ಏಷು—ಈ ಗೋತಮರಲ್ಲಿ । ವೀರವತ್—ಬಲಶಾಲಿಗಳಾದ ಪುತ್ರಪೌತ್ರಾದಿಗಳಿಂದ ಕೂಡಿದ । ಯಶಃ—ಅನ್ನವನ್ನು । ಆ ಧಾಃ—ತುಂಬಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಗಳನ್ನು ನಿರ್ಮಿಸಿ ಅರ್ಪಿಸತಕ್ಕ ಗೋಮತಋಷಿಗಳು ನಿನ್ನನ್ನು ಅನೇಕ ವಿಧದಲ್ಲಿ ಸ್ತುತಿಸುತ್ತಾರೆ. ಈ ಗೋತಮರಲ್ಲಿ ವೀರ್ಯವಂತರಾದ ಪುತ್ರಪೌತ್ರಾದಿಗಳನ್ನೂ, ಅನ್ನವನ್ನೂ ಒದಗಿಸಿಕೊಡು.

## English Translation.

The Gotamas, offerers of praise, exalt you, Indra; bestow upon them food and posterity.

॥ ಸಂಹಿತಾಪಾಠಃ ॥

ಯಚ್ಚಿದ್ಧಿ ಶಶ್ವತಾಮಸೀಂದ್ರ ಸಾಧಾರಣಸ್ತ್ವಂ ।
ತಂ ತ್ವಾ ವಯಂ ಹವಾಮಹೇ ॥ ೧೩ ॥

॥ ಪದಪಾಠಃ ॥

ಯತ್ । ಚಿತ್ । ಹಿ । ಶಶ್ವತಾಂ । ಅಸಿ । ಇಂದ್ರ । ಸಾಧಾರಣಃ । ತ್ವಂ ।
ತಂ । ತ್ವಾ । ವಯಂ । ಹವಾಮಹೇ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಯಚ್ಚಿದ್ಧಿ ಯದ್ಯಪಿ ಖಲು ಶಶ್ವತಾಂ ಬಹೂನಾಂ ಸರ್ವೇಷಾಂ ಯಜಮಾನಾನಾಂ ಸಾಧಾರಣೋಽಸಿ । ಸಾಮಾನ್ಯೋ ಭವಸಿ । ತಥಾಪಿ ತಮೇವ ತ್ವಾ ತ್ವಾಂ ವಯಂ ಸ್ತೋತಾರೋ ಹವಾಮಹೇ । ಆಹ್ವಯಾಮಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಚ್ಚಿದ್ಧಿ—ಒಂದುವೇಳೆ । ತ್ವಂ—ನೀನು । ಶಶ್ವತಾಂ—ಅನೇಕ ಯಜಮಾನರಿಗೆ । ಸಾಧಾರಣಃ—ಒಂದೇರೀತಿಯಲ್ಲಿ ಆರಾಧ್ಯನಾಗಿದ್ದರೂ ಸಹ । ತಂ ತ್ವಾ—ಎಲ್ಲರಿಗೂ ಬೇಕಾದ ನಿನ್ನನ್ನು । ವಯಂ—ನಾವು । ಹವಾಮಹೇ— (ನಮಗೆ ಸಹಾಯಮಾಡಲೆಂದು ಮಾತ್ರ) ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸಕಲ ಯಜಮಾನರಿಗೂ ಬೇಕಾದವನು. ಎಲ್ಲರಿಗೂ ಪೂಜ್ಯನು. ಹಾಗಿದ್ದರೂ ಸಹ ನೀನು ನಮಗೆ ಮಾತ್ರ ಸಹಾಯಮಾಡಬೇಕೆಂದು ನಾವು ನಿನ್ನನ್ನು ಪೂಜಿಸಿ ಕರೆಯುತ್ತೇವೆ.

## English Translation.

Although, Indra, you are the common property of (all) worshippers we invoke you (such) as you are (for ourselves).

॥ ಸಂಹಿತಾಪಾಠಃ ॥

ಅರ್ವಾಚೀನೋ ವಸೋ ಭವಾಸ್ಮೇ ಸು ಮತ್ಸ್ವಾಂಧಸಃ ।
ಸೋಮಾನಾಮಿಂದ್ರ ಸೋಮಪಾಃ ॥ ೧೪ ॥

॥ ಪದಪಾಠಃ ॥

ಅರ್ವಾಚೀನಃ । ವಸೋ ಇತಿ । ಭವ । ಅಸ್ಮೇ ಇತಿ । ಸು । ಮತ್ಸ್ವ । ಅಂಧಸಃ ।
ಸೋಮಾನಾಂ । ಇಂದ್ರ । ಸೋಮಽಪಾಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವಸೋ ಯಜ್ಞನಿವಾಸಕೇಂದ್ರ ತ್ವಮಸ್ಮೇ ಅಸ್ಮಾಸು ಯಜಮಾನೇಷ್ವರ್ವಾಚೀನೋಽಭಿಮುಖೋ ಭವ । ತಥಾ ಹೇ ಸೋಮಪಾಃ ಸೋಮಾನಾಂ ಪಾತರಿಂದ್ರ ತ್ವಂ ಸೋಮಾನಾಮಂಧಸೋಽನ್ನೇನ ಸು ಸುಷ್ಠು ಮತ್ಸ್ವ । ಮಾದ್ಯ ॥

॥ ಪ್ರತಿಪದಾರ್ಥ ॥

ವಸೋ—ಯಜ್ಞಸ್ಥಾನವನ್ನು ಕಲ್ಪಿಸಿಕೊಡತಕ್ಕ ಎಲೈ ಇಂದ್ರನೇ । ಅಸ್ಮೇ—ಯಜಮಾನರಾದ ನಮ್ಮಲ್ಲಿ। ಅರ್ವಾಚೀನಃ—ನಮಗೆ ಅಭಿಮುಖನಾಗಿ । ಭವ—ಆಗಿರು । ಸೋಮಪಾಃ—ಸೋಮವನ್ನು ಪಾನಮಾಡತಕ್ಕ। ಇಂದ್ರ—ಇಂದ್ರನೇ । ಸೋಮಾನಾಂ—ಸೋಮಗಳ । ಅಂಧಸಃ—ರಸರೂಪವಾದ ಅನ್ನಗಳ ಪಾನದಿಂದ । ಸು—ಅಧಿಕವಾಗಿ । ಮತ್ಸ್ವ—ಹರ್ಷಿತನಾಗು.

॥ ಭಾವಾರ್ಥ ॥

ಯಜ್ಞಸ್ಥಾನವನ್ನು ಕಲ್ಪಿಸಿಕೊಡತಕ್ಕ ಎಲೈ ಇಂದ್ರನೇ, ಯಜಮಾನರಾದ ನಮ್ಮಲ್ಲಿಯೇ ನಮಗಭಿಮುಖನಾಗಿರು. ಸೋಮಪಾನಮಾಡತಕ್ಕ ಇಂದ್ರನೇ, ಸೋಮಗಳ ರಸರೂಪವಾದ ಅನ್ನಗಳ ಪಾನದಿಂದ ಅಧಿಕವಾಗಿ ಹರ್ಷಿತನಾಗು.

English Translation.

Giver of dwellings, be present with us, drinker of the Soma, be exilarated by the beverage of the juices.



॥ ಸಂಹಿತಾಪಾಠಃ ॥

ಅ॒ಸ್ಮಾಕಂ॑ ತ್ವಾ ಮತೀ॒ನಾಮಾ ಸ್ತೋಮ॑ ಇಂದ್ರ ಯಚ್ಛತು ।

ಅ॒ರ್ವಾಗಾ ವ॑ರ್ತ॒ಯಾ ಹರೀ॑ ॥ ೧೫ ॥

॥ ಪದಪಾಠಃ ॥

ಅ॒ಸ್ಮಾಕಂ॑ । ತ್ವಾ॒ । ಮ॒ತೀ॒ನಾಂ । ಆ । ಸ್ತೋಮಃ॑ । ಇಂ॒ದ್ರ॒ । ಯ॒ಚ್ಛ॒ತು॒ ।

ಅ॒ರ್ವಾಕ್ । ಆ । ವ॒ರ್ತ॒ಯ॒ । ಹರೀ॒ ಇತಿ॑ ॥ ೧೫ ॥

॥ ಸಾಯಣಭಾಷ್ಯಂ ॥

ಮತೀನಾಂ ಸ್ತೋತೃಣಾಂ ॥ ಮನ್ಯತೇಃ ಕರ್ತರಿ ಕ್ತಿಚ್ ॥ ಅಸ್ಮಾಕಂ ಸಂಬಂಧಿ ಸ್ತೋಮಃ ಸ್ತೋತ್ರಂ ಹೇ ಇಂದ್ರ ತ್ವಾ ತ್ವಾಮಾ ಯಚ್ಛತು । ಅಸ್ಮಾಸು ನಿಯಚ್ಛತು । ತ್ವಮಪಿ ಹರೀ ತ್ವದೀಯಾವಶ್ವಾವರ್ವಾಗಸ್ಮದಭಿಮುಖಂ ಯಥಾ ಭವತಿ ತಥಾ ಆ ವರ್ತಯ । ಪರಿವರ್ತನಂ ಕುರು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮತೀನಾಂ—ಸ್ತೋತೃಗಳಾದ । ಅಸ್ಮಾಕಂ—ನಮ್ಮ । ಸ್ತೋಮಃ—ಸ್ತುತಿಯು । ತ್ವಾ—ನಿನ್ನನ್ನು । ಆ ಯಚ್ಛತು—ನಮ್ಮಲ್ಲೇ ಇರಿಸಲಿ । (ಎಲೈ ಇಂದ್ರನೇ) ಹರೀ—ಹರಿನಾಮಕಗಳಾದ ನಿನ್ನ ಅಶ್ವಗಳನ್ನು । ಅರ್ವಾಕ್—ನಮಗೆ ಅಭಿಮುಖಗಳಾಗುವಂತೆ । ಆ ವರ್ತಯ—ತಿರಿಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಕರ್ತರಾದ ನಮ್ಮ ಸ್ತೋತ್ರವು ನಿನ್ನನ್ನು ಯಾವಾಗಲೂ ನಮ್ಮಲ್ಲೇ ಇರಿಸಲಿ. ಹರಿನಾಮಕಗಳಾದ ನಿನ್ನ ಅಶ್ವಗಳನ್ನು ನಮಗೆ ಅಭಿಮುಖಗಳಾಗುವಂತೆ ತಿರುಗಿಸು.

## English Translation.

May the praise (of us) who are devoted (to you) Indra, give you to us: guide your horses towards us.

॥ ಸಂಹಿತಾಪಾಠಃ ॥

ಪುರೋಳಾಶಂ ಚ ನೋ ಘಸೋ ಜೋಷಯಾಸೇ ಗಿರಶ್ಚ ನಃ ।

ವಧೂಯುರಿವ ಯೋಷಣಾಂ ॥ ೧೬ ॥

॥ ಪದಪಾಠಃ ॥

ಪುರೋಳಾಶಂ । ಚ । ನಃ । ಘಸಃ । ಜೋಷಯಾಸೇ । ಗಿರಃ । ಚ । ನಃ ।

ವಧೂಯುಃऽಇವ । ಯೋಷಣಾಂ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನೋಽಸ್ಮದೀಯಂ ಪುರೋಳಾಶಂ ಚ ಪುರೋಡಾಶರೂಪಮನ್ನಂ ಚ ಘಸಃ । ಅದ್ಧಿ । ತಥಾ ನೋಽಸ್ಮದೀಯಾ ಗಿರಶ್ಚ ಸ್ತುತಿರೂಪಾ ವಾಚಶ್ಚ ಜೋಷಯಾಸೇ । ಸೇವಸ್ವ । ತತ್ರ ದೃಷ್ಟಾಂತಃ । ವಧೂಯುರಿವ । ಸ್ತ್ರೀಕಾಮೋ ಯಥಾ ಯೋಷಣಾಂ ಸ್ತ್ರೀಣಾಂ ಗಿರಃ ಸೇವತೇ ತದ್ವತ್ ॥

॥ ಪ್ರತಿಪದಾರ್ಥ ॥

(ಇಂದ್ರ— ಎಲೈ ಇಂದ್ರನೇ) । ನಃ—ನಮ್ಮಿಂದ ಅರ್ಪಿತವಾದ । ಪುರೋಳಾಶಂ ಚ—ಪುರೋಡಾಶ ರೂಪವಾದ ಅನ್ನವನ್ನೂ ಸಹ । ಘಸಃ—ಭುಜಿಸು । ಯೋಷಣಾಂ—ಸ್ತ್ರೀಯ ಮಾತುಗಳನ್ನು । ವಧೂಯುಃ ಇವ—ಸ್ತ್ರೀಕಾಮನಾದ ಪುರುಷನು ಯಾವ ರೀತಿ ಆದರದಿಂದ ಕೇಳುತ್ತಾನೋ ಆ ರೀತಿಯಲ್ಲಿ । ಗಿರಶ್ಚ—ನಮ್ಮ ಸ್ತುತಿವಾಕ್ಯಗಳನ್ನೂ ಸಹ । ಜೋಷಯಾಸೇ—ಆದರದಿಂದ ಸೇವಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮಿಂದ ಅರ್ಪಿತವಾದ ಪುರೋಡಾಶರೂಪವಾದ ಅನ್ನವನ್ನು ಭುಜಿಸು. ಸ್ತ್ರೀಕಾಮನಾದ ಪುರುಷನು ಸ್ತ್ರೀಯ ಮಾತುಗಳನ್ನು ಆದರಿಸಿ ಕೇಳುವಂತೆ ನೀನೂ ಸಹ ನಮ್ಮ ಸ್ತುತಿವಾಕ್ಯಗಳನ್ನು ಆದರಿಸಿ ಸೇವಿಸು.

## English Translation.

Eat (Indra) our cakes and butter; be pleased by our praise as a libertine (by the caresses) of a woman.



॥ ಸಂಹಿತಾಪಾಠಃ ॥

ಸಹಸ್ರಂ ವ್ಯತೀನಾಂ ಯುಕ್ತಾನಾಮಿಂದ್ರಮೀಮಹೇ ।

ಶತಂ ಸೋಮಸ್ಯ ಖಾರ್ಯಃ ॥ ೧೭ ॥

॥ ಪದಪಾಠಃ ॥

ಸಹಸ್ರಂ । ವ್ಯತೀನಾಂ । ಯುಕ್ತಾನಾಂ । ಇಂದ್ರಂ । ಈಮಹೇ ।

ಶತಂ । ಸೋಮಸ್ಯ । ಖಾರ್ಯಃ ॥ ೧೭ ॥

॥ ಸಾಯಣಭಾಷ್ಯಂ ॥

ವಯಂ ಸ್ತೋತಾರ ಇಂದ್ರಂ ಪರಮೈಶ್ವರ್ಯಯುಕ್ತಂ ಯುಕ್ತಾನಾಂ ಶಿಕ್ಷಿತಾನಾಂ ವ್ಯತೀನಾಂ ಗಮನವತಾಮಶ್ವಾನಾಂ ಸಹಸ್ರಂ ಸಹಸ್ರಸಂಖ್ಯಾಕಮೀಮಹೇ । ಯಾಚಾಮಹೇ । ತಥಾ ಸೋಮಸ್ಯಾಭಿಷುತಸೋಮಸ್ಯ ಶತಂ ಶತಸಂಖ್ಯಾಕಾಃ ಖಾರ್ಯಃ ಖಾರೀರೀಮಹೇ । ಅತ್ರ ಮಾನವಿಶೇಷವಾಚಿನಾ ಖಾರೀಶಬ್ದೇನ ದ್ರೋಣಕಲಶ ಉಪಲಕ್ಷ್ಯತೇ । ಅಪರಿಮಿತದ್ರೋಣಕಲಶಾನ್ ಬಹೂನ್ಯಜ್ಞಾನ್ಯಾಚಾಮಹ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಂ—ಇಂದ್ರನನ್ನು । ಯುಕ್ತಾನಾಂ—ಶಿಕ್ಷಿತವಾದವೂ । ವ್ಯತೀನಾಂ—ಶೀಘ್ರವಾಗಿ ಸಂಚರಿಸತಕ್ಕವೂ ಆದ ಅಶ್ವಗಳ । ಸಹಸ್ರಂ—ಸಹಸ್ರ ಸಂಖ್ಯೆಯನ್ನು । ಈಮಹೇ—ಯಾಚಿಸುತ್ತೇವೆ । ಸೋಮಸ್ಯ—ಹಿಂಡಿದ ಸೋಮವನ್ನು ತುಂಬಿರುವ । ಶತಂ—ಶತಸಂಖ್ಯಾಕವಾದ । ಖಾರ್ಯಃ—ದ್ರೋಣಕಲಶಗಳನ್ನೂ ಯಾಚಿಸುತ್ತೇವೆ.

॥ ಭಾವಾರ್ಥ ॥

ಸುಶಿಕ್ಷಿತವಾದವೂ, ಶೀಘ್ರವಾಗಿ ಸಂಚರಿಸತಕ್ಕವೂ ಆದ ಸಹಸ್ರ ಅಶ್ವಗಳಿಗಾಗಿ ನಾವು ಇಂದ್ರನನ್ನು ಯಾಚಿಸುತ್ತೇವೆ. ಸೋಮರಸವನ್ನು ತುಂಬಿರುವ ನೂರು ದ್ರೋಣಕಲಶಗಳಿಗಾಗಿಯೂ ನಾವು ಅವನನ್ನು ಯಾಚಿಸುತ್ತೇವೆ.

## English Translation.

We solicit, Indra for a thousand well-trained, swift-going horses, for a hundred jars of Soma juice.

|| ಸಂಹಿತಾಪಾಠಃ ||

ಸಹಸ್ರಾ ತೇ ಶತಾ ವಯಂ ಗವಾಮಾ ಚ್ಯಾವಯಾಮಸಿ |
ಅಸ್ಮತ್ರಾ ರಾಧ ಏತು ತೇ || ೧೮ ||

| ಪದಪಾಠಃ |

ಸಹಸ್ರಾ | ತೇ | ಶತಾ | ವಯಂ | ಗವಾಂ | ಆ | ಚ್ಯವಯಾಮಸಿ |
ಅಸ್ಮತ್ರಾ | ರಾಧಃ | ಏತು | ತೇ || ೧೮ ||

|| ಸಾಯಣಭಾಷ್ಯಂ ||

ಹೇ ಇಂದ್ರ ತೇ ತ್ವದೀಯಾನಿ ಗವಾಂ ಸಹಸ್ರಾ ಸಹಸ್ರಸಂಖ್ಯಾಕಾನಿ ಶತಾ ಶತಸಂಖ್ಯಾಕಾನಿ ಚಾ ಚ್ಯಾವಯಾಮಸಿ | ಆಚ್ಯಾವಯಾಮಃ | ಅಸ್ಮದಭಿಮುಖಂ ಕುರ್ಮಃ | ತಥಾಸ್ಮತ್ರಾ ಅಸ್ಮಾಸು ತ್ವದೀಯಂ ರಾಧೋ ಧನಂ ತೇ ತ್ವತ್ತ ಏತು | ಆಗಚ್ಛತು ||

|| ಪ್ರತಿಪದಾರ್ಥ ||

(ಇಂದ್ರ—ಎಲೈ ಇಂದ್ರನೇ) | ತೇ—ನಿನಗೆ ಸೇರಿದ | ಗವಾಂ—ಗೋವುಗಳ | ಸಹಸ್ರಾ—ಸಹಸ್ರ ಸಂಖ್ಯೆಯನ್ನೂ | ಶತಾ—ಶತಸಂಖ್ಯೆಯನ್ನೂ | ಆ ಚ್ಯಾವಯಾಮಸಿ—ನಿನ್ನಿಂದ ತಿರುಗಿಸಿ ನಮ್ಮ ಅಭಿಮುಖವಾಗಿ ಬರುವಂತೆ ಮಾಡುತ್ತೇವೆ | ಅಸ್ಮತ್ರಾ—ನಮ್ಮಲ್ಲಿ | ರಾಧಃ—(ನಿನ್ನ) ಧನವು | ತೇ—ನಿನ್ನಿಂದ ಏತು—ಬಂದಿರಲಿ.

| ಭಾವಾರ್ಥ |

ಎಲೈ ಇಂದ್ರನೇ, ನಿನಗೆ ಸೇರಿದ ನೂರಾರು ಮತ್ತು ಸಾವಿರಾರು ಗೋವುಗಳೂ ಸಹ ನಮ್ಮಲ್ಲಿಗೆ ಬಂದಿರುವಂತೆ ಮಾಡುತ್ತೇವೆ. ನಿನ್ನ ಧನವೆಲ್ಲವೂ ನಮ್ಮಲ್ಲೇ ಬಂದಿರಲಿ.

English Translation.

We seek to bring down from you thousands and hundreds of cattle; may riches come to us from you.

|| ಸಂಹಿತಾಪಾಠಃ ||

ದಶ ತೇ ಕಲಶಾನಾಂ ಹಿರಣ್ಯಾನಾಮಧೀಮಹಿ ।

ಭೂರಿದಾ ಅಸಿ ವೃತ್ರಹನ್ ॥ ೧೯ ॥

|| ಪದಪಾಠಃ ||

ದಶ । ತೇ । ಕಲಶಾನಾಂ । ಹಿರಣ್ಯಾನಾಂ । ಅಧೀಮಹಿ ।

ಭೂರಿಽದಾಃ । ಅಸಿ । ವೃತ್ರಽಹನ್ ॥ ೧೯ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತೇ ತ್ವತ್ತಃ ಕಲಶಾನಾಂ ಕುಂಭಾನಾಂ । ಕುಂಭಪರಿಮಿತಾನಾಮಿತಿ ಯಾವತ್ । ಹಿರಣ್ಯಾನಾಂ ಹಿತರಮಣೀಯಾನಾಂ ಧನಾನಾಂ ದಶ ದಶಸಂಖ್ಯಾಕಾನ್ಯಧೀಮಹಿ । ಧಾರಯಾಮಃ । ಹೇ ವೃತ್ರಹನ್ವೃತ್ರಾಣಾಂ ಶತ್ರೂಣಾಂ ಹಿಂಸಕೇಂದ್ರ ತ್ವಂ ಭೂರಿದಾ ಅಸಿ । ಬಹುಪ್ರದೋ ಭವಸಿ ॥

। ಪ್ರತಿಪದಾರ್ಥ ।

ಇಂದ್ರಃ—(ಎಲೈ ಇಂದ್ರನೇ) । ತೇ—ನಿನ್ನಿಂದ । ಹಿರಣ್ಯಾನಾಂ—ಸುವರ್ಣರೂಪವಾದ ಧನಗಳಿಂದ ತುಂಬಿದ । ಕಲಶಾನಾಂ—ಕುಂಭಗಳ । ದಶ—ದಶ (ಹತ್ತು) ಸಂಖ್ಯೆಯನ್ನು । ಅಧೀಮಹಿ—ಹೊಂದುತ್ತೇವೆ । ವೃತ್ರಹನ್—ಶತ್ರುಹಿಂಸಕನಾದ ಎಲೈ ಇಂದ್ರನೇ । ಭೂರಿದಾಃ—(ನೀನು) ಉದಾರಿಯಾದ ದಾತೃವಾಗಿ । ಅಸಿ—ಆಗಿದ್ದೀಯೆ.

। ಭಾವಾರ್ಥ ।

ಎಲೈ ಇಂದ್ರನೇ, ಸುವರ್ಣರೂಪವಾದ ಧನಗಳಿಂದ ತುಂಬಿದವೂ ದಶಸಂಖ್ಯಾಕವೂ ಆದ ಕುಂಭಗಳನ್ನು ನಿನ್ನಿಂದ ಹೊಂದುತ್ತೇವೆ. ಶತ್ರುಹಿಂಸಕನಾದ ಎಲೈ ಇಂದ್ರನೇ, ನೀನು ಅತ್ಯುದಾರಿಯಾದ ದಾತೃವಾಗಿದ್ದೀಯೇ.

English Translation.

May we obtain from you, ten golden ewers, for you, slayer of Vritra, are a bountiful giver.



॥ ಸಂಹಿತಾಪಾಠಃ ॥

ಭೂರಿದಾ ಭೂರಿ ದೇಹಿ ನೋ ಮಾ ದಭ್ರಂ ಭೂರ್ಯಾ ಭರ ।

ಭೂರಿ ಘೇದಿಂದ್ರ ದಿತ್ಸಸಿ ॥ ೨೦ ॥

॥ ಪದಪಾಠಃ ॥

ಭೂರಿऽದಾಃ । ಭೂರಿ । ದೇಹಿ । ನಃ । ಮಾ । ದಭ್ರಂ । ಭೂರಿ । ಆ । ಭರ ।

ಭೂರಿ । ಘ । ಇತ್ । ಇಂದ್ರ । ದಿತ್ಸಸಿ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಭೂರಿದಾ ಬಹುಪ್ರದಸ್ತ್ವಂ ಭೂರಿ ಬಹು ಧನಂ ನೋऽಸ್ಮಭ್ಯಂ ದೇಹಿ । ಪ್ರಯಚ್ಛ । ಕಿಂತು ದಭ್ರಮಲ್ಪಂ ಧನಂ ಮಾ ಪ್ರಯಚ್ಛ । ಭೂರಿ ಬಹುಲಂ ಧನಮಸ್ಮಭ್ಯಮಾ ಭರ । ಆಹರ । ಕಿಂಚ ಭೂರೀತ್ ಅದಭ್ರಮೇವ ಧನಂ ದಿತ್ಸಸಿ ಘ । ಅಸ್ಮಭ್ಯಂ ದಾತುಮಿಚ್ಛಸಿ ಖಲು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ ! ಭೂರಿದಾಃ—ಉದಾರವಾಗಿ ಕೊಡತಕ್ಕ ನೀನು । ಭೂರಿ—ಅಧಿಕವಾದ ಧನವನ್ನು । ನಃ—ನಮಗೆ । ದೇಹಿ—ಕೊಡು । ದಭ್ರಂ—ಅಲ್ಪವಾದ ಧನವನ್ನು । ಮಾ (ಪ್ರಯಚ್ಛ)—ಕೊಡಬೇಡ । ಭೂರಿ—ಅಧಿಕವಾದ ಧನವನ್ನು । ಆ ಭರ—ನಮಗಾಗಿ ತೆಗೆದುಕೊಂಡು ಬಾ । ಭೂರಿ ಇತಿ—ಅಧಿಕವಾದ ಧನವನ್ನೇ । ದಿತ್ಸಸಿ ಘ—ನೀನು ಕೊಡುವವನೆಂದು ಪ್ರಸಿದ್ಧನಾಗಿದ್ದೀಯಲ್ಲವೇ ?

॥ ಭಾವಾರ್ಥ ॥

ಎಲೈ ಇಂದ್ರನೇ, ಉದಾರಿಯಾದ ನೀನು ನಮಗೆ ಅಧಿಕವಾದ ಧನವನ್ನು ಕೊಡು. ಅಲ್ಪವಾದ ಧನವನ್ನು ಕೊಡಬೇಡ. ನಮಗಾಗಿ ಅಧಿಕವಾದ ಧನವನ್ನು ತೆಗೆದುಕೊಂಡು ಬಾ. ಅಧಿಕವಾಗಿಯೇ ಧನವನ್ನು ಕೊಡುವವನೆಂದು ನೀನು ಪ್ರಸಿದ್ಧನಾಗಿದ್ದೀಯೆ

English Translation.

A bountiful giver are you, Indra : give bountifully to us ; (give) not little ; bring much ; for verily you desire to give much.

॥ ಸಂಹಿತಾಪಾಠಃ ॥

ಭೂರಿದಾ ಹ್ಯಸಿ ಶ್ರುತಃ ಪುರುತ್ರಾ ಶೂರ ವೃತ್ರಹನ್ ।

ಆ ನೋ ಭಜಸ್ವ ರಾಧಸಿ ॥ ೨೧ ॥

॥ ಪದಪಾಠಃ ॥

ಭೂರಿऽದಾಃ । ಹಿ । ಅಸಿ । ಶ್ರುತಃ । ಪುರುऽತ್ರಾ । ಶೂರ । ವೃತ್ರऽಹನ್ ।

ಆ । ನಃ । ಭಜಸ್ವ । ರಾಧಸಿ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ವೃತ್ರಸ್ಯ ಹಿಂಸಕ ಶೂರ ವಿಕ್ರಾಂತೇಂದ್ರ ಭೂರಿದಾ ಬಹುಪ್ರದಸ್ತ್ವಂ ಪುರುತ್ರಾ ಪುರುಷು ಬಹುಷು ಯಜಮಾನೇಷು ಶ್ರುತೋऽಸಿ ಹಿ । ವಿಖ್ಯಾತೋ ಭವಸಿ ಖಲು । ರಾಧಸಿ ಧನೇ ನೋऽಸ್ಮಾನಾ ಭಜಸ್ವ । ಆ ಸಮಂತಾದ್ಭಾಗಿನಃ ಕುರು ॥

॥ ಪ್ರತಿಪದಾರ್ಥ ॥

ವೃತ್ರಹನ್—ವೃತ್ರಹಂತಕನೂ । ಶೂರ—ಪರಾಕ್ರಮಿಯೂ ಆದ ಇಂದ್ರನೇ । ಭೂರಿದಾಃ—ನೀನು ಉದಾರಿಯಾದ ದಾನಿಯೆಂದು । ಪುರುತ್ರಾ—ಅನೇಕ ಯಜಮಾನರಲ್ಲಿ । ಶ್ರುತಃ—ಪ್ರಸಿದ್ಧನಾಗಿ । ಅಸಿ ಹಿ—ಇದ್ದೀಯಲ್ಲವೇ । ರಾಧಸಿ—ಧನದಲ್ಲಿ । ನಃ—ನಮ್ಮನ್ನು । ಆ ಭಜಸ್ವ—ಪಾತ್ರರಾಗಿ ಸೇವಿಸುವಂತೆ ಮಾಡು.

॥ ಭಾವಾರ್ಥ ॥

ವೃತ್ರಹಂತಕನೂ, ಪರಾಕ್ರಮಿಯೂ ಆದ ಇಂದ್ರನೇ, ನೀನು ಉದಾರಿಯೆಂದು ಅನೇಕ ಯಜಮಾನರಲ್ಲಿ ಪ್ರಸಿದ್ಧನಾಗಿ ಇದ್ದೀಯೆ. ನಮ್ಮನ್ನೂ ನಿನ್ನ ಧನಕ್ಕೆ ಪಾತ್ರರನ್ನಾಗಿ ಮಾಡಿ ನಾವೂ ಅದನ್ನು ಸೇವಿಸುವಂತೆ ಮಾಡು.

English Translation.

Verily you are renowned amongst many as a bountiful giver; hero, slayer of Vritra, make us sharers in wealth.

---

॥ ಸಂಹಿತಾಪಾಠಃ ॥

ಪ್ರ ತೇ ಬಭ್ರೂ ವಿಚಕ್ಷಣ ಶಂಸಾಮಿ ಗೋಷಣೋ ನಪಾತ್ ।

ಮಾ ಭ್ಯಾಂ ಗಾ ಅನು ಶಿಶ್ರಥಃ ॥ ೨೨ ॥

॥ ಪದಪಾಠಃ ॥

ಪ್ರ । ತೇ । ಬಭ್ರೂ ಇತಿ । ವಿ೨ಚಕ್ಷಣ । ಶಂಸಾಮಿ । ಗೋ೨ಸನಃ । ನಪಾತ್ ।

ಮಾ । ಆಭ್ಯಾಂ । ಗಾಃ । ಅನು । ಶಿಶ್ರಥಃ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ವಿಚಕ್ಷಣ ಪ್ರಾಜ್ಞೇಂದ್ರ ತೇ ತ್ವದೀಯೌ ಬಭ್ರೂ ಬಭ್ರುವರ್ಣಾವಶ್ವೌ ಪ್ರ ಶಂಸಾಮಿ । ಪ್ರಕರ್ಷೇಣ ಸ್ತೌಮಿ । ಹೇ ಗೋಸನೋ ಗವಾಂ ಸನಿತರ್ಹೇ ನಪಾತ್ ನ ಪಾತಯಿತಃ ಸ್ತೋತೄನವಿನಾಶಯಿತಃ । ಕಿಂತು ಪಾಲಯಿತರಿತ್ಯರ್ಥಃ । ಹೇ ಇಂದ್ರ ತ್ವಮಾಭ್ಯಾಂ ತ್ವದೀಯಾಭ್ಯಾಮಶ್ವಾಭ್ಯಾಂ ಗಾ ಅನು ಅಸ್ಮದೀಯಾ ಗಾ ಲಕ್ಷೀಕೃತ್ಯ ಮಾ ಶಿಶ್ರಥಃ । ವಿನಷ್ಟಾ ಮಾ ಕಾರ್ಷೀಃ । ಗಾವೋ೨ಶ್ವದರ್ಶನಾದ್ವಿಶ್ಲಿಷ್ಯಂತೇ । ತನ್ಮಾ ಭೂದಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವಿಚಕ್ಷಣ—ಪ್ರಾಜ್ಞನಾದ ಎಲೈ ಇಂದ್ರನೇ । ತೇ—ನಿನ್ನ । ಬಭ್ರೂ—ಹೊಂಬಣ್ಣದ ಅಶ್ವಗಳನ್ನು । ಪ್ರ ಶಂಸಾಮಿ—ಅತಿಶಯವಾಗಿ ಸ್ತುತಿಸುತ್ತೇನೆ । ಗೋಸನಃ—ಗೋವುಗಳನ್ನು ಕೊಡುವವನೂ । ನಪಾತ್—ಸ್ತೋತೃಗಳನ್ನು ಹಿಂಸಿಸದಿರುವವನೂ ಆದ ಇಂದ್ರನೇ । ಆಭ್ಯಾಂ—ನಿನ್ನ ಎರಡು ಅಶ್ವಗಳಿಂದ । ಗಾಃ ಅನು—ನಮ್ಮ ಗೋವುಗಳ ಎದುರು ಬಂದು । ಮಾ ಶಿಶ್ರಥಃ—ಅವುಗಳನ್ನು ಬೆದರಿಸಬೇಡ.

॥ ಭಾವಾರ್ಥ ॥

ಪ್ರಾಜ್ಞನಾದ ಎಲೈಇಂದ್ರನೇ, ನಿನ್ನ ಹೊಂಬಣ್ಣದ ಅಶ್ವಗಳನ್ನು ನಾನು ಅತಿಶಯವಾಗಿ ಸ್ತುತಿಸುತ್ತೇನೆ. ಗೋವುಗಳನ್ನು ಕೊಡುವವನೂ, ಸ್ತೋತೃಗಳನ್ನು ಹಿಂಸಿಸದಿರುವವನೂ ಆದ ಇಂದ್ರನೇ, ನಿನ್ನ ಎರಡು ಅಶ್ವಗಳಿಂದ ಕೂಡಿ ನಮ್ಮ ಗೋವುಗಳಿಗೆ ಎದುರುಬಂದು ಬೆದರಿಸಬೇಡ

## English Translation.

Wise Indra, I praise your brown (horses); bestower of cows you (are) not regardless (of your worshippers): with those two steeds terrify not our cattle.



॥ ಸಂಹಿತಾಪಾಠಃ ॥

ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ ।

ಬಭ್ರೂ ಯಾಮೇಷು ಶೋಭೇತೇ ॥ ೨೩ ॥

॥ ಪದಪಾಠಃ ॥

ಕನೀನಕಾಽಇವ । ವಿದ್ರಧೇ । ನವೇ । ದ್ರುಽಪದೇ । ಅರ್ಭಕೇ ।

ಬಭ್ರೂ ಇತಿ । ಯಾಮೇಷು । ಶೋಭೇತೇ ಇತಿ ॥ ೨೩ ॥

॥ ಸಾಯಣಭಾಷ್ಯಂ ॥

ವಿದ್ರಧೇ ವಿದೃಢೇ ವ್ಯೂಢೇ ನವೇ ನವಜಾತೇಽರ್ಭಕೇಽಲ್ಪಕೇ ದ್ರುಪದೇ ದ್ರುಮಾಖ್ಯಸ್ಥಾನೇ ಸ್ಥಿತೇ ಕನೀನಕೇವ ಕಮನೀಯೇ ಶಾಲಭಂಜಿಕೇ ಇವ ಹೇ ಇಂದ್ರ ಬಭ್ರೂ ಬಭ್ರುವರ್ಣೌ ತ್ವದೀಯಾವಶ್ವೌ ಯಾಮೇಷು ಯಜ್ಞೇಷು ಶೋಭೇತೇ । ಕಾಂತಿಯುಕ್ತೌ ಭವತಃ ॥ ಕನೀನಕೇ ಕನ್ಯಕೇ । ಕನ್ಯಾ ಕಮನೀಯಾ ಭವತಿ ಕ್ವೇಯಂ ನೇತವ್ಯೇತಿ ವಾ ಕಮನೇನಾನೀಯತ ಇತಿ ವಾ ಕನತೇರ್ವಾ ಸ್ಯಾತ್ಕಾಂತಿಕರ್ಮಣ ಇತ್ಯಾದಿ ನಿರುಕ್ತಂ । ೪–೧೫ ॥

॥ ಪ್ರತಿಪದಾರ್ಥ ॥

ವಿದ್ರಧೇ—ಕೌಶಲ್ಯದಿಂದ ರಚಿಸಿದುದೂ । ನವೇ—ನೂತನವಾದುದೂ । ಅರ್ಭಕೇ—ಚಿಕ್ಕದಾಗಿರುವುದೂ ಆದ । ದ್ರುಪದೇ—ರಂಗಭೂಮಿಯಲ್ಲಿ ನಿಂತಿರುವ । ಕನೀನಕೇವ—ಆಕರ್ಷಕವಾದ ಗೊಂಬೆಗಳಂತೆ । ಬಭ್ರೂ—ಹೊಂಬಣ್ಣವುಳ್ಳ ನಿನ್ನ ಅಶ್ವಗಳೆರಡೂ । ಯಾಮೇಷು—ಯಜ್ಞಸ್ಥಾನಗಳಲ್ಲಿ । ಶೋಭೇತೇ—ಪ್ರಕಾಶಿಸುತ್ತವೆ.

॥ ಭಾವಾರ್ಥ ॥

ಕೌಶಲ್ಯದಿಂದ ರಚಿಸಿದುದೂ, ನೂತನವಾದುದೂ, ಚಿಕ್ಕದಾಗಿರುವುದೂ ಆದ ರಂಗಭೂಮಿಯಲ್ಲಿ ನಿಂತಿರುವ ಆಕರ್ಷಕವಾದ ಗೊಂಬೆಗಳಂತೆ ಹೊಂಬಣ್ಣವುಳ್ಳ ನಿನ್ನ ಅಶ್ವಗಳೆರಡೂ ಯಜ್ಞಸ್ಥಾನಗಳಲ್ಲಿ ಪ್ರಕಾಶಿಸುತ್ತವೆ.

## English Translation.

Like two puppets on an arranged, new and slender stage, your two brown (steeds) are brilliant at sacrifices.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಇಂದ್ರನ ಕುದುರೆಗಳನ್ನು ಸ್ತುತಿಸಲಾಗಿದೆ. ಅನೇಕ ಋಕ್ಕುಗಳಲ್ಲಿ ಸಂದರ್ಭ ಬಂದಾಗ ಒಂದೆರಡು ವಿಶೇಷಣಶಬ್ದಗಳಿಂದ ಇಂದ್ರನ ಅಶ್ವಗಳನ್ನು ಸ್ತುತಿಸಲಾಗಿದೆಯೇ ವಿನಹಾ ಪ್ರತ್ಯೇಕವಾಗಿ ಎಂದರೆ ಮಂತ್ರದ ಪ್ರತಿಪಾದ್ಯದೇವತೆಯನ್ನಾಗಿ ಎಲ್ಲಿಯೂ ಈ ರೀತಿ ಸ್ತುತಿಸಿಲ್ಲ. ಇಂದ್ರನ ಅಶ್ವಗಳು ಎರಡು. ಅವು ಗಳಿಗೆಹರೀ ಎಂದು ಹೆಸರು. ಯಾಸ್ಕರು ನಿರುಕ್ತದಲ್ಲಿ ದೇವತೆಗಳ ವಿವಿಧ ವಾಹನಗಳನ್ನು ವಿವರಿಸುವಾಗ—

ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ॥

(ನಿ. ೨-೨೮)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ—ಇಂದ್ರನಿಗೆ ಹರೀ ಎಂಬ ಹೆಸರಿನ ಎರಡು ಕುದುರೆಗಳು ವಾಹನಗಳು; ಅಗ್ನಿಗೆ ರೋಹಿತವೆಂಬ ಕೆಂಪುಬಣ್ಣದ ಕುದುರೆಯು; ಆದಿತ್ಯನಿಗೆ ಹರಿತ ಎಂಬ ಹೆಸರಿನ ಹಸರು ಕುದುರೆಗಳು; ಅಶ್ವಿನೀದೇವತೆಗಳಿಗೆ ರಾಸಭೌ ಎಂದರೆ ಎರಡು ಕತ್ತೆಗಳು; ಪೂಷನೆಂಬ ದೇವತೆಗೆ ಆಜಾಃ ಎಂಬ ಹೆಣ್ಣು ಆಡುಗಳು; ಮರುದ್ದೇವತೆಗಳಿಗೆ ಪೃಷತ್ಯಃ ಎಂಬ ಬಿಳೀ ಚುಕ್ಕೆಗಳಿರುವ ಜಿಂಕೆಗಳು; ಉಷೋ ದೇವತೆಗೆ ಅರುಣ್ಯೋ ಗಾವಃ ಎಂಬ ಕೆಂಪುವರ್ಣದ ಗೋವುಗಳು; ಸವಿತೃದೇವತೆಗೆ ಶ್ಯಾವಾಃ ಎಂಬ ಮಾಸಲು ಕೆಂಪುಬಣ್ಣದ ಕುದುರೆಗಳು; ಬೃಹಸ್ಪತಿಗೆ ವಿಶ್ವರೂಪಾ ಎಂಬ ನಾನಾವಿಧರೂಪಗಳುಳ್ಳ ಕುದುರೆಗಳು; ವಾಯುವಿಗೆ ವೇಗವಾದ ಗಮನವುಳ್ಳ ನಿಯುತಃ ಎಂಬ ಕುದುರೆಗಳೇ ವಾಹನಗಳು ಎಂದು ಹೇಳಿದಾರೆ.

ಈ ಋಕ್ಕಿನಲ್ಲಿ ಇಂದ್ರನ ಕುದುರೆಗಳು ಬಭ್ರು (ಹೊಂಬಣ್ಣ Brown) ಬಣ್ಣವುಳ್ಳವುಗಳೆಂದು ಅವುಗಳ ವರ್ಣವನ್ನು ವಿವರಿಸಿದೆ. ಮತ್ತು ನಾಟಕಾಭಿನಯಕ್ಕಾಗಿ ರಚಿಸಿರುವ ರಂಗಭೂಮಿಯಲ್ಲಿ ನೋಡುವುದಕ್ಕೆ ರಮ್ಯವಾದ ಗೊಂಬೆಗಳಂತೆ ಇಂದ್ರನ ಅಶ್ವಗಳು ಯಜ್ಞಭೂಮಿಯಲ್ಲಿ ಪ್ರಕಾಶಿಸುತ್ತಿವೆ ಎಂದು ದೃಷ್ಟಾಂತಮೂಲಕವಾಗಿ ಇಲ್ಲಿ ವರ್ಣಿಸಿದೆ.

ಕನೀನಕೇವ—ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿ ಕನೀನಿಕೇ ಎಂಬ ಶಬ್ದದ ವಿವರಣೆಯನ್ನು ಈ ರೀತಿ ಕೊಟ್ಟದಾರೆ—

ಕನೀನಕೇ ಕನ್ಯಕೇ । ಕನ್ಯಾ ಕಮನೀಯಾ ಭವತಿ । ಕ್ವೇಯಂ ನೇತವ್ಯೇತಿ ವಾ ಕಮನೇನಾನೀಯತ ಇತಿ ವಾ । ಕನತೇರ್ವಾ ಸ್ಯಾತ್ಕಾಂತಿಕರ್ಮಣಃ । ಕನ್ಯಯೋರಧಿಷ್ಠಾನಪ್ರವಚನಾನಿ ಸಪ್ತಮ್ಯಾ ಏಕವಚನಾನೀತಿ ಶಾಕಪೂಣಿಃ ॥

(ನಿ. ೪-೧೫)

ಎಂದರೆ ಕನೀನಿಕೇ ಎಂಬ ಶಬ್ದಕ್ಕೆ ಕನ್ಯಕೇ ಎಂದರ್ಥವು. ಕನ್ಯಕಾ ಅಥವಾ ಕನ್ಯಾ ಎಂದರೆ ಕಮನೀಯಾ—ಎಲ್ಲರಿಂದಲೂ ಅಪೇಕ್ಷಿಸಲ್ಪಡುವವಳಾದ್ದರಿಂದ ಕನ್ಯೆಗೆ ಕನ್ಯಾ ಅಥವಾ ಕಮನೀಯಾ ಎಂದು ಹೆಸರು. ಅಥವಾ ತಂದೆಯು ಇವಳಿಗೆ ಮದುವೆ ಮಾಡುವಾಗ ಈ ಕನ್ಯೆಯು ಕ್ವೇಯಂ ನೇತವ್ಯೇತಿ ವಾ ಎಂದರೆ ಎಲ್ಲಿಗೆ (ಯಾರಿಂದ) ಮದುವೆಯಾದ ಮೇಲೆ ಕರೆದೊಯ್ಯಲ್ಪಡುತ್ತಾಳೆ ಎಂದು ಯೋಚಿಸುವುದರಿಂದ ಕನ್ಯೆಯೆಂದು ಹೆಸರು ಎಂದೂ ಕನ್ಯಾಶಬ್ದದ ನಿಷ್ಪತ್ತಿಯು. ಏಕೆಂದರೆ ಕನತಿಧಾತುವಿಗೆ ಕಾಂತಿಕರ್ಮದಲ್ಲಿ ಎಂದರೆ ಅಪೇಕ್ಷಿಸು, ಪ್ರಾರ್ಥಿಸು ಎಂಬ ಅರ್ಥದಲ್ಲಿ ಪ್ರಯೋಗವಿರುವುದರಿಂದ ಕನ್ಯಾ ಎಂದರೆ ಈ ಸ್ತ್ರೀಯನ್ನು ವಿವಾಹಮಾಡಿಕೊಳ್ಳುವುದಕ್ಕಾಗಿ ಅನೇಕರು ಅಪೇಕ್ಷಿಸುವರು ಅಥವಾ ಪ್ರಾರ್ಥಿಸುವರು ಎಂದು ಕನ್ಯಾ ಶಬ್ದದ ಅರ್ಥವಿವರಣೆಯು. ಈ ಋಕ್ಕಿನಲ್ಲಿರುವ ವಿದ್ರಥೇ,

ನವೇ ದ್ರುಪದೇ ಅರ್ಭಕೇ ಎಂಬ ನಾಲ್ಕು ಪದಗಳೂ ಸಪ್ತಮೀ ಏಕವಚನದಲ್ಲಿದ್ದು ಕನೀನಿಕೇ ಎಂಬ ಶಬ್ದಕ್ಕೆ (ಕನ್ಯಾಶಬ್ದಕ್ಕೆ) ವಿಶೇಷಣಪದಗಳಾಗಿ ಪ್ರಯುಕ್ತವಾಗಿರುವುದೆಂದು ಶಾಕಪೂಣಿಯೆಂಬ ಆಚಾರ್ಯರು ಅಭಿಪ್ರಾಯ ಪಡುವರು. ಮತ್ತು ಯಾಸ್ಕರು ಈ ನಾಲ್ಕು ಪದಗಳನ್ನು ವಿವರಿಸುವಾಗ—

ವಿದ್ಧಯೋರ್ದಾರುಪಾದ್ಯೋಃ । ದಾರು ದೃಣಾತೇರ್ವಾ ದ್ರೂಣಾತೇರ್ವಾ । ತಸ್ಮಾದೇವ ದ್ರು । ನವೇ ನವಜಾತೇ । ಅರ್ಭಕೇ ಅವೃದ್ಧೇ ತೇ ಯಥಾ ತದಧಿಷ್ಠಾನೇಷು ಶೋಭೇತೇ ಏವಂ ಬಭ್ರೂ ಯಾಮೇಷು ಶೋಭೇತೇ ಬಭ್ರ್ವೋರಶ್ವಯೋಃ ಸಂಸ್ತವಃ ॥

(ನಿ. ೪–೧೫)

ವಿದ್ರಧೇ ಎಂಬ ಶಬ್ದಕ್ಕೆ ವಿದ್ಧೇ–ಕತ್ತರಿಸಲ್ಪಟ್ಟ ಎಂದರ್ಥವು. ಮರದಿಂದ ಗೊಂಬೆ ಮೊದಲಾದ ವಸ್ತುಗಳನ್ನು ನಿರ್ಮಿಸುವಾಗ ಮರವನ್ನು ಕತ್ತರಿಸಿ ಅಥವಾ ಕೆತ್ತಿ ಮಾಡುವರು. ಇಲ್ಲಿ ಕನೀನಿಕೆ ಎಂಬ ಮರದ ಬೊಂಬೆಗಳನ್ನು ಮರದಿಂದ ಕೆತ್ತಿ ಮಾಡಿರುವುದನ್ನು ಸೂಚಿಸುವುದಕ್ಕಾಗಿ ವಿದ್ರಧೇ ಎಂಬ ಶಬ್ದದ ಪ್ರಯೋಗವಿರುವುದು. ದ್ರುಪದೇ ಎಂಬ ಶಬ್ದಕ್ಕೆ ದ್ರುಮಮಯೇ–ಮರದಿಂದ ನಿರ್ಮಿತವಾದ ಎಂದರ್ಥವು. ದ್ರು ಅಥವಾ ದ್ರುಮವೆಂದರೆ ದಾರು— ಒಣಗಿದ ಮರ ಈ ದ್ರು ಎಂಬ ಶಬ್ದವು ದೃಣಾತೇರ್ವಾ—ಕತ್ತರಿಸು, ಕೆತ್ತು ಎಂಬರ್ಥವುಳ್ಳ ದೃಣಾತಿಧಾತುವಿನಿಂದಾಗಲಿ, ದ್ರೂಣಾತೇರ್ವಾ—ಕಡಿ, ಹಿಂಸಿಸು ಎಂಬರ್ಥವುಳ್ಳ ದ್ರೂಣಾತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ವಿವರಿಸಿದ್ದಾರೆ. ಎಂದರೆ ವೃಕ್ಷದಿಂದ ವಸ್ತುಗಳನ್ನು ನಿರ್ಮಿಸುವಾಗ ವೃಕ್ಷವನ್ನು ಕಡಿದು (ಹಿಂಸಿಸಿ) ಅದನ್ನು ಒಣಗಿಸಿ ಮರವನ್ನಾಗಿ (ದಾರು) ಮಾಡಿ ಅನಂತರ ಅದನ್ನು ಬೇಕಾದ ಅಳತೆಗೆ ಕತ್ತರಿಸಿ, ಕೆತ್ತಿ, ನಯಮಾಡಿ ಬೊಂಬೆ ಮೊದಲಾದ ವಸ್ತುಗಳನ್ನು ನಿರ್ಮಿಸುವರು. ಆ ವಿಷಯುವನ್ನೇ ಇಲ್ಲಿ ವಿದ್ರಧೇ ದ್ರುಪದೇ ಎಂಬ ಶಬ್ದಗಳಿಂದ ವಿವರಿಸಿದೆ. ನವೇ ಎಂಬ ಶಬ್ದಕ್ಕೆ ನವಜಾತೇ–ಹೊಸದಾಗಿ ಹುಟ್ಟಿದ ಅಥವಾ ಹೊಸದಾಗಿ ಕತ್ತರಿಸಿ ತಂದ (ಮರ ಅಥವಾ ವೃಕ್ಷ) ಎಂದರ್ಥವು. ಅರ್ಭಕೇ ಎಂದರೆ ಅವೃದ್ಧೇ–ವೃದ್ಧಿ ಯಾಗದಿರುವ, ದೊಡ್ಡದಲ್ಲದ, ಚಿಕ್ಕದಾದ ಎಂದರ್ಥವು, ಬೊಂಬೆ ಮೊದಲಾದ ವಸ್ತುಗಳಿಗಾಗಿ ಉಪಯೋಗಿಸುವ ಮರದ ತುಂಡು ದೊಡ್ಡದಾಗಿರಬೇಕಾಗಿಲ್ಲ, ಚಿಕ್ಕದಾಗಿರಬೇಕು. ಇಂತಹ ಮರವೆಂದು ಸೂಚಿಸುವುದಕ್ಕಾಗಿ ಇಲ್ಲಿ ನವೇ ಅರ್ಭಕೇ ಎಂಬ ಶಬ್ದಗಳ ಪ್ರಯೋಗವಿದೆ. ಮುಖ್ಯಾಭಿಪ್ರಾಯವೇನೆಂದರೆ—ಹೊಸದಾಗಿ ಕತ್ತರಿಸಿ ತಂದ ಮರದಲ್ಲಿ ಮಾಡಿದ ಬೊಂಬೆಗಳು ರಂಗಭೂಮಿಯಲ್ಲಿ ಯಾವ ರೀತಿ ಮನೋಹರವಾಗಿ ಪ್ರಕಾಶಿಸುತ್ತಾ ನೋಡುತ್ತಿರುವ ಜನರಿಗೆ ಆನಂದವನ್ನುಂಟುಮಾಡುವುವೋ ಅದರಂತೆ ಬಭ್ರುವರ್ಣವುಳ್ಳ (Brown) ಇಂದ್ರನ ಕುದುರೆಗಳು ಯಾಮೇಷು ಎಂದರೆ ಯುದ್ಧಭೂಮಿಯಲ್ಲಾಗಲಿ, ಕುದುರೆಗಳನ್ನು ಕಟ್ಟುವ ಲಾಯದಲ್ಲಾಗಲಿ, ಇಂದ್ರನು ಹೋಗುವ ಯಜ್ಞಭೂಮಿಯಲ್ಲಾಗಲಿ ಬಂದು ನಿಂತಿರುವಾಗ ಮನೋಹರವಾದ ಬೊಂಬೆಗಳಂತೆ ಬೆಳಗುತ್ತಿರುವವು ಎಂದು ಋಷಿಯು ಬೊಂಬೆಗಳ ದೃಷ್ಟಾಂತವನ್ನು ಕೊಟ್ಟು ಇಂದ್ರನ ಕುದುರೆಗಳನ್ನು ಸ್ತುತಿಸಿದ್ದಾನೆ.



॥ ಸಂಹಿತಾಪಾಠಃ ॥

ಅರಂ ಮ ಉಸ್ರಯಾಮ್ಣೇಽರಮನುಸ್ರಯಾಮ್ಣೇ ।

ಬಭ್ರೂ ಯಾಮೇಷ್ವಸ್ರಿಧಾ ॥ ೨೪ ॥

॥ ಪದಪಾಠಃ ॥

ಅರಂ । ಮೇ । ಉಸ್ರಽಯಾಮ್ಣೇ । ಅರಂ । ಅನುಸ್ರಽಯಾಮ್ಣೇ ।

ಬಭ್ರೂ ಇತಿ । ಯಾಮೇಷು । ಅಸ್ರಿಧಾ ॥ ೨೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಸ್ರಿಧಾಸ್ರಿಧಾವಹಿಂಸಕೌ ಬಭ್ರೂ ಬಭ್ರುವರ್ಣೌ ತ್ವದೀಯಾವಶ್ವೌ ಯಾಮೇಷು ಗಮನೇಷು ಪ್ರಾಪ್ತೇಷು ಸತ್ಸೂಸ್ರಯಾಮ್ಣೇ । ಉಸ್ರಾಭ್ಯಾಮನಡುಡ್ಭ್ಯಾಂ ಯುಕ್ತೇನ ರಥೇನ ಯಾತೀ-ತ್ಯುಸ್ರಯಾವಾ । ತಸ್ಮೈ ಮೇ ಮಹ್ಯಮರಮಲಂ ಪರ್ಯಾಪ್ತಕಾರಿಣೌ ಭವತಾಂ । ಅನುಸ್ರಯಾಮ್ಣೇ ಪದ್ಭ್ಯಾಮೇವ ಗಚ್ಛತೇ ಮಹ್ಯಮರಂ ಪರ್ಯಾಪ್ತಕಾರಿಣೌ ಭವತಾಂ ॥

॥ ಪ್ರತಿಪದಾರ್ಥ ॥

ಅಸ್ರಿಧಾ—ಅಹಿಂಸಾತ್ಮಕವಾದವೂ । ಬಭ್ರೂ—ಹೊಂಬಣ್ಣವುಳ್ಳವೂ ಆದ ನಿನ್ನ ಅಶ್ವಗಳು । ಯಾಮೇಷು—ಯಜ್ಞಕಾಲಗಳಲ್ಲಿ । ಉಸ್ರಯಾಮ್ಣೇ—ಎತ್ತಿನ ಗಾಡಿಯಲ್ಲಿ ಹೋಗತಕ್ಕ । ಮೇ—ನನಗೆ । ಅರಂ—ಪರ್ಯಾಪ್ತವಾಗಿವೆ । ಅನುಸ್ರಯಾಮ್ಣೇ—ಅದಿಲ್ಲದೇ ಕಾಲುನಡಿಗೆಯಲ್ಲಿಯೇ ಹೋದರೂ ಸಹ । ಅರಂ—ನನಗೆ ಸಾಕಾಗಿವೆ.

॥ ಭಾವಾರ್ಥ ॥

ಅಹಿಂಸಾತ್ಮಕವೂ, ಹೊಂಬಣ್ಣವುಳ್ಳವೂ ಆದ ನಿನ್ನ ಅಶ್ವಗಳಿಗಭಿಮುಖನಾಗಿ ಯಜ್ಞಕಾಲಗಳಲ್ಲಿ ಹೋಗತಕ್ಕ ನನಗೆ, ನಾನು ಎತ್ತಿನ ಗಾಡಿಯಲ್ಲಿ ಹೋಗಲಿ ಅಥವಾ ಅದಿಲ್ಲದೇ ಕಾಲುನಡಿಗೆಯಲ್ಲಿ ಹೋಗಲಿ, ಆ ಎರಡು ಅಶ್ವಗಳೇ ನನಗೆ ತೃಪ್ತಿಕಾರಕವಾಗಿವೆ.

## English Translation.

You two innocuous brown (steeds) are sufficient at sacrifices for me, whether going (to them) in (a waggon drawn by) oxen, or going without (such) a conveyance.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ
ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ
ಷಷ್ಠೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

## ॥ ತೃತೀಯಾಷ್ಟಕೇ ಸಪ್ತಮೋಽಧ್ಯಾಯಃ ॥

ಮೂರನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು

॥ ಚತುರ್ಥಂ ಮಂಡಲಂ ॥

## ನಾಲ್ಕನೆಯ ಮಂಡಲದಲ್ಲಿ ಮೂವತ್ತಮೂರನೆಯ ಸೂಕ್ತವು.

### ಪೀಠಿಕೆ

ಈ ಸೂಕ್ತಕ್ಕೂ ಮುಂದಿನ ನಾಲ್ಕು ಸೂಕ್ತಗಳಿಗೂ ಋಭುಗಳು ದೇವತೆಯು. ಇವರ ವಿಷಯವಾದ ಪೂರ್ವೇತಿಹಾಸವನ್ನೂ, ಇವರು ಮಾಡಿದ ಸಾಹಸಕಾರ್ಯಗಳನ್ನೂ, ಇವರು ತಮ್ಮ ಕೆಲಸಕಾರ್ಯಗಳಲ್ಲಿ ತೋರಿಸಿರುವ ಬುದ್ಧಿಕುಶಲತೆಯನ್ನು ತಿಳಿಯಬೇಕಾದುದು ಅವಶ್ಯಕವು.

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ, ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕ ಕಡೆ ಹೇಳಲ್ಪಟ್ಟಿರುವುದು. ಪೂರ್ವದಲ್ಲಿ

ಅಂಗಿರಾಋಷಿಗೆ ನೀತಿಮಂಜರಿ ಎಂಬ ಓರ್ವ ಪುತ್ರನಿದ್ದನು. ಇವನ ವಂಶದಲ್ಲಿ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಋಭುಗಳೆಂದು ಹೇಳುವ ರೂಢಿಯಿದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ದೇವಶಿಲ್ಪಿಗಳೆಂದೂ ಹೇಳುವರು. ಇವರು ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಸಲಕರಣೆಗಳನ್ನು ಎಂದರೆ ಇಂದ್ರನ ರಥವನ್ನೂ, ಅಗ್ನಿಯ ಚಮಸ ಪಾತ್ರೆಯನ್ನೂ ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಈ ಸೂಕ್ತಗಳಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು. ಇವರಿಗೆ ಅದ್ಭುತವಾದ ಶಕ್ತಿಯಿರುವುದೆಂದೂ ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಇವರು ಸೂರ್ಯಮಂಡಲದಲ್ಲಿ ವಾಸವಾಗಿದ್ದು ಸೂರ್ಯರಶ್ಮಿಗಳ ಮೂಲಕ ಕಾರ್ಯಗಳನ್ನು ಮಾಡುವರೆಂದು ಪ್ರತೀತಿ ಇರುವುದು.

ಋಭುಶಬ್ದಕ್ಕೆ ಯಾಸ್ಕರು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿರುವರು—

(೧) **ಋಭವ ಉರು ಭಾಂತೀತಿ ವಾ ।** ಉರು-ಬಹಳವಾಗಿ ಭಾಂತಿ-ಪ್ರಕಾಶಿಸುವವರು. ಆದ್ದರಿಂದ ಇವರಿಗೆ ಋಭುಗಳೆಂದು ಹೆಸರು-ಇಲ್ಲಿ ಉರು ಶಬ್ದದ ಅಂತ್ಯಾಕ್ಷರವಾದ ರುಕಾರವನ್ನೂ ಭಾಂತಿ ಶಬ್ದದ ಆದ್ಯಕ್ಷರವನ್ನೂ ಸೇರಿಸಿ ರುಭು ಅಥವಾ ಋಭು ಎಂದು ಶಬ್ದವಾಗಿರುವುದಾಗಿ ಕೆಲವರ ಅಭಿಪ್ರಾಯವು. ಅಹಃ+ರಾತ್ರಿಃ=ಹೋರಾ ಎಂಬಂತೆ

(೨) **ಋತೇನ ಭಾಂತೀತಿ ವಾ ।** ಋತೇನ-ಎಂದರೆ ಸತ್ಯದಿಂದ ಅಥವಾ ಯಜ್ಞದಿಂದ ಪ್ರಕಾಶಿಸುವವ ರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು.

(೩) **ಋತೇನ ಭವಂತೀತಿ ವಾ ।** ಋತೇನ ಎಂದರೆ ಸತ್ವದಿಂದ (ಸಾಮರ್ಥ್ಯದಿಂದ) ಇರುವವರಾದ್ದರಿಂದ ಎಂದರೆ ಸಾಮರ್ಥ್ಯವುಳ್ಳವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು. ಋತೇನ ಎಂಬ ಶಬ್ದದ ಆದ್ಯಕ್ಷರವಾದ ಋಕಾರವೂ ಭವಂತಿಶಬ್ದದ ಆದ್ಯಕ್ಷರವಾದ ಭಕಾರವೂ ಸೇರಿ ಋಭು ವೆಂದು ಆಗಿರುವುದೆಂದು ಕೆಲವರು ಹೇಳುವರು.

ಈ ಋಭುಗಳು ಹಿಂದೆ ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ವಿಷಯವನ್ನು ಈ ಋಕ್ಕು ವಿಶದವಾಗಿ ತಿಳಿಸುವುದು—

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥**

(ಋ. ಸಂ. ೧-೧೧೦-೪).

ಇದಕ್ಕೆ ಯಾಸ್ಕರ ನಿರುಕ್ತವು—

ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತ್ವಮಾನಶಿರೇ ಋಭವಃ ಸೂರಖ್ಯಾನಾ ವಾ, ಸೂರಪ್ರಜ್ಞಾ ವಾ, ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ ॥

ಮುಖ್ಯಾಭಿಪ್ರಾಯವೇನೆಂದರೆ—ಸುಧನ್ವನ ಪುತ್ರರಾದ ಈ ಋಭಗಳು ಹಿಂದೆ ಮನುಷ್ಯರಾಗಿದ್ದರು. ಅವರು ಸೂರ್ಯನಿಗೆ ಸಮಾನವಾದ ತಮ್ಮ ಪ್ರಜ್ಞೆ ಅಥವಾ ಬುದ್ಧಿಶಕ್ತಿಯಿಂದ ಬೇಗನೆ ಎಂದರೆ ಒಂದೇ ಸಂವತ್ಸರದಲ್ಲಿ ಸರ್ವ ಯಜ್ಞಗಳನ್ನೂ ಮಾಡಿ ಅಮೃತತ್ವಂ ಎಂದರೆ ದೇವತ್ವವನ್ನು (ಮರಣರಹಿತತ್ವವನ್ನು) ಪಡೆದರು.

ಋಭುಶಬ್ದಕ್ಕೆ ಯಾಸ್ಕರು ಮತ್ತೊಂದರ್ಥವನ್ನೂ ಹೇಳಿರುವರು—

ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ—ಸೂರ್ಯನ ರಶ್ಮಿಗಳಿಗೂ ಋಭವಃ ಎಂದು ಹೇಳುವರು. ಉದಾಹರಣೆಗಾಗಿ—

ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।
ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ॥

(ಋ. ಸಂ. ೧-೧೬೧-೧೧)

ಈ ಋಕ್ಕಿಗೆ ಯಾಸ್ಕರು—ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತಿ । ಎಂದು ನಿರುಕ್ತವನ್ನು ಹೇಳಿರುವರು. ಭಾಷ್ಯಕಾರರೂ ಸಹ ಈ ಋಕ್ಕಿನ ಅರ್ಥ ವಿವರಣೆ ಮಾಡುವಾಗ ಋಭವಃ ಎಂಬ ಶಬ್ದಕ್ಕೆ—ಋಭವಃ ಉರು ಪ್ರಭೂತಂ ಭಾಸಮಾನಾಃ ಋತೇನಾದಿತ್ಯೇನ ಭಾಸಮಾನಾ ವಾ ಋತೇನೋದಕೇನೋದಕಾರ್ಥಮುತ್ಪನ್ನಾ ವಾ—ಎಂದು ಅರ್ಥಮಾಡಿರುವರು.

ಋ. ಸಂ. ೧-೧೧೦-೨ನೆಯ ಋಕ್ಕಿನಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸಿದ ಅಥವಾ ಅತಿಥ್ಯವನ್ನು ನೀಡಿದ ಸವಿತೃವಿನ ಮನೆಗೆ ಋಭುಗಳು ಹೋದರು ಎಂದು ಪೂರ್ವದ ಇತಿಹಾಸದ ಸಂದರ್ಭವು ಸೂಚಿಸಿದೆ. ಈ ಇತಿಹಾಸ ವನ್ನು ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ, ಸಾಯಣರು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಸಂದರ್ಭದಲ್ಲಿ,

ಅತ್ರೇತಿಹಾಸಮಾಚಕ್ಷತೇ । ಋಭವೋ ಯಜ್ಞಿಯತ್ವಂ ಪ್ರಾರ್ಥಯಮಾನಾಃ ಪ್ರಜಾಪತೇಃ ಸಕಾಶಮುಗಮನ್ । ಅಥ ಪ್ರಜಾಪತಿಃ ಸವಿತಾರಮಾಹೂಯೋವಾಚ । ಏತೇಽಪಿ ಯಜ್ಞಿಯಾ ಭವಂತ್ವಿತಿ । ತಥೇತಿ ಸವಿತಾ ಪ್ರತಿಪದ್ಯ ತಾನ್ ಸ್ವಗೃಹಂ ನೀತ್ವಾ ದ್ವಾದಶ ದಿನಾನ್ಯಾತಿಥ್ಯಮೇಷಾಮಕಾರ್ಷೀದಿತಿ । ತದೇತದ್ವಾಮದೇವೋ ವಕ್ಷ್ಯತಿ ।

ಋಭುಗಳು ಯಜ್ಞದಲ್ಲಿ ಭಾಗವಹಿಸಿ ಹವಿಸ್ಸನ್ನು ಸ್ವೀಕರಿಸಲು ಅಹ ತೆಯನ್ನು ಪಡಯಬೇಕೆಂದು ಇಚ್ಛಿಸಿ ಪ್ರಜಾ ಪತಿಯ ಸಮೀಪಕ್ಕೆ ಹೋದರು. ಆಗ ಪ್ರಜಾಪತಿಯು ಸವಿತೃವನ್ನು ಕರೆದು ಇವರೂ ಸಹ ಯಜ್ಞಾರ್ಹರಾಗಲಿ (ಅದಕ್ಕೆ ಸಹಾಯಮಾಡು) ಎಂದು ಹೇಳಿದ ನಂತರ ಸವಿತೃವು ಹಾಗೇ ಆಗಲೆಂದು ಒಪ್ಪಿಕೊಂಡು ತನ್ನ ಮನೆಗೆ

ಕರೆದುಕೊಂಡು ಹೋಗಿ ಹನ್ನೆರಡು ದಿನಗಳು ಅವರಿಗೆ ಅತಿಥಿಸತ್ಕಾರವನ್ನು ನೆರವೇರಿಸಿದನು ಎಂದು ಸ್ಕಂದಸ್ವಾಮಿಗಳು ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಈ ಕಥಾಸಂದರ್ಭವನ್ನು ಸೂಚಿಸತಕ್ಕ,

ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।
ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥

(ಋ. ಸಂ. ೪-೩೩-೭)

ಎಂಬ ಋಕ್ಕನ್ನುದಾಹರಿಸಿದ್ದಾರೆ. ಇದೇ ಸಂದರ್ಭದಲ್ಲಿ ಸಾಯಣರು ಋಭುಗಳು ಸವಿತೃವಿನ ಮನೆಗೆ ಹೋಗಲು ಒದಗಿದ ಕಾರಣಗಳನ್ನು ತಿಳಿಸತಕ್ಕ ಅಂಶವನ್ನು ಸೂಚಿಸಿದ್ದಾರೆ.

ದಾಶುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪಸಾರಿತೇಭ್ಯ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುಃ ಗೃಹಂ ನಿವಾಸಸ್ಥಾನಂ ತೃತೀಯಸವನಾಖ್ಯಮಗಚ್ಛತ ಪ್ರಾಪ್ತಾಃ ॥

ಪ್ರಾತಃಸವನಾದಿಗಳಲ್ಲಿ ಅಗ್ನ್ಯಾದಿದೇವತೆಗಳಿಂದ ತಿರಸ್ಕರಿಸಲ್ಪಟ್ಟು ಹೊರಕ್ಕೆ ಕಳುಹಲ್ಪಟ್ಟ ಋಭುಗಳಾದ ನಿಮಗೆ ಸೋಮಪಾನವನ್ನು ಅರ್ಪಿಸಿದ ಸವಿತೃವಿನ ತೃತೀಯಸವನರೂಪವಾದ ಯಜ್ಞಗೃಹವನ್ನು ಪ್ರವೇಶಿಸಿರಿ ಎಂದು ಅಗ್ನ್ಯಾದಿಗಳಿಂದ ಸಂಭವಿಸಿದ ತಿರಸ್ಕಾರದ ವಿಷಯವನ್ನೂ ಹೇಳಿದ್ದಾರೆ. ಈ ವಿಷಯವು ಐತರೇಯಬ್ರಾಹ್ಮಣದಲ್ಲಿ ವಿಶದವಾಗಿ ಉಕ್ತವಾಗಿದೆ.

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯ-ಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ।

(ಐ. ಬ್ರಾ. ೧೩-೩೦)

ಋಭುಗಳು ತಮ್ಮ ತಪಃಸಾಧನೆಯಿಂದಲೂ, ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನವನ್ನು ಸಂಪಾದಿಸಿದರು ಮೊದಲು ಪ್ರಾತಃಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಬಿಟ್ಟನು. ಆಗ ಮಾಧ್ಯಂದಿನಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವತೆಗಳು 'ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ, ನೀವು ಮಾಡಕೂಡದು' ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು 'ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು' ಎಂದನು. ಅನಂತರ ಸವಿತೃವು ಒಪ್ಪಿಕೊಂಡನು.

ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಸೋಮರಸವನ್ನು ಪಾನಮಾಡಿದನು, ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಸನ್ನಿವೇಶವನ್ನು ಸಾಯಣರು ಸೂಕ್ಷ್ಮವಾಗಿ ಹೇಳಿದ್ದಾರೆ.

ಋಭುಗಳ ಕಲಾಕೌಶಲ್ಯದ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು—ತ್ವಷ್ಟೃವಿನಿಂದ ನಿರ್ಮಿತವಾದಾಗ ಒಂದೇ ಆಗಿ ಇದ್ದ ಚಮಸಪಾತ್ರೆಯನ್ನು ನಾಲ್ಕುಪಾತ್ರಗಳನ್ನಾಗಿ ಮಾಡಿದಿರಿ ಎಂದು ಋಭುಗಳ ಕಲಾಕೌಶಲ್ಯವನ್ನು ಶ್ಲಾಘಿಸಿದೆ.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
ಅಕರ್ತ ಚತುರಃ ಪುನಃ ॥

(ಋ. ಸಂ. ೧-೨೦-೬)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ ಮತ್ತು ಇದೇ ವಿವರವನ್ನು ಮುಂದೆಯೂ,

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ಕೃಣವಾಮೇತ್ಯಾಹ ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ ॥

(ಋ. ಸಂ. ೪-೩೩-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳುವಂತೆಯೂ ಸಹ ಒಂದಾದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇವರು ತ್ವಷ್ಟೃವಿನ ಶಿಷ್ಯರಾಗಿದ್ದರೆಂಬುದೂ ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್ ॥
ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಶ್ಚತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥
ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ।
ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ವದುಶ್ಚ ತೇ ।
ತೇಷಾಮಾದ್ಯಾಂತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।
ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ॥

(ಬೃ. ದೇ. ೩-೮೩ ರಿಂದ ೮೯)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲ ಕಲಾಕುಶಲನಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ನಿಪುಣರಾದ ವಿಶ್ವೇದೇವತೆಗಳು ಅವರನ್ನು ಪ್ರತಿಭಟನಾದೃಷ್ಟಿಯಿಂದ ಎದುರಿಸಿದರು. ಆಗ ಇವರು ಸಕಲದೇವತೆಗಳಿಗೂ ಸಹ ಆಯುಧಗಳನ್ನೂ, ವಾಹನಗಳನ್ನೂ ನಿರ್ಮಿಸಿಕೊಟ್ಟರು. ಅನಂತರ ಅಮೃತದಾಯಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನಿದೇವತೆಗಳಿಗೆ, ಆಸನತ್ರಯಗಳುಳ್ಳ ರಥಗಳನ್ನೂ, ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತವಾದುದನ್ನೂ, ಎಂದರೆ,

> ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ೧ ಕದ್ಯದೂಚಿಮ ।
> ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥
> ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ ಆಗಮಂ ।
> ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥ ॥
> ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ ಕರ್ತ್ವಃ ।
> ಧೇನುಃ ಕರ್ತ್ವಾ ಯುವಶಾ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇಮಸಿ ॥
>
> (ಋ. ಸಂ. ೧-೧೬೧-೧ ರಿಂದ ೩)

ಎಂಬ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವದೂತನಾಗಿ ಸುಧನ್ವಪುತ್ರರಲ್ಲಿಗೆ ಹೋಗಿ ಒಂದೇ ಆಗಿರುವ ಚಮಸಪಾತ್ರೆಯನ್ನು ನಾಲ್ಕನ್ನಾಗಿ ಮಾಡಿ ದೇವತೆಗಳಿಗೆ ಸಹಾಯಮಾಡಿದರೆ ಆಗ ಅವರ ಜೊತೆಯಲ್ಲಿ ಸೋಮರಸ ಪಾನಕ್ಕೆ ಅರ್ಹತೆಯನ್ನು ಅವರು ಪಡೆಯುವರೆಂದು ಹೇಳಿದಾಗ ಅವರು ನಿಮಗೆ ಇಂದೊಂದು ಕೆಲಸಮಾತ್ರವಲ್ಲದೇ ಅಶ್ವನಿರ್ಮಾಣವಾಗಲಿ, ರಥನಿರ್ಮಾಣವಾಗಲಿ ಅಥವಾ ಧೇನುನಿರ್ಮಾಣವಾಗಲಿ ಅಥವಾ ವೃದ್ಧರಾದ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡುವುದಾಗಲಿ ಇವೆಲ್ಲಾ ನಿಮ್ಮಿಂದ ಸಾಧ್ಯವಾಗಿದ್ದು, ಅದರಂತೆಯೇ ಈಗಲೂ ಸಹ ನಿಮಗೆ ಅಪೇಕ್ಷಿತವಾದುದನ್ನೆಲ್ಲಾ ಮಾಡಿಕೊಡುವೆವು ಎಂದು ಅದನ್ನು ಮಾಡಿಕೊಟ್ಟರು ಎಂಬ ವಿಷಯವನ್ನು ಇಲ್ಲಿ ಸೂಚಿಸಿದೆಯಾದ್ದರಿಂದ ಅಂತಹ ಕುಶಲಕಾರ್ಯದಿಂದ ಅಗ್ನಿಗೆ ಸಹಾಯವನ್ನು ಮಾಡಿದರು. ಆಗ ತ್ವಷ್ಟೃವೂ ಸವಿತೃವೂ, ದೇವದೇವನಾದ ಪ್ರಜಾಪತಿಯೂ ಸಕಲ ದೇವತೆಗಳನ್ನೂ ಕರೆದು ಋಭುಗಳಿಗೆ ಅಮೃತತ್ವವು ಲಭಿಸುವಂತೆ ಅನುಗ್ರಹಿಸಿದರು. ಆಗ (ಅವರನ್ನು ಮೊದಲು ತಿರಸ್ಕರಿಸಿದ್ದ) ಇಂದ್ರನೂ ಸಹ ಅವರೊಂದಿಗೆ ಸೋಮರಸವನ್ನು ಪಾನಮಾಡಿದನು ಎಂಬ ಕಥೆಯು ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸಾಯಣಭಾಷ್ಯದಲ್ಲಿ ಹೇಳಿರುವ ಕಥೆಯು ಈ ರೀತಿಯಿದೆ—ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ವತ್ಸಂ ದೃಷ್ಟ್ವಾ ಋಭುಂ ತುಷ್ಟಾವ । ಋಭವಸ್ತತ್ಸದೃಶೀಮನ್ಯಾಂ ಧೇನುಂ ಕೃತ್ವಾ ತದೀಯೇನ ಚರ್ಮಣಾ ಸಂವೀಯ ತೇನ ವತ್ಸೇನ ಸಮಯೋಜಯನ್ನಿತಿ । ಹಿಂದೆ ಒಬ್ಬ ಋಷಿಯ ಧೇನುವು ಮೃತವಾದಾಗ ಅದರ ಸಣ್ಣ ಕರುವಿನ ಮೇಲಿನ ಕನಿಕರದಿಂದ ಅದಕ್ಕೆ ಸಹಾಯಮಾಡಬೇಕೆಂದು ಋಭುಗಳನ್ನು ಪ್ರಾರ್ಥಿಸಿದನು. ಆಗ ಋಭುಗಳು ಬೇರೆ ಹಸುವನ್ನು ಸೃಷ್ಟಿಸಿ ಅದಕ್ಕೆ ಸತ್ತ ಹಸುವಿನ ಚರ್ಮವನ್ನು ಹೊದ್ದಿಸಿ ಆ ಕರುವಿನೊಂದಿಗೆ ಸೇರುವಂತೆ ಮಾಡಿದರು. ಇದು ಇವರ ಮಹಿಮೆಯು. ಸ್ಕಂದ ಸ್ವಾಮಿಗಳ ವಿವರಣೆಯಂತೆ,

ಅತ್ರೇತಿಹಾಸಮಾಚಕ್ಷತೇ । ಋಷೇಃ ಕಸ್ಯಚಿದಗ್ನಿಹೋತ್ರಧೇನುಸ್ಸ್ತರುಣವತ್ಸಾ ಮಮಾರ । ತಸ್ಯಾಂ ವಿಕರ್ತಿತಾಯಾಂ ಆರುದತಾ ವತ್ಸೇನ ಉದ್ವೇಜಿತಃ ಋಭೂನ್ ಸ್ವಪಿತರೌ ವೃದ್ಧೌ ಪುನರ್ಯುವಾನೌ ಕುರ್ವತೋ ದದರ್ಶ । ತಾನುವಾಚ । ಮಾಮಪ್ಯಗ್ನಿಹೋತ್ರಧೇನುಂ ಮೃತಾಂ ಪುನರ್ಜೀವಯತೇತಿ । ತಸ್ಯ ಸ್ವಮಾಹಾತ್ಮ್ಯೇನ ತಸ್ಮಾಚ್ಚರ್ಮಣಃ ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ ಇತಿ । ತದೇತದಿಹೋಚ್ಯತೇ ನಿಶ್ಚರ್ಮಣ ಇತಿ ।

ಒಬ್ಬ ಋಷಿಯ ಅಗ್ನಿಹೋತ್ರಧೇನುವು ಎಳೆಯ ಕರುವನ್ನು ಬಿಟ್ಟು ಸತ್ತುಹೋಯಿತು. ಅದನ್ನು ಕುಯ್ಯುವಾಗ ಆ ಎಳೆಯ ಕರುವಿನ ಆರ್ತನಾದವನ್ನು ಕೇಳಿ ಕನಿಕರದಿಂದ ಋಷಿಯು ಋಭುಗಳನ್ನು ಜ್ಞಾಪಿಸಿಕೊಂಡನು. ಅವರು ತಮ್ಮ ವೃದ್ಧರಾದ ಮಾತಾಪಿತೃಗಳನ್ನು ಪುನಃ ವಯಸ್ಕರನ್ನಾಗಿ ಮಾಡುತ್ತಿದ್ದರು. ಅವರ ಆ ಶಕ್ತಿಯನ್ನು ನೋಡಿ ಮೃತವಾದ ತನ್ನ ಅಗ್ನಿಹೋತ್ರಧೇನುವನ್ನೂ ಬದುಕಿಸಬೇಕೆಂದು ಕೇಳಿಕೊಂಡನು. ಅವರು ಸತ್ತುಹೋಗಿದ್ದ ಆ ಹಸುವನ್ನು ಅದೇ ವಿಕರ್ತಿತವಾದ ಚರ್ಮದ ಹೊದ್ದಿಕೆಯಿಂದ ಪೂರ್ಣವಾದ ಅವಯವಗಳುಳ್ಳದ್ದನ್ನಾಗಿ ಮಾಡಿ ಆ ಹಸುವನ್ನು ಬದುಕಿಸಿದರು ಎಂದು ಹೇಳಿದೆ. ಸಾಯಣರು ಹೇಳುವುದಕ್ಕೂ ಇದಕ್ಕೂ ಇರುವ ಮುಖ್ಯವ್ಯತ್ಯಾಸವು ಏನೆಂದರೆ, ಅವರು ಅನ್ಯಾಂ ಧೇನುಂ ಕೃತ್ವಾ ಎಂದಿದ್ದಾರೆ. ಸ್ಕಂದಸ್ವಾಮಿಯು ತಾಮೇವ ಗಾಂ ಅಶೇಷಾವ-ಯವೋಪೇತಾಂ ಚಕ್ರುಃ ಎಂದು ಹೇಳಿದಾರೆ.

ಋಭು ಎಂಬ ಪದವು ಪ್ರಾಯಶಃ ರಭ್ (ಹಿಡಿದಿಕೋ) ಧಾತುವಿನಿಂದ ನಿಷ್ಪನ್ನವಾಗಿದೆ. (೨-೩-೮ನ್ನು ಹೋಲಿಸಿ) ; ಆದುದರಿಂದಲೇ ಆ ಪದಕ್ಕೆ 'ಸಮಯಕ್ಕೆ ಒದಗುವ' 'ಕೈಚಳಕವುಳ್ಳ' ಎಂದು ಅರ್ಥವಾಗಿದೆ. ಈ ಋಭುಪದವು ಇದೇ ಅರ್ಥದಲ್ಲಿ ವಿಶೇಷಣವಾಗಿ ಇಂದ್ರ ಅಗ್ನಿ ಮತ್ತು ಆದಿತ್ಯರುಗಳಿಗೆ ಅನೇಕ ಸಲ ಉಪಯೋಗಿಸಲ್ಪಟ್ಟಿದೆ. ವಾಜ ಎಂಬ ಪದಕ್ಕೆ ಸಮರ್ಥ ಎಂತಲೂ ವಿಭ್ವಾ ಎಂಬುದಕ್ಕೆ ಪ್ರಸಿದ್ಧವಾದ ಎಂತಲೂ ಅರ್ಥವಾಗುತ್ತದೆ. ಆದುದರಿಂದ ಋಭು ಮೊದಲಾದ ಪದಗಳು, ಅವರುಗಳ ಕೌಶಲ್ಯವನ್ನೂ ಸೂಚಿಸುವ ಅನ್ವರ್ಥನಾಮಕಗಳಾಗಿವೆ.

ಇವರು ಮೊದಲು ದೇವತೆಗಳಾಗಿರಲಿಲ್ಲವೆಂಬುದು ಸ್ಪಷ್ಟವಾದ ವಿಷಯ. ಆದರೆ ದೇವತೆಗಳಾಗುವ ಮುಂಚೆ ಅವರ ಸ್ವಭಾವವೇನು ಎಂಬುದು ಸ್ಪಷ್ಟವಾಗಿಲ್ಲ. ಸೌಧನ್ವರು ಎಂದು ಹೇಳಿದಾಗಲೂ ಅವರು ಯಾರೆಂಬುದು ಗೊತ್ತಾಗುವುದಿಲ್ಲ. ಸುಧನ್ವಾನ್ ಎಂಬುದು ರುದ್ರ ಮತ್ತು ಮರುತರಿಗೆ ಅನ್ವಯಿಸುವಂತೆ ಎರಡೇ ಸಲ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಅನೇಕ ಕಡೆ ಹೇಳಿರುವಂತೆ, ದ್ಯಾವಾಭೂಮಿಗಳು ಅವರ ಮಾತಾಪಿತೃಗಳಿರಬಹುದು. ಮರಿಮಾಡಲಸಾಧ್ಯವಾದ ಸವಿತೃವಿನ ಮನೆಯಲ್ಲಿದ್ದುದರಿಂದ ಅವರಿಗೆ ಭೂಮಿಯನ್ನು ಫಲವತ್ತಾಗಿ ಮಾಡುವ ಶಕ್ತಿಯಿದೆಯೆಂದು ಹೇಳಬಹುದು. ಅನೇಕ ವಿದ್ವಾಂಸರು, ಈ ಮೂವರೂ ಮೂರು ಋತುಗಳ ಅಭಿಮಾನಿಗಳೆಂದೂ, ಅವರು ಹನ್ನೆರಡು ದಿನಗಳು ನಿದ್ರಿಸಿದರೆಂಬುದು ಮಕರಸಂಕ್ರಾಂತಿ ಕಾಲದಲ್ಲಿ ಋತುಗಳು ಹನ್ನೆರಡು ದಿವಸ ಚಲಿಸದೇ ಇರುವುದಕ್ಕೆ ಅನ್ವಯಿಸುತ್ತದೆಯೆಂತಲೂ, ಬಟ್ಟಲೆಂಬುದು ಚಂದ್ರನೆಂತಲೂ, ಅದು ನಾಲ್ಕು ಆಯಿತೆಂಬುದು ಚಂದ್ರನ ನಾಲ್ಕು ರೂಪಗಳೆಂತಲೂ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಇವರು ಭೂಮಿ ಅಥವಾ ವಾಯುಮಂಡಲದಲ್ಲಿರುವ ಅಪ್ರಾಕೃತವ್ಯಕ್ತಿಗಳೆಂದೂ, ಅವರ ಕೌಶಲ್ಯವು ಅವರ ವಿಷಯವಾಗಿ ಅನೇಕ ಸಾಹಸಕರ್ಮಗಳ ಕಥೆಗಳು ಹೊರಡುವಂತೆ ಮಾಡಿತೆಂದೂ ಹೇಳಬಹುದು. ಆದರೆ ಋಗ್ವೇದವೊಂದನ್ನೇ ಆಧಾರವಾಗಿಟ್ಟುಕೊಳ್ಳುವುದಾದರೆ ಯಾವ ನಿಶ್ಚಿತ ಅಭಿಪ್ರಾಯಕ್ಕೂ ಅವಕಾಶವಿಲ್ಲ.

# ಮೂವತ್ತಮೂರನೆಯ ಸೂಕ್ತವು.

ಚತುರ್ಥೇऽನುವಾಕೇ ತ್ರಯೋದಶ ಸೂಕ್ತಾನಿ। ತತ್ರ ಪ್ರ ಋಭುಭ್ಯ ಇತ್ಯೇಕಾದಶರ್ಚಂ ಪ್ರಥಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಂ। ತುಹ್ಯಾದಿಪರಿಭಾಷಯೇದಮಾದಿಸೂಕ್ತಪಂಚಕಮೃಭುದೇವತಾಕಂ। ಅತ್ರಾನುಕ್ರಮಣಿಕಾ। ಪ್ರ ಋಭುಭ್ಯ ಏಕಾದಶಾರ್ಭವಂ ವಾ ಇತಿ॥ ವ್ಯೂಢೇ ದಶರಾತ್ರೇ ಚತುರ್ಥೇऽಹನಿ ವೈಶ್ವದೇವಶಸ್ತ್ರ ಆರ್ಭವನಿವಿದ್ಧಾನೀಯಮಿದಂ। ತಥಾ ಚ ಸೂತ್ರಿತಂ। ಪ್ರ ಋಭುಭ್ಯ ಪ್ರ ಶುಕ್ರೈತ್ವಿತಿ ವೈಶ್ವದೇವಂ। ಆ. ೮-೮। ಇತಿ॥

ಅನುವಾದವು—ನಾಲ್ಕನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವವು. ಅವುಗಳಲ್ಲಿ—ಪ್ರ ಋಭುಭ್ಯಃ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಈ ಸೂಕ್ತದಿಂದ ಪ್ರಾರಂಭಿಸಿ ಐದು ಸೂಕ್ತಗಳೂ ಋಭುದೇವತಾಕವು. ಅನುಕ್ರಮಣಿಕೆಯಲ್ಲಿ—ಪ್ರ ಋಭುಭ್ಯ ಏಕಾದಶಾರ್ಭವಂ ವಾ ಎಂದು ಹೇಳಿರುವುದು. ತ್ರಿಷ್ಟುಪ್‌ಛಂದಸ್ಸು. ವ್ಯೂಢವೆಂಬ ಹತ್ತು ದಿನಗಳವರೆಗೆ ಮಾಡುವ ಯಾಗವಿಶೇಷದಲ್ಲಿ ನಾಲ್ಕನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನ ಮಾಡುವಾಗ ಈ ಸೂಕ್ತವು ಆರ್ಭವನಿವಿದ್ಧಾನೀಯ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— ಪ್ರ ಋಭುಭ್ಯಃ ಪ್ರ ಶುಕ್ರೈತ್ವಿತಿ ವೈಶ್ವದೇವಂ ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು.

### ಸೂಕ್ತ—೩೩

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೩ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೧, ೨, ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ವಾಮದೇವಃ ॥

॥ ದೇವತಾ—ಋಭವಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಋಭುಭ್ಯೋ ದೂತಮಿವ ವಾಚಮಿಷ್ಯ ಉಪಸ್ತಿರೇ ಶ್ವೈತರೀಂ ಧೇನುಮೀಳೇ।

ಯೇ ವಾತಜೂತಾಸ್ತರಣಿಭಿರೇವೈಃ ಪರಿ ದ್ಯಾಂ ಸದ್ಯೋ ಅಪಸೋ ಬಭೂವುಃ ॥ ೧ ॥

॥ ಪದಪಾಠಃ ॥

ಪ್ರ । ಋಭುಽಭ್ಯಃ । ದೂತಂಽಇವ । ವಾಚಂ । ಇಷ್ಯೇ । ಉಪಸ್ತಿರೇ । ಶ್ವೈತರೀಂ । ಧೇನುಂ । ಈಳೇ ।

ಯೇ । ವಾತಽಜೂತಾಃ । ತರಣಿಽಭಿಃ । ಏವೈಃ । ಪರಿ । ದ್ಯಾಂ । ಸದ್ಯಃ । ಅಪಸಃ । ಬಭೂವುಃ ॥೧॥

॥ ಸಾಯಣಭಾಷ್ಯಂ ॥

ತತ್ರ ಋಭೂಣಾಂ ಪೂರ್ವಂ ಮನುಷ್ಯಾಣಾಮೇವ ಸತಾಂ ತಪಸಾ ದೇವತ್ವಪ್ರಾಪ್ತಿರಾರ್ಭವಂ ಶಂಸತ್ಯೃಭವೋ ವೈ ದೇವೇಭ್ಯಃ । ಐ. ಬ್ರಾಂ. ೩-೩೦ । ಇತ್ಯತ್ರ ಬ್ರಾಹ್ಮಣೇ ಸ್ಪಷ್ಟಮಾಮ್ನಾತಾ । ಕೇಚಿನ ಋಭವೋ ನಾಮ ಸೂರ್ಯರಶ್ಮಯ ಇತ್ಯಾಚಕ್ಷತೇ । ಅಹಂ ಯಜಮಾನ ಋಭುಭ್ಯ ಉರುಭಾಸಮಾನೇಭ್ಯ ಏತನ್ನಾಮಕೇಭ್ಯೋ ದೇವೇಭ್ಯೋ ವಾಚಂ ಸ್ತುತಿರೂಪಾಂ ಪ್ರೇಷ್ಯೇ । ಪ್ರೇರಯಾಮಿ । ಕಿಮಿವ । ದೂತಮಿವ । ಯಥಾ ದೂತಂ ಸ್ವಕಾರ್ಯಂ ಪ್ರತಿ ಪ್ರೇಷಯಂತಿ ತದ್ವತ್ । ಕಿಂಚ ಉಪಸ್ಥಿರೇ ಸೋಮೋಪಸ್ತರಣಾಯ ಶ್ವೈತರೀಂ ಪಯೋಯುಕ್ತಾಂ ಶ್ವೇತಶರಾಂ ವಾ ಧೇನುಮೀಳೇ । ಯಾಚಾಮ್ಯೃಭೂನ್ । ಯ ಋಭವೋ ವಾತಜೂತಾ ವಾತಸಮಾನಗತಯೋಽಪಸೋ ಜಗದುಪಕಾರಿಕರ್ಮಾಣಃ ಸಂತಸ್ತರಣಿಭಿಸ್ತಾರಕೈರೇವೈರ್ಗಮನಶೀಲೈರಶ್ವೈರ್ದ್ಯಾಮಂತರಿಕ್ಷಂ ಸದ್ಯಸ್ತದಾನೀಮೇವ ಪರಿ ಬಭೂವುಃ । ಪರಿಭವಂತಿ । ಸರ್ವತೋ ವ್ಯಾಪ್ನುವಂತಿ । ಅಥ ರಶ್ಮಯ ಏವ ಋಭವ ಇತ್ಯುಕ್ತತ್ವಾದಾದಿತ್ಯಂ ವಾ ರಶ್ಮಯಃ ಪರಿತೋ ವ್ಯಾಪ್ನುವಂತಿ ॥

॥ ಪ್ರತಿಪದಾರ್ಥ ॥

ಋಭುಭ್ಯಃ— ಪ್ರಕಾಶಮಾನರಾದ ಋಭುಗಳನ್ನುದ್ದೇಶಿಸಿ । ದೂತಮಿವ—ದೂತನನ್ನು ಕಳುಹಿಸುವಂತೆ । ವಾಚಂ—ಸ್ತುತಿರೂಪವಾದ ವಾಕ್ಕನ್ನು । ಪ್ರ ಇಷ್ಯೇ—ಅರ್ಪಿಸಿ ಕಳುಹುತ್ತೇನೆ । ಉಪಸ್ತಿರೇ—ಸೋಮಮಿಶ್ರಣಾರ್ಥವಾಗಿ । ಶ್ವೈತರೀಂ—ಪಯಸ್ಸಿನಿಂದ ಯುಕ್ತವಾದ । ಧೇನುಂ—ಧೇನುವನ್ನು । ಈಳೇ—ಯಾಚಿಸುತ್ತೇನೆ । ಯೇ—ಯಾವ ಆದೇ ಋಭುಗಳು । ವಾತಜೂತಾಃ—ವಾಯುವಿಗೆ ಸಮಾನವಾದ ಗತಿಯುಳ್ಳವರಾಗಿಯೂ । ಅಪಸಃ—ಜಗತ್ತಿಗೆ ಉಪಕಾರಕವಾದ ಕರ್ಮವುಳ್ಳವರಾಗಿಯೂ । ತರಣಿಭಿಃ—ರಕ್ಷಕಗಳಾದವೂ । ಏವೈಃ—ಗಮನಶೀಲವಾದವೂ ಆದ ಅಶ್ವಗಳೊಡನೆ । ದ್ಯಾಂ—ಅಂತರಿಕ್ಷವನ್ನು । ಸದ್ಯಃ—ಒಡನೆಯೇ । ಪರಿ ಬಭೂವುಃ—ಸರ್ವತ್ರ ವ್ಯಾಪಿಸುತ್ತಾರೆ.

॥ ಭಾವಾರ್ಥ ॥

ಪ್ರಕಾಶಮಾನರಾದ ಋಭುಗಳನ್ನುದ್ದೇಶಿಸಿ ದೂತನನ್ನು ಕಳುಹುವಂತೆ ಯಜಮಾನನಾದ ನಾನು ಸ್ತುತಿರೂಪವಾದ ವಾಕ್ಕನ್ನರ್ಪಿಸಿ ಕಳುಹುತ್ತೇನೆ. ಸೋಮಮಿಶ್ರಣಾರ್ಥವಾಗಿ ಪಯಸ್ಸಿನಿಂದ ಯುಕ್ತವಾದ ಧೇನುವನ್ನು ಯಾಚಿಸುತ್ತೇನೆ. ಯಾವ ಆದೇ ಋಭುಗಳು ವಾಯುವಿಗೆ ಸಮಾನವಾದ ಗತಿಯುಳ್ಳವರಾಗಿಯೂ, ಜಗತ್ತಿಗೆ

ಉಪಕಾರಕವಾದ ಕರ್ಮವುಳ್ಳವರಾಗಿಯೂ ಸಹ ರಕ್ಷಕವಾದುವೂ ಗಮನಶೀಲವಾದವೂ ಆದ ಅಶ್ವಗಳೊಡನೆ ಒಡನೆಯೇ ಅಂತರಿಕ್ಷದಲ್ಲಿ ಸರ್ವತ್ರ ವ್ಯಾಪಿಸುತ್ತಾರೆ.

## English Translation.

I send my prayer as a messenger to the Ribhus; I solicit (of them) the milch cow, the yielder of the white milk, for the dilution (of the Soma libation); for they, as swift as the wind, the doers of good works, were borne quickly across the firmament by rapid steeds.



॥ ಸಂಹಿತಾಪಾಠಃ ॥

ಯದಾರಮಕ್ರನ್ನೃಭವಃ ಪಿತೃಭ್ಯಾಂ ಪರಿವಿಷ್ಟೀ ವೇಷಣಾ ದಂಸನಾಭಿಃ ।
ಆದಿದ್ದೇವಾನಾಮುಪ ಸಖ್ಯಮಾಯನ್ಧೀರಾಸಃ ಪುಷ್ಟಿಮವಹನ್ಮನಾಯೈ ॥

॥ ಪದಪಾಠಃ ॥

ಯದಾ । ಅರಂ । ಅಕ್ರನ್ । ಋಭವಃ । ಪಿತೃಽಭ್ಯಾಂ । ಪರಿಽವಿಷ್ಟೀ । ವೇಷಣಾ । ದಂಸನಾಭಿಃ ।
ಆತ್ । ಇತ್ । ದೇವಾನಾಂ । ಉಪ । ಸಖ್ಯಂ । ಆಯನ್ । ಧೀರಾಸಃ । ಪುಷ್ಟಿಂ । ಅವಹನ್ ।
ಮನಾಯೈ ॥ ೨ ॥

॥ ಸಾಯಣಭಾಷ್ಯಂ ॥

ಯದಾ ಯಸ್ಮಿನ್ಕಾಲ ಋಭವಃ ಪಿತೃಭ್ಯಾಂ ಮಾತಾಪಿತೃಭ್ಯಾಂ ಪರಿವಿಷ್ಟೀ ಪರಿವೇಷಣೇನ ಪರಿಚರ್ಯಯಾ ವೇಷಣಾ ವೇಷಣೇನ ವ್ಯಾಪ್ತ್ಯಾ । ಯದ್ವಾ । ವೇಷೇಣ ಜರದ್ರೂಪಯೋರ್ಯುವತ್ವಕರಣೇನ ದಂಸನಾಭಿರನ್ಯೈಶ್ಚಮಸನಿರ್ಮಾಣಾದಿಕರ್ಮಭಿರರಮತ್ಯರ್ಥಮಕ್ರನ್ ಆದಿದನಂತರಮೇವ ದೇವಾನಾಮಿಂದ್ರಾದೀನಾಂ ಸಖ್ಯಂ ಸಖಿತ್ವಂ ಸಮಾನಖ್ಯಾನತ್ವಂ ದೇವತಾತ್ವಮುಪಾಯನ್। ಅಗಮನ್ । ಯುವಶಾ ಕರ್ತ್ವಾ । ಋಗ್ವೇ. ೧-೧೬೧-೩ । ಇತಿ ದೇವತ್ವಪ್ರಾಪ್ತೇರೇಕಾಂತತ್ವೇನ ದೇವೈರುಕ್ತತ್ವಾದಿತಿ ಭಾವಃ । ಕಿಂಚ ಧೀರಾಸೋ ಧೀರಾ ಬುದ್ಧಿಮಂತಸ್ತೇಷಾಂ ಪುಷ್ಟಿಂ ಗವಾದಿವಿಷಯಾಂ ಮನಾಯೈ ಮತಿಕೃತೇ ಯಜಮಾನಾಯಾವಹನ್ । ವಹಂತಿ । ಧಾರಯಂತಿ । ಯದ್ವಾ । ಸವಿಷಯಾಂ ಪುಷ್ಟಿಂ ಮನಾಯೈ ಮನಸೇ। ಪ್ರಕೃಷ್ಟಮನಸ್ಕತ್ವಾಯಾವಹನ್ ॥

|| ಪ್ರತಿಪದಾರ್ಥ ||

ಯದಾ—ಯಾವಾಗ | ಋಭವಃ—ಋಭುಗಳು | ಪಿತೃಭ್ಯಾಂ—ತಮ್ಮ ಮಾತಾಪಿತೃಗಳಿಗೆ | ವೇಷಣಾ—ಶಕ್ತಿಯುತವಾದ ಯೌವ್ವನವನ್ನುಂಟುಮಾಡುವುದರಿಂದಲೂ | ದಂಸನಾಭಿಃ—ಇತರ ಅಲೌಕಿಕವಾದ ಕರ್ಮಗಳಿಂದಲೂ | ಪರಿವಿಷ್ಟೀ—ಉಪಚರಿಸುತ್ತಾ | ಅರಂ ಅಕ್ರನ್—ಸಿದ್ಧಿಯನ್ನು ಪಡೆದರೋ | ಆದಿತ್—ಆ ಒಡನೆಯೇ | ದೇವಾನಾಂ—ಇಂದ್ರಾದಿದೇವತೆಗಳ | ಸಖ್ಯಂ—ಸಖಿತ್ವವನ್ನು | ಉಪ ಆಯನ್—ಪಡೆದರು | ಧೀರಾಸಃ—ಪ್ರಾಜ್ಞರಾದ ಇವರು | ಪುಷ್ಟಿಂ—ಗವಾದಿರೂಪವಾದ ಸಂಪತ್ಪುಷ್ಟಿಯನ್ನು | ಮನಾಯೈ—ಸ್ತುತಿಕರ್ತನಾದ ಯಜಮಾನನಿಗೆ | ಅವಹನ್– ಒದಗಿಸಿಕೊಡುತ್ತಾರೆ.

|| ಭಾವಾರ್ಥ ||

ಋಭುಗಳು ತಮ್ಮ ಅಸಾಧಾರಣವಾದ ಕರ್ಮಗಳಿಂದಲೂ ವ್ಯಾಪಕವಾದುದೂ, ಶಕ್ತಿಯುತವಾದುದೂ ಆದ ಯೌವನ ಪ್ರಾಪ್ತಿಯಿಂದಲೂ ತಮ್ಮ ಮಾತಾಪಿತೃಗಳನ್ನು ಪಚರಿಸುತ್ತಾ ಯಾವಾಗ ಸಿದ್ಧಿಯನ್ನು ಪಡೆದರೋ, ಆ ಒಡನೆಯೇ, ಇಂದ್ರಾದಿದೇವತೆಗಳ ಸಖಿತ್ವವನ್ನು ಪಡೆದರು. ಪ್ರಾಜ್ಞರಾದ ಇವರು ಗವಾದಿರೂಪವಾದ ಸಂಪತ್ಪುಷ್ಟಿಯನ್ನು ಸ್ತುತಿಕರ್ತನಾದ ಯಜಮಾನನಿಗೆ ಒದಗಿಸಿಕೊಡುತ್ತಾರೆ.

## English Translation.

When the Ribhus, by honouring their parents with renovated (youth), and by other works, had achieved enough, they thereupon proceeded to the society of the gods, and considerate, they bring nourshment to the devout (worshipper).

|| ಸಂಹಿತಾಪಾಠಃ ||

ಪುನರ್ಯೇ ಚಕ್ರುಃ ಪಿತರಾ ಯುವಾನಾ ಸನಾ ಯೂಪೇವ ಜರಣಾ ಶಯಾನಾ |

ತೇ ವಾಜೋ ವಿಭ್ವಾ ಋಭುರಿಂದ್ರವಂತೋ ಮಧುಪ್ಸರಸೋ ನೋಽವಂತು ಯಜ್ಞಂ || ೩ ||

॥ ಪದಪಾಠಃ ॥

ಪುನಃ । ಯೇ । ಚಕ್ರುಃ । ಪಿತರಾ । ಯುವಾನಾ । ಸನಾ । ಯೂಪಾಽಇವ । ಜರಣಾ । ಶಯಾನಾ । ತೇ । ವಾಜಃ । ವಿಽಭ್ವಾ । ಋಭುಃ । ಇಂದ್ರಽವಂತಃ । ಮಧುಽಪ್ಸರಸಃ । ನಃ । ಅವಂತು । ಯಜ್ಞಂ ॥ ೩ ॥

॥ ಸಾಯಣಭಾಷ್ಯಂ ॥

ಯೆ ಋಭವಃ ಪಿತರಾ ಮಾತಾಪಿತರೌ ಯೂಪೇವ ಛಿನ್ನಸ್ಥಾಣೂ ಇವ ಜರಣಾ ಜೀರ್ಣೌ ಶಯಾನಾ ಶಯಾನೌ ಪುನಃ ಸನಾ ಸದಾ ಯುವಾನಾ ಯುವಾನೌ ಚಕ್ರುಃ । ನಿತ್ಯತರುಣಾವಕುರ್ವನ್ । ತೇ ವಾಜೋ ವಿಭ್ವಾ ಋಭುಶ್ಚ ಏತನ್ನಾಮಕಾಸ್ತ್ರಯಃ ಸುಧನ್ವನ ಆಂಗಿರಸಸ್ಯ ಪುತ್ರಾ ಋಭವ ಇಂದ್ರವಂತೋಽನುಗ್ರಾಹಕೇಣೇಂದ್ರೇಣ ತದ್ವಂತೋ ಮಧುಪ್ಸರಸೋ ಮಧುರಸ್ಯ ಸೋಮರಸಸ್ಯ ಭಕ್ಷಯಿತಾರೋ ಮನೋಹರರೂಪಾ ವಾ ನೋಽಸ್ಮದೀಯಂ ಯಜ್ಞಮವಂತು । ರಕ್ಷಂತು ಗಚ್ಛಂತು ವಾ ॥

॥ ಪ್ರತಿಪದಾರ್ಥ ॥

ಯೇ—ಯಾವ ಋಭುಗಳು । ಯೂಪೇವ—ಕತ್ತರಿಸಲ್ಪಟ್ಟ ತುಂಡುಮರಗಳಂತೆ । ಜರಣಾ—ಶಿಥಿಲಾಂಗರೂ । ಶಯಾನಾ—ಒಂದೇ ಕಡೆ ಬಿದ್ದಿದ್ದವರೂ ಆದ । ಪಿತರಾ—ತಮ್ಮ ಮಾತಾಪಿತೃಗಳನ್ನು । ಪುನಃ—ತಿರುಗಿಯೂ । ಸನಾ—ಶಾಶ್ವತವಾಗಿ । ಯುವಾ ನಾ—ಯುವಕರಾಗುವಂತೆ । ಚಕ್ರುಃ—ಮಾಡಿದರೋ । ತೇ—ಅಂತಹ । ವಾಜಃ, ವಿಭ್ವಾ, ಋಭುಃ—ವಾಜ, ವಿಭ್ವ ಮತ್ತು ಋಭು ಎಂಬ ಮೂವರು ಋಭುಗಳೂ । ಇಂದ್ರವಂತಃ—ಇಂದ್ರನೊಡಗೂಡಿಕೊಂಡು । ಮಧುಪ್ಸರಸಃ—ಮಧುರವಾದ ಸೋಮರಸವನ್ನು ಪಾನಮಾಡುವವರಾಗಿ । ನಃ—ನಮ್ಮ । ಯಜ್ಞಂ—ಯಜ್ಞವನ್ನು । ಅವಂತು—ರಕ್ಷಿಸಲಿ.

॥ ಭಾವಾರ್ಥ ॥

ಕತ್ತರಿಸಲ್ಪಟ್ಟ ತುಂಡುಮರಗಳಂತೆ ಒಂದೇ ಕಡೆ ಬಿದ್ದಿದ್ದವರೂ, ಶಿಥಿಲಾಂಗರೂ ಆದ ತಮ್ಮ ಮಾತಾಪಿತೃಗಳನ್ನು ಪುನಃ ಶಾಶ್ವತವಾಗಿ ಯುವಕರಾಗುವಂತೆ ಯಾವ ಋಭುಗಳು ಮಾಡಿದರೋ ಅದೇ ವಾಜ, ವಿಭು, ಋಭು ಎಂಬ ಮೂವರು ಋಭುಗಳೂ ಸಹ ಇಂದ್ರನೊಡಗೂಡಿಕೊಂಡು ಮಧುರವಾದ ಸೋಮರಸವನ್ನು ಪಾನಮಾಡುವವರಾಗಿ ನಮ್ಮ ಯಜ್ಞವನ್ನು ರಕ್ಷಿಸಲಿ.

English Translation.

May they who rendered their decrepid and dropsy parents, when, like two dry posts, again perpetually young, Vaja, Vibhwan, and Ribhu associated with Indra, drinkers of the Soma juice, protect our sacrifice.



॥ ಸಂಹಿತಾಪಾಠಃ ॥

ಯತ್ಸಂವತ್ಸಮೃಭವೋ ಗಾಮರಕ್ಷನ್ಯತ್ಸಂವತ್ಸಮೃಭವೋ ಮಾ ಅಪಿಂಶನ್।

ಯತ್ಸಂವತ್ಸಮಭರನ್ಭಾಸೋ ಅಸ್ಯಾಸ್ತಾಭಿಃ ಶಮೀಭಿರಮೃತತ್ವಮಾಶುಃ ॥೪॥

॥ ಪದಪಾಠಃ ॥

ಯತ್ । ಸಂ್ಽವತ್ಸಂ । ಋಭವಃ । ಗಾಂ । ಅರಕ್ಷನ್ । ಯತ್ । ಸಂ್ಽವತ್ಸಂ । ಋಭವಃ । ಮಾಃ । ಅಪಿಂಶನ್ ।

ಯತ್ । ಸಂ್ಽವತ್ಸಂ । ಅಭರನ್ । ಭಾಸಃ । ಅಸ್ಯಾಃ । ತಾಭಿಃ । ಶಮೀಭಿಃ । ಅಮೃತ್ಽತ್ವಂ । ಆಶುಃ ॥ ೪ ॥

॥ ಸಾಯಣಭಾಷ್ಯಂ ॥

ಸಂವತ್ಸಂ । ಸಂವಸಂತಿ ಭೂತಾನ್ಯಸ್ಮಿನ್ನಿತಿ ಸಂವತ್ಸಃ ಸಂವತ್ಸರಃ । ಸಂವತ್ಸರಪರ್ಯಂತಮೃಭವೋ ಗಾಂ ಮೃತಾಮರಕ್ಷನ್ನಪಾಲಯನ್ । ಸ್ವಸಾಮರ್ಥ್ಯಾದಿತಿ ಯತ್ ಯದೇತತ್ಕರ್ಮಾಸ್ತಿ । ತಥಾ ಸಂವತ್ಸಂ ಸಂವತ್ಸರಮೃಭವೋ ಮಾಸ್ತಸ್ಯಾ ಏವ ಗೋರ್ಮಾಂಸಮಪಿಂಶನ್ ಅವಯವಾನಕುರ್ವನ್ನಿತಿ ಯತ್ । ಕಿಂಚ ಸಂವತ್ಸಂ ಸಂವತ್ಸರಪರ್ಯಂತಮಸ್ಯಾ ಭಾಸೋಽಭರನ್ ದೀಪ್ತೀರವಯವಶೋಭಾ ಅಕುರ್ವನ್ನಿತಿ ಯತ್ ತಾಭಿಃ ಶಮೀಭಿರ್ಮೃತಾಯಾ ಗೋರ್ನವೀಕರಣವಿಷಯೈಃ ಕರ್ಮಭಿರಮೃತತ್ವಮಾಶುಃ । ದೇವತ್ವಂ ಪ್ರಾಪ್ತಾಃ । ಧೇನುಃ ಕರ್ತ್ವೇತಿ ದೇವತ್ವಪ್ರಾಪ್ತಿಸಾಧನತ್ವೇನ ದೇವೈಃ ಪ್ರತಿಶ್ರುತತ್ವಾತ್ । ಯದ್ವಾ । ಅತ್ರ ಸಂವತ್ಸಮಿತ್ಯೇತದ್ವತ್ಸೇನ ಸಹೇತಿ ವ್ಯಾಖ್ಯೇಯಂ ॥

॥ ಪ್ರತಿಪದಾರ್ಥ ॥

ಋಭವಃ—ಋಭುಗಳು । ಸಂವತ್ಸಂ—ಒಂದು ಸಂವತ್ಸರ ಪರ್ಯಂತ । ಗಾಂ—ಮೃತವಾದ ಗೋವನ್ನು । ಅರಕ್ಷನ್—ಜೀವಂತವಾಗಿರುವಂತೆ ಮಾಡಿದರು ಎಂಬ । ಯತ್—ಯಾವ ಕರ್ಮವಿದೆಯೋ । ಸಂವತ್ಸಂ—ಒಂದು ಸಂವತ್ಸರ ಪರ್ಯಂತ । ಋಭವಃ—ಅದೇ ಋಭುಗಳು । ಮಾಃ—ಆ ಗೋವಿನ ಮಾಂಸವನ್ನು । ಅಪಿಂಶನ್—ಅವಯವಗಳಲ್ಲಿ ತುಂಬಿ ಪುಷ್ಟವಾಗಿರುವಂತೆ ಮಾಡಿದರು ಎಂಬ । ಯತ್—ಯಾವ ಕರ್ಮವಿದೆಯೋ । ಸಂವತ್ಸಂ—ಒಂದು ಸಂವತ್ಸರ ಪರ್ಯಂತ । ಅಸ್ಯಾಃ—ಈ ಗೋವಿನ । ಭಾಸಃ—ಕಾಂತಿಯುತವಾದ ಸೌಂದರ್ಯವನ್ನು । ಅಭರನ್—ರಕ್ಷಿಸಿದರು ಎಂಬ । ಯತ್—ಯಾವ ಕರ್ಮವಿದೆಯೋ । ತಾಭಿಃ—ಇಂತಹ । ಶಮೀಭಿಃ—ಸಕಲವಾದ ಅಲೌಕಿಕಕರ್ಮಗಳಿಂದಲೂ । ಅಮೃತತ್ವಂ—ದೇವತ್ವವನ್ನು । ಆಶುಃ—ಹೊಂದಿದರು.

॥ ಭಾವಾರ್ಥ ॥

ಋಭುಗಳು ಒಂದು ಸಂವತ್ಸರ ಪರ್ಯಂತ ಮೃತವಾದ ಗೋವಿಗೆ ಜೀವವನ್ನುಂಟುಮಾಡಿ ಅದು ಜೀವಿಸಿ ರುವಂತೆ ಮಾಡಿದರು. ಅದರ ಅವಯವಗಳಲ್ಲಿ ಮಾಂಸವನ್ನು ತುಂಬಿ ಒಂದು ಸಂವತ್ಸರಕಾಲ ಅದು ಪುಷ್ಟವಾಗಿ ರುವಂತೆ ಮಾಡಿದರು. ಒಂದು ಸಂವತ್ಸರಕಾಲ ಅದರ ಕಾಂತಿಯುತವಾದ ಸೌಂದರ್ಯವನ್ನು ರಕ್ಷಿಸಿದರು. ಇತ್ಯಾದಿ ಇವರ ಅಸಾಧಾರಣವಾದ ಯಾವ ಯಾವ ಕರ್ಮಗಳಿವೆಯೋ ಅವುಗಳ ಪ್ರಭಾವದಿಂದ ದೇವತ್ವವನ್ನು ಪಡೆದರು. (ವತ್ಸ ಶಬ್ದಕ್ಕೆ ಕರುವೆಂದೂ ಅರ್ಥಮಾಡಬಹುದು.)

## English Translation.

Inasmuch as for a year the Ribhus preserved the (dead) cow, inasmuch as for a year they invested it with flesh, inasmuch as for a year they continued its beauty, they obtaied by their (these) acts immortality.



॥ ಸಂಹಿತಾಪಾಠಃ ॥

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ ಕೃಣವಾಮೇತ್ಯಾಹ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ ॥ ೫ ॥

॥ ಪದಪಾಠಃ ।

ಜ್ಯೇಷ್ಠಃ । ಆಹ । ಚಮಸಾ । ದ್ವಾ । ಕರ । ಇತಿ । ಕನೀಯಾನ್ । ತ್ರೀನ್ । ಕೃಣವಾಮ । ಇತಿ । ಆಹ ।

ಕನಿಷ್ಠಃ । ಆಹ । ಚತುರಃ । ಕರ । ಇತಿ । ತ್ವಷ್ಟಾ । ಋಭವಃ । ತತ್ । ಪನಯತ್ । ವಚಃ । ವಃ ॥ ೫ ॥

॥ ಸಾಯಣಭಾಷ್ಯಂ ॥

ಏಕಂ ಚಮಸಂ ಚತುರಸ್ಕೃಣೋತನ । ಋಗ್ವೇ ೧–೧೬೧–೨ । ಇತಿ ಯದಾ ದೇವದೂತೋಽಗ್ನಿರ್ಋಭೂನಾಹ ದೇವತ್ವಪ್ರಾಪ್ತ್ಯುಕ್ತೇನ ತದಾ ತೇಷು ಮಧ್ಯೇ ದೇವತ್ವಪ್ರಾಪ್ತ್ಯುತ್ಕ ಏಕೋ ಜ್ಯೇಷ್ಠ ಋಭುರಿತರಾವಾಹ । ಕಿಮಿತಿ । ಉಚ್ಯತೇ । ಚಮಸಾ ದ್ವಾ ಕರೇತಿ । ಏಕಮೇವ ಸಂತಂ ದ್ವಾ ಕೃಣವಾಮೇತಿ । ಕನೀಯಾನ್ ತದನಂತರೋ ವಿಭ್ವಾ ತ್ರೀನ್ ಕೃಣವಾಮ ಕರವಾಮೇತ್ಯಾಹ । ತದವರಃ ಕನಿಷ್ಠೋ

ವಾಜಶ್ಚತುರಃ ಕರ ಚತುರ್ಥಾ ಕರವಾಮೇತ್ಯಾಹ । ತದೇವ ಚತುಷ್ಕರಣರೂಪಂ ಹೇ ಋಭವಸ್ತ್ವಷ್ಟಾ ಯುಷ್ಮದ್ಗುರುಃ ವೋ ವಚಃ ಯುಷ್ಮದ್ವಚನಂ ಪನಯತ್ । ಅಸ್ತೌತ್ । ಅಂಗೀಚಕಾರೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಜ್ಯೇಷ್ಠಃ—ಮೂವರಲ್ಲಿ ದೊಡ್ಡವನು । ಚಮಸಾ—ಚಮಸಪಾತ್ರೆಯನ್ನು । ದ್ವಾ ಕರ ಇತಿ—ಎರಡಾಗಿ ಮಾಡೋಣ ಎಂದು । ಆಹ—ಹೇಳಿದನು । ಕನೀಯಾನ್—ಆವನಿಗಿಂತಲೂ ಚಿಕ್ಕವನು (ಎರಡನೆಯವನು) । ತ್ರೀನ್—ಮೂರು ಭಾಗವಾಗಿ । ಕೃಣವಾಮ—ಮಾಡೋಣ । ಇತ್ಯಾಹ—ಎಂಬುದಾಗಿ ಹೇಳಿದನು । ಕನಿಷ್ಠಃ—ಎಲ್ಲರಿಗಿಂತಲೂ ಚಿಕ್ಕವನು । ಚತುರಃ—ನಾಲ್ಕು ಭಾಗಗಳನ್ನಾಗಿ । ಕರ ಇತ್ಯಾಹ—ಮಾಡೋಣ ಎಂದು ಹೇಳಿದನು । ಋಭವಃ—ಎಲೈ ಋಭುಗಳೇ । ತ್ವಷ್ಟಾ—ತ್ವಷ್ಟೃವು । ವಃ—ನಿಮ್ಮ । ತತ್ ವಚಃ—ಕುಶಲತೆಯನ್ನು ಕೋರುವ ಈ ಮಾತುಗಳನ್ನು । ಪನಯತ್—ಪ್ರಶಂಸಿಸಿದ್ದಾನೆ.

॥ ಭಾವಾರ್ಥ ॥

ಒಂದಾಗಿದ್ದ ಚಮಸಪಾತ್ರೆಯನ್ನು ಎರಡಾಗಿ ಮಾಡೋಣ ಎಂದು ಮೂರು ಋಭುಗಳಲ್ಲಿ ಎಲ್ಲರಿಗಿಂತಲೂ ದೊಡ್ಡವನು ಹೇಳಿದನು. ಮೂರು ಭಾಗವಾಗಿ ಮಾಡೋಣ ಎಂದು ಎರಡನೆಯವನು ಹೇಳಿದನು. ನಾಲ್ಕು ಭಾಗಗಳನ್ನಾಗಿ ಮಾಡೋಣ ಎಂದು ಕನಿಷ್ಠನು ಹೇಳಿದನು. ಎಲೈ ಋಭುಗಳೇ, ನಿಮ್ಮೆಲ್ಲರ ಕುಶಲತೆಯನ್ನು ತೋರಿಸುವ ನಿಮ್ಮ ಈ ಮಾತುಗಳನ್ನು ತ್ವಷ್ಟೃವು ಪ್ರಶಂಸಿಸಿದ್ದಾನೆ.

English Translation.

The eldest said, let us make two ladles; the youngest said, let us make three: O Rubhus, Twashtri, has applauded your proposal.



॥ ಸಂಹಿತಾಪಾಠಃ ॥

ಸತ್ಯಮೂಚುರ್ನರ ಏವಾ ಹಿ ಚಕ್ರುರನು ಸ್ವಧಾಮೃಭವೋ ಜಗ್ಮುರೇತಾಂ ।
ವಿಭ್ರಾಜಮಾನಾಂಶ್ಚಮಸಾँ ಅಹೇವಾವೇನತ್ತ್ವಷ್ಟಾ ಚತುರೋ ದದೃಶ್ವಾನ್ ॥

। ಪದಪಾಠಃ ।

ಸತ್ಯಂ । ಊಚುಃ । ನರಃ । ಏವ । ಹಿ । ಚಕ್ರುಃ । ಅನು । ಸ್ವಧಾಂ । ಋಭವಃ । ಜಗ್ಮುಃ । ಏತಾಂ ।

ವಿಭ್ರಾಜಮಾನಾನ್ । ಚಮಸಾನ್ । ಅಹಾಽಇವ । ಅವೇನತ್ । ತ್ವಷ್ಟಾ । ಚತುರಃ । ದದೃಶ್ವಾನ್ ॥

॥ ಸಾಯಣಭಾಷ್ಯಂ ॥

ನರೋ ಮನುಷ್ಯರೂಪಾ ಋಭವಃ ಸತ್ಯಮೂಚುಃ । ಸತ್ಯಮೇವಾಬ್ರುವನ್ । ಹಿ ಯಸ್ಮಾದೇತ ಏವ್ವೆವಂ ಚಕ್ರುಃ । ಚತುರೋಽಕುರ್ವನ್ । ಯಥೋಕ್ತಂ ತಥೈವ ಕೃತತ್ವಾದಿತ್ಯಭಿಪ್ರಾಯಃ । ಅನು ಚತುರ್ಧಾಕರಣಾನಂತರಮೇತಾಂ ತೃತೀಯಸವನಗತಾಂ ಸ್ವಧಾಂ ಸೋಮಾಖ್ಯಮಮೃತಮೃಭವೋ ಜಗ್ಮುಃ । ಏಕಂ ಚಮಸಂ ಚತುರಸ್ಕೃಣೋತನ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥೇತಿ ಶ್ರುತ-ತ್ವಾತ್ । ಅಥ ತ್ವಷ್ಟಾ ದೇವೋ ವಿಭ್ರಾಜಮಾನಾನಹೇವಾಹಾನೀವ ದೀಪ್ಯಮಾನಾಂಶ್ಚಮಸಾಂಶ್ಚತುರೋ ದದೃಶ್ವಾನ್ದೃಷ್ಟವಾನ್ ಸನ್ನವೇನತ್ । ಅಕಾಮಯತ । ಅಂಗೀಚಕಾರೇತ್ಯರ್ಥಃ ॥

॥ ಪ್ರತಿಪದಾರ್ಥ ॥

ನರಃ—ಮನುಷ್ಯರೂಪರಾದ ಋಭುಗಳು । ಸತ್ಯಂ—ಸತ್ಯವಾಕ್ಯನ್ನು । ಊಚುಃ—ಹೇಳಿದರು । ಹಿ—ಯಾವ ಕ್ರಿಯಾಶಕ್ತಿಯಿಂದ । ಏವ—ಮೇಲೆ ಹೇಳಿದಂತೆ । ಚಕ್ರುಃ—ಒದಗಿದ್ದ ಚಮಸ ಪಾತ್ರೆಯನ್ನು ನಾಲ್ಕು ಭಾಗಗಳಾಗುವಂತೆ ಮಾಡಿದರೋ । ಅನು—ಆ ಒಡನೆಯೇ । ಏತಾಂ—ತೃತೀಯಸವನಗತವಾದ । ಸ್ವಧಾಂ—ಸೋಮರೂಪವಾದ ಅಮೃತವನ್ನು । ಋಭವಃ—ಋಭುಗಳು । ಜಗ್ಮುಃ—ಪಡೆದರು । ತ್ವಷ್ಟಾ—ತ್ವಷ್ಟೃವು । ಅಹೇವ—ಅಹಸ್ಸಿನಂತೆ । ವಿಭ್ರಾಜಮಾನಾನ್—ಪ್ರಕಾಶಿಸುತ್ತಿದ್ದ । ಚತುರಃ ಚಮಸಾನ್—ನಾಲ್ಕು ಪಾತ್ರೆಗಳನ್ನೂ । ದದೃಶ್ವಾನ್—ನೋಡುತ್ತಾ । ಅವೇನತ್—ತೃಪ್ತಿಯನ್ನು ವ್ಯಕ್ತಪಡಿಸಿದನು.

॥ ಭಾವಾರ್ಥ ॥

ಮನುಷ್ಯರೂಪರಾದ ಋಭುಗಳು ಸತ್ಯವಾಕ್ಯನ್ನೇ ನುಡಿದರು. ಅವರು ಯಾವ ಕ್ರಿಯಾಶಕ್ತಿಯಿಂದ ಮೇಲೆ ಹೇಳಿದಂತೆ ಒಂದಾಗಿದ್ದ ಚಮಸಪಾತ್ರೆಯನ್ನು ನಾಲ್ಕು ಭಾಗಗಳಾಗುವಂತೆ ಮಾಡಿದರೋ ಆ ಒಡನೆಯೇ ತೃತೀಯ ಸವನಗತವಾದ ಸ್ವಧೆಯನ್ನು ಪಡೆದರು. ತ್ವಷ್ಟೃವು ಅಹಸ್ಸಿನಂತೆ ಪ್ರಕಾಶಿಸುತ್ತಿದ್ದ ನಾಲ್ಕು ಪಾತ್ರೆಗಳನ್ನೂ ನೋಡುತ್ತಾ ತನ್ನ ತೃಪ್ತಿಯನ್ನು ವ್ಯಕ್ತಪಡಿಸಿದನು.

## English Translation.

The men, (the Ribhus), spoke the truth, for such (ladles) they made and therupon the Ribhus partook of that libation: Twashtri, beholding the four ladles, brilliant as day, was content.

---

॥ ಸಂಹಿತಾಪಾಠಃ ॥

ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।
ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನ-
ಮಾಪಃ ॥ ೭ ॥

|| ಪದಪಾಠಃ ||

ದ್ವಾದಶ । ದ್ಯೂನ್ । ಯತ್ । ಅಗೋಹ್ಯಸ್ಯ । ಆತಿಥ್ಯೇ । ರಣನ್ । ಋಭವಃ । ಸಸಂತಃ ।

ಸುಽಕ್ಷೇತ್ರಾ । ಅಕೃಣ್ವನ್ । ಅನಯಂತ । ಸಿಂಧೂನ್ । ಧನ್ವ । ಆ । ಅತಿಷ್ಠನ್ । ಓಷಧೀಃ ।

ನಿಮ್ನಂ । ಅಪಃ ॥ ೭ ॥

॥ ಸಾಯಣಭಾಷ್ಯಂ ॥

ತತ್ರ ರಶ್ಮಯ ಏವ ಋಭವ ಇತ್ಯುಕ್ತತ್ವಾತ್ತದ್ರೂಪೇಣ ಸ್ತೂಯಂತೇ । ಯದ್ಯದಾ ದ್ವಾದಶ ದ್ಯೂನ್ದಿವಸಾನ್ । ಆರ್ದ್ರಾದಿದ್ವಾದಶವೃಷ್ಟಿನಕ್ಷತ್ರಾಣೀತ್ಯರ್ಥಃ । ಅಗೋಹ್ಯಸ್ಯಾಗೋಪ್ಯಸ್ಯಾದಿತ್ಯಸ್ಯ ಗೃಹ ಆತಿಥ್ಯೇ । ಅಕಸ್ಮಾದಾಗತೋಽತಿಥಿಃ । ತದುಚಿತಂ ಸತ್ಕಾರರೂಪಂ ಕರ್ಮಾತಿಥ್ಯಂ । ತದರ್ಥಂ ಸಸಂತಃ ಸ್ವಪಂತಃ ಸುಖೇನ ನಿವಸಂತ ಋಭವೋ ರಣನ್ ರಮಂತೇ । ಅಗೋಹ್ಯಸ್ಯ ಯದಸಸ್ತನಾ ಗೃಹೇ । ಋಗ್ವೇ. ೧-೧೬೧-೧೧ । ಇತ್ಯುಕ್ತಂ । ತದಾನೀಂ ಸುಕ್ಷೇತ್ರಾಕೃಣ್ವನ್ । ಅಕೃಷ್ಟಾನಿ ಶೂನ್ಯಾನಿ ಕ್ಷೇತ್ರಾಣಿ ವೃಷ್ಟ್ಯಾ ಸಸ್ಯಾದಿಸಮೃದ್ಧಾನ್ಯಕುರ್ವನ್ । ಸಿಂಧೂನ್ನದೀರನಯಂತ । ಪ್ರೈರಯನ್ । ತಸ್ಮಿನ್ ಕಾಲ ಓಷಧೀರೋಷಧಯೋ ಧನ್ವ ನಿರುದಕಸ್ಥಾನಮಾಶ್ರಿತ್ಯಾತಿಷ್ಠನ್ । ನಿಮ್ನಂ ನೀಚಸ್ಥಾನಮಾಪೋಽತಿಷ್ಠನ್ । ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪ ಇತ್ಯುಕ್ತಂ ॥

॥ ಪ್ರತಿಪದಾರ್ಥ ॥

ಋಭವಃ—ಋಭುಗಳು । ಯತ್—ಯಾವಾಗ । ದ್ವಾದಶ ದ್ಯೂನ್—ಹನ್ನೆರಡು ದಿವಸಗಳು । ಅಗೋಹ್ಯಸ್ಯ—ಮರೆಯಿಲ್ಲದೆ ಪ್ರಕಾಶಿಸುತ್ತಿದ್ದ ಆದಿತ್ಯನ । ಆತಿಥ್ಯೇ—ಆದರರೂಪವಾದ ಆತಿಥ್ಯದಲ್ಲಿ । ಸಸಂತಃ—ಸುಖವಾಗಿ ವಾಸಿಸುತ್ತಾ । ರಣನ್—ಸಂತುಷ್ಟರಾಗಿದ್ದರೋ (ಆಗ) । ಸುಕ್ಷೇತ್ರಾ—(ಬಂಜರು) ಭೂಮಿಯನ್ನು ಫಲವತ್ತಾದ ಭೂಮಿಯನ್ನಾಗಿ । ಅಕೃಣ್ವನ್—ಮಾಡಿದರು । ಸಿಂಧೂನ್—ನದಿಗಳನ್ನು । ಅನಯಂತ—ಪ್ರವಹಿಸುವಂತೆ ಮಾಡಿದರು । ಓಷಧೀಃ—ಓಷಧಿಗಳನ್ನು । ಧನ್ವ—ಉದಕರಹಿತವಾಗಿದ್ದ ಬೆಂಗಾಡಿನಲ್ಲಿಯೂ । ಅತಿಷ್ಠನ್—ಬೆಳೆದು ನಿಲ್ಲುವಂತೆ ಮಾಡಿದರು । ನಿಮ್ನಂ—ತಗ್ಗು ಪ್ರದೇಶಗಳಲ್ಲಿ । ಅಪಃ—ಉದಕಗಳನ್ನು ತಂಗುವಂತೆ ಮಾಡಿದರು.

॥ ಭಾವಾರ್ಥ ॥

ಮರೆಯಿಲ್ಲದೇ ಪ್ರಕಾಶಿಸುತ್ತಿದ್ದ ಆದಿತ್ಯನ ಆದರರೂಪವಾದ ಆತಿಥ್ಯದಲ್ಲಿ ಹನ್ನೆರಡು ದಿವಸಗಳು ಸುಖವಾಗಿ ವಾಸಿಸುತ್ತಾ ಋಭುಗಳು ಸಂತುಷ್ಟರಾಗಿದ್ದಾಗ ಅವರು ಬಂಜರುಭೂಮಿಯನ್ನು ಫಲವತ್ತಾದ ಭೂಮಿಯನ್ನಾಗಿ ಮಾಡಿದರು. ನದಿಗಳನ್ನು ಪ್ರವಹಿಸುವಂತೆ ಮಾಡಿದರು. ಉದಕರಹಿತವಾಗಿದ್ದ ಬೆಂಗಾಡಿನಲ್ಲಿಯೂ ಸಹ ಓಷಧಿಗಳು ಬೆಳೆದು ನಿಲ್ಲುವಂತೆ ಮಾಡಿದರು. ಉದಕಗಳು ತಗ್ಗು ಪ್ರದೇಶದಲ್ಲಿ ತಂಗುವಂತೆ ಮಾಡಿದರು.

## English Translation.

When the Ribhus, reposing for twelve days, remained in the hospitality of the unconcealable (sun), they rendered the fields fertile, they led forth the rivers, plants sprung upon the waste, and waters (spread over) the low (places).

---

॥ ಸಂಹಿತಾಪಾಠಃ ॥

ರಥಂ ಯೇ ಚಕ್ರುಃ ಸುವೃತಂ ನರೇಷ್ಠಾಂ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ ।

ತ ಆ ತಕ್ಷಂತ್ವೃಭವೋ ರಯಿಂ ನಃ ಸ್ವವಸಃ ಸ್ವಪಸಃ ಸುಹಸ್ತಾಃ ॥ ೮ ॥

॥ ಪದಪಾಠಃ ॥

ರಥಂ । ಯೇ । ಚಕ್ರುಃ । ಸುಽವೃತಂ । ನರೇಽಸ್ಥಾಂ । ಯೇ । ಧೇನುಂ । ವಿಶ್ವಽಜುವಂ । ವಿಶ್ವಽರೂಪಾಂ ।

ತೇ । ಆ । ತಕ್ಷಂತು । ಋಭವಃ । ರಯಿಂ । ನಃ । ಸುಽಅವಸಃ । ಸುಽಅಪಸಃ । ಸುಽಹಸ್ತಾಃ ॥ ೮॥

॥ ಸಾಯಣಭಾಷ್ಯಂ ॥

ಯೆ ಋಭವಃ ಸುವೃತಂ ಸುಚಕ್ರಂ ಸುಷ್ಠು ವರ್ತಮಾನಂ ವಾ ನರೇಷ್ಠಾಂ ನೇತರಿ ಚಕ್ರೇ ವರ್ತಮಾನಂ ರಥಂ ಚಕ್ರುಃ । ಯೇ ಚ ವಿಶ್ವಜುವಂ ವಿಶ್ವಸ್ಯ ಪ್ರೇರಯಿತ್ರೀಂ ವಿಶ್ವರೂಪಾಂ ಬಹುರೂಪಾಮೇತನ್ನಾಮಿಕಾಂ ವಾ ಧೇನುಂ ಗಾಂ ಚಕ್ರುಃ । ಅಕುರ್ವನ್ । ಬೃಹಸ್ಪತಿರ್ವಿಶ್ವರೂಪಾಮುಪಾಜತ । ಋಗ್ವೇ. ೧-೧೬೧-೬ । ಇತಿ ಹ್ಯುಕ್ತಂ । ತೇ ಮಹಾಂತ ಋಭವೋ ನೋಽಸ್ಮಾಕಂ ರಯಿಂ ಧನಮಾ ತಕ್ಷಂತು । ಸರ್ವತೋ ನಿಷ್ಪಾದಯಂತು । ಕೀದೃಶಾಸ್ತ ಋಭವಃ । ಸ್ವಪಸಃ ಸುಕರ್ಮಾಣಃ ಸ್ವವಸಃ ಶೋಭನಾನ್ನೋಪೇತಾಃ ಸುರಕ್ಷಣಾ ವಾ ಸುಹಸ್ತಾಃ ಶೋಭನಹಸ್ತಾಃ ಕುಶಲಹಸ್ತಾಃ ॥

॥ ಪ್ರತಿಪದಾರ್ಥ ॥

ಯೇ—ಯಾವ ಋಭುಗಳು । ಸುವೃತಂ—ಶ್ರೇಷ್ಠವಾಗಿ ಸ್ಥಿತವಾಗಿರುವುದೂ । ನರೇಷ್ಠಾಂ—ಉತ್ತಮವಾದ ಚಕ್ರದ ಮೇಲೆ ನಿಂತಿರುವುದೂ ಆದ । ರಥಂ—ರಥವನ್ನು । ಚಕ್ರುಃ—ನಿರ್ಮಿಸಿದರೋ । ಯೇ—

ಯಾವ ಋಭುಗಳು । ವಿಶ್ವಜುವಂ—ವಿಶ್ವಪ್ರೇರಕವಾದುದೂ । ವಿಶ್ವರೂಪಾಂ—ಬಹುರೂಪಾತ್ಮಕವಾದುದೂ ಆದ । ಧೇನುಂ—ಧೇನುವನ್ನು (ನಿರ್ಮಿಸಿದರೋ) । ತೇ—ಅಂತಹ ಮಹಾತ್ಮರೂ । ಸ್ವಪಸಃ–ಶ್ರೇಷ್ಠವಾದ ಕರ್ಮವುಳ್ಳವರೂ । ಸ್ವವಸಃ—ಉತ್ತಮವಾದ ಅನ್ನವುಳ್ಳವರೂ । ಸುಹಸ್ತಾಃ—ಕುಶಲಕರ್ಮಕ್ಕೆ ಯೋಗ್ಯವಾದ ಹಸ್ತವುಳ್ಳವರೂ ಆದ । ಋಭವಃ—ಆ ಋಭುಗಳು । ನಃ—ನಮಗೆ । ರಯಿಂ—ಧನವನ್ನು । ಆ ತಕ್ಷಂತು— ಸಂಪಾದಿಸಿ ಕೊಡಲಿ.

॥ ಭಾವಾರ್ಥ ॥

ಯಾವ ಋಭುಗಳು ಶ್ರೇಷ್ಠವಾಗಿ ಸ್ಥಿತವಾಗಿರುವುದೂ, ಉತ್ತಮವಾದ ಚಕ್ರದ ಮೇಲೆ ನಿಂತಿರುವುದೂ ಆದ ರಥವನ್ನು ನಿರ್ಮಿಸಿದರೋ, ಯಾರು ವಿಶ್ವಪ್ರೇರಕವಾದುದೂ ಬಹುರೂಪಾತ್ಮಕವಾದುದೂ ಆದ ಧೇನುವನ್ನು ನಿರ್ಮಿಸಿದರೋ ಅಂತಹ ಮಹಾತ್ಮರೂ, ಶ್ರೇಷ್ಠವಾದ ಕರ್ಮಕರ್ತರೂ, ಉತ್ತಮವಾದ ಅನ್ನವುಳ್ಳವರೂ, ಕುಶಲಕರ್ಮಕ್ಕೆ ಯೋಗ್ಯವಾದ ಹಸ್ತವುಳ್ಳವರೂ ಆದ ಋಭುಗಳು ನಮಗೆ ಧನವನ್ನು ಸಂಪಾದಿಸಿ ಕೊಡಲಿ.

## English Translation.

May those Ribhus who constructed the firm-abiding, wheel-conducting car; who formed the all-impelling multiform milch cow: they who are bestowers of food, the doers of great deeds, and dexterous of hand, fabricate for us riches.

॥ ಸಂಹಿತಾಪಾಠಃ ॥

ಅಪೋ ಹ್ಯೇಷಾಮಜುಷಂತ ದೇವಾ ಅಭಿ ಕ್ರತ್ವಾ ಮನಸಾ ದೀಧ್ಯಾನಾಃ ।
ವಾಜೋ ದೇವಾನಾಮಭವತ್ಸುಕರ್ಮೇಂದ್ರಸ್ಯ ಋಭುಕ್ಷಾ ವರುಣಸ್ಯ ವಿಭ್ವಾ ॥ ೯ ॥

॥ ಪದಪಾಠಃ ॥

ಅಪಃ । ಹಿ । ಏಷಾಂ । ಅಜುಷಂತ । ದೇವಾಃ । ಅಭಿ । ಕ್ರತ್ವಾ । ಮನಸಾ । ದೀಧ್ಯಾನಾಃ ।
ವಾಜಃ । ದೇವಾನಾಂ । ಅಭವತ್ । ಸುಽಕರ್ಮಾ । ಇಂದ್ರಸ್ಯ । ಋಭುಕ್ಷಾಃ । ವರುಣಸ್ಯ ।
ವಿಽಭ್ವಾ ॥ ೯ ॥

॥ ಸಾಯಣಭಾಷ್ಯಂ ॥

ಏಷಾಮೃಭೂಣಾಮಪೋಽಶ್ವರಥನಿರ್ಮಾಣಾದಿರೂಪಂ ಕರ್ಮ ದೇವಾ ಇಂದ್ರಾದಯೋಽಜು-ಷಂತ । ಅಸೇವಂತ । ಇಂದ್ರೋ ಹರೀ ಯುಯುಜೇ ಅಶ್ವಿನಾ ರಥಮಿತ್ಯಾದಿಮಂತ್ರೋಕ್ತಪ್ರಕಾರೇಣ ಸ್ವೀಕೃತವಂತ ಇತ್ಯರ್ಥಃ । ಕೀದೃಶಾಸ್ತೇ। ಕ್ರತ್ವಾ ವರಪ್ರದಾನರೂಪೇಣ ಕರ್ಮಣಾ ಮನಸಾ ಶೋಭನೇನ ಚಿತ್ತೇನಾನುಗ್ರಹಯುಕ್ತೇನಾಭಿ ದೀಧ್ಯಾನಾ ದೀಪ್ಯಮಾನಾಃ । ದೇವಾನಾಮನುಗ್ರಹೇಣ ಕಿಂ ಲಬ್ಧಮಿ-ತ್ಯಾಹ। ಸುಕರ್ಮಾ ಶೋಭನವ್ಯಾಪಾರೋ ವಾಜಃ ಕನೀಯಾನ್ದೇವಾನಾಂ ಸರ್ವೇಷಾಂ ಸಂಬಂಧ್ಯಭವತ್ । ತಥೇಂದ್ರಸ್ಯ ಸಂಬಂಧ್ಯೃಭುಕ್ಷಾ ಋಭುಜ್ಯೇಷ್ಠಃ । ವಿಭ್ವಾ ಮಧ್ಯಮೋ ವರುಣಸ್ಯ ಸಂಬಂಧ್ಯಭವತ್ ॥

॥ ಪ್ರತಿಪದಾರ್ಥ ॥

ಕ್ರತ್ವಾ—ಕರ್ಮಕೌಶಲ್ಯದಿಂದಲೂ । ಮನಸಾ—ಶುದ್ಧವಾದ ಮನಸ್ಸಿನಿಂದಲೂ । ಅಭಿ ದೀಧ್ಯಾನಾಃ—ಪ್ರಕಾಶಿಸುತ್ತಿದ್ದ । ಏಷಾಂ ಅಪಃ—ಋಭುಗಳ ಅಸಾಧಾರಣಕರ್ಮಗಳನ್ನು । ದೇವಾಃ—ಇಂದ್ರಾದಿದೇವತೆಗಳು । ಅಜುಷಂತ—ಸೇವಿಸುತ್ತಾರೆ । ಸುಕರ್ಮಾ—ಉತ್ತಮವಾದ ಕರ್ಮಕರ್ತನಾದ । ವಾಜಃ—ವಾಜನು । ದೇವಾನಾಂ—ದೇವತೆಗಳಿಗೆ ಬೇಕಾದವನಾಗಿ । ಅಭವತ್—ಆದನು । ಋಭುಕ್ಷಾಃ—ಜ್ಯೇಷ್ಠನಾದ ಋಭುವು । ಇಂದ್ರಸ್ಯ—ಇಂದ್ರನಿಗೆ ಬೇಕಾದ ಕುಶಲಕರ್ಮಿಯಾದನು । ವಿಭ್ವಾ—ಮಧ್ಯಮನಾದ ವಿಭ್ವನು । ವರುಣಸ್ಯ—ವರುಣನಿಗೆ ಬೇಕಾದವನಾದನು.

॥ ಭಾವಾರ್ಥ ॥

ಕರ್ಮಕೌಶಲ್ಯದಿಂದಲೂ, ಶುಧವಾದ ಮನಸ್ಸಿನಿಂದಲೂ ಪ್ರಕಾಶಿಸುತ್ತಿದ್ದ ಋಭುಗಳ ಅಸಾಧಾರಣಕರ್ಮಗಳನ್ನು ಇಂದ್ರಾದಿದೇವತೆಗಳು ಮೆಚ್ಚಿರುತ್ತಾರೆ. ಉತ್ತಮನಾದ, ಕರ್ಮಕರ್ತನಾದ ವಾಜನು ದೇವತೆಗಳಿಗೆ ಬೇಕಾದವನಾಗಿ ಆದನು. ಜ್ಯೇಷ್ಠನಾದ ಋಭುವು ಇಂದ್ರನಿಗೆ ಬೇಕಾದ ಕುಶಲಕರ್ಮಿಯಾದನು. ಮಧ್ಯಮನಾದ ವಿಭ್ವನು ವರುಣನಿಗೆ ಬೇಕಾದವನಾದನು.

## English Translation.

The gods were pleased by their works, illustrious in act and in thought: Vaja was the artificer of the gods, Ribhukshin of Indra, Vibhwan of Varuna.

॥ ಸಂಹಿತಾಪಾಠಃ ॥

ಯೇ ಹರೀ ಮೇಧಯೋಕ್ಥಾ ಮದಂತ ಇಂದ್ರಾಯ ಚಕ್ರುಃ ಸುಯುಜಾ ಯೇ ಅಶ್ವಾ ।

ತೇ ರಾಯಸ್ಪೋಷಂ ದ್ರವಿಣಾನ್ಯಸ್ಮೇ ಧತ್ತ ಋಭವಃ ಕ್ಷೇಮಯಂತೋ
ನ ಮಿತ್ರಂ ॥ ೧೦ ॥

॥ ಪದಪಾಠಃ ॥

ಯೇ । ಹರೀ ಇತಿ । ಮೇಧಯಾ । ಉಕ್ಥಾ । ಮದಂತಃ । ಇಂದ್ರಾಯ । ಚಕ್ರುಃ । ಸುಽಯುಜಾ ।
ಯೇ । ಅಶ್ವಾ ।

ತೇ । ರಾಯಃ । ಪೋಷಂ । ದ್ರವಿಣಾನಿ । ಅಸ್ಮೇ ಇತಿ । ಧತ್ತ । ಋಭವಃ । ಕ್ಷೇಮಽಯಂತಃ ।
ನ ಮಿತ್ರಂ ॥ ೧೦ ॥

॥ ಸಾಯಣಭಾಷ್ಯಂ ॥

ಯ ಋಭವೋ ಹರೀ ಅಶ್ವೌ ಮೇಧಯಾ ಪ್ರಜ್ಞಯೋಕ್ಥಾ ಉಕ್ಥೈಃ ಸ್ತುತಿಭಿರ್ಮದಂತೋ ಹರ್ಷಯಂತಶ್ಚಕ್ರುಃ। ಯೇ ಚ ತೌ ಸುಯುಜಾ ಸುಯುಜೌ ಸುಯೋಜನಾವಶ್ವಾವಿಂದ್ರಾಯೇಂದ್ರಾರ್ಥಂ ಚಕ್ರುಃ । ಅಕುರ್ವನ್ । ಹೇ ಋಭವಸ್ತೇ ಯೂಯಂ ರಾಯಸ್ಪೋಷಂ ಧನಪುಷ್ಟಿಂ ದ್ರವಿಣಾನಿ ಗವಾದಿಧನಾನಿ ಚ ಸುಖಾನಿ ವಾಸ್ಮೇ ಅಸ್ಮಾಸು ಧತ್ತ । ಧಾರಯತ । ಕಿಮಿವ । ಕ್ಷೇಮಯಂತಃ ಕ್ಷೇಮಮಿಚ್ಛಂತೋ ಮಿತ್ರಂ ನ ಮಿತ್ರಮಿವ । ಅತ್ರ ಯದ್ಯಪ್ಯೇಕ ಏವ ಋಭುನಾಮಾ ತತ್ಸಂಬಂಧಾದಿತರೇಽಪ್ಯೃಭವ ಉಚ್ಯಂತೇ ಪ್ರಾಣಭೃನ್ನ್ಯಾಯೇನ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಯೇ—ಯಾವ ನೀವು । ಹರೀ—ಇಂದ್ರನ ಹರಿನಾಮಕಗಳಾದ ಅಶ್ವಗಳನ್ನು । ಮೇಧಯಾ—ನಿಮ್ಮ ಪ್ರಜ್ಞೆಯಿಂದಲೂ । ಉಕ್ಥಾ—ಸ್ತುತಿಗಳಿಂದಲೂ । ಮದಂತಃ—ಹರ್ಷಪಡಿಸುವವರಾದಿರೋ । ಯೇ—ಯಾವ ಅದೇ ನೀವು । ಸುಯುಜಾ—ರಥಕ್ಕೆ ಕಟ್ಟಲು ಯೋಗ್ಯವಾದ । ಅಶ್ವಾ—ಅಶ್ವ ದ್ವಯವನ್ನು । ಇಂದ್ರಾಯ—ಇಂದ್ರನಿಗಾಗಿ । ಚಕ್ರುಃ—ನಿರ್ಮಿಸಿದಿರೋ । ತೇ—ಅದೇ ನೀವು । ಮಿತ್ರಂ ನ—ಸ್ನೇಹಿತನಂತೆ । ಕ್ಷೇಮಯಂತಃ—ನಮ್ಮ ಕಲ್ಯಾಣವನ್ನಿಚ್ಛಿಸುವವರಾಗಿ । ರಾಯಸ್ಪೋಷಂ—ಸಂಪತ್ಪುಷ್ಟಿಯನ್ನೂ । ದ್ರವಿಣಾನಿ—ಗವಾದಿಧನವನ್ನೂ । ಅಸ್ಮೇ—ನಮಗೆ । ಧತ್ತ—ಒದಗಿಸಿಕೊಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ನೀವು ಇಂದ್ರನ ರಥಕ್ಕೆ ಕಟ್ಟಲು ಯೋಗ್ಯವಾದ ಅಶ್ವದ್ವಯವನ್ನು ನಿರ್ಮಿಸಿದಿರಿ. ಅದೇ ಹರಿನಾಮಕವಾದ ಅಶ್ವಗಳನ್ನು ನಿಮ್ಮ ಪ್ರಜ್ಞೆಯಿಂದಲೂ, ಸ್ತುತಿಯಿಂದಲೂ ಹರ್ಷಪಡಿಸಿದಿರಿ. ಅದೇ ನೀವು ಆಪ್ತ ಮಿತ್ರರಂತೆ ನಮ್ಮ ಕಲ್ಯಾಣವನ್ನು ಇಚ್ಛಿಸುವವರಾಗಿ ನಮಗೂ ಗವಾದಿಧನವನ್ನೂ ಸಂಪತ್ಪುಷ್ಟಿಯನ್ನೂ ಒದಗಿಸಿಕೊಡಿ.

## English Translation.

May those Ribhus who gratified the horses (of Indra) by pious praise, who constructed for Indra his two decile steeds, bestow upon us satiety of riches, and wealth (of cattle), like those who devise prosperity for a friend.



॥ ಸಂಹಿತಾಪಾಠಃ ॥

ಇದಾಹ್ನಃ ಪೀತಿಮುತ ವೋ ಮದಂ ಧುರ್ನ ಋತೇ ಶ್ರಾಂತಸ್ಯ ಸಖ್ಯಾಯ ದೇವಾಃ ।

ತೇ ನೂನಮಸ್ಮೇ ಋಭವೋ ವಸೂನಿ ತೃತೀಯೇ ಅಸ್ಮಿನ್ತ್ಸವನೇ ದಧಾತ ॥ ೧೧ ॥

॥ ಪದಪಾಠಃ ॥

ಇದಾ । ಅಹ್ನಃ । ಪೀತಿಂ । ಉತ । ವಃ । ಮದಂ । ಧುಃ । ನ । ಋತೇ । ಶ್ರಾಂತಸ್ಯ । ಸಖ್ಯಾಯ । ದೇವಾಃ ॥

ತೇ । ನೂನಂ । ಅಸ್ಮೇ ಇತಿ । ಋಭವಃ । ವಸೂನಿ । ತೃತೀಯೇ । ಅಸ್ಮಿನ್ । ಸವನೇ । ದಧಾತ ।

॥ ಸಾಯಣಭಾಷ್ಯಂ ॥

ಇದೇದಾನೀಂ ಚಮಸಾದಿನಿರ್ಮಾಣಾನಂತರಮಹ್ನಃ ಸುತ್ಯಾಹಸಂಬಂಧಿನಸ್ತೃತೀಯೇ ಸವನೇ ಪೀತಿಂ ಸೋಮಪಾನಮುತಾಪಿ ಚ ಮದಂ ತಜ್ಜನಿತಂ ವೋ ಯುಷ್ಮಾಕಂ ಧುಃ । ದಧುರ್ದೇವಾಃ । ಶ್ರಾಂತಸ್ಯ ಶ್ರಾಂತಾತ್ತಪೋಯುಕ್ತಾದೃತೇ ಸಖ್ಯಾಯ ಸಖಿತ್ವಾಯ ನ ಭವಂತಿ ದೇವಾಃ । ಯತ ಏತೇ ಶ್ರಾಂತಾ ಅತೋ ದದುರಿತ್ಯರ್ಥಃ । ಹೇ ಋಭವಸ್ತೇ ಮಹಾಂತೋ ಯೂಯಂ ನೂನಂ ನಿಶ್ಚಯಮಸ್ಮೇ ಅಸ್ಮಾಸ್ವಸ್ಮಿನ್ ತೃತೀಯೇ ಸವನೇ ವಸೂನಿ ಧನಾನಿ ದಧಾತ । ಧಾರಯತ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಅಹ್ನಃ—ಅಹಸ್ಸಿನ । ಇದಾ—ಈ ತೃತೀಯಸವನ ಕಾಲದಲ್ಲಿ (ನಿಮ್ಮ ಕುಶಲಕರ್ಮಗಳ ನಿರ್ಮಾಣಾನಂತರ) । ದೇವಾಃ—ದೇವತೆಗಳು । ವಃ—ನಿಮಗೆ । ಪೀತಿಂ—

ಸೋಮಪಾನವನ್ನೂ । ಉತ—ಮತ್ತು । ಮಂದಂ—ತಜ್ಜನಿತವಾದ ಹರ್ಷವನ್ನೂ । ಧುಃ—ಉಂಟುಮಾಡಿದರು । ಶ್ರಾಂತಸ್ಯ ಋತೇ—ಅದು ನಿಮ್ಮ ತಪಸ್ಸಿನ ಫಲವಲ್ಲದೇ । ಸಖ್ಯಾಯ—(ನಿಮಲ್ಲಿ ದೇವತೆಗಳಿಗಿರುವ) ಮೈತ್ರ್ಯುದ್ದಿಶ್ಯವಾಗಿ । ನ—ಖಂಡಿತ ಲಭಿಸಿಲ್ಲ । ತೇ—ಅಂತಹ ತಪಃಪ್ರಭಾವವನ್ನು ಪಡೆದ ನೀವು । ನೂನಂ—ಖಂಡಿತವಾಗಿಯೂ । ಅಸ್ಮೇ—ನಮಗೆ । ಅಸ್ಮಿನ್ ತೃತೀಯೇ ಸವನೇ—ಈ ತೃತೀಯಸವನಕಾಲದಲ್ಲಿ । ವಸೂನಿ—ಧನಗಳನ್ನು । ದಧಾತ—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಅಹಸ್ಸಿನ ಈ ತೃತೀಯಸವನಕಾಲದಲ್ಲಿ ನಿಮ್ಮ ಕುಶಲಕರ್ಮಗಳ ನಿರ್ಮಾಣಾನಂತರ ದೇವತೆಗಳು ನಿಮಗೆ ಸೋಮಪಾನವನ್ನೂ ಮತ್ತು ತಜ್ಜನಿತವಾದ ಹರ್ಷವನ್ನೂ ಉಂಟುಮಾಡಿದರು. ಅದು ನಿಮ್ಮ ತಪಸ್ಸಿನ ಫಲವಲ್ಲದೇ, ನಿಮಗೆ ದೇವತೆಗಳು ಧರ್ಮಾರ್ಥವಾಗಿಯಾಗಲಿ ಅಥವಾ ಮೈತ್ರಿಯ ಕುರುಹೆಂದಾಗಲಿ ಕೊಟ್ಟಿದ್ದಲ್ಲ. ಅಂತಹ ತಪಃಪ್ರಭಾವವನ್ನು ಪಡೆದ ನೀವು ಖಂಡಿತವಾಗಿಯೂ ನಮಗೆ ಈ ತೃತೀಯಸವನಕಾಲದಲ್ಲಿ ಧನಗಳನ್ನು ಒದಗಿಸಿ ಕೊಡಿರಿ.

## English Translation.

The gods verily have given you the beverage at the (third sacrifice of the) day, and its exhilaration, not through regard, but (as the gift of one) wearied out (by penance): Ribhus, who are so (eminent), grant us, verily, wealth and this third (diurnal) sacrifice.

---

# ಮೂವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಋಭುರ್ವಿಭ್ವೇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾರ್ಭವಂ । ಋಭುರ್ವಿಭ್ವೇತ್ಯನುಕ್ರಮಣಿಕಾ ॥ ವ್ಯೂಢೇ ದಶರಾತ್ರೇ ಪಂಚಮೇಽಹನಿ ವೈಶ್ವದೇವಶಸ್ತ್ರ ಆರ್ಭವನಿವಿದ್ಧಾನೀಯಮಿದಂ । ಋಭುರ್ವಿಭ್ವಾ ಸ್ತ್ರುಷೇ ಜನಂ । ಅ ೮–೮ । ಇತಿ ಸೂತ್ರಿತತ್ವಾತ್ ॥

ಅನುವಾದವು—ಋಭುರ್ವಿಭ್ವಾ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಋಭುಗಳು ದೇವತೆಯು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಋಭುರ್ವಿಭ್ವಾ ಎಂದು ಮೊದಲಾಗಿ ಹೇಳಿರುವುದು. ವ್ಯೂಢವೆಂಬ ದಶರಾತ್ರಯಾಗದ ಐದನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತವನ್ನೂ ಆರ್ಭವನಿವಿದ್ಧಾನೀಯ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಋಭುರ್ವಿಭ್ವಾ ಸ್ತ್ರುಷೇ ಜನಂ ಎಂಬ ಸೂತ್ರದಿಂದ (೮–೮) ವಿವೃತವಾಗಿರುವುದು.

## ಸೂಕ್ತ—೩೪

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೪ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೩, ೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ವಾಮದೇವಃ ॥
ದೇವತಾ—ಋಭವಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಋಭುರ್ವಿಭ್ವಾ ವಾಜ ಇಂದ್ರೋ ನೋ ಅಚ್ಛೇಮಂ ಯಜ್ಞಂ ರತ್ನಧೇ-
ಯೋಪ ಯಾತ ।
ಇದಾ ಹಿ ವೋ ಧಿಷಣಾ ದೇವ್ಯಹ್ನಾಮಧಾತ್ಪೀತಿಂ ಸಂ ಮದಾ ಅಗ್ಮತಾ
ವಃ ॥ ೧ ॥

॥ ಪದಪಾಠಃ ॥

ಋಭುಃ । ವಿಽಭ್ವಾ । ವಾಜಃ । ಇಂದ್ರಃ । ನಃ । ಅಚ್ಛ । ಇಮಂ । ಯಜ್ಞಂ । ರತ್ನಽಧೇಯಾ ।
ಉಪ । ಯಾತ ।
ಇದಾ । ಹಿ । ವಃ । ಧಿಷಣಾ । ದೇವೀ । ಅಹ್ನಾಂ । ಅಧಾತ್ । ಪೀತಿಂ । ಸಂ । ಮದಾಃ ।
ಅಗ್ಮತ । ವಃ ॥ ೧ ॥

॥ ಸಾಯಣಭಾಷ್ಯಂ ॥

ಋಭುರ್ವಿಭ್ವಾ ವಾಜ ಇಂದ್ರಶ್ಚೈತೇ ದೇವಾ ನೋಽಸ್ಮದೀಯಮಿಮಂ ಯಜ್ಞಮಚ್ಛಾಭಿಮುಖಂ ರತ್ನಧೇಯಾಸ್ಮಭ್ಯಂ ರತ್ನಧಾನಾಯೋಪ ಯಾತ । ಉಪಗಚ್ಛತ । ನನು ಇಂದ್ರಃ ಸೋಮಸ್ವಾಮಿತ್ವಾದಾಗಚ್ಛತು ಕಥಮೇತೇಷಾಂ ಯಜ್ಞಪ್ರಾಪ್ತಿರಿತಿ ಚೇತ್ । ಉಚ್ಯತೇ । ಇದಾ ಹೀದಾನೀಂ ಖಲು ವೋ ಯುಷ್ಮಾಕಂ ಧಿಷಣಾ ವಾಕ್ ದೇವೀ ಪ್ರಜಾಪತೇಃ ಸಂಬಂಧಿನ್ಯಹ್ನಾಂ ಸೋಮಾಭಿಷವಸಂಬಂಧಿನಾಂ ಪೀತಿಂ ಸೋಮಪಾನಮಧಾತ್ । ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವ । ಐ. ಬ್ರಾ. ೩-೩೦, ಇತಿ ಬ್ರಾಹ್ಮಣಂ । ಯಸ್ಮಾದೇವಂ ತಸ್ಮಾನ್ಮದಾಶ್ಚ ವೋ ಯುಷ್ಮಾನ್ ಸಮಗ್ಮತ । ಸಂಗತಾಃ । ಯದ್ವಾ । ವೋ ಮದಾ ದೇವೈಃ ಸಂಗತಾಃ ॥

|| ಪ್ರತಿಪದಾರ್ಥ ||

**ಋಭುಃ**—ಋಭುವೂ | **ವಿಭ್ವಾ**—ವಿಭ್ವನೂ | **ವಾಜಃ**—ವಾಜನೂ | **ಇಂದ್ರಃ**—ಇಂದ್ರನೂ (ಎಲ್ಲರೂ ಒಟ್ಟಿಗೆ) | **ನಃ**—ನಮ್ಮ | **ಇಮಂ ಯಜ್ಞಂ ಅಚ್ಛ**—ಈ ಯಜ್ಞಕ್ಕೆ ಅಭಿಮುಖವಾಗಿ | **ರತ್ನಧೇಯಾ**—ನಮಗೆ ರಮಣೀಯವಾದ ಧನವನ್ನು ಒದಗಿಸಲು | **ಉಪ ಯಾತ**—ಸಮೀಪಿಸಿ ಬರಲಿ | **ಇದಾ ಹಿ**—ಈ ತೃತೀಯ ಸವನಕಾಲದಲ್ಲಿ | **ದೇವೀ ಧಿಷಣಾ**—ಪ್ರಜಾಪತಿಯ ದಿವ್ಯವಾದವೂ ಅನುಜ್ಞಾರೂಪವಾದುದೂ ಆದ ವಾಕ್ಕು | **ವಃ**—ನಿಮಗೆ | **ಅಹ್ನಾಂ**—ಅಹಸ್ಸಿನ ಈ ಸವನಕ್ಕೆ ಸಂಬಂಧಿಸಿದ | **ಪೀತಿಂ**—ಸೋಮಪಾನವನ್ನು | **ಅಧಾತ್**—ಒದಗಿಸಿತು | **ಮದಾಃ**—(ತತ್ಫಲವಾದ) ಹರ್ಷಗಳು | **ವಃ**—ನಿಮ್ಮನ್ನು | **ಸಂ ಅಗ್ಮತ**—ಸೇರಿಕೊಂಡವು.

|| ಭಾವಾರ್ಥ ||

ಋಭುವೂ, ವಿಭ್ವನೂ, ವಾಜನೂ, ಇಂದ್ರನೂ (ಇವರೆಲ್ಲರೂ ಒಟ್ಟಿಗೆ ಸೇರಿ) ನಮ್ಮ ಯಜ್ಞದ ಅಭಿಮುಖವಾಗಿ ನಮಗೆ ರಮಣೀಯವಾದ ಧನವನ್ನೊದಗಿಸಲು ಸಮೀಪಿಸಿ ಬರಲಿ. ಎಲೈ ಋಭುಗಳೇ, ಪ್ರಜಾಪತಿಯ ದಿವ್ಯವಾದುದೂ, ಅನುಜ್ಞಾರೂಪವಾದುದೂ ಆದ ವಾಕ್ಕು ನಿಮಗೆ ಈ ತೃತೀಯ ಸವನಕ್ಕೆ ಸಂಬಂಧಿಸಿದ ಸೋಮಪಾನವನ್ನೊದಗಿಸಿತು. ತತ್ಫಲವಾದ ಹರ್ಷಗಳು ನಿಮ್ಮನ್ನು ಸೇರಿಕೊಂಡವು.

English Translation.

Ribhu, Vibhwan, Vaja, and Indra, come to this our sacrifice, to distribute precious things, for the divine word has indeed now desired the drinking (of the Soma) on the (appointed houres of the) days; therefore the exhilarating draughts are collected for you.

|| ಸಂಹಿತಾಪಾಠಃ ||

ವಿದಾನಾಸೋ ಜನ್ಮನೋ ವಾಜರತ್ನಾ ಉತ ಋತುಭಿರ್ಋಭವೋ ಮಾದಯಧ್ವಂ |
ಸಂ ವೋ ಮದಾ ಅಗ್ಮತ ಸಂ ಪುರಂಧಿಃ ಸುವೀರಾಮಸ್ಮೇ ರಯಿಮೇರಯಧ್ವಂ || ೨ ||

|| ಪದಪಾಠಃ ||

ವಿದಾನಾಸಃ | ಜನ್ಮನಃ | ವಾಜ‿ರತ್ನಾಃ | ಉತ | ಋತು‿ಭಿಃ | ಋಭವಃ | ಮಾದಯಧ್ವಂ |
ಸಂ | ವಃ | ಮದಾಃ | ಅಗ್ಮತ | ಸಂ | ಪುರಂ‿ಧಿಃ | ಸು‿ವೀರಾಂ | ಅಸ್ಮೇ ಇತಿ | ರಯಿಂ | ಆ | ಈರಯಧ್ವಂ || ೨ ||

॥ ಸಾಯಣಭಾಷ್ಯಂ ॥

ಹೇ ವಾಜರತ್ನಾಃ ಸೋಮಲಕ್ಷಣೇನಾನ್ನೇನ ರಾಜಮಾನಾ ಋಭವೋ ಯೂಯಂ ಜನ್ಮನೋ ಜನನಸ್ಯ ದೇವತ್ವಲಕ್ಷಣಸ್ಯ ದೇವತ್ವಪ್ರಾಪ್ತಿಂ ವಿದಾನಾಸೋ ಜಾನಂತಃ । ಯದ್ವಾ । ವಿದಾನಾಸಃ ಸೋಮಪ್ರಾಪ್ತಿಂ ಜಾನಂತೋ ಜನ್ಮನಃ ಪೂರ್ವಂ ಮನುಷ್ಯಜನ್ಮವಂತಶ್ಚ ಸಂತಃ । ಉತಶಬ್ದಶ್ಚಾರ್ಥೇ । ಋತುಭಿರ್ದೇವೈಃ ಸಹ ಮಾದಯಧ್ವಂ । ವೋ ಯುಷ್ಮಾನ್ಮದಾಃ ಸೋಮಪಾನಜನಿತಾಃ ಸಮಗ್ಮತ । ಸಂಗತಾಃ । ಪುರಂಧಿಃ ಸ್ತುತಿರಪಿ ಸಮಗ್ಮತ । ತೇ ಯೂಯಮಸ್ಮೇ ಅಸ್ಮಾಕಂ ಸುವೀರಾಂ ಶೋಭನೈ-ರ್ವೀರೈಃ ಪುತ್ರೈರುಪೇತಾಂ ರಯಿಮೇರಯಧ್ವಂ । ಪ್ರೇರಯತ ॥

॥ ಪ್ರತಿಪದಾರ್ಥ ॥

ವಾಜರತ್ನಾಃ—ಸೋಮರೂಪವಾದ ಅನ್ನದಿಂದ ಪ್ರಕಾಶಿಸುವ । ಋಭವಃ—ಎಲೈ ಋಭುಗಳೇ । ಜನ್ಮನಃ—(ನೀವು) ನಿಮ್ಮ ದಿವ್ಯಜನ್ಮದ ಪ್ರಾಪ್ತಿಯನ್ನು । ವಿದಾನಾಸಃ—ತಿಳಿದವರಾಗಿ । ಋತುಭಿಃ—ದೇವತೆಗಳೊಡನೆ । ಮಾದಯಧ್ವಂ—ಹರ್ಷಿತರಾಗಿರಿ । ವಃ—ನಿಮ್ಮನ್ನು । ಮದಾಃ—ಸೋಮಪಾನದಿಂದ ಜನಿತವಾದ ಹರ್ಷಗಳು । ಸಂ ಅಗ್ಮತ—ಸೇರಿಕೊಳ್ಳಲಿ । ಉತ—ಮತ್ತು । ಪುರಂಧಿಃ—ಸ್ತುತಿಯೂ ಸಹ । ಸಂ (ಅಗ್ಮತ)—ಸೇರಿಕೊಳ್ಳಲಿ (ಅಂತಹ ನೀವು) । ಅಸ್ಮೇ—ನಮಗೆ । ಸುವೀರಾಂ—ವೀರಪುತ್ರರಿಂದೊಡಗೂಡಿದ । ರಯಿಂ—ಧನವನ್ನು । ಏರಯಧ್ವಂ—ಒದಗಿಸಿ ಕೊಡಿ.

॥ ಭಾವಾರ್ಥ ॥

ಸೋಮರೂಪವಾದ ಅನ್ನದಿಂದ ಪ್ರಕಾಶಿಸುವ ಎಲೈ ಋಭುಗಳೇ, ನೀವು ನಿಮ್ಮ ದಿವ್ಯಜನ್ಮಪ್ರಾಪ್ತಿಯನ್ನು ತಿಳಿದವರಾಗಿ ದೇವತೆಗಳೊಡನೆ ಹರ್ಷಿತರಾಗುವಿರಿ. ಸೋಮಪಾನದಿಂದ ಜನಿತವಾದ ಹರ್ಷಗಳು ನಿಮ್ಮನ್ನು ಸೇರಿಕೊಳ್ಳಲಿ. ನಮ್ಮ ಸ್ತುತಿಯೂ ನಿಮ್ಮನ್ನು ಸೇರಲಿ. ನಮಗೆ ವೀರಪುತ್ರರಿಂದೊಡಗೂಡಿದ ಧನವನ್ನು ಒದಗಿಸಿಕೊಡಿ.

## English Translation.

Resplendent with (sacrificial) food, prescient of your (celestial) birth, be exhilarated, Ribhus, along with the Ritus: the inebriating draughts are collected for you as well as pious praise: confer upon us riches with excellent posterity.



॥ ಸಂಹಿತಾಪಾಠಃ ॥

ಅಯಂ ವೋ ಯಜ್ಞ ಋಭವೋಽಕಾರಿ ಯಮಾ ಮನುಷ್ವತ್ಪ್ರದಿವೋ ದಧಿಧ್ವೇ ।
ಪ್ರ ವೋಽಚ್ಛಾ ಜುಜುಷಾಣಾಸೋ ಅಸ್ಥುರಭೂತ ವಿಶ್ವೇ ಅಗ್ರಿಯೋತ ವಾಜಾಃ ॥ ೩ ॥

॥ ಪದಪಾಠಃ ॥

ಅಯಂ । ವಃ । ಯಜ್ಞಃ । ಋಭವಃ । ಅಕಾರಿ । ಯಂ । ಆ । ಮನುಷ್ವತ್ । ಪ್ರದಿವಃ । ದಧಿಧ್ವೇ ।
ಪ್ರ । ವಃ । ಅಚ್ಛ । ಜುಜುಷಾಣಾಸಃ । ಅಸ್ಥುಃ । ಅಭೂತ । ವಿಶ್ವೇ । ಅಗ್ರಿಯಾ । ಉತ । ವಾಜಾಃ ॥

॥ ಸಾಯಣಭಾಷ್ಯಂ ॥

ಹೇ ಋಭವೋ ವೋ ಯುಷ್ಮದರ್ಥಮಯಂ ಯಜ್ಞೋಽಕಾರಿ । ಯಂ ಯಜ್ಞಂ ಮನುಷ್ವನ್ಮನುಷ್ಯವತ್ಪ್ರದಿವಃ ಪ್ರಕರ್ಷೇಣ ದ್ಯೋತಮಾನಾಃ ಸಂತ ಆ ದಧಿಧ್ವೇ । ಧಾರಯತ ಜಠರೇ । ತದರ್ಥಂ ವೋ ಯುಷ್ಮಾನಚ್ಛಾಭಿಮುಖ್ಯೇನ ಜುಜುಷಾಣಾಸಃ ಸೇವಮಾನಾಃ ಸೋಮಾಃ ಪ್ರಾಸ್ಥುಃ । ಪ್ರತಿಷ್ಠಂತೇ । ಉತಾಪಿ ಚ ಧಾರಯಿತ್ವಾ ಚ ಹೇ ವಾಜಾ ಋಭವೋ ವಿಶ್ವೇ ಯೂಯಮಗ್ರಿಯಾಗ್ರಾರ್ಹಾ ಅಗ್ರತ್ವಸಂಪಾದಿನೋ ವಾ ಅಭೂತ । ಭವಥ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಪ್ರದಿವಃ—ಅತ್ಯಂತ ಪ್ರಕಾಶಮಾನರಾದ ನೀವು । ಯಂ—ಯಾವ ಈ ಯಜ್ಞವನ್ನು । ಮನುಷ್ವತ್—ಮಾನವರಂತೆ । ಆ ದಧಿಧ್ವೇ—ಧರಿಸುತ್ತೀರೋ (ಅಂತಹ) । ಅಯಂ ಯಜ್ಞಃ—ಈ ಯಜ್ಞವು । ವಃ—ನಿಮ್ಮನ್ನುದ್ದೇಶಿಸಿ । ಅಕಾರಿ—ನೆರವೇರಿಸಲ್ಪಟ್ಟಿದೆ । ಜುಜುಷಾಣಾಸಃ—ಸೇವಿಸಲು ಯೋಗ್ಯವಾದ ಸೋಮರಸಗಳು । ವಃ ಅಚ್ಛ—ನಿಮಗಭಿಮುಖವಾಗಿ । ಪ್ರ ಅಸ್ಥುಃ—ಅರ್ಪಿತವಾಗಿ ಸಿದ್ಧವಾಗಿವೆ । ಊತ—ಮತ್ತು । ವಾಜಾಃ—ಎಲೈ ಋಭುಗಳೇ । ವಿಶ್ವೇ—ನೀವೆಲ್ಲರೂ । ಅಗ್ರಿಯಾ—ಅಗ್ರಪೂಜೆಗೆ ಯೋಗ್ಯರಾಗಿ । ಅಭೂತ—ಆಗಿದ್ದೀರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಅತ್ಯಂತಪ್ರಕಾಶಮಾನರಾದ ನೀವು ಯಾವ ಈ ಯಜ್ಞವನ್ನು ಮಾನವರಂತೆ ಧರಿಸುತ್ತೀರೋ, ಅಂತಹ ಈ ಯಜ್ಞವು ನಿಮ್ಮನ್ನುದ್ದೇಶಿಸಿ ನೆರವೇರಿಸಲ್ಪಟ್ಟಿದೆ. ಸೇವಿಸಲು ಯೋಗ್ಯವಾದ ಸೋಮರಸಗಳು ನಿಮಗಭಿಮುಖವಾಗಿ ಅರ್ಪಿತವಾಗಿ ಸಿದ್ಧವಾಗಿವೆ. ಎಲೈ ಋಭುಗಳೇ, ನೀವೆಲ್ಲರೂ ಅಗ್ರಪೂಜೆಗೆ ಯೋಗ್ಯರಾಗಿ ಆಗಿದ್ದೀರಿ.

## English Translation.

This sacrifice, Ribhus, has been instituted for you; you, who are eminently resplendent, have accepted this after the manner of men: before you have the propitiatory (libations) been placed, for Vajas, you are all entitled to precedence.

॥ ಸಂಹಿತಾಪಾಠಃ ॥

ಅಭೂ॒ದು ವೋ ವಿ॒ಧ॒ತೇ ರ॒ತ್ನ॒ಧೇಯ॑ಮಿ॒ದಾ ನ॑ರೋ ದಾ॒ಶುಷೇ॒ ಮರ್ತ್ಯಾ॑ಯ।

ಪಿಬ॑ತ ವಾಜಾ ಋಭವೋ ದ॒ದೇ ವೋ॒ ಮಹಿ॑ ತೃ॒ತೀಯಂ॒ ಸವ॑ನಂ॒

ಮದಾ॑ಯ ॥ ೪ ॥

॥ ಪದಪಾಠಃ ॥

ಅಭೂ॑ತ್ । ಊಂ॒ ಇತಿ॑ । ವಃ॒ । ವಿ॒ಧ॒ತೇ । ರ॒ತ್ನ॒ಽಧೇಯ॑ಂ । ಇ॒ದಾ । ನ॒ರ॒ಃ । ದಾ॒ಶುಷೇ॑ । ಮರ್ತ್ಯಾ॑ಯ ।

ಪಿಬ॑ತ । ವಾ॒ಜಾ॒ಃ । ಋ॒ಭ॒ವ॒ಃ । ದ॒ದೇ । ವ॒ಃ । ಮಹಿ॑ । ತೃ॒ತೀಯ॑ಂ । ಸವ॑ನಂ । ಮದಾ॑ಯ ॥ ೪ ॥

॥ ಸಾಯಣಭಾಷ್ಯಂ ॥

ಹೇ ನರೋ ನೇತಾರ ಋಭವೋ ವೋ ಯುಷ್ಮಾಕಮನುಗ್ರಹಾದಿದೇದಾನೀಂ ತೃತೀಯೇ ಸವನೇ ರತ್ನಧೇಯಂ ದಾತವ್ಯಂ ರತ್ನಂ ವಿಧತೇ । ವಿಧತಿಃ ಪರಿಚರಣಕರ್ಮಾ । ಸ್ತುತ್ಯಾ ಪರಿಚರತೇ ದಾಶುಷೇ ಹವಿರ್ದತ್ತವತೇ ಮರ್ತ್ಯಾಯ ಯಜಮಾನಾಯ ಮಹ್ಯಮಭೂತ್ । ಭವತು । ತದರ್ಥಂ ಹೇ ವಾಜಾ ಹೇ ಋಭವಃ । ಏತದ್ದ್ವಯಂ ವಿಭ್ವನಾಮಕಸ್ಯಾಪ್ಯುಪಲಕ್ಷಣಂ । ಇತರಾಪೇಕ್ಷಯಾ ಪ್ರತ್ಯೇಕಂ ಬಹುವಚನಂ । ಯೂಯಂ ಪಿಬತ । ತದರ್ಥಂ ವೋ ದದೇ । ಕಿಂ । ಮಹಿ ಮಹತ್ಪ್ರಭೂತಂ ತೃತೀಯಂ ಸವನಂ । ತತ್ಸಂಬಂಧಿನಂ ಸೋಮಮಿತ್ಯರ್ಥಃ । ಕಿಮರ್ಥಂ । ಮದಾಯ ಹರ್ಷಾಯ ತೃಪ್ತಯೇ ವಾ ॥

॥ ಪ್ರತಿಪದಾರ್ಥ ॥

ನರಃ—ನೇತೃಗಳಾದ ಎಲೈ ಋಭುಗಳೇ । ವಃ—ನಿಮ್ಮ ಅನುಗ್ರಹದಿಂದ । ಇದಾ—ಈ ತೃತೀಯಸವನ ಕಾಲದಲ್ಲಿ । ವಿಧತೇ—ನಿಮಗೆ ಪೂಜೆಯನ್ನರ್ಪಿಸುವವನೂ । ದಾಶುಷೇ—ಹವಿಸ್ಸನ್ನರ್ಪಿಸುವವನೂ ಆದ । ಮರ್ತ್ಯಾಯ--ಯಜಮಾನನಿಗೆ । ರತ್ನಧೇಯಂ—ಅವನ ಪೂಜೆಗೆ ಪ್ರತಿಯಾಗಿ ಕೊಡಲು ಯೋಗ್ಯವಾದ ಧನವು ।

ಅಭೂತ್—ಕೊಡಲ್ಪಡಲಿ ।　ವಾಜಾಃ ಋಭವಃ—ವಿಭ್ವನೊಂದಿಗೆ ಕೂಡಿದ ಎಲೈ ವಾಜ ಮತ್ತು ಋಭುಗಳೇ । ವಃ—ನಿಮ್ಮ । ಮದಾಯ—ಹರ್ಷಲಾಭಕ್ಕಾಗಿ । ಮಹಿ—ಪ್ರಭೂತವಾದುದೂ । ತೃತೀಯಂ ಸವನಂ—ತೃತೀಯಸವನದಲ್ಲಿ ಅರ್ಪಿಸಲು ಯೋಗ್ಯವಾದುದೂ ಆದ ಸೋಮವು ।　ದದೇ—ಅರ್ಪಿತವಾಗಿದೆ । ಪಿಬತ—ಅದನ್ನು ಪಾನಮಾಡಿ.

॥ ಭಾವಾರ್ಥ ॥

ನೇತೃಗಳಾದ ಋಭುಗಳೇ, ಈ ತೃತೀಯಸವನದ ಕಾಲದಲ್ಲಿ ನಿಮಗೆ ಪೂಜೆಯನ್ನರ್ಪಿಸುವವನೂ, ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗೆ ಅವನ ಪೂಜೆಗೆ ಪ್ರತಿಫಲವಾಗಿ ಕೊಡಲು ಯೋಗ್ಯವಾದ ಧನವು ನಿಮ್ಮ ಅನುಗ್ರಹದಿಂದ ಕೊಡಲ್ಪಡಲಿ. ಎಲೈ ಋಭುಗಳೇ, ನಿಮ್ಮ ಮೂವರ ಹರ್ಷಲಾಭಕ್ಕಾಗಿ ಪ್ರಭೂತವಾದುದೂ, ತೃತೀಯಸವನದಲ್ಲಿ ಅರ್ಪಿಸಲು ಯೋಗ್ಯವಾದುದೂ ಆದ ಸೋಮವು ಅರ್ಪಿತವಾಗಿದೆ. ಅದನ್ನು ಪಾನಮಾಡಿ.

English Translation.

Now, leaders (of rites), the treasure that ought to be presented is to be given to the mortal performing (the sacred rite), the offerer (of the libation): drink, Vajas, (drink), Ribhus : I present it to you at the third solemn (diurnal) ceremony for your exhilration.



॥ ಸಂಹಿತಾಪಾಠಃ ॥

ಆ ವಾಜಾ ಯಾತೋಪ ನ ಋಭುಕ್ಷಾ ಮಹೋ ನರೋ ದ್ರವಿಣಸೋ ಗೃಣಾನಾಃ ।
ಆ ವಃ ಪೀತಯೋಽಭಿಪಿತ್ವೇ ಅಹ್ನಾಮಿಮಾ ಅಸ್ತಂ ನವಸ್ವಇವ ಗ್ಮನ್ ॥ ೫॥

॥ ಪದಪಾಠಃ ॥

ಆ । ವಾಜಾಃ । ಯಾತ । ಉಪ । ನಃ । ಋಭುಕ್ಷಾಃ । ಮಹಃ । ನರಃ । ದ್ರವಿಣಸಃ । ಗೃಣಾನಾಃ ॥
ಆ । ವಃ । ಪೀತಯಃ । ಅಭಿಽಪಿತ್ವೇ । ಅಹ್ನಾಂ । ಇಮಾಃ । ಅಸ್ತಂ । ನವಸ್ವಃಽಇವ । ಗ್ಮನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಾಜಾ ಋಭುಕ್ಷಾ ನರೋ ನೇತಾರೋ ಯೂಯಂ ನ ಉಪಾ ಯಾತ । ಕಿಂ ಕುರ್ವಂತಃ । ಮಹೋ ಮಹತೋ ದ್ರವಿಣಸೋ ಧನಸ್ಯ ॥ ಕರ್ಮಣಿ ಷಷ್ಠ್ಯೌ ॥ ಮಹತ್ ದ್ರವಿಣಂ ಗೃಣಾನಾಃ ।

ಸ್ತುವಂತಃ । ಕಿಂಚ ಅಹ್ನಾಮಭಿಪಿತ್ವೇಽಭಿಪತನೇ ಸಮಾಪ್ತೌ । ತೃತೀಯೇ ಸವನ ಇತ್ಯರ್ಥಃ । ವೋ ಯುಷ್ಮಾನಿಮಾಃ ಪೀತಯಃ ಪಾನಾನ್ಯಾ ಗ್ಮನ್ । ಆಗಚ್ಛಂತಿ । ತತ್ರ ದೃಷ್ಟಾಂತಃ । ಅಸ್ತಂ । ಗೃಹನಾಮೈತತ್ । ಗೃಹಂ ನವಸ್ವೋ ನವಪ್ರಸವಾ ಗಾವ ಇವ ॥

॥ ಪ್ರತಿಪದಾರ್ಥ ॥

ವಾಜಾಃ ಋಭುಕ್ಷಾಃ—ಋಭು, ವಿಭ್ವ, ವಾಜ ಎಂಬ ಹೆಸರಿನಿಂದ ಪ್ರಸಿದ್ಧರಾದವರೂ । ನರಃ—ನೇತೃಗಳೂ ಆದ ಋಭುಗಳೇ । ಮಹಃ—ಮಹತ್ತಾದ । ದ್ರವಿಣಸಃ—ಧನವನ್ನು । ಗೃಣಾನಾಃ—ಸ್ತುತಿಸುತ್ತಾ । ನಃ ಉಪ—ನಮ್ಮ ಸಮೀಪಕ್ಕೆ । ಆ ಯಾತ—ದಯಮಾಡಿರಿ । ಅಹ್ನಾ—ಅಹಸ್ಸಿನ । ಅಭಿಪಿತ್ವೇ—ಸಮಾಪ್ತಿಕಾಲವಾದ ಈ ತೃತೀಯಸವನದಲ್ಲಿ । ನವಸ್ವಃ—ಹೊಸದಾಗಿ ಕರುವನ್ನು ಹಾಕಿರುವ ಧೇನುವು । ಅಸ್ತಂ ಇವ—(ಕರುವಿರುವ) ಮನೆಯಕಡೆ ಆತುರದಿಂದ ಹೋಗುವಂತೆ । ಇಮಾಃ ಪೀತಯಃ—ಪಾನಾರ್ಹವಾದ ಈ ಸೋಮರಸಗಳು । ವಃ—ನಿಮ್ಮನ್ನುದ್ದೇಶಿಸಿ । ಆಃ ಗ್ಮನ್—ಎದುರುಗೊಂಡು ಬರುತ್ತವೆ.

॥ ಭಾವಾರ್ಥ ॥

ಋಭು, ವಿಭ್ವ, ವಾಜ ಎಂಬ ಹೆಸರುಗಳಿಂದ ಪ್ರಸಿದ್ಧರಾದವರೂ ನೇತೃಗಳೂ ಆದ ಎಲೈ ಋಭುಗಳೇ, ನೀವು ಮಹತ್ತಾದ ಧನವನ್ನು ಸ್ತುತಿಸುತ್ತಾ ನಮ್ಮ ಸಮೀಪಕ್ಕೆ ದಯಮಾಡಿರಿ. ಅಹಸ್ಸಿನ ಸಮಾಪ್ತಿಕಾಲವಾದ ಈ ತೃತೀಯಸವನದಲ್ಲಿ ಹೊಸದಾಗಿ ಕರುವನ್ನು ಹಾಕಿರುವ ಧೇನುವು ತನ್ನ ಕರುವಿರುವ ಗೃಹದ ಕಡೆ ಆತುರದಿಂದ ಹೋಗುವಂತೆ, ಪಾನಾರ್ಹವಾದ ಈ ಸೋಮರಸಗಳು ನಿಮ್ಮನ್ನುದ್ದೇಶಿಸಿ ಎದುರುಗೊಂಡು ಬರುತ್ತವೆ.

## English Translation.

Vajas, Ribhukshans, leaders (of rites), come to us eulogizing exceeding wealth : these draughts (of Soma) proceed to you at the decline of day, like newly-delivered cows to their stalls.

॥ ಸಂಹಿತಾಪಾಠಃ ॥

ಆ ನಪಾತಃ ಶವಸೋ ಯಾತನೋಪೇಮಂ ಯಜ್ಞಂ ನಮಸಾ ಹೂಯಮಾನಾಃ ।
ಸಜೋಷಸಃ ಸೂರಯೋ ಯಸ್ಯ ಚ ಸ್ಥ ಮಧ್ವಃ ಪಾತ ರತ್ನಧಾ ಇಂದ್ರವಂತಃ ॥ ೬ ॥

॥ ಪದಪಾಠಃ ॥

ಆ । ನಪಾತಃ । ಶವಸಃ । ಯಾತನ । ಉಪ । ಇಮಂ । ಯಜ್ಞಂ । ನಮಸಾ । ಹೂಯಮಾನಾಃ ।

ಸ್ಂಜೋಷಸಃ । ಸೂರಯಃ । ಯಸ್ಯ । ಚ । ಸ್ಥ । ಮಧ್ವಃ । ಪಾತ । ರತ್ನಧಾಃ । ಇಂದ್ರವಂತಃ ॥

॥ ಸಾಯಣಭಾಷ್ಯಂ ॥

ಹೇ ಶವಸೋ ನಪಾತೋ ಬಲಸ್ಯ ನ ಪಾತಯಿತಾರಸ್ತಸ್ಯ ಪುತ್ರಾ ವಾ । ಬಲವಂತ ಇತ್ಯರ್ಥಃ । ಯೂಯಂ ನಮಸಾ ಸ್ತೋತ್ರೇಣ ಹೂಯಮಾನಾ ಆಕಾರಿತಾಃ ಸಂತ ಇಮಂ ಯಜ್ಞಮುಪಾ ಯಾತನ । ಉಪಾಗಚ್ಛತ । ಕೀದೃಶಾ ಯೂಯಂ । ಸಜೋಷಸ ಇಂದ್ರೇಣ ಸಹ ಪ್ರೀತಾಃ ಸೂರಯೋ ಮೇಧಾವಿನಃ । ಇಂದ್ರಸ್ಯ ಚೈಷಾಂ ಚ ಕಃ ಪ್ರಸಂಗ ಇತ್ಯುಚ್ಯತೇ । ಯಸ್ಯ ಚ ಸ್ಥ । ಚೇತಿ ಪ್ರಸಿದ್ಧೌ । ಯಸ್ಯೇಂದ್ರಸ್ಯ ಸಂಬಂಧಿನೋ ಯೂಯಂ ಭವಥ ತದುಚಿತಾಶ್ವ ನಿರ್ಮಾಣಾದಿತ್ಯಭಿಪ್ರಾಯಃ । ಯಸ್ಮಾದೇವಂ ತಸ್ಮಾ-ದಿಂದ್ರವಂತಃ ಪ್ರೀತೇನೇಂದ್ರೇಣ ತದ್ವಂತೋ ರತ್ನಧಾ ರಮಣೀಯಧನಾನಾಂ ದಾತಾರೋ ಯೂಯಂ ಮಧ್ವೋ ಮಧುರಂ ಸೋಮಂ ಪಾತ । ಪಿಬತ ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಯಸ್ಯ ಚ ಸ್ಥ—ಯಾವ ಇಂದ್ರನಿಗೆ ನೀವು ಸಂಬಂಧಿಗಳಾಗಿದ್ದಿರೋ । ಸಜೋಷಸಃ—ಅಂತಹ ಇಂದ್ರನೊಡನೆ ಕೂಡಿ ಹರ್ಷಿತರಾದವರೂ । ಸೂರಯಃ—ಮೇಧಾವಿಗಳೂ । ಶವಸಃ ನಪಾತಃ—ಶಕ್ತಿಪುತ್ರರೂ (ಅಥವಾ ಶಕ್ತಿಯುತರೂ) ಆದ ನೀವು । ನಮಸಾ—ಸ್ತುತಿಪೂರ್ವಕವಾಗಿ । ಹೂಯಮಾನಾಃ—ಪ್ರಾರ್ಥಿತರಾಗಿ । ಇಮಂ ಯಜ್ಞಂ—ನಮ್ಮ ಈ ಯಜ್ಞಕ್ಕೆ । ಉಪ ಆ ಯಾತನ—ದಯಮಾಡಿರಿ । ಇಂದ್ರವಂತಃ—ಇಂದ್ರನೊಡನೆ ಕೂಡಿರುವವರೂ । ರತ್ನಧಾಃ—ರಮಣೀಯವಾದ ಧನದ ದಾತರೂ ಆದ ನೀವು । ಮಧ್ವಃ—ಮಧುರವಾದ ಸೋಮರಸವನ್ನು । ಪಾತ—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಯಾವ ಇಂದ್ರನಿಗೆ ನೀವು ಸಂಬಂಧಿಗಳಾಗಿದ್ದೀರೋ, ಅಂತಹ ಇಂದ್ರನೊಡನೆ ಕೂಡಿ ಹರ್ಷಿತರಾದವರೂ, ಮೇಧಾವಿಗಳೂ, ಶಕ್ತಿಪುತ್ರರೂ ಆದ ನೀವು ಸ್ತುತಿಪೂರ್ವಕವಾಗಿ ಪ್ರಾರ್ಥಿತರಾಗಿ ನಮ್ಮ ಈ ಯಜ್ಞಕ್ಕೆ ದಯಮಾಡಿರಿ. ಇಂದ್ರನೊಡನೆ ಕೂಡಿರುವವರೂ, ರಮಣೀಯವಾದ ಧನದ ದಾತರೂ ಆದ ನೀವು ಮಧುರವಾದ ಸೋಮರಸವನ್ನು ಪಾನಮಾಡಿರಿ.

## English Translation.

Sons of strength, come to this sacrifice, invoked with veneration: givers of precious things, associated with Indra, with whom you are intelligent, participate in being gratified (by the libation), drink of the sweet Soma juice.



॥ ಸಂಹಿತಾಪಾಠಃ ॥

ಸಜೋಷಾ ಇಂದ್ರ ವರುಣೇನ ಸೋಮಂ ಸಜೋಷಾಃ ಪಾಹಿ ಗಿರ್ವಣೋ ಮರುದ್ಭಿಃ ।

ಅಗ್ರೇಪಾಭಿರ್ಋತುಪಾಭಿಃ ಸಜೋಷಾ ಗ್ನಾಸ್ಪತ್ನೀಭೀ ರತ್ನಧಾಭಿಃ ಸಜೋಷಾಃ ॥ ೭ ॥

॥ ಪದಪಾಠಃ ॥

ಸ॒ಽಜೋಷಾಃ । ಇಂದ್ರ । ವರುಣೇನ । ಸೋಮಂ । ಸಽಜೋಷಾಃ । ಪಾಹಿ । ಗಿರ್ವಣಃ । ಮರುತ್ಽಭಿಃ ।

ಅಗ್ರೇಽಪಾಭಿಃ । ಋತುಽಪಾಭಿಃ । ಸಽಜೋಷಾಃ । ಗ್ನಾಃಪತ್ನೀಭಿಃ । ರತ್ನಽಧಾಭಿಃ । ಸಽಜೋಷಾಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ವರುಣೇನ ರಾತ್ರ್ಯಭಿಮಾನಿದೇವೇನ ಸಜೋಷಾಃ ಸಮಾನಪ್ರೀತಿಃ ಸನ್ ಸೋಮಂ ಪಾಹಿ । ಪಿಬ । ಹೇ ಗಿರ್ವಣೋ ಗೀರ್ಭಿರ್ವನನೀಯ ಸಂಭಜನೀಯೇಂದ್ರ ತ್ವಂ ಮರುದ್ಭಿಃ ಸಜೋಷಾಃ ಸಂಗತಃ ಸನ್ ಸೋಮಂ ಪಾಹಿ । ಪಿಬ । ಕಿಂಚ ಅಗ್ರೇಪಾಭಿಃ ಪ್ರಥಮಪಾತೃಭಿರ್ಋತುಪಾಭಿರ್ಋತು-ಯಾಜದೇವೈಶ್ಚ ಗ್ನಾಃಪತ್ನೀಭಿಃ । ಸ್ತ್ರೀಣಾಂ ಪಾಲಯಿತ್ರ್ಯೋ ದೇವ್ಯೋ ಗ್ನಾಃಪತ್ನ್ಯಃ । ತಾಭಿಃ । ಮೇನಾ ಗ್ನಾ ಇತಿ ಸ್ತ್ರೀಣಾಮಿತಿ ನಿರುಕ್ತಂ । ೩-೨೧ । ರತ್ನಧಾಭೀ ರಮಣೀಯಧನದಾತೃಭಿರ್ಋಭುಭಿಃ ಸಹ ಪಿಬ । ಯದ್ವಾ । ಏತತ್ ಗ್ನಾಃಪತ್ನೀಭಿರಿತ್ಯಸ್ಯ ವಿಶೇಷಣಂ । ತಾಭಿರ್ವಾ ಸಜೋಷಾಃ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । ವರುಣೇನ—ವರುಣನೊಂದಿಗೆ । ಸಜೋಷಾಃ—ಸಮಾನವಾದ ಪ್ರೀತಿಯುಳ್ಳವನಾಗಿ ಕೂಡಿಕೊಂಡು । ಸೋಮಂ—ಸೋಮವನ್ನು । ಪಾಹಿ—ಪಾನಮಾಡು । ಗಿರ್ವಣಃ—ಸ್ತುತಿಪಾತ್ರನಾದ ಇಂದ್ರನೇ । ಮರುದ್ಭಿಃ—ಮರುತ್ತುಗಳೊಡನೆ । ಸಜೋಷಾಃ—ಪ್ರೀತಿಯಿಂದ ಕೂಡಿಕೊಂಡು । ಪಾಹಿ—ಸೋಮವನ್ನು ಪಾನಮಾಡು । ಅಗ್ರೇಪಾಭಿಃ—ಎಲ್ಲರಿಗಿಂತಲೂ ಮೊದಲು ಪಾನಮಾಡಲು ಯೋಗ್ಯರಾದ । ಋತುಪಾಭಿಃ— ಋತುಯಾಜದೇವತೆಗಳೊಡನೆಯೂ । ರತ್ನಧಾಭಿಃ—ರಮಣೀಯವಾದ ಧನದಾತೃಗಳಾದವರೂ । ಗ್ನಾಃ ಪತ್ನೀಭಿಃ—ಸ್ತ್ರೀಪಾಲಕರೂ ಆದ ದೇವಪತ್ನಿಯರೊಡನೆಯೂ । ಸಜೋಷಾಃ—ಪ್ರೀತಿಯಿಂದ ಕೂಡಿಕೊಂಡು (ಸೋಮವನ್ನು ಪಾನಮಾಡು).

॥ ಭಾವಾರ್ಥ ॥

ಎಲೈ ಇಂದ್ರನೇ, ವರುಣನೊಂದಿಗೆ ನೀನು ಸಮಾನವಾದ ಪ್ರೀತಿಯುಳ್ಳವನಾಗಿ ಕೂಡಿಕೊಂಡು ಸೋಮವನ್ನು ಪಾನಮಾಡು. ಸ್ತುತಿಪಾತ್ರನಾದ ಇಂದ್ರನೇ, ಮರುತ್ತುಗಳೊಡನೆ ಪ್ರೀತಿಯಿಂದ ಕೂಡಿಕೊಂಡು ಸೋಮವನ್ನು ಪಾನಮಾಡು. ಎಲ್ಲರಿಗಿಂತಲೂ ಮೊದಲು ಪಾನಮಾಡಲು ಯೋಗ್ಯರಾದ ಋತುಯಾಜದೇವತೆಗಳೊಡನೆಯೂ, ರಮಣೀಯವಾದ ಧನದಾತೃಗಳೂ, ಸ್ತ್ರೀಪಾಲಕರೂ ಆದ ದೇವಪತ್ನಿಯರೊಡನೆಯೂ ಪ್ರೀತಿಯಿಂದ ಕೂಡಿಕೊಂಡು ಸೋಮವನ್ನು ಪಾನಮಾಡು.

## English Translation.

Sympathizing in satisfaction with Varuna, drink, Indra, the Soma juice; drink it, you who are entitled to praise, sympathizing with the Maruts: drink, sympathizing with the first drinkers, with the drinkers (at the sacrifices) of the Ritus; sympathizing with the protectresses of the wives (of the gods); the giver of wealth.

॥ ಸಂಹಿತಾಪಾಠಃ ॥

ಸಜೋಷಸ ಆದಿತ್ಯೈರ್ಮಾದಯಧ್ವಂ ಸಜೋಷಸ ಋಭವಃ ಪರ್ವತೇಭಿಃ ।
ಸಜೋಷಸೋ ದೈವ್ಯೇನಾ ಸವಿತ್ರಾ ಸಜೋಷಸಃ ಸಿಂಧುಭೀ ರತ್ನಧೇಭಿಃ ॥೮॥

॥ ಪದಪಾಠಃ ॥

ಸ್ಽಜೋಷಸಃ । ಆದಿತ್ಯೈಃ । ಮಾದಯಧ್ವಂ । ಸ್ಽಜೋಷಸಃ । ಋಭವಃ । ಪರ್ವತೇಭಿಃ ।
ಸ್ಽಜೋಷಸಃ । ದೈವ್ಯೇನ । ಸವಿತ್ರಾ । ಸ್ಽಜೋಷಸಃ । ಸಿಂಧುಽಭಿಃ । ರತ್ನಽಧೇಭಿಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಋಭವ ಆದಿತ್ಯೈಃ ಸಜೋಷಸಃ ಸಂಗತಾ ಯೂಯಂ ಮಾಧಯಧ್ವಂ । ತಥಾ ಪರ್ವತೇಭಿಃ ಪರ್ವವದ್ಭಿಃ ಪರ್ವಣ್ಯಚ್ಯರ್ಯಮಾನೈರ್ದೇವವಿಶೇಷೈಃ ಸಜೋಷಸೋ ಮಾದಯಧ್ವಂ । ತಥಾ ಚ ದೈವ್ಯೇನ ದೇವೇಭ್ಯೋ ಹಿತೇನ ಸವಿತ್ರಾ ಸಜೋಷಸೋ ರತ್ನಧೇಭೀ ರತ್ನಾನಾಂ ದಾತೃಭಿಃ ಸಿಂಧುಭಿಃ ಸ್ಯಂದನಸ್ವಭಾವೈರ್ನದ್ಯಭಿಮಾನಿದೇವೈಶ್ಚ ಸಜೋಷಸೋ ಮಾದಯಧ್ವಂ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಆದಿತ್ಯೈಃ—ಆದಿತ್ಯರೊಡನೆ । ಸಜೋಷಸಃ—ಪ್ರೀತಿಯಿಂದ ಕೂಡಿಕೊಂಡು । ಮಾದಯಧ್ವಂ—ಹರ್ಷವನ್ನು ಪಡೆಯಿರಿ । ಪರ್ವತೇಭಿಃ—ಪರ್ವತನಾಮಕವಾದ ದೇವತೆಗಳೊಡನೆ (ಅಥವಾ ಪರ್ವಕಾಲಗಳಲ್ಲಿ ಪೂಜಿಸಲ್ಪಡುವ ದೇವತೆಗಳೊಡನೆ) । ಸಜೋಷಸಃ—ಪ್ರೀತಿಯಿಂದ ಕೂಡಿಕೊಂಡು (ಹರ್ಷಿತರಾಗಿ) । ದೈವ್ಯೇನ—ದೇವತೆಗಳಿಗೆಲ್ಲಾ ಹಿತಕರನಾದ । ಸವಿತ್ರಾ—ಸವಿತೃವಿನೊಂದಿಗೆ । ಸಜೋಷಸಃ—ಕೂಡಿದವರಾಗಿಯೂ । ರತ್ನಧೇಭಿಃ—ರಮಣೀಯವಾದ ಧನದಾತೃಗಳಾದ । ಸಿಂಧುಭಿಃ—ನದ್ಯಭಿಮಾನಿದೇವತೆಗಳೊಡನೆಯೂ । ಸಜೋಷಸಃ—ಪ್ರೀತಿಯಿಂದ ಕೂಡಿದವರಾಗಿಯೂ (ಹರ್ಷವನ್ನು ಪಡೆಯಿರಿ).

॥ ಭಾವಾರ್ಥ ॥

ಎಲೈ ಋಭುಗಳೇ, ನೀವು ಆದಿತ್ಯರೊಡಗೂಡಿ ಸೋಮಪಾನದ ಹರ್ಷವನ್ನು ಪಡೆಯಿರಿ. ಪರ್ವತನಾಮಕವಾದ ದೇವತೆಗಳೊಡಗೂಡಿ ಹರ್ಷವನ್ನು ಪಡೆಯಿರಿ. ದೇವತೆಗಳಿಗೆಲ್ಲಾ ಹಿತಕರನಾದ ಸವಿತೃವಿನೊಡಗೂಡಿಯೂ, ರಮಣೀಯವಾದ ಧನದಾತೃಗಳಾದ ನದ್ಯಭಿಮಾನಿದೇವತೆಗಳೊಡನೆಯೂ ಪ್ರೀತಿಯಿಂದ ಕೂಡಿಕೊಂಡು ಸೋಮಪಾನದ ಹರ್ಷವನ್ನು ಪಡೆಯಿರಿ.

## English Translation.

Ribhus, be exhilarated, sympathizing with the Adityas, sympathizing with the Parvatas, sympathizing with the divine Savitri, sympathizing with the wealthbestowing (deities of the) rivers.

॥ ಸಂಹಿತಾಪಾಠಃ ॥

ಯೇ ಅಶ್ವಿನಾ ಯೇ ಪಿತರಾ ಯ ಊತೀ ಧೇನುಂ ತತಕ್ಷುರೃಭವೋ ಯೇ ಅಶ್ವಾ ।
ಯೇ ಅಂಸತ್ರಾ ಯ ಋಧಗ್ರೋದಸೀ ಯೇ ವಿಭ್ವೋ ನರಃ ಸ್ವಪತ್ಯಾನಿ ಚಕ್ರುಃ ॥ ೯ ॥

॥ ಪದಪಾಠಃ ॥

ಯೇ । ಅಶ್ವಿನಾ । ಯೇ । ಪಿತರಾ । ಯೇ । ಊತೀ । ಧೇನುಂ । ತತಕ್ಷುಃ । ಋಭವಃ । ಯೇ । ಅಶ್ವಾ ।
ಯೇ । ಅಂಸತ್ರಾ । ಯೇ । ಋಧಕ್ । ರೋದಸೀ ಇತಿ । ಯೇ । ವಿऽಭ್ವಃ । ನರಃ । ಸುऽಅಪತ್ಯಾನಿ । ಚಕ್ರುಃ ॥ ೯ ॥

॥ ಸಾಯಣಭಾಷ್ಯಂ ॥

ಯೆ ಋಭವೋಽಶ್ವಿನಾಶ್ವಿನಾವೂತೀ ಊತ್ಯಾ ಕ್ರಿಯಯಾ ರಥನಿರ್ಮಾಣರೂಪಯಾಪ್ರೀಣಯನ್। ಯೇ ಚ ಪಿತರಾ ಪಿತರೌ ತತಕ್ಷುಃ ತಕ್ಷಣೇನ ಸಮುಪಾದಯನ್ ಜೀರ್ಣೌ ಸಂತಾವೂತೀ ಊತ್ಯಾ ಯುವಾನೌ ಚಕ್ರುಃ । ಯೇ ಚ ಧೇನುಂ ತತಕ್ಷುಃ ಮೃತಾಯಾಃ ಪುನರ್ನವೀಕರಣೇನ । ಯೇ ಚಾಶ್ವಾಶ್ವೌ ತತಕ್ಷುಃ। ನಿಶ್ಚರ್ಮಣೋ ಗಾಮರಿಣೀತ ಧೀತಿಭಿರ್ಯಾ ಜರಂತಾ ಯುವಶಾ ತಾಕೃಣೋತನೇತ್ಯಾದ್ಯುಕ್ತಂ। ಋಗ್ವೇ. ೧-೧೬೧-೭ । ಯೇ ಚಾಂಸತ್ರಾಂಸತ್ರಾಣಿ ಕವಚಾನಿ ದೇವೇಭ್ಯಶ್ಚಕ್ರುಃ । ಯೇ ಚ ರೋದಸೀ ದ್ಯಾವಾಪೃಥಿವ್ಯಾವೃಧಕ್ ಪೃಥಕ್ಚಕ್ರುಃ । ಏವಮುಕ್ತಪ್ರಕಾರೇಣ ಯೇ ವಿಭ್ವೋ ವ್ಯಾಪ್ತಾ ಋಭವೋ ನರೋ ನೇತಾರಃ ಸ್ವಪತ್ಯಾನಿ ಸ್ವಪತನಸಾಧನಾನಿ ತತ್ಪ್ರಾಪ್ತಿಸಾಧನಾನಿ ವಾ ಕರ್ಮಾಣಿ ಚಕ್ರುಃ । ತೇಽಗ್ರೇಪಾ ಇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

ಯೇ—ಯಾವ । ಋಭವಃ—ಋಭುಗಳು । ಅಶ್ವಿನಾ—ಅಶ್ವಿನೀದೇವತೆಗಳನ್ನು । ಊತೀ—ತಮ್ಮ ರಥನಿರ್ಮಾಣಾದಿಕ್ರಿಯೆಗಳಿಂದ ತೃಪ್ತಿಗೊಳಿಸಿದರೋ । ಯೇ—ಯಾರು । ಪಿತರಾ— ತಮ್ಮ ವೃದ್ಧ ಮಾತಾ ಪಿತೃಗಳನ್ನು । ತತಕ್ಷುಃ—ಯುವಕರಾಗುವಂತೆ ಮಾಡುವ ಕ್ರಿಯೆಯನ್ನು । ಚಕ್ರುಃ—ಮಾಡಿದರೋ । ಯೇ—ಯಾರು । ಧೇನುಂ—ಮೃತವಾದ ಗೋವನ್ನು ಬದುಕಿಸಿದರೋ । ಯೇ—ಯಾರು । ಅಶ್ವಾ—(ಇಂದ್ರನ) ಅಶ್ವಗಳನ್ನು ನಿರ್ಮಿಸಿದರೋ । ಯೇ—ಯಾರು । ಅಂಸತ್ರಾ—(ದೇವತೆಗಳಿಗೆ) ಕವಚವನ್ನು ರಚಿಸಿದರೋ । ಯೇ—ಯಾರು । ರೋದಸೀ—ದ್ಯಾವಾಪೃಥಿವಿಗಳನ್ನು । ಋಧಕ್— ಪ್ರತ್ಯೇಕವಾಗುವಂತೆ ಮಾಡಿದರೋ । ಯೇ—ಯಾರು । ವಿಭ್ವಃ—ಸರ್ವತ್ರ ವ್ಯಾಪ್ತರಾಗಿಯೂ । ನರಃ—ನೇತೃಗಳಾಗಿಯೂ । ಸ್ವ ಪತ್ಯಾನಿ—ಶ್ರೇಷ್ಠವಾದ ಸಿದ್ಧಿಸಾಧಕವಾದ ಕರ್ಮಗಳನ್ನು ಮಾಡಿದರೋ (ಅಂತಹ ಋಭುಗಳು) । ಅಗ್ರೇ ಪಾಃ—ಎಲ್ಲರಿಗಿಂತಲೂ ಮೊದಲು ಸೋಮಪಾನವನ್ನು ಮಾಡಲಿ.

॥ ಭಾವಾರ್ಥ ॥

ಯಾವ ಋಭುಗಳು ತಮ್ಮ ರಥನಿರ್ಮಾಣಾದಿಕ್ರಿಯೆಗಳಿಂದ ಅಶ್ವಿನೀದೇವತೆಗಳನ್ನು ತೃಪ್ತಿಪಡಿಸಿದರೋ, ಯಾರು ತಮ್ಮ ವೃದ್ಧಮಾತಾಪಿತೃಗಳನ್ನು ಯುವಕರಾಗುವಂತೆ ಮಾಡಿದರೋ, ಯಾರು ಮೃತವಾದ ಗೋವನ್ನು ಬದುಕಿಸಿದರೋ, ಯಾರು ಇಂದ್ರನ ಅಶ್ವಗಳನ್ನು ನಿರ್ಮಿಸಿದರೋ, ಯಾರು ದೇವತೆಗಳಿಗೆ ಕವಚಗಳನ್ನು ರಚಿಸಿದರೋ, ಯಾರು ದ್ಯಾವಾಪೃಥಿವಿಗಳನ್ನು ಪ್ರತ್ಯೇಕವಾಗುವಂತೆ ಮಾಡಿದರೋ, ಯಾರು ಸರ್ವವ್ಯಾಪ್ತರಾಗಿಯೂ, ನೇತೃಗಳಾಗಿಯೂ, ಶ್ರೇಷ್ಠವಾದ ಸಿದ್ಧಿಯನ್ನು ಸಾಧಿಸತಕ್ಕ ಕರ್ಮಗಳನ್ನು ಮಾಡಿದರೋ ಅಂತಹ ಋಭುಗಳು ಎಲ್ಲರಿಗಿಂತಲೂ ಮೊದಲು ಸೋಮವನ್ನು ಪಾನಮಾಡಲಿ.

## English Translation.

Ribhus, who by your assistance (gratified) the Ashwins, who renovated your) parents, who (restored) the cow, who fabricated the

horses, who made armour (for the gods), who separated earth and heaven, and who, the all-pervading leaders (of rites), accomplished (acts productive of) good results.

॥ ಸಂಹಿತಾಪಾಠಃ ॥

ಯೇ ಗೋಮಂತಂ ವಾಜವಂತಂ ಸುವೀರಂ ರಯಿಂ ಧತ್ಥ ವಸುಮಂತಂ ಪುರುಕ್ಷುಂ ।
ತೇ ಅಗ್ರೇಪಾ ಋಭವೋ ಮಂದಸಾನಾ ಅಸ್ಮೇ ಧತ್ತ ಯೇ ಚ ರಾತಿಂ ಗೃಣಂತಿ ॥ ೧೦ ॥

॥ ಪದಪಾಠಃ ॥

ಯೇ । ಗೋಽಮಂತಂ । ವಾಜಽವಂತಂ । ಸುಽವೀರಂ । ರಯಿಂ । ಧತ್ಥ । ವಸುಽಮಂತಂ । ಪುರುಽಕ್ಷುಂ ।
ತೇ । ಅಗ್ರೇಽಪಾಃ । ಋಭವಃ । ಮಂದಸಾನಾಃ । ಅಸ್ಮೇ ಇತಿ । ಧತ್ತ । ಯೇ । ಚ । ರಾತಿಂ । ಗೃಣಂತಿ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಋಭವೋ ಯೇ ಯೂಯಂ ಗೋಮಂತಂ ಗೋಸಹಿತಂ ವಾಜವಂತಮನ್ನವಂತಂ ಸುವೀರಂ ಶೋಭನಪುತ್ರೋಪೇತಂ ವಸುಮಂತಂ ನಿವಾಸಯೋಗ್ಯಗೃಹಾದಿಧನೋಪೇತಂ ಪುರುಕ್ಷುಂ ಬಹ್ವನ್ನಂ ರಯಿಂ ಧನಂ ಧತ್ಥ । ಧಾರಯಥ ಮಹ್ಯಂ ದಾತುಂ । ಹೇ ಋಭವಸ್ತೇ ಯೂಯಮಗ್ರೇಪಾಃ ಪ್ರಥಮಂ ಪಾತಾರೋ ಮಂದಸಾನಾ ಮಾದ್ಯಂತಃ ಸಂತೋಽಸ್ಮೇ ಅಸ್ಮಭ್ಯಂ ಧತ್ತ । ದತ್ತ ರಯಿಂ । ಯೇ ಚ ಯೂಯಂ ರಾತಿಂ ದಾನಂ ದತ್ತಂ ಸೋಮಂ ವಾ ಗೃಣಂತಿ । ಸ್ತುವಂತಿ । ತೇ ಧತ್ತ । ಯದ್ವಾ । ಯೇ ಚ ರಾತಿಂ ಗೃಣಂತಿ ಯಜಮಾನಾಸ್ತೇಭ್ಯೋಽಪಿ ಧತ್ತ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಯೇ—ಯಾವ ನೀವು । ಗೋಮಂತಂ—ಗೋವುಗಳಿಂದ ಕೂಡಿದುದೂ । ವಾಜವಂತಂ—ಅನ್ನಯುಕ್ತವಾದುದೂ । ಸುವೀರಂ—ಶ್ರೇಷ್ಠವಾದ ಪುತ್ರೋಪೇತವಾಧುದೂ । ವಸುಮಂತಂ—ನಿವಾಸಯೋಗ್ಯವಾದ ಗೃಹಾದಿಗಳಿಂದ ಕೂಡಿದುದೂ । ಪುರುಕ್ಷುಂ—ಬಹಳ ಪುಷ್ಟಿದಾಯಕ

ವಾದುದೂ ಆದ । ರಯಿಂ—ಧನವನ್ನು । ದತ್ತ—ಹೊಂದಿದ್ದೀರೋ । ತೇ—ಅಂತಹ ನೀವು । ಅಗ್ರೇಪಾಃ—ಎಲ್ಲರಿಗಿಂತಲೂ ಮೊದಲು ಪಾನಮಾಡುವವರೂ । ಮಂದಸಾನಾಃ—ಹರ್ಷಿತವಾದ ಚಿತ್ತವುಳ್ಳವರೂ ಆಗಿ । ಯೇ—ಯಾವ ಯಜಮಾನರು । ರಾತಿಂ—ನಿಮ್ಮ ದಾನವನ್ನು । ಗೃಣಂತಿ—ಸ್ತುತಿಸುವರೋ ಅಂತಹ । ಅಸ್ಮೇ—ನಮಗೆ ಕೊಡುವುದಕ್ಕಾಗಿ । ಧತ್ತ—ಪಡೆದಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಯಾವ ನೀವು ಗೋವುಗಳಿಂದ ಕೂಡಿದುದೂ, ಅನ್ನಯುಕ್ತವಾದುದೂ, ಶ್ರೇಷ್ಠವಾದ ಪುತ್ರೋಪೇತವಾದುದೂ, ನಿವಾಸಯೋಗ್ಯವಾದ ಗೃಹಾದಿಗಳಿಂದ ಕೂಡಿದುದೂ, ಬಹಳ ಪುಷ್ಟಿದಾಯಕವಾದುದೂ ಆದ ಧನವನ್ನು ಹೊಂದಿದ್ದೀರೋ, ಅಂತಹ ನೀವು ಎಲ್ಲರಿಗಿಂತಲೂ ಮೊದಲು ಪಾನಮಾಡುವವರೂ, ಹರ್ಷಿತವಾದ ಚಿತ್ತವುಳ್ಳವರೂ ಆಗಿ ಯಾವ ಯಜಮಾನರು ನಿಮ್ಮ ದಾನವನ್ನು ಸ್ತುತಿಸುವರೋ ಅಂತಹ ನಮಗೆ ಕೊಡುವುದಕ್ಕಾಗಿ ಪಡೆದಿರಿ.

English Translation.

Ribhus, who possess wealth, comprising cattle, food, progeny, dwellings, and abundant sustenance, do you, who are the first drinkers (of the Soma), bestow upon us, when exhilarated, (that wealth, and upon those) who laud your liberality.



॥ ಸಂಹಿತಾಪಾಠಃ ॥

ನಾಪಾಭೂತ ನ ವೋಽತೀತೃಷಾಮಾನಿಃಶಸ್ತಾ ಋಭವೋ ಯಜ್ಞೇ ಅಸ್ಮಿನ್ ।
ಸಮಿಂದ್ರೇಣ ಮದಥ ಸಂ ಮರುದ್ಭಿಃ ಸಂ ರಾಜಭೀ ರತ್ನಧೇಯಾಯ ದೇವಾಃ ॥ ೧೧ ॥

॥ ಪದಪಾಠಃ ॥

ನ । ಅಪ । ಅಭೂತ । ನ । ವಃ । ಅತೀತೃಷಾಮ । ಅನಿಃಽಶಸ್ತಾಃ । ಋಭವಃ । ಯಜ್ಞೇ । ಅಸ್ಮಿನ್ ।
ಸಂ । ಇಂದ್ರೇಣ । ಮದಥ । ಸಂ । ಮರುತ್ಽಭಿಃ । ಸಂ । ರಾಜಽಭಿಃ । ರತ್ನಽಧೇಯಾಯ । ದೇವಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಋಭವೋ ಯೂಯಂ ನಾಪಾಭೂತ । ನಾಪಗಚ್ಛತ । ಅಪರಕ್ತಾ ನ ಭವತ । ವಯಂ ಚ ವೋ ಯುಷ್ಮಾನ್ನಾತೀತೃಷಾಮ । ಅತ್ಯಂತಂ ತೃಷಿತಾನ್ನಾ ಕರವಾಮ । ಅತೋ ಹೇ ಋಭವೋ ದೇವಾ ಅನಿಃಶಸ್ತಾ ಅನಿಂದಿತಾಃ ಸಂತೋಽಸ್ಮಿಜ್ಞನ್ಯ ಇಂದ್ರೇಣ ಸಂ ಮದಥ । ಮರುದ್ಭಿಃ ಸಂ ಮದಥ । ರಾಜಭಿಃ ರಾಜಮಾನೈರನ್ಯೈರ್ದೇವೈಃ ಸಂ ಮದಥ । ತೃಪ್ತಾ ಭವಥ । ಕಿಮರ್ಥಂ । ರತ್ನಧೇಯಾಯ ರಮಣೀಯಾಯ ಧನದಾನಾಯ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ನಾಪಾಭೂತ—ನಮ್ಮನ್ನು ತ್ಯಜಿಸಿ ಹೊರಟುಹೋಗಬೇಡಿ । (ವಯಂ—ನಾವು) । ವಃ—ನಿಮ್ಮನ್ನು । ನ ಅತೀತೃಷಾಮ—ತೃಷ್ಣೆಯಿಂದ ಕೂಡಿದವರನ್ನಾಗಿ ಮಾಡದಂತಾಗಲಿ (ಬಾಯಾರಿಕೆಯಿಂದ ಬಳಲಿದವರನ್ನಾಗಿ ಮಾಡುವುದಿಲ್ಲ) । ದೇವಾಃ—ದೇವಾತ್ಮರಾದ ಋಭುಗಳೇ । ಅನಿಃಶಸ್ತಾಃ—ನಿಂದಾರಹಿತರಾಗಿ (ಶ್ಲಾಘ್ಯರಾಗಿ) । ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ । ರತ್ನಧೇಯಾಯ—ನಮಗೆ ಹಿತಕರವಾದ ಧನವನ್ನು ದಾನಮಾಡುವುದಕ್ಕಾಗಿ । ಇಂದ್ರೇಣ—ಇಂದ್ರನೊಡನೆ । ಸಂ ಮದಥ—ತೃಪ್ತರಾಗಿರಿ । ಮರುದ್ಭಿಃ – ಮರುತ್ತುಗಳೊಡನೆ । ಸಂ (ಮದಥ)—ತೃಪ್ತಿಯನ್ನು ಪಡೆಯಿರಿ । ರಾಜಭಿಃ—ಪ್ರಕಾಶಮಾನರಾದ ಇತರ ದೇವತೆಗಳೊಡನೆ । ಸಂ (ಮದಥ)—ಸಂತೃಪ್ತರಾಗಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ನಮ್ಮನ್ನು ನೀವು ತ್ಯಜಿಸಿ ಹೊರಟುಹೋಗಬೇಡಿ. ನಿಮ್ಮನ್ನು ನಾವು ಬಾಯಾರಿಕೆಯಿಂದ ಕೂಡಿದವರನ್ನಾಗಿ ಮಾಡದಂತೆ ಆಗಲಿ. ದೇವತಾತ್ಮರಾದ ಋಭುಗಳೇ, ನೀವು ನಿಂದಾರಹಿತರಾಗಿ ಎಂದರೆ, ನಮ್ಮ ಶ್ಲಾಘನೆಗೆ ಪಾತ್ರರಾಗಿ, ಈ ಯಜ್ಞದಲ್ಲಿ ಇಂದ್ರನೊಡನೆಯೂ, ಮರುತ್ತುಗಳೊಡನೆಯೂ, ಪ್ರಕಾಶಮಾನರಾದ ಇತರ ದೇವತೆಗಳೊಡನೆಯೂ ಸಂತೃಪ್ತಿಯನ್ನು ಪಡೆಯಿರಿ.

English Translation.

Ribhus do not go away; let us not leave you (thirsting): (be present) unreproached at this sacrifice; be exhilarated, deities, along with Indra, with the Maruts, and with (other) brilliant (divinities), for the distribution of wealth.

## ಮೂವತ್ತೈದನೆಯ ಸೂಕ್ತವು

ಇಹೋಪ ಯಾತೇತಿ ನವರ್ಚಂ ತೃತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾರ್ಭವಂ । ಇಹೋಪ ನವೇತ್ಯನುಕ್ರಮಣಿಕಾ ॥ ತೃತೀಯಸವನೇ ಮೈತ್ರಾವರುಣಸ್ಯೇದಮುನ್ನೀಯಮಾನಸೂಕ್ತಂ । ಸೂತ್ರಿತಂ ಚ । ಆ ತ್ವಾ ವಹಂತ್ವಸಾವಿ ದೇವಮಿಹೋಪ ಯಾತೇತ್ಯನುಸವನಂ । ಆ. ೫-೫ । ಇತಿ ॥

ಅನುವಾದವು—ಇಹೋಪ ಯಾತ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಋಭುಗಳು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಇಹೋಪ ನವ ಎಂದು ಹೇಳಿರುವುದು. ತೃತೀಯ ಸವನದಲ್ಲಿ ಮೈತ್ರಾವರುಣನೆಂಬ ಋತ್ವಿಜರು ಪಠಿಸಬೇಕಾದ ಉನ್ನೀಯಮಾನಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಆ ತ್ವಾ ವಹಂತ್ವಸಾವಿ ದೇವಮಿಹೋಪ ಯಾತೇತ್ಯನುಸವನಂ ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು.

## ಸೂಕ್ತ—೩೫

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೫ ॥

ಅಷ್ಟಕ- ೩ ॥ ಅಧ್ಯಾಯ—೭ ॥ ವರ್ಗ—೫, ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ವಾಮದೇವಃ ॥

॥ ದೇವತಾ—ಋಭವಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಹೋಪ ಯಾತ ಶವಸೋ ನಪಾತಃ ಸೌಧನ್ವನಾ ಋಭವೋ ಮಾಪ ಭೂತ ।
ಅಸ್ಮಿನ್ಹಿ ವಃ ಸವನೇ ರತ್ನಧೇಯಂ ಗಮಂತ್ವಿಂದ್ರಮನು ವೋ ಮದಾಸಃ ॥

॥ ಪದಪಾಠಃ ॥

ಇಹ । ಉಪ । ಯಾತ । ಶವಸಃ । ನಪಾತಃ । ಸೌಧನ್ವನಾಃ । ಋಭವಃ । ಮಾ । ಅಪ । ಭೂತ ।
ಅಸ್ಮಿನ್ । ಹಿ । ವಃ । ಸವನೇ । ರತ್ನಽಧೇಯಂ । ಗಮಂತು । ಇಂದ್ರಂ । ಅನು । ವಃ । ಮದಾಸಃ ॥೧॥

॥ ಸಾಯಣಭಾಷ್ಯಂ ॥

ಹೇ ಶವಸೋ ನಪಾತೋ ಬಲಸ್ಯ ಪುತ್ರಾಸ್ತಸ್ಯ ನ ಪಾತಯಿತಾರೋ ವಾ ಹೇ ಸೌಧನ್ವನಾಃ ಸುಧನ್ವನಃ ಪುತ್ರಾ ಹೇ ಋಭವೋ ಯೂಯಮಿಹೋಪ ಯಾತ । ಅಸ್ಮಿನ್-ತೃತೀಯೇ ಸವನ ಉಪಗಚ್ಛತ । ಮಾಪ ಭೂತ । ಅಪಗತಾ ನ ಭವತ । ಅಸ್ಮಿನ್ ಸವನೇ ರತ್ನಧೇಯಂ ರಮಣೀಯಧನಸ್ಯ ದಾತಾರ-

ಮಿಂದ್ರಮನು ಅನುಸೃತ್ಯ ವೋ ಯುಷ್ಮಾನ್ಮದಾಸೋ ಮದಕರಾಃ ಸೋಮಾ ಗಮಂತು । ಗಚ್ಛಂತ್ವ್ವಿ ಅನ್ವಿತಿ ಕ್ರಿಯಯಾ ವಾ ಸಂಬಧ್ಯತೇ । ಇಂದ್ರಂ ಯುಷ್ಮಾಂಶ್ಚಾನ್ವಾಗಚ್ಛಂತ್ವಿತ್ಯರ್ಥಃ । ಹಿ ಪೂರಣಃ ॥

॥ ಪ್ರತಿಪದಾರ್ಥ ॥

ಶವಸೋ ನಪಾತಃ—ಶಕ್ತಿಪುತ್ರರೂ । ಸೌಧನ್ವನಾಃ—ಸುಧನ್ವಪುತ್ರರೂ ಆದ । ಋಭವಃ—ಎಲೆ ಋಭುಗಳೇ । ಇಹ ಉಪ ಯಾತ—ಈ ಯಜ್ಞಕ್ಕೆ ದಯಮಾಡಿ । ಮಾ ಅಪ ಭೂತ—ನಮ್ಮಿಂದ ದೂರವಾಗಿ ಹೊರಟುಹೋಗಬೇಡಿ । ವಃ—ನಿಮ್ಮನ್ನುದ್ದೇಶಿಸಿದ । ಅಸ್ಮಿನ್ ಸವನೇ—ಈ ತೃತೀಯಸವನದಲ್ಲಿ । ರತ್ನ-ಧೇಯಂ—ರಮಣೀಯವಾದ ಧನದ ದಾತೃವಾದ । ಇಂದ್ರಂ ಅನು—ಇಂದ್ರನನ್ನು ಅನುಸರಿಸಿ । ವಃ—ನಿಮ್ಮನ್ನು । ಮದಾಸಃ—ಮದಕಾರಕಗಳಾದ ಸೋಮರಸಗಳು । ಗಮಂತು—ಬಂದುಸೇರಲಿ.

ಭಾವಾರ್ಥ ॥

ಶಕ್ತಿಪುತ್ರರೂ, ಸುಧನ್ವಪುತ್ರರೂ ಆದ ಎಲೈ ಋಭುಗಳೇ, ಈ ಯಜ್ಞಕ್ಕೆ ದಯಮಾಡಿ. ನಮ್ಮಿಂದ ದೂರವಾಗಿ ಹೊರಟುಹೋಗಬೇಡಿ. ನಿಮ್ಮನ್ನುದ್ದೇಶಿಸಿದ ಈ ತೃತೀಯಸವನದಲ್ಲಿ ರಮಣೀಯವಾದ ಧನದ ಧಾತೃವಾದ ಇಂದ್ರನನ್ನು ಅನುಸರಿಸಿ ನಿಮ್ಮನ್ನು ಮದಕಾರಕಗಳಾದ ಸೋಮುಸರಗಳು ಬಂದು ಸೇರಲಿ.

## English Translation.

Come hither, sons of strength, sons of Sudhanwan; Ribhus, keep not away; may the exhilarat ng juices proceed to you at this sacrifice, after the munificicent Indra.



॥ ಸಂಹಿತಾಪಾಠಃ ॥

ಆಗನ್ನೃಭೂಣಾಮಿಹ ರತ್ನಧೇಯಮಭೂತ್ಸೋಮಸ್ಯ ಸುಷುತಸ್ಯ ಪೀತಿಃ ।
ಸುಕೃತ್ಯಯಾ ಯತ್ಸ್ವಪಸ್ಯಯಾ ಚೈ ಏಕಂ ವಿಚಕ್ರ ಚಮಸಂ ಚತುರ್ಧಾ ॥

॥ ಪದಪಾಠಃ ॥

ಆ । ಅಗನ್ । ಋಭೂಣಾಂ । ಇಹ । ರತ್ನಽಧೇಯಂ । ಅಭೂತ್ । ಸೋಮಸ್ಯ । ಸುಽಸುತಸ್ಯ । ಪೀತಿಃ ।

ಸುಽಕೃತ್ಯಯಾ । ಯತ್ । ಸುಽಅಪಸ್ಯಯಾ । ಚ । ಏಕಂ । ವಿಽಚಕ್ರ । ಚಮಸಂ । ಚತುಃಽಧಾ ॥೨॥

॥ ಸಾಯಣಭಾಷ್ಯಂ ॥

ಋಭೂಣಾಂ ಯುಷ್ಮಾಕಮಿಹ ತೃತೀಯಸವನೇ ರತ್ನಧೇಯಂ ರತ್ನದಾನಮಾಗನ್ । ಆಗಚ್ಛತು ಮಹ್ಯಂ । ಯದ್ವಾ । ಯುಷ್ಮಾಕಮೇವ ಸೋಮಾಖ್ಯಂ ರತ್ನಮಾಗನ್ । ಯಸ್ಮಾತ್ಸೋಮಸ್ಯ ಸುಷುತಸ್ಯ ಪೀತಿಃ ಪಾನಮಭೂತ್ । ಪ್ರಜಾಪತಿನಾ ಲಬ್ಧಮಿತ್ಯರ್ಥಃ । ತದಪಿ ಕುತ ಇತಿ ಚೇತ್ । ಉಚ್ಯತೇ । ಯದ್ಯಸ್ಮಾತ್ಸುಕೃತ್ಯಯಾ ಶೋಭನಹಸ್ತವ್ಯಾಪಾರೇಣ ಸ್ವಪಸ್ಯಯಾ ಶೋಭನರಥನಿರ್ಮಾಣಾದಿಕರ್ಮೇಚ್ಛಯಾ ಚೈಕಂ ಸಂತಂ ಚಮಸಂ ಚತುರ್ಧಾ ವಿಚಕ್ರ । ಕೃತವಂತಃ ॥

॥ ಪ್ರತಿಪದಾರ್ಥ ॥

ಋಭವಃ—(ಎಲೈ ಋಭುಗಳೇ) । ಯತ್—ಯಾವ ಪ್ರಭಾವದಿಂದಲೂ । ಸುಕೃತ್ಯಯಾ—ಉತ್ತಮವಾದ ಕ್ರಿಯಾನೈಪುಣ್ಯದಿಂದಲೂ । ಸ್ವಪಸ್ಯಯಾ ಚ—ಶೋಭನಾತ್ಮಕವಾದ ಕರ್ಮಗಳಿಂದಲೂ ಸಹ । ಏಕಂ ಸಂತಂ—ಒಂದೇ ಆಗಿದ್ದ । ಚಮಸಂ—ಚಮಸ ಪಾತ್ರೆಯನ್ನು । ಚತುರ್ಧಾ—ನಾಲ್ಕು ಭಾಗಗಳಾಗಿ । ವಿಚಕ್ರ—ಮಾಡಿದರೋ । ಸುಷುತಸ್ಯ—ಚೆನ್ನಾಗಿ ಹಿಂಡಲ್ಪಟ್ಟ । ಸೋಮಸ್ಯ—ಸೋಮರಸದ । ಪೀತಿಃ—ಪಾನವು। ಅಭೂತ್—(ಪ್ರಜಾಪತಿಯಿಂದ) ನಿಮಗಾಗಿ ಮಾಡಲ್ಪಟ್ಟಿತೋ (ಆ ಮಹತ್ವದಿಂದಲೇ)। ಋಭೂಣಾಂ—ಋಭುನಾಮದಿಂದ ಪ್ರಸಿದ್ಧರಾದ ನಿಮ್ಮನ್ನುದ್ದೇಶಿಸಿದ । ಇಹ—ಈ ತೃತೀಯ ಸವನದಲ್ಲಿ । ರತ್ನಧೇಯಂ—ರಮಣೀಯವಾದ ಧನದ ದಾನವು । ಆ ಗನ್—ನಮ್ಮನ್ನುದ್ದೇಸಿಸಿ ಬರಲಿ.

॥ ಭಾವಾರ್ಥ ॥

ಎಲೈ ಋಭುಗಳೇ, ಯಾವ ನಿಮ್ಮ ಪ್ರಭಾವದಿಂದಲೂ, ಉತ್ತಮವಾದ ಕ್ರಿಯಾನೈಪುಣ್ಯದಿಂದಲೂ, ಶೋಭನಾತ್ಮಕವಾದ ಕರ್ಮಗಳಿಂದಲೂ ಸಹ ಒಂದೇ ಆಗಿದ್ದ ಚಮಸಪಾತ್ರೆಯನ್ನು ನಾಲ್ಕು ಭಾಗಗಳಾಗಿ ಮಾಡಿದಿರೋ ಮತ್ತು ಯಾವ ಅದೇ ಮಹತ್ವದಿಂದ ಚೆನ್ನಾಗಿ ಹಿಂಡಲ್ಪಟ್ಟ ಸೋಮರಸದ ಪಾನವು ಪ್ರಜಾಪತಿಯಿಂದ ಕೊಡಲ್ಪಟ್ಟಿತೋ ಆ ಮಹತ್ವವಿಶೇಷಣದರಿಂದಲೇ, ಋಭುನಾಮದಿಂದ ಪ್ರಸಿದ್ಧರಾದ ನಿಮ್ಮನ್ನು ಉದ್ದೇಶಿಸಿದ ಈ ತೃತೀಯಸವನದಲ್ಲಿ ರಮಣೀಯವಾದ ಧನದ ದಾನವು ನಮ್ಮನ್ನುದ್ದೇಶಿಸಿ ಬರಲಿ.

## English Translation.

May the munificence of the Ribhus come to me on this occasion, (since) there has been the drinking of the effused Soma, in consequence of one ladle having been made fourfold by their dexterous and excellent work.



॥ ಸಂಹಿತಾಪಾಠಃ ॥

ವ್ಯಕೃಣೋತ ಚಮಸಂ ಚತುರ್ಧಾ ಸಖೇ ವಿ ಶಿಕ್ಷೇತ್ಯಬ್ರವೀತ ।
ಅಥೈತ ವಾಜಾ ಅಮೃತಸ್ಯ ಪಂಥಾಂ ಗಣಂ ದೇವಾನಾಮೃಭವಃ ಸುಹಸ್ತಾಃ ॥

॥ ಪದಪಾಠಃ ॥

ವಿ । ಅಕೃಣೋತ । ಚಮಸಂ । ಚತುಃಽಧಾ । ಸಖೇ । ವಿ । ಶಿಕ್ಷ । ಇತಿ । ಅಬ್ರವೀತ ।
ಅಥ । ಐತ । ವಾಜಾಃ । ಅಮೃತಸ್ಯ । ಪಂಥಾಂ । ಗಣಂ । ದೇವಾನಾಂ । ಋಭವಃ । ಸುಽಹಸ್ತಾಃ ।

॥ ಸಾಯಣಭಾಷ್ಯಂ ॥

ಹೇ ಋಭವೋ ಯೂಯಂ ಚಮಸಂ ಚತುರ್ಧಾ ವ್ಯಕೃಣೋತ । ವ್ಯಕುರುತ । ಕೃತ್ವಾ ಚ ಹೇ ಸಖೇ ಹೇ ಸಖಿಭೂತಾಗ್ನೇ ವಿ ಶಿಕ್ಷಾನುಗೃಹಾಣ ಸೋಮಪಾನಮಿತ್ಯಬ್ರವೀತ । ಅವದತ ಯೂಯಂ । ಅಥ ಸೋಽಗ್ನಿರ್ಯುಷ್ಮಾನವಾದೀತ್ ಖಲು । ಕಿಮಿತಿ । ಹೇ ವಾಜಾ ಋಭವಃ ಸುಹಸ್ತಾಃ ಕುಶಲಹಸ್ತಾ ಯೂಯಮಮೃತಸ್ಯಾಮರಣಧರ್ಮಕಸ್ಯ ಸ್ವರ್ಗಸ್ಯ ಪಂಥಾಂ ಪಂಥಾನಮೈತ । ಗಚ್ಛತ । ಕಿಂ ತದಮೃತಮಿತಿ । ದೇವಾನಾಮಿಂದ್ರಾದೀನಾಂ ಗಣಂ ಸಂಘಾತಮೈತ ॥

॥ ಪ್ರತಿಪದಾರ್ಥ ॥

(ಎಲೈ ಋಭುಗಳೇ) ಚಮಸಂ—ಒಂದಾಗಿದ್ದ ಚಮಸಪಾತ್ರೆಯನ್ನು । ಚತುರ್ಧಾ—ನಾಲ್ಕಾಗುವಂತೆ । ವ್ಯಕೃಣೋತ—(ನೀವು) ಮೊದಲು ಮಾಡಿದಿರಿ (ಅನಂತರ ಅಗ್ನಿಯನ್ನು ಕುರಿತು) । ಸಖೇ—ಎಲೈ ಮಿತ್ರನಾದ ಅಗ್ನಿಯೇ । ವಿ ಶಿಕ್ಷ—ಸೋಮಪಾನಕ್ಕೆ ಅನುಜ್ಞೆಯನ್ನು ಕೊಡು । ಇತ್ಯಬ್ರವೀತ—ಎಂಬುದಾಗಿ ಹೇಳಿದಿರಿ । ಅಥ—ಅಗ್ನಿಯ ಅನುಜ್ಞೆಯಾದೊಡನೆಯೇ । ವಾಜಾಃ—ಎಲೈ ವಾಜರೇ (ಋಭುಗಳೇ) । ಸುಹಸ್ತಾಃ—ಶ್ರೇಷ್ಠವಾದ ಕರ್ಮಕ್ಕೆ ಯೋಗ್ಯವಾದ ಹಸ್ತವುಳ್ಳವರಾಗಿ । ಅಮೃತಸ್ಯ—ಶಾಶ್ವತವಾದ ಸ್ವರ್ಗದ । ಪಂಥಾಂ—ದಾರಿಯನ್ನು । ಐತ—ಹೋಗಿ ಸೇರಿದಿರಿ । ದೇವಾನಾಂ—ಇಂದ್ರಾದಿ ದೇವತೆಗಳ । ಗಣಂ—ಸಮೂಹವನ್ನು (ಹೋಗಿ ಸೇರಿದಿರಿ).

॥ ಭಾವಾರ್ಥ ॥

ಎಲೈ ಋಭುಗಳೇ, ನೀವು ಒಂದಾಗಿದ್ದ ಚಮಸಪಾತ್ರೆಯನ್ನು ನಾಲ್ಕಾಗುವಂತೆ ಮಾಡಿದಿರಿ. ಅನಂತರ ಅಗ್ನಿಯನ್ನು ಕುರಿತು, "ಎಲೈ ಮಿತ್ರನಾದ ಅಗ್ನಿಯೇ, ಸೋಮಪಾನಕ್ಕೆ ಅನುಜ್ಞೆಯನ್ನು ಕೊಡು" ಎಂದು ಕೇಳಿದಿರಿ. ಅಗ್ನಿಯು ಅನುಜ್ಞೆಯನ್ನು ಕೊಟ್ಟೊಡನೆಯೇ ಎಲೈ ವಾಜ ಮತ್ತು ಋಭುಗಳೇ, ನೀವು ಶ್ರೇಷ್ಠವಾದ ಕರ್ಮಕ್ಕೆ ಯೋಗ್ಯವಾದ ಹಸ್ತವುಳ್ಳವರಾಗಿ ಶಾಶ್ವತವಾದ ಸ್ವರ್ಗದ ದಾರಿಯನ್ನು ಹೋಗಿ ಸೇರಿದಿರಿ. ಮತ್ತು ಇಂದ್ರಾದಿದೇವತೆಗಳ ಸಮೂಹವನ್ನು ಹೋಗಿ ಸೇರಿದಿರಿ.

## English Translation.

You have made the ladle fourfold, and have said (to Agni), assent (to the division); therefore have you gone, Vajas, the path of the immortals: dexterous-handed Ribhus (you have joined) the company of the gods.



॥ ಸಂಹಿತಾಪಾಠಃ ॥

ಕಿಂಮಯಃ ಸ್ವಿಚ್ಚಮಸ ಏಷ ಆಸ ಯಂ ಕಾವ್ಯೇನ ಚತುರೋ ವಿಚಕ್ರ ।
ಅಥಾ ಸುನುಧ್ವಂ ಸವನಂ ಮದಾಯ ಪಾತ ಋಭವೋ ಮಧುನಃ ಸೋ-
ಮ್ಯಸ್ಯ ॥ ೪ ॥

॥ ಪದಪಾಠಃ ॥

ಕಿಂऽಮಯಃ । ಸ್ವಿತ್ । ಚಮಸಃ । ಏಷಃ । ಆಸ । ಯಂ । ಕಾವ್ಯೇನ । ಚತುರಃ । ವಿऽಚಕ್ರ ।
ಅಥ । ಸುನುಧ್ವಂ । ಸವನಂ । ಮದಾಯ । ಪಾತ । ಋಭವಃ । ಮಧುನಃ । ಸೋಮ್ಯಸ್ಯ ॥ ೪ ॥

॥ ಸಾಯಣಭಾಷ್ಯಂ ॥

ಕಿಂಮಯಃ ಸ್ವಿತ್ ಕಿಮಾತ್ಮಕ ಏಷ ಚಮಸ ಆಸ । ಸ್ವಿತ್ ಪ್ರಶ್ನೇ । ಯಂ ಚಮಸಮೇಕಂ ಸಂತಂ ಕಾವ್ಯೇನ ಕವೀನಾಂ ಮೇಧಾವಿನಾಂ ಸಂಬಂಧಿನಾ ಕರ್ಮಣಾ ಕೌಶಲೇನ ಚತುರೋ ವಿಚಕ್ರ । ಕೃತವಂತಃ । ಅಥಾಧುನಾ ಸವನಂ । ಸೂಯತ ಇತಿ ಸವನಃ ಸೋಮಃ । ತಂ ಮದಾಯ ಹರ್ಷಾಯ ಸುನುಧ್ವಂ ಹೇ ಋತ್ವಿಜಃ । ಹೇ ಋಭವೋ ಯೂಯಂ ಚ ಸೋಮ್ಯಸ್ಯ ಸೋಮಸಂಬಂಧಿನಂ ಮಧುನೋ ಮಧುರಂ ರಸಂ ಪಾತ । ಪಿಬತ ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಯಂ—ಒಂದಾಗಿದ್ದ ಯಾವ ಚಮಸಪಾತ್ರೆಯನ್ನು । ಕಾವ್ಯೇನ—ನಿಮ್ಮ ಕುಶಲಕರ್ಮದಿಂದ । ಚತುರಃ—ನಾಲ್ಕಾಗುವಂತೆ । ವಿಚಕ್ರ—ಮಾಡಿದಿರೋ ಅಂತಹ । ಏಷಃ ಚಮಸಃ—ಈ ಚಮಸಪಾತ್ರೆಯು । ಕಿಂಮಯಃ ಸ್ವಿತ್ ಆಸ—ಯಾವ ಸತ್ತ್ವವುಳ್ಳದ್ದಾಗಿದ್ದಿತು (ಎಲೈ ಋತ್ವಿಕ್ಕುಗಳೇ) । ಅಥ—ಈಗ । ಸವನಂ—ಸೋಮವನ್ನು । ಮದಾಯ—ಋಭುಗಳ ಹರ್ಷಕ್ಕಾಗಿ । ಸುನುಧ್ವಂ—ಹಿಂಡಿರಿ । ಋಭವಃ—ಎಲೈ ಋಭುಗಳೇ । ಸೋಮ್ಯಸ್ಯ—ಸೋಮಾತ್ಮಕವಾದ । ಮಧುನಃ—ಮಧುರಸವನ್ನು । ಪಾತ—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಒಂದಾಗಿದ್ದ ಯಾವ ಚಮಸಪಾತ್ರೆಯನ್ನು ನಿಮ್ಮ ಕುಶಲಕರ್ಮದಿಂದ ನಾಲ್ಕಾಗುವಂತೆ ಮಾಡಿದಿರೋ ಅಂತಹ ಈ ಚಮಸಪಾತ್ರೆಯು ಯಾವ ಸತ್ವವುಳ್ಳದ್ದಾಗಿದ್ದಿತು ? ಎಲೈ ಋತ್ವಿಕ್ಕುಗಳೇ, ಸೋಮವನ್ನು ಈಗ ಋಭುಗಳ ಹರ್ಷಕ್ಕಾಗಿ ಹಿಂಡಿರಿ. ಎಲೈ ಋಭುಗಳೇ, ಸೋಮಾತ್ಮಕವಾದ ಮಧುರರಸವನ್ನು ನೀವು ಪಾನಮಾಡಿರಿ.

English Translation.

What sort of ladle was that which by skill you have made four ? now pour forth the Soma for their exhilaration : drink, Ribhus, of the sweet Soma libation.

॥ ಸಂಹಿತಾಪಾಠಃ ॥

ಶಚ್ಯಾಕರ್ತ ಪಿತರಾ ಯುವಾನಾ ಶಚ್ಯಾಕರ್ತ ಚಮಸಂ ದೇವಪಾನಂ ।
ಶಚ್ಯಾ ಹರೀ ಧನುತರಾವತಷ್ಟೇಂದ್ರವಾಹಾವೃಭವೋ ವಾಜರತ್ನಾಃ ॥ ೫ ॥

॥ ಪದಪಾಠಃ ॥

ಶಚ್ಯಾ । ಅಕರ್ತ । ಪಿತರಾ । ಯುವಾನಾ । ಶಚ್ಯಾ । ಅಕರ್ತ । ಚಮಸಂ । ದೇವ್ಽಪಾನಂ ।
ಶಚ್ಯಾ । ಹರೀ ಇತಿ । ಧನುಽತರಾ । ಅತಷ್ಟ । ಇಂದ್ರಽವಾಹಾ । ಋಭವಃ । ವಾಜಽರತ್ನಾಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಾಜರತ್ನಾ ರಮಣೀಯಸೋಮಾನ್ನಾ ಹೇ ಋಭವೋ ಯೂಯಂ ಶಚ್ಯಾ ಕರ್ಮಣಾ ಪಿತರಾ ಮಾತಾಪಿತರೌ ಯುವಾನಾ ಯುವಾನಾವಕರ್ತ। ಅಕುರುತ । ತಥಾ ಶಚ್ಯಾ ಚಮಸಂ ದೇವಪಾನಂ ದೇವಪಾನಾರ್ಹಮಕರ್ತ । ಚತುರ್ಧಾಕುರುತೇತ್ಯರ್ಥಃ । ಶಚ್ಯಾ ಹರೀ ಅತಷ್ಟ । ತಕ್ಷಣೇನ ಸಂಪಾದಿತ-ವಂತಃ । ಕೀದೃಶೌ ಹರೀ । ಧನುತರೌ ಶೀಘ್ರಂ ಗಂತೃತರಾವಿಂದ್ರವಾಹಾವಿಂದ್ರವೋಢಾರೌ ॥

॥ ಪ್ರತಿಪದಾರ್ಥ ॥

ವಾಜರತ್ನಾಃ—ರಮಣೀಯವಾದುದೂ ಸೋಮರೂಪವಾದುದೂ ಆದ ಅನ್ನವುಳ್ಳ । ಋಭವಃ—ಎಲೈ ಋಭುಗಳೇ । ಶಚ್ಯಾ—ನಿಮ್ಮ ಕುಶಲಕರ್ಮದಿಂದ । ಪಿತರಾ—ನಿಮ್ಮ ಮಾತಾಪಿತೃಗಳನ್ನು । ಯುವಾನಾ—ಯುವಕರಾಗುವಂತೆ । ಅಕರ್ತ—ಮಾಡಿದಿರಿ । ಶಚ್ಯಾ—ಅದೇ ಕುಶಲಕರ್ಮದಿಂದ । ಚಮಸಂ—ಚಮಸ

ಪಾತ್ರೆಯನ್ನು | ದೇವಪಾನಂ—ದೇವತೆಗಳ ಪಾನಕ್ಕೆ ಯೋಗ್ಯವಾಗುವಂತೆ | ಅಕರ್ತ—ಮಾಡಿದಿರಿ ! ಶಚ್ಯಾ—ಅದೇ ಕುಶಲಕರ್ಮದಿಂದ | ಧನುತರೌ—ಧನುಸ್ಸಿನಿಂದ ಬಾಣವು ಹೋಗುವುದಕ್ಕಿಂತಲೂ ವೇಗವಾಗಿ ಓಡುವುವೂ | ಇಂದ್ರವಾಹೌ—ಇಂದ್ರನನ್ನು ವಹಿಸುವುವೂ ಆದ | ಹರೀ—ಅಶ್ವಗಳನ್ನು | ಅತಕ್ಷ್ಟ—ಸಂಪಾದಿಸಿದಿರಿ.

॥ ಭಾವಾರ್ಥ ॥

ರಮಣೀಯವಾದುದೂ, ಸೋಮರೂಪವಾದುದೂ ಆದ ಅನ್ನವುಳ್ಳ ಎಲೈ ಋಭುಗಳೇ, ನಿಮ್ಮ ಕುಶಲಕರ್ಮದಿಂದ ನಿಮ್ಮ ಮಾತಾಪಿತೃಗಳನ್ನು ಯುವಕರಾಗುವಂತೆ ಮಾಡಿದಿರಿ. ಅದೇ ಕುಶಲಕರ್ಮದಿಂದ ಚಮಸಪಾತ್ರೆಯನ್ನು ದೇವತೆಗಳ ಪಾನಕ್ಕೆ ಯೋಗ್ಯವಾಗುವಂತೆ ಮಾಡಿದಿರಿ. ಅದೇ ಕುಶಲಕರ್ಮದಿಂದ ಧನುಸ್ಸಿನಿಂದ ಬಾಣವು ಹೋಗುವುದಕ್ಕಿಂತಲೂ ವೇಗವಾಗಿ ಓಡುವುವೂ, ಇಂದ್ರನನ್ನು ವಹಿಸುವುವೂ ಆದ ಅಶ್ವಗಳನ್ನು ಸಂಪಾದಿಸಿದಿರಿ.

English Translation.

By your (marvellous) deeds you have made your parents young; by your deeds you have made the ladle (fit) for the drinking of the gods: by your deeds you have made the two horses, the bearers of Indra, swifter than (an arrow from) a bow, Ribhus, who are rich in (sacrificial) food.



॥ ಸಂಹಿತಾಪಾಠಃ ॥

ಯೋ ವಃ ಸುನೋತ್ಯಭಿಪಿತ್ವೇ ಅಹ್ನಾಂ ತೀವ್ರಂ ವಾಜಾಸಃ ಸವನಂ ಮದಾಯ ॥

ತಸ್ಮೈ ರಯಿಮೃಭವಃ ಸರ್ವವೀರಮಾ ತಕ್ಷತ ವೃಷಣೋ ಮಂದಸಾನಾಃ ॥

॥ ಪದಪಾಠಃ ॥

ಯಃ । ವಃ । ಸುನೋತಿ । ಅಭಿಽಪಿತ್ವೇ । ಅಹ್ನಾಂ । ತೀವ್ರಂ । ವಾಜಾಸಃ । ಸವನಂ । ಮದಾಯ ॥

ತಸ್ಮೈ । ರಯಿಂ । ಋಭವಃ । ಸರ್ವಽವೀರಂ । ಆ । ತಕ್ಷತ । ವೃಷಣಃ । ಮಂದಸಾನಾಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಋಭವೋ ವಾಜಾಸೋಽನ್ನವಂತೋ ವೋ ಯುಷ್ಮಭ್ಯಂ ಯೋ ಯಜಮಾನೋಽಹ್ನಾಮಭಿಪಿತ್ವೇಽಭಿಪತನೇ । ತೃತೀಯಸವನ ಇತ್ಯರ್ಥಃ । ತಸ್ಮಿನ್ ತೀವ್ರಂ ರಸವತ್ತರಂ ಸವನಂ । ಸೂಯತ

ಇತಿ ಸವನಃ ಸೋಮಃ । ತಂ ಮದಾಯ ಸುನೋತಿ ತಸ್ಮೈ ಸರ್ವವೀರಂ ಬಹುಪುತ್ರೋಪೇತಂ ರಯಿಂ ಧನಂ ಹೇ ವೃಷಣಃ ಫಲವರ್ಷಿತಾರೋ ಮಂದಸಾನಾ ಮೋದಮಾನಾಃ ಸಂತ ಆ ತಕ್ಷತ । ಸಂಪಾದಯತೇತ್ಯರ್ಥಃ ॥

॥ ಪ್ರತಿಪದಾರ್ಥ ॥

ವಾಜಾಸಃ—ಅನ್ನವಂತರೂ । ವೃಷಣಃ—ಇಷ್ಟಾರ್ಥಪ್ರದರೂ । ಮಂದಸಾನಾಃ—ಹರ್ಷಚಿತ್ತರೂ ಆದ । ಋಭವಃ—ಎಲೈ ಋಭುಗಳೇ । ವಃ—ನಿಮ್ಮನ್ನುದ್ದೇಶಿಸಿ । ಯಃ—ಯಾವ ಯಜಮಾನನು । ಅಹ್ನಾಂ—ಅಹಸ್ಸುಗಳ । ಅಭಿಪಿತ್ವೇ—ಸಮಾಪ್ತಿಕಾಲವಾದ ತೃತೀಯಸವನದಲ್ಲಿ । ತೀವ್ರಂ—ರಸವತ್ತಾದ । ಸವನಂ—ಸೋಮವನ್ನು । ಮದಾಯ—ನಿಮ್ಮ ಹರ್ಷಕ್ಕಾಗಿ । ಸುನೋತಿ—ಹಿಂಡಿ ಅರ್ಪಿಸುವನೋ । ತಸ್ಮೈ—ಆ ಯಜಮಾನನಿಗೆ । ಸರ್ವವೀರಂ—ಬಹುಪುತ್ರೋಪೇತವಾದ । ರಯಿಂ—ಧನವನ್ನು । ಆತಕ್ಷತ—ಸಂಪಾದಿಸಿ ಕೊಡಿರಿ.

॥ ಭಾವಾರ್ಥ ॥

ಅನ್ನವಂತನೂ, ಇಷ್ಟಾರ್ಥಪ್ರದರೂ, ಹರ್ಷಿತಚಿತ್ತರೂ ಆದ ಎಲೈ ಋಭುಗಳೇ, ನಿಮ್ಮನ್ನುದ್ದೇಶಿಸಿ ಯಾವ ಯಜಮಾನನು ಅಹಸ್ಸುಗಳ ಸಮಾಪ್ತಿಕಾಲವಾದ ತೃತೀಯಸವನದಲ್ಲಿ ರಸವತ್ತಾದ ಸೋಮವನ್ನು ನಿಮ್ಮ ಹರ್ಷಕ್ಕಾಗಿ ಹಿಂಡಿ ಅರ್ಪಿಸುವನೋ, ಆ ಯಜಮಾನನಿಗೆ ಬಹುಪುತ್ರೋಪೇತವಾದ ಧನವನ್ನು ಸಂಪಾದಿಸಿಕೊಡಿರಿ.

## English Translation.

Distributors of food, Ribhus, showerers (of benefits), exhilarated (by the Soma draught), fabricate wealth, comprising all posterity for him who pours out for your exultation, the acrid libation at the decline of day.



॥ ಸಂಹಿತಾಪಾಠಃ ॥

ಪ್ರಾತಃ ಸುತಮಪಿಬೋ ಹರ್ಯಶ್ವ ಮಾಧ್ಯಂದಿನಂ ಸವನಂ ಕೇವಲಂ ತೇ ।
ಸಮೃಭುಭಿಃ ಪಿಬಸ್ವ ರತ್ನಧೇಭಿಃ ಸಖೀಁರ್ಯಾಁ ಇಂದ್ರ ಚಕೃಷೇ ಸುಕೃತ್ಯಾ ॥ ೭ ॥

॥ ಪದಪಾಠಃ ॥

ಪ್ರಾತರಿತಿ । ಸುತಂ । ಅಪಿಬಃ । ಹರಿಽಅಶ್ವ । ಮಾಧ್ಯಂದಿನಂ । ಸವನಂ । ಕೇವಲಂ । ತೇ ॥
ಸಂ । ಋಭುಽಭಿಃ । ಪಿಬಸ್ವ । ರತ್ನಽಧೇಭಿಃ । ಸಖೀನ್ । ಯಾನ್ । ಇಂದ್ರ । ಚಕೃಷೇ । ಸುಽಕೃತ್ಯಾ ॥೭॥

॥ ಸಾಯಣಭಾಷ್ಯಂ ॥

ಹೇ ಹರ್ಯಶ್ವ ಹರಿತವರ್ಣಾಶ್ವೋಪೇತೇಂದ್ರ ಪ್ರಾತಃ ಪ್ರಾತಃಸವನೇ ಸುತಮಭಿಷುತಂ ಸೋಮಮಪಿಬಃ। ಪಿಬಸ್ವ। ಮಾಧ್ಯಂದಿನಂ ಸವನಂ ಕೇವಲಂ ತೇ। ಪರಂ ತವೈವ ನಾನ್ಯೇಷಾಂ। ಸವನದ್ವಯಸ್ಯ ಪೃಥಗಭಿಧಾನಾತ್ತೃತೀಯಸವನಂ ಪರಿಶಿಷ್ಯತೇ। ತೃತೀಯಸವನೇ ರತ್ನಧೇಭೀ ರಮಣೀಯದಾನೈರ್ಋಭುಭಿಃ ಸಂ ಪಿಬಸ್ವ। ಹೇ ಇಂದ್ರ ಯಾನೃಭೂನ್ ಸುಕೃತ್ಯಾ ಶೋಭನಕರ್ಮಣಾ ಸಖೀನ್ ಚಕೃಷೇ। ಅಕರೋಃ॥

॥ ಪ್ರತಿಪದಾರ್ಥ ॥

ಹರ್ಯಶ್ವ—ಹರಿನಾಮಕಗಳಾದ ಅಶ್ವಗಳುಳ್ಳ। ಇಂದ್ರ—ಇಂದ್ರನೇ। ಪ್ರಾತಃ—ಪ್ರಾತಃಸವನದಲ್ಲಿ। ಸುತಂ—ಹಿಂಡಲ್ಪಟ್ಟ ಸೋಮವನ್ನು। ಅಪಿಬಃ—ಪಾನಮಾಡು। ಮಾಧ್ಯಂದಿನಂ—ಮಾಧ್ಯಂದಿನಸವನದಲ್ಲಿ ಹಿಂಡಿದ। ಸವನಂ—ಸೋಮವು। ಕೇವಲಂ ತೇ—ಕೇವಲ ನಿನ್ನ ಪಾನಕ್ಕಲ್ಲದೇ ಬೇರೆ ಯಾರಿಗೂ ಸೇರತಕ್ಕದ್ದಲ್ಲ (ಆದರೆ ತೃತೀಯಸವನದಲ್ಲಿ ಮಾತ್ರ। ಯಾನ್—ಯಾವ ಋಭುಗಳನ್ನು। ಸುಕೃತ್ಯಾ—ಅವರ ಉತ್ತಮವಾದ ಕರ್ಮಗಳಿಂದ। ಸಖೀನ್—ನಿನ್ನ ಸ್ನೇಹಿತರನ್ನಾಗಿ। ಚಕೃಷೇ—ಮಾಡಿಕೊಂಡಿದ್ದೀಯೋ ಅಂತಹ। ರತ್ನಧೇಭಿಃ—ರಮಣೀಯವಾದ ಧನದಾತೃಗಳಾದ। ಋಭುಭಿಃ—ಋಭುಗಳೊಡನೆ ಸೇರಿ। ಸಂ ಪಿಬಸ್ವ—ಪಾನಮಾಡು.

॥ ಭಾವಾರ್ಥ ॥

ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ, ಪ್ರಾತಃಸ್ಸವನದಲ್ಲಿ ಹಿಂಡಲ್ಪಟ್ಟ ಸೋಮವನ್ನು ಪಾನಮಾಡು. ಮಾಧ್ಯಂದಿನ ಸವನದಲ್ಲಿ ಹಿಂಡಿದ ಸೋಮವು ಕೇವಲ ನಿನ್ನ ಪಾನಕ್ಕಲ್ಲದೇ, ಬೇರೆ ಯಾರಿಗೂ ಸೇರತಕ್ಕದ್ದಲ್ಲ. ಆದರೆ, ತೃತೀಯಸವನದಲ್ಲಿ ಮಾತ್ರ ಯಾವ ಋಭುಗಳನ್ನು ಅವರ ಉತ್ತಮವಾದ ಕರ್ಮಗಳಿಂದ ನಿನ್ನ ಸ್ನೇಹಿತರನ್ನಾಗಿ ಮಾಡಿಕೊಂಡಿದ್ದೀಯೋ, ಅಂತಹ ಧನದಾತೃಗಳಾದ ಋಭುಗಳೊಡನೆ ಸೇರಿಕೊಂಡು ಪಾನಮಾಡು.

## English Translation.

Drink, lord of horses, Indra, the libation offered at dawn; the noon-day libation is alone for you; but (in the evening) drink with the munificent Ribhus, whom, Indra, you have made your friends by good deeds.

॥ ಸಂಹಿತಾಪಾಠಃ ॥

ಯೇ ದೇವಾಸೋ ಅಭವತಾ ಸುಕೃತ್ಯಾ ಶ್ಯೇನಾಇವೇದಧಿ ದಿವಿ ನಿಷೇದ ॥

ತೇ ರತ್ನಂ ಧಾತ ಶವಸೋ ನಪಾತಃ ಸೌಧನ್ವನಾ ಅಭವತಾಮೃತಾಸಃ ॥ ೮ ॥

॥ ಪದಪಾಠಃ ॥

ಯೇ । ದೇವಾಸಃ । ಅಭವತ । ಸುಽಕೃತ್ಯಾ । ಶ್ಯೇನಾಃಽಇವ । ಇತ್ । ಅಧಿ । ದಿವಿ । ನಿಽಸೇದ ॥

ತೇ । ರತ್ನಂ । ಧಾತ । ಶವಸಃ । ನಪಾತಃ । ಸೌಧನ್ವನಾಃ । ಅಭವತ । ಅಮೃತಾಸಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಋಭವೋ ಯೇ ಯೂಯಂ ಸುಕೃತ್ಯಾ ಶೋಭನಕರ್ಮಣಾ ದೇವಾಸೋ ದೇವಾ ಅಭವತ । ಅಭೂತ । ಶ್ಯೇನಾ ಇವೇತ್ ಶಂಸನೀಯಗತಯೋ ಗೃಧ್ರವಿಶೇಷಾ ಇವ ದಿವಿ ದ್ಯುಲೋಕೇಽಧಿ ನಿಷೇದ ಅಧಿನಿಷಣ್ಣಾಃ ಹೇ ಶವಸೋ ನಪಾತೋ ಬಲವಂತಸ್ತೇ ಯೂಯಂ ರತ್ನಂ ಧನಂ ಧಾತ । ಪ್ರಯಚ್ಛತ । ಹೇ ಸೌಧನ್ವನಾ ಅಮೃತಾಸೋಽಮೃತಾ ದೇವಾ ಅಭವತ ॥

॥ ಪ್ರತಿಪದಾರ್ಥ ॥

ಶವಸೋ ನಪಾತಃ—ಶಕ್ತಿಪುತ್ರರಾದ ಋಭುಗಳೇ । ಯೇ—ಯಾವ ನೀವು । ಸುಕೃತ್ಯಾ—ನಿಮ ಉತ್ತಮವಾದ ಕರ್ಮದಿಂದ । ದೇವಾಸಃ—ದೇವತೆಗಳಿಗಾಗಿ । ಅಭೂತ—ಆದಿರೋ (ಮತ್ತು) । ಶ್ಯೇನಾ ಇವೇತ್—ಶ್ಯೇನ ಪಕ್ಷಿಗಳಂತೆ ವೇಗವಾಗಿ ಹಾರಿ । ದಿವಿ—ದ್ಯುಲೋಕದಲ್ಲಿ । ಅಧಿ ನಿಷೇದ—ಹತ್ತಿ ಕುಳಿತಿರೋ । ತೇ—ಅಂತಹ ನೀವು । ರತ್ನಂ—ರಮಣೀಯವಾದ ಧನವನ್ನು । ಧಾತ—ಕೊಡಿರಿ । ಸೌಧನ್ವನಾಃ—ಸುಧನ್ವ ಪುತ್ರರಾದ ಎಲೈ ಋಭುಗಳೇ । ಅಮೃತಾಸಃ—(ನೀವು) ಮರಣರಹಿತರಾದ ದೇವತೆಗಳಾದಿರಿ.

॥ ಭಾವಾರ್ಥ ॥

ಶಕ್ತಿವಂತರಾದ ಋಭುಗಳೇ, ಯಾವ ನೀವು ನಿಮ್ಮ ಉತ್ತಮವಾದ ಕರ್ಮದಿಂದ ದೇವತೆಗಳಾಗಿ ಆದಿರೋ, ಮತ್ತು ಶ್ಯೇನಪಕ್ಷಿಗಳಂತೆ ವೇಗವಾಗಿ ಹಾರಿ ದ್ಯುಲೋಕದಲ್ಲಿ ಹತ್ತಿ ಕುಳಿತಿರೋ, ಅಂತಹ ನೀವು ರಮಣೀಯವಾದ ಧನವನ್ನು ನಮಗೆ ಕೊಡಿರಿ. ಸುಧನ್ವಪುತ್ರರಾದ ಎಲೈ ಋಭುಗಳೇ, ನೀವು ಮರಣರಹಿತರಾದ ದೇವತೆಗಳಾದಿರಿ.

English Translation.

Do you, sons of strength, who have become gods by (your good deeds), soaring aloft in the sky like falcons, bestow upon us riches: sons of Sudhanwan, you have become immortals.

॥ ಸಂಹಿತಾಪಾಠಃ ॥

ಯತ್ತೃತೀಯಂ ಸವನಂ ರತ್ನಧೇಯಮಕೃಣುಧ್ವಂ ಸ್ವಪಸ್ಯಾ ಸುಹಸ್ತಾಃ ॥

ತದೃಭವಃ ಪರಿಷಿಕ್ತಂ ವ ಏತತ್ಸಂ ಮದೇಭಿರಿಂದ್ರಿಯೇಭಿಃ ಪಿಬಧ್ವಂ ॥೯॥

॥ ಪದಪಾಠಃ ॥

ಯತ್ । ತೃತೀಯಂ । ಸವನಂ । ರತ್ನಽಧೇಯಂ । ಅಕೃಣುಧ್ವಂ । ಸುಽಅಪಸ್ಯಾ । ಸುಽಹಸ್ತಾಃ ॥

ತತ್ । ಋಭವಃ । ಪರಿಽಸಿಕ್ತಂ । ವಃ । ಏತತ್ । ಸಂ । ಮದೇಭಿಃ । ಇಂದ್ರಿಯೇಭಿಃ । ಪಿಬಧ್ವಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸುಹಸ್ತಾಃ ಶೋಭನಹಸ್ತಾ ಋಭವೋ ರತ್ನಧೇಯಂ ರಮಣೀಯಸೋಮದಾನವದ್ಯತ್ತೃತೀಯಂ ಸವನಮಕೃಣುಧ್ವಂ । ಪ್ರಸಾಧಿತವಂತಃ । ಸ್ವಪಸ್ಯಾ ಶೋಭನಕರ್ಮೇಚ್ಛಯಾ ತದೇತತ್ಸವನಂ ಸವನಗತಂ ಸೋಮದ್ರವ್ಯಂ ಪರಿಷಿಕ್ತಂ ಪರಿಷೇಚನವದ್ವೋ ಯುಷ್ಮಾಕಂ ಸಂಬಂಧಿಭಿರ್ಮದೇಭಿರ್ಮಾದ್ಯದ್ಭಿರಿಂದ್ರಿಯೇಭಿರಿಂದ್ರಿಯೈಃ ಸಂ ಪಿಬಧ್ವಂ । ಯದ್ಯಪಿ ವದನಮೇವ ಪಾನಸಾಧನಂ ತಥಾಪಿ ಚಕ್ಷುಃಶ್ರೋತ್ರಾದೀನಾಮಪಿ ದರ್ಶನಶ್ರವಣಾದಿನಾ ತೃಪ್ತಿಸದ್ಭಾವಾತ್ಪಾತೃತ್ವಮುಪಚರ್ಯತೇ ॥

॥ ಪ್ರತಿಪದಾರ್ಥ ॥

ಸುಹಸ್ತಾಃ—ಶ್ರೇಷ್ಠವಾದ ಹಸ್ತವುಳ್ಳ । ಋಭವಃ—ಎಲೈ ಋಭುಗಳೇ । ರತ್ನಧೇಯಂ—ರಮಣೀಯವಾಗಿ ಅರ್ಪಿತವಾಗುವ ಸೋಮವನ್ನು ಹೊಂದಿರುವ । ಯತ್—ಯಾವ । ತೃತೀಯಂ ಸವನಂ—ತೃತೀಯ ಸವನವನ್ನು । ಅಕೃಣುಧ್ವಂ—ನೀವು ಅಲಂಕರಿಸಿದಿರೋ । ತತ್ ಏತತ್—ಅದೇ ಸವನಕ್ಕೆ ಸಂಬಂಧಿಸಿದುದೂ । ಪರಿಷಿಕ್ತಂ—ಪೂರ್ಣವಾಗಿ ಹಿಂಡಲ್ಪಟ್ಟದೂ ಆದ ಸೋಮವನ್ನು । ಸ್ವಪಸ್ಯಾ—ಉತ್ತಮವಾದ ಕರ್ಮದ ಇಚ್ಛೆಯಿಂದ । ವಃ—ನಿಮ್ಮ । ಮದೇಭಿಃ—ಮದಜನಕಗಳಾದ । ಇಂದ್ರಿಯೇಭಿಃ—ಇಂದ್ರಿಯಗಳ ಮೂಲಕ । ಸಂ ಪಿಬಧ್ವಂ—ಪೂರ್ಣವಾಗಿ ಪಾನಮಾಡಿರಿ.

॥ ಭಾವಾರ್ಥ ॥

ಶ್ರೇಷ್ಠವಾದ ಹಸ್ತವುಳ್ಳ ಎಲೈ ಋಭುಗಳೇ, ರಮಣೀಯವಾಗಿ ಅರ್ಪಿತವಾಗುವ ಸೋಮವನ್ನು ಹೊಂದಿರುವ ಯಾವ ತೃತೀಯಸವನವನ್ನು ನೀವು ಅಲಂಕರಿಸಿದಿರೋ, ಅದೇ ಸವನಕ್ಕೆ ಸಂಬಂಧಿಸಿದುದೂ, ಪೂರ್ಣವಾಗಿ ಹಿಂಡಲ್ಪಟ್ಟದೂ ಆದ ಸೋಮವನ್ನು ಉತ್ತಮವಾದ ಕರ್ಮವನ್ನು ಮಾಡುವ ಇಚ್ಛೆಯಿಂದ ನಿಮ್ಮ ಮದಜನಕಗಳಾದ ಇಂದ್ರಿಯಗಳ ಮೂಲಕ ಪೂರ್ಣವಾಗಿ ಪಾನಮಾಡಿರಿ.

## English Translation.

Dexterous-handed, since you have instituted, through desire of good works, the third sacrifice, which is the bestower of wealth, therefore, Ribhus, drink this effused Soma with exhilarated senses.



# ಮೂವತ್ತಾರನೆಯ ಸೂಕ್ತವು.

ಅನಶ್ವೋ ಜಾತ ಇತಿ ನವರ್ಚಂ ಚತುರ್ಥಂ ಸೂಕ್ತಮಾರ್ಭವಂ । ಋಷಿರ್ವಾಮದೇವಃ । ಅಂತ್ಯಾ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ಅನಶ್ವೋಽಂತ್ಯಾ ತ್ರಿಷ್ಟುಬಿತ್ಯನುಕ್ರಮಣಿಕಾ ॥ ಅಭಿಪ್ಲವಿಕೇ ತೃತೀಯೇಽಹನಿ ವೈಶ್ವದೇವಶಸ್ತ್ರ ಆರ್ಭವನಿವಿದ್ಧಾನೀಯಮಿದಂ । ತಥಾ ಚ ಸೂತ್ರಿತಂ । ಅನಶ್ವೋ ಜಾತಃ ಪರಾವತೋ ಯ ಇತಿ ವೈಶ್ವದೇವಂ । ಆ. ೭-೭ । ಇತಿ ॥

ಅನುವಾದವು—ಅನಶ್ವೋ ಜಾತ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಋಭುಗಳು ದೇವತೆಯು ; ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು ; ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—ಅನಶ್ವೋಽನ್ತ್ಯಾ ತ್ರಿಷ್ಟುಪ್ ಎಂದು ಹೇಳಿರುವುದು. ಅಭಿಪ್ಲವವೆಂಬ ಯಾಗದ ಮೂರನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತವನ್ನು ಋಭುಸಂಬಂಧವಾದ ನಿವಿದ್ಧಾನೀಯಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಅನಶ್ವೋ ಜಾತಃ ಪರಾವತೋ ಯ ಇತಿ ವೈಶ್ವದೇವಂ ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು.

## ಸೂಕ್ತ—೩೬

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೬ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೭, ೮, ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ವಾಮದೇವಃ ॥

॥ ದೇವತಾ—ಋಭವಃ ॥

। ಛಂದಃ—೧-೮ ಜಗತೀ । ೯ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅನಶ್ವೋ ಜಾತೋ ಅನಭೀಶುರುಕ್ಥ್ಯೋ೩ ರಥಸ್ತ್ರಿಚಕ್ರಃ ಪರಿ ವರ್ತತೇ ರಜಃ ।
ಮಹತ್ತದ್ವೋ ದೇವ್ಯಸ್ಯ ಪ್ರವಾಚನಂ ದ್ಯಾಮೃಭವಃ ಪೃಥಿವೀಂ ಯಚ್ಚ ಪುಷ್ಯಥ ॥ ೧ ॥

॥ ಪದಪಾಠಃ ॥

ಅನಶ್ವಃ । ಜಾತಃ । ಅನಭೀಶುಃ । ಉಕ್ಥ್ಯಃ । ರಥಃ । ತ್ರಿಽಚಕ್ರಃ । ಪರಿ । ವರ್ತತೇ । ರಜಃ ॥

ಮಹತ್ । ತತ್ । ವಃ । ದೇವ್ಯಸ್ಯ । ಪ್ರಽವಾಚನಂ । ದ್ಯಾಂ । ಋಭವಃ । ಪೃಥಿವೀಂ । ಯತ್ । ಚ ।

ಪುಷ್ಯಥ ॥ ೧ ॥

॥ ಸಾಯಣಭಾಷ್ಯಂ ॥

ಹೇ ಋಭವೋಽಶ್ವಿನೋಃ ಸಂಬಂಧೀ ಯುಷ್ಮದ್ದತ್ತೋ ರಥೋಽನಶ್ವೋ ಜಾತೋ ವಾಹನಾಶ್ವನಿರಪೇಕ್ಷಃ ಸಂಪನ್ನಃ । ತಥಾನಭೀಶುಃ ಪ್ರಗ್ರಹರಹಿತ ಉಕ್ಥ್ಯಃ ಸ್ತುತ್ಯಸ್ತ್ರಿಚಕ್ರಶ್ಚಕ್ರತ್ರಯಯುಕ್ತಃ ಸನ್ ರಜೋಽಂತರಿಕ್ಷಂ ಪರಿ ವರ್ತತೇ । ಪರಿಭ್ರಮತಿ ।" ಮಹತ್ಪ್ರಭೂತಂ ತದ್ರಥನಿರ್ಮಾಣಾಖ್ಯಂ ಕರ್ಮ ವೋ ಯುಷ್ಮಾಕಂ ದೇವ್ಯಸ್ಯ ದೇವತ್ವಸ್ಯ ಪ್ರವಾಚನಂ ಪ್ರವಕ್ತೃ ಪ್ರಖ್ಯಾಪಕಂ । ಯಚ್ಚ ಯೇನ ಕರ್ಮಣಾ ದ್ಯಾಂ ಪೃಥಿವೀಂ ಚ ಪುಷ್ಯಥ । ಪುಷ್ಟಾಂ ಕುರುಥ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ರಥಃ—ಅಶ್ವಿನೀದೇವತೆಗಳಿಗೆ ನೀವು ನಿರ್ಮಿಸಿಕೊಟ್ಟ ರಥವು । ಅನಶ್ವಃ ಜಾತಃ—ಕುದುರೆಗಳಿಲ್ಲದ ಹಾಗೆಯೇ ಸಂಚರಿಸುತ್ತದೆ । ಅನಭೀಶುಃ—(ಆದ್ದರಿಂದ) ಲಗಾಮುಗಳೂ ಸಹ ಇರುವುದಿಲ್ಲ । ಉಕ್ಥ್ಯಃ—ಪ್ರಶಂಸಾರ್ಹವಾದ ಆ ರಥವು । ತ್ರಿಚಕ್ರಃ—ಮೂರು ಚಕ್ರಗಳಿಂದ ಯುಕ್ತವಾಗಿ । ರಜಃ—ಅಂತರಿಕ್ಷದಲ್ಲಿ । ಪರಿ ವರ್ತತೇ—ಎಲ್ಲಾ ಕಡೆಗಳಲ್ಲಿಯೂ ಸಂಚರಿಸುತ್ತದೆ । ಮಹತ್ ತತ್—ಶ್ರೇಷ್ಠವಾದ ನಿಮ್ಮ ಆ ರಥನಿರ್ಮಾಣಕೌಶಲ್ಯವು । ವಃ—ನಿಮಗೆ । ದೇವ್ಯಸ್ಯ—ದೇವತ್ವಪ್ರಾಪ್ತಿಯ । ಪ್ರವಾಚನಂ—ಖ್ಯಾತಿಯನ್ನುಂಟುಮಾಡುವುದಾಗಿದೆ । ಯಚ್ಚ ಯಾವ ನಿಮ್ಮ ಕರ್ಮದಿಂದ । ದ್ಯಾಂ—ಸ್ವರ್ಗವನ್ನೂ । ಪೃಥಿವೀಂ—ಭೂಲೋಕವನ್ನೂ । ಪುಷ್ಯಥ—ಪೋಷಿಸಿ ಕಾಪಾಡುತ್ತೀರೋ ಆ ಕರ್ಮವೂ ಸಹ ನೀವು ಪಡೆದ ದೇವತ್ವದ ಸೂಚಕವಾಗಿದೆ.

॥ ಭಾವಾರ್ಥ ॥

ಎಲೈ ಋಭುಗಳೇ, ನೀವು ಅಶ್ವಿನೀದೇವತೆಗಳಿಗಾಗಿ ನಿರ್ಮಿಸಿಕೊಟ್ಟ ರಥಕ್ಕೆ ಕುದುರೆಗಳೇ ಬೇಕಿಲ್ಲ. ಅದು ಹಾಗೆಯೇ ಸಂಚರಿಸಬಲ್ಲುದು. ಕುದುರೆಗಳೇ ಇಲ್ಲದಿರುವುದರಿಂದ ಕಡಿವಾಣಗಳೂ ಬೇಕಿಲ್ಲ. ಆ ರಥಕ್ಕೆ ಮೂರು ಚಕ್ರಗಳಿದ್ದು ಅದು ಅಂತರಿಕ್ಷದಲ್ಲಿ ಎಲ್ಲೆಲ್ಲಿಯೂ ಸಂಚರಿಸಬಲ್ಲುದು. ಇಂತಹ ರಥವನ್ನು ನಿರ್ಮಿಸಿದ ನಿಮ್ಮ ಕಲಾಕೌಶಲ್ಯವೂ ಸ್ವರ್ಗ ಮತ್ತು ಭೂಮಿಗಳನ್ನು ನಿಮ್ಮ ಅಸಾಧಾರಣವಾದ ಶಕ್ತಿಯಿಂದ ಪೋಷಿಸುವ ಸಾಹಸಕರ್ಮವೂ ಸಹ ನೀವು ದೇವತ್ವವನ್ನು ಪಡೆದು ಗಳಿಸಿದ ಖ್ಯಾತಿಯ ಚಿಹ್ನೆಯಾಗಿದೆ.

## English Translation.

The glorious three-wheeled car (of the Ashwins made, Ribhus, by you), traverses the firmament without horses, without reins: great was that

proclamation of your divine (power), by which, Ribhus, you cherish heaven and earth.

॥ ಸಂಹಿತಾಪಾಠಃ ॥

ರಥಂ ಯೇ ಚಕ್ರುಃ ಸುವೃತಂ ಸುಚೇತಸೋಽವಿಹ್ವರಂತಂ ಮನಸಸ್ಪರಿ ಧ್ಯಯಾ ॥
ತಾँ ಊ ನ್ವ೧ಸ್ಯ ಸವನಸ್ಯ ಪೀತಯ ಆ ವೋ ವಾಜಾ ಋಭವೋ ವೇದಯಾಮಸಿ ॥ ೨ ॥

॥ ಪದಪಾಠಃ ॥

ರಥಂ । ಯೇ । ಚಕ್ರುಃ । ಸುऽವೃತಂ । ಸುऽಚೇತಸಃ । ಅವಿऽಹ್ವರಂತಂ । ಮನಸಃ । ಪರಿ । ಧ್ಯಯಾ ॥
ತಾನ್ । ಊಂ ಇತಿ । ನು । ಅಸ್ಯ । ಸವನಸ್ಯ । ಪೀತಯೇ । ಆ । ವಃ । ವಾಜಾಃ । ಋಭವಃ । ವೇದಯಾಮಸಿ ॥ ೨ ॥

॥ ಸಾಯಣಭಾಷ್ಯಂ ॥

ಸುಚೇತಸಃ ಶೋಭನಚಿತ್ತಾ ಯ ಋಭವಃ ಸುವೃತಂ ಸುವರ್ತನಚಕ್ರಮವಿಹ್ವರಂತಮಕುಟಿಲಂ ರಥಂ ಮನಸಃ ಪರಿ ಧ್ಯಯಾ ಮನಸೋ ಧ್ಯಾನೇನಾಪ್ರಯತ್ನೇನ ನು ಕ್ಷಿಪ್ರಂ ಚಕ್ರುಃ ತಾನ್ । ಉಶಬ್ದ ಏವಾರ್ಥೇ । ತಾನೇವಾಸ್ಯ ಸವನಸ್ಯ ಪೀತಯ ಏತಂ ಸೋಮಂ ಪಾತುಂ ಹೇ ವಾಜಾ ಹೇ ಋಭವೋ ವೋ ಯುಷ್ಮಾನಾ ವೇದಯಾಮಸಿ । ಆವೇದಯಾಮಃ ॥

॥ ಪ್ರತಿಪದಾರ್ಥ ॥

ವಾಜಾಃ—ಎಲೈ ವಾಜರೇ । ಋಭವಃ—ಋಭುಗಳೇ । ಸುಚೇತಸಃ—ಶ್ರೇಷ್ಠವಾದ ಮನಸ್ಸುಳ್ಳ । ಯೇ—ಯಾವ ನೀವು । ಸುವೃತಂ—ಉತ್ತಮವಾಗಿ ತಿರುಗುವ ಚಕ್ರವುಳ್ಳದ್ದೂ । ಅವಿಹ್ವರಂತಂ—ಕುಟಿಲವಲ್ಲದಿರುವುದೂ ಆದ । ರಥಂ—ರಥವನ್ನು । ಮನಸಃ—ಮನಸ್ಸಿನ । ಪರಿ ಧ್ಯಯಾ—ಧ್ಯಾನಾತ್ಮಕವಾದ ಚಿಂತೆಯಿಂದ । ನು—ಶೀಘ್ರವಾಗಿ । ಚಕ್ರುಃ—ನಿರ್ಮಿಸಿದಿರೋ । ತಾನ್ ವಃ—ಅಂತಹ ನಿಮ್ಮನ್ನು । ಅಸ್ಯ ಸವನಸ್ಯ—ಈ ಯಜ್ಞದ ಸೋಮವನ್ನು । ಪೀತಯೇ—ಪಾನಮಾಡುವುದಕ್ಕಾಗಿ । ಆ ವೇದಯಾಮಸಿ—ವಿಜ್ಞಾಪಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ವಾಜರೇ, ಎಲೈ ಋಭುಗಳೇ, ಶ್ರೇಷ್ಠವಾದ ಮನಸ್ಸುಳ್ಳ ಯಾವ ನೀವು ಉತ್ತಮವಾಗಿ ತಿರುಗುವ ಚಕ್ರವುಳ್ಳದ್ದೂ, ಕುಟಿಲವಲ್ಲದಿರುವುದೂ ಆದ ರಥವನ್ನು ಮನಸ್ಸಿನ ಧ್ಯಾನರೂಪದಿಂದಲೇ ಶೀಘ್ರವಾಗಿ ನಿರ್ಮಿಸಿದಿರೋ ಅಂತಹ ನಿಮ್ಮನ್ನು ಈ ಯಜ್ಞದ ಸೋಮವನ್ನು ಪಾನಮಾಡುವುದಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation.

We invoke you respectfully, Vajas and Ribhus, to drink of this libation, for you are the wise sages who, by meditation, made the well-constructed undeviating car (of the Ashwins).



॥ ಸಂಹಿತಾಪಾಠಃ ॥

ತದ್ವೋ ವಾಜಾ ಋಭವಃ ಸುಪ್ರವಾಚನಂ ದೇವೇಷು ವಿಭ್ವೋ ಅಭವನ್ಮ-
ಹಿತ್ವನಂ ॥
ಜಿವ್ರೀ ಯತ್ಸಂತಾ ಪಿತರಾ ಸನಾಜುರಾ ಪುನರ್ಯುವಾನಾ ಚರಥಾಯ
ತಕ್ಷಥ ॥ ೩ ॥

॥ ಪದಪಾಠಃ ॥

ತತ್ । ವಃ । ವಾಜಾಃ । ಋಭವಃ । ಸುಽಪ್ರವಾಚನಂ । ದೇವೇಷು । ವಿಽಭ್ವಃ । ಅಭವತ್ । ಮಹಿಽತ್ವನಂ ॥
ಜಿವ್ರೀ ಇತಿ । ಯತ್ । ಸಂತಾ । ಪಿತರಾ । ಸನಾಽಜುರಾ । ಪುನಃ । ಯುವಾನಾ । ಚರಥಾಯ । ತಕ್ಷಥ ॥

॥ ಸಾಯಣಭಾಷ್ಯಂ ॥

ಹೇ ವಾಜಾ ಋಭವೋ ಹೇ ವಿಭ್ವೋ ವಿಭವಃ । ಇತರಾಪೇಕ್ಷಯಾ ಪರಸ್ಪರಂ ಬಹುವಚನಮಿತ್ಯುಕ್ತಂ । ವೋ ಯುಷ್ಮಾಕಂ ತನ್ಮಹಿತ್ವನಂ ಮಹತ್ತ್ವಂ ಮಾಹಾತ್ಮ್ಯಂ ದೇವೇಷು ಮಧ್ಯೇ ಸುಪ್ರವಾಚನಂ ಪ್ರವಾಚ್ಯಮಭವತ್ । ತದಿತ್ಯುಕ್ತಂ ಯದಿತ್ಯಾಹ । ಜಿವ್ರೀ ವೃದ್ಧೌ ಸಂತಾ ಸಂತೌ ಸನಾಜುರಾ ಸದಾ ಜೀರ್ಣೌ ಸಂತೌ ಪಿತರಾ ಪಿತರೌ ಪುನರ್ಯುವಾನಾ ನಿತ್ಯತರುಣೌ ಚರಥಾಯ ಯಥೇಚ್ಛಂ ಸಂಚರಣಾಯ ತಕ್ಷಥ । ಸಂಪಾದಿತವಂತಃ ॥

॥ ಪ್ರತಿಪದಾರ್ಥ ॥

ವಾಜಾಃ, ಋಭವಃ, ವಿಭ್ವಃ—ವಾಜ, ವಿಭ್ವ ಮತ್ತು ಋಭುಗಳಾದ ಎಲೈ ಋಭುಗಳೇ। ಯತ್—ಯಾವ ನಿಮ್ಮ ಅಸಾಧಾರಣವಾದ ಕರ್ಮದಿಂದ। ಜಿವ್ರೀ ಸಂತಾ—ವೃದ್ಧರಾಗಿದ್ದವರೂ। ಸನಾಜುರಾ—ಆದುದರಿಂದಲೇ ಪೂರ್ಣವಾಗಿ ಶಿಥಿಲವಾದ ದೇಹವುಳ್ಳವರೂ ಆದ। ಪಿತರಾ—ನಿಮ್ಮ ಮಾತಾಪಿತೃಗಳನ್ನು। ಪುನಃ—ತಿರುಗಿಯೂ। ಯುವಾನಾ—ನಿತ್ಯತರುಣರಾಗಿರುವಂತೆಯೂ। ಚರಥಾಯ—ಸಂಚರಿಸಲು ಶಕ್ತಿಯುಳ್ಳವರನ್ನಾಗಿಯೂ। ತಕ್ಷಥ—ಮಾಡಿದಿರೋ। ತತ್—ಅಂತಹ। ಯುಷ್ಮಾಕಂ—ನಿಮ್ಮ। ಮಹಿತ್ವನಂ—ಮಾಹಾತ್ಮ್ಯವು। ದೇವೇಷು—ದೇವತೆಗಳ ನಡುವೆ। ಸುಪ್ರವಾಚನಂ—ಉತ್ತಮವಾಗಿ ಪ್ರಶಂಸಿಸಲ್ಪಡುವುದಾಗಿ। ಅಭವತ್—ಆಯಿತು.

॥ ಭಾವಾರ್ಥ ॥

ವಾಜ, ವಿಭ್ವ ಮತ್ತು ಋಭು ಸಂಜ್ಞಕರಾದ ಎಲೈ ಋಭುಗಳೇ, ಯಾವ ನಿಮ್ಮ ಅಸಾಧಾರಣವಾದ ಕರ್ಮದಿಂದ ವೃದ್ಧರಾಗಿದ್ದವರೂ, ಆದುದರಿಂದಲೇ ಪೂರ್ಣವಾಗಿ ಶಿಥಿಲವಾದ ದೇಹವುಳ್ಳವರೂ ಆದ ನಿಮ್ಮ ಮಾತಾಪಿತೃಗಳನ್ನೂ ತಿರುಗಿಯೂ ನಿತ್ಯತರುಣರಾಗಿರುವಂತೆಯೂ, ಸಂಚರಿಸಲು ಶಕ್ತಿಯುಳ್ಳವರನ್ನಾಗಿಯೂ ಮಾಡಿದಿರೋ, ಅಂತಹ ನಿಮ್ಮ ಮಾಹಾತ್ಮ್ಯವು ದೇವತೆಗಳ ನಡುವೆ ಉತ್ತಮವಾಗಿ ಪ್ರಶಂಸಿಸಲ್ಪಡುವುದಾಗಿಯೂ ಆಯಿತು.

English Translation.

Therefore, Vaja, Ribhu, Vibhwan, was your greatness proclaimed amongst the gods, that you made your aged and infirm parents again young (and able) to go (where they would).



॥ ಸಂಹಿತಾಪಾಠಃ ॥

ಏಕಂ ವಿ ಚಕ್ರ ಚಮಸಂ ಚತುರ್ವಯಂ ನಿಶ್ಚರ್ಮಣೋ ಗಾಮರಿಣೀತ ಧೀತಿಭಿಃ ॥

ಅಥಾ ದೇವೇಷ್ವಮೃತತ್ವಮಾನಶ ಶ್ರುಷ್ಟೀ ವಾಜಾ ಋಭವಸ್ತದ್ವ ಉಕ್ಥ್ಯಂ ॥

। ಪದಪಾಠಃ ।

ಏಕಂ । ವಿ । ಚಕ್ರ । ಚಮಸಂ । ಚತುಃऽವಯಂ । ನಿಃ । ಚರ್ಮಣಃ । ಗಾಂ । ಅರಿಣೀತ । ಧೀತಿऽಭಿಃ ॥

ಅಥ । ದೇವೇಷು । ಅಮೃತऽತ್ವಂ । ಆನಶ । ಶ್ರುಷ್ಟೀ । ವಾಜಾಃ । ಋಭವಃ । ತತ್ । ವಃ । ಉಕ್ಥ್ಯಂ ॥

॥ ಸಾಯಣಭಾಷ್ಯಂ ॥

ಹೇ ಋಭವ ಏಕಂ ಚಮಸಮೇಕಮೇವ ಸಂತಂ ಪಾನಸಾಧನಂ ಚಮಸಂ ಚತುರ್ವಯಂ । ವಯಾಃ ಶಾಖಾಃ । ಚತುಃಶಾಖಂ ಚತುರವಯವಂ ವಿ ಚಕ್ರ । ವ್ಯಕುರುತ । ತಥಾ ಧೀತಿಭಿಃ ಕರ್ಮಭಿಶ್ಚರ್ಮಣೋ ನೂತನಾಂ ಗಾಂ ನಿರರಿಣೀತ । ಸಮಸ್ಕುರುತ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ । ಅಥ ಅತಃ ಕಾರಣಾತ್ ದೇವೇಷು ಮರ್ತ್ಯೇಽಮೃತತ್ವಮಾನಶ । ಪ್ರಾಪ್ನುತ । ಹೇ ವಾಜಾ ಹೇ ಋಭವಸ್ತತ್ತಾದೃಶಂ ವೋ ಯುಷ್ಮಾಕಂ ಕರ್ಮ । ಶ್ರುಷ್ಟೀತಿ ಕ್ಷಿಪ್ರನಾಮೈತತ್ । ಕ್ಷಿಪ್ರಮುಕ್ಥ್ಯಂ ಸ್ತುತ್ಯಂ ಭವತಿ ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಏಕಂ ಚಮಸಂ—ಒಂದಾಗಿದ್ದ ಚಮಸಪಾತ್ರೆಯನ್ನು । ಚತುರ್ವಯಂ—ನಾಲ್ಕು ಶಾಖೆಗಳಾಗುವಂತೆ । ವಿ ಚಕ್ರ—ಮಾಡಿದಿರಿ । ಧೀತಿಭಿಃ—ನಿಮ್ಮ ಕರ್ಮಗಳಿಂದ । ಚರ್ಮಣಃ—ಕೇವಲ ಚರ್ಮದ ಸಹಾಯದಿಂದ । ಗಾಂ—ಜೀವರೂಪದ ಗೋವನ್ನು । ನಿಃ ಅರಿಣೀತ — ಸಂಸ್ಕರಿಸಿ ನಿರ್ಮಿಸಿದಿರಿ । ಅಥ—ಆ ಕಾರಣದಿಂದಲೇ । ದೇವೇಷು—ದೇವತೆಗಳಲ್ಲಿ । ಅಮೃತತ್ವಂ—ಮರಣವಿಲ್ಲದಿರುವಿಕೆಯನ್ನು । ಆನಶ—ಪಡೆದಿರಿ । ವಾಜಾಃ—ಎಲೈ ವಾಜರೇ । ಋಭವಃ—ಎಲೈ ಋಭುಗಳೇ । ತತ್—ಅಂತಹ । ವಃ—ನಿಮ್ಮ ಕರ್ಮವು । ಶ್ರುಷ್ಟೀ—ಕ್ಷಿಪ್ರವಾಗಿ । ಉಕ್ಥ್ಯಂ—ಪ್ರಶಂಸಾರ್ಹವಾಗಿ ಆಗುತ್ತದೆ.

॥ ಭಾವಾರ್ಥ ॥

ಎಲೈ ಋಭುಗಳೇ, ಒಂದಾಗಿದ್ದ ಚಮಸಪಾತ್ರೆಯನ್ನು ನಾಲ್ಕು ಶಾಖೆಗಳಾಗುವಂತೆ ಮಾಡಿದಿರಿ. ನಿಮ್ಮ ಕರ್ಮಗಳಿಂದ ಕೇವಲ ನಿರ್ಜೀವಿಯಾದ ಗೋವಿನ ಚರ್ಮದಿಂದ ಸಜೀವವಾದ ಗೋವನ್ನು ನಿರ್ಮಿಸಿದಿರಿ. ಈ ಮಹತ್ವದಿಂದಲೇ ನೀವು ದೇವತೆಗಳಲ್ಲಿ ಅಮೃತತ್ವವನ್ನು ಪಡೆದಿರಿ. ಎಲೈ ವಾಜರೇ, ಎಲೈ ಋಭುಗಳೇ, ಅಂತಹ ನಿಮ್ಮ ಕರ್ಮವು ಕ್ಷಿಪ್ರವಾಗಿಯೂ ಪ್ರಶಂಸಾರ್ಹವಾಗುತ್ತದೆ.

## English Translation.

You have made the single ladle four-fold: by your (marvellous) acts you have clothed the cow with a (new) hide; therefore you have obtained immortality amongst the gods: such acts, Vajas and Ribhus, are to be eagerly glorified.

॥ ಸಂಹಿತಾಪಾಠಃ ॥

ಋಭುತೋ ರಯಿಃ ಪ್ರಥಮಶ್ರವಸ್ತಮೋ ವಾಜಶ್ರುತಾಸೋ ಯಮಜೀಜನನ್ನರಃ ॥

ವಿಭ್ವತಷ್ಟೋ ವಿದಥೇಷು ಪ್ರವಾಚ್ಯೋ ಯಂ ದೇವಾಸೋಽವಥಾ ಸ

ವಿಚರ್ಷಣಿಃ ॥ ೫ ॥

॥ ಪದಪಾಠಃ ॥

ಋಭುತಃ । ರಯಿಃ । ಪ್ರಥಮಶ್ರವಃಽತಮಃ । ವಾಜಽಶ್ರುತಾಸಃ । ಯಂ । ಅಜೀಜನನ್ । ನರಃ ॥

ವಿಭ್ವಽತಷ್ಟಃ । ವಿದಥೇಷು । ಪ್ರಽವಾಚ್ಯಃ । ಯಂ । ದೇವಾಸಃ । ಅವಥ । ಸಃ । ವಿಽಚರ್ಷಣಿಃ ॥ ೫ ॥

। ಸಾಯಣಭಾಷ್ಯಂ ।

ಋಭುತಃ ಋಭೂಣಾಂ ಸಕಾಶಾತ್ಪ್ರಥಮಶ್ರವಸ್ತಮಃ ಪ್ರಥಮಂ ಮುಖ್ಯಮತಿಶಯಿತಮನ್ನಂ ಯಶೋ ವಾ ಯಸ್ಯ ಧನಸ್ಯ ತದ್ರಯಿರ್ಧನಂ । ಅಸ್ಮಾಕಂ ಭವತ್ವಿತಿ ಶೇಷಃ । ವಾಜಶ್ರುತಾಸೋ ವಾಜೈಃ ಸಹ ವಿಖ್ಯಾತಾ ನರೋ ನೇತಾರ ಋಭವೋ ಯಂ ರಯಿಮಜೀಜನನ್। ಉತ್ಪಾದಿತವಂತಃ । ವಿಭ್ವತಷ್ಟೋ ವಿಭ್ವಭಿರ್ಋಭುಭಿಸ್ತಷ್ಟಸ್ತಕ್ಷಣಸಂಪನ್ನಶ್ಚಮಸೋಽಶ್ವಿನೋ ರಥೋ ವಾ ವಿದಥೇಷು ಯಜ್ಞೇಷು ಪ್ರವಾಚ್ಯಃ । ಪ್ರಕರ್ಷೇಣ ಸ್ತುತ್ಯಃ । ಹೇ ದೇವಾಸೋ ದ್ಯೋತಮಾನಾ ಯೂಯಂ ಯಂ ರಥಂ ಚಮಸಂ ವಾವಥ । ರಕ್ಷಥ । ಸ ವಿಚರ್ಷಣಿರ್ವಿವಿಧಂ ದ್ರಷ್ಟಾ ಭವತಿ । ದ್ರಷ್ಟವ್ಯೋ ಭವತೀತ್ಯರ್ಥಃ ॥

। ಪ್ರತಿಪದಾರ್ಥ ।

ವಾಜಶ್ರುತಾಸಃ—ಅನ್ನದೊಡಗೂಡಿ ವಿಖ್ಯಾತರಾದವರೂ । ನರಃ—ನೇತೃಗಳೂ ಆದ ಋಭುಗಳು । ಯಂ—ಯಾವ ಧನವನ್ನು । ಅಜೀಜನನ್—ನಿರ್ಮಿಸಿದರೋ ಅಂತಹುದೂ । ಪ್ರಥಮಶ್ರವಸ್ತಮಃ—ಅತಿಶಯವಾದ ಕೀರ್ತಿಗೆಪಾತ್ರವಾದುದೂ ಆದ । ರಯಿಃ—ಧನವು । ಋಭುತಃ—ಋಭುಗಳಿಂದ ನಮಗೆ ಲಭಿಸಲಿ । ವಿಭ್ವತಷ್ಟಃ—ಋಭುಗಳಿಂದ ನಿರ್ಮಿತವಾದ ಚಮಸದ ವಿಭಾಗವಾಗಲಿ ಅಥವಾ ರಥವಾಗಲಿ । ವಿದಥೇಷು—ಯಜ್ಞಗಳಲ್ಲಿ । ಪ್ರವಾಚ್ಯಃ—ಅತಿಶಯವಾಗಿ ಪ್ರಶಂಸಾರ್ಹವಾಗುತ್ತದೆ । ದೇವಾಸಃ—ಪ್ರಕಾಶಮಾನರಾದ ಎಲೈ ಋಭುಗಳೇ । ಯಂ—ಯಾವ ಚಮಸವನ್ನು ಅಥವಾ ರಥವನ್ನು । ಅವಥ—ನೀವು ರಕ್ಷಿಸಿದಿರೋ । ಸಃ—ಅದು । ವಿಚರ್ಷಣಿಃ—ವಿವೇಚನೆಯುಳ್ಳ ದೃಷ್ಟಿಯಿಂದ ನೋಡಲ್ಪಡತಕ್ಕದ್ದಾಗಿದೆ.

। ಭಾವಾರ್ಥ ।

ಅನ್ನದೊಡಗೂಡಿ ವಿಖ್ಯಾತರಾದವರೂ, ನೇತೃಗಳು ಆದ ಋಭುಗಳು ಯಾವ ಧನವನ್ನು ನಿರ್ಮಿಸಿದರೋ ಅಂತಹುದೂ ಅತಿಶಯವಾದ ಕೀರ್ತಿಗೆ ಪಾತ್ರವಾದುದೂ ಆದ ಧನವು ಋಭುಗಳಿಂದ ನಮಗೆ ಲಭಿಸಲಿ. ಋಭುಗಳಿಂದ ನಿರ್ಮಿತವಾದ ಚಮಸದ ವಿಭಾಗವಾಗಲಿ ಅಥವಾ ರಥವಾಗಲಿ, ಯಜ್ಞಗಳಲ್ಲಿ ಅತಿಶಯವಾಗಿ ಪ್ರಶಂಸಾರ್ಹವಾಗುತ್ತದೆ. ಪ್ರಕಾಶಮಾನರಾದ ಎಲೈ ಋಭುಗಳೇ, ಯಾವ ಚಮಸವನ್ನು ಅಥವಾ ರಥವನ್ನು ನೀವು ರಕ್ಷಿಸಿದಿರೋ, ಅದು ವಿವೇಚನೆಯುಳ್ಳ ದೃಷ್ಟಿಯಿಂದ ನೋಡಲ್ಪಡತಕ್ಕದ್ದಾಗಿದೆ.

### English Translation.

From the Ribhus may wealth, the best and most productive of food, (come to me); that which the leaders (of rites) renowned together with the Vajas, have engendered; that which has been fabricated by Vibhwan and is to be celebrated at sacrifices; that which, deities, you protect, that is to be beheld.



॥ ಸಂಹಿತಾಪಾಠಃ ॥

ಸ ವಾಜ್ಯರ್ವಾ ಸ ಋಷಿರ್ವಚಸ್ಯಯಾ ಸ ಶೂರೋ ಅಸ್ತಾ ಪೃತನಾಸು
ದುಷ್ಟರಃ ।
ಸ ರಾಯಸ್ಪೋಷಂ ಸ ಸುವೀರ್ಯಂ ದಧೇ ಯಂ ವಾಜೋ ವಿಭ್ವಾಁ
ಋಭವೋ ಯಮಾವಿಷುಃ ॥ ೬ ॥

॥ ಪದಪಾಠಃ ॥

ಸಃ । ವಾಜೀ । ಅರ್ವಾ । ಸಃ । ಋಷಿಃ । ವಚಸ್ಯಯಾ । ಸಃ । ಶೂರಃ । ಅಸ್ತಾ । ಪೃತನಾಸು । ದುಸ್ತರಃ ।
ಸಃ । ರಾಯಃ । ಪೋಷಂ । ಸಃ । ಸುಽವೀರ್ಯಂ । ದಧೇ । ಯಂ । ವಾಜಃ । ವಿಽಭ್ವಾ । ಋಭವಃ ।
ಯಂ । ಆವಿಷುಃ ॥ ೬ ॥

॥ ಸಾಯಣಭಾಷ್ಯಂ ॥

ಸ ವಾಜೀ ವೇಜನವಾನ್ ಬಲವಾನ್ ಸನ್ ಅರ್ವಾ ರಣಕುಶಲೋ ಭವತಿ । ಸ ಋಷಿರತೀಂದ್ರಿಯಜ್ಞಾನೀ ಸನ್ ವಚಸ್ಯಯಾ ಸ್ತುತ್ಯಾ ಯುಕ್ತೋ ಭವತಿ । ಸ ಶೂರೋ ವಿಕ್ರಾಂತಃ ಸನ್ ಅಸ್ತಾ ಕ್ಷೇಪ್ತಾ ಶತ್ರೂಣಾಂ ಭವತಿ । ಸ್ವಯಂ ಚ ಪೃತನಾಸು ಸಂಗ್ರಾಮೇಷು ದುಷ್ಟರೋ ನಾಭಿಭಾವ್ಯೋ ಭವತಿ । ಸ ಏವ ರಾಯಸ್ಪೋಷಂ ಧನಪುಷ್ಟಿಂ ದಧೇ । ಧತ್ತೇ । ಸ ಸುವೀರ್ಯಂ ಸುವೀರತ್ವಂ ದಧೇ । ಧತ್ತೇ । ಯಂ ಮನುಷ್ಯಂ ವಾಜೋ ವಿಭ್ವಾ ಋಭವಶ್ಚಾವಿಷುಃ । ಅರಕ್ಷನ್ । ಸ ಏವಮೇವಂ ಭವತೀತಿ । ಅಂತ್ಯಸ್ಯ ಬಹುವನ್ನಿರ್ದೇಶಸ್ತ್ರಯಾಣಾಮೃಭುವ್ಯವಹಾರಪ್ರಾಚುರ್ಯಾಭಿಪ್ರಾಯಃ ॥

॥ ಪ್ರತಿಪದಾರ್ಥ ॥

ಯಂ—ಯಾವ ಪುರುಷನನ್ನು | ವಾಜಃ—ವಾಜನೂ | ವಿಭ್ವಾ—ವಿಭ್ವನೂ (ಮತ್ತು) | ಋಭವಃ—ಸಮಸ್ತ ಋಭುಗಳೂ | ಆವಿಷುಃ—ರಕ್ಷಿಸುವರೋ | ಸಃ - ಅವನು | ವಾಜೀ—ಶಕ್ತಿಯುತನಾಗಿಯೂ | ಅರ್ವಾ—ಕರ್ಮಕುಶಲನಾಗಿಯೂ ಆಗುತ್ತಾನೆ | ಸಃ—ಅದೇ ಪುರುಷನು | ಋಷಿಃ—ಅತೀಂದ್ರಿಯ ಜ್ಞಾನಿಯಾಗಿಯೂ | ವಚಸ್ಯಯಾ—ಸ್ತುತಿನಿರ್ಮಾಪಕನಾಗಿಯೂ ಆಗುತ್ತಾನೆ | ಸಃ—ಅವನು | ಶೂರಃ—ಪರಾಕ್ರಮಿಯಾಗಿ | ಅಸ್ತಾ—ಶತ್ರುಗಳನ್ನು ಹೊಡೆದೋಡಿಸುವಂತಾಗುತ್ತಾನೆ (ಮತ್ತು) | ಪೃತನಾಸು—ಯುದ್ಧಗಳಲ್ಲಿ | ದುಷ್ಟರಃ—ಅಪ್ರತಿಹತನೂ ಆಗುತ್ತಾನೆ | ಸಃ—ಅದೇ ಪುರುಷನು | ರಾಯಸ್ಪೋಷಂ—ಸಂಪತ್ಪುಷ್ಟಿಯನ್ನೂ | ದಧೇ—ಹೊಂದುತ್ತಾನೆ | ಸಃ—ಅವನು | ಸುವೀರ್ಯಂ—ಶ್ರೇಷ್ಠವಾದ ಶಕ್ತಿಯನ್ನೂ ಹೊಂದುತ್ತಾನೆ.

॥ ಭಾವಾರ್ಥ ॥

ಯಾವ ಪುರುಷನನ್ನು ವಾಜನೂ, ವಿಭ್ವನೂ ಮತ್ತು ಎಲ್ಲಾ ಋಭುಗಳೂ ಸೇರಿಕೊಂಡು ರಕ್ಷಿಸುವರೋ, ಅವನು ಶಕ್ತಿಯುತನಾಗಿಯೂ, ಕರ್ಮಕುಶಲನಾಗಿಯೂ ಆಗುತ್ತಾನೆ. ಅವನೇ ಅತೀಂದ್ರಿಯ ಜ್ಞಾನಿಯಾಗಿ ಸ್ತುತಿ ನಿರ್ಮಾಪಕನಾಗಿ ಆಗುತ್ತಾನೆ. ಅವನು ಪರಾಕ್ರಮಿಯಾಗಿ ಶತ್ರುಗಳನ್ನು ಹೊಡೆದೋಡಿಸುವಂತಾಗುತ್ತಾನೆ. ಮತ್ತು ಸಂಗ್ರಾಮಗಳಲ್ಲಿ ಅಪ್ರತಿಹತನೂ ಆಗುತ್ತಾನೆ. ಅದೇ ಪುರುಷನು ಸಂಪತ್ಪುಷ್ಟಿಯನ್ನು ಹೊಂದುತ್ತಾನೆ. ಅವನು ಅತ್ಯುತ್ತಮವಾದ ವೀರ್ಯವನ್ನೂ ಹೊಂದುತ್ತಾನೆ.

## English Translation.

He is vigorous and skilled in war, he is a Rishi worthy of homage, he is a hero, the discomfiter of foes, invincible in battles, he is possessed of ample wealth, and (is blessed) with excellent posterity, whom Vaja and Vibhawan, whom the Ribhus protect.

---

॥ ಸಂಹಿತಾಪಾಠಃ ॥

ಶ್ರೇಷ್ಠಂ ವಃ ಪೇಶೋ ಅಧಿ ಧಾಯಿ ದರ್ಶತಂ ಸ್ತೋಮೋ ವಾಜಾ ಋಭವಸ್ತಂ ಜುಜುಷ್ಟನ ।

ಧೀರಾಸೋ ಹಿ ಷ್ಠಾ ಕವಯೋ ವಿಪಶ್ಚಿತಸ್ತಾನ್ವ ಏನಾ ಬ್ರಹ್ಮಣಾ ವೇದಯಾಮಸಿ ॥ ೭ ॥

॥ ಪದಪಾಠಃ ॥

ಶ್ರೇಷ್ಠಂ । ವಃ । ಪೇಶಃ । ಅಧಿ । ಧಾಯಿ । ದರ್ಶತಂ । ಸ್ತೋಮಃ । ವಾಜಾಃ । ಋಭವಃ । ತಂ । ಜುಜುಷ್ಟನ ।

ಧೀರಾಸಃ । ಹಿ । ಸ್ಥ । ಕವಯಃ । ವಿಪಃಽಚಿತಃ । ತಾನ್ । ವಃ । ಏನಾ । ಬ್ರಹ್ಮಣಾ । ಆ । ವೇದಯಾಮಸಿ ॥ ೭ ॥

॥ ಸಾಯಣಭಾಷ್ಯಂ ॥

ಶ್ರೇಷ್ಠಮತ್ಯುತ್ಕೃಷ್ಟಮತ ಏವ ದರ್ಶತಂ ದರ್ಶನೀಯಂ ವೋ ಯುಷ್ಮಾಕಂ ಪೇಶೋ ರೂಪಮಧಿ ಧಾಯಿ । ಅಧಿನಿಹಿತಂ । ಅತಸ್ತದುಚಿತೋ ಯಃ ಸ್ತೋಮಃ ಸ್ತೋತ್ರಮಸ್ಮತ್ಕೃತಮಸ್ತಿ ಹೇ ವಾಜಾ ಋಭವಸ್ತಂ ಸ್ತೋಮಂ ಸ್ತೋತ್ರಂ ಜುಜುಷ್ಟನ । ಸೇವಧ್ವಂ । ಯೇ ಯೂಯಂ ಧೀರಾಸೋ ಹಿ ಧೀಮಂತಃ ಪ್ರಸಿದ್ಧಾಃ ಕವಯೋ ಮೇಧಾವಿನೋ ವಿಪಶ್ಚಿತೋ ಜ್ಞಾನವಂತಃ ಸ್ಥ ತಾನ್ವೋ ಯುಷ್ಮಾನೇನ್ನೈನೇನ ಬ್ರಹ್ಮಣಾ ಮಂತ್ರೇಣ ಶಸ್ತ್ರಾತ್ಮಕೇನಾ ವೇದಯಾಮಸಿ । ಅಥವೋಕ್ತಲಕ್ಷಣಾ ವಿಪಶ್ಚಿತಃ ಸ್ತೋತಾರೋ ಯಾನ್. । ಸ್ತುವಂತೀತಿ ಶೇಷಃ । ತಾನ್ಬ್ರಹ್ಮಣಾ ಆ ವೇದಯಾಮಸಿ । ಪ್ರಜ್ಞಾಪಯಾಮಃ ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಶ್ರೇಷ್ಠಂ—ಅತ್ಯುತ್ಕೃಷ್ಟವಾದುದೂ । ದರ್ಶತಂ—ನೋಟಕ್ಕೆ ಆಕರ್ಷಕವಾದುದೂ ಆದ । ವಃ—ನಿಮ್ಮ । ಪೇಶಃ—ರೂಪವು । ಅಧಿ ಧಾಯಿ—ನಿಮ್ಮಿಂದ ಹೊಂದಲ್ಪಟ್ಟಿದೆ । ಸ್ತೋಮಃ—(ಅದನ್ನು ಪ್ರಶಂಸಿಸುವ) ಈ ನಮ್ಮ ಸ್ತೋತ್ರವಿದು । ವಾಜಾಃ—ಎಲೈ ವಾಜರೇ । ಋಭವಃ—ಎಲೈ ಋಭುಗಳೇ । ತತ್ ಜುಜುಷ್ಟ ನ—ಆ ಸ್ತುತಿಯನ್ನು ಸೇವಿಸಿರಿ । ಧೀರಾಸಃ—(ನೀವು) ಧೀಮಂತರೂ । ಕವಯಃ—ಮೇಧಾವಿಗಳೂ । ವಿಪಶ್ಚಿತಃ—ಪ್ರಾಜ್ಞರೂ । ಸ್ಥ—ಆಗಿದ್ದೀರಿ । ತಾನ್ ವಃ—ಅಂತಹ ನಿಮ್ಮನ್ನು । ಏನಾ ಬ್ರಹ್ಮಣಾ—ಈ ಮಂತ್ರದಿಂದ । ಆ ವೇದಯಾಮಸಿ—ಸ್ತುತಿಸಿ ವಿಜ್ಞಾಪಿಸುತ್ತೇವೆ.

। ಭಾವಾರ್ಥ ॥

ಎಲೈ ಋಭುಗಳೇ, ಅತ್ಯುತ್ಕೃಷ್ಟವಾದುದೂ, ನೋಟಕ್ಕೆ ಆಕರ್ಷಕವಾದುದೂ ಆದ ರೂಪವನ್ನು ನೀವು ಹೊಂದಿದ್ದೀರಿ. ಇದೇ ನಮ್ಮಿಂದ ನಿರ್ಮಿತವಾದ ಸ್ತುತಿಯು, ಆ ರೂಪವನ್ನು ಪ್ರಶಂಸಿಸುತ್ತದೆ. ಈ ನಮ್ಮ ಸ್ತುತಿಯನ್ನು ಸೇವಿಸಿ. ನೀವು ಧೀಮಂತರೂ, ಮೇಧಾವಿಗಳೂ, ಪ್ರಾಜ್ಞರೂ ಆಗಿದ್ದೀರಿ. ಅಂತಹ ನಿಮ್ಮನ್ನು ಈ ಮಂತ್ರದಿಂದ ಸ್ತುತಿಸಿ ವಿಜ್ಞಾಪಿಸುತ್ತೇವೆ.

## English Translation.

An excellent and agreeable from has been assumed by you: (this is onr own) praise; Vajas aud Ribhus we grstified (thereby), for you are

wise, experienced, and intelligent: such we make you known (to be) by this (our) prayer.

॥ ಸಂಹಿತಾಪಾಠಃ ॥

ಯೂಯಮಸ್ಮಭ್ಯಂ ಧಿಷಣಾಭ್ಯಸ್ಪರಿ ವಿದ್ವಾಂಸೋ ವಿಶ್ವಾ ನರ್ಯಾಣಿ ಭೋಜನಾ ।
ದ್ಯುಮಂತಂ ವಾಜಂ ವೃಷಶುಷ್ಮಮುತ್ತಮಮಾ ನೋ ರಯಿಮೃಭವಸ್ತಕ್ಷತಾ ವಯಃ ॥ ೮ ॥

॥ ಪದಪಾಠಃ ॥

ಯೂಯಂ । ಅಸ್ಮಭ್ಯಂ । ಧಿಷಣಾಭ್ಯಃ । ಪರಿ । ವಿದ್ವಾಂಸಃ । ವಿಶ್ವಾ । ನರ್ಯಾಣಿ । ಭೋಜನಾ ।
ದ್ಯುಽಮಂತಂ । ವಾಜಂ । ವೃಷಽಶುಷ್ಮಂ । ಉತ್ಽತಮಂ । ಆ । ನಃ । ರಯಿಂ । ಋಭವಃ । ತಕ್ಷತ ।
ಆ । ವಯಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಋಭವೋ ಯೂಯಮಸ್ಮಭ್ಯಂ ಧಿಷಣಾಭ್ಯಸ್ಪರಿ ಸ್ತುತಿಭ್ಯೋ ನಿಮಿತ್ತಭೂತಾಭ್ಯಃ ॥ ಪರೀತಿ ಪಂಚಮ್ಯರ್ಥಾನುವಾದೀ ॥ ಯದ್ವಾ । ಅಸ್ಮತ್ಸ್ತುತಿಭ್ಯೋಽಧಿಕಾನಿ ನರ್ಯಾಣಿ ನೃಭ್ಯೋ ಹಿತಾನಿ ವಿಶ್ವಾ ಸರ್ವಾಣಿ ಭೋಜನಾ ಭೋಗ್ಯಾನಿ ವಿದ್ವಾಂಸೋ ಜಾನಂತಃ ಸಂತ ಆ ತಕ್ಷತ । ಸಂಪಾದಯತ । ಕಿಂಚ ದ್ಯುಮಂತಂ ದೀಪ್ತಿಮಂತಂ ಹಿರಣ್ಯಾದಿರೂಪಂ ವಾಜಂ ಬಲವಂತಂ ವೃಷಶುಷ್ಮಂ ಸೇಕ್ತೄಣಾಂ ಬಲವತಾಂ ಶೋಷಕಮುತ್ತಮಂ ರಯಿಂ ನೋಽಸ್ಮಾಕಂ ವಯೋಽನ್ನಂ ಚಾ ತಕ್ಷತ ಹೇ ಋಭವಃ ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಯೂಯಂ—ನೀವು । ಧಿಷಣಾಭ್ಯಃಪರಿ—ನಮ್ಮ ಸ್ತುತಿಯ ಘನತೆಗೆ ತಕ್ಕ ಪ್ರತಿಫಲರೂಪವಾದುದೂ । ನರ್ಯಾಣಿ—ಮಾನವರಿಗೆ ಹಿತಕರವಾದುದೂ । ವಿಶ್ವಾ—ಸಮಸ್ತವಾದುದೂ ಆದ । ಭೋಜನಾ— ಭೋಗ್ಯವಸ್ತುಗಳನ್ನೂ । ವಿದ್ವಾಂಸಃ—ತಿಳಿದವರಾಗಿ । ಅಸ್ಮಭ್ಯಂ—ನಮಗೆ । ಆ ತಕ್ಷತ—ಸಂಪಾದಿಸಿ ಕೊಡಿರಿ । ನಃ—ನಮಗೆ । ದ್ಯುಮಂತಂ—ಕಾಂತಿಯುತವಾದುದೂ । ವಾಜಂ—ಶಕ್ತಿಯುತವಾದುದೂ । ವೃಷಶುಷ್ಮಂ—ಶಕ್ತಿಯುತವಾದ ಶತ್ರುಗಳನ್ನು ಶೋಷಿಸುವುದೂ । ಉತ್ತಮಂ-ಅತ್ಯುತ್ತಮವಾದುದೂ ಆದ । ರಯಿಂ--ಧನವನ್ನೂ । ವಯಃ— ಅನ್ನವನ್ನೂ । ಆ (ತಕ್ಷತ)—ಸಂಪಾದಿಸಿ ಕೊಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ನೀವು ನಮ್ಮ ಸ್ತುತಿಯ ಯೋಗ್ಯತೆಗೆ ತಕ್ಕ ಪ್ರತಿಫಲರೂಪವಾದುದೂ, ಮಾನವರಿಗೆ ಹಿತಕರವಾದುದೂ, ಸಮಸ್ತವಾದುದೂ ಆದ ಭೋಗ್ಯವಸ್ತುಗಳನ್ನು ತಿಳಿದವರಾಗಿ ನಮಗೆ ಸಂಪಾದಿಸಿ ಕೊಡಿ. ಮತ್ತು ನಮಗೆ ಕಾಂತಿಯುತವಾದುದೂ, ಶಕ್ತಿಯುತವಾದುದೂ, ಶಕ್ತಿಯುತವಾದ ಶತ್ರುಗಳನ್ನು ಶೋಷಿಸುವುದೂ ಅತ್ಯುತ್ತಮವಾದುದೂ ಆದ ಧನವನ್ನೂ ಅನ್ನವನ್ನೂ ಸಂಪಾದಿಸಿಕೊಡಿ.

## English Translation.

You are wise, (bestow) upon us, in requital of our praises, all enjoyments that are good for man, and fabricate fo us, Ribhus, riches and food, resplendent, invigorating, overpowering (foes), and most excellent.

॥ ಸಂಹಿತಾಪಾಠಃ ॥

ಇಹ ಪ್ರಜಾಮಿಹ ರಯಿಂ ರರಾಣಾ ಇಹ ಶ್ರವೋ ವೀರವತ್ತಕ್ಷತಾ ನಃ ।
ಯೇನ ವಯಂ ಚಿತಯೇಮಾತ್ಯನ್ಯಾಂತಂ ವಾಜಂ ಚಿತ್ರಮೃಭವೋ ದದಾ ನಃ ॥೯॥

॥ ಪದಪಾಠಃ ॥

ಇಹ । ಪ್ರಜಾಂ । ಇಹ । ರಯಿಂ । ರರಾಣಾಃ । ಇಹ । ಶ್ರವಃ । ವೀರಽವತ್ । ತಕ್ಷತ । ನಃ ।
ಯೇನ । ವಯಂ । ಚಿತಯೇಮ । ಅತಿ । ಅನ್ಯಾನ್ । ತಂ । ವಾಜಂ । ಚಿತ್ರಂ । ಋಭವಃ । ದದ । ನಃ ॥೯॥

॥ ಸಾಯಣಭಾಷ್ಯಂ ॥

ನೋ ಅಸ್ಮಾಕಮಿಹ ಯಜ್ಞೇ ರರಾಣಾ ರಮಮಾಣಾಃ ಪ್ರಜಾಂ ಪುತ್ರಪೌತ್ರಾದಿರೂಪಾಂ ತಕ್ಷತ । ಸಂಪಾದಯತ । ಇಹೈವ ಯಜ್ಞೇ ರಯಿಂ ಚ ತಕ್ಷತ । ಇಹೈವ ಯಜ್ಞೇ ಶ್ರವೋ ಯಶೋ ವೀರವದ್ವೀರೈರ್ಭೃತ್ಯಾದಿಭಿರುಪೇತಂ ತಕ್ಷತ । ಕಿಂಚ ವಯಂ ಯೇನ ವಾಜೇನಾನ್ಯಾನಸ್ಮತ್ಸಮಾನತಿ ಚಿತಯೇಮ । ಅತಿಕ್ರಮ್ಯ ಜ್ಞಾಯೇಮಹಿ । ತಂ ಚಿತ್ರಂ ಚಾಯನೀಯಂ ವಾಜಮನ್ನಂ ಹೇ ಋಭವೋ ನೋ ದದ । ಅಸ್ಮಭ್ಯಂ ದತ್ತ ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ನಃ—ನಮಗೆ । ಇಹ—ಈ ಯಜ್ಞದಲ್ಲಿ । ರರಾಣಾಃ—ರಮಿಸತಕ್ಕ । ಪ್ರಜಾಂ—ಪುತ್ರಪೌತ್ರಾದಿರೂಪವಾದ ಪ್ರಜೆಗಳನ್ನು । ತಕ್ಷತ—ಸಂಪಾದಿಸಿ ಕೊಡಿ । ಇಹ—ಇದೇ ಯಜ್ಞದಲ್ಲಿ । ರಯಿಂ ಚ—ಧನವನ್ನೂ ಒದಗಿಸಿ । ಇಹ—ಇದೇ ಯಜ್ಞದಲ್ಲಿ । ಶ್ರವಃ—ಯಶಸ್ಸನ್ನೂ । ವೀರವತ್—ಶಕ್ತಿಯುತರಾದ ಭೃತ್ಯಾದಿಗಳನ್ನೂ (ಸಂಪಾದಿಸಿಕೊಡಿ) । ವಯಂ—ಯಜಮಾನರಾದ ನಾವು (ನಮ್ಮನ್ನು) । ಯೇನ—ಯಾವ ಅನ್ನದಿಂದ । ಅನ್ಯಾನ್—ಶತ್ರುಗಳನ್ನೆಲ್ಲಾ । ಅತಿ ಚಿತಯೇಮ—ಮೀರಿದ ಸಂಪತ್ತುಳ್ಳವರೆಂದು ತಿಳಿಯುವೆವೋ । ತಂ—ಅಂತಹ । ಚಿತ್ರಂ—ಆಕರ್ಷಕವಾದ । ವಾಜಂ—ಅನ್ನವನ್ನು । ನಃ—ನಮಗೆ । ದದ—ಕೊಡಿರಿ.

॥ ಭಾವಾರ್ಥ ॥

ಎಲೈ ಋಭುಗಳೇ, ಈ ಯಜ್ಞದಲ್ಲಿ ರಮಿಸತಕ್ಕ ಪುತ್ರಪೌತ್ರಾದಿರೂಪವಾದ ಪ್ರಜೆಗಳನ್ನೂ, ಧನವನ್ನೂ, ಯಶಸ್ಸನ್ನೂ, ಶಕ್ತಿಯುತವಾದ ಭೃತ್ಯಾದಿಗಳನ್ನೂ ಸಂಪಾದಿಸಿಕೊಡಿ. ಯಜಮಾನರಾದ ನಾವು ಯಾವ ಅನ್ನ ಸಂಪತ್ತಿನಿಂದ ಶತ್ರುಗಳಿಗಿಂತಲೂ ಅಧಿಕವಾದ ಸ್ಥಿತಿಯಲ್ಲಿರುವವೆಂದು ತಿಳಿಯುವುವೋ ಅಂತಹ ಆಕರ್ಷಕವಾದ ಅನ್ನವನ್ನು ನಮಗೆ ಕೊಡಿ.

English Translation.

Gratified (by our worship), fabricate for us, on this occasion, progeny, wealth, and reputation, with numerous adherents : grant to us, Ribhus, abundant sustenance wherewith we may greatly excel others.

## ಮೂವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಉಪ ನೋ ವಾಜಾ ಇತ್ಯಷ್ಟರ್ಚಂ ಪಂಚಮಂ ಸೂಕ್ತಂ ವಾಮದೇವಸ್ಯಾರ್ಷಮಾರ್ಭವಂ ತ್ರೈಷ್ಟುಭಂ । ಪಂಚಮ್ಯಾದ್ಯಾಶ್ಚತಸ್ರೋಽನುಷ್ಟುಭಃ । ತಥಾ ಚಾನುಕ್ರಾಂತಂ । ಉಪ ನೋಽಷ್ಟೌ ಚತುರನುಷ್ಟುಬಂತಮಿತಿ ॥ ವ್ಯೂಢೇ ದಶರಾತ್ರೇ ಷಷ್ಠೇಽಹನಿ ವೈಶ್ವದೇವಶಸ್ತ್ರ ಆದ್ಯಾಶ್ಚತಸ್ರಃ ಶಸ್ಯಾಃ । ಉಪ ನೋ ವಾಜಾ ಇತಿ ತ್ರಯೋದಶಾರ್ಭವಂ ಚತಸ್ರಶ್ಚ । ಆ. ೮-೮ । ಇತಿ ಹಿ ಸೂತ್ರಿತಂ ॥

ಅನುವಾದವು—ಉಪ ನೋ ವಾಜಾಃ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಋಭುಗಳು ದೇವತೆಯು ; ತ್ರಿಷ್ಟುಪ್‌ಛಂದಸ್ಸು, ಕೊನೆಯ ನಾಲ್ಕು ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಉಪ ನೋಽಷ್ಟೌ ಚತುರನುಷ್ಟುಬಂತಂ ಎಂದು ಹೇಳಿರುವುದು. ವ್ಯೂಢವೆಂಬ ದಶರಾತ್ರಯಾಗದಲ್ಲಿ ಆರನೆಯ

ದಿವಸ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತದ ಮೊದಲನೆಯ ನಾಲ್ಕು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಉಪ ನೋ ವಾಜಾ ಇತಿ ತ್ರಯೋದಶಾರ್ಭವಂ ಚತಸ್ರಶ್ಚ ಎಂಬ ಸೂತ್ರದಿಂದ (೮-೮) ವಿವೃತವಾಗಿರುವುದು.

## ಸೂಕ್ತ—೩೭

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೭ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೯, ೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಾಮದೇವಃ ॥
ದೇವತಾ—ಋಭವಃ ॥
ಛಂದಃ—೧-೪ ತ್ರಿಷ್ಟುಪ್ । ೫-೮ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಉಪ ನೋ ವಾಜಾ ಅಧ್ವರಮೃಭುಕ್ಷಾ ದೇವಾ ಯಾತ ಪಥಿಭಿರ್ದೇವ
ಯಾನೈಃ ।
ಯಥಾ ಯಜ್ಞಂ ಮನುಷೋ ವಿಕ್ಷ್ವಾ೩ಸು ದಧಿಧ್ವೇ ರಣ್ವಾಃ
ಸುದಿನೇಷ್ವಹ್ನಾಂ ॥ ೧ ॥

॥ ಪದಪಾಠಃ ॥

ಉಪ । ನಃ । ವಾಜಾಃ । ಅಧ್ವರಂ । ಋಭುಕ್ಷಾಃ । ದೇವಾಃ । ಯಾತ । ಪಥಿಽಭಿಃ । ದೇವಽಯಾನೈಃ ।
ಯಥಾ । ಯಜ್ಞಂ । ಮನುಷಃ । ವಿಕ್ಷು । ಆಸು । ದಧಿಧ್ವೇ । ರಣ್ವಾಃ । ಸುಽದಿನೇಷು । ಅಹ್ನಾಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಜಾ ಹೇ ಋಭುಕ್ಷಾ ಋಭವೋ ಹೇ ದೇವಾ ನೋಽಧ್ವರಂ ಯಾಗಮುಪ ಯಾತ । ಉಪಗಚ್ಛತ । ದೇವಯಾನೈರ್ದೇವೈರ್ಗಂತವ್ಯೈಃ ಪಥಿಭಿರ್ಮಾರ್ಗೈಃ । ಯಥಾ ಯೇನ ಪ್ರಕಾರೇಣ ಮನುಷೋ ಮನೋಃ ಸಂಬಂಧಿನೀಷ್ವಾಸು ವಿಕ್ಷು ಪ್ರಜಾಸು ಯಜಮಾನೇಷು ಮಧ್ಯೇ ಹೇ ರಣ್ವಾ ರಮಣೀಯಾ ಋಭವೋಽಹ್ನಾಂ ಸುದಿನೇಷು ಸುದಿನತ್ವನಿಮಿತ್ತೇಷು ಯಜ್ಞಮಸ್ಮದೀಯಂ ದಧಿಧ್ವೇ । ಧಾರಯಥ । ಯಥಾ ಯೇನ ಪ್ರಕಾರೇಣ ಯಜ್ಞಮಾಗತ್ಯ ಸುದಿನತ್ವಂ ಕುರುಥ ತಥಾ ಯಜ್ಞಮಾಯಾತೇತಿ ॥

॥ ಪ್ರತಿಪದಾರ್ಥ ॥

ರಣ್ವಾಃ—ರಮಣೀಯವಾದ ರೂಪವುಳ್ಳವರೂ | ದೇವಾಃ—ದೇವತಾತ್ಮರೂ ಆದ | ವಾಜಾಃ—ಎಲೈ ವಾಜರೇ | ಋಭುಕ್ಷಾಃ—ಎಲೈ ಋಭುಗಳೇ | ಯಥಾ—ಯಾವ ಪ್ರಕಾರ | ಮನುಷಃ—ಮನುವಿನ ಸಂಬಂಧಿಯಾದ | ಆಸು ವಿಕ್ಷು—ಈ ಪ್ರಜೆಗಳಲ್ಲಿ | ಅಹ್ನಾಂ—ಅಹಸ್ಸುಗಳ | ಸುದಿನೇಷು—ಶೋಭನತ್ವ ಪ್ರಾಪ್ತಿಗಾಗಿ | ಯಜ್ಞಂ—ನಮ್ಮ ಯಜ್ಞವನ್ನು | ದಧಿಧ್ವೇ—ಧರಿಸುತ್ತೀರೋ ಆ ರೀತಿಯಲ್ಲಿ | ದೇವಯಾನೈಃ—ದೇವತೆಗಳು ಸಂಚರಿಸುವ | ಪಥಿಭಿಃ—ಮಾರ್ಗಗಳಿಂದ | ನಃ—ನಮ್ಮ | ಅಧ್ವರಂ—ಯಾಗಕ್ಕೆ | ಉಪ ಯಾತ—ದಯಮಾಡಿರಿ.

॥ ಭಾವಾರ್ಥ ॥

ರಮಣೀಯವಾದ ರೂಪವುಳ್ಳವರೂ, ದೇವತಾತ್ಮರೂ ಆದ ಎಲೈ ವಾಜರೇ, ಎಲೈ ಋಭುಗಳೇ, ಯಾವ ರೀತಿಯಲ್ಲಿ ಮನುಸಂಬಂಧಿಯಾದ ಈ ಪ್ರಜೆಗಳ ಎಲ್ಲಾ ಅಹಸ್ಸುಗಳೂ ಶೋಭನಾತ್ಮಕಗಳಾಗಿ ಆಗುವ ನಿಮಿತ್ತವಾಗಿ ನಮ್ಮ ಯಜ್ಞವನ್ನು ನೀವು ಧರಿಸುವರೋ ಆ ರೀತಿಯಲ್ಲಿ ದೇವತೆಗಳು ಸಂಚರಿಸುವ ಮಾರ್ಗಗಳಿಂದ ನಮ್ಮ ಯಾಗಕ್ಕೆ ದಯಮಾಡಿರಿ.

### English Translation.

Divine Vajas, Ribhus, come to our sacrifice by the path travelled by the gods, inasmuch as you, gracious (Ribhus), have maintained sacrifice amongst the people, (the progeny) of Manu, for (the sake of) securing the prosperous course of days.

---

॥ ಸಂಹಿತಾಪಾಠಃ ॥

ತೇ ವೋ ಹೃದೇ ಮನಸೇ ಸಂತು ಯಜ್ಞಾ ಜುಷ್ಟಾಸೋ ಅದ್ಯ ಘೃತನಿರ್ಣಿಜೋ ಗುಃ |
ಪ್ರ ವಃ ಸುತಾಸೋ ಹರಯಂತ ಪೂರ್ಣಾಃ ಕ್ರತ್ವೇ ದಕ್ಷಾಯ ಹರ್ಷಯಂತ ಪೀತಾಃ || ೨ ||

॥ ಪದಪಾಠಃ ॥

ತೇ | ವಃ | ಹೃದೇ | ಮನಸೇ | ಸಂತು | ಯಜ್ಞಾಃ | ಜುಷ್ಟಾಸಃ | ಅದ್ಯ | ಘೃತಽನಿರ್ನಿಜಃ | ಗುಃ |
ಪ್ರ | ವಃ | ಸುತಾಸಃ | ಹರಯಂತ | ಪೂರ್ಣಾಃ | ಕ್ರತ್ವೇ | ದಕ್ಷಾಯ | ಹರ್ಷಯಂತ | ಪೀತಾಃ || ೨ ||

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ಯಾಗದಿನೇ ತೇ ಏತೇ ಯಜ್ಞಾ ಯಾಗಸಾಧನಾಃ ಸೋಮಾ ವೋ ಹೃದೇ ಹೃದಯಾಯ ಮನಸೇ ತೃಪ್ತಿಕ್ರಿಯೆತೇ ಸಂತು । ಭವಂತು । ಅದ್ಯಾಸ್ಮಿನ್‌ದಿನೇ ಜುಷ್ಟಾಸಃ ಪರ್ಯಾಪ್ತಾಃ ಸೋಮಾ ಘೃತನಿರ್ಣಿಜೋ ಮಿಶ್ರಣದ್ರವ್ಯೇಣ ದೀಪ್ತರೂಪಾ ಗುಃ । ಗಚ್ಛಂತು ಯುಷ್ಮದ್ಧೃದಯಂ । ಸುತಾಸೋಽಭಿಷುತಾಃ ಸೋಮಾಶ್ಚಮಸೇಷು ಪೂರ್ಣಾ ವೋ ಯುಷ್ಮದರ್ಥಂ ಪ್ರ ಹರಯಂತೇ । ಪ್ರಹ್ರಿಯಂತೇ । ಯದ್ವಾ । ಹರ್ಯತೇಃ ಕಾಂತಿಕರ್ಮಣ ಇದಂ ರೂಪಂ । ಪ್ರಕರ್ಷೇಣ ವೋ ಯುಷ್ಮಾನ್ ಕಾಮಯಂತೇ । ಕ್ರತ್ವೇ ಕ್ರತವೇ ಕರ್ಮಣೇ ದಕ್ಷಯೋತ್ಸಾಹಾಯ ಪೀತಾ ಹರ್ಷಯಂತೆ। ಹರ್ಷಯಂತು ॥

॥ ಪ್ರತಿಪದಾರ್ಥ ॥

(ಋಭವಃ—ಎಲೈ ಋಭುಗಳೇ) । ಅದ್ಯ—ಈ ಯಾಗಕಾಲದಲ್ಲಿ । ತೇ ಯಜ್ಞಾಃ—ಯಜ್ಞಸಾಧನಗಳಾದ ಈ ಸೋಮರಸಗಳು । ವಃ—ನಿಮ್ಮ । ಹೃದೇ—ಹೃದಯಕ್ಕೂ । ಮನಸೇ—ಮನಸ್ಸಿಗೂ । ಸಂತು—ತೃಪ್ತಿಕಾರಕಗಳಾಗಲಿ । ಜುಷ್ಟಾಸಃ—ತೃಪ್ತಿಯನ್ನುಂಟುಮಾಡಲು ಸಾಕಾಗುವ ಸೋಮಗಳು । ಘೃತನಿರ್ಣಿಜಃ—ಘೃತದೊಡನೆ ಮಿಶ್ರಿತವಾಗಿರುವುದರಿಂದ ಪ್ರಕಾಶಿಸುತ್ತಾ । ಗುಃ—ನಿಮ್ಮ ಹೃದಯವನ್ನು ಪ್ರವೇಶಿಸಲಿ । ಸುತಾಸಃ—ಹಿಂಡಲ್ಪಟ್ಟ ಸೋಮರಸಗಳು । ಪೂರ್ಣಾಃ—ಚಮಸಪಾತ್ರೆಗಳಲ್ಲಿ ಪೂರ್ಣವಾಗಿದ್ದು । ವಃ—ನಿಮಗಭಿಮುಖವಾಗಿ । ಪ್ರ ಹರಯಂತೆ—ಪ್ರವಹಿಸುತ್ತವೆ । ಕ್ರತ್ವೇ—ನಮ್ಮ ಕರ್ಮಸಿದ್ಧಿಗಾಗಿಯೂ । ದಕ್ಷಾಯ—ಶಕ್ತಿವರ್ಧನಕ್ಕಾಗಿಯೂ । ಪೀತಾಃ—ಪಾನಮಾಡಲ್ಪಟ್ಟ ಸೋಮಗಳು । ಹರ್ಷಯಂತ—ನಿಮಗೆ ಸಂತೋಷವನ್ನುಂಟುಮಾಡಲಿ.

॥ ಭಾವಾರ್ಥ ॥

ಎಲೈ ಋಭುಗಳೇ, ಈ ಯಾಗಕಾಲದಲ್ಲಿ ಯಜ್ಞಸಾಧನಗಳಾದ ಈ ಸೋಮರಸಗಳು ನಿಮ್ಮ ಹೃದಯಕ್ಕೂ ಮನಸ್ಸಿಗೂ ತೃಪ್ತಿಕಾರಕಗಳಾಗಲಿ. ತೃಪ್ತಿಯನ್ನುಂಟುಮಾಡಲು ಪರ್ಯಾಪ್ತಗಳಾದ ಸೋಮಗಳು ಘೃತಮಿಶ್ರಿತವಾಗಿರುವುದರಿಂದ ಪ್ರಕಾಶಿಸುತ್ತಾ ನಿಮ್ಮ ಹೃದಯವನ್ನು ಪ್ರವೇಶಿಸಲಿ. ಅಭಿಷುತವಾದ ಸೋಮಗಳು ಚಮಸಪಾತ್ರೆಗಳಲ್ಲಿ ಪೂರ್ಣವಾಗಿದ್ದು ನಿಮಗಭಿಮುಖವಾಗಿ ಪ್ರವಹಿಸುತ್ತವೆ. ನಮ್ಮ ಕರ್ಮಸಿದ್ಧಿಗಾಗಿಯೂ, ಶಕ್ತಿವರ್ಧನಕ್ಕಾಗಿಯೂ ಪಾನಮಾಡಲ್ಪಟ್ಟ ಸೋಮಗಳು ನಿಮಗೆ ಸಂತೋಷವನ್ನುಂಟುಮಾಡಲಿ.

## English Translation.

May these sacrifices be (acceptable) to you in heart and mind : may to-day the sufficient (juices) mixed with butter flow to you : the full libations are prepared for you : may they, when drank, animate you for glorious deeds.



॥ ಸಂಹಿತಾಪಾಠಃ ॥

ತ್ರ್ಯುದಾಯಂ ದೇವಹಿತಂ ಯಥಾ ವಃ ಸ್ತೋಮೋ ವಾಜಾ ಋಭುಕ್ಷಣೋ ದದೇ ವಃ ।
ಜುಹ್ವೇ ಮನುಷ್ವದುಪರಾಸು ವಿಕ್ಷು ಯುಷ್ಮೇ ಸಚಾ ಬೃಹದ್ದಿವೇಷು ಸೋಮಂ ॥ ೩ ॥

॥ ಪದಪಾಠಃ ॥

ತ್ರಿಉದಾಯಂ । ದೇವಹಿತಂ । ಯಥಾ । ವಃ । ಸ್ತೋಮಃ । ವಾಜಾಃ । ಋಭುಕ್ಷಣಃ । ದದೇ । ವಃ ।
ಜುಹ್ವೇ । ಮನುಷ್ವತ್ । ಉಪರಾಸು । ವಿಕ್ಷು । ಯುಷ್ಮೇ ಇತಿ । ಸಚಾ । ಬೃಹತ್ ದಿವೇಷು । ಸೋಮಂ ॥

॥ ಸಾಯಣಭಾಷ್ಯಂ ॥

ತ್ರ್ಯುದಾಯಂ ತ್ರ್ಯುದಯಂ ಸವನತ್ರಯಗಮನೋಪೇತಂ ದೇವಹಿತಂ ಸೋಮಾಖ್ಯಮನ್ನಂ ದೇವೇಭ್ಯೋ ಹಿತಂ ದೇವೈರ್ವಾ ವಿಹಿತಂ । ತೃತೀಯಸವನಸ್ಥಮಿತ್ಯರ್ಥಃ । ತದ್ಯಥಾ ವೋ ಯುಷ್ಮಾನ್ದದೇ । ಧಾರಯತಿ । ಹೇ ವಾಜಾ ಹೇ ಋಭುಕ್ಷಣ ಋಭವೋ ಯಥಾ ಸ್ತೋಮಃ ಸ್ತೋತ್ರಂ ವೋ ದದೇ । ಧಾರಯತಿ । ಉಪರಾಸು । ಉಪ ದೇವಯಜನಸಮೀಪೇ ರಮಂತ ಇತ್ಯುಪರಾಃ । ತಾಸು ವಿಕ್ಷು ಪ್ರಜಾಸು ಬೃಹದ್ದಿವೇಷು ಪ್ರಭೂತದೀಪ್ತಿಷು ದೇವೇಷು ಮಧ್ಯೇ ಮನುಷ್ವತ್ ಮನುರಿವ ಯುಷ್ಮೇ ಯುಷ್ಮದರ್ಥಂ ಸಚಾ ಸಹಾನೇಕಗ್ರಹೇಷು ಪ್ರಸ್ಥಿತಂ ಜುಹ್ವೇ । ಜುಹೋಮಿ ಸೋಮಂ ॥

॥ ಪ್ರತಿಪದಾರ್ಥ ॥

ವಾಜಾಃ—ಎಲೈ ವಾಜರೇ । ಋಭುಕ್ಷಣಃ—ಎಲೈ ಋಭುಗಳೇ । ತ್ರ್ಯುದಾಯಂ—ತೃತೀಯ ಸವನದಲ್ಲಿ ಅರ್ಪಿತವಾದುದೂ । ದೇವಹಿತಂ—(ಈ ಕಾಲದಲ್ಲಿ) ದೇವತೆಗಳಿಗೆ ಹಿತಕರವಾದುದೂ ಆದ ಸೋಮವು । ಯಥಾ—ಯಾವ ರೀತಿಯಲ್ಲಿ । ವಃ—ನಿಮ್ಮನ್ನು । ದದೇ—ಶಕ್ತಿಯುತರನ್ನಾಗಿ ಮಾಡಿ ಧರಿಸುವುದೋ (ಮತ್ತು ಯಾವ ರೀತಿಯಲ್ಲಿ) । ಸ್ತೋಮಃ—ಈ ಕಾಲದಲ್ಲಿ ಅರ್ಪಿತವಾದ ಸ್ತೋತ್ರವು ವಃ—ನಿಮ್ಮನ್ನು ಧರಿಸುವುದೋ (ಆ ರೀತಿಯಲ್ಲಿ) । ಉಪರಾಸು—ದೇವಯಜನ, ಸಮೀಪದಲ್ಲಿ ರಮಿಸುವ । ವಿಕ್ಷು—ಪ್ರಜೆಗಳ ನಡುವೆಯೂ । ಬೃಹದ್ದಿವೇಷು—, ಅಧಿಕವಾಗಿ ಪ್ರಕಾಶಿಸುವ ದೇವತೆಗಳ ನಡುವೆಯೂ । ಮನುಷ್ವತ್—ಮನುವಿನಂತೆ । ಯುಷ್ಮೇ—ನಿಮ್ಮನ್ನುದ್ದೇಶಿಸಿ । ಸೋಮಂ—ಸೋಮವನ್ನು । ಜುಹ್ವೇ—ಅರ್ಪಿಸುತ್ತೇನೆ.

॥ ಭಾವಾರ್ಥ ॥

ಎಲೈ ವಾಜರೇ, ಎಲೈ ಋಭುಗಳೇ, ತೃತೀಯಸವನದಲ್ಲಿ ಅರ್ಪಿತವಾದುದೂ ಮತ್ತು ಈ ಕಾಲದಲ್ಲಿ ದೇವತೆಗಳಿಗೆ ಹಿತಕರವಾದುದೂ ಆದ ಸೋಮವು ಯಾವ ರೀತಿಯಲ್ಲಿ ನಿಮ್ಮನ್ನು ಶಕ್ತಿಯುತರನ್ನಾಗಿ ಮಾಡಿ ನಿಮಗೆ ಅವಲಂಬನವಾಗಿರುವುದೋ ಮತ್ತು ಈ ಕಾಲದಲ್ಲಿ ಅರ್ಪಿತವಾದ ಸ್ತೋತ್ರವು ಯಾವ ರೀತಿಯಲ್ಲಿ ನಿಮಗೆ ಉತ್ಸಾಹಕಾರಕವಾಗಿರುವುದೋ ಆ ರೀತಿಯಲ್ಲಿ ದೇವಯಜನಸಮೀಪದಲ್ಲಿ ರಮಿಸುವ ದೇವಮಾನವಾದಿಗಳ ನಡುವೆ ನಿಮ್ಮನ್ನುದ್ದೇಶಿಸಿ ಮನುವಿನಂತೆ ನಿಮಗೆ ಸೋಮವನ್ನರ್ಪಿಸುತ್ತೇನೆ.

English Translation.

As the offering suited to the gods at the third (daily) sacrifice supports you, Vajas, Ribhukshans; as the praise (then recited supports you): therefore, like Manu, I offer you the Soma juice, along with the very radiant (deities) among the people assembled at the solemnity.



॥ ಸಂಹಿತಾಪಾಠಃ ॥

ಪೀವೋಅಶ್ವಾಃ ಶುಚದ್ರಥಾ ಹಿ ಭೂತಾಯಃಶಿಪ್ರಾ ವಾಜಿನಃ ಸುನಿಷ್ಕಾಃ ।
ಇಂದ್ರಸ್ಯ ಸೂನೋ ಶವಸೋ ನಪಾತೋಽನು ವಶ್ಚೇತ್ಯಗ್ರಿಯಂ ಮದಾಯ ॥

॥ ಪದಪಾಠಃ ॥

ಪೀವಃऽಅಶ್ವಾಃ । ಶುಚತ್ऽರಥಾಃ । ಹಿ । ಭೂತ । ಅಯಃऽಶಿಪ್ರಾಃ । ವಾಜಿನಃ । ಸುऽನಿಷ್ಕಾಃ ।
ಇಂದ್ರಸ್ಯ । ಸೂನೋ ಇತಿ । ಶವಸಃ । ನಪಾತಃ । ಅನು । ವಃ । ಚೇತಿ । ಅಗ್ರಿಯಂ । ಮದಾಯ ॥ ೪ ॥

॥ ಸಾಯಣಭಾಷ್ಯಂ ॥

ಹೇ ವಾಜಿನ ಋಭವಃ ಪೀವೋಅಶ್ವಾಃ । ಪೀವಾನೋಽಶ್ವಾ ಯೇಷಾಂ ತೇ ತಾದೃಶಾಃ । ತಥಾ ಶುಚದ್ರಥಾ ದೀಪ್ತರಥಾ ಅಯಃಶಿಪ್ರಾಃ । ಶಿಪ್ರೇ ಹನೂ ನಾಸಿಕೇ ವಾ । ಅಯೋವತ್ಸಾರಭೂತಶಿಪ್ರಾಃ ಸುನಿಷ್ಕಾಃ ಶೋಭನಧನಾಶ್ಚ ಭೂತ । ಭವತ । ಹೇ ಇಂದ್ರಸ್ಯ ಸೂನೋ ಸೂನವಃ ಪುತ್ರವದ್ರಕ್ಷಣೀಯಾ ಹೇ ಶವಸೋ ನಪಾತೋ ಬಲಸ್ಯ ಪುತ್ರಾ ಬಲಿನೋ ವೋ ಯುಷ್ಮಭ್ಯಂ ಮದಾಯಾನು ಚೇತಿ । ಅನ್ವಜ್ಞಾಯಿ । ದೇವೇಷ್ವಗ್ರಿಯಮಗ್ರೇ ಭವಂ ತೃತೀಯಸವನಂ ॥

॥ ಪ್ರತಿಪದಾರ್ಥ ॥

ವಾಜಿನಃ—ಎಲೈ ಋಭುಗಳೇ (ನೀವು) । ಪೀವೋಅಶ್ವಾಃ—ಪುಷ್ಟವಾದ ಅಶ್ವಗಳಿಂದ ವಹಿಸಲ್ಪಡುವವರೂ । ಶುಚದ್ರಥಾಃ—ಪ್ರಕಾಶಮಾನವಾದ ರಥಸ್ಥರೂ । ಅಯಃಶಿಪ್ರಾಃ—ಉಕ್ಕಿನಿಂದ ಮಾಡಿದ ಕಪಾಲ ಪ್ರದೇಶವುಳ್ಳವರೂ । ಸುನಿಷ್ಕಾಃ—ಶ್ರೇಷ್ಠವಾದ ಧನವುಳ್ಳವರೂ । ಭೂತ—ಆಗಿದ್ದೀರಿ ! ಇಂದ್ರಸ್ಯ ಸೂನೋ—ಇಂದ್ರನಿಗೆ ಪುತ್ರಸಮಾನರೂ । ಶವಸೋ ನಪಾತಃ—ಶಕ್ತಿಪುತ್ರರೂ ಆದ ಋಭುಗಳೇ । ವಃ—ನಿಮ್ಮ। ಮದಾಯ—ಹರ್ಷಕ್ಕಾಗಿ । ಅಗ್ರಿಯಂ—ಈ ತೃತೀಯಸವನವು । ಅನು ಚೇತಿ—ಸಂಕಲ್ಪಿತವಾಗಿದೆ,

॥ ಭಾವಾರ್ಥ ॥

ಎಲೈ ಋಭುಗಳೇ, (ವಾಜಿಗಳೇ) ನೀವು ಪುಷ್ಟವಾದ ಅಶ್ವಗಳಿಂದ ವಹಿಸಲ್ಪಡುವವರೂ, ಪ್ರಕಾಶಮಾನವಾದ ರಥಸ್ಥರೂ, ಉಕ್ಕಿನಿಂದ ಮಾಡಿದ ಕಪಾಲಪ್ರದೇಶವುಳ್ಳವರೂ, ಶ್ರೇಷ್ಠವಾದ ಧನವುಳ್ಳವರೂ ಆಗಿದ್ದೀರಿ. ಇಂದ್ರನಿಗೆ ಪುತ್ರರಂತಿರುವವರೂ, ಶಕ್ತಿಪುತ್ರರೂ ಆದ ಋಭುಗಳೇ, ನಿಮ್ಮ ಹರ್ಷಕ್ಕಾಗಿ ಈ ತೃತೀಯಸವನವು ಸಂಕಲ್ಪಿತವಾಗಿದೆ.

## English Translation.

Vajins, you are borne by stout horses mounted on a brilliant car, have jaws of iron, and are possessed of treasures: sons of Indra, grandsons of rtrength, this last sacrifice is for your exhilaration.



॥ ಸಂಹಿತಾಪಾಠಃ ॥

ಋಭುಮೃಭುಕ್ಷಣೋ ರಯಿಂ ವಾಜೇ ವಾಜಿನ್ತಮಂ ಯುಜಂ ।
ಇಂದ್ರಸ್ವಂತಂ ಹವಾಮಹೇ ಸದಾಸಾತಮಮಶ್ವಿನಂ ॥ ೫ ॥

॥ ಪದಪಾಠಃ ॥

ಋಭುಂ । ಋಭುಕ್ಷಣಃ । ರಯಿಂ । ವಾಜೇ । ವಾಜಿನ್ಽತಮಂ । ಯುಜಂ ।
ಇಂದ್ರಸ್ವಂತಂ । ಹವಾಮಹೇ । ಸದಾಽಸಾತಮಂ । ಅಶ್ವಿನಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಋಭುಕ್ಷಣ ಋಭವ ಋಭುಮುರುಭಾಸಮಾನಂ ರಯಿಂ ಧನರೂಪಂ । ತದ್ಧೇತುಭೂತತ್ವಾತ್ ತಾಚ್ಛೆಬ್ದ್ಯಂ । ವಾಜೇ ಸಂಗ್ರಾಮೇ ವಾಜಿನ್ತಮಮತ್ಯಂತಬಲವಂತಂ ಯುಜಂ ಪರಸ್ಪರಯೋಗೋಪೇತಮಿಂದ್ರಸ್ವಂತಮಿಂದ್ರವಂತಮಿಂದ್ರಿಯವಂತಂ ಸದಾಸಾತಮಂ ಸರ್ವದಾ ದಾತೃತಮಮಶ್ವಿನಮಶ್ವವಂತಂ ಭವತಾಂ ಗಣಂ ಹವಾಮಹೇ । ಆಹ್ವಯಾಮಿ ॥

॥ ಪ್ರತಿಪದಾರ್ಥ ॥

**ಋಭುಕ್ಷಣಃ**—ಎಲೈ ಋಭುಗಳೇ। **ಋಭುಂ**—ಅತ್ಯಂತ ಪ್ರಕಾಶಮಾನವಾದುದೂ। **ರಯಿಂ**—ಸಂಪತ್ಸ್ವರೂಪವುಳ್ಳದ್ದೂ। **ವಾಜೇ**—ಸಂಗ್ರಾಮದಲ್ಲಿ। **ವಾಜಿಂತಮಂ**—ಅತ್ಯಂತಶಕ್ತಿಯುತವಾದುದೂ। **ಯುಜಂ**—ಒಟ್ಟಿಗೆ ಸೇರಿಕೊಂಡಿರುವುದೂ। **ಇಂದ್ರಸ್ವಂತಂ**—ಇಂದ್ರಿಯಗಳ ಸಂಬಂಧವುಳ್ಳದ್ದೂ। **ಸದಾಸಾತಮಂ**—ಸರ್ವದಾ ದಾನಮಾಡುವ ಸ್ವಭಾವವುಳ್ಳದ್ದೂ। **ಅಶ್ವಿನಂ**—ಅಶ್ವಯುಕ್ತವಾದುದೂ ಆದ ನಿಮ್ಮ ಸಂಘವನ್ನು। **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಋಭುಗಳೇ, ಅತ್ಯಂತ ಪ್ರಕಾಶಮಾನವಾದುದೂ, ಸಂಪತ್ಸ್ವರೂಪವುಳ್ಳದ್ದೂ, ಯುದ್ಧದಲ್ಲಿ ಅತ್ಯಂತ ಶಕ್ತಿಯುತವಾದುದೂ, ಒಟ್ಟಿಗೆ ಸೇರಿಕೊಂಡಿರುವುದೂ, ಇಂದ್ರಿಯಗಳ ಸಂಬದ್ಧವೂ, ಸರ್ವದಾ ದಾನಮಾಡುವ ಸ್ವಭಾವವುಳ್ಳದ್ದೂ, ಅಶ್ವಯುಕ್ತವಾದುದೂ ಆದ ನಿಮ್ಮ ಸಂಘವನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation.

We invoke you, Ribhukshans, for splendid wealth, mutually co-operating, most invorating in war, affecting the senses, ever munificent, and comprehendir g horses.

---

॥ ಸಂಹಿತಾಪಾಠಃ ॥

ಸೇದೃಭವೋ ಯಮವಥ ಯೂಯಮಿಂದ್ರಶ್ಚ ಮರ್ತ್ಯಂ।
ಸ ಧೀಭಿರಸ್ತು ಸನಿತಾ ಮೇಧಸಾತಾ ಸೋ ಅರ್ವತಾ ॥ ೬ ॥

॥ ಪದಪಾಠಃ ॥

ಸಃ। ಇತ್। ಋಭವಃ। ಯಂ। ಅವಥ। ಯೂಯಂ। ಇಂದ್ರಃ। ಚ। ಮರ್ತ್ಯಂ।
ಸಃ। ಧೀಭಿಃ। ಅಸ್ತು। ಸನಿತಾ। ಮೇಧಽಸಾತಾ। ಸಃ। ಅರ್ವತಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ಋಭವೋ ಯೂಯಮಿಂದ್ರಶ್ಚ ಯಂ ಮರ್ತ್ಯಮವಥ। ರಕ್ಷಥ। ಸೇತ್ಸ ಏವಾಸ್ತು। ಭವತು। ನಾನ್ಯಃ ಶ್ರೇಷ್ಠೋ ಭವತ್ವಿತ್ಯರ್ಥಃ। ಸ ಏವ ಧೀಭಿಃ ಕರ್ಮಭಿಃ ಸನಿತಾ ಸಂಭಕ್ತಾ ಭವತು। ಮೇಧಸಾತಾ ಮೇಧಸಾತೌ ಯಜ್ಞೇ ಸ ಏವಾರ್ವತಾರಣವತಾಶ್ವೇನ ಯುಕ್ತೋ ಭವತು ॥

॥ ಪ್ರತಿಪದಾರ್ಥ ॥

ಋಭವಃ—ಎಲೈ ಋಭುಗಳೇ । ಯೂಯಂ—ನೀವುಗಳೂ । ಇಂದ್ರಶ್ಚ—ಇಂದ್ರನೂ ಸೇರಿಕೊಂಡು । ಯಂ ಮರ್ತ್ಯಂ—ಯಾವ ಮಾನವನನ್ನು । ಅವಥ—ರಕ್ಷಿಸುತ್ತೀರೋ । ಸೇತ್—ಅದೇ ಮಾನವನು । ಅಸ್ತು—ಶ್ರೇಷ್ಠನಾಗಿರಲಿ । ಸಃ—ಅವನೇ । ಧೀಭಿಃ—ಉತ್ತಮವಾದ ಕರ್ಮಗಳೊಡನೆ ಕೂಡಿ । ಸನಿತಾ—ಉದಾರವಾದ ದಾತೃವಾಗಿ ಆಗಲಿ । ಮೇಧಸಾತಾ—ಯಜ್ಞದಲ್ಲಿ । ಸಃ—ಅವನೇ । ಅರ್ವತಾ—ಉತ್ತಮವಾದ ಅಶ್ವಯುಕ್ತನಾಗಲಿ.

॥ ಭಾವಾರ್ಥ ॥

ಎಲೈ ಋಭುಗಳೇ, ನೀವೂ ಇಂದ್ರನೂ ಸೇರಿಕೊಂಡು ಯಾವ ಮಾನವನನ್ನು ರಕ್ಷಿಸುತ್ತೀರೋ ಅದೇ ಮಾನವನು ಶ್ರೇಷ್ಠನಾಗಿರಲಿ. ಅವನೇ ಉತ್ತಮವಾದ ಕರ್ಮಗಳೊಡನೆ ಕೂಡಿಕೊಂಡು ಉದಾರವಾದ ದಾತೃವಾಗಿರಲಿ. ಯಜ್ಞದಲ್ಲಿ ಅವನೇ ಉತ್ತಮವಾದ ಅಶ್ವಯುಕ್ತನಾಗಲಿ.

English Translation.

May the man whom you, Ribhus and Indra, favour, be ever liberal by his acts, and possessed of a horse at the sacrifice.



। ಸಂಹಿತಾಪಾಠಃ ।

ವಿ ನೋ ವಾಜಾ ಋಭುಕ್ಷಣಃ ಪಥಶ್ಚಿತನ ಯಷ್ಟವೇ ।
ಅಸ್ಮಭ್ಯಂ ಸೂರಯಃ ಸ್ತುತಾ ವಿಶ್ವಾ ಆಶಾಸ್ತರೀಷಣಿ ॥ ೭ ॥

॥ ಪದಪಾಠಃ ॥

ವಿ । ನಃ । ವಾಜಾಃ । ಋಭುಕ್ಷಣಃ । ಪಥಃ । ಚಿತನ । ಯಷ್ಟವೇ ।
ಅಸ್ಮಭ್ಯಂ । ಸೂರಯಃ । ಸ್ತುತಾಃ । ವಿಶ್ವಾಃ । ಆಶಾಃ । ತರೀಷಣಿ ॥ ೭ ॥

। ಸಾಯಣಭಾಷ್ಯಂ ॥

ಹೇ ವಾಜಾ ಹೇ ಋಭುಕ್ಷಣ ಋಭವೋ ನೋಽಸ್ಮಾಕಂ ಪಥೋ ಮಾರ್ಗಾನ್ ಯಷ್ಟವೇ ಯಷ್ಟುಂ ಯಜ್ಞಮಾರ್ಗಾನ್ವಿ ಚಿತನ । ವಿಚೇತಯತ । ಪ್ರಜ್ಞಾಪಯತೇತ್ಯರ್ಥಃ । ಅಸ್ಮಭ್ಯಂ ಹೇ ಸೂರಯೋ ಮೇಧಾವಿನೋ ಯೂಯಂ ಸ್ತುತಾಃ ಸಂತೋ ವಿಶ್ವಾ ಆಶಾಃ ಸರ್ವಾ ದಿಶಸ್ತರೀಷಣಿ ತರೀತುಂ ಸಾಮರ್ಥ್ಯಂ । ವಿತರತೇತಿ ಶೇಷಃ ॥

॥ ಪ್ರತಿಪದಾರ್ಥ ॥

ವಾಜಾಃ—ಎಲೈ ವಾಜರೇ । ಋಭುಕ್ಷಣಃ—ಎಲೈ ಋಭುಗಳೇ ! ನಃ—ನಮಗೆ । ಯಷ್ಟವೇ—ಯಜ್ಞಮಾಡುವುದಕ್ಕೆ । ಪಥಃ—ಉತ್ತಮವಾದ ಮಾರ್ಗಗಳನ್ನು ಅನುಸರಿಸಲು । ವಿ ಚಿತನ—ಉಪದೇಶಿಸಿರಿ । ಸೂರಯಃ—ಮೇಧಾವಿಗಳಾದ ನೀವು । ಸ್ತುತಾಃ—ನಮ್ಮಿಂದ ಸ್ತುತರಾಗಿ । ಅಸ್ಮಭ್ಯಂ—ನಮಗೆ । ವಿಶ್ವಾ ಆಶಾಃ—ಸಮಸ್ತದಿಕ್ಕುಗಳನ್ನೂ । ತರೀಷಣಿ—ದಾಟುವುದಕ್ಕೆ (ಶಕ್ತಿಯನ್ನುಂಟುಮಾಡಿರಿ).

॥ ಭಾವಾರ್ಥ ॥

ಎಲೈ ವಾಜರೇ, ಎಲೈ ಋಭುಗಳೇ, ಯಜ್ಞಮಾಡುವುದಕ್ಕೆ ನಮಗೆ ಉತ್ತಮವಾದ ಮಾರ್ಗಗಳನ್ನು ತೋರಿಸಿಕೊಡಿರಿ. ಮೇಧಾವಿಗಳಾದ ನೀವು ನಮಗೆ ಸಮಸ್ತದಿಕ್ಕುಗಳನ್ನೂ ದಾಟುವ ಶಕ್ತಿಯನ್ನುಂಟುಮಾಡಿರಿ.

English Translation.

Vajas, Ribhukshans, direct us in the way to sacrifice; for you, who are intelligent, being glorified (by us), are able to traverse all the quarters (of space).



॥ ಸಂಹಿತಾಪಾಠಃ ॥

ತಂ ನೋ ವಾಜಾ ಋಭುಕ್ಷಣ ಇಂದ್ರ ನಾಸತ್ಯಾ ರಯಿಂ ।
ಸಮಶ್ವಂ ಚರ್ಷಣಿಭ್ಯ ಆ ಪುರು ಶಸ್ತ ಮಘತ್ತಯೇ ॥ ೮ ॥

॥ ಪದಪಾಠಃ ॥

ತಂ । ನಃ । ವಾಜಾಃ । ಋಭುಕ್ಷಣಃ । ಇಂದ್ರ । ನಾಸತ್ಯಾ । ರಯಿಂ ।
ಸಂ । ಅಶ್ವಂ । ಚರ್ಷಣಿऽಭ್ಯಃ । ಆ । ಪುರು । ಶಸ್ತ । ಮಘತ್ತಯೇ ॥ ೮ ॥

॥ ಸಾಯಣಭಾಷ್ಯಂ ॥

ಅನಯಾ ಸ್ತುತಿಮುಪಸಂಹೃತ್ಯಾಭಿಮತಮಾಶಾಸ್ತೇ । ಹೇ ವಾಜಾ ಹೇ ಋಭುಕ್ಷಣ ಋಭವೋ ಹೇ ಇಂದ್ರ ಹೇ ನಾಸತ್ಯಾಶ್ವಿನೌ ತೇ ಯೂಯಂ ನೋಽಸ್ಮಭ್ಯಂ ಚರ್ಷಣಿಭ್ಯೋ ಮನುಷ್ಯೇಭ್ಯಃ ಸ್ತೋತೃಭ್ಯಸ್ತಂ ಪುರು ಪ್ರಭೂತಂ ರಯಿಂ ಧನಮಶ್ವಂ ಚ ಪುರು ಪ್ರಭೂತಂ ಮಘತ್ತಯೇ ಧನದಾನಾಯ ಸಮಾ ಶಸ್ತ। ಸಮ್ಯಗಾಶಾಸನಂ ಕುರುತ ॥

|| ಪ್ರತಿಪದಾರ್ಥ ||

ವಾಜಾಃ—ಎಲೈ ವಾಜರೇ | ಋಭುಕ್ಷಣಃ—ಎಲೈ ಋಭುಗಳೇ | ಇಂದ್ರ—ಎಲೈ ಇಂದ್ರನೇ | ನಾಸತ್ಯಾ—ಎಲೈ ಅಶ್ವಿನೀ ದೇವತೆಗಳೇ | ಚರ್ಷಣಿಭ್ಯಃ—ಮಾನವರೂಪರೂ | ನಃ—ಸ್ತುತಿಕರ್ತರೂ ಆದ ನಮಗೆ | ತಂ—ಪ್ರಸಿದ್ಧವಾದುದೂ | ಪುರು—ಪ್ರಭೂತವಾದುದೂ ಆದ | ರಯಿಂ—ಧನವನ್ನೂ | ಅಶ್ವಂ—ಅಶ್ವವನ್ನೂ | ಮಘತ್ತಯೇ—ಸಂಪದ್ವೃದ್ಧಿಗಾಗಿ | ಸಂ ಅಶಸ್ತ—ಆಜ್ಞಾಪಿಸಿರಿ.

ಭಾವಾರ್ಥ ||

ಎಲೈ ವಾಜರೇ, ಎಲೈ ಋಭುಗಳೇ, ಎಲೈ ಇಂದ್ರನೇ, ಎಲೈ ಅಶ್ವಿನೀದೇವತೆಗಳೇ, ಮಾನವರೂ ಸ್ತುತಿಕರ್ತರೂ ಆದ ನಮಗೆ ಪ್ರಸಿದ್ಧವಾದುದೂ, ಪ್ರಭೂತವಾದುದೂ ಆದ ಧನವನ್ನೂ, ಅಶ್ವವನ್ನೂ ನಮ್ಮ ಸಂಪದ್ವೃದ್ಧಿಗಾಗಿ ಆಜ್ಞಾಪಿಸಿರಿ (ಕೊಡಿರಿ).

English Translation.

Vajas, Ribhukshans, Indra, Nasatyas, command that ample wealth with horses be sent to men for their enrichment.

## ಮೂವತ್ತೆಂಟನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತಕ್ಕೂ ಮುಂದಿನ ಎರಡು ಸೂಕ್ತಗಳಿಗೂ ದಧಿಕ್ರಾ ಎಂಬುದು ದೇವತೆಯು. ಭಾಷ್ಯಕಾರರಾದ ಸಾಯಣರು ಈ ಶಬ್ದಕ್ಕೆ ಅಶ್ವರೂಪದಿಂದಿರುವ ಅಗ್ನಿಯ ರೂಪವಿಶೇಷವೆಂದು ಅರ್ಥಮಾಡಿರುವರು. ಯಾಸ್ಕರೂ ಸಹ ಈ ದೇವತೆಗೆ ಅಶ್ವರೂಪವಿರುವುದೆಂದೇ ಹೇಳಿ ಅದರಂತೆ ಈ ಶಬ್ದಕ್ಕೆ ರೂಪನಿಷ್ಪತ್ತಿಯನ್ನು ಹೇಳಿರುವರು—

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ |
ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ ||

(ಋ. ಸಂ. ೪-೩೮-೧೦)

ಎಂಬ ಸೂಕ್ತದ ಕೊನೆಯ ಋಕ್ಕನ್ನು ಉದಾಹರಿಸಿ ಅದಕ್ಕೆ—

ಆತನೋತಿ ದಧಿಕ್ರಾಃ ಶವಸಾ ಬಲೇನಾಪಃ ಸೂರ್ಯ ಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾಃ ಶತಸಾ ವಾಜೀ ವೇಜನವಾನರ್ವೇರಣವಾನ್ ಸಂಪೃಣಕ್ತು ನೋ ಮಧುನೋದಕೇನ ವಚನಾನೀಮಾನೀತಿ ||

(ನಿ. ೧೦-೩೧)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ—ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ವಿಸ್ತರಿಸಿ ಸರ್ವತ್ರ ಹರಡುವಂತೆ ದಧಿಕ್ರಾದೇವನು ತನ್ನ ಶಕ್ತಿಯಿಂದ ದೇವಮಾನವಾದಿ ಐದುವಿಧವಾದ ಪ್ರಜೆಗಳನ್ನೂ ಆಯಾ ಪ್ರದೇಶಗಳಲ್ಲಿ ವಿಸ್ತರಿಸಿ ಹರಡಿದ್ದಾನೆ. ಸಹಸ್ರಾರು ವಿಧಗಳಲ್ಲಿಯೂ- ನೂರಾರು ರೂಪಗಳಲ್ಲಿಯೂ ದಾನಮಾಡುವವನೂ, ವೇಗಯುಕ್ತನೂ, ಅಶ್ವರೂಪದಿಂದಿರುವವನೂ ಆದ ಈ ದೇವನು ನಮ್ಮ ಈ ಸ್ತುತಿವಚನಕ್ಕೆ ಪ್ರತಿಯಾಗಿ ಮಾಧುರ್ಯಯುಕ್ತವಾದ ಫಲಗಳನ್ನು 'ಅನುಗ್ರಹಿಸಿಕೊಡಲಿ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ದಧಿಕ್ರಾಃ ಎಂಬ ಶಬ್ದಕ್ಕೆ ದಧತ್ ಕ್ರಾವತಿ ಎಂದರೆ ತನ್ನ ಮೇಲೆ ಸವಾರನನ್ನು ಧರಿಸಿ ಸಂಚರಿಸುವುದರಿಂದ ಅಶ್ವಕ್ಕೆ ದಧಿಕ್ರಾ ಎಂದು ಹೆಸರು. ಎಂದು ಈ ಶಬ್ದದ ರೂಪನಿಷ್ಪತ್ತಿಯು.

ದೇವತೆಗಳ ರಥವಾಹಕಗಳಾದ ಅಶ್ವಗಳಲ್ಲದೆ, ಕೆಲವು ಅಶ್ವಗಳನ್ನು ವೈಯಕ್ತಿಕವಾಗಿ ನಿರ್ದೇಶಿಸುವುದುಂಟು. ಇಂತಹ ವೈಶಿಷ್ಟ್ಯವುಳ್ಳ ಅಶ್ವಗಳಲ್ಲಿ ಮುಖ್ಯವಾದುದು ದಧಿಕ್ರಾ ಎಂಬುದು. ನಾಲ್ಕು ಸೂಕ್ತಗಳಲ್ಲಿ ಎಂದರೆ— ಋ. ಸಂ. ೪-೩೮, ೩೯, ೪೦; ೭-೪೪ ಗಳಲ್ಲಿ ದಧಿಕ್ರಾ ಎಂಬುದಾಗಿ ಹನ್ನೆರಡು ಸಲಗಳಲ್ಲಿ ದಧಿಕ್ರಾವನ್ ಎಂಬುದಾಗಿ ಹತ್ತು ಸಲ ಪ್ರಸ್ತಾಪವಿದೆ. ಇತರ ವೇದಗಳಲ್ಲಿ ಇದರ ಪ್ರಸ್ತಾಪವಿಲ್ಲವೇ ಇಲ್ಲವೆನ್ನಬಹುದು. ದಧಿಕ್ರಾ ಎಂಬುದು ಒಂದು ಕುದುರೆಯ ಹೆಸರೆಂಬುದಕ್ಕೆ, ನಿರುಕ್ತದಲ್ಲಿ ಇದನ್ನು ಅಶ್ವನಾಮಗಳಲ್ಲಿ ಒಂದಾಗಿ ಸೇರಿಸಿರುವುದೇ ಸಾಕ್ಷಿ (ನಿ ೧-೧೪). ಅದು ಬಹಳ ವೇಗಶಾಲಿ (೪-೩೮-೨, ೯ ; ೪-೩೯-೧) ; ಅನೇಕ ರಥಗಳ ಸಾಲಿನಲ್ಲಿ ಮೊದನೆಯ ಅಶ್ವವಾಗಿದೆ (೭-೪೪-೪) ; ರಥಗಳನ್ನು ನಾಶಮಾಡುತ್ತದೆ. ಮತ್ತು ವಾಯುವೇಗದಿಂದ ಓಡುತ್ತದೆ (೪-೩೮-೩). ಅದರ ವೇಗವನ್ನು ಜನರೆಲ್ಲರೂ ಪ್ರಶಂಸಿಸುತ್ತಾರೆ (೪-೩೮-೯, ೩). ರಸ್ತೆಗಳ ತಿರುವುಗಳಲ್ಲಿಯೂ ಧಾವಿಸುತ್ತದೆ (೪-೪೦-೪). ಇದಕ್ಕೆ ರೆಕ್ಕೆಗಳೂ ಉಂಟು. ಅದು ಪಕ್ಷಿಯಂತೆ ಇದೆ. ಮತ್ತು ಆದರ ಪಕ್ಷಗಳು ಒಂದು ಪಕ್ಷಿಯ ಅಥವಾ ಶ್ಯೇನಪಕ್ಷಿಯ ಪಕ್ಷಗಳಿಗೆ ಹೋಲಿಸಲ್ಪಟ್ಟವೆ (೪-೪೦-೨, ೩). ಮೇಲಿನಿಂದ ಬಂದು ಬೀಳುವ ಶ್ಯೇನಪಕ್ಷಿಗೆ ಹೋಲಿಸಿದೆ. ಮತ್ತು ಶ್ಯೇನವೆಂದೇ ಕರೆಯಲ್ಪಟ್ಟದೆ (೪-೩೮-೫, ೨). ೪-೪೦-೫ರಲ್ಲಿ, ಬೆಳಕಿನಲ್ಲಿ ವಾಸಿಸುವ ಹಂಸ, ಅಂತರಿಕ್ಷದಲ್ಲಿರುವ ವಸು, ವೇದಿಕೆಯ ಮೇಲೆ ಆಸೀನನಾಗಿರುವ ಹೋತೃ, ಮನೆಯಲ್ಲಿ ಸುಖವಾಗಿ ಆಸೀನನಾಗಿರುವ ಅತಿಥಿ—ಮೊದಲಾಗಿ ಅಗ್ನಿಗೆ ಅನ್ವಯಿಸುವ ವಿಶೇಷಣಗಳಿಂದ, ಈ ಅಶ್ವವು ವರ್ಣಿತವಾಗಿದೆ.

ದಧಿಕ್ರನೂ ಒಬ್ಬ ವೀರ, ದಸ್ಯುಗಳನ್ನು ಹೊಡೆಯುತ್ತಾನೆ ಮತ್ತು ಜಯಶಾಲಿಯಾಗುತ್ತಾನೆ. (೪-೩೮-೧, ೨, ೩, ೭). ಸಹಸ್ರಾರು ಜನಗಳನ್ನೆದುರಿಸಿ ಯುದ್ಧಮಾಡುವಾಗ, ಶತ್ರುಗಳು ಅವನಿಗೆ ಹೆದರುತ್ತಾರೆ; ಯುದ್ಧಗಳಲ್ಲಿ ಕೊಳ್ಳೆಹೊಡೆಯುತ್ತಾನೆ; ಯುದ್ಧಗಳಲ್ಲಿ ನಾನಾಪಂಗಡಗಳು ಅವನನ್ನುದ್ದೇಶಿಸಿ ಕೂಗಿಕೊಳ್ಳುತ್ತವೆ (೪-೩೮-೮, ೫, ೪). ಒಂದು ಹಾರವನ್ನು ಧರಿಸಿಕೊಂಡು, ಧೂಳನ್ನೆಬ್ಬಿಸುತ್ತಾ, ತನ್ನ ಹುಬ್ಬುಗಳ ಮೇಲಿಂದ ಅದು ಉದುರುತ್ತದೆ. (೪-೩೮-೬, ೭). ಆದು ಎಲ್ಲಾ ಪಂಗಡಗಳಿಗೂ ಸೇರಿದೆ; ತನ್ನ ಸಾಮರ್ಥ್ಯದಿಂದ ಐದು ಪಂಗಡಗಳನ್ನೂ, ಸೂರ್ಯನು ತನ್ನ ತೇಜಸ್ಸಿನಿಂದ ನೀರನ್ನಾವರಿಸುವಂತೆ, ಆವರಿಸಿಕೊಂಡಿದೆ (೪-೩೮-೨, ೧೦, ೪). ಜಯಶಾಲಿಯಾದ ಈ ಅಶ್ವವನ್ನು ಮಿತ್ರಾವರುಣರು ಪೂರುಗಳಿಗೆ ಕೊಟ್ಟರು (೪-೩೯-೨ ; ೪-೩೮-೧, ೨ಗಳನ್ನು ಹೋಲಿಸಿ) ; ಮನುಷ್ಯನ ಅನುಗ್ರಹಾರ್ಥವಾಗಿ ಅವರು ದಧಿಕ್ರಾ ಎಂಬ ಅಶ್ವವನ್ನು ಕೊಟ್ಟರು.

ಅರುಣೋದಯಕಾಲದಲ್ಲಿ ಅಗ್ನ್ಯುದ್ದೀಪನಮಾಡುವಾಗ, ದಧಿಕ್ರಾವನ್ ಎಂಬ ಅಶ್ವವನ್ನು ಸ್ತುತಿಸುತ್ತಾರೆ. (೭-೪೧-೬) ಉಷೋದೇವಿಯ ಜೊತೆಯಲ್ಲಿ ಅವನೂ ಆಹೂತನಾಗಿದ್ದಾನೆ. (೪-೩೯-೧ ; ೪-೪೦-೧) ದಧಿಕ್ರಾವ

ನಂತೆ ಯಜ್ಞಾಭಿಮುಖರಾಗಬೇಕೆಂದು ಉಷೋದೇವಿಯನ್ನು ಪ್ರಾರ್ಥಿಸಿದೆ (೭-೪೧-೬). ನಿಯತವಾಗಿ ಉಷೋದೇವಿ ಯೊಡನೆ, ಅಷ್ಟೇ ಸಲ ಅಗ್ನಿಯೊಡನೆ ಮತ್ತು ಅಶ್ವಿನೀದೇವತೆಗಳು, ಸೂರ್ಯ ಮತ್ತು ಇತರ ದೇವತೆಗಳೊಡನೆ ಕೆಲವು ಸಲವೂ ಸ್ತುತನಾಗಿದ್ದಾನೆ (೩-೨೦-೧, ೫ ; ೭-೯೪-೧ರಿಂದ ೪ ; ೧೦-೧೦೧-೧); ಆದರೆ ದಧಿಕ್ರಾವನಿಗೇ ಮೊದಲನೆಯ ಆಹ್ವಾನ (೭-೪೪-೧).

ಪದದ ನಿಷ್ಪತ್ತಿಯಿಂದ, ಈ ಅಶ್ವದ ಸ್ವಭಾವ ಮತ್ತು ಲಕ್ಷಣಗಳು ಏನೂ ತಿಳಿದು ಬರುವುದಿಲ್ಲ. ಪದದ ಉತ್ತರ ಭಾಗಕ್ಕೆ (ಕ್ರಾ) ಚದುರಿಸುವ ಎಂದರ್ಥವಾಗಬಹುದು; ಎಂದರೆ ದಧಿಯನ್ನು—ಸೂರ್ಯೋದಯ ಕಾಲದಲ್ಲಿ ಕಂಡುಬರುವ ಹಿಮವನ್ನು—ಚದುರಿಸುವವನು ಎಂದಾಗಬಹುದು. ಉದಿಸುತ್ತಿರುವ ಸೂರ್ಯನ ಮಂಡಲವೇ ದಧಿಕ್ರನಿರ ಬಹುದೆಂದು ಕೆಲವರ ಅಭಿಪ್ರಾಯ. ದಧಿಕ್ರನಿಗೆ ವಿಶೇಷ ಸಂಬಂಧವಿರುವುದು ಉಷೋದೇವಿಯೊಡನೆ; ಸೂರ್ಯನಿಗೂ ಅಶ್ವ ಅಥವಾ ಪಕ್ಷಿಯೆಂದು ಅನೇಕವೇಳೆ ಹೆಸರಿದೆ. ಮತ್ತು ಅವನು ಯೋಧನ ಸ್ವಭಾವವುಳ್ಳವನೆಂದು ಒಂದೊಂದು ಕಡೆ ಉಕ್ತವಾಗಿದೆ. ಇವುಗಳಿಂದಲೂ, ದಧಿಕ್ರನು ಸೂರ್ಯಮಂಡಲವೇ ಇರಬಹುದೆಂದು ಹೇಳಬಹುದು. ದಧಿಕ್ರನು ಅಗ್ನಿಯ ರೂಪವಿಶೇಷವೆಂದೂ ಕೆಲವರ ಅಭಿಪ್ರಾಯ. ಸಾಯಣರೂ ಇದನ್ನೇ ಅನುಮೋದಿಸಿದಾರೆ. ಮತ್ತೆ ಕೆಲವರು ಇದು ದೇವತೆಯೇ ಅಲ್ಲ, ಒಂದು ಉತ್ತಮಾಶ್ವ ಎನ್ನುತ್ತಾರೆ.

ದಧ್ಯಂಚ ಮತ್ತು ದಧಿಕ್ರ, ಈ ಎರಡು ಹೆಸರುಗಳಲ್ಲಿಯೂ ಒಂದು ಸಾಮ್ಯವಿದೆ ಮತ್ತು ದಧ್ಯಂಚನಿಗೂ ಅಶ್ವ ಶಿರಸ್ಸಾದುದರಿಂದ, ಸ್ವಭಾವದಲ್ಲಿಯೂ ಇಬ್ಬರಿಗೂ ಸಾಮ್ಯವಿರಬಹುದು.

---

॥ ಸಾಯಣಭಾಷ್ಯಂ ॥

**ಉತೋ ಹಿ ವಾಮಿತಿ ದಶರ್ಚಂ ಷಷ್ಠಂ ಸೂಕ್ತಂ । ವಾಮದೇವ ಋಷಿಃ । ತ್ರಿಷ್ಟುಪ್ ಛಂದಃ । ದಧಿಕ್ರಾ ದೇವತಾ । ಆದ್ಯಾ ದ್ಯಾವಾಪೃಥಿವ್ಯಾ । ಅತ್ರಾನುಕ್ರಮಣಿಕಾ । ಉತೋ ಹಿ ದಶ ದಾಧಿಕ್ರಂ ಹಿ ದ್ಯಾವಾಪೃಥಿವ್ಯಾದ್ಯೇತಿ । ವಿನಿಯೋಗೋ ಲೈಂಗಿಕಃ ॥**

ಅನುವಾದವು—ಉತೋ ಹಿ ವಾಂ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ದಧಿಕ್ರಾ ದೇವತೆಯು; ತ್ರಿಷ್ಟುಪ್ ಛಂದಸ್ಸು. ಈ ಸೂಕ್ತದ ಮೊದಲನೆಯ ಋಕ್ಕು ದ್ಯಾವಾಪೃಥಿವೀದೇವತಾಕವು. ಅನುಕ್ರಮಣಿಕೆಯಲ್ಲಿ—ಉತೋ ಹಿ ದಶ ದಾಧಿಕ್ರಂ ಹಿ ದ್ಯಾವಾಪೃಥಿವ್ಯಾದ್ಯಾ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೮

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೮ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೧೧, ೧೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ವಾಮದೇವಃ ॥
॥ ದೇವತಾ—೧. ದ್ಯಾವಾಪೃಥಿವ್ಯಾ । ೨-೧೦. ದಧಿಕ್ರಾಃ ॥
॥ ಛಂದಃ—ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಉತೋ ಹಿ ವಾಂ ದಾತ್ರಾ ಸಂತಿ ಪೂರ್ವಾ ಯಾ ಪೂರುಭ್ಯಸ್ತ್ರಸದಸ್ಯುರ್ನಿತೋಶೇ ।
ಕ್ಷೇತ್ರಾಸಾಂ ದದಥುರುರ್ವರಾಸಾಂ ಘನಂ ದಸ್ಯುಭ್ಯೋ ಅಭಿಭೂತಿಮುಗ್ರಂ ॥

॥ ಪದಪಾಠಃ ॥

ಉತೋ ಇತಿ । ಹಿ । ವಾಂ । ದಾತ್ರಾ । ಸಂತಿ । ಪೂರ್ವಾ । ಯಾ । ಪೂರುಽಭ್ಯಃ । ತ್ರಸದಸ್ಯುಃ । ನಿಽತೋಶೇ ।
ಕ್ಷೇತ್ರಽಸಾಂ । ದದಥುಃ । ಉರ್ವರಾಽಸಾಂ । ಘನಂ । ದಸ್ಯುಽಭ್ಯಃ । ಅಭಿಽಭೂತಿಂ । ಉಗ್ರಂ ॥ ೧ ॥

॥ ಸಾಯಣಭಾಷ್ಯಂ ॥

ಉತೋ ಇತಿ ಪೂರಣಃ । ಅಸ್ಯಾ ದ್ಯಾವಾಪೃಥಿವ್ಯತ್ವಾದತ್ರ ತದ್ವಾಚಕಶಬ್ದಾಭಾವೇಽಪಿ ತೇ ಏವ ಸಂಬೋಧ್ಯೇತೇ । ಹೇ ದ್ಯಾವಾಪೃಥಿವ್ಯೌ ವಾಂ ಯುವಾಭ್ಯಾಂ ಸಕಾಶಾದ್ದಾತ್ರಾ ದಾನಕರ್ತ್ರಾ ಪೌರುಕುತ್ಸೇನ ತ್ರಸದಸ್ಯುನಾ ಲಬ್ಧಾನಿ ಪೂರ್ವಾ ಪೂರ್ವಾಣಿ ಪುರಾತನಾನಿ ಪೂರಕಾಣಿ ವಾ ಧನಾನಿ ಸಂತಿ । ಯಾ ಯಾನಿ ಧನಾನಿ ಪೂರುಭ್ಯೋಽರ್ಥಿಭ್ಯೋ ಮನುಷ್ಯೇಭ್ಯಸ್ತ್ರಸದಸ್ಯೂ ರಾಜಾ ನಿತೋಶೇ । ನ್ಯತೋಶತ । ದತ್ತವಾನ್ । ಕ್ಷೇತ್ರಸಾಂ । ಕ್ಷೇತ್ರಾಣಿ ಸರ್ವಾ ಭೂವಿಮಿಃ ಸನೋತೀತಿ ಕ್ಷೇತ್ರಸಾ ಅಶ್ವಃ । ತಂ ದದಥುಃ । ತಥೋರ್ವರಾಸಾಂ । ಉರ್ವರಾ ಸರ್ವಸಸ್ಯಾಢ್ಯಾ ಭೂಃ । ತಾಂ ಸನೋತೀತ್ಯುರ್ವರಾಸಾಃ ಪುತ್ರಃ । ತಂ ದದಥುಃ । ಘನಂ ಹನನಾರ್ಹಮಾಯುಧಂ ದಸ್ಯುಭ್ಯೋ ದಸ್ಯೂನಾಂ ವಧಾರ್ಥಂ ಚ ದದಥುಃ । ಕೀದೃಶಮಾಯುಧಂ । ಅಭಿಭೂತಿಮಭಿಭವಿತಾರಮುಗ್ರಮುದ್ಗೂರ್ಣಬಲಂ । ಯದ್ವಾ । ಉತ್ತರಾರ್ಧಮೇಕಂ ವಾಕ್ಯಂ । ದಾತವ್ಯಾನಿ ಧನಾನ್ಯುಕ್ತಲಕ್ಷಣಂ ಪುತ್ರಂ ಚ ದದಥುಃ । ದತ್ತವತ್ಯೌ ಸ್ಥಃ । ತಾನಿ ಮಹ್ಯಮಪಿ ದದಾಥಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ದ್ಯಾವಾಪೃಥಿವಿಗಳೇ) । ವಾಂ—ನಿಮ್ಮ ಅನುಗ್ರಹದಿಂದ । ದಾತ್ರಾ—ದಾನಿಯಾದ ತ್ರಸದಸ್ಯುವಿನಿಂದ ಲಬ್ಧವಾದ । ಪೂರ್ವಾ—ಅನೇಕವಿಧವಾದ ಧನಗಳು । ಸಂತಿ—ಇವೆ । ಯಾ—ಯಾವ ಆದೇ ಧನಗಳನ್ನು । ಪೂರುಭ್ಯಃ—ಅನೇಕ ಅರ್ಥಿಗಳಿಗೆ । ತ್ರಸದಸ್ಯುಃ—ತ್ರಸದಸ್ಯುನಾಮಕನಾದ ರಾಜನು । ನಿತೋಶೇ—ದಾನಮಾಡಿದನು (ನೀವು ಅವನಿಗೆ) । ಕ್ಷೇತ್ರಸಾಂ—ಅಶ್ವವನ್ನೂ । ಉರ್ವರಾಸಾಂ—ಪುತ್ರನನ್ನೂ । ಅಭಿಭೂತಿಂ -ಶತ್ರುದರ್ಶಕವಾದುದೂ । ಉಗ್ರಂ—ಭಯಂಕರವಾದ ಬಲವುಳ್ಳದ್ದೂ । ಘನಂ—ವಧಸಾಧನವಾದುದೂ ಆದ ಆಯುಧವನ್ನೂ । ದಸ್ಯುಭ್ಯಃ—ದಸ್ಯುಗಳ ನಾಶಕ್ಕಾಗಿ । ದದಥುಃ—ಕೊಟ್ಟದ್ದೀರಿ

॥ ಭಾವಾರ್ಥ ॥

ಎಲೈ ದ್ಯಾವಾಪೃಥಿವಿಗಳೇ, ನಿಮ್ಮ ಅನುಗ್ರಹದಿಂದ ದಾನಿಯಾದ ತ್ರಸದಸ್ಯುವೆಂಬ ರಾಜನು ಅನೇಕವಿಧವಾದ ಧನಗಳನ್ನು ಪಡೆದನು. ಮತ್ತು ಅವುಗಳನ್ನೆಲ್ಲಾ, ಅವನು ಅನೇಕ ಅರ್ಥಿಗಳಿಗೆ ದಾನಮಾಡಿದನು. ನೀವು ಅವನಿಗೆ ಅಶ್ವವನ್ನೂ, ಪುತ್ರನನ್ನೂ, ಮತ್ತು ದಸ್ಯುಗಳ ನಾಶಕ್ಕಾಗಿ ಶತ್ರುಧರ್ಷಕವಾದುದೂ, ಭಯಂಕರವಾದ ಬಲವುಳ್ಳದ್ದೂ, ವಧಸಾಧನವಾದದ್ದೂ ಆದ ಆಯುಧವನ್ನೂ ಕೊಟ್ಟದ್ದೀರಿ. (ನಮಗೂ ಅವೆಲ್ಲವನ್ನೂ ಅನುಗ್ರಹಿಸಿ).

English Translation.

Trasadasyu has bestowed upon many the ancient (gifts) which were obtained by the liberal (prince) through your (favour, Heaven and Earth) you two have given a horse, a son, a weapon (for the destruction) of the Dasyus, fierce and foe-subduing.

॥ ವಿಶೇಷವಿಷಯಗಳು ॥

ತ್ರಸದಸ್ಯುಃ—ತ್ರಸದಸ್ಯು ಎಂಬುವನು ಪೂರುಗಳೆಂಬ ಜನಾಂಗದ ರಾಜನಾದ ಪುರುಕುತ್ಸ ಎಂಬುವನ ಮಗನೆಂದು ಋಗ್ವೇದದ ಈ ಋಕ್ಕಿನಲ್ಲಿಯೂ—

ಪ್ರ ಪೌರುಕುತ್ಸಿಂ ತ್ರಸದಸ್ಯುಮಾವಃ ಕ್ಷೇತ್ರಸಾತಾ ವೃತ್ರಹತ್ಯೇಷು ಪೂರುಂ ।

(ಋ. ಸಂ. ೭-೧೯-೩)

ಎಂಬ ಋಕ್ಕಿನಲ್ಲಿಯೂ ಹೇಳಿದೆ. ಮೇಲಿನ ಉದಾಹರಣೆಯಲ್ಲಿ ಇವನನ್ನು ಇಂದ್ರನು ರಕ್ಷಿಸಿದನೆಂಬ ವಿಷಯವೂ ಸೂಚಿತವಾಗಿದೆ. ಇದಲ್ಲದೆ ಇವನಿಗೆ ಇಂದ್ರನು ಸಹಾಯಮಾಡಿದ ವಿಷಯವು, ಋ. ಸಂ ೧-೬೩-೭; ೮-೩೬-೭; ೮-೩೭-೭; ೮-೪೯-೧೦; ಎಂಬ ಋಕ್ಕುಗಳಲ್ಲಿಯೂ ಸೂಚಿತವಾಗಿರುವುದಲ್ಲದೆ. ಅಶ್ವಿನೀದೇವತೆಗಳು ಇವನನ್ನು ರಕ್ಷಿಸಿ ಕಾಪಾಡಿದ ವಿಷಯವು ಋ. ಸಂ. ೧-೧೧೨-೭; ೮-೮-೨೧ ಎಂಬ ಋಕ್ಕುಗಳಲ್ಲಿ ಉಕ್ತವಾಗಿದೆ. ಮತ್ತು—

ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗಹೇ ಬಧ್ಯಮಾನೇ ।
ತ ಆಯಜಂತ ತ್ರಸದಸ್ಯುಮಸ್ಯಾ ಇಂದ್ರಂ ನ ವೃತ್ರತುರಮರ್ಧದೇವಂ ॥
ಪುರುಕುತ್ಸಾನೀ ಹಿ ವಾಮದಾಶದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।
ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಂ ॥

(ಋ. ಸಂ. ೪-೪೨-೮, ೯)

ಎಂಬ ಋಕ್ಕುಗಳಲ್ಲಿ—ಪುರುಕುತ್ಸನು ಬಂಧಿತನಾದುದರಿಂದ ಅರಾಜಕವಾದ ಈ ದೇಶದಲ್ಲಿ ಪ್ರಸಿದ್ಧರಾದ ಸಪ್ತಋಷಿಗಳು ಸಹ ಪಾಲಕರಾದರು. ಪುರುಕುತ್ಸನು ಬಂಧಿತನಾದಾಗ ಅದೇ ಋಷಿಗಳು ಇಂದ್ರಾವರುಣರ ಅನುಗ್ರಹದಿಂದ ಪುರುಕುತ್ಸನ ಪತ್ನಿಯಾದ ಪುರುಕುತ್ಸಾನೀ ಎಂಬುವಳಲ್ಲಿ ಇಂದ್ರನಿಗೆ ಸಮಾನನಾದ ಶತ್ರುನಾಶಕನೂ, ದೇವತೆಗಳ ಸಾನ್ನಿಧ್ಯವುಳ್ಳವನೂ ಆದ ತ್ರಸದಸ್ಯುವನ್ನು ಉತ್ಪನ್ನವಾಗುವಂತೆ ಮಾಡಿದರು. ಎಲೈ ಇಂದ್ರಾವರುಣರೇ,

ಪುರುಕುತ್ಸನ ಪತ್ನಿಯು ನಿಮ್ಮಿಬ್ಬರನ್ನೂ ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ಪೂಜಿಸಿ ತೃಪ್ತಿಪಡಿಸಿದಳಲ್ಲವೇ ? ಆದರ ಫಲವಾಗಿ ನೀವು ಅವಳಿಗೆ ಶತ್ರುನಾಶಕನೂ ದೇವತೆಗಳ ಸಾನ್ನಿಧ್ಯದಲ್ಲಿರುವವನೂ, ಪ್ರಭುವಾಗಲು ಅರ್ಹನೂ ಆದ ತ್ರಸದಸ್ಯುವೆಂಬ ಪುತ್ರನನ್ನು ಅನುಗ್ರಹಿಸಿ ಕೊಟ್ಟದ್ದೀರಿ ಎಂದು ಈ ಮಂಡಲದ್ರಷ್ಟೃವಾದ ವಾಮದೇವಋಷಿಯೇ ಹೇಳಿದಾನೆ. ಮೇಲಿನ ಉದಾಹರಣೆಯಲ್ಲಿ ಈ ತ್ರಸದಸ್ಯುವೂ ಇವನ ತಂದೆ ಪುರುಕುತ್ಸನೂ ಸಹ ಗಿರಿಕ್ಷಿತ್ ಮತ್ತು ದುರ್ಗಹ ಎಂಬುವರ ವಂಶಸ್ಥರೆಂದು ಹೇಳಲಾಗಿದೆ. ಆದ್ದರಿಂದ ದುರ್ಗಹ, ಗಿರಿಕ್ಷಿತ್, ಪುರುಕುತ್ಸ, ತ್ರಸದಸ್ಯು ಎಂದು ಇವರ ಸಂತತಿಯ ಕ್ರಮವು. ತ್ರಸದಸ್ಯುವಿನ ವಂಶದಲ್ಲಿ ತೃಕ್ಷಿ ಎಂಬುವನಿದ್ದನೆಂದು—

ಯೇಭಿಸ್ತೃಕ್ಷಿಂ ವೃಷಣಾ ತ್ರಾಸದಸ್ಯವಂ ಮಹೇ ಕ್ಷತ್ರಾಯ ಜಿನ್ವಥಃ ।

(ಋ ಸಂ. ೮–೨೨–೭)

ಎಂಬ ಋಕ್ಕಿನಲ್ಲಿ ಉಕ್ತವಾಗಿದೆ. ಇವನು ಪೂರುವಂಶದವನೆಂದು—

ಯದ್ವಾ ತೃಕ್ಷಾ ಮಘವನ್ ದ್ರುಹ್ಯಾವಾ ಜನೇ ಯತ್ಪೂರೌ ಕಚ್ಚ ವೃಷ್ಣ್ಯಂ ।

(ಋ. ಸಂ. ೬–೪೬–೮)

ಎಂಬ ಋಕ್ಕಿನಲ್ಲಿಯೂ ಹೇಳಿದೆ. ತ್ರಸದಸ್ಯುವಿನ ತಂದೆಯಾದ ಪುರುಕುತ್ಸನೂ ಸುದಾಸನೆಂಬ ರಾಜನೂ ಸಮಕಾಲೀನರೆಂದೂ ಇವರಿಬ್ಬರಿಗೂ ಶತ್ರುತ್ವವಿದ್ದು ಆಗಾಗ ಯುದ್ಧವಾಗುತ್ತಿತ್ತೆಂದೂ,

ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ ಪುರೋ ವಜ್ರಿನ್ ಪುರುಕುತ್ಸಾಯ ದರ್ದಃ ।
ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ವರಿವಃ ಪೂರವೇ ಕಃ ॥

(ಋ. ಸಂ. ೧–೬೩–೭)

ಭಿನತ್ಪುರೋ ನವತಿಮಿಂದ್ರ ಪೂರವೇ ದಿವೋದಾಸಾಯ ಮಹಿ ದಾಶುಷೇ ನೃತೋ ವಜ್ರೇಣ ದಾಶುಷೇ ನೃತೋ ।

(ಋ. ಸಂ. ೧–೧೩೦–೭)

ಎಂದು ಮೊದಲಾದ ಋಕ್ಕುಗಳಲ್ಲಿರುವ ವಿಷಯಗಳಿಂದ ಕೆಲವು ಪಂಡಿತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ತ್ರಸದಸ್ಯುವು ಪೂರು ಎಂಬ ಜನಾಂಗಕ್ಕೆ ರಾಜನೆಂದು ಹಿಂದೆಯೇ ಹೇಳಿದೆಯಷ್ಟೆ. ಈ ಪೂರು ಜನಾಂಗದವರು ಸರಸ್ವತೀ ನದಿಯ ತೀರಪ್ರದೇಶಗಳಲ್ಲಿ ನೆಲಸಿದ್ದರೆಂದು ೭ನೆಯ ಮಂಡಲದ ೯೫, ೯೬ ನೇ ಸೂಕ್ತಗಳಲ್ಲಿರುವ ವಿವರಣೆಗಳಿಂದ ತಿಳಿದುಬರುವುದು. ಈ ಪೂರು ಜನಾಂಗದವರೂ, ಕುರುಜನಾಂಗದವರೂ ಕಾಲಕ್ರಮೇಣ ಒಂದಾಗಿ ಸೇರಿದರೆಂದು ಊಹಿಸಬಹುದು ಏಕೆಂದರೆ—

ಕುರುಶ್ರವಣಮಾವೃಣಿ ರಾಜಾನಂ ತ್ರಾಸದಸ್ಯವಂ । ಮಂಹಿಷ್ಠಂ ವಾಘತಾಮೃಷಿಃ ।

(ಋ. ಸಂ. ೧೦–೩೩–೪)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಮಿತ್ರಾತಿಥಿಯ ಮಗನಾದ ಕುರುಶ್ರವಣನೆಂಬ ಕುರುವಂಶದ ರಾಜನು ತ್ರಸದಸ್ಯುವಿನ ವಂಶಸ್ಥನೆಂದು ವ್ಯಕ್ತಪಡುವುದು.

ಈ ಪುರುಕುತ್ಸನ ಮಗನಾದ ತ್ರಸದಸ್ಯುವೂ, ಪರ ಆಟ್ಣಾರ, ವೀತಿಹವ್ಯ ಶ್ರಾಯಸ, ಕಕ್ಷೀವಾನ್, ಔಶಿಜ ಎಂಬುವರೂ ಯಜ್ಞಾದಿಗಳನ್ನು ಮಾಡಿ ಪ್ರಸಿದ್ಧರಾಗಿದ್ದರೆಂದು ಸಾವಿರಾರು ಪುತ್ರರನ್ನು ಪಡೆದರೆಂದೂ ತೈ. ಸಂ. ೫-೬-೩-೩; ಪಂಚವಿಂಶ ಬ್ರಾಹ್ಮಣ ೧೫-೧೬; ಕಾಠಕಸಂಹಿತಾ ೧೨-೩ ಇತ್ಯಾದಿ ಸ್ಥಳಗಳಲ್ಲಿ ವಿವರಣೆಗಳಿವೆ.

ಪುರುಕುತ್ಸನಾದ ಈ ತ್ರಸದಸ್ಯುವೆಂಬ ರಾಜನು ಋಷಿಯೆಂದೂ ಪ್ರಸಿದ್ಧನಾಗಿದಾನೆ. ಋ. ಸಂ. ೪ನೆಯ ಮಂಡಲದಲ್ಲಿ ೪೨ ನೆಯ ಸೂಕ್ತಕ್ಕೂ (೧೦ ಋಕ್ಕುಗಳು), ೫ ನೆಯ ಮಂಡಲದ ೨೭ ನೆಯ ಸೂಕ್ತಕ್ಕೂ (೬ ಋಕ್ಕುಗಳು), ೯ ನೇ ಮಂಡಲದ ೧೧೦ ನೆಯ ಸೂಕ್ತಕ್ಕೂ (೧೨ ಋಕ್ಕುಗಳೂ) ಒಟ್ಟು ೨೮ ಋಕ್ಕುಗಳಿಗೆ ಋಷಿಯಾಗಿದಾನೆ.



॥ ಸಂಹಿತಾಪಾಠಃ ॥

ಉತ ವಾಜಿನಂ ಪುರುನಿಷ್ಷಿಧ್ವಾನಂ ದಧಿಕ್ರಾಮು ದದಥುರ್ವಿಶ್ವಕೃಷ್ಟಿಂ ।
ಋಜಿಪ್ಯಂ ಶ್ಯೇನಂ ಪ್ರುಷಿತಪ್ಸುಮಾಶುಂ ಚರ್ಕೃತ್ಯಮರ್ಯೋ ನೃಪತಿಂ ನ
ಶೂರಂ ॥ ೨ ॥

॥ ಪದಪಾಠಃ ॥

ಉತ । ವಾಜಿನಂ । ಪುರುನಿಃಽಸಿಧ್ವಾನಂ । ದಧಿಽಕ್ರಾಂ । ಊಂ ಇತಿ । ದದಥುಃ । ವಿಶ್ವಽಕೃಷ್ಟಿಂ ।
ಋಜಿಪ್ಯಂ । ಶ್ಯೇನಂ । ಪ್ರುಷಿತಽಪ್ಸುಂ । ಆಶುಂ । ಚರ್ಕೃತ್ಯಂ । ಅರ್ಯಃ । ನೃಽಪತಿಂ । ನ । ಶೂರಂ ॥

॥ ಸಾಯಣಭಾಷ್ಯಂ ॥

ಉತಾಪಿ ಚ ವಾಜಿನಂ ಗಮನವಂತಂ । ಅಶ್ವರೂಪಂ ವಾ ದೇವಂ ಅಗ್ನೇರಶ್ವರೂಪಸ್ಯೈವ ದಧಿಕ್ರಾಖ್ಯತ್ವಾತ್ । ಅಗ್ನೇಸ್ತದ್ರೂಪತ್ವಂ ಬ್ರಾಹ್ಮಣೇ ಸಮಾಮ್ನಾತಂ । ತಾನಗ್ನಿ ರಶ್ವೋ ಭೂತ್ವಾಭ್ಯದ್ರವ-ದಿತಿ । ಪುರುನಿಷ್ಷಿಧ್ವಾನಂ ಪುರೂಣಾಂ ಬಹೂನಾಂ ಶತ್ರೂಣಾಂ ನಿಷ್ಷೇದ್ಧಾರಂ ದಧಿಕ್ರಾಂ । ದಧದನ್ಯಂ ಧಾರಯನ್ ಕ್ರಾಮತೀತಿ ದಧಿಕ್ರಾಃ । ತಮೇತನ್ನಾಮಕಂ ದೇವಂ । ಉಃ ಪೂರಣಃ । ವಿಶ್ವಕೃಷ್ಟಿಂ । ವಿಶ್ವಾಃ ಕೃಷ್ಟಯೋ ರಕ್ಷಣೀಯಾಃ ಸೇವಕಾ ವಾ ಮನುಷ್ಯಾ ಯಸ್ಯ ತಂ । ಋಜಿಪ್ಯಂ । ಋಜ್ವಾಪ್ನೋತಿ ಗಚ್ಛತೀತ್ಯೃಜಿಪ್ಯಃ । ತಂ ಶ್ಯೇನಂ ಶಂಸನೀಯಗಮನಂ ಪ್ರುಷಿತಪ್ಸುಂ ದೀಪ್ತರೂಪಮಾಶುಂ ವ್ಯಾಪ್ತಂ ಶೀಘ್ರಗಮನಂ ವಾಯೋರ್ಽರೇಶ್ಚರ್ಕೃತ್ಯಂ ಕರ್ತನಶೀಲಂ ಶೂರಂ ನೃಪತಿಂ ನ ರಾಜಾನಮಿವ ಸ್ಥಿತಂ ದೇವಂ ದ್ಯಾವಾಪೃಥಿವ್ಯೌ ದದಥುಃ । ಧಾರಯತಃ ॥

॥ ಪ್ರತಿಪದಾರ್ಥ ॥

(ಎಲೈ ದ್ಯಾವಾಪೃಥಿಗಳೇ, ನೀವು) । ವಾಜಿನಂ—ಅಶ್ವರೂಪವುಳ್ಳವನೂ । ಪುರುನಿಷ್ಷಿಧ್ವಾನಂ—ಅನೇಕ ಶತ್ರುಗಳನ್ನು ನಿರೋಧಿಸುವವನೂ । ವಿಶ್ವಕೃಷ್ಟಿಂ—ಸಕಲಪ್ರಜೆಗಳ ರಕ್ಷಕನೂ । ಋಜಿಪ್ಯಂ—ನೇರವಾದ ಸಂಚಾರವುಳ್ಳವನೂ । ಶ್ಯೇನಂ—ಪ್ರಶಂಸಿತವಾದ ಗಮನವುಳ್ಳವನೂ । ಪ್ರುಷಿತಪ್ಸುಂ—ಪ್ರಕಾಶಮಾನವಾದ ರೂಪವುಳ್ಳವನೂ । ಆಶುಂ—ಶೀಘ್ರಗಾಮಿಯೂ । ಶೂರಂ—ಪರಾಕ್ರಮಿಯಾದ । ನೃಪತಿಂ ನ—ರಾಜನಂತೆ । ಅರ್ಯಃ—ಶತ್ರುವಿನ (ಶಿರಸ್ಸನ್ನು) । ಚರ್ಕೃತ್ಯಂ—ಕತ್ತರಿಸುವವನೂ ಆದ । ದಧಿಕ್ರಾಂ—ದಧಿಕ್ರಾನಾಮಕದೇವನನ್ನು । ದದಥುಃ—ಧರಿಸಿದ್ದೀರಿ.

॥ ಭಾವಾರ್ಥ ॥

ಎಲೈ ದ್ಯಾವಾಪೃಥಿವಿಗಳೇ, ನೀವು, ಅಶ್ವರೂಪವುಳ್ಳವನೂ, ಅನೇಕಶತ್ರುಗಳನ್ನು ನಿರೋಧಿಸುವವನೂ, ಸಕಲಪ್ರಜೆಗಳ ರಕ್ಷಕನೂ, ನೇರವಾದ ಸಂಚಾರವುಳ್ಳವನೂ, ಪ್ರಶಂಸಿತವಾದ ಗಮನವುಳ್ಳವನೂ, ಪ್ರಕಾಶಮಾನವಾದ ರೂಪವುಳ್ಳವನೂ, ಶೀಘ್ರಗಾಮಿಯೂ, ಪರಾಕ್ರಮಿಯಾದ ರಾಜನಂತೆ ಶತ್ರುವಿನ ಶಿರಸ್ಸನ್ನು ಕತ್ತರಿಸುವವನೂ ಆದ ದಧಿಕ್ರಾನಾಮಕದೇವನನ್ನು ಧರಿಸಿದ್ದೀರಿ.

## English Translation.

And you two have given the swift Dadhikra, the repeller of many (foes), the defender of all men, the straight-going, the gracefull-moving, the destroyer of enemies like a heroic prince.



॥ ಸಂಹಿತಾಪಾಠಃ ॥

ಯಂ ಸೀಮನು ಪ್ರವತೇವ ದ್ರವಂತಂ ವಿಶ್ವಃ ಪೂರುರ್ಮದತಿ ಹರ್ಷಮಾಣಃ।
ಪಡ್ಭಿರ್ಗೃಧ್ಯಂತಂ ಮೇಧಯುಂ ನ ಶೂರಂ ರಥತುರಂ ವಾತಮಿವ ಧ್ರಜಂತಂ॥

॥ ಪದಪಾಠಃ ॥

ಯಂ । ಸೀಂ । ಅನು । ಪ್ರವತಾऽಇವ । ದ್ರವಂತಂ । ವಿಶ್ವಃ । ಪೂರುಃ । ಮದತಿ । ಹರ್ಷಮಾಣಃ ।
ಪಟ್ऽಭಿಃ । ಗೃಧ್ಯಂತಂ । ಮೇಧಽಯುಂ । ನ । ಶೂರಂ । ರಥಽತುರಂ । ವಾತಂऽಇವ । ಧ್ರಜಂತಂ ॥೩॥

॥ ಸಾಯಣಭಾಷ್ಯಂ ॥

ಯಂ ದಧಿಕ್ರಾಂ ವಿಶ್ವಃ ಪೂರುಃ ಸರ್ವೋऽಪಿ ಮನುಷ್ಯೋ ಹರ್ಷಮಾಣೋ ಹೃಷ್ಯನ್ ಹರ್ಷಯನ್ವಾ ಮದತಿ । ಸ್ತೌತಿ । ತಂ ದೇವಂ ದ್ಯಾವಾಪೃಥಿವ್ಯೌ ದದಥುರಿತಿ ಸಂಬಂಧಃ । ಸ ದೇವೋ

ವಿಶೇಷ್ಯತೇ । ಸೀಂ ಸರ್ವತಃ ಪ್ರವತಾ ಪ್ರವಣವತಾ ನಿಮ್ನೇನ ಮಾರ್ಗೇಣೋದಕಮಿವಾನುಕ್ರಮೇಣ ದ್ರವಂತಂ ಗಚ್ಛಂತಂ ಪಡ್ಭಿಃ ಪಾದೈರ್ಗೃಧ್ಯಂತಮಭಿಕಾಂಕ್ಷಂತಂ ದಿಶೋ ಲಂಘಿತುಂ । ತತ್ರ ದೃಷ್ಟಾಂತಃ । ಮೇಧಯುಂ ನ ಶೂರಂ । ಸಂಗ್ರಾಮೇಚ್ಛುಂ ಶೂರಮಿವ । ಯದ್ವಾ । ಯಜ್ಞಕ್ರಮಣೇಚ್ಛುಮಧ್ವರ್ಯ್ವಾದಿಕಮಿವ । ರಥತುರಂ ರಥೇನ ಗಚ್ಛಂತಂ ವಾತಮಿವ ಧ್ರಜಂತಂ ಶೀಘ್ರಗಂ ವಾಯುಮಿವ । ಉಕ್ತವಿಶೇಷವಿಶಿಷ್ಟಾನುದಕಶೂರವಾಯೂನ್ಯಥಾ ಸರ್ವೋ ಜನಃ ಸ್ತೌತಿ ತಥಾ ಯಂ ದೇವಂ ಸ್ತೌತಿ ತಂ ದದಥುರಿತ್ಯರ್ಥಃ ॥

। ಪ್ರತಿಪದಾರ್ಥ ।

ಸೀಂ—ಸುತ್ತಲೂ । ಪ್ರವತೇವ—ತಗ್ಗುಪ್ರದೇಶದಲ್ಲಿ ಹರಿಯುವ ಪ್ರವಾಹದಂತೆ । ದ್ರವಂತಂ—ಇಳಿದು ವೇಗವಾಗಿ ಬರುತ್ತಿರುವವನೂ । ಮೇಧಯುಂ—ಯುದ್ಧಕ್ಕಾಗಿ ಹೊರಡುವ । ಶೂರಂ ನ—ಶೂರನಂತೆ । ಪಡ್ಭಿಃ—ಪಾದಗಳಿಂದ । ಗೃಧ್ಯಂತಂ—ದಿಕ್ಕುಗಳನ್ನೆಲ್ಲಾ ವ್ಯಾಪಿಸಲು ಇಚ್ಛಿಸುವವನೂ । ರಥತುರಂ—ರಥದಲ್ಲಿ ಸಂಚರಿಸುವವನೂ । ವಾತಮಿವ—ವಾಯುವಿನಂತೆ । ಧ್ರಜಂತಂ—ಶೀಘ್ರಗಾಮಿಯೂ ಆದ । ಯಂ—ಯಾವ ದಧಿಕ್ರಾದೇವತೆಯನ್ನು । ವಿಶ್ವಃ—ಸಮಸ್ತವಾದ । ಪೂರುಃ—ಮಾನವರೆಲ್ಲರೂ ಸಹ । ಹರ್ಷಮಾಣಃ—ಸಂತೋಷಪಡುತ್ತಾ । ಮದತಿ—ಸ್ತುತಿಸುವರೋ (ಆ ದಧಿಕ್ರಾದೇವತೆಯನ್ನು ದ್ಯಾವಾಪೃಥಿವಿಗಳು ಧರಿಸಿದ್ದಾರೆ).

। ಭಾವಾರ್ಥ ।

ತಗ್ಗುಪ್ರದೇಶದಲ್ಲಿ ಹರಿಯುವ ಪ್ರವಾಹದಂತೆ ಸುತ್ತಲೂ ಇಳಿದು ವೇಗವಾಗಿ ಬರುತ್ತಿರುವವನೂ, ಯುದ್ಧಕ್ಕಾಗಿ ಹೊರಡುವ ಶೂರನಂತೆ ತನ್ನ ಪಾದಗಳಿಂದಲೇ ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಲಿಚ್ಛಿಸುವವನೂ, ವಾಯುವಿನಂತೆ ಶೀಘ್ರಗಾಮಿಯೂ ಆದ ಯಾವ ದಧಿಕ್ರಾದೇವತೆಯನ್ನು ಸಮಸ್ತವಾದ ಮಾನವರೆಲ್ಲರೂ ಸಹ ಸಂತೋಷದಿಂದ ಸ್ತುತಿಸುವರೋ ಆ ದಧಿಕ್ರಾ ದೇವತೆಯನ್ನು ದ್ಯಾವಾಪೃಥಿವಿಗಳು ಧರಿಸಿದ್ದಾರೆ.

English Translation.

Whom all men, rejoicing, praise, rushing everywhere, as if down a precipice, springing with his feet like a hero eager for war, drawing a car, and going as swift as the wind.

---

। ಸಂಹಿತಾಪಾಠಃ ॥

ಯಃ ಸ್ಮಾರುಂಧಾನೋ ಗಧ್ಯಾ ಸಮತ್ಸು ಸನುತರಶ್ಚರತಿ ಗೋಷು ಗಚ್ಛನ್ ।
ಆವಿರ್ಋಜೀಕೋ ವಿದಥಾ ನಿಚಿಕ್ಯತ್ತಿರೋ ಅರತಿಂ ಪರ್ಯಾಪ ಆಯೋಃ ॥

॥ ಪದಪಾಠಃ ॥

ಯಃ । ಸ್ಮ । ಆ॒ಽರು॒ಂಧಾ॒ನಃ । ಗಧ್ಯಾ । ಸ॒ಮತ್ಽಸು । ಸನುಽತರಃ । ಚರತಿ । ಗೋಷು । ಗಚ್ಛನ್ । ಆ॒ವಿಃಽಋಜೀಕಃ । ವಿ॒ದಥಾ । ನಿ॒ಽಚಿಕ್ಯತ್ । ತಿ॒ರಃ । ಅ॒ರ॒ತಿಂ । ಪರಿ । ಆಪಃ । ಆ॒ಯೋಃ ॥ ೪ ॥

॥ ಸಾಯಣಭಾಷ್ಯಂ ॥

ಯಃ ಸ್ಮ ಯಃ ಖಲು ದೇವೋ ಗಧ್ಯಾ ಗಧ್ಯಾನಿ । ಗಧ್ಯತಿರ್ಮಿಶ್ರೀಭಾವಕರ್ಮೇತಿ ನಿರುಕ್ತಂ । ೫–೧೫। ಮಿಶ್ರಯಿತವ್ಯಾನಿ ಫಲಾನಿ ಸಮತ್ಸು ಸಂಗ್ರಾಮೇಷ್ವಾರುಂಧಾನಃ ಸರ್ವತೋ ನಿರೋಧಯನ್ ಸನುತರಃ ಸಂಭಕ್ತೃತರೋ ಗೋಷು ಸರ್ವಾಸು ದಿಕ್ಷು ಗೋಷು ವಾ ನಿಮಿತ್ತಭೂತೇಷು ಗಚ್ಛನ್ನಾವಿರ್‌ಋಜೀಕ ಆವಿರ್ಭೂತಸಾಧನ ಆವಿರ್ಭೂತಮುಷ್ಕೋ ವಾ ವಿದಥಾ ವಿದಥಾನಿ ಜ್ಞಾತವ್ಯಾನಿ ನಿಚಿಕ್ಯತ್ ಪಶ್ಯತಿಕರ್ಮೈ-ತತ್ । ಜಾನನ್ ಅರತಿಮರಮಣಂ ದುಃಖಮಭಿಗಂತಾರಮರಿಂ ವಾ ಪರಿ ಸರ್ವತಸ್ತಿರಶ್ಚರತಿ । ತಿರಸ್ಕರೋತಿ । ಕಸ್ಯಾರತಿಮಿತಿ । ಆಪೋ ವ್ಯಾಪ್ತಸ್ಯ ಸ್ತೋತುರಾಯೋರ್ಮನುಷ್ಯಸ್ಯ ಯಜಮಾನಸ್ಯ ॥

॥ ಪ್ರತಿಪದಾರ್ಥ ॥

ಯಃ ಸ್ಮ—ಯಾವ ಅದೇ ದಧಿಕ್ರಾದೇವನು । ಸಮತ್ಸು—ಸಂಗ್ರಾಮಗಳಲ್ಲಿ । ಗಧ್ಯಾ—ಒಟ್ಟಿಗೆ ಮಿಶ್ರಿತವಾಗಿರುವ ಶತ್ರುಗಳನ್ನು । ಆರುಂಧಾನಃ—ನಿರೋಧಿಸುತ್ತಲೂ । ಸನುತರಃ—ಅತ್ಯಧಿಕವಾದ ಜಯವನ್ನು ಪಡೆಯುತ್ತಲೂ । ಗೋಷು—ಸಕಲದಿಕ್ಕುಗಳಲ್ಲಿಯೂ । ಗಚ್ಛನ್—ಸಂಚರಿಸುತ್ತಲೂ । ಆವಿರ್‌ಋ-ಜೀಕಃ—ಪ್ರಕಟಿತವಾದ ವೀರ್ಯವುಳ್ಳವನಾಗಿಯೂ । ವಿದಥಾ—ತಿಳಿಯಬೇಕಾದ ಪರಿಸ್ಥಿತಿಗಳನ್ನು । ನಿಚಿಕ್ಯತ್—ಪೂರ್ಣವಾಗಿ ತಿಳಿದುಕೊಳ್ಳುತ್ತಲೂ । ಆಪಃ—ಸ್ತೋತೃವಾದ । ಆಯೋಃ—ಯಜಮಾನನ । ಅರತಿಂ—ಶತ್ರುವನ್ನು । ಪರಿ—ಸುತ್ತಲೂ । ತಿರಶ್ಚರತಿ—ತಿರಸ್ಕೃತನನ್ನಾಗಿ ಮಾಡುತ್ತಾನೆ.

॥ ಭಾವಾರ್ಥ ॥

ದ್ಯಾವಾಪೃಥಿವಿಗಳಿಂದ ಅನುಗೃಹೀತನಾದ ಅದೇ ದಧಿಕ್ರಾದೇವನು, ಸಂಗ್ರಾಮಗಳಲ್ಲಿ ಒಟ್ಟಿಗೆ ಮಿಶ್ರಿತವಾಗಿರುವ ಶತ್ರುಗಳನ್ನು ನಿರೋಧಿಸುತ್ತಲೂ, ಅತ್ಯಧಿಕವಾದ ಜಯವನ್ನು ಪಡೆಯುತ್ತಲೂ, ಸಕಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಲೂ ತನ್ನ ವೀರ್ಯವನ್ನು ಪ್ರಕಟಿಸುತ್ತಲೂ, ಅರಿಯಬೇಕಾದ ಪರಿಸ್ಥಿತಿಗಳನ್ನು ಪೂರ್ಣವಾಗಿ ತಿಳಿಯುತ್ತಲೂ, ಸ್ತೋತೃವಾದ ಯಜಮಾನನ ಶತ್ರುವನ್ನು ಸುತ್ತಲೂ ತಿರಸ್ಕೃತನನ್ನಾಗಿ ಮಾಡುತ್ತಾನೆ. (ಸೋಲಿಸುತ್ತಾನೆ)

## English Translation.

Who, opposing the mingled multitude in battles, rushes eager, passing through the regions, whose vigour is mainfest, who, understanding what is to be known, puts to shame the adversary of the (pious) man.



॥ ಸಂಹಿತಾಪಾಠಃ ॥

ಉತ ಸ್ಮೈನಂ ವಸ್ತ್ರಮಥಿಂ ನ ತಾಯುಮನು ಕ್ರೋಶಂತಿ ಕ್ಷಿತಯೋ ಭರೇಷು।
ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಂ ॥ ೫ ॥

॥ ಪದಪಾಠಃ ॥

ಉತ । ಸ್ಮ । ಏನಂ । ವಸ್ತ್ರಮಥಿಂ । ನ । ತಾಯುಂ । ಅನು । ಕ್ರೋಶಂತಿ । ಕ್ಷಿತಯಃ । ಭರೇಷು ।
ನೀಚಾ । ಅಯಮಾನಂ । ಜಸುರಿಂ । ನ । ಶ್ಯೇನಂ । ಶ್ರವಃ । ಚ । ಅಚ್ಛ । ಪಶುಮತ್ । ಚ । ಯೂಥಂ ॥ ೫ ॥

॥ ಸಾಯಣಭಾಷ್ಯಂ ॥

ಉತ ಸ್ಮ ಅಪಿ ಖಲ್ವೇನಂ ದಧಿಕ್ರಾಂ ಭರೇಷು ಸಂಗ್ರಾಮೇಷು ವಸ್ತ್ರಮಥಿಂ ತಾಯುಂ ನ ವಸ್ತ್ರಮಾಥಿನಂ ತಸ್ಕರಮಿವ । ತಂ ದೃಷ್ಟ್ವಾ ಕ್ಷಿತಯೋ ಮನುಷ್ಯಾ ಯಥಾನು ಕ್ರೋಶಂತಿ ತದ್ವದ್ವೈರಿಣೋಽನುಕ್ರೋಶಂತಿ । ಕಿಂಚ ನೀಚಾ ನೀಚೈರಯಮಾನಂ ಗಚ್ಛಂತಂ ಜಸುರಿಂ ನ ಶ್ಯೇನಂ ಕ್ಷುಧಿತಂ ಶ್ಯೇನಂ ಪಕ್ಷಿಣಮಿವ । ತಂ ಯಥಾ ದೃಷ್ಟ್ವಾ ಪಕ್ಷಿಣಃ ಪಲಾಯಂತೇ ತದ್ವತ್ । ಶ್ರವೋಽನ್ನಂ ಕೀರ್ತಿಂ ವಾ ಪಶುಮದ್ಯೂಥಂ ಚಾಚ್ಛಾಭಿಲಕ್ಷ್ಯ ಗಚ್ಛಂತಮೇನಮನುಕ್ರೋಶಂತೀತಿ ಸಂಬಂಧಃ। ಅಪಿ ಸ್ಮೈನಂ ವಸ್ತ್ರಮಥಿಮಿವ ವಸ್ತ್ರಮಾಥಿನಮಿತ್ಯಾದಿನಿರುಕ್ತಮತ್ರಾನುಸಂಧೇಯಂ । ನಿ. ೪-೨೪ ॥

॥ ಪ್ರತಿಪದಾರ್ಥ ॥

ವಸ್ತ್ರಮಥಿಂ—ಬಟ್ಟೆಯನ್ನು ಕದ್ದು ಓಡುತ್ತಿರುವ । ತಾಯುಂ ನ—ಕಳ್ಳನನ್ನು ನೋಡಿ ಕೂಗಿಕೊಳ್ಳುವಂತೆಯೂ । ನೀಚಾ—ತನ್ನ ಬೇಟೆಯಾದ ಸಣ್ಣಪಕ್ಷಿಯಮೇಲೆ । ಅಯಮಾನಂ—ಬೀಳುತ್ತಿರುವುದೂ । ಜಸುರಿಂ—ಹಸಿದಿರುವುದೂ ಆದ । ಶ್ಯೇನಂ ನ—ಗಿಡುಗನನ್ನು ನೋಡಿ ಕೂಗಿಕೊಳ್ಳುವಂತೆಯೂ । ಶ್ರವಃ—ಅನ್ನವನ್ನೂ । ಪಶುಮತ್—ಪಶ್ವಾತ್ಮಕವಾದ । ಯೂಥಂ—ಸಮೂಹವನ್ನೂ (ಪಶುಗಳ ಹಿಂಡನ್ನೂ) । ಅಚ್ಛ—ಲಕ್ಷ್ಯಮಾಡಿ ಓಡುತ್ತಿರುವ । ಏನಂ—ಈ ದಧಿಕ್ರಾದೇವತೆಯನ್ನು ಕುರಿತು । ಭರೇಷು—ಯುದ್ಧಗಳಲ್ಲಿ । ಕ್ಷಿತಯಃ—ಮಾನವರು । ಅನುಕ್ರೋಶಂತಿ—ಕೂಗಿಕೊಳ್ಳುತ್ತಾರೆ.

॥ ಭಾವಾರ್ಥ ॥

ಬಟ್ಟೆಯನ್ನು ಕದ್ದು ಓಡುತ್ತಿರುವ ಕಳ್ಳನನ್ನು ನೋಡಿ ಕೂಗಿಕೊಳ್ಳುವಂತೆಯೂ, ಹಸಿದಿರುವ ಗಿಡುಗ ಪಕ್ಷಿಯು ತನ್ನ ಬೇಟೆಯಾದ ಸಣ್ಣಪಕ್ಷಿಯ ಮೇಲೆ ಬೀಳುವಾಗ ನೋಡಿ ಕೂಗಿಕೊಳ್ಳುವಂತೆಯೂ ಸಹ ಅನ್ನಕ್ಕಾಗಿಯೂ, ಪಶುಸಮೂಹದ ಸಂಪಾದನೆಗಾಗಿಯೂ ಓಡುತ್ತಿರುವ ಈ ದಧಿಕ್ರಾದೇವತೆಯನ್ನು ನೋಡಿ ಯುದ್ಧಗಳಲ್ಲಿ ಮಾನವರು ಕೂಗಿಕೊಳ್ಳುತ್ತಾರೆ.

## English Translation.

Whom men call after in battles, as after a thief carrying off a garment, or as (after) a hungry hawk pouncing (upon his prey): they call after him, hastening to obtain food, or a herd of cattle.



॥ ಸಂಹಿತಾಪಾಠಃ ॥

ಉತ ಸ್ಮಾಸು ಪ್ರಥಮಃ ಸರಿಷ್ಯನ್ನಿ ವೇವೇತಿ ಶ್ರೇಣಿಭೀ ರಥಾನಾಂ ।
ಸ್ರಜಂ ಕೃಣ್ವಾನೋ ಜನ್ಯೋ ನ ಶುಭ್ವಾ ರೇಣುಂ ರೇರಿಹತ್ಕಿರಣಂ ದದಶ್ವಾನ್॥

॥ ಪದಪಾಠಃ ॥

ಉತ । ಸ್ಮ । ಆಸು । ಪ್ರಥಮಃ । ಸರಿಷ್ಯನ್ । ನಿ । ವೇವೇತಿ । ಶ್ರೇಣಿऽಭಿಃ । ರಥಾನಾಂ ।
ಸ್ರಜಂ । ಕೃಣ್ವಾನಃ । ಜನ್ಯಃ । ನ । ಶುಭ್ವಾ । ರೇಣುಂ । ರೇರಿಹತ್ । ಕಿರಣಂ । ದದಶ್ವಾನ್ ॥ ೬ ॥

॥ ಸಾಯಣಭಾಷ್ಯಂ ॥

ಉತ ಸ್ಮ ಅಪಿ ಚ ಖಲ್ವಾಸ್ವಸುರಸೇನಾಸು ಸರಿಷ್ಯನ್ ಸರ್ತುಮಿಚ್ಛನ್ ಪ್ರಥಮಃ ಪ್ರತಮ ಉತ್ಕೃಷ್ಟತಮೋ ಮುಖ್ಯಃ ಸನ್ ರಥಾನಾಂ ಶ್ರೇಣಿಭೀ ರಾಜಿಭಿರ್ಯುಕ್ತಃ ಸನ್ ನಿ ವೇವೇತಿ । ನಿತರಾಂ ಗಚ್ಛತಿ । ಇತಸ್ತತೋ ಧಾವತಿ । ಕ ಇವೇತಿ । ಉಚ್ಯತೇ । ಸ್ರಜಂ । ಸೃಜ್ಯತ ಉತ್ಪಾದ್ಯತೇ ರೂಪಮನಯೇತಿ ಸ್ರಗಲಂಕೃತಿಃ । ತಾಂ ಕೃಣ್ವಾನೋ ಜನ್ಯೋ ನ ಜನೇಭ್ಯೋ ಹಿತೋऽಶ್ವ ಇವ ಸುಭ್ವಾ । ಸುಷ್ಠು ಭವತೀತಿ ಸುಭ್ವಾ ಶೋಭಮಾನಃ । ಕಿರಣಮಾಸ್ಯಗತಂ ಖಲೀನಂ ದದಶ್ವಾನ್ ದಶನ್ ರೇಣುಂ ಸ್ವಪಾದಘಾತಜನಿತಂ ರೇರಿಹತ್ । ಭೃಶಂ ಲೇಢಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಸ್ರಜಂ—ಹಾರವೇ ಮುಂತಾದ ಅಲಂಕಾರಗಳನ್ನು । ಕೃಣ್ವಾನಃ—ಮಾಡಿಕೊಂಡಿರುವುದೂ । ಶುಭ್ವಾ—ಶೋಭಿಸುತ್ತಿರುವುದೂ । ಕಿರಣಂ—ಕಡಿವಾಣವನ್ನು । ದದಶ್ವಾನ್—ಕಡಿಯುತ್ತಿರುವುದೂ । ರೇಣುಂ—ಧೂಳನ್ನು । ರೇರಿಹತ್—ಮೇಲಕ್ಕೆ ಎಬ್ಬಿಸುತ್ತಿರುವುದೂ ಆದ । ಜನ್ಯೋ ನ—ಅಶ್ವದಂತೆ । ಆಸು—ಅಸುರಸೇನೆಗಳ ನಡುವೆ । ಸರಿಷ್ಯನ್—ಸಂಚರಿಸಲಿಚ್ಛಿಸುವವನೂ । ಪ್ರಥಮಃ—ಎಲ್ಲಕ್ಕಿಂತಲೂ ಮುಖ್ಯನೂ ಆಗಿ । (ದಧಿಕ್ರಾ—ದಧಿಕ್ರಾದೇವನು) । ರಥಾನಾಂ—ರಥಗಳ । ಶ್ರೇಣಿಭಿಃ—ಸಾಲುಗಳೊಡನೆ ಕೂಡಿದವನಾಗಿ । ನಿ ವೇವೇತಿ—ಸಕಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾನೆ.

॥ ಭಾವಾರ್ಥ ॥

ಹಾರವೇ ಮುಂತಾದ ಅಲಂಕಾರಗಳನ್ನು ಮಾಡಿಕೊಂಡು ಪ್ರಕಾಶಿಸುತ್ತಿರುವುದೂ, ಕಡಿವಾಣವನ್ನು ಕಡಿಯುತ್ತಾ ಧೂಳನ್ನು ಮೇಲಕ್ಕೆ ಎಬ್ಬಿಸುತ್ತಿರುವುದೂ ಆದ ಜಾತ್ಯಶ್ವದಂತೆ ಅಸುರಸೇನೆಗಳ ನಡುವೆ ಸಂಚರಿಸಲಿಚ್ಛಿಸುವವನೂ, ಎಲ್ಲರಿಗೂ ಪ್ರಧಾನ ನಾಯಕನೂ ಆಗಿ ದಧಿಕ್ರಾದೇವನು ರಥಗಳ ಶ್ರೇಣಿಗಳೊಡನೆ ಕೂಡಿ ಸಕಲ ಪ್ರದೇಶಗಳಲ್ಲಿಯೂ ಸಂಚರಿಸುತ್ತಾನೆ.

English Translation.

And who, issuing forth the first in those encounters, rushes in various directions with rows of chariots; like an elegant (courser), friendly to man decorated with a garland, raising the dust, and champing his bit.



॥ ಸಂಹಿತಾಪಾಠಃ ॥

ಉತ ಸ್ಯ ವಾಜೀ ಸಹುರಿರ್ಋತಾವಾ ಶುಶ್ರೂಷಮಾಣಸ್ತನ್ವಾ ಸಮರ್ಯೇ ।
ತುರಂ ಯತೀಷು ತುರಯನ್ನೃಜಿಪ್ಯೋಽಧಿ ಭ್ರುವೋಃ ಕಿರತೇ ರೇಣು-
ಮೃಂಜನ್ ॥ ೭ ॥

॥ ಪದಪಾಠಃ ॥

ಉತ । ಸ್ಯಃ । ವಾಜೀ । ಸಹುರಿಃ । ಋತ್ಯವಾ । ಶುಶ್ರೂಷಮಾಣಃ । ತನ್ವಾ । ಸ್ಯಮರ್ಯೇ ।
ತುರಂ । ಯತೀಷು । ತುರಯನ್ । ಋಜಿಪ್ಯಃ । ಅಧಿ । ಭ್ರುವೋಃ । ಕಿರತೇ । ರೇಣುಂ । ಋಂಜನ್ ॥

। ಸಾಯಣಭಾಷ್ಯಂ ।

ಉತ ಅಪಿ ಚ ಸ್ಯ ಸ ಉಕ್ತಲಕ್ಷಣೋ ವಾಜೀ ವೇಜನವಾನ್ ಗಮನವಾನ್ ಸಮರ್ಯೇ ಸಮರಣೇ ಸಹುರಿಃ ಸಹನಶೀಲಃ ಶತ್ರೂಣಾಮೃತಾವಾನ್ನವಾಂಸ್ತನ್ವಾ ಸ್ನಾವಯುವೇನ ಖುರಾದಿನಾ ಸ್ವತನುಂ ಶುಶ್ರೂಷಮಾಣಸ್ತುರಂ ಯತೀಷು ತ್ವರಗಾಮಿನೀಷ್ವಸುರಸೇನಾಸು ತುರಯನ್ ತ್ವರಯನ್ ಋಜಿಪ್ಯ ಋಜುಗಾಮೀ ರೇಣುಂ ಧೂಲಿಮೃಂಜನ್ಪ್ರಸಾಧಯಂಸ್ತಮೇವ ರೇಣುಂ ಭ್ರುವೋರಧ್ಯುಪರಿ ಕಿರತೇ । ವಿಕ್ಷಿಪತಿ ॥

॥ ಪ್ರತಿಪದಾರ್ಥ ॥

ಸ್ಯಃ— ಮೇಲೆ ಹೇಳಿದಂತೆ ಪ್ರಸಿದ್ಧವಾದ | ವಾಜೀ—ಅಶ್ವವು | ಸಮರ್‍ಯೇ—ಯುದ್ಧದಲ್ಲಿ | ಸಹುರಿಃ— ಶತ್ರುಗಳನ್ನು ಎದುರಿಸುವ ಶಕ್ತಿಯುಳ್ಳದ್ದಾಗಿಯೂ | ಋತಾವಾ—ಅನ್ನಯುಕ್ತವಾಗಿಯೂ | ತನ್ವಾ—ತನ್ನ ಶರೀರದಿಂದ | ಶುಶ್ರೂಷಮಾಣಃ—ಸೇವಿಸುತ್ತಿರುವುದಾಗಿಯೂ | ತುರಂ ಯತೀಷು—ವೇಗವಾಗಿ ಓಡಾಡುವ ಶತ್ರುಸೇನೆಗಳ ನಡುವೆ | ತುರಯನ್—ಸಂಭ್ರಮದಿಂದ ಸಂಚರಿಸುತ್ತಲೂ | ಋಜಿಪ್ಯಃ—ಋಜುಗಮನವುಳ್ಳ ದ್ದಾಗಿಯೂ ಇರುತ್ತಲೂ | ರೇಣುಂ—ಮಾರ್ಗದ ಧೂಳಿಯಿಂದ | ಋಂಜನ್—ತನ್ನ ಮೈಯನ್ನು ತುಂಬಿ ಕೊಳ್ಳುತ್ತಲೂ (ಅದೇ ಧೂಳಿಯನ್ನು) | ಭ್ರುವೋಃ ಅಧಿ—ತನ್ನ ಹುಬ್ಬಿಗಿಂತಲೂ ಮೇಲಕ್ಕೆ | ಕಿರತೇ— ಎರಚುತ್ತದೆ.

॥ ಭಾವಾರ್ಥ ॥

ಮೇಲೆ ವರ್ಣಿತವಾದ ಅಶ್ವವು, ಯುದ್ಧದಲ್ಲಿ ಶತ್ರುಗಳನ್ನು ಎದುರಿಸುವ ಶಕ್ತಿಯುಳ್ಳದ್ದಾಗಿಯೂ, ಅನ್ನ ಯುಕ್ತವಾಗಿಯೂ, ತನ್ನ ಶರೀರದಿಂದ ಸೇವಿಸುತ್ತಿರುವುದಾಗಿಯೂ, ವೇಗವಾಗಿ ಓಡಾಡುವ ಶತ್ರುಸೇನೆಗಳ ನಡುವೆ ಸಂಭ್ರಮದಿಂದ ಸಂಚರಿಸುವುದಾಗಿಯೂ, ಋಜುಗಮನವುಳ್ಳದ್ದಾಗಿ ಇರುತ್ತಲೂ, ಮಾರ್ಗದ ಧೂಳಿಯಿಂದ ತನ್ನ ಮೈಯನ್ನು ತುಂಬಿಕೊಳ್ಳುತ್ತಲೂ ಇದ್ದು ಅದೇ ಧೂಳಿಯನ್ನು ತನ್ನ ಹುಬ್ಬಿಗಿಂತಲೂ ಮೇಲಕ್ಕೆ ಎರಚಿಕೊಳ್ಳುತ್ತದೆ

English Translation.

And that swift (horse) enduring in battle, bestowing food, and doing service with his limbs, rushing swiftly upon the quick-moving (host of the enemy), going straight onward, and tossing up the dust, throws it above his brows.



॥ ಸಂಹಿತಾಪಾಠಃ ॥

ಉತ ಸ್ಮಾಸ್ಯ ತನ್ಯತೋರಿವ ದ್ಯೋರ್ಋಘಾಯತೋ ಅಭಿಯುಜೋ ಭಯಂತೇ |
ಯದಾ ಸಹಸ್ರಮಭಿ ಷೀಮಯೋಧೀದ್ದುರ್ವರ್ತುಃಸ್ಮಾ ಭವತಿ ಭೀಮ ಋಂಜನ್ ॥ ೮ ॥

॥ ಪದಪಾಠಃ ॥

ಉತ | ಸ್ಮ | ಅಸ್ಯ | ತನ್ಯತೋಃऽಇವ | ದ್ಯೋಃ | ಋಘಾಯತಃ | ಅಭಿऽಯುಜಃ | ಭಯಂತೇ |
ಯದಾ | ಸಹಸ್ರಂ | ಅಭಿ | ಸೀಂ | ಅಯೋಧೀತ್ | ದುಃऽವರ್ತುಃ | ಸ್ಮ | ಭವತಿ | ಭೀಮಃ | ಋಂಜನ್ ॥

॥ ಸಾಯಣಭಾಷ್ಯಂ ॥

ಉತ ಸ್ಮ ಅಪಿ ಚ ಖಲು ದ್ಯೋರ್ದೀಪ್ಯಮಾನಾತ್ತನ್ಯತೋಃ ಶಬ್ದಯಿತುರಶನೇರಿವ ಋಘಾಯತೋ ಹಿಂಸತೋऽಸ್ಯಾಸ್ಮಾದ್ದಧಿಕ್ರಾವಾಖ್ಯಾದ್ದೇವಾದಭಿಯುಜೋऽಭಿಯೋಕ್ತಾರೋऽಸುರಾ ಭಯಂತೇ। ಬಿಭ್ಯತಿ। ಕಿಂಚಾಯಂ ಯದಾ ಸೀಂ ಸರ್ವತಃ ಸಹಸ್ರಮುಭ್ಯಯೋಧೀತ್। ಸಂಪ್ರಹರೇತ್। ತದಾ ಋಂಜನ್ ಪ್ರಸಾಧಯನ್ನಾತ್ಮಾನಂ ಭೀಮೋ ಭಯಹೇತುರ್ದುರ್ವರ್ತುರ್ದುರ್ವಾರಶ್ಚ ಭವತಿ॥

॥ ಪ್ರತಿಪದಾರ್ಥ ॥

ಉತ—ಮತ್ತು। ದ್ಯೋಃ—ಪ್ರಕಾಶಿಸುತ್ತಿರುವುದೂ। ತನ್ಯತೋಃ ಇವ—ಶಬ್ದಮಾಡುತ್ತಿರುವುದೂ ಆದ ವಜ್ರಾಯುಧದಂತೆ। ಋಘಾಯತಃ—ಶತ್ರುಗಳನ್ನು ಹಿಂಸಿಸುತ್ತಿರುವ। ಅಸ್ಯ—ಈ ದಧಿಕ್ರಾದೇವತೆಯಿಂದ। ಅಭಿಯುಜಃ—ಇವನನ್ನು ಪ್ರತಿಭಟಿಸುತ್ತಿರುವ ಅಸುರರು। ಭಯಂತೇ—ಭೀತಿಗೊಳ್ಳುತ್ತಾರೆ। ಯತಾ—ಯಾವಾಗ। ಸೀಂ—ಸುತ್ತಲೂ। ಸಹಸ್ರಂ—ಸಹಸ್ರಾರು ಶತ್ರುಗಳು। ಅಭಿ ಆಯೋಧೀತ್—ಎದುರಿಸಿ ಯುದ್ಧಮಾಡುತ್ತಿರುವರೋ ಆಗ। ಋಂಜನ್—ತನ್ನ ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾ। ಭೀಮಃ—ಭಯಂಕರನಾಗಿಯೂ। ದುರ್ವರ್ತುಃ—ಅಪ್ರತಿಹತನಾಗಿಯೂ। ಭವತಿ—ಆಗುತ್ತಾನೆ.

॥ ಭಾವಾರ್ಥ ॥

ಪ್ರಕಾಶಾತ್ಮಕವಾದುದೂ, ಆರ್ಭಟದಿಂದ ಶಬ್ದಮಾಡುತ್ತಿರುವುದೂ ಆದ ವಜ್ರಾಯುಧದಂತೆ ಶತ್ರುಗಳನ್ನು ಹಿಂಸಿಸುತ್ತಿರುವ ಈ ದಧಿಕ್ರಾದೇವತೆಯಿಂದ ಇವನನ್ನು ಪ್ರತಿಭಟಿಸುವ ಅಸುರರು ಭೀತಿಗೊಳ್ಳುತ್ತಾರೆ. ಇವನ ಸುತ್ತಲೂ ಸಹಸ್ರಾರು ಶತ್ರುಗಳು ಸೇರಿಕೊಂಡು ಇವನನ್ನು ಎದುರಿಸಿ ಪ್ರತಿಭಟಿಸುತ್ತಿದ್ದರೂ ಸಹ ಇವನು ತನ್ನ ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾ, ಭಯಂಕರನಾಗಿಯೂ, ಅಪ್ರತಿಹತನಾಗಿಯೂ ಆಗುತ್ತಾನೆ.

## English Translation.

And the adversaries of that foe-destroying steed, like (those) of the brilliant thunderbolt, are alarmed; for when he contends, even against thousands on every side, then, rousing (his spirit), he is fearful and irresistible.

॥ ಸಂಹಿತಾಪಾಠಃ ॥

ಉತ ಸ್ಮಾಸ್ಯ ಪನಯಂತಿ ಜನಾ ಜೂತಿಂ ಕೃಷ್ಟಿಪ್ರೋ ಅಭಿಭೂತಿಮಾಶೋಃ।
ಉತೈನಮಾಹುಃ ಸಮಿಥೇ ವಿಯಂತಃ ಪರಾ ದಧಿಕ್ರಾ ಅಸರತ್ಸಹಸ್ರೈಃ ॥೯॥

॥ ಪದಪಾಠಃ ॥

ಉತ । ಸ್ಮ । ಅಸ್ಯ । ಪನಯಂತಿ । ಜನಾಃ । ಜೂತಿಂ । ಕೃಷ್ಟಿಽಪ್ರಃ । ಅಭಿಽಭೂತಿಂ । ಆಶೋಃ ।

ಉತ । ಏನಂ । ಆಹುಃ । ಸಂಽಇಥೇ । ವಿಽಯಂತಃ । ಪರಾ । ದಧಿಽಕ್ರಾಃ । ಅಸರತ್ । ಸಹಸ್ರೈಃ ॥ ೯ ॥

॥ ಸಾಯಣಭಾಷ್ಯಂ ॥

ಉತ ಸ್ಮ ಅಪಿ ಚ ಖಲ್ವಸ್ಯ ದಧಿಕ್ರಾವ್ಣೋಽಭಿಭೂತಿಮಭಿಭವಿತ್ರೀಂ ಜೂತಿಂ ಪರಾಭಿಭೂತಿಂ ಚೇತ್ಯುಭಯಂ ವಾ ಜನಾಃ ಪನಯಂತಿ । ಸ್ತುವಂತಿ । ಕೀದೃಶಸ್ಯಾಸ್ಯ । ಕೃಷ್ಟಿಪ್ರಃ । ಕೃಷ್ಟಯೋ ಮನುಷ್ಯಾಃ । ತೇಷಾಂ ಪೂರಕಸ್ಯಾಶೋರ್ವ್ಯಾಪ್ತಸ್ಯ ವೇಗವತೋ ವಾ । ಉತಾಪಿ ಚೈನಂ ಸಮಿಥೇ ಸಂಗ್ರಾಮೇ ವಿಯಂತೋ ವಿವಿಧಂ ಗಚ್ಛಂತೋ ಜನಾ ಅಯಂ ದಧಿಕ್ರಾ ದೇವಃ ಸಹಸ್ರೈರನುಚರೈಃ ಪರಿವೃತಃ ಪರಾಸರದಿತಿ ಅಸ್ಮಾನ್ನಿಹಾಯಾನ್ಯಾನ್ ಹಂತುಂ ಗತ ಇತ್ಯಾಹುಃ । ಯದ್ವಾ । ಏನಮೇವಮಾಹುಃ । ವಿಯಂತಃ ಶತ್ರವಃ ಪರಾ । ಭವಂತೀತಿ ಶೇಷಃ । ದಧಿಕ್ರಾಃ ಸಹಸ್ರೈರಸರತ್ । ಗಚ್ಛತೀತಿ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಕೃಷ್ಟಿಪ್ರಃ—ಮಾನವರ ಇಷ್ಟಾರ್ಥಗಳನ್ನು ಪೂರೈಸುವುದೂ । ಆಶೋಃ—ಸರ್ವವ್ಯಾಪಕವಾದುದೂ ಆದ । ಅಸ್ಯ—ದಧಿಕ್ರಾರೂಪದ ಈ ಅಶ್ವದ । ಅಭಿಭೂತಿಂ—ಶತ್ರುನಿರೋಧಕವಾದುದೂ । ಜೂತಿಂ—ಜಯಾತ್ಮಕವಾದುದೂ ಆದ ಶಕ್ತಿಯನ್ನು । ಜನಾಃ—ಮಾನವರು । ಪನಯಂತಿ—ಸ್ತುತಿಸುತ್ತಾರೆ । ಉತ—ಮತ್ತು । ಏನಂ—ಇದನ್ನು । ಸಮಿಥೇ—ಯುದ್ಧದಲ್ಲಿ । ವಿಯಂತಃ—ಅನುಸರಿಸಿ ಹೋಗುವ ಜನರೆಲ್ಲರೂ ಸಹ । ದಧಿಕ್ರಾಃ—ಈ ದಧಿಕ್ರಾರೂಪದ ದೇವನು । ಸಹಸ್ರೈಃ—ಸಾವಿರಾರು ಅನುಚರರೊಡನೆ ಕೂಡಿಕೊಂಡು । ಪರಾ—ಶತ್ರುನಾಶಕ್ಕಾಗಿ । ಅಸರತ್—ಹೊರಟನು (ಎಂಬುದಾಗಿ) । ಆಹುಃ—ಹೇಳುತ್ತಾರೆ.

॥ ಭಾವಾರ್ಥ ॥

ಮಾನವರ ಇಷ್ಟಾರ್ಥಗಳನ್ನು ಪೂರೈಸುವುದೂ, ಸರ್ವವ್ಯಾಪಕವಾದುದೂ ಆದ ದಧಿಕ್ರಾರೂಪದ ಈ ಅಶ್ವದ ಶತ್ರುನಿರೋಧಕವಾದುದೂ, ಜಯಾತ್ಮಕವಾದುದೂ ಆದ ಶಕ್ತಿಯನ್ನು ಮಾನವರು ಸ್ತುತಿಸುತ್ತಾರೆ. ಮತ್ತು ಇದನ್ನು ಯುದ್ಧದಲ್ಲಿ ಅನುಸರಿಸಿ ಹೋಗುವ ಜನರೆಲ್ಲರೂ ಸಹ "ಈ ದಧಿಕ್ರಾರೂಪದ ದೇವನು ಸಾವಿರಾರು ಅನುಚರರೊಡನೆ ಕೂಡಿಕೊಂಡು ಶತ್ರುನಾಶಕ್ಕಾಗಿ ಹೊರಟನು" ಎಂದು ಪ್ರಶಂಸಿಸುವರು.

## English Translation.

Men praise the overpowering rapidity of that fleet (steed), who is the accomplisher (of the desires) of mankind, and, following him to

battle, they have said, Dadhikra with (his) thousands has gone forth against the foe.



॥ ಸಂಹಿತಾಪಾಠಃ ॥

ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯಇವ ಜ್ಯೋತಿಷಾಪಸ್ತತಾನ ।
ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಂಸಿ ॥

॥ ಪದಪಾಠಃ ॥

ಆ । ದಧಿಕ್ರಾಃ । ಶವಸಾ । ಪಂಚ । ಕೃಷ್ಟೀಃ । ಸೂರ್ಯಃಇವ । ಜ್ಯೋತಿಷಾ । ಅಪಃ । ತತಾನ ।
ಸಹಸ್ರಸಾಃ । ಶತಸಾಃ । ವಾಜೀ । ಅರ್ವಾ । ಪೃಣಕ್ತು । ಮಧ್ವಾ । ಸಂ । ಇಮಾ । ವಚಾಂಸಿ ॥ ೧೦ ॥

॥ ಸಾಯಣಭಾಷ್ಯಂ ॥

ಪವಿತ್ರೇಷ್ಟಾವಾ ದಧಿಕ್ರಾ ಇತಿ ದಧಿಕ್ರಾವ್ಣೋ ಯಾಜ್ಯಾ । ತಥಾ ಚ ಸೂತ್ರಿತಂ । ದಧಿಕ್ರಾವ್ಣೋ ಅಕಾರಿಷಮಾ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ । ಆ. ೨-೧೨ । ಇತಿ ॥

ಯೋ ದಧಿಕ್ರಾ ದೇವಃ ಶವಸಾ ಬಲೇನ ಪಂಚ ಕೃಷ್ಟೀಃ ಪಂಚ ಜನಾನ್ ದೇವಮನುಷ್ಯಾಸುರರಕ್ಷಃಪಿತೃಸಂಜ್ಞಕಾನ್ನಿಷಾದಪಂಚಮಾನ್ ಚತುರೋ ವರ್ಣಾನ್ವಾ ಸೂರ್ಯೋ ಜ್ಯೋತಿಷಾ ತೇಜಸಾ ಯಥಾ ಜಗದಾವೃಣೋತಿ ತದ್ವದಪ ಉದಕಾನ್ಯಾ ತತಾನ । ಆತನೋತಿ । ಸಹಸ್ರಸಾಃ ಶತಸಾಃ ಶತಾನಾಂ ಸಹಸ್ರಾಣಾಂ ಚ ದಾತಾ ವಾಜೀ ವೇಜನವಾನರ್ವಾರಣಕುಶಲಃ ಸ ದೇವೋ ಮಧ್ವಾ ಮಧುನಾ ಮಧುರೇಣ ಫಲೇನೇಮೇಮಾನ್ಯುಕ್ತಾನಿ ಸ್ತುತಿವಚಾಂಸಿ ಸಂ ಪೃಣಕ್ತು । ಸಂಯೋಜಯತು ॥

॥ ಪ್ರತಿಪದಾರ್ಥ ॥

ಸೂರ್ಯಃ—ಸೂರ್ಯನು । ಜ್ಯೋತಿಷಾ—ತನ್ನ ತೇಜಸ್ಸಿನಿಂದ । ಅಪಃ ಇವ—ಉದಕಗಳನ್ನು ಸರ್ವತ್ರ ವಿಸ್ತರಿಸಿ ಹರಡುವಂತೆ । ದಧಿಕ್ರಾಃ—ದಧಿಕ್ರಾ ದೇವನು । ಶವಸಾ—ತನ್ನ ಶಕ್ತಿಯಿಂದ । ಪಂಚ ಕೃಷ್ಟೀಃ—ದೇವಮಾನವಾದಿ ಐದು ವಿಧವಾದ ಪ್ರಜೆಗಳನ್ನೂ । ಆ ತತಾನ—ಆಯಾ ಪ್ರದೇಶಗಳಲ್ಲಿ ವಿಸ್ತರಿಸಿ ಹರಡಿದ್ದಾನೆ । ಸಹಸ್ರಸಾಃ—ಸಹಸ್ರಾರು ವಿಧಗಳಲ್ಲಿಯೂ । ಶತಸಾಃ—ನೂರಾರು ರೂಪಗಳಲ್ಲಿಯೂ ದಾನ ಮಾಡುವವನೂ । ವಾಜೀ—ವೇಗಯುಕ್ತನೂ । ಅರ್ವಾ—ಅಶ್ವರೂಪನೂ ಆದ ಈ ದೇವನು । ಇಮಾ ವಚಾಂಸಿ—ನಮ್ಮ ಈ ಸ್ತುತಿವಚನಗಳನ್ನು । ಮಧ್ವಾ—ಮಾಧುರ್ಯಯುಕ್ತವಾದ ಫಲಗಳೊಡನೆ । ಸಂ ಪೃಣಕ್ತು—ಸಂಯೋಜಿಸಲಿ.

॥ ಭಾವಾರ್ಥ ॥

ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ಸರ್ವತ್ರ ವಿಸ್ತರಿಸಿ ಹರಡುವಂತೆ, ದಧಿಕ್ರಾದೇವನು ತನ್ನ ಶಕ್ತಿಯಿಂದ ದೇವಮಾನವಾದಿ ಐದು ವಿಧವಾದ ಪ್ರಜೆಗಳನ್ನೂ ಆಯಾ ಪ್ರದೇಶಗಳಲ್ಲಿ ವಿಸ್ತರಿಸಿ ಹರಡಿದ್ದಾನೆ. ಸಹಸ್ರಾರು ವಿಧಗಳಲ್ಲಿಯೂ, ನೂರಾರು ರೂಪಗಳಲ್ಲಿಯೂ ದಾನಮಾಡುವವನೂ, ವೇಗಯುಕ್ತನೂ, ಅಶ್ವರೂಪನೂ ಆದ ಈ ದೇವನು ನಮ್ಮ ಈ ಸ್ತುತಿವಚನಕ್ಕೆ ಪ್ರತಿಯಾಗಿ ಮಾಧುರ್ಯಯುಕ್ತವಾದ ಫಲಗಳನ್ನು ಅನುಗ್ರಹಿಸಿ ಕೊಡಲಿ.

### English Translation.

Dadhikra has spread abroad the five classes of beings by his strength as the sun (diffuses) the waters by his radiance may he, the giver of hundereds and thousands, associate these praises with agreeable (rewards).

॥ ವಿಶೇಷವಿಷಯಗಳು ॥

ದಧಿಕ್ರಾವ್ಣೋ ಅಕಾರಿಷಂ ಎಂಬ ಈ ಆರನೆಯ ಋಕ್ಕನ್ನು ಪವಿತ್ರೇಷ್ಟಿಯಲ್ಲಿ ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ– ದಧಿಕ್ರಾವ್ಣೋ ಅಕಾರಿಷಮಾ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಎಂಬ ಸೂತ್ರದಿಂದ (ಆ. ೨–೧೨) ವಿವೃತವಾಗಿರುವುದು. ಮತ್ತು ದಧಿದ್ರಪ್ಸಭಕ್ಷಣದಲ್ಲಿಯೂ ಸಹ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ದಧಿಕ್ರಾವ್ಣೋ ಅಕಾರಿಷಮಿತ್ಯಾಗ್ನೀಧ್ರೀಯೇ ದಧಿದ್ರಪ್ಸಾನ್ ಭಕ್ಷಯಂತಿ ಎಂಬ ಸೂತ್ರದಿಂದ (ಆ. ೬–೧೨) ವಿವೃತವಾಗಿರುವುದು.

## ಮೂವತ್ತೊಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಆಶುಂ ದಧಿಕ್ರಾಮಿತಿ ಷಡೃಚಂ ಸಪ್ತಮಂ ಸೂಕ್ತಂ । ಆದಿತಃ ಪಂಚ ತ್ರಿಷ್ಟುಭಃ ಷಷ್ಠ್ಯನುಷ್ಟುಪ್ । ಋಷಿರ್ವಾಮದೇವಃ । ಪೂರ್ವಸೂಕ್ತೇ ಹೀತ್ಯುಕ್ತತ್ವಾದೇತದಪಿ ದಾಧಿಕ್ರಂ । ತಥಾ ಚಾನುಕ್ರಾಂತಂ । ಆಶುಂ ಷಳಂತ್ಯಾನುಷ್ಟುಬಿತಿ । ಸೂಕ್ತವಿನಿಯೋಗೋ ಲೈಂಗಿಕಃ ॥

ಅನುವಾದವು—ಆಶುಂ ದಧಿಕ್ರಾಂ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ದಧಿಕ್ರಾ ಎಂಬುದು ದೇವತೆಯು; ಈ ಸೂಕ್ತದ ಮೊದಲನೆಯ ಐದು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು; ಆರನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಆಶುಂ ಷಳಂತ್ಯಾನುಷ್ಟುಪ್ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೯

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೩೯ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ— ೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ವಾಮದೇವಃ ॥
॥ ದೇವತಾ—ದಧಿಕ್ರಾಃ ॥
॥ ಛಂದಃ—೧-೫ ತ್ರಿಷ್ಟುಪ್ । ೬ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಆಶುಂ ದಧಿಕ್ರಾಂ ತಮು ನು ಷ್ಟವಾಮ ದಿವಸ್ಪೃಥಿವ್ಯಾ ಉತ ಚರ್ಕಿರಾಮ।
ಉಚ್ಛಂತೀರ್ಮಾಮುಷಸಃ ಸೂದಯಂತ್ವತಿ ವಿಶ್ವಾನಿ ದುರಿತಾನಿ ಪರ್ಷನ್ ॥

॥ ಪದಪಾಠಃ ॥

ಆಶುಂ । ದಧಿಽಕ್ರಾಂ । ತಂ । ಊಂ ಇತಿ । ನು । ಸ್ತವಾಮ । ದಿವಃ । ಪೃಥಿವ್ಯಾಃ । ಉತ । ಚರ್ಕಿರಾಮ ।
ಉಚ್ಛಂತೀಃ । ಮಾಂ । ಉಷಸಃ । ಸೂದಯಂತು । ಅತಿ । ವಿಶ್ವಾನಿ । ದುಃಽಇತಾನಿ । ಪರ್ಷನ್ ॥ ೧ ॥

॥ ಸಾಯಣಭಾಷ್ಯಂ ॥

ಆಶುಂ ಶೀಘ್ರಗಾಮಿನಂ ತಮು ತಮೇವ ದಧಿಕ್ರಾಂ ದೇವಂ ನು ಕ್ಷಿಪ್ರಂ ಸ್ತವಾಮ । ಉತಾಪಿ ಚ ದಿವಃ ಪೃಥಿವ್ಯಾಶ್ಚ ಸಕಾಶಾದಸ್ಯ ಘಾಸಂ ಚರ್ಕಿರಾಮ । ವಿಕ್ಷಿಪಾಮ । ಉಚ್ಛಂತೀಸ್ತಮೋ ವಿವಾಸಯಂತೀರುಷಸೋ ಮಾಂ ಪ್ರತಿ ಸೂದಯಂತು । ರಕ್ಷಂತು ಫಲಾನಿ । ವಿಶ್ವಾನಿ ಸರ್ವಾಣಿ ದುರಿತಾನ್ಯತಿ ಪರ್ಷನ್ । ಅತಿಪಾರಯಂತು । ಅನ್ಯದೇವತಾಕೇಷು ಮಂತ್ರೇಷ್ವನ್ಯದೇವತಾಸ್ತುತಿಸ್ತಾಸಾಂ ನಿಪಾತಭಾಕ್ತ್ವಾನ್ನ ವಿರುಧ್ಯತೇ ॥

॥ ಪ್ರತಿಪದಾರ್ಥ ॥

ಆಶುಂ—ಶೀಘ್ರಗಾಮಿಯಾದ । ತಮು ದಧಿಕ್ರಾಂ—ದಧಿಕ್ರಾ ದೇವನನ್ನೇ । ನು—ಶೀಘ್ರವಾಗಿ । ಸ್ತವಾಮ—ಸ್ತುತಿಸೋಣ । ಉತ—ಮತ್ತು । ದಿವಃ—ದ್ಯುಲೋಕದಿಂದ । ಪೃಥಿವ್ಯಾಃ—ಪೃಥಿವಿಯವರೆಗೆ । ಘಾಸಂ—(ಅಶ್ವರೂಪದ ಈ ದೇವನಿಗೆ) ಆಹಾರವನ್ನು (ಹುಲ್ಲನ್ನು) । ಚರ್ಕಿರಾಮ—ಹರಡೋಣ । ಉಚ್ಛಂತೀಃ—ತಮಸ್ಸನ್ನು ಹೋಗಲಾಡಿಸುವ । ಉಷಸಃ—ಉಷಸ್ಸುಗಳು । ಮಾಂ—ನನಗಾಗಿ । ಸೂದಯಂತು—ಉತ್ಕೃಷ್ಟವಾದ ಫಲಗಳನ್ನು ರಕ್ಷಿಸಲಿ । ವಿಶ್ವಾನಿ—ಸಮಸ್ತವಾದ । ದುರಿತಾನಿ—ಪಾಪಗಳನ್ನೂ । ಅತಿ ಪರ್ಷನ್—ನಾಶಮಾಡಲಿ.

॥ ಭಾವಾರ್ಥ ॥

ಶೀಘ್ರಗಾಮಿಯಾದ ದಧಿಕ್ರಾದೇವನನ್ನೇ ನಾವು ಶೀಘ್ರವಾಗಿ ಸ್ತುತಿಸೋಣ. ಮತ್ತು ದ್ಯುಲೋಕದಿಂದ ಪೃಥಿವಿಯವರೆಗೂ, ಅಶ್ವರೂಪದ ಈ ದೇವನಿಗೆ ಹುಲ್ಲಿನ ರೂಪದ ಆಹಾರವನ್ನು ಹರಡೋಣ. ತಮೋನಾಶಕಗಳಾದ ಉಷಸ್ಸುಗಳು ನನಗಾಗಿ ಉತ್ಕೃಷ್ಟವಾದ ಫಲಗಳನ್ನು ರಕ್ಷಿಸಲಿ. ಮತ್ತು ಸಮಸ್ತವಾದ ಪಾಪಗಳನ್ನೂ ನಾಶಮಾಡಲಿ.

English Translation.

Verily we praise that swift Dadhikra and scatter (provender before him) from heaven and earth: may the gloom-dispelling dawns preserve for me (all good things), and bear me beyond all evils.



॥ ಸಂಹಿತಾಪಾಠಃ ॥

ಮಹ ಶ್ಚರ್ಕರ್ಮ್ಯರ್ವತಃ ಕ್ರತುಪ್ರಾ ದಧಿಕ್ರಾವ್ಣಃ ಪುರುವಾರಸ್ಯ ವೃಷ್ಣಃ ।
ಯಂ ಪೂರುಭ್ಯೋ ದೀದಿವಾಂಸಂ ನಾಗ್ನಿಂ ದದಥುರ್ಮಿತ್ರಾವರುಣಾ
ತತುರಿಂ ॥ ೨ ॥

॥ ಪದಪಾಠಃ ॥

ಮಹಃ । ಚರ್ಕರ್ಮಿ । ಅರ್ವತಃ । ಕ್ರತುಽಪ್ರಾಃ । ದಧಿಽಕ್ರಾವ್ಣಃ । ಪುರುಽವಾರಸ್ಯ । ವೃಷ್ಣಃ ।
ಯಂ । ಪೂರುಽಭ್ಯಃ । ದೀದಿಽವಾಂಸಂ । ನ । ಅಗ್ನಿಂ । ದದಥುಃ । ಮಿತ್ರಾವರುಣಾ । ತತುರಿಂ ॥ ೨ ॥

॥ ಸಾಯಣಭಾಷ್ಯಂ ॥

ಕ್ರತುಪ್ರಾಃ ಕರ್ಮಣಾಂ ಪೂರಕೋಽಹಂ ಮಹೋ ಮಹತೋಽರ್ವತೋಽರಣವತಃ ಪುರುವಾರಸ್ಯ ಬಹುಭಿರ್ವರಣೀಯಸ್ಯ ವೃಷ್ಣೋ ವರ್ಷಕಸ್ಯ ದಧಿಕ್ರಾವ್ಣಃ ಸ್ತುತಿಂ ಚರ್ಕರ್ಮಿ । ಅತ್ಯರ್ಥಂ ಕರೋಮಿ । ಹೇ ಮಿತ್ರಾವರುಣಾ ಮಿತ್ರಾವರುಣೌ ಯುವಾಂ ತತುರಿಂ ತಾರಕಂ ಯಂ ದೀದಿವಾಂಸಂ ನಾಗ್ನಿಂ ದೀಪ್ಯಮಾನಮಗ್ನಿಮಿವ ಸ್ಥಿತಂ ಪೂರುಭ್ಯೋ ಮನುಷ್ಯೇಭ್ಯಸ್ತೇಷಾಮುಪಕಾರಾಯ ದದಥುಃ । ಧಾರಯಥಃ ॥

॥ ಪ್ರತಿಪದಾರ್ಥ ॥

ಮಿತ್ರಾವರುಣಾ—ಎಲೈ ಮಿತ್ರಾವರುಣರೇ । ತತುರಿಂ—ರಕ್ಷಕನಾದವನೂ । ಅಗ್ನಿಂ ನ—ಅಗ್ನಿಯಂತೆ । ದೀದಿವಾಂಸಂ—ಪ್ರಕಾಶಮಾನನೂ ಆದ । ಯಂ—ಯಾವ ದಧಿಕ್ರಾದೇವತೆಯನ್ನು । ಪೂರುಭ್ಯಃ—ಅನೇಕ

ಮಾನವರ ಉಪಕಾರಕ್ಕಾಗಿ । ದದಥುಃ—ಒದಗಿಸಿಕೊಟ್ಟರೋ ಅಂತಹ । ಮಹಃ—ಮಹಾತ್ಮನೂ । ಅರ್ವತಃ—ಚಲನಸ್ವಭಾವವುಳ್ಳವನೂ । ಪುರುವಾರಸ್ಯ—ಅನೇಕರಿಂದ ಅಪೇಕ್ಷಿತನೂ । ವೃಷ್ಣಃ—ಕಾಮುವರ್ಷಕನೂ ಆದ । ದಧಿಕ್ರಾವ್ಣಃ—ದಧಿಕ್ರಾದೇವತೆಯ ಸ್ತುತಿಯನ್ನು । ಕ್ರತುಪ್ರಾಃ—ಕರ್ಮಪಾಲಕನಾದ ನಾನು । ಚರ್ಕರ್ಮಿ—ನೆರವೇರಿಸುತ್ತೇನೆ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ರಕ್ಷಕನಾದವನೂ, ಅಗ್ನಿಯಂತೆ ಪ್ರಕಾಶಮಾನನೂ ಆದ ಯಾವ ದಧಿಕ್ರಾದೇವತೆಯನ್ನು ಅನೇಕ ಮಾನವರ ಉಪಕಾರಕ್ಕಾಗಿ ಒದಗಿಸಿಕೊಟ್ಟರೋ ಅಂತಹ ಮಹಾತ್ಮನೂ, ಚಲನಸ್ವಭಾವವುಳ್ಳವನೂ, ಅನೇಕರಿಂದ ಅಪೇಕ್ಷಿತನೂ, ಕಾಮವರ್ಷಕನೂ ಆದ ದಧಿಕ್ರಾದೇವತೆಯ ಸ್ತುತಿಯನ್ನು ಕರ್ಮಪಾಲಕನಾದ ನಾನು ನೆರವೇರಿಸುತ್ತೇನೆ.

## English Translation.

Fulfiller of religious rites, I reiterate the praise of the great Dadhikra, the liberal, many-honoured showerer (of benifits,) whom Mitra and Varuna gave for the good of many, the transporter (beyond calamity), as brilliant as Agni.

॥ ಸಂಹಿತಾಪಾಠಃ ॥

ಯೋ ಅಶ್ವಸ್ಯ ದಧಿಕ್ರಾವ್ಣೋ ಅಕಾರೀತ್ಸಮಿದ್ಧೇ ಅಗ್ನಾ ಉಷಸೋ ವ್ಯುಷ್ಟೌ ।
ಅನಾಗಸಂ ತಮದಿತಿಃ ಕೃಣೋತು ಸ ಮಿತ್ರೇಣ ವರುಣೇನಾ ಸಜೋಷಾಃ ॥

॥ ಪದಪಾಠಃ ॥

ಯಃ । ಅಶ್ವಸ್ಯ । ದಧಿಽಕ್ರಾವ್ಣಃ । ಅಕಾರೀತ್ । ಸಂಽಇದ್ಧೇ । ಅಗ್ನೌ । ಉಷಸಃ । ವಿಽಉಷ್ಟೌ । ಅನಾಗಸಂ । ತಂ । ಅದಿತಿಃ । ಕೃಣೋತು । ಸಃ । ಮಿತ್ರೇಣ । ವರುಣೇನ । ಸಽಜೋಷಾಃ ॥ ೩ ॥

॥ ಸಾಯಣಭಾಷ್ಯಂ ॥

ಯೋ ಯಜಮಾನೋಽಶ್ವಸ್ಯಾಶ್ವರೂಪಸ್ಯ ವ್ಯಾಪ್ತಸ್ಯ ವಾ ದಧಿಕ್ರಾವ್ಣಃ ಸ್ತುತಿಮುಷಸೋ ವ್ಯುಷ್ಟೌ ಪ್ರಭಾತೇ ಸತ್ಯಗ್ನೌ ಸಮಿದ್ಧೇ ಸತ್ಯಕಾರೀತ್ । ಅಕಾರ್ಷೀತ್ । ಮಿತ್ರೇಣ ವರುಣೇನ ಚಾಹೋರಾತ್ರಾಭಿಮಾನಿದೇವಾಭ್ಯಾಂ ಸಜೋಷಾಃ ಸಮಾನಪ್ರೀತಿರದಿತಿರಖಂಡನೀಯೋ ದಧಿಕ್ರಾಸ್ತಂ ಯಜಮಾನಮನಾಗಸಂ ಕೃಣೋತು । ಕರೋತು ॥

॥ ಪ್ರತಿಪದಾರ್ಥ ॥

ಯಃ—ಯಾವ ಯಜಮಾನನು । ಅಶ್ವಸ್ಯ—ವ್ಯಾಪಕವಾದುದೂ ಮತ್ತು ಅಶ್ವರೂಪವಾದುದೂ ಆದ । ದಧಿಕ್ರಾವ್ಣಃ—ದಧಿಕ್ರಾದೇವತೆಯ ಸ್ತುತಿಯನ್ನು । ಉಷಸಃ ವ್ಯುಷ್ಟೌ—ಉಷಸ್ಸಿನ ಉದಯಕಾಲದಲ್ಲಿ । ಅಗ್ನೌ ಸಮಿದ್ಧೇ—ಅಗ್ನಿಯು ಪ್ರಜ್ವಲಿತವಾದಾಗ । ಅಕಾರೀತ್—ನೆರವೇರಿಸುವನೋ (ಅಂತಹ) । ತಂ—ಆ ಯಜಮಾನನನ್ನು । ಮಿತ್ರೇಣ—ಮಿತ್ರನೊಂದಿಗೂ । ವರುಣೇನ—ವರುಣನೊಂದಿಗೂ । ಸಜೋಷಾಃ—ಸಮಾನಪ್ರೀತಿಯುಳ್ಳವನೂ । ಅದಿತಿಃ—ಅಖಂಡನೀಯನೂ ಆದ ದಧಿಕ್ರಾದೇವನು । ಅನಾಗಸಂ—ಪಾಪರಹಿತನನ್ನಾಗಿ । ಕೃಣೋತು—ಮಾಡಲಿ.

॥ ಭಾವಾರ್ಥ ॥

ಯಾವ ಯಜಮಾನನು ವ್ಯಾಪಕವಾದುದೂ, ಅಶ್ವರೂಪವಾದುದೂ ಆದ ದಧಿಕ್ರಾದೇವತೆಯ ಸ್ತುತಿಯನ್ನು ಉಷಸ್ಸಿನ ಆವಿರ್ಭಾವಕಾಲದಲ್ಲಿ ಅಗ್ನಿಯು ಪ್ರಜ್ವಲಿತನಾದಾಗ ನೆರವೇರಿಸುವನೋ ಅಂತಹ ಯಜಮಾನನನ್ನು ಮಿತ್ರನೊಂದಿಗೂ, ವರುಣನೊಂದಿಗೂ ಸಮಾನಪ್ರೀತಿಯುಳ್ಳವನೂ, ಅಖಂಡನೀಯನೂ ಆದ ದಧಿಕ್ರಾದೇವನು ಪಾಪರಹಿತನನ್ನಾಗಿ ಮಾಡಲಿ.

## English Translation.

May Aditi, consentient with Mitra and Varuna, render him free from sin who has performed the worship of the steed Dadhikra, when the fire has been kindled at the opening of the dawn.



॥ ಸಂಹಿತಾಪಾಠಃ ॥

ದಧಿಕ್ರಾವ್ಣ ಇಷ ಊರ್ಜೋ ಮಹೋ ಯದಮನ್ಮಹಿ ಮರುತಾಂ ನಾಮ ಭದ್ರಂ ।
ಸ್ವಸ್ತಯೇ ವರುಣಂ ಮಿತ್ರಮಗ್ನಿಂ ಹವಾಮಹ ಇಂದ್ರಂ ವಜ್ರಬಾಹುಂ ॥

॥ ಪದಪಾಠಃ ॥

ದಧಿಽಕ್ರಾವ್ಣಃ । ಇಷಃ । ಊರ್ಜಃ । ಮಹಃ । ಯತ್ । ಅಮನ್ಮಹಿ । ಮರುತಾಂ । ನಾಮ । ಭದ್ರಂ ।
ಸ್ವಸ್ತಯೇ । ವರುಣಂ । ಮಿತ್ರಂ । ಅಗ್ನಿಂ । ಹವಾಮಹೇ । ಇಂದ್ರಂ । ವಜ್ರಽಬಾಹುಂ ॥ ೪ ॥

॥ ಸಾಯಣಭಾಷ್ಯಂ ॥

ಇಷೋಽನ್ನಸಾಧಕಸ್ಯೋರ್ಜೋ ಬಲಸಾಧಕಸ್ಯ ಮಹೋ ಮಹತೋ ದಧಿಕ್ರಾವ್ಣೋ ದೇವಸ್ಯ ಮರುತಾಂ ಸ್ತೋತೄಣಾಂ ಸ್ವಭೂತಂ ಭದ್ರಂ ಕಲ್ಯಾಣಂ ನಾಮ ನಾಮರೂಪಮಸ್ತಿ ಯತ್ತದಮನ್ಮಹಿ । ಸ್ತುಮಃ । ಕಿಂಚಾತ್ರ ನಿಪಾತಭಾಜೋ ವರುಣಾದೀಂಶ್ಚ ಸ್ವಸ್ತಯೇ ಕ್ಷೇಮಾಯ ಹವಾಮಹೇ ॥

॥ ಪ್ರತಿಪದಾರ್ಥ ॥

ಇಷಃ—ಅನ್ನಸಾಧಕನೂ । ಊರ್ಜಃ—ಬಲಸಾಧಕನೂ । ಮಹಃ—ಮಹಾತ್ಮನೂ ಆದ ದಧಿಕ್ರಾವ್ಣಃ—ದಧಿಕ್ರಾದೇವತೆಯ । ಮರುತಾಂ– ಸ್ತೋತೃಗಳಿಗೆ । ಭದ್ರಂ—ಕಲ್ಯಾಣಾತ್ಮಕವಾದ । ನಾಮ—ನಾಮರೂಪಗಳು । ಯತ್—ಯಾವುದಿವೆಯೋ (ಅವನ್ನು) । ಅಮನ್ಮಹಿ—ನಾವು ಸ್ತುತಿಸೋಣ । ವರುಣಂ—ವರುಣನನ್ನೂ । ಮಿತ್ರಂ—ಮಿತ್ರನನ್ನೂ । ಅಗ್ನಿಂ—ಅಗ್ನಿಯನ್ನೂ । ವಜ್ರಬಾಹುಂ—ವಜ್ರಬಾಹುವಾದ । ಇಂದ್ರಂ—ಇಂದ್ರನನ್ನೂ । ಸ್ವಸ್ತಯೇ—ನಮ್ಮ ಕಲ್ಯಾಣಕ್ಕಾಗಿ । ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಅನ್ನಸಾಧಕನೂ, ಬಲಸಾಧಕನೂ, ಮಹಾತ್ಮನೂ ಆದ ದಧಿಕ್ರಾದೇವತೆಯ ಸ್ತೋತೃಗಳಿಗೆ ಕಲ್ಯಾಣಾತ್ಮಕವಾದ ನಾಮರೂಪಗಳು ಯಾವುದಿವೆಯೋ ಅದನ್ನು ನಾವು ಸ್ತುತಿಸೋಣ. ವರುಣನನ್ನೂ, ಮಿತ್ರನನ್ನೂ, ಅಗ್ನಿಯನ್ನೂ, ವಜ್ರಬಾಹುವಾದ ಇಂದ್ರನನ್ನೂ ಸಹ ನಮ್ಮ ಕಲ್ಯಾಣಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Whilst we glorify the name of the great Dadhikra, the means of sustenance and of strength, the prosperity of those who praise (him), let us invoke (also) for our welfare Varuna, Mitra, Agni, and Indra, the bearer of the thunderbolt.



॥ ಸಂಹಿತಾಪಾಠಃ ॥

ಇಂದ್ರಮಿವೇದುಭಯೇ ವಿ ಹ್ವಯಂತ ಉದೀರಾಣಾ ಯಜ್ಞಮುಪ-
ಪ್ರಯಂತಃ ।
ದಧಿಕ್ರಾಮು ಸೂದನಂ ಮರ್ತ್ಯಾಯ ದದಥುರ್ಮಿತ್ರಾವರುಣಾ ನೋ
ಅಶ್ವಂ ॥ ೫ ॥

॥ ಪದಪಾಠಃ ॥

ಇಂದ್ರಂಽಇವ । ಇತ್ । ಉಭಯೇ । ವಿ । ಹ್ವಯಂತೇ । ಉತ್ಽಈರಾಣಃ । ಯಜ್ಞಂ । ಉಪಽಪ್ರಯಂತಃ ।
ದಧಿಽಕ್ರಾಂ । ಊಂ ಇತಿ । ಸೂದನಂ । ಮರ್ತ್ಯಾಯ । ದದಥುಃ । ಮಿತ್ರಾವರುಣಾ । ನಃ । ಅಶ್ವಂ ॥ ೫ ॥

॥ ಸಾಯಣಭಾಷ್ಯಂ ॥

ಇಂದ್ರಮಿವ್ಯೇನಂ ದಧಿಕ್ರಾಮುದೀರಾಣಾ ಯುದ್ಧಾಯೋದ್ಯೋಗ್ಯಂ ಕುರ್ವಂತೋ ಯಜ್ಞಮುಪಪ್ರಯಂತೋ ಯಜ್ಞಮುಪಕ್ರಮ್ಯ ಪ್ರವರ್ತಮಾನಾಶ್ಚೋಭಯೇ ವಿ ಹ್ವಯಂತೇ । ಆಹ್ವಯಂತಿ । ಯಂ ಮರ್ತ್ಯಾಯ ಮರ್ತ್ಯಸ್ಯ ಸೂದನಂ ಪ್ರೇರಕಮಶ್ವಮಶ್ವರೂಪಂ ದಧಿಕ್ರಾಂ ದೇವಂ ಹೇ ಮಿತ್ರಾವರುಣಾ ನೋಽಸ್ಮಾಕಮರ್ಥಾಯ ದದಥುಃ । ಧಾರಯಥಃ । ತಂ ವಿಹ್ವಯಂತೇ । ಉಭಯ ಇತ್ಯತ್ರ ಸ್ತೋತೃಶಂಸಿತೃಭೇದೇನ ವೋಭಯವಿಧತ್ವಮುವಗಂತವ್ಯಂ ॥

॥ ಪ್ರತಿಪದಾರ್ಥ ॥

ಮಿತ್ರಾವರುಣಾ—ಎಲೈ ಮಿತ್ರಾವರುಣರೇ । ಮರ್ತ್ಯಾಯ—ಮಾನವನಿಗೆ । ಸೂದನಂ—ಪ್ರೇರಕನೂ। ಅಶ್ವಂ—ಅಶ್ವರೂಪನೂ ಆದ । ದಧಿಕ್ರಾಂ—(ಯಾವ) ದಧಿಕ್ರಾದೇವನನ್ನು । ನಃ—ನಮ್ಮ ಕಲ್ಯಾಣಕ್ಕಾಗಿ । ದದಥುಃ—ಧರಿಸಿದ್ದೀರೋ (ಅಥವಾ ನಮಗೆ ಒದಗಿಸಿದ್ದೀರೋ) ಅಂತಹ ದಧಿಕ್ರಾದೇವನನ್ನು । ಉದೀರಾಣಾಃ—ಯುದ್ಧಕ್ಕಾಗಿ ಹೊರಟಿರುವವರೂ (ಹಾಗೆಯೇ) । ಯಜ್ಞಂ—ಯಜ್ಞನಿರ್ವಹಣಕ್ಕಾಗಿ । ಉಪ ಪ್ರಯಂತಃ—ಪ್ರಯತ್ನಿಸುತ್ತಿರುವವರೂ । ಉಭಯೇ—ಈ ಎರಡು ಪ್ರಯತ್ನವುಳ್ಳವರೂ ಸಹ । ಇಂದ್ರಂ ಇವ—ಇಂದ್ರನನ್ನು ಹೇಗೋ ಹಾಗೆ । ವಿ ಹ್ವಯಂತೇ—ಆಹ್ವಾನಿಸುತ್ತಾರೆ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ಮಾನವನಿಗೆ ಪ್ರೇರಕನೂ, ಅಶ್ವರೂಪನೂ ಆದ ಯಾವ ದಧಿಕ್ರಾದೇವನನ್ನು ನಮ್ಮ ಕಲ್ಯಾಣಕ್ಕಾಗಿ ನೀವು ಧರಿಸಿದ್ದೀರೋ ಅಂತಹ ದಧಿಕ್ರಾದೇವನನ್ನು ಯುದ್ಧಕ್ಕಾಗಿ ಹೊರಟಿರುವವರೂ, ಯಜ್ಞನಿರ್ವಹಣಕ್ಕಾಗಿ ಪ್ರಯತ್ನಿಸುತ್ತಿರುವವರೂ, ಈ ಎರಡು ಪ್ರಯತ್ನವುಳ್ಳವರೂ ಸಹ ಇಂದ್ರನನ್ನು ಹೇಗೋ ಹಾಗೆ ಆಹ್ವಾನಿಸುತ್ತಾರೆ.

## English Translation.

Those who are preparing for battle, those who are proceeding to sacrifice, both invoke (Dadhikra) as if (he was) Indra : Mitra and Varuna have given to us the horse Dadhikra as an encourager to man.

॥ ಸಂಹಿತಾಪಾಠಃ ॥

ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।
ಸುರಭಿ ನೋ ಮುಖಾ ಕರತ್ಪ್ರ ಣ ಆಯೂಂಷಿ ತಾರಿಷತ್ ॥ ೬ ॥

॥ ಪದಪಾಠಃ ॥

ದಧಿಽಕ್ರಾವ್ಣಃ । ಅಕಾರಿಷಂ । ಜಿಷ್ಣೋಃ । ಅಶ್ವಸ್ಯ । ವಾಜಿನಃ ।

ಸುರಭಿ । ನಃ । ಮುಖಾ । ಕರತ್ । ಪ್ರ । ನಃ । ಆಯೂಂಷಿ । ತಾರಿಷತ್ ॥ ೬ ॥

॥ ಸಾಯಣಭಾಷ್ಯಂ ॥

ದಧಿಕ್ರಾವ್ಣೋ ಅಕಾರಿಷಮಿತಿ ಷಷ್ಠೀ ಪವಿತ್ರೇಷ್ಟ್ಯಾ ಅನುವಾಕ್ಯಾ। ಸೂತ್ರಿತಂ ಚ। ದಧಿಕ್ರಾವ್ಣೋ ಅಕಾರಿಷಮಾ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ । ಆ. ೨-೧೨ । ಇತಿ ॥ ದಧಿದ್ರಪ್ಸಭಕ್ಷಣೇಽಪ್ಯೇಷಾ । ದಧಿಕ್ರಾವ್ಣೋ ಅಕಾರಿಷಮಿತ್ಯಾಗ್ನೀಧ್ರೀಯೇ ದಧಿದ್ರಪ್ಸಾನ್ ಭಕ್ಷಯಂತಿ । ಅ. ೬-೧೨ । ಇತಿ ಸೂತ್ರಿತತ್ವಾತ್ ॥

ದಧಿಕ್ರಾವ್ಣೋ ದೇವಸ್ಯ ಸ್ತುತಿಮಕಾರಿಷಂ । ಕರವಾಣಿ । ಜಿಷ್ಣೋರ್ಜಯಶೀಲಸ್ಯಾಶ್ವಸ್ಯ ವ್ಯಾಪಕಸ್ಯ ವಾಜಿನೋ ವೇಗವತಃ । ಸ ದೇವೋ ನೋಽಸ್ಮಾಕಂ ಮುಖಾ ಮುಖಾನಿ ಚಕ್ಷುರಾದೀಂದ್ರಿಯಾಣಿ ಸುರಭಿ ಸುರಭೀಣಿ ಕರತ್ । ಕರೋತು । ನೋಽಸ್ಮಭ್ಯಮಾಯೂಂಷಿ ಪ್ರತಾರಿಷತ್ । ಪ್ರವರ್ಧಯತು । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥

॥ ಪ್ರತಿಪದಾರ್ಥ ॥

ಜಿಷ್ಣೋಃ— ಜಯಶೀಲನೂ । ಅಶ್ವಸ್ಯ— ವ್ಯಾಪಕನೂ । ವಾಜಿನಃ— ವೇಗವಂತನೂ ಆದ । ದಧಿಕ್ರಾವ್ಣಃ—ದಧಿಕ್ರಾದೇವತೆಯ ಸ್ತುತಿಯನ್ನು । ಅಕಾರಿಷಂ—ನಾನು ಮಾಡಿದ್ದೇನೆ । (ಆ ದೇವನು) ನಃ—ನಮ್ಮ । ಮುಖಾ—ಮುಖಗಳನ್ನು (ಚಕ್ಷುರಾದೀಂದ್ರಿಯಗಳನ್ನು) । ಸುರಭಿ—ಸುಗಂಧಯುಕ್ತವಾಗುವಂತೆ । ಕರತ್—ಮಾಡಲಿ । ನಃ—ನಮ್ಮ । ಆಯೂಂಷಿ—ಆಯುಸ್ಸುಗಳನ್ನು । ಪ್ರ ತಾರಿಷತ್—ವೃದ್ಧಿಯಾಗುವಂತೆ ಮಾಡಲಿ.

॥ ಭಾವಾರ್ಥ ॥

ಜಯಶೀಲನೂ, ಸರ್ವವ್ಯಾಪಕನೂ, ವೇಗವಂತನೂ ಆದ ದಧಿಕ್ರಾದೇವತೆಯ ಸ್ತುತಿಯನ್ನು ನಾನು ಮಾಡಿದ್ದೇನೆ. ಆ ದೇವನು ನಮ್ಮ ಮುಖಗಳನ್ನು ಸುಗಂಧಯುಕ್ತವಾಗುವಂತೆ ಮಾಡಲಿ. ನಮ್ಮ ಆಯುಸ್ಸುಗಳನ್ನು ವೃದ್ಧಿಯಾಗುವಂತೆ ಮಾಡಲಿ.

## English Translation.

I have celebrated the praise of Dadhikra, the rapid and victorious steed: may he make our mouths fragrant, may he prolong our lives.



# ನಲವತ್ತನೆಯ ಸೂಕ್ತವು

ದಧಿಕ್ರಾವ್ಣ ಇದಿತಿ ಪಂಚರ್ಚಮಷ್ಟಮಂ ಸೂಕ್ತಂ ವಾಮದೇವಸ್ಯಾರ್ಷಂ ದಾಧಿಕ್ರಂ । ಆದ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ಹಂಸಃ ಶುಚಿಷದಿತ್ಯೇಷಾ ಸೂರ್ಯದೇವತಾಕಾ । ತಥಾ ಚಾನುಕ್ರಮಣಿಕಾ। ದಧಿಕ್ರಾವ್ಣಃ ಪಂಚ ಚತಸ್ರೋಽಂತ್ಯಾ ಜಗತ್ಯೋಽಂತ್ಯಾ ಸೌರೀತಿ । ಸೂಕ್ತವಿನಿಯೋಗೋ ಲೈಂಗಿಕಃ ॥

ಅನುವಾದವು—ದಧಿಕ್ರಾವ್ಣ ಇತ್ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ದಧಿಕ್ರನು ದೇವತೆಯು; ಈ ಸೂಕ್ತದ ಮೊದಲನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಈ ಸೂಕ್ತದಲ್ಲಿ ಹಂಸಃ ಶುಚಿಷತ್ ಎಂಬ ಐದನೆಯ ಋಕ್ಕು ಸೂರ್ಯದೇವತಾಕವು. ಅನುಕ್ರಮಣಿಕೆಯಲ್ಲಿ—:ದಧಿಕ್ರಾವ್ಣಃ ಪಂಚ ಚತಸ್ರೋಽನ್ತ್ಯಾ ಜಗತ್ಯೋಽನ್ತ್ಯಾ ಸೌರೀ ಇತಿ ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೪೦

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೪೦ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ವಾಮದೇವಃ ॥

॥ ದೇವತಾ—೧-೪, ದಧಿಕ್ರಾ । ೫. ಸೂರ್ಯಃ ॥

॥ ಛಂದಃ—೧. ತ್ರಿಷ್ಟುಪ್ । ೨-೫. ಜಗತೀ ।

॥ ಸಂಹಿತಾಪಾಠಃ ॥

ದಧಿಕ್ರಾವ್ಣ ಇದು ನು ಚರ್ಕಿರಾಮ ವಿಶ್ವಾ ಇನ್ಮಾಮುಷಸಃ ಸೂದಯಂತು।

ಅಪಾಮಗ್ನೇರುಷಸಃ ಸೂರ್ಯಸ್ಯ ಬೃಹಸ್ಪತೇರಾಂಗಿರಸಸ್ಯ ಜಿಷ್ಣೋಃ ॥ ೧॥

॥ ಪದಪಾಠಃ ॥

ದಧಿಽಕ್ರಾವ್ಣಃ । ಇತ್ । ಊಂ ಇತಿ । ನು । ಚರ್ಕಿರಾಮ । ವಿಶ್ವಾಃ । ಇತ್ । ಮಾಂ । ಉಷಸಃ । ಸೂದ-ಯಂತು ।

ಅಪಾಂ । ಅಗ್ನೇಃ । ಉಷಸಃ । ಸೂರ್ಯಸ್ಯ । ಬೃಹಸ್ಪತೇಃ । ಆಂಗಿರಸಸ್ಯ । ಜಿಷ್ಣೋಃ ॥ ೧ ॥

॥ ಸಾಯಣಭಾಷ್ಯಂ ॥

ದಧಿಕ್ರಾವ್ಣ ಇದು ಏತನ್ನಾಮಕಸ್ಯ ದೇವಸ್ಯೈವ ಸ್ತುತಿಂ ನು ಕ್ಷಿಪ್ರಂ ಚರ್ಕಿರಾಮ । ಭೃಶಂ ಕರವಾಮ । ಮಾಂ ವಿಶ್ವಾ ಇದುಷಸಃ ಸರ್ವಾ ಅಪಿ ತಾಃ ಸೂದಯಂತು । ಕರ್ಮಸು ಪ್ರೇರಯಂತು । ಅಹಮಪ್ಯಬಾದಿದೇವತಾನಾಂ ಸ್ತುತಿಂ ಕರವಾಣೀತಿ ಶೇಷಃ । ತಾಸಾಮಪಿ ನಿವಾತಭಾಕ್ತ್ವಾತ್ ಸ್ತುತಿರವಿರುದ್ಧಾ ॥

॥ ಪ್ರತಿಪದಾರ್ಥ ॥

ದಧಿಕ್ರಾವ್ಣ ಇದು—ದಧಿಕ್ರಾ ದೇವತೆಯ ಸ್ತುತಿಯನ್ನೇ । ನು—ಕ್ಷಿಪ್ರವಾಗಿ । ಚರ್ಕಿರಾಮ—ಪಠಿಸೋಣ । ವಿಶ್ವಾ ಇತ್—ಸಮಸ್ತವಾದ । ಉಷಸಃ—ಉಷಸ್ಸುಗಳೂ ಸಹ । ಮಾಂ—ನನ್ನನ್ನು । ಸೂದಯಂತು—(ಕರ್ಮಕ್ಕೆ) ಪ್ರೇರಿಸಲಿ । ಅಪಾಂ—ಉದಕಗಳ । ಅಗ್ನೇಃ—ಅಗ್ನಿಯ । ಉಷಸಃ—ಉಷಸ್ಸಿನ । ಸೂರ್ಯಸ್ಯ—ಸೂರ್ಯನ । ಬೃಹಸ್ಪತೇಃ—ಬೃಹಸ್ಪತಿಯ । ಆಂಗಿರಸಸ್ಯ—ಅಂಗಿರಸ್ಸಿನ ಪುತ್ರನಾದ । ಜಿಷ್ಣೋಃ—ಜಿಷ್ಣುವಿನ (ಇವರೆಲ್ಲರ ಸ್ತುತಿಯನ್ನೂ ಪಠಿಸೋಣ.)

॥ ಭಾವಾರ್ಥ ॥

ನಾವು ಈ ಕಾಲದಲ್ಲಿ ದಧಿಕ್ರಾ ದೇವತೆಯ ಸ್ತುತಿಯನ್ನೇ ಮುಖ್ಯವಾಗಿ ಪಠಿಸೋಣ. ಸಕಲವಾದ ಉಷಸ್ಸುಗಳೂ ನನ್ನನ್ನು ಈ ಕರ್ಮಕ್ಕೆ ಪ್ರೇರಿಸಲಿ. ಹೀಗೆಯೇ ನಾವು ಉದಕಗಳ, ಅಗ್ನಿಯ, ಉಷಸ್ಸಿನ, ಸೂರ್ಯನ, ಬೃಹಸ್ಪತಿಯ ಮತ್ತು ಅಂಗಿರಸ್ಸಿನ ಪುತ್ರನಾದ ಜಿಷ್ಣುವಿನ (ಇವರೆಲ್ಲರ) ಸ್ತುತಿಯನ್ನೂ ಪಠಿಸೋಣ.

## English Translation.

May we repeatedly recite (the praise) of Dadhikravan; may all rising dawns excite me (to the adoration) of the waters, of Agni of Ushas, of Surya, of Brihaspati, and of Jishnu, the son of Angiras.

॥ ಸಂಹಿತಾಪಾಠಃ ॥

ಸತ್ವಾ ಭರಿಷೋ ಗವಿಷೋ ದುವನ್ಯಸಚ್ಛ್ರವಸ್ಯಾದಿಷ ಉಷಸಸ್ತುರಣ್ಯಸತ್ ।
ಸತ್ಯೋ ದ್ರವೋ ದ್ರವರಃ ಪತಂಗರೋ ದಧಿಕ್ರಾವೇಷಮೂರ್ಜಂ ಸ್ವರ್ಜನತ್ ॥ ೨ ॥

॥ ಪದಪಾಠಃ ॥

ಸತ್ವಾ । ಭರಿಷಃ । ಗೋऽಇಷಃ । ದುವನ್ಯऽಸತ್ । ಶ್ರವಸ್ಯಾತ್ । ಇಷಃ । ಉಷಸಃ । ತುರಣ್ಯऽಸತ್ ।

ಸತ್ಯಃ । ದ್ರವಃ । ದ್ರವರಃ । ಪತಂಗರಃ । ದಧಿऽಕ್ರಾವಾ । ಇಷಂ । ಊರ್ಜಂ । ಸ್ವಃ । ಜನತ್ ॥ ೨ ॥

॥ ಸಾಯಣಭಾಷ್ಯಂ ॥

ಸತ್ವಾ ಗಂತಾ ಭರಿಷೋ ಭರಣಕುಶಲೋ ಗವಿಷೋ ಗವಾಂ ಪ್ರೇರಕ ಏಷ್ಟಾ ವಾ ದುವನ್ಯಸತ್ । ದುವಃ ಪರಿಚರಣಮಿಚ್ಛಂತೋ ದುವನ್ಯಾಃ । ತೇಷು ಸೀದತೀತಿ ದುವನ್ಯಸತ್ । ಇಷ ಇಷ್ಯಮಾಣಾಯಾ ಉಷಸಃ ಸಂಬಂಧಿನಿ ಕಾಲ ಇತ್ಯರ್ಥಃ । ಯದ್ವಾ । ಇಷ ಏಷ್ಟಾ ಏಷಣೀಯೋ ವಾ । ಶ್ರವಸ್ಯಾತ್ । ಶ್ರವಸ್ಯೇತ್ । ಅನ್ನಮಿಚ್ಛೇತ್ । ಕಿಂಚ ತುರಣ್ಯಸತ್ । ತ್ವರಯಾ ಸೀದತೀತಿ ತುರಣ್ಯಸತ್ । ಸತ್ಯಃ ಸತ್ಸು ತಾಯಮಾನೋ ದ್ರವೋ ಗಂತಾ ದ್ರವರಃ ಪ್ರಕೃಷ್ಟವೇಗವಾನ್ ಪತಂಗರಃ । ಪತನೇನೋತ್ಪ್ಲವನೇನ ಪತನಂ ಪತಂಗಃ । ತದ್ವಾನ್ ಪತಂಗರಃ । ಉಕ್ತಲಕ್ಷಣೋ ದಧಿಕ್ರಾವಾ ದೇವ ಇಷಮನ್ನಮೂರ್ಜಂ ಬಲಂ ಸ್ವಃ ಸ್ವರ್ಗಂ ಚ ಜನತ್ । ಜನಯೇತ್ । ಉತ್ಪಾದಯೇತ್ ॥

॥ ಪ್ರತಿಪದಾರ್ಥ ॥

ಸತ್ವಾ—ಸಂಚಾರಸ್ವಭಾವವುಳ್ಳವನೂ । ಭರಿಷಃ—ಜಗತ್ತನ್ನು ಭರಿಸುವ ಶಕ್ತಿಯುಳ್ಳವನೂ । ಗವಿಷಃ—ಗೋವುಗಳ ದಾತನೂ । ದುವನ್ಯಸತ್—ಸ್ತುತಿಕರ್ತನೊಂದಿಗೆ ಕುಳಿತುಕೊಳ್ಳುವವನೂ ಆದ ದಧಿಕ್ರಾದೇವನು । ಇಷಃ— ಅಪೇಕ್ಷಿತವಾದ । ಉಷಸಃ— ಉಷಃಕಾಲದಲ್ಲಿ । ಶ್ರವಸ್ಯಾತ್— ಹವಿಸ್ಸಿನ ರೂಪದ ಅನ್ನವನ್ನು ಅಪೇಕ್ಷಿಸಲಿ । ತುರಣ್ಯಸತ್—ಶೀಘ್ರವಾಗಿ ಗೋಚರಿಸುವವನೂ । ಸತ್ಯಃ—ಸತ್ಯಾತ್ಮಕನೂ । ದ್ರವಃ—ಗಮನಶೀಲನೂ । ದ್ರವರಃ—ಗಮನದಲ್ಲಿ ಅಧಿಕವಾದ ವೇಗವುಳ್ಳವನೂ । ಪತಂಗರಃ—ಪತಂಗದ ಹುಳುವಿನಂತೆ ಕುಪ್ಪಳಿಸುವವನೂ ಆದ । ದಧಿಕ್ರಾವಾ—ದಧಿಕ್ರಾದೇವತೆಯು । ಇಷಂ—ಅನ್ನವನ್ನೂ । ಊರ್ಜಂ—ಬಲವನ್ನೂ । ಸ್ವಃ—ಸ್ವರ್ಗವನ್ನೂ । ಜನತ್—ಉತ್ಪನ್ನ ಮಾಡಲಿ.

॥ ಭಾವಾರ್ಥ ॥

ಸಂಚಾರಸ್ವಭಾವವುಳ್ಳವನೂ, ಜಗತ್ತನ್ನು ಭರಿಸುವ ಶಕ್ತಿಯುಳ್ಳವನೂ, ಗೋವುಗಳ ದಾತನೂ, ಸ್ತುತಿಕರ್ತನೊಂದಿಗೆ ಕುಳಿತುಕೊಳ್ಳುವವನೂ ಆದ ದಧಿಕ್ರಾದೇವನು ಅಪೇಕ್ಷಿತವಾದ ಉಷಸ್ಸಿನ ಆವಿರ್ಭಾವದ ಕಾಲದಲ್ಲಿ ಹವಿಸ್ಸಿನ ರೂಪದ ಅನ್ನವನ್ನು ಅಪೇಕ್ಷಿಸಿ ಸ್ವೀಕರಿಸಲಿ. ಶೀಘ್ರವಾಗಿ ಗೋಚರಿಸುವವನೂ, ಸತ್ಯಾತ್ಮಕನೂ, ಗಮನಶೀಲನೂ, ಗಮನದಲ್ಲಿ ಅಧಿಕವಾದ ವೇಗವುಳ್ಳವನೂ, ಪತಂಗದ ಹುಳುವಿನಂತೆ ಕುಪ್ಪಳಿಸುವವನೂ ಆದ ದಧಿಕ್ರಾದೇವತೆಯು ಅನ್ನವನ್ನೂ, ಬಲವನ್ನೂ, ಸ್ವರ್ಗವನ್ನೂ ಉತ್ಪನ್ನ ಮಾಡಲಿ.

## English Translation.

May Dadhikravan, the active, the cherisher, the giver of cattle, who abides with the devout, the swift-going be willing to accept (the sacrifical)

food at the time of the desirable dawn : may he who is true, moving, rapid and leaping like a grasshopper, produce (for us) food, strength, heaven.



॥ ಸಂಹಿತಾಪಾಠಃ ॥

ಉತ ಸ್ಮಾಸ್ಯ ದ್ರವತಸ್ತುರಣ್ಯತಃ ಪರ್ಣಂ ನ ವೇರನು ವಾತಿ ಪ್ರಗರ್ಧಿನಃ ।
ಶ್ಯೇನಸ್ಯೇವ ಧ್ರಜತೋ ಅಂಕಸಂ ಪರಿ ದಧಿಕ್ರಾವ್ಣಃ ಸಹೋರ್ಜಾ ತರಿತ್ರತಃ॥

॥ ಪದಪಾಠಃ ॥

ಉತ । ಸ್ಮ । ಅಸ್ಯ । ದ್ರವತಃ। ತುರಣ್ಯತಃ । ಪರ್ಣಂ । ನ । ವೇಃ । ಅನು । ವಾತಿ । ಪ್ರಽಗರ್ಧಿನಃ ।
ಶ್ಯೇನಸ್ಯಽಇವ । ಧ್ರಜತಃ । ಅಂಕಸಂ । ಪರಿ । ದಧಿಽಕ್ರಾವ್ಣಃ । ಸಹ । ಊರ್ಜಾ । ತರಿತ್ರತಃ ॥ ೩ ॥

॥ ಸಾಯಣಭಾಷ್ಯಂ ॥

ಉತ ಸ್ಮ ಅಪಿ ಚ ಖಲು ದ್ರವತೋ ಗಚ್ಛತಸ್ತುರಣ್ಯತಸ್ತ್ವರಮಾಣಸ್ಯ ಪ್ರಗರ್ಧಿನಃ ಪ್ರಕರ್ಷೇಣಾಭಿಕಾಂಕ್ಷತೋಽಸ್ಯ ದೇವಸ್ಯ ಗತಿಂ ವೇರ್ಗಂತುಃ ಪಕ್ಷಿಣಃ ಪರ್ಣಂ ನ ಗಮನಂ ಪತ್ರಂ ವಾನುಸೃತ್ಯ ಯಥಾ ವಾಂತ್ಯನ್ಯೇ ಪಕ್ಷಿಣಸ್ತದ್ವದನು ವಾತಿ ಸರ್ವೋ ವೇಗವಾನ್ ಜನಃ । ಸರ್ವೇಷಾಮಪಿ ಶೀಘ್ರಗಾಮಿತ್ಯರ್ಥಃ । ಕಿಂಚ ಧ್ರಜತೋ ಗಚ್ಛತಸ್ತರಿತ್ರತಸ್ತಾರಯತೋಽನ್ಯಾನ್ ॥ ಅಂತರ್ಭಾವಿತಣ್ಯರ್ಥೋಽಯಂ ॥ ಶ್ಯೇನಸ್ಯೇವಾಂಕಸಂ ಪಾದಾಧಾರಮುರಃಪ್ರದೇಶಂ ವಾ ಪರಿ ಪರಿತ ಊರ್ಜಾ ಬಲೇನ ನಿಮಿತ್ತೇನಾನ್ನಾರ್ಥಂ ವಾ ಸಹೈಕೀಭೂಯ । ಸಂಘೇನ ಗಚ್ಛಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ದ್ರವತಃ—ಮುಂದೆ ಹೋಗುತ್ತಿರುವವನೂ । ತುರಣ್ಯತಃ—ವೇಗಶಾಲಿಯೂ । ಪ್ರಗರ್ಧಿನಃ—ಉದಿಷ್ಟಪ್ರದೇಶವನ್ನು ಸೇರಲು ಆತುರವುಳ್ಳವನೂ ಆದ । ಅಸ್ಯ ದಧಿಕ್ರಾವ್ಣಃ— ಈ ದಧಿಕ್ರಾದೇವನ ಗಮನವನ್ನು । ವೇಃ—ಮುಖ್ಯಪಕ್ಷಿಯ । ಪರ್ಣಂ ನ—ಗಮನವನ್ನು ಇತರ ಪಕ್ಷಿಗಳು ಅನುಸರಿಸುವಂತೆ । ಅನು ವಾತಿ—ಸಕಲ ಜನರೂ ಅನುಸರಿಸುತ್ತಾರೆ । ಧ್ರಜತಃ—ಮುಂದುವರಿಯುತ್ತಿರುವವನೂ । ತರಿತ್ರತಃ—ಇತರರನ್ನು ರಕ್ಷಿಸತಕ್ಕವನೂ । ಶ್ಯೇನಸ್ಯೇವ—ಶ್ಯೇನಪಕ್ಷಿಯಂತೆ । ಅಂಕಸಂ—ಉರಃಪ್ರದೇಶವುಳ್ಳ ಅಶ್ವರೂಪದವನೂ ಆದ ಈ ದೇವನ । ಪರಿ—ಸುತ್ತಲೂ । ಊರ್ಜಾ—ಬಲನಿಮಿತ್ತವಾಗಿ । ಸಹ—ಎಲ್ಲರೂ ಒಟ್ಟಿಗೆ ಸೇರಿಕೊಂಡು ಅನುಸರಿಸುತ್ತಾರೆ.

॥ ಭಾವಾರ್ಥ ॥

ಅಗ್ರಗಾಮಿಯಾಗಿ ಹೋಗುತ್ತಿರುವವನೂ, ವೇಗಶಾಲಿಯೂ, ಉದ್ದಿಷ್ಟಪ್ರದೇಶವನ್ನು ಸೇರಲು ಆತುರವುಳ್ಳವನೂ ಆದ ಈ ದಧಿಕ್ರಾದೇವನ ಗಮನವನ್ನು, ಮುಖ್ಯಪಕ್ಷಿಯನ್ನು ಇತರ ಪಕ್ಷಿಗಳು ಅನುಸರಿಸುವಂತೆ ಸಕಲ ಜನರೂ ಅನುಸರಿಸುತ್ತಾರೆ. ಇತರರನ್ನೆಲ್ಲಾ ರಕ್ಷಿಸತಕ್ಕವನೂ, ಶ್ಯೇನಪಕ್ಷಿಯಂತೆ ಉರಃಪ್ರದೇಶವುಳ್ಳ ಅಶ್ವರೂಪದವನೂ ಆದ ಈ ದೇವನ ಸುತ್ತಲೂ ಎಲ್ಲರೂ ಒಟ್ಟಿಗೆ ಸೇರಿಕೊಂಡು ಬಲನಿಮಿತ್ತವಾಗಿ ಇವನನ್ನು ಅನುಸರಿಸುತ್ತಾರೆ.

English Translation.

And after him who is quick-going, hastening, eager (to arrive at his goal, men) follow (as other birds pursue) the flight of a swift (bird) striving togethe to keep up by the side of Dadikravan the transporter (of others) as swift as a hawk.

॥ ಸಂಹಿತಾಪಾಠಃ ॥

ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।
ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾಂಸ್ಯನ್ವಾಪನೀಫಣತ್ ॥ ೪ ॥

॥ ಪದಪಾಠಃ ॥

ಉತ । ಸ್ಯಃ । ವಾಜೀ । ಕ್ಷಿಪಣಿಂ । ತುರಣ್ಯತಿ । ಗ್ರೀವಾಯಾಂ । ಬದ್ಧಃ । ಅಪಿऽಕಕ್ಷೇ । ಆಸನಿ ।
ಕ್ರತುಂ । ದಧಿऽಕ್ರಾಃ । ಅನು । ಸಂऽತವೀತ್ವತ್ । ಪಥಾಂ । ಅಂಕಾಂಸಿ । ಅನು । ಆऽಪನೀಫಣತ್ ॥ ೪ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಸ್ಯ ಸ ವಾಜೀ ವೇಜನವಾನಶ್ವರೂಪೋ ದೇವೋ ಗ್ರೀವಾಯಾಂ ಗರಣಸಾಧನಾಯಾಂ ಕಂಠೇ ಬದ್ಧೋऽಪಿಕಕ್ಷೇ ಕಕ್ಷಪ್ರದೇಶ ಆಸನ್ಯಾಸ್ಯೇ ಚ ಬದ್ಧಃ । ಬದ್ಧಪಲ್ಯಂಕಸ್ಯೋಕ್ತೇಷು ಸ್ಥಾನೇಷು ಪಾಶಬಂಧಾಃ ಸಂಭವಂತಿ। ಏವಂ ಬದ್ಧಃ ಸನ್ ಕ್ಷಿಪಣಿಂ ಕ್ಷೇಪಣಮನು ತುರಣ್ಯತಿ। ತ್ವರಯತಿ ಗಂತುಂ । ಕಿಂಚಾಯಂ ದಧಿಕ್ರಾ ದೇವಃ ಕ್ರತುಂ ಕರ್ಮ ಪ್ರಜ್ಞಾಂ ವಾನ್ವನುಸೃತ್ಯ ಸಂತವೀತ್ವತ್ ಪ್ರವೃದ್ಧಬಲವಾನ್ ಸನ್ ಪಥಾಂ ಮಾರ್ಗಾಣಾಮಂಕಾಂಸಿ ಕುಟಿಲಾನ್ಯನುಸೃತ್ಯಾಪನೀಫಣತ್ ।

ಸರ್ವತೋ ಭೃಶಂ ಗಚ್ಛತಿ ॥ ಫಣತೇರ್ಗತ್ಯರ್ಥಸ್ಯ ಯಙ್‌ಲುಕೀದಂ ರೂಪಂ ॥ ಅಪಿ ಸ ವಾಜೀ ವೇಜನವಾನಿತ್ಯಾದಿನಿರುಕ್ತಮನುಸಂಧೇಯಂ ॥ ನಿ. ೨-೨೮ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಸ್ಯಃ—ಪ್ರಸಿದ್ಧನೂ । ವಾಜೀ—ಅಶ್ವರೂಪನೂ ಆದ ದಧಿಕ್ರಾದೇವನು । ಗ್ರೀವಾಯಾಂ—ಕತ್ತಿನಲ್ಲಿಯೂ । ಅಪಿಕಕ್ಷೇ—ಕಕ್ಷಪ್ರದೇಶದಲ್ಲಿಯೂ । ಆಸನಿ—ಮುಖಪ್ರದೇಶದಲ್ಲಿಯೂ । ಬದ್ಧಃ—ಬಂಧಿತನಾಗಿ । ಕ್ಷಿಪಣಿಂ—ತನ್ನ ಪಾದಕ್ಷೇಪವನ್ನು । ಅನು ತುರಣ್ಯತಿ—ಅಧಿಕವಾಗಿ ವೇಗಗೊಳಿಸುತ್ತಾನೆ । ದಧಿಕ್ರಾಃ—ಇದೇ ದಧಿಕ್ರಾದೇವನು । ಕ್ರತುಂ ಅನು—ಯಜ್ಞವನ್ನು ಅನುಸರಿಸಿ । ಸಂತವೀತ್ವತ್—ಅತ್ಯಂತ ಪ್ರಬಲವಾದ ಶಕ್ತಿಯುಳ್ಳವನಾಗಿ । ಪಥಾಂ—ಸಕಲವಾದ ಮಾರ್ಗಗಳ । ಅಂಕಾಂಸಿ—ಬಳಸುವಿಕೆಯನ್ನೂ । ಆಪನೀ ಫಣತ್—ಪೂರ್ಣವಾಗಿ ವ್ಯಾಪಿಸಿ ಸಂಚರಿಸುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧನೂ, ಅಶ್ವರೂಪನೂ ಆದ ದಧಿಕ್ರಾದೇವನು ಕತ್ತಿನಲ್ಲಿಯೂ ಕಕ್ಷಪ್ರದೇಶದಲ್ಲಿಯೂ, ಮುಖಪ್ರದೇಶದಲ್ಲಿ ಬಂಧಿತನಾಗಿ ತನ್ನ ಪಾದಕ್ಷೇಪವನ್ನು ಅಧಿಕವಾಗಿ ವೇಗಗೊಳಿಸುತ್ತಾನೆ. ಇದೇ ದಧಿಕ್ರಾದೇವನು ಯಜ್ಞವನ್ನನುಸರಿಸಿ ಅತ್ಯಂತ ಪ್ರಬಲವಾದ ಶಕ್ತಿಯುಳ್ಳವನಾಗಿ ಸಕಲಮಾರ್ಗಗಳ ಬಳಸುವಿಕೆಯನ್ನೂ ಪೂರ್ಣವಾಗಿ ವ್ಯಾಪಿಸಿ ಸಂಚರಿಸುತ್ತಾನೆ.

## English Translation.

And that horse bound by his neck, his flanks, his mouth, accelerates his paces : Dadhikra incresing in vigour after the (sacred rite), following the windings of the roads, goes still more rapidly.

॥ ಸಂಹಿತಾಪಾಠಃ ॥

ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ ।
ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ॥

॥ ಪದಪಾಠಃ ॥

ಹಂಸಃ । ಶುಚಿಽಸತ್ । ವಸುಃ । ಅಂತರಿಕ್ಷಽಸತ್ । ಹೋತಾ । ವೇದಿಽಸತ್ । ಅತಿಥಿಃ । ದುರೋಣಽಸತ್। ನೃಽಸತ್ । ವರಽಸತ್ । ಋತಽಸತ್ । ವ್ಯೋಮಽಸತ್ । ಅಪ್ಽಜಾಃ । ಗೋಽಜಾಃ । ಋತಽಜಾಃ । ಅದ್ರಿಽಜಾಃ । ಋತಂ ॥ ೫ ॥

॥ ಸಾಯಣಭಾಷ್ಯಂ ॥

ದಶರಾತ್ರೇ ಷಷ್ಠೇಽಹನಿ ತೃತೀಯಸವನೇ ಮೈತ್ರಾವರುಣಶಸ್ತ್ರೇ ಹಂಸಃ ಶುಚಿಷದಿತ್ಯೇಷಾ । ಆಹೂಯ ದೂರೋಹಣಂ ರೋಹೇದ್ಧಂಸಃ ಶುಚಿಷದಿತಿ ಪಚ್ಛೋಽರ್ಧರ್ಚಶಃ । ಆ. ೮-೨ । ಇತಿ ಸೂತ್ರಂ ॥ ಸ್ಮಾರ್ತವಿನಿಯೋಗಮಾಹ ಶೌನಕಃ । ಹಂಸಃ ಶುಚಿಷದಿತ್ಯೃಚಾ ಶುಚಿರೀಕ್ಷೇದ್ದಿವಾಕರಂ । ಅಂತಕಾಲೇ ಜಪನ್ನೇತಿ ಬ್ರಹ್ಮಣಃ ಸದ್ಮ ಶಾಶ್ವತಂ । ಋಗ್ವಿ. ೨-೧೩ । ಇತಿ ॥

ಅನಯಾ ಸೌರ್ಯರ್ಚಾ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ । ಛಾಂ. ಉ. ೧-೬-೬ । ಇತ್ಯಾದಿಶ್ರುತ್ಯುಕ್ತೋ ಮಂಡಲಾಭಿಮಾನೀ ದೇವೋಽಸ್ತಿ ಯಶ್ಚ ಸರ್ವಪ್ರಾಣಿಚಿತ್ತರೂಪಸ್ಥಿತಃ ಪರಮಾತ್ಮಾ ಯಚ್ಚ ನಿರಸ್ತಸಮಸ್ತೋಪಾಧಿಕಂ ಪರಂ ಬ್ರಹ್ಮ ತತ್ಸರ್ವಮೇಕಮೇವೇತಿ ಪ್ರತಿಪಾದ್ಯತೇ ॥ ಹಂಸಃ । ಹಂತಿರ್ಗತ್ಯರ್ಥಃ । ಸರ್ವತ್ರ ಸರ್ವದಾ ಗಂತಾ ಯೋಽಹಂ ಸೋಽಸಾವಿತ್ಯಾದಿಶ್ರುತ್ಯುಕ್ತಪ್ರಕಾರೇಣೈಕೀಕೃತ್ಯೋಪಾಸ್ಯಃ ಪರಮಾತ್ಮಮಂತ್ರಪ್ರತಿಪಾದ್ಯ ಆದಿತ್ಯಃ । ಸ ಚ ಶುಚೌ ದೀಪ್ತೇ ದ್ಯುಲೋಕೇ ಸೀದತೀತಿ ಶುಚಿಷತ್ । ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತ ಇತ್ಯಾದಿಶ್ರುತೇಃ । ಅನೇನ ದ್ಯುಸ್ಥಾನ ಆದಿತ್ಯಃ ಪ್ರತಿಪಾದಿತಃ । ಸ ಏವ ಮಧ್ಯಸ್ಥಾನೋ ವಾಯುರಿತ್ಯಾಹ । ವಸುಃ ಸರ್ವಸ್ಯ ವಾಸಯಿತಾ ವಾಯುಃ । ಸ ಚಾಂತರಿಕ್ಷಸದಂತರಿಕ್ಷಸಂಚಾರೀ । ಅಥ ತಸ್ಯೈವ ಕ್ಷಿತಿಸ್ಥಾನವೈದಿಕಾಗ್ನಿರೂಪತಾಮಾಹ । ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ವೇದಿಷದ್ವೇದ್ಯಾಂ ಗಾರ್ಹಪತ್ಯಾದಿರೂಪೇಣ ಸ್ಥಿತಃ । ಅತಿಥಿರತಿಥಿವತ್ಸರ್ವದಾ ಪೂಜ್ಯೋಽಗ್ನಿಃ । ದುರೋಣಸತ್ । ದುರೋಣಂ ಗೃಹನಾಮ । ತತ್ರ ಪಾಕಾದಿಸಾಧನತ್ವೇನ ಸ್ಥಿತಃ । ಅನೇನ ಲೌಕಿಕಾಗ್ನ್ಯಾತ್ಮಕತ್ವಮುಕ್ತಂ । ನೃಷತ್ । ನೃಷು ಮನುಷ್ಯೇಷು ಚೈತನ್ಯರೂಪೇಣ ಸೀದತೀತಿ ನೃಷತ್ । ಅನೇನ ಪರಮಾತ್ಮರೂಪತ್ವಮುಕ್ತಂ । ಪುನರಪ್ಯಾದಿತ್ಯಾತ್ಮತಾಮಾಹ । ವರಸತ್ । ವರೇ ವರಣೀಯೇ ಮಂಡಲೇ ಸೀದತೀತಿ ವರಸದಾದಿತ್ಯಃ । ವರಂ ವಾ ಏತತ್ಸದ್ಮನಾಂ ಯಸ್ಮಿನ್ನೇಷ ಆಸನ್ನಸ್ತಪತೀತಿ ಹಿ ಶ್ರೂಯತೇ । ಋತಂ ಸತ್ಯಂ ಬ್ರಹ್ಮ ಯಜ್ಞೋ ವಾ । ತತ್ರ ಸೀದತೀತ್ಯೃತಸದಗ್ನಿಃ । ವ್ಯೋಮಾಂತರಿಕ್ಷಂ । ತತ್ರ ಸೀದತೀತಿ ವ್ಯೋಮಸದ್ವಾಯುಃ । ಇದಾನೀಮಾದಿತ್ಯತೋಚ್ಯತೇ । ಅಬ್ಜಾ ಉದಕೇಷು ಜಾತಃ । ಉದಕಮಧ್ಯೇ ಖಲ್ವಹಂ ಜಾಯತೇ । ಗೋಜಾ ಗೋಷು ರಶ್ಮಿಷು ಜಾತಃ । ಋತಂ ಸತ್ಯಂ । ಸರ್ವೈರ್ದೃಶ್ಯತ್ವೇನ ಸತ್ಯಜಾತಃ । ನ ಹ್ಯಸಾವಿಂದ್ರಾದಿವತ್ಪರೋಕ್ಷೋ ಭವತಿ । ಯದ್ವಾ । ಉದಕೇಷು ವೈದ್ಯುತರೂಪೇಣ ವಾ ವಾಡವರೂಪೇಣ ವಾ ಜಾತಃ । ಅದ್ರಿಜಾ ಅದ್ರಾವುದಯಾಚಲೇ ಜಾತಃ । ಏವಂ ಮಹಾನುಭಾವ ಆದಿತ್ಯ ಋತಂ ಸತ್ಯಮಬಾಧ್ಯಂ ಸರ್ವಾಧಿಷ್ಠಾನಂ ಬ್ರಹ್ಮತತ್ತ್ವಂ । ತದ್ರೂಪೋ ಹ್ಯಸಾವೇವ । ಆದಿತ್ಯಸ್ಯೋಕ್ತರೂಪತ್ವಂ ಹಂಸಃ ಶುಚಿಷದಿತ್ಯೇಷ ವೈ ಹಂಸಃ ಶುಚಿಷದಿತ್ಯಾದಿನಾ ಬ್ರಾಹ್ಮಣೇ । ಐ. ಬ್ರಾಂ. ೪-೨೦ । ಸಮಾಮ್ನಾತಂ ॥

॥ ಪ್ರತಿಪದಾರ್ಥ ॥

ಹಂಸಃ—ಸಂಚಾರಾತ್ಮಕನಾದ ಆದಿತ್ಯನು । ಶುಚಿಷತ್—ಪ್ರಭಾಯುತವಾದ ದ್ಯುಲೋಕಸ್ಥನಾಗಿರುವನು (ಮತ್ತು ಇವನು) ವಸುಃ—ಸರ್ವರಲ್ಲಿಯೂ ವಾಸಿಸತಕ್ಕ । ಅಂತರಿಕ್ಷಸತ್—ಅಂತರಿಕ್ಷದಲ್ಲಿರುವ ವಾಯುವು (ಮತ್ತು

ಇವನೇ) ಹೋತಾ-ಹೋತೃವಾದ ಅಗ್ನಿಯು (ಮತ್ತು ಇವನು) | ವೇದಿಷತ್-ಯಜ್ಞವೇದಿಯಲ್ಲಿ ಸ್ಥಿತನಾಗಿಯೂ | ಅತಿಥಿಃ— ಪೂಜ್ಯನಾದ ಗೃಹಸ್ಥಾಗ್ನಿಯಾಗಿಯೂ | ದುರೋಣಸತ್— ಗೃಹದಲ್ಲಿರತಕ್ಕವನಾಗಿಯೂ | ನೃಷತ್—ಮಾನವರಲ್ಲಿ ಚೈತನ್ಯರೂಪಿಯಾಗಿಯೂ | ವರಸತ್—ಶ್ರೇಷ್ಠವಾದ ಆದಿತ್ಯಮಂಡಲಾಂತರ್ವರ್ತಿ ಯಾಗಿಯೂ | ಋತಸತ್—ಸತ್ಯದಲ್ಲಿ ಸ್ಥಿತನಾಗಿಯೂ | ವ್ಯೋಮಸತ್— ಮಧ್ಯಲೋಕವರ್ತಿಯಾಗಿಯೂ ಇದ್ದಾನೆ | (ಇವೆಲ್ಲವೂ ಪರಬ್ರಹ್ಮದ ವಿಭೂತಿ ವಿಶೇಷಗಳು) ಇದೇ ಆದಿತ್ಯರೂಪದಲ್ಲಿರುವ ಪರಬ್ರಹ್ಮತತ್ವವು | ಅಬ್ಜಾಃ—ಉದಕೋತ್ಪನ್ನನಾಗಿಯೂ | ಗೋಜಾಃ—ರಶ್ಮಿಜಾತನಾಗಿಯೂ | ಋತಜಾಃ—ಸತ್ಯಜಾತನಾಗಿಯೂ | ಅದ್ರಿಜಾಃ—ಉದಯಾದ್ರಿಯಲ್ಲಿ ಉತ್ಪನ್ನನಾಗಿಯೂ | ಋತಂ—ಸತ್ಯಾತ್ಮನಾಗಿಯೂ ಇದ್ದಾನೆ.

॥ ಭಾವಾರ್ಥ ॥

ಪರಬ್ರಹ್ಮನು ಆದಿತ್ಯಾದಿ ನಾನಾರೂಪಗಳಲ್ಲಿ ತನ್ನ ವಿಭೂತಿವಿಶೇಷಗಳನ್ನು ಪ್ರಕಟಿಸಿದ್ದಾನೆ. ಇವುಗಳಲ್ಲಿ ಆದಿತ್ಯನು ಪ್ರಭಾಯುತವಾದ ದ್ಯುಲೋಕಸ್ಥನಾಗಿದ್ದಾನೆ. ವಾಯುವು ಅಂತರಿಕ್ಷಸಂಚಾರಿಯು. ಹೋತೃವಾದ ಅಗ್ನಿಯು ಯಜ್ಞವೇದಿಸ್ಥನು. ಗೃಹಸ್ಥಾಗ್ನಿಯು ಗೃಹಗಳಲ್ಲಿ ಅತಿಥಿಯಂತೆ ಪೂಜ್ಯನು. ಮಾನವರಲ್ಲಿ ಚೈತನ್ಯಸ್ವರೂಪನು. ಆದಿತ್ಯಮಂಡಲಾಂತರ್ವರ್ತಿಯಾಗಿಯೂ, ಸತ್ಯಸ್ಥನಾಗಿಯೂ ಇದ್ದಾನೆ. ಇವುಗಳಲ್ಲಿ ಮುಖ್ಯನಾದ ಆದಿತ್ಯನು ಉದಕೋತ್ಪನ್ನನಾಗಿಯೂ, ರಶ್ಮಿಜಾತನಾಗಿಯೂ, ಸತ್ಯಜಾತನಾಗಿಯೂ, ಉದಯಾದ್ರಿಯಲ್ಲಿ ಉತ್ಪನ್ನನಾಗುವನಾಗಿಯೂ, ಸತ್ಯಾತ್ಮನಾಗಿಯೂ ಆಗಿದ್ದಾನೆ.

## English Translation.

He is Hansa, (the sun), dwelling in light; Vasu, (the wind), dwelling in the firmament; the invoker of the gods (Agni), dwelling on the altar; the guest (of the worshipper), dwelling in the house (as the culinary fire); the dweller amongst men, (as consciousness), the dweller in the most excellent (orb, the sun), the dweller in truth, the dweller in the sky (the air), born in waters, in the rays of light, in the verity (of manifestation in the (eastern) mountain, the truth (itself).

॥ ವಿಶೇಷವಿಷಯಗಳು ॥

ಹಂಸಃ ಶುಚಿಷತ್ ಎಂಬ ಈ ಋಕ್ಕು ಸೂರ್ಯದೇವತಾಕವು. ಇದನ್ನು ಹಂಸವತೀ ಋಕ್ಕೆಂದೂ ಹೇಳುವರು ಈ ಋಕ್ಕು ಋಗ್ವೇದದಲ್ಲಲ್ಲದೆ ವಾ. ಸಂ. ೧೦–೨೪; ೧೨–೧೪; ತೈ. ಸಂ. ೧-೮-೧೫-೨; ೪-೨-೧-೫; ತೈ. ಆ. ೧೦–೧೦–೨; ಐ. ಬ್ರಾ. ೪–೨೦–೧ ಈ ಸ್ಥಳಗಳಲ್ಲಿಯೂ ಪಠಿತವಾಗಿದೆ. ಯಾಸ್ಕರೂ ಸಹ ತಮ್ಮ ನಿರುಕ್ತದಲ್ಲಿ (ನಿ. ೧೪–೨೯) ಈ ಋಕ್ಕಿಗೆ ಅಥಾಧ್ಯಾತ್ಮಂ ಎಂದು ಅಧ್ಯಾತ್ಮಪರವಾದ ಅರ್ಥವನ್ನೂ ವಿವರಿಸಿದ್ದಾರೆ. ಆದುದರಿಂದ ಈ ಋಕ್ಕಿನ ವಿಷಯದಲ್ಲಿ ಸಾಯಣರು ತಮ್ಮ ಭಾಷ್ಯದಲ್ಲಿ ಹೇಳಿರುವ ವಿವರಣೆಯನ್ನು ಬರೆದು ಅನಂತರ ಇತರ ಅರ್ಥಗಳನ್ನೂ ವಿವರಿಸುತ್ತೇವೆ.

ಸಾಯಣರು ಛಾಂದೋಗ್ಯೋಪನಿಷತ್ತಿನ—**ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ।** (ಛಾ. ಉ. ೧-೬-೬) ಎಂಬ ವಾಕ್ಯವನ್ನು ಉದಾಹರಿಸಿ, ಸೂರ್ಯಮಂಡಲಕ್ಕೆ ಅಭಿಮಾನಿಯಾದ ಯಾವ ದೇವನಿರುವನೋ, ಯಾವ ದೇವದೇವನು ಸಮಸ್ತಪ್ರಾಣಿಗಳ ಚಿತ್ತದಲ್ಲಿ ಸೂಕ್ಷ್ಮರೂಪದಿಂದ ಇರುವನೋ, ಯಾವ ದೇವನು ಸಮಸ್ತ ಉಪಾಧಿರಹಿತನಾಗಿ ಎಂದರೆ ನಿರ್ಗುಣನಾಗಿ ಪರಬ್ರಹ್ಮನೆಂದು ಪ್ರಸಿದ್ಧನಾಗಿರುವನೋ ಅಂತಹ ಸರ್ವವ್ಯಾಪಿಯಾದ ಪರಬ್ರಹ್ಮವಸ್ತುವೇ ಸೂರ್ಯನೆಂದೂ ಈ ವಸ್ತುವನ್ನು ಯಾವ ರೂಪದಿಂದ ವರ್ಣಿಸಿದರೂ ಎಲ್ಲವೂ ಒಂದೇ ಆದ ಪರಬ್ರಹ್ಮನನ್ನು ವರ್ಣಿಸಿದಂತಾಗುವುದೆಂದೂ ಈ ಋಕ್ಕಿನಲ್ಲಿ ಪ್ರತಿಪಾದಿಸಲ್ಪಟ್ಟಿರುವುದು, ಎಂದು ಪೀಠಿಕಾರೂಪವಾಗಿ ಹೇಳಿದಾರೆ.

**ಹಂಸಃ—ಹನ ಹಿಂಸಾಗತ್ಯೋಃ** ಎಂಬ ಧಾತುವಿನಿಂದ ಹಂಸಶಬ್ದವು ನಿಷ್ಪನ್ನವಾಗಿರುವುದೆಂದು ಹೇಳಿ ಹಂಸಶಬ್ದಕ್ಕೆ ಗತ್ಯರ್ಥವನ್ನು ಹೇಳಿದಾರೆ. ಎಂದರೆ, **ಸರ್ವತ್ರ ಸರ್ವದಾ ಗಂತಾ**—ಈ ಆದಿತ್ಯನು (ಅಥವಾ ಸೂರ್ಯನು) ಸರ್ವಸ್ಥಳಗಳಲ್ಲಿಯೂ, ಸರ್ವಕಾಲದಲ್ಲಿಯೂ ಸಂಚರಿಸುವವನಾದುದರಿಂದ ಹಂಸಶಬ್ದವಾಚ್ಯನು. ಸೂರ್ಯನು ಸ್ವಲ್ಪಕಾಲವೂ ವಿಚ್ಛಿತ್ತಿಯಿಲ್ಲದೆ ಯಾವಾಗಲೂ ಸಂಚಾರವಮಾಡುತ್ತಾ ಲೋಕಕ್ಕೆ ಪ್ರಕಾಶವನ್ನೂ, ಚೈತನ್ಯವನ್ನೂ ಬೀರುತ್ತಿರುವುದು ಅನುಭವವೇದ್ಯವಾಗಿಯೇ ಇದೆ. ಇದಲ್ಲದೆ ಹಂಸಶಬ್ದದಲ್ಲಿರುವ ಹಂ ಸಃ ಎಂಬ ಎರಡು ಅಕ್ಷರಗಳನ್ನು ವ್ಯತ್ಯಸ್ತಮಾಡಿ ಪಠಿಸಿದರೆ **ಸೋಽಹಂ** ಎಂದಾಗುವುದು. ಇದನ್ನೇ ಶ್ರುತಿಗಳಲ್ಲಿ **ಯೋಽಹಂ ಸೋಽಸೌ** ಎಂದು ವಿವರಿಸಿ ಜೀವಾತ್ಮಪರಮಾತ್ಮರಿಗೆ ಐಕ್ಯವನ್ನು ಬೋಧಿಸುವುದೆಂದು ಹೇಳಿದೆ. ಇಲ್ಲಿ **ಅಸೌ** ಎಂದರೆ ಆದಿತ್ಯನು ಅಥವಾ ಪರಬ್ರಹ್ಮನು ಎಂದರ್ಥವು. **ಅಸಾವಾದಿತ್ಯೋ ಬ್ರಹ್ಮ**—ನಮ್ಮ ಕಣ್ಣುಗಳಿಗೆ ಕಾಣಿಸುತ್ತಿರುವ ಈ ಆದಿತ್ಯನೇ ಪರಬ್ರಹ್ಮನು ಎಂದು ತೈ. ೨-೧-೨ರಲ್ಲಿ ಸ್ಪಷ್ಟವಾಗಿ ಹೇಳಿದೆ.

**ಶುಚಿಷತ್**—ಈ ಆದಿತ್ಯನು ಸ್ವರ್ಗ, ಅಂತರಿಕ್ಷ, ಭೂಮಿ ಎಂಬ ಮೂರು ಸ್ಥಾನಗಳಲ್ಲಿಯೂ ವಿವಿಧರೂಪಗಳಿಂದ ಇರುವನು ಎಂಬುದನ್ನು **ಶುಚಿಷತ್** ಎಂದು ಮೊದಲಾದ ಶಬ್ದಗಳಿಂದ ವಿವರಿಸುವರು. **ಸ ಚ ಶುಚೌ ದೀಪ್ತೇ ದ್ಯುಲೋಕೇ ಸೀದತೀತಿ ಶುಚಿಷತ್** ಈ ಆದಿತ್ಯನು ಶುಚಿ ಎಂದರೆ ಪ್ರಕಾಶಮಾನವಾದ ಸ್ವರ್ಗದಲ್ಲಿ ವಾಸಿಸುವುದರಿಂದ ಇವನನ್ನು **ಶುಚಿಷತ್** ಎಂಬ ಶಬ್ದದಿಂದ ವರ್ಣಿಸಿದೆ. **ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ** (ಛಾ. ಉ. ೩-೧೩-೭) ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಎಂದರೆ ಯಾವ ಲೋಕವು ಪ್ರಕಾಶಮಾನವಾಗಿಯೂ, ಜ್ಯೋತಿರ್ಮಯವಾಗಿಯೂ ಇರುವುದೋ ಅದು ಸ್ವರ್ಗವೆಂದು ಹೇಳಲ್ಪಡುವುದು. ಅಂತಹ ಪ್ರಕಾಶಾತ್ಮಕವಾದ ಸ್ವರ್ಗದಲ್ಲಿದ್ದು ಅದನ್ನೂ ಅಲ್ಲಿಂದ ಇತರಲೋಕಗಳನ್ನೂ ತನ್ನ ಪ್ರಕಾಶದಿಂದ ಬೆಳಗುತ್ತಿರುವುದರಿಂದ ಸೂರ್ಯನಿಗೆ ಶುಚಿಷತ್ ಎಂದು ಹೇಳುವುದು ನ್ಯಾಯವಾಗಿದೆ. ಆದುದರಿಂದ ಆದಿತ್ಯನು ದ್ಯುಸ್ಥಾನ (ಸ್ವರ್ಗ) ದಲ್ಲಿರುವವನೆಂಬುದನ್ನು ವಿವರಿಸಿದಂತಾಯಿತು.

**ವಸುಃ ಅಂತರಿಕ್ಷಸತ್**—ಇನ್ನು ಈ ಆದಿತ್ಯನು ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿರುವ ವಾಯುಸ್ವರೂಪನೆಂಬುದನ್ನು ವಿವರಿಸುವರು. **ವಸುಃ ಸರ್ವಸ್ಯ ವಾಸಯಿತಾ ವಾಯುಃ । ಸ ಚ ಅಂತರಿಕ್ಷಸತ್ ಅಂತರಿಕ್ಷ ಸಂಚಾರೀ ।** ಸರ್ವರೂ ವಾಸಮಾಡಲು ಎಂದರೆ ಜೀವಿಸಿರಲು ಉಚ್ಛ್ವಾಸನಿಶ್ವಾಸರೂಪವಾದ ವಾಯುವೇ ಮುಖ್ಯ ಕಾರಣವು. ಈ ವಾಯುವು ಅಂತರಿಕ್ಷದಲ್ಲಿ ಸದಾ ನೆಲಸಿರುವುದರಿಂದ ಎಂದರೆ ವ್ಯಾಪಿಸಿರುವುದರಿಂದ **ಅಂತರಿಕ್ಷಸತ್** ಎಂಬ ಶಬ್ದದಿಂದ ಪ್ರತಿಪಾದಿತವಾಗಿರುವನು. ಆದಿತ್ಯನೇ ಇಂತಹ ವಾಯುಸ್ವರೂಪದಿಂದ ಅಂತರಿಕ್ಷದಲ್ಲಿ ವ್ಯಾಪಿಸಿರು-

ವನು ಎಂಬ ವಿಷಯವನ್ನು ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ । ಎಂದು ಮೊದಲಾದ ಶ್ರುತಿವಾಕ್ಯಗಳು ಪ್ರತಿಪಾದಿಸುತ್ತಿರುವವು.

ಹೋತಾ ವೇದಿಷತ್ ಅತಿಥಿಃ ದುರೋಣಸತ್—ಆದಿತ್ಯನು ವೈದಿಕಾಗ್ನಿರೂಪದಿಂದ ಪೃಥಿವೀಸ್ಥಾನದಲ್ಲಿ ರುವನೆಂಬ ವಿಷಯವು ಈ ವಾಕ್ಯದಲ್ಲಿ ವರ್ಣಿತವಾಗಿದೆ. ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ । ಯಜ್ಞವೇದಿಯಲ್ಲಿ ಪ್ರತಿಷ್ಠಿತನಾಗಿ ಗಾರ್ಹಪತ್ಯವೇ ಮೊದಲಾದ ವೈದಿಕಾಗ್ನಿರೂಪದಿಂದಿರುವ ಈ ಆದಿತ್ಯನು ದೇವತೆಗಳನ್ನು ಯಜ್ಞಭೂಮಿಗೆ ಕರೆತರುವವನಾಗಿ ಅಥವಾ ಹೋಮನಿಷ್ಪಾದಕನಾಗಿ ಇರುವನು. ವೇದಿಷತ್ ವೇದ್ಯಾಂ ಗಾರ್ಹಪತ್ಯಾದಿರೂಪೇಣ ಸ್ಥಿತಃ । ಈ ಅಗ್ನಿಯು ಉತ್ತರವೇದಿಯಲ್ಲಿ ಗಾರ್ಹಪತ್ಯವೇ ಮೊದಲಾದ ಅಗ್ನಿಕುಂಡಗಳಲ್ಲಿ ನೆಲೆಸಿ ಯಜ್ಞವನ್ನು ನಿರ್ವಹಿಸುವುದರಲ್ಲಿ ಸಹಾಯಕನಾಗಿರುವನು. ಅತಿಥಿಃ ಅತಿಥಿವತ್ಸರ್ವದಾ ಪೂಜ್ಯೋಽಗ್ನಿಃ ಮನೆಗೆ ಬರುವ ಅತಿಥಿಯು ಯಾವರೀತಿ ಸತ್ಕಾರಾರ್ಹನೋ ಅದೇರೀತಿ ಯಜ್ಞವೇದಿಯಲ್ಲಾಗಲಿ, ಗೃಹದಲ್ಲಾಗಲಿ ಪ್ರತಿಷ್ಠಾಪಿತನಾದ ಅಗ್ನಿಯು ಯಜಮಾನ ಮೊದಲಾದ ಸಮಸ್ತ ಜನರಿಂದಿಲೂ ಸರ್ವಕಾಲದಲ್ಲಿಯೂ ಪೂಜಾರ್ಹನಾಗಿರುವದು. ದುರೋಣಸತ್ ದುರೋಣಂ ಗೃಹನಾಮ । ತತ್ರ ಪಾಕಾದಿಸಾಧನತ್ವೇನ ಸ್ಥಿತಃ । ಅನೇನ ಲೌಕಿಕಾಗ್ನ್ಯಾತ್ಮಕತ್ವಮುಕ್ತಂ । ದುರೋಣ ಶಬ್ದಕ್ಕೆ ಗೃಹವೆಂದು ಹೆಸರು. ಗೃಹದಲ್ಲಿ ಎಂದರೆ— ಪಾಕಗೃಹದಲ್ಲಿ ಇದ್ದುಕೊಂಡು ಪಾಕಕ್ರಿಯಾದಿಗಳಿಗೆ ಸಹಾಯಭೂತನಾಗಿರುವನು. ಎಂದರೆ ಈ ಅಗ್ನಿಯು ಯಜ್ಞಾದಿ ಗಳಲ್ಲಿ ಪ್ರಧಾನಪಾತ್ರವನ್ನು ವಹಿಸಿರುವುದಲ್ಲದೆ ಯಜಮಾನ ಮೊದಲಾದವರ ಪಾಕಗೃಹಾದಿಗಳಲ್ಲಿ ಲೌಕಿಕಾಗ್ನಿ ರೂಪದಿಂದಲೂ ಇದ್ದು ಪಾಕಕ್ರಿಯಾದಿಗಳಿಗೆ ಸಹಾಯಕನಾಗಿರುವನು ಎಂದಭಿಪ್ರಾಯವು.

ನೃಷತ್—ನೃಷು ಮನುಷ್ಯೇಷು ಚೈತನ್ಯರೂಪೇಣ ಸೀದತೀತಿ ನೃಷತ್ । ಅನೇನ ಪರಮಾತ್ಮ-ರೂಪತ್ವಮುಕ್ತಂ । ನೃಷತ್ ಎಂಬ ಶಬ್ದಕ್ಕೆ ಎರಡು ವಿಧವಾಗಿ ಎಂದರೆ ಅಗ್ನಿಪರವಾಗಿಯೂ ಆದಿತ್ಯಪರವಾಗಿಯೂ ಅರ್ಥಮಾಡಬಹುದು. ಅಗ್ನಿಪರವಾಗಿ— ವೈಶ್ವಾನರಾಗ್ನಿರೂಪದಿಂದ ಸರ್ವಪ್ರಾಣಿಗಳ ಜಠರದಲ್ಲಿ ತೇಜೋರೂಪದಿಂದ ಇರುವನು. ಆದಿತ್ಯಪರವಾಗಿ—ಸರ್ವಪ್ರಾಣಿಗಳ ಅಂತರಾತ್ಮದಲ್ಲಿಯೂ ಚೈತನ್ಯರೂಪದಿಂದಿದ್ದು ಅವುಗಳ ವ್ಯಾಪಾರ ವ್ಯವಹಾರಾದಿಗಳನ್ನು ಪ್ರೇರಿಸುವನು. ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಎಂಬ ವಾಕ್ಯವೂ ಇದನ್ನೇ ಸಮರ್ಥಿಸುವುದು. ಆದುದರಿಂದ ಈ ಆದಿತ್ಯನು ಪರಮಾತ್ಮಸ್ವರೂಪನು ಎಂಬುದು ಈ ವಾಕ್ಯದಿಂದ ಸ್ಪಷ್ಟವಾಗಿ ರುವುದು.

ವರಸತ್—ವರೇ ವರಣೀಯೇ ಮಂಡಲೇ ಸೀದತೀತಿ ವರಸತ್ । ವರಂ ವಾ ವಿತತ್ಸದ್ಮನಾಂ ಯಸ್ಮಿನ್ನೇಷ ಆಸನ್ನಸ್ತಪತಿ । ಉತ್ತಮವಾದ ಅಥವಾ ಎಲ್ಲವನ್ನೂ ಆವರಿಸುವ (ವ್ಯಾಪಿಸುವ) ಜ್ಯೋತೀರೂಪವಾದ ಮಂಡಲಗತನಾಗಿರುವ ಆದಿತ್ಯನು.

ಋತಸತ್—ಋತಂ ಸತ್ಯಂ ಬ್ರಹ್ಮ ಯಜ್ಞೋ ವಾ । ತತ್ರ ಸೀದತೀತಿ ಋತಸತ್ ಅಗ್ನಿಃ । ಋತಶಬ್ದಕ್ಕೆ ಸತ್ಯ, ಬ್ರಹ್ಮ, ಯಜ್ಞ ಎಂಬರ್ಥಗಳಿರುವವು. ಅಗ್ನಿಯು ಸತ್ಯಸ್ವರೂಪನು, ಬ್ರಹ್ಮಸ್ವರೂಪನು ಅಥವಾ ಯಜ್ಞದಲ್ಲಿ ಮುಖ್ಯಪಾತ್ರ ವಹಿಸುವವನು. ಆದುದರಿಂದ ಇಂತಹ ಸ್ವರೂಪವುಳ್ಳ ಅಗ್ನಿರೂಪದಿಂದಿರುವ ಆದಿತ್ಯನು ಎಂದು ಋತಸತ್ ಶಬ್ದದಿಂದ ಬೋಧ್ಯವಾಗುವುದು.

**ವ್ಯೋಮಸತ್—ವ್ಯೋಮಾಂತರಿಕ್ಷಂ ತತ್ರ ಸೀದತೀತಿ ವ್ಯೋಮಸತ್ ವಾಯುಃ । ಇದಾನೀ- ಮಾದಿತ್ಯತೋಚ್ಯತೇ ।** ವ್ಯೋಮವೆಂದರೆ ಅಂತರಿಕ್ಷವು. ಅಂತರಿಕ್ಷದಲ್ಲಿ ನೆಲೆಸಿರುವುದು ವಾಯುವು. ಆದರೆ ಇಲ್ಲಿ ಈ ವಾಯುವು ಆದಿತ್ಯಸ್ವರೂಪವೆಂದು ಅರ್ಥವನ್ನು ಬೋಧಿಸುವುದಾಗಿರುವುದು.

**ಅಬ್ಜಾಃ—ಉದಕೇಷು ಜಾತಃ । ಉದಕಮಧ್ಯೇ ಖಲ್ವಯಂ ಜಾಯತೇ ।** ಉದಕಮಧ್ಯದಲ್ಲಿ ಅಗ್ನಿಯ ಉತ್ಪತ್ತಿ ಇರುವುದು. ಎಂದರೆ ಮೇಘಗಳ ಮಧ್ಯದಲ್ಲಿ ವಿದ್ಯುದ್ರೂಪವಿಂದ ಅಥವಾ ಸಮುದ್ರದಲ್ಲಿ ಬಾಡ ಬಾಲನರೂಪದಿಂದ ಅಗ್ನಿಯು ಉತ್ಪನ್ನನಾಗುವನು ಎಂದು ಪ್ರಸಿದ್ಧಿಯು. ಅಂತಹ ಅಗ್ನಿಯ ರೂಪಾಂತರವೇ ಆದಿತ್ಯನು ಎಂದಭಿಪ್ರಾಯವು. ಅಥವಾ ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸುವಾಗ ಪೂರ್ವಸಮುದ್ರದಿಂದ ಉದಯವಾಗುವಂತೆ ಭಾಸವಾಗುವುದು. ಆದುದರಿಂದ ಸೂರ್ಯನು ಪೂರ್ವಸಮುದ್ರದಲ್ಲಿ ಉತ್ಪನ್ನನಾಗುವನು ಎಂದು ಕೆಲವರ ಅಭಿಪ್ರಾಯವು.

**ಗೋಜಾಃ—ಗೋಷು ರಶ್ಮಿಷು ಜಾತಃ ।** ಪ್ರಕಾಶಮಾನವಾದ ರಶ್ಮಿಗಳ ಮಧ್ಯದಲ್ಲಿ ಉತ್ಪನ್ನನಾಗು ವುದರಿಂದ ಸೂರ್ಯನು ಗೋಜಾಃ ಎಂದು ಹೇಳಲ್ಪಡುವನು.

**ಋತಜಾಃ—ಋತಂ ಸತ್ಯಂ । ಸರ್ವೈರ್ದೃಶ್ಯತ್ವೇನ ಸತ್ಯಜಾತಃ । ನ ಹ್ಯಸಾವಿಂದ್ರಾದಿವತ್ ಪರೋಕ್ಷೋ ಭವತಿ ।** ಈ ಆದಿತ್ಯನು ಸರ್ವರಿಂದಲೂ ನೋಡಲ್ಪಡುವನು. ಇಂದ್ರಾದಿದೇವತೆಗಳಂತೆ ಕಣ್ಣಿಗೆ ಕಾಣಿಸದೆ ಇರುವವನಲ್ಲ. ಸರ್ವರಿಗೂ ಗೋಚರನಾಗುವುದರಿಂದ ಸತ್ಯಸ್ವರೂಪನು. ಆದಿತ್ಯನು ಇರುವನೋ, ಇಲ್ಲವೋ ಎಂದು ಯಾರೂ ಸಂದೇಹಪಡಬೇಕಾಗಿಲ್ಲ. ಎಲ್ಲರ ಕಣ್ಣಿಗೂ ಪ್ರತ್ಯಕ್ಷವಾಗಿ ಕಾಣಿಸುತ್ತಿರುವುದರಿಂದ ಆದಿತ್ಯನು ಇರುವುದು ಸತ್ಯವು. ಏಕೆಂದರೆ—

> **ಅನೃತಂ ವೈ ವಾಚಾ ವದತಿ । ಅನೃತಂ ಮನಸಾ ಧ್ಯಾಯತಿ । ಚಕ್ಷುರ್ವೈ ಸತ್ಯಂ । ಅದ್ರಾ೩ ಗಿತ್ಯಾಹ । ಅದರ್ಶಮಿತಿ । ತತ್ಸತ್ಯಂ ॥**
>
> (ತೈ. ಬ್ರಾ. ೧-೧-೪-೧, ೨)

ಬಾಯಿಮಾತಿನಲ್ಲಿ ಸುಳ್ಳನ್ನು ಹೇಳಬಹುದು. ಮನಸ್ಸಿನಲ್ಲಿಯೂ ಅಸತ್ಯವನ್ನು ಚಿಂತಿಸಬಹುದು. ಆದರೆ ಕಣ್ಣಿನಿಂದ ನೋಡುವುದನ್ನು ಅಸತ್ಯವೆಂದು ಪರಿಗಣಿಸಲಾಗುವುದಿಲ್ಲ. ಕಣ್ಣು ಸುಳ್ಳನ್ನು ಹೇಳುವುದಿಲ್ಲ. ನಾನು ಒಂದು ವಸ್ತುವನ್ನು ನೋಡಿದೆನೆಂದರೆ ಅದು ನಿಜವೇ ಸರಿ ಎಂದು ಶ್ರುತಿವಾಕ್ಯವಿರುವುದರಿಂದ ನಾವು ಕಣ್ಣಿನಿಂದ ನೋಡು ತ್ತಿರುವ ಆದಿತ್ಯನು ಸತ್ಯವೇ ಆಗಿರುವನು. ಈ ವಿಷಯದಲ್ಲಿ ಸಂಶಯಕ್ಕವಕಾಶವಿಲ್ಲ ಎಂದಭಿಪ್ರಾಯವು.

**ಅದ್ರಿಜಾಃ—ಅದ್ರಾವುದಯಾಚಲೇ ಜಾತಃ ।** ಅದ್ರಿ ಎಂದರೆ ಬೆಟ್ಟವು, ಉದಯಾಚಲವು. ಸೂರ್ಯನು ಪ್ರತಿದಿನ ಪ್ರಾತಃಕಾಲದಲ್ಲಿ ಉದಯಾದ್ರಿಯಲ್ಲಿ ಉತ್ಪನ್ನನಾಗುವುದು ಸಕಲರಿಗೂ ಅನುಭವವೇದ್ಯವಾಗಿದೆ.

**ಸತ್ಯಂ—ಋತಂ ಸತ್ಯಮಬಾಧ್ಯಂ ಸರ್ವಾಧಿಷ್ಠಾನಂ ಬ್ರಹ್ಮತತ್ತ್ವಂ । ತದ್ರೂಪೋ ಹ್ಯಸಾವೇವ ।** ಈ ಆದಿತ್ಯನು ಸತ್ಯಶಬ್ದವಾಚ್ಯನಾದ ಪರಮಾತ್ಮನೇ ಆಗಿರುವನು. ಇವನು ಯಾವಾಗಲೂ ಇರುವುದರಿಂದ ಯಾವುದ ರಿಂದಲೂ ಬಾಧೆ ಇಲ್ಲದವನು, ನಿರ್ಬಾಧಿತನು, ನಿತ್ಯನು. ಬ್ರಹ್ಮತತ್ತ್ವವೇ ಆದಿತ್ಯನು. **ಅಸಾವಾದಿತ್ಯೋ ಬ್ರಹ್ಮ**

(ತೈ. ಆ, ೨-೧-೨) ಮತ್ತು ಋತಗ್ಂ ಸತ್ಯಂ ಪರಂ ಬ್ರಹ್ಮ (ತೈ. ಉ. ೪-೨೩) ಇತ್ಯಾದಿ ಶ್ರುತಿವಾಕ್ಯಗಳು ಈ ವಿಷಯವನ್ನು ಸಮರ್ಥಿಸುವವು.

ಐತರೇಯಬ್ರಾಹ್ಮಣದಲ್ಲಿ ಹಂಸಃ ಶುಚಿಷತ್ ಎಂಬ ಈ ಋಕ್ಕು ಹಂಸವತೀ ಋಕ್ಕೆಂದು ಪ್ರಸಿದ್ಧವಾಗಿರುವುದು. ಮತ್ತು ಸ್ವರ್ಗಮೇವ ತಲ್ಲೋಕಂ ರೋಹತಿ ಯ ಏವಂ ವೇದ । ಹಂಸವತ್ಯಾ ರೋಹತಿ । ಎಂದರೆ ಯಜ್ಞಮಾಡುವ ಯಜಮಾನನು ಈ ಹಂಸವತೀ ಋಕ್ಕನ್ನು ಪಠಿಸಿ ಸ್ವರ್ಗಕ್ಕೆ ಹತ್ತಿಹೋಗುವನು ಎಂದು ಹೇಳುವ ಸಂದರ್ಭದಲ್ಲಿ ಈ ಋಕ್ಕಿನ ವಿಶೇಷಾರ್ಥಗಳನ್ನು ವಿವರಿಸಲಾಗಿದೆ—

**ಹಂಸಃ ಶುಚಿಷದಿತ್ಯೇಷ ವೈ ಹಂಸಃ ಶುಚಿಷತ್ ।**

(ಐ ಬ್ರಾ. ೧೮-೬)

ಯಾವ ಋಕ್ಕಿನಲ್ಲಿ ಹಂಸಃ ಎಂಬ ಶಬ್ದವಿರುವುದೋ ಆ ಋಕ್ಕಿಗೆ ಹಂಸವತೀ ಋಕ್ಕೆಂದು ಹೆಸರು. ಆ ಋಕ್ಕನ್ನು ಉಚ್ಚರಿಸುವುದರಿಂದ ಯಜಮಾನನು ಸ್ವರ್ಗವನ್ನು ಆರೋಹಣಮಾಡುವನು. ಹಂತಿ ಧಾತುವಿಗೆ ಗಚ್ಛತಿ ಎಂದು ಗಮನಾರ್ಥವಿರುವುದು. ಸೂರ್ಯನು ಯಾವಾಗಲೂ ಸಂಚರಿಸುತ್ತಿರುವುದರಿಂದ ಸೂರ್ಯನಿಗೆ ಹಂಸವೆಂದು ಹೆಸರು. ಶುದ್ಧವಾದ ಪ್ರದೇಶವಾದ ಸ್ವರ್ಗದಲ್ಲಿ ಇರುವುದರಿಂದ ಶುಚಿಷತ್ ಎಂದೂ ಹೆಸರು. ಈ ಋಕ್ಕಿನಲ್ಲಿ ಪ್ರತಿಪಾದಿತನಾದ ಸೂರ್ಯನು ಯಾವಾಗಲೂ (ಸೂರ್ಯ) ಮಂಡಲದಲ್ಲಿ ಕಾಣುತ್ತಲೇ ಇರುವನು. ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವನಾದ್ದರಿಂದಲೂ, ದ್ಯುಲೋಕದಲ್ಲಿ ವಾಸಿಸುವುದರಿಂದಲೂ, ಸೂರ್ಯನು ಹಂಸಃ ಶುಚಿಷತ್ ಎಂಬ ಶಬ್ದಗಳಿಂದ ಪ್ರತಿಪಾದಿತನಾಗಿರುವನು.

**ವಸುರಂತರಿಕ್ಷಸದಿತ್ಯೇಷ ವೈ ವಸುರಂತರಿಕ್ಷಸತ್ ।**

ಸರ್ವದಾ ವಾಸಮಾಡುವುದರಿಂದ (ಚಲಿಸುವುದರಿಂದ) ವಾಯುವಿಗೆ ವಸುವೆಂದು ಹೆಸರು. ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ, ವಾಯುವಿಗೆ ಚಲನವಿಲ್ಲದೆ ಇರುವುದಿಲ್ಲ. ಯಾವಾಗಲೂ ಚಲಿಸುತ್ತಲೇ ಇರುವುದು. ಅದರಂತೆ ಸೂರ್ಯನೂ ಸದಾ ಸಂಚರಿಸುತ್ತಲೇ ಇರುವನು. ವಾಯುವು ಅಂತರಿಕ್ಷದಲ್ಲಿ ವ್ಯಾಪಿಸಿರುವುದು. ಆದಿತ್ಯನೂ ಸಹ ಪರಮಾತ್ಮಸ್ವರೂಪನಾದುದರಿಂದ ಸರ್ವಾತ್ಮಕನಾದವನು. ಆದುದರಿಂದಲೇ ಅಂತರಿಕ್ಷದಲ್ಲಿರುವ ವಾಯುವೂ ಸಹ ಆದಿತ್ಯ ಸ್ವರೂಪವೆಂದೇ ಹೇಳಲ್ಪಡುವುದು.

**ಹೋತಾ ವೇದಿಷದಿತ್ಯೇಷ ವೈ ಹೋತಾ ವೇದಿಷತ್ ।**

ಯಜ್ಞವೇದಿಯಲ್ಲಿ ಕುಳಿತು (ಪ್ರತಿಷ್ಠಾಪಿತನಾಗಿ) ಹೋಮಕರ್ತನಾದುದರಿಂದ ಹೋತಾ ಎಂದರೆ ಅಗ್ನಿಯು. ಹಿಂದೆ ಹೇಳಿದಂತೆ ಆದಿತ್ಯನು ಸರ್ವಾತ್ಮಕನಾದುದರಿಂದಲೂ, ಅಗ್ನಿಯೂ ಸಹ ಆದಿತ್ಯನ ರೂಪಾಂತರವಾದುದರಿಂದಲೂ, ಈ ವಾಕ್ಯದಲ್ಲಿರುವ ಹೋತಾ ವೇದಿಷತ್ ಎಂಬ ಶಬ್ದಗಳು ಆದಿತ್ಯನನ್ನೇ ಪ್ರತಿಪಾದಿಸುವವು.

**ಅತಿಥಿರ್ದುರೋಣಸದಿತ್ಯೇಷ ವಾ ಅತಿಥಿರ್ದುರೋಣಸತ್ ।**

ಅತಿಥಿಶಬ್ದಕ್ಕೆ—ನ ವಿದ್ಯತೇ ತಿಥಿವಿಶೇಷನಿಯಮೋ ಯಾತ್ರಾರ್ಥೇ ಯಸ್ಯ ಸೋಽಯಮತಿಥಿಃ । ಎಂದು ಅರ್ಥವನ್ನು ಹೇಳಬಹುದು. ಎಂದರೆ ಅತಿಥಿಯಾದವನಿಗೆ ಯಾವ ಕಾಲದಲ್ಲ ಎಲ್ಲಿಗೆ ಹೋಗಬೇಕು ಹೋಗಬಾರದು

ಎಂಬ ನಿಯಮವಿಲ್ಲ. ಈ ರೀತಿ ತಿಥಿ (ದಿನ) ನಿಯಮವಿಲ್ಲದೆ ಎಲ್ಲಿಗೆಂದರೆ ಅಲ್ಲಿಗೆ ಹೋಗುವವನಾದ್ದರಿಂದ ಇವನಿಗೆ **ಅತಿಥಿ** ಎಂದೂ ಹೆಸರು. ಸೂರ್ಯನು ಸಹ ತಿಥಿನಿಯಮವಿಲ್ಲದೆ ಎಲ್ಲಾ ದಿನಗಳಲ್ಲಿಯೂ ಉದಯಿಸಿ ಸಂಚರಿಸುವುದರಿಂದ ಸೂರ್ಯನಿಗೂ ಅತಿಥಿಶಬ್ದಾರ್ಥವು ಅನ್ವಯಿಸುವುದು. ಇಬ್ಬರೂ ಸಮಾನಧರ್ಮವುಳ್ಳವರು ಎಂದಭಿಪ್ರಾಯವು. ದುರೋಣ ಶಬ್ದಕ್ಕೆ ಗೃಹವೆಂದರ್ಥವು. ಅತಿಥಿಯು ಯಾಚನಾರ್ಥವಾಗಿ ಬಂದು ಗೃಹಗಳಲ್ಲಿ ಕುಳಿತುಕೊಳ್ಳುವನು. ಸೂರ್ಯನು ಸಹ ರಶ್ಮಿಗಳ ಮೂಲಕ ಗೃಹಾದಿಗಳಲ್ಲಿ ಪ್ರಕಾಶವನ್ನುಂಟುಮಾಡುತ್ತಿರುವನು. ಆದ್ದರಿಂದ ಅತಿಥಿಗೂ ಸೂರ್ಯನಿಗೂ ಸಾದೃಶ್ಯವನ್ನು ಇಲ್ಲಿ ಹೇಳಲಾಗಿದೆ.

**ನೃಷದಿತ್ಯೇಷ ವೈ ನೃಷತ್ ।**

ಈ ಆದಿತ್ಯನು ಮನುಷ್ಯರಲ್ಲಿ ವೃಷ್ಟಿರೂಪದಿಂದ ವ್ಯಕ್ತನಾಗಿರುವನು. ಮತ್ತು ಆರಣ್ಯಕದಲ್ಲಿ ಹೇಳಿರುವಂತೆ— **ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್** ಆದಿತ್ಯನು ಕಣ್ಣುಗಳ ಸ್ವರೂಪವನ್ನು ಪಡೆದು ಕಣ್ಣುಗಳನ್ನು ಪ್ರವೇಶಿಸಿದನು. ಎಂದಿರುವುದರಿಂದ ಆದಿತ್ಯನು ನೃಷಚ್ಛಬ್ದವಾಚ್ಯನು.

**ವರಸದಿತ್ಯೇಷ ವೈ ವರಸದ್ವರಂ ವಾ ಏತತ್ಸದ್ಮನಾಂ ಯಸ್ಮಿನ್ನೇಷ ಆಸನ್ನಸ್ತಪತಿ ।**

ಶ್ರೇಷ್ಠವಾದ ಮಂಡಲದಲ್ಲಿ ನೆಲೆಸಿ ಪ್ರಕಾಶಿಸುತ್ತಿರುವವನಾದ್ದರಿಂದ ವರಸತ್ ಎಂದು ಹೆಸರು. ನಿವಾಸಸ್ಥಾನಗಳಲ್ಲೆಲ್ಲಾ ಶ್ರೇಷ್ಠವೆನಿಸಿರುವ ಯಾವ ಮಂಡಲವಿರುವುದೋ ಆ ಮಂಡಲದಲ್ಲಿ ಉಪವಿಷ್ಟನಾಗಿ ಬೆಳಗುತ್ತಿರುವವನಾದ್ದರಿಂದ ವರಸತ್ ಎಂದು ಹೇಳಲ್ಪಡುವನು.

**ಋತಸದಿತ್ಯೇಷ ವೈ ಸತ್ಯಸತ್**

ಸತ್ಯಭೂತವಾದ ವೇದವಾಕ್ಯಗಳಲ್ಲಿ ಪ್ರತಿಪಾದ್ಯನಾಗಿರುವುದರಿಂದ **ಋತಸತ್** ಎಂದು ಹೆಸರು. ಅನೇಕವೇದಮಂತ್ರಗಳು ಆದಿತ್ಯನನ್ನು ಸ್ತುತಿಸುವ ವಿಷಯವು ಪ್ರಸಿದ್ಧವಾಗಿಯೇ ಇದೆ.

**ವ್ಯೋಮಸದಿತ್ಯೇಷ ವೈ ವ್ಯೋಮಸದ್ವ್ಯೋಮ ವಾ ಏತತ್ಸದ್ಮನಾಂ ಯಸ್ಮಿನ್ನೇಷ ಆಸನ್ನಸ್ತಪತಿ ।**

ಆಕಾಶಮಾರ್ಗದಲ್ಲಿ ಇರುವವನು ಅಥವಾ ಸಂಚರಿಸುವವನಾದ್ದರಿಂದ ಎಂದರೆ, ಗೃಹಾದ್ಯಾವರಣಶೂನ್ಯವಾದ ಆಕಾಶದಲ್ಲಿ ಮಹಾಪ್ರಭೆಯಿಂದ ಸಂಚರಿಸುವ ಸ್ವಭಾವವುಳ್ಳವನಾದ್ದರಿಂದ **ವ್ಯೋಮಸತ್** ಎಂದು ಹೇಳಲ್ಪಡುವನು.

**ಅಬ್ಜಾ ಇತ್ಯೇಷ ವಾ ಅಬ್ಜಾ ಅದ್ಭ್ಯೋ ವಾ ಏಷ ಪ್ರಾತರುದೇತ್ಯಪಃ ಸಾಯಂ ಪ್ರವಿಶತಿ ।**

**ಅದ್ಭ್ಯೋ ಜಾಯತೇ** ಎಂದರೆ ಉದಕಗಳಿಂದ ಉತ್ಪನ್ನನಾಗುತ್ತಾನೆ. ಎಂಬುದಕ್ಕೆ ಸೂರ್ಯನು ಸರ್ವಾತ್ಮಕನಾದುದರಿಂದ **ಅಬ್ಜಾ** ಎಂಬುದೂ ಅವನ ಅನೇಕ ರೂಪಗಳಲ್ಲೊಂದು ಎಂದು ಹೇಳಬಹುದು. ಅಥವಾ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವಾಗ ಪೂರ್ವಸಮುದ್ರದ ಉದಕಗಳಿಂದ ಉತ್ಪನ್ನನಾಗುವಂತೆ ನಮ್ಮ ದೃಷ್ಟಿಗೆ ಗೋಚರನಾಗುವನು. ಸಾಯಂಕಾಲದಲ್ಲಿ ಪಶ್ಚಿಮಸಮುದ್ರದ ಉದಕಗಳಲ್ಲಿ ಮುಳುಗುವಂತೆ ಕಾಣುವನು. ಆದ್ದರಿಂದ ಸೂರ್ಯನು ಅಬ್ಜಾ ಎಂಬ ಶಬ್ದದಿಂದ ವಾಚ್ಯನಾಗಿರುವನು.

**ಗೋಜಾ ಇತ್ಯೇಷ ವೈ ಗೋಜಾಃ ।**

ಗೋವುಗಳಿಂದ ಅಥವಾ ರಶ್ಮಿಗಳಿಂದ ಉತ್ಪನ್ನವಾಗುವುದರಿಂದ **ಗೋಜಾಃ** ಎಂದು ಹೆಸರು.

ಋತಜಾ ಇತ್ಯೇಷ ವೈ ಸತ್ಯಜಾಃ ।

ಋತವೆಂದರೆ ಸತ್ಯ ಅಥವಾ ಸತ್ಯಸ್ವರೂಪವಾದ ಮಂತ್ರಗಳು. ಇಂತಹ ಮಂತ್ರಾನುಷ್ಠಾನದಿಂದ ದೇವಲೋಕಾದಿಗಳಲ್ಲಿ ಉತ್ಪನ್ನನಾಗುವುದರಿಂದ ಆದಿತ್ಯನು ಋತಜಾ ಎಂಬ ಶಬ್ದವಾಚ್ಯನು.

ಅದ್ರಿಜಾ ಇತ್ಯೇಷ ವಾ ಅದ್ರಿಜಾಃ ।

ಸೂರ್ಯನು ಉದಯಾಚಲದಲ್ಲಿ ಉದಯಿಸುವುದರಿಂದ ಉದಯಾದ್ರಿಜಾತನು ಎಂದು ಹೇಳಲ್ಪಡುವನು.

ಋತಮಿತ್ಯೇಷ ವೈ ಸತ್ಯಂ ।

ಋತಶಬ್ದಕ್ಕೆ ಸತ್ಯವೆಂದರ್ಥವಿರುವುದು. ಸತ್ಯವು ಎರಡು ವಿಧ, ವ್ಯಾವಹಾರಿಕ ಮತ್ತು ಪಾರಮಾರ್ಥಿಕವೆಂದು. ಸುಳ್ಳನ್ನಾಡದೇ ಸತ್ಯವನ್ನೇ ಹೇಳುವಾಗ ಉಪಯೋಗಿಸುವ ಸತ್ಯಶಬ್ದವು ವ್ಯಾವಹಾರಿಕಸತ್ಯವೆಂದು ಹೇಳಲ್ಪಡುವುದು. ಪಾರಮಾರ್ಥಿಕವಾದ ಅರ್ಥದಲ್ಲಿ ಸತ್ಯಶಬ್ದಕ್ಕೆ ಬ್ರಹ್ಮ ಅಥವಾ ಪರಬ್ರಹ್ಮವೆಂಬ ಅರ್ಥವಿರುವುದು. ಸತ್ಯಂ ಜ್ಞಾನ-ಮನಂತಂ ಬ್ರಹ್ಮ ಎಂದು ಶ್ರುತಿವಾಕ್ಯದಲ್ಲಿ ಸತ್ಯಶಬ್ದಕ್ಕೆ ಬ್ರಹ್ಮವೆಂದರ್ಥವಿರುವುದು. ಆ ಅರ್ಥವೇ ಇಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ಅಸಾವಾದಿತ್ಯೋ ಬ್ರಹ್ಮೇತಿ ಎಂದು ಶ್ರುತಿವಾಕ್ಯವೂ ಈ ಅರ್ಥವನ್ನೇ ಸಮರ್ಥಿಸುವುದು ಎಂದರೆ ಈ ಆದಿತ್ಯನೇ ಪರಬ್ರಹ್ಮನು ಎಂದಭಿಪ್ರಾಯವು.

ಏಷ ಏತಾನಿ ಸರ್ವಾಣ್ಯೇಷಾ ಹ ವಾ ಅಸ್ಯ ಛಂದಸ್ಸು ಪ್ರತ್ಯಕ್ಷತಮಾದಿವ ರೂಪಂ ।

(ಐ. ಬ್ರಾ. ೧೮-೬)

ಈ ಋಕ್ಕಿನಲ್ಲಿ ಹೇಳಿರುವ ಹಂಸಃ ಎಂದು ಮೊದಲಾದ ಶಬ್ದಗಳೆಲ್ಲವೂ ಈ ಆದಿತ್ಯನನ್ನೇ ಪ್ರತಿಪಾದಿಸುವವು. ಏಕೆಂದರೆ ಈ ಆದಿತ್ಯನು ಸರ್ವಾತ್ಮಕನಾದ ಪರಬ್ರಹ್ಮನೇ ಆಗಿರುವನು. ವೇದಮಂತ್ರಗಳಲ್ಲಿ ಈ ಹಂಸವತೀ ಋಕ್ಕೆಂದು ಪ್ರಸಿದ್ಧವಾಗಿರುವ ಹಂಸಃ ಶುಚಿಷತ್ ಎಂಬ ಋಕ್ಕಿನಲ್ಲಿ ಆದಿತ್ಯನ ಸರ್ವಾತ್ಮಕತ್ವವನ್ನೂ ಪರಬ್ರಹ್ಮಸ್ವರೂಪವನ್ನೂ ಸ್ಪಷ್ಟವಾಗುವಂತೆ ವಿವರಿಸಲ್ಪಟ್ಟಿರುವುದು.

ಯಾಸ್ಕರು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

ಹಂಸ ಇತಿ ಹಂಸಾಃ ಸೂರ್ಯರಶ್ಮಯಃ ಪರಮಾತ್ಮಾ ಪರಂ ಜ್ಯೋತಿಃ ಪೃಥಿವೀ ವ್ಯಾಪ್ತೇತಿ ವ್ಯಾಪ್ತಂ ಸರ್ವಂ ವ್ಯಾಪ್ತಂ ವನನಕರ್ಮಣಾನಭ್ಯಾಸೇನಾದಿತ್ಯಮಂಡಲೇನೇತಿ ತ್ಯಯತೀತಿ ಲೋಕೋ ತ್ಯಯತೀತಿ ಹಂಸಯಂತ್ಯಯತೀತಿ ಹಂಸಾಃ ಪರಮಹಂಸಾಃ ಪರಮಾತ್ಮಾ ಸೂರ್ಯರಶ್ಮಿಭಿಃ ಪ್ರಭೂತೇ ಗಭೀರ ವಸತೀತಿ ತ್ರಿಭಿರ್ವಸತೀತಿ ವಾ ರಶ್ಮಿಭಿರ್ವಸತೀತಿ ವಾ ವಹ್ನಿರ್ವಸತೀತಿ ವಾ ಸುವರ್ಣರೇತಾಃ ಪೂಷಾ ಗರ್ಭಾ ರಿಭೇತಿ ರಿಭಂತಾ ವನಕುಟಿಲಾನಿ ಕುಟಂತಾ ರಿಭಂತಾಂತರಿಕ್ಷಾ ಚರತ್ಪಥಾಂತರಿಕ್ಷಾ ಚರದಿತಿ ದಿವಿ ಭುವಿ ಗಮನಂ ವಾ ಸುಭಾನುಃ ಸುಪ್ರಭೂತೋ ಹೋತಾದಿತ್ಯಸ್ಯ ಗತಾ ಭವಂತ್ಯತಿಥಿರ್ದುರೋಣಸತ್ ಸರ್ವೇ ದುರೋಣ-ಸತ್ ದ್ರವಂ ಸರ್ವೇ ರಸಾ ವಿಕರ್ಷಯತಿ ರಶ್ಮಿಭಿರ್ವಿಕರ್ಷಯತಿ ವಹ್ನಿರ್ವಿಕರ್ಷಯತಿ ವನನಂ ಭವತ್ಯಪ್ಸುಗೋಜಾ ಅದ್ರಿಗೋಜಾ ಧರಿತ್ರಿಗೋಜಾಃ ಸರ್ವೇ ಗೋಜಾ ಋತಜಾ ಬಹುಶಬ್ದಾ ಭವಂತಿ ನಿಗಮೋ ನಿಗಮುವ್ಯತಿ ಭವತ್ಯೃಷೇ ನಿರ್ವಚನಾಯ ॥

(ನಿ. ೧೪-೨೯)

ನಿರುಕ್ತದ ಪರಿಶಿಷ್ಟವಾದ ಹದಿನಾಲ್ಕನೆಯ ಅಧ್ಯಾಯದಲ್ಲಿ ಯಾಸ್ಕರು—**ವ್ಯಾಖ್ಯಾತಂ ದೈವತಂ ಯಜ್ಞಾಂಗಂ ಚಾಥಾತ ಊರ್ಧ್ವಮಾರ್ಗಗತಿಂ ವ್ಯಾಖ್ಯಾಸ್ಯಾಮಃ । ಸೂರ್ಯ ಆತ್ಮೇತ್ಯುದಿತಸ್ಯ ಹಿ ಕರ್ಮದ್ರಷ್ಟಾ-ಥೈತದನುಪ್ರವದಂತ್ಯಥೈತಂ ಮಹಾಂತಮಾತ್ಮಾನಮೇಷರ್ಗಣಃ ಪ್ರವದಂತಿ** ಎಂದು ಪ್ರಾರಂಭಿಸಿ, ಇದುವರೆಗೆ ಯಜ್ಞಾದಿಗಳಲ್ಲಿ ಹವಿರ್ಭಾಗಾರ್ಹರಾದ ದೇವತೆಗಳ ವಿಷಯವನ್ನು ವಿವರಿಸಿದ್ದಾಯಿತು. ಈಗ ಊರ್ಧ್ವಮಾರ್ಗ ಗತಿಗೆ ಸಾಧನಭೂತವಾದ ಆಧ್ಯಾತ್ಮಿಕವಿಷಯವನ್ನು ಅಥವಾ ಆಧ್ಯಾತ್ಮಿಕಸಂಬಂಧವಾದ ಅರ್ಥವನ್ನೊಳ ಗೊಂಡ ಕೆಲವು ಋಕ್ಕುಗಳನ್ನು ವಿವರಿಸುತ್ತೇವೆ ಎಂದು ಮೊದಲುಮಾಡಿ—ಸೂರ್ಯನಃ ಆತ್ಮನು (ಪರಮಾತ್ಮನು) ಉದಯಿಸುತ್ತಿರುವ ಸೂರ್ಯನು ಪರಮಾತ್ಮಸ್ವರೂಪವುಳ್ಳವನಾದ್ದರಿಂದ ಸಮಸ್ತಕರ್ಮಗಳನ್ನೂ ನೋಡು ತ್ತಿರುವನು. ಇವನು ಮಹಾಮಹಿಮನು ಎಂದು ಈ ಅಧ್ಯಾಯಕ್ಕೆ ಪೀಠಿಕಾರೂಪವಾದ ಮುನ್ನುಡಿಯನ್ನು ಬರೆದು **ಹಂಸಃ ಶುಚಿಸತ್** ಎಂಬ ಈ ಋಕ್ಕಿನ ಆಧ್ಯಾತ್ಮಪರವಾದ ನಿರ್ವಚನವನ್ನು ಹೇಳಿರುವುದನ್ನು ಮೇಲೆ ತಿಳಿಸಿದೆ. ಮತ್ತು **ಅಥಾತ್ಮಾನೋ ಮಹತಃ ಪ್ರಥಮಂ ಭೂತನಾಮಧೇಯಾನ್ಯನುಕ್ರಮಿಷ್ಯಾಮಃ** ಪರಮಾತ್ಮನ ಮಹತ್ತ್ವವನ್ನು ತಿಳಿಸುವ ಶಬ್ದಗಳನ್ನು ಕ್ರಮವಾಗಿ ತಿಳಿಸುವೆವು ಎಂದು ಪ್ರಾರಂಭಿಸಿ **ಹಂಸಃ ಘರ್ಮಃ ಯಜ್ಞಃ ವೇನಃ** ಎಂದು ಮೊದಲಾದ ೯೫ ಶಬ್ದಗಳ ಪಟ್ಟಿಯನ್ನು ಕೊಟ್ಟು, **ಅಥೈತಂ ಮಹಾಂತಮಾತ್ಮಾನಮೇತಾನಿ ಸೂಕ್ತಾನ್ಯೇತಾ ಋಚೋಽನುಪ್ರವದಂತಿ** ಈ ಶಬ್ದಗಳನ್ನೊಳಗೊಂಡ ಸೂಕ್ತ ಅಥವಾ ಋಕ್ಕುಗಳ ಆಧ್ಯಾತ್ಮಸಂಬಂಧ ವಾದ ಅರ್ಥದಲ್ಲಿ ಮಹತ್ತ್ವರೂಪವಾದ ಆತ್ಮವನ್ನು ಬೋಧಿಸುವವು ಎಂದು ಹೇಳಿದ್ದಾರೆ. ಈ ಪಟ್ಟಿಯಲ್ಲಿ **ಹಂಸಃ** ಎಂಬ ಶಬ್ದವೇ ಮೊದಲನೆಯದಾಗಿದೆ. ಈ ಋಕ್ಕಿನ ಅರ್ಥವನ್ನು ವಿವರಿಸುತ್ತಾ **ಹಂಸ ಇತಿ ಹಂಸಾಃ ಸೂರ್ಯ-ರಶ್ಮಯಃ ಪರಮಾತ್ಮಾ ಪರಂಜ್ಯೋತಿಃ** ಎಂದರೆ ಹಂಸಃ (ಇದಕ್ಕೆ ಹಂಸಾಃ ಎಂದು ಬಹುವಚನಾರ್ಥವನ್ನು ಹೇಳ ಬೇಕು) ಎಂಬ ಶಬ್ದಕ್ಕೆ ಸೂರ್ಯರಶ್ಮಿಗಳೇ ಪರಂಜ್ಯೋತಿಸ್ಸ್ವರೂಪನಾದ ಪರಮಾತ್ಮನು. ಇವನು ಪೃಥಿವೀ ಮೊದಲಾದ ಸಮಸ್ತಲೋಕಗಳನ್ನೂ ವ್ಯಾಪಿಸಿರುವನು. ಆದಿತ್ಯಮಂಡಲದಲ್ಲಿ ಜ್ಯೋತೀರೂಪದಿಂದ ನೆಲೆಸಿ ಲೋಕಗಳನ್ನೆಲ್ಲಾ ತನ್ನ ಪ್ರಕಾಶದಿಂದ ವ್ಯಾಪಿಸಿರುವನು. **ಹಂಸಯಂತಿ** ಧಾತುವಿಗೆ **ಆಯತೀತಿ ಹಂಸಾಃ** ಗತ್ಯರ್ಥವಿರುವುದರಿಂದ ತನ್ನ ರಶ್ಮಿಗಳಿಂದ ಸರ್ವವನ್ನೂ ವ್ಯಾಪಿಸಿರುವನು. ಇದನ್ನೇ **ತ್ರಿಭಿರ್ವಸತೀತಿ ವಾ ರಶ್ಮಿರ್ವಸತೀತಿ ವಾ ವಹ್ನಿರ್ವಸತೀತಿ ವಾ** ಎಂಬ ವಾಕ್ಯದಿಂದ ವಿವರಿಸಿರುವರು. ಇವನಿಗೆ **ಸುವರ್ಣರೇತಾಃ ಪೂಷಾ** ಎಂದು ಅನೇಕ ಅನ್ವರ್ಥನಾಮಗಳಿವೆ. ಈ ಸೂರ್ಯಸ್ವರೂಪಿಯಾದ ಪರಮಾತ್ಮನಿಗೆ **ಅಂತರಿಕ್ಷಾ ಚರತ್ಪಥಾಂತರಿಕ್ಷಾ ಚರದಿತಿ ದಿವಿ ಭುವಿ ಗಮನಂ ವಾ** ಅಂತರಿಕ್ಷದಲ್ಲಿಯೂ, ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ ಸಂಚಾರವಿರು ವುದು. ದ್ರವರೂಪವಾದ ಸಮಸ್ತ ಪದಾರ್ಥವನ್ನು ತನ್ನ ರಶ್ಮಿಗಳ ಮೂಲಕ ಆಕರ್ಷಿಸುವನು. ಸರ್ವವನ್ನೂ ವ್ಯಾಪಿಸುವ ಸ್ವಭಾವವುಳ್ಳವನಾದ್ದರಿಂದ **ಅದ್ರಿಜಾ, ಋತಜಾ** ಮೊದಲಾದ ಬಹುಶಬ್ದವಾಚ್ಯನಾಗಿರುವನು ಎಂದು ಋಷಿಯ ಅಭಿಪ್ರಾಯವು ಎಂದು ನಿರ್ವಚನವನ್ನು ಹೇಳಿರುವರು.

ಕೃಷ್ಣಯಜುರ್ವೇದದಲ್ಲಿ ಈ ಋಕ್ಕು ಪಠಿತವಾಗಿರುವುದರಿಂದ ಅದಕ್ಕೆ ಮಹೀಧರಭಾಷ್ಯವನ್ನೂ ಸಾಯಣಭಾಷ್ಯ ವನ್ನು ಅನುಸರಿಸಿ ಈ ಋಕ್ಕಿಗೆ Wilson ಎಂಬ ಆಂಗ್ಲಪಂಡಿತನು ಬರೆದಿರುವ ಟೀಕೆಯನ್ನು ಇಲ್ಲಿ ಕೊಟ್ಟಿದೇವೆ.

This stanza is knwon as the Hansavati Rich, and occurs twice in the Yajus, 10, 24, and 12, 14, as well as in the Aitareya Brahmana, IV, 20, 1;

and although the commentators vary a little in their interpretation of the individual terms, they agree as to the purport of the whole, the identification of Aditya, or the sun in the type Dadhikra with Parabrahma or the Universal deity, and consequently his identity with all other types of the Supreme Being: these terms are thus specified;—1. Hansa, from han to go, he who goes eternally to destory, who destroys individually; or it is resolvable into aham, I, and sa, he that is, I am that, the Supreme: 2. Vasu the appointer of the stations of all creatures, or all men, or that which abides (vasati) at all times, sarvada: 3. Hota, or sacrificer: and 4. Atithi or guest, meaning in both cases Agni, or fire, first as the sacrificial, and secondly as culinary, fire: 5 Nrishad, the dweller among men, is explained Chaitanya, consciousness, or Prana, vitality, or, according to Sayana in the scholia on the Brahmana, sight, or the eye, according to the text "the tsun, becoming the eye (of the world), entered into the two eyes (of man)" 6. Varasad is uniformly rendered the dweller in the most excellent station, that is, the solar orb: 7. Ritasad is he who is present in truth, or in water, or in sacrifice: the comment on the Brahmana interprets truth, the text of the veda, vedavahya: 8. Vyomasad, the dweller in the sky, has its literal meaning everywhere: only Sayana makes it out to be the wind: 9. Abjah, who is born in thc midst of the water, as, according to another text, udakamadhye khalvoyam jayate. Mahidhara says, in the form of a fish, etc.: the Brahmana intimates that this refers to the apparent rising of the sun from the ocean and setting in the same: 10. Gojah, born amidst, goshu, rays: Mahidhara says, gavi, prithivyam, in the earth, being identical with the elements: 11. Ritajah, born of truth, from being visible by all not invisible like Indra and the rest, is Sayana's explanation in this place; in his scholia on the Brahmana he interprets it, born from the mantras of the Vedas: 12, Adrija, mountain-born, that is in the eastern mountain, where he rises: Mahidhara says, born, in stone in the form of Agni, as if alluding to flint; or adri, having for one meaning a cloud, he may be said to be generated in the clouds in the form of rain: finally

he is Ritam, truth, that is, according to Sayana, in both his comments, sound truth; or Parabrahma, as by another text, "Satyam Jnanam Anantam Brahma" truth, wisdom, infinitude is Brahma; and as he explains it in this text, abadhyam sarvadhishthanam Brahma tatwam, the indefeasible, all-regulating principle, Brahma: so in his gloss on the Brahmana, truth, he says, is of two kinds–vyavaharikam, truth in speech and worldly dealings, and paramarthikam, or Parabrahma, the supreme Universal spirit: he notices, also, the reading of another Shakha or Ritam brihat, which is followed in the Yajus, and is explained by Mahidhara the all-pervading, the infinite sarvagatam aparyantam, that is, Parabrahmarupa; Aditya in the form of Parabrahma.

## ನಲವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಂದ್ರಾ ಕೋ ವಾಮಿತ್ಯೇಕಾದಶರ್ಚಂ ನವಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮೈಂದ್ರಾವರುಣಂ । ಅತ್ರಾನುಕ್ರಮಣಿಕಾ । ಇಂದ್ರಾ ಕೋ ವಾಮೇಕಾದಶೈಂದ್ರಾವರುಣಂ ತ್ವಿತಿ ॥ ಆಭಿಪ್ಲವಿಕೇಷೂಕ್ಥೇಷು ತೃತೀಯಸವನೇ ಮೈತ್ರಾವರುಣಶಸ್ತ್ರೇಷು ಸ್ತೋಮವೃದ್ಧಾವಾವಾಪಾರ್ಥಮೇತದಾದಿಸೂಕ್ತದ್ವಯಂ । ಇಂದ್ರಾ ಕೋ ವಾಮಿತಿ ಸೂಕ್ತೇ । ಆ. ೭-೯ । ಇತಿ ಸೂತ್ರಿತತ್ವಾತ್ ॥

ಅನುವಾದವು—ಇಂದ್ರಾ ಕೋ ವಾಂ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರಾವರುಣರು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಇಂದ್ರಾ ಕೋ ವಾಮೇಕಾದಶೈಂದ್ರಾವರುಣಂ ತು ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥವೆಂಬ ಯಾಗದ ತೃತೀಯಸವನಕಾಲದಲ್ಲಿ ಮೈತ್ರಾವರುಣ ಶಸ್ತ್ರಮಂತ್ರಪಠನಮಾಡುವಾಗ ಸೋಮವೃದ್ಧಿಗಾಗಿ ಆವಾಪಮಂತ್ರಗಳಿಗಾಗಿ ಈ ಸೂಕ್ತವನ್ನೂ ಮುಂದಿನ ಸೂಕ್ತವನ್ನೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಇಂದ್ರಾ ಕೋ ವಾಮಿತಿ ಸೂಕ್ತೇ ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು.

## ಸೂಕ್ತ—೪೧

ಮಂಡಲ—೪ ‖ ಅನುವಾಕ—೪ ‖ ಸೂಕ್ತ—೪೧ ‖

ಅಷ್ಟಕ—೩ ‖ ಅಧ್ಯಾಯ—೭ ‖ ವರ್ಗ—೧೫, ೧೬ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ‖

ಋಷಿಃ—ವಾಮದೇವಃ ‖

ದೇವತಾ—ಇಂದ್ರಾವರುಣೌ ‖

ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಇಂದ್ರಾ ಕೋ ವಾಂ ವರುಣಾ ಸುಮ್ನಮಾಪ ಸ್ತೋಮೋ ಹವಿಷ್ಮಾಁ

ಅಮೃತೋ ನ ಹೋತಾ ।

ಯೋ ವಾಂ ಹೃದಿ ಕ್ರತುಮಾಁ ಅಸ್ಮದುಕ್ತಃ ಪಸ್ಪರ್ಶದಿಂದ್ರಾವರುಣಾ

ನಮಸ್ವಾನ್ ‖ ೧ ‖

‖ ಪದಪಾಠಃ ‖

ಇಂದ್ರಾ । ಕಃ । ವಾಂ । ವರುಣಾ । ಸುಮ್ನಂ । ಆಪ । ಸ್ತೋಮಃ । ಹವಿಷ್ಮಾನ್ । ಅಮೃತಃ । ನ । ಹೋತಾ ।

ಯಃ । ವಾಂ । ಹೃದಿ । ಕ್ರತುಽಮಾನ್ । ಅಸ್ಮತ್ । ಉಕ್ತಃ । ಪಸ್ಪರ್ಶತ್ । ಇಂದ್ರಾವರುಣಾ । ನಮಸ್ವಾನ್ ‖

‖ ಸಾಯಣಭಾಷ್ಯಂ ‖

ಹೇ ಇಂದ್ರಾ ಹೇ ವರುಣಾ ಹೇ ಇಂದ್ರಾವರುಣೌ । ಪರಸ್ಪರಾಪೇಕ್ಷಯಾ ದ್ವಿವಚನಂ । ವಾಂ ಯುವಯೋಃ ಸುಮ್ನಂ ಸುಖಂ ಕಃ ಸ್ತೋಮೋ ಹವಿಷ್ಮಾನ್ ಹವಿರ್ಭಿರುಪೇತಃ ಸೋಮಾಜ್ಯಾದಿಪ್ರದೇಯದ್ರವ್ಯೋಪೇತಂ ಕತಮತ್ ಸ್ತೋತ್ರಂ ಸುಮ್ನಮಾಪ । ಫಲಕತ್ವೇನ ಪ್ರಾಪ್ನುಯಾದಿತ್ಯರ್ಥಃ । ಯದ್ವಾ । ಹವಿಷ್ಮಾನಿತ್ಯೇತದುತ್ತರತ್ರ ಯೋಜ್ಯಂ । ಹವಿಷ್ಮಾನ್ ಹವಿರ್ಯುಕ್ತೋಽಮೃತೋಽಮರಣಲಕ್ಷಣಃ ಸ್ವರ್ಗಸಾಧನೋ ಹೋತಾಗ್ನಿರಿವ । ಸ ಯಥಾ ತಥಾ ಯಃ ಸ್ತೋಮೋ ಹೇ ಇಂದ್ರಾವರುಣೌ ವಾಂ ಯುವಯೋರ್ಹೃದಿ ಹೃದಯೇ ಕ್ರತುಮಾನ್ಪ್ರಜ್ಞೋಪೇತೋಽಸ್ಮದಸ್ಮತ್ಸಕಾಶಾದುಕ್ತ ಉದಿತೋ ನಮಸ್ವಾನ್ಹವಿಷ್ಮಾನ್ನಮಸ್ಕಾರೋಪೇತೋ ವಾ ಪಸ್ಪರ್ಶತ್ । ಸ್ಪೃಶೇತ್ । ಹೃದಯಂಗಮೋ ಭವೇತ್ । ಸ ಕ ಇತಿ ಸ್ತೋಮಪ್ರಶಂಸಾ ‖

॥ ಪ್ರತಿಪದಾರ್ಥ ॥

ಇಂದ್ರಾ—ಎಲೈ ಇಂದ್ರ (ಮತ್ತು ವರುಣರೇ) । ವರುಣಾ—ಎಲೈ ವರುಣ (ಮತ್ತು ಇಂದ್ರರೇ) । ಅಮೃತಃ—ಅಮೃತತ್ವವನ್ನು ಸಂಪಾದಿಸಿಕೊಡುವ । ಹೋತಾ ನ—ಅಗ್ನಿಯಂತೆ । ಹವಿಷ್ಮಾನ್—ಹವಿಸ್ಸಿನಿಂದ ಯುಕ್ತವಾದ । ಕಃ ಸ್ತೋಮಃ—ಯಾವ ಸ್ತುತಿಯು ತಾನೇ । ವಾಂ—ನಿಮ್ಮಿಬ್ಬರಿಗೂ ! ಸುಮ್ನಂ—ಸುಖವನ್ನು । ಆಪ—ಹೊಂದಿಸಬಲ್ಲದು । ಇಂದ್ರಾವರುಣೌ—ಎಲೈ ಇಂದ್ರಾವರುಣರೇ । ಕ್ರತುಮಾನ್—ಪ್ರಜ್ಞೆಯಿಂದ ಕೂಡಿದುದೂ । ಅಸ್ಮತ್—ನಮ್ಮಿಂದ । ಉಕ್ತಃ—ಪಠಿತವಾದುದೂ । ನಮಸ್ವಾನ್—ಹವಿಸ್ಸಿನಿಂದ ಯುಕ್ತವಾದುದೂ ಆದ । ಯಃ—ಯಾವ ಸ್ತೋಮವು । ವಾಂ—ನಿಮ್ಮಿಬ್ಬರಿಗೂ । ಹೃದಿ—ಹೃದಯಲ್ಲಿ । ಪಸ್ಪರ್ಶತ್—ವ್ಯಾಪಿಸಿ ಹೃದಯಂಗಮವಾಗಬಲ್ಲದೋ (ಅಂತಹ ಸ್ತೋಮವಾವುದು) ?

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಅಮೃತತ್ವವನ್ನು ಸಂಪಾದಿಸಿಕೊಡುವ ಅಗ್ನಿಯಂತೆ, ಹವಿಸ್ಸಿನಿಂದ ಯುಕ್ತವಾದ ಯಾವ ಸ್ತುತಿಯು ತಾನೇ ನಿಮ್ಮಿಬ್ಬರಿಗೂ ಸುಖವನ್ನು ಒದಗಿಸಬಲ್ಲದು? ಪ್ರಜ್ಞೆಯಿಂದ ಕೂಡಿದುದೂ, ನಮ್ಮಿಂದ ಪಠಿತವಾದುದೂ, ಹವಿಸ್ಸಿನಿಂದ ಯುಕ್ತವಾದುದೂ ಆದ ಯಾವ ಸ್ತೋಮವು ನಿಮ್ಮಿಬ್ಬರಿಗೂ ಹೃದಯದಲ್ಲಿ ವ್ಯಾಪಿಸಿ ಹೃದಯಂಗಮವಾಗಬಲ್ಲುದೋ ಅಂತಹ ಸ್ತೋಮವಾವುದು ?

## English Translation.

Indra (and Varuna), Varuna (and Indra), what praise of you accompanied by oblations may obtain for us felicity, (such as) the immortal invoker of the gods, (Agni, may bestow): may (the praise) which is addressed by us to you both, Indra and Varuna, sanctified by acts and prompted by veneration, touch your hearts.

॥ ಸಂಹಿತಾಪಾಠಃ ॥

ಇಂದ್ರಾ ಹ ಯೋ ವರುಣಾ ಚಕ್ರ ಆಪೀ ದೇವೌ ಮರ್ತಃ ಸಖ್ಯಾಯ ಪ್ರಯಸ್ವಾನ್ ।
ಸ ಹಂತಿ ವೃತ್ರಾ ಸಮಿಥೇಷು ಶತ್ರೂನವೋಭಿರ್ವಾ ಮಹದ್ಭಿಃ ಸ ಪ್ರ ಶೃಣ್ವೇ ॥ ೨ ॥

॥ ಪದಪಾಠಃ ॥

ಇಂದ್ರಾ । ಹ । ಯಃ । ವರುಣಾ । ಚಕ್ರೇ । ಆಪೀ ಇತಿ । ದೇವಾ । ಮರ್ತಃ । ಸಖ್ಯಾಯ । ಪ್ರಯಸ್ವಾನ್ ।
ಸಃ । ಹಂತಿ । ವೃತ್ರಾ । ಸಂऽಇಥೇಷು । ಶತ್ರೂನ್ । ಅವಃऽಭಿಃ । ವಾ । ಮಹತ್ऽಭಿಃ । ಸಃ । ಪ್ರ ।
ಶೃಣ್ವೇ ॥ ೨ ॥

॥ ಸಾಯಣಭಾಷ್ಯಂ ॥

ಇಂದ್ರಾ ವರುಣೇಂದ್ರಾವರುಣೌ ದೇವಾ । ಹಶಬ್ದಃ ಪೂರಣಃ ಪ್ರಸಿದ್ಧೌ ವಾ । ಯೋ ಮರ್ತೋ ಮರಣಧರ್ಮಾ ಪ್ರಯಸ್ವಾನ್ ಹವಿರ್ಲಕ್ಷಣಾನ್ನವಾನ್ ಸನ್ ಸಖ್ಯಾಯ ಸಖಿತ್ವಾಯಾಪೀ ಬಂಧೂ ಚಕ್ರೇ । ಕರೋತಿ । ಸ ಮರ್ತೋ ವೃತ್ರಾ ಆವರಕಾಣಿ ಪಾಪಾನಿ ಹಂತಿ । ತಥಾ ಸಮಿಥೇಷು ಸಂಗ್ರಾಮೇಷು ಶತ್ರೂನ್ ಹಂತಿ । ವಾಶಬ್ದಶ್ಚಾರ್ಥೇ । ಮಹದ್ಭಿರವೋಭೀ ರಕ್ಷಣೈಃ ಸ ನರಃ ಪ್ರ ಶೃಣ್ವೇ । ಪ್ರಕೃಷ್ಟಂ ಶ್ರೂಯತೇ । ವಿಖ್ಯಾತೋ ಭವತಿ ॥

॥ ಪ್ರತಿಪದಾರ್ಥ ॥

ದೇವಾ—ದೇವತಾತ್ಮರಾದ । ಇಂದ್ರಾವರುಣೌ—ಎಲೈ ಇಂದ್ರ ಮತ್ತು ವರುಣರೇ । ಯಃ ಮರ್ತಃ—ಯಾವ ಮಾನವನು । ಪ್ರಯಸ್ವಾನ್—ಹವಿಸ್ಸಿನ ರೂಪದ ಅನ್ನದೊಡಗೂಡಿ । ಸಖ್ಯಾಯ—ನಿಮ್ಮೊಡನೆ ಸಖಿತ್ವಕ್ಕಾಗಿ । ಆಪೀ—(ನಿಮ್ಮನ್ನು) ಬಂಧುಗಳನ್ನಾಗಿ । ಚಕ್ರೇ—ಮಾಡಿಕೊಳ್ಳುತ್ತಾನೆಯೋ । ಸಃ—ಆ ಮಾನವನು । ವೃತ್ರಾ—ಆವರಕಗಳಾದ ಪಾಪಗಳನ್ನು । ಹಂತಿ—ನಾಶಮಾಡುತ್ತಾನೆ । ಸಮಿಥೇಷು—ಸಂಗ್ರಾಮಗಳಲ್ಲಿ । ಶತ್ರೂನ್—ಶತ್ರುಗಳನ್ನು ನಾಶಮಾಡುತ್ತಾನೆ । ಮಹದ್ಭಿಃ—ಮಹತ್ತಾದ । ಅವೋಭಿಃ—(ನಿಮ್ಮ) ರಕ್ಷಣೆಗಳಿಂದ । ಸಃ—ಆ ಮಾನವನು । ಪ್ರ ಶೃಣ್ವೇ—ಪ್ರಸಿದ್ಧನಾಗುತ್ತಾನೆ.

॥ ಭಾವಾರ್ಥ ॥

ದೇವಾತ್ಮರಾದ ಎಲೈ ಇಂದ್ರ ಮತ್ತು ವರುಣರೇ, ಯಾವ ಮಾನವನು ಹವಿಸ್ಸಿನ ರೂಪದ ಅನ್ನದೊಡಗೂಡಿ ನಿಮ್ಮೊಡನೆ ಸಖಿತ್ವಕ್ಕಾಗಿ ನಿಮ್ಮನ್ನು ಬಂಧುಗಳನ್ನಾಗಿ ಮಾಡಿಕೊಳ್ಳುತ್ತಾನೆಯೋ, ಆ ಮಾನವನು ಆವರಕಗಳಾದ ಪಾಪಗಳನ್ನು ನಾಶಮಾಡುತ್ತಾನೆ. ನಿಮ್ಮ ಮಹತ್ತಾದ ರಕ್ಷಣೆಗಳಿಂದ ಪ್ರಸಿದ್ಧನಾಗುತ್ತಾನೆ.

## English Translation.

Divine Indra and Varuna, the mortal diligent in offering (you) sacrificial food, who has through friendship made you his kinsmen, destroys (his own) sins, and his enemies in battle; and by your great favours he becomes renowned.



॥ ಸಂಹಿತಾಪಾಠಃ ॥

ಇಂದ್ರಾ ಹ ರತ್ನಂ ವರುಣಾ ಧೇಷ್ಠೇತ್ಥಾ ನೃಭ್ಯಃ ಶಶಮಾನೇಭ್ಯಸ್ತಾ ।
ಯದೀ ಸಖಾಯಾ ಸಖ್ಯಾಯ ಸೋಮೈಃ ಸುತೇಭಿಃ ಸುಪ್ರಯಸಾ ಮಾದ-
ಯೈತೇ ॥ ೩ ॥

॥ ಪದಪಾಠಃ ॥

ಇಂದ್ರಾ । ಹ । ರತ್ನಂ । ವರುಣಾ । ಧೇಷ್ಠಾ । ಇತ್ಥಾ । ನೃಽಭ್ಯಃ । ಶಶಮಾನೇಭ್ಯಃ । ತಾ ।
ಯದಿ । ಸಖಾಯಾ । ಸಖ್ಯಾಯ । ಸೋಮೈಃ । ಸುತೇಭಿಃ । ಸುಽಪ್ರಯಸಾ । ಮಾದಯೈತೇ ಇತಿ ॥ ೩ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣೌ ತಾ । ಹೇತಿ ಪ್ರಸಿದ್ಧೌ । ತೌ ಖಲು ದೇವಾವಿತ್ಥೇತ್ಥಂ ನೃಭ್ಯೋ ಮನುಷ್ಯೇಭ್ಯಃ ಶಶಮಾನೇಭ್ಯಃ ಶಂಸಮಾನೇಭ್ಯಃ ಸ್ತೋತೃಭ್ಯೋಽಸ್ಮಭ್ಯಂ ರತ್ನಂ ರಮಣೀಯಂ ಧನಂ ಧೇಷ್ಠಾ ದಾತೃತಮೌ । ಭವತ ಇತಿ ಶೇಷಃ । ಯದಿ ಸಖಾಯಾ ಪರಸ್ಪರಂ ಯಜಮಾನಸ್ಯ ವಾ ಸಖಿಭೂತೌ ಸಖ್ಯಾಯ ಸಖಿಕರ್ಮಣೇ ಸಖಿತ್ವಾಯ ಸುತೇಭಿರಭಿಷುತೈಃ ಸೋಮೈಃ ಸುಪ್ರಯಸಾ ಶೋಭನಸೋಮಾನ್ನವಂತೌ ಮಾದಯೈತೇ । ಮಾದ್ಯೇತಾಂ । ತರ್ಹಿ ರತ್ನಾನಾಂ ದಾತಾರೌ ಭವತಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣೌ—ಎಲೈ ಇಂದ್ರಾವರುಣರೇ । ಯದಿ—ಯಾವಾಗ । ಸಖಾಯೆ—ಮಿತ್ರಭೂತರಾದ ನೀವು । ಸಖ್ಯಾಯ—ನಿಮ್ಮೊಡನೆ ಸಖಿತ್ವವನ್ನು ಸಂಪಾದಿಸುವುದಕ್ಕೋಸ್ಕರ । ಸುತೇಭಿಃ—ಹಿಂಡಲ್ಪಟ್ಟ । ಸೋಮೈಃ—ಸೋಮರಸಗಳಿಂದ । ಸುಪ್ರಯಸಾ—ಉತ್ತಮವಾದ ಅನ್ನವುಳ್ಳವರಾಗಿ । ಮಾದಯೈತೇ—ಸಂತೋಷಪಡುತ್ತೀರೋ ಆಗ । ತಾ—ಪ್ರಸಿದ್ಧರಾದ ನೀವಿಬ್ಬರೂ । ಇತ್ಥಾ—ಅನೇಕ ವಿಧವಾಗಿ । ಶಶಮಾನೇಭ್ಯಃ—ಸ್ತುತಿಸತಕ್ಕ । ನೃಭ್ಯಃ—ಮಾನವರಿಗೆ । ರತ್ನಂ—ರಮಣೀಯವಾದ ಧನವನ್ನು । ಧೇಷ್ಠಾ—ಕೊಡುವವರಾಗಿರುತ್ತೀರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಮಿತ್ರಭೂತರಾದ ನೀವು ನಿಮ್ಮೊಡನೆ ಸಖಿತ್ವವನ್ನು ಸಂಪಾದಿಸುವುದಕ್ಕೋಸ್ಕರ ಹಿಂಡಲ್ಪಟ್ಟ ಸೋಮಗಳಿಂದ ಉತ್ತಮವಾದ ಅನ್ನವನ್ನು ಸೇವಿಸುವವರಾಗಿ, ಯಾವಾಗ ಸಂತೋಷಪಡಿಸುತ್ತೀರೋ, ಆಗ ಪ್ರಸಿದ್ಧರಾದ ನೀವಿಬ್ಬರೂ ಅನೇಕ ವಿಧದಲ್ಲಿ ಸ್ತುತಿಸತಕ್ಕ ಮಾನವರಿಗೆ ರಮಣೀಯವಾದ ಧನಗಳನ್ನು ಕೊಡುವವರಾಗಿದ್ದೀರಿ.

## English Translation.

Indra and Varuna (you are) most liberal givers of wealth to men praising you in various ways, when as friends well plied with (sacrificial) food, you are exhilarated by the Soma juice effused through friendship.

॥ ಸಂಹಿತಾಪಾಠಃ ॥

ಇಂದ್ರಾ ಯುವಂ ವರುಣಾ ದಿದ್ಯುಮಸ್ಮಿನ್ನೋಜಿಷ್ಠಮುಗ್ರಾ ನಿ ವಧಿಷ್ಟಂ ವಜ್ರಂ ।
ಯೋ ನೋ ದುರೇವೋ ವೃಕತಿರ್ದಭೀತಿಸ್ತಸ್ಮಿನ್ಮಿಮಾಥಾಮಭಿ ಭೂತ್ಯೋಜಃ ॥ ೪ ॥

॥ ಪದಪಾಠಃ ॥

ಇಂದ್ರಾ । ಯುವಂ । ವರುಣಾ । ದಿದ್ಯುಂ । ಅಸ್ಮಿನ್ । ಓಜಿಷ್ಠಂ । ಉಗ್ರಾ । ನಿ । ವಧಿಷ್ಟಂ । ವಜ್ರಂ ।
ಯಃ । ನಃ । ದುಃಽಏವಃ । ವೃಕತಿಃ । ದಭೀತಿಃ । ತಸ್ಮಿನ್ । ಮಿಮಾಥಾಂ । ಅಭಿಽಭೂತಿ । ಓಜಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾ ಇಂದ್ರೌ ವರುಣಾ ವರುಣೌ ಹೇ ಉಗ್ರಾ ಉಗ್ರೌ । ಅತ್ರ ಸರ್ವತ್ರ ಪರಸ್ಪರಾಪೇಕ್ಷಯಾ ದ್ವಿವಚನಂ ಪ್ರ ಮಿತ್ರಯೋರ್ವರುಣಯೋಃ । ಋಗ್ವೇ. ೭-೬೬-೧ । ಇತಿವತ್ । ಯದ್ವಾ । ಛಾಂದಸತ್ವಾದ್ವ್ಯವಹಿತಸ್ಯಾಪ್ಯಾನಙ್ । ಅಸ್ಮಿನ್ ಶತ್ರೌ ದಿದ್ಯುಂ ದೀಪ್ತಮೋಜಿಷ್ಠಮತಿಶಯೇನ ತೇಜೋವದ್ವಜ್ರಮಾಯುಧಂ ನಿ ವಧಿಷ್ಟಂ । ವಧಾರ್ಥಂ ಪ್ರೇರಯತಮಿತ್ಯರ್ಥಃ । ಯಃ ಶತ್ರುರ್ನೋಽಸ್ಮಾಕಂ ದುರೇವೋ ದುಷ್ಪ್ರಾಪೋ ವೃಕತಿರತಿಶಯೇನಾದಾತಾ ದಭೀತಿರ್ಹಿಂಸಕಸ್ತಸ್ಮಿನ್ ಶತ್ರಾವಭಿಭೂತ್ಯಭಿಭಾವುಕಮೋಜೋ ಬಲಂ ಮಿಮಾಥಾಂ । ಕುರುತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣೌ— ಎಲೈ ಇಂದ್ರಾವರುಣರೇ । ಉಗ್ರಾ—(ಶತ್ರುವಿಗೆ) ಭಯಂಕರರಾದ ನೀವು । ಅಸ್ಮಿನ್—ಈ ಶತ್ರುವಿನ ಮೇಲೆ । ದಿದ್ಯುಂ—ಪ್ರಕಾಶಮಾನವಾದುದೂ । ಓಜಷ್ಠಂ—ಅತಿಶಯವಾದ ಶಕ್ತಿ

ಯುಳ್ಳದ್ದೂ ಆದ ವಜ್ರಂ—ವಜ್ರಾಯುಧವನ್ನು । ನಿ ವಧಿಷ್ಟಂ—ಅವನ ವಧಾರ್ಥವಾಗಿ ಪ್ರಯೋಗಿಸಿದ್ದೀರಿ । ಯಃ—ಯಾವ ಶತ್ರುವು । ದುರೇವಃ—ನಮ್ಮ ಶಕ್ತಿಗೆ ಮೀರಿದವನೂ । ವೃಕತಿಃ—ದುರಾಸೆಯಿಂದ ನಮ್ಮಲ್ಲಿರುವುದನ್ನೆಲ್ಲಾ ಕಸಿದುಕೊಳ್ಳುವನೂ । ದಭೀತಿಃ—ಹಿಂಸಕನೂ ಆಗಿದ್ದಾನೆಯೋ । ತಸ್ಮಿನ್—ಆ ಶತ್ರುವನ್ನು । ಅಭಿಭೂತಿಂ—ಸೋಲಿಸತಕ್ಕ । ಓಜಃ—ಶಕ್ತಿಯನ್ನು । ಯುವಂ—ನೀವಿಬ್ಬರೂ । ನಃ—ನಮಗೆ । ಮಿಮಾಥಾಂ—ಉಂಟುಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಶತ್ರುವಿಗೆ ಭಯಂಕರರಾದ ನೀವು ಈ ಶತ್ರುವಿನ ಮೇಲೆ ಪ್ರಕಾಶಮಾನವಾದುದೂ, ಅತಿಶಯವಾದ ಶಕ್ತಿಯುಳ್ಳದ್ದೂ ಆದ ವಜ್ರಾಯುಧವನ್ನು ಅವನ ವಧಾರ್ಥವಾಗಿ ಪ್ರಯೋಗಿಸಿದ್ದೀರಿ. ಯಾವ ಶತ್ರುವು ನಮ್ಮ ಶಕ್ತಿಗೆ ಮೀರಿದವನೂ, ದುರಾಸೆಯಿಂದ ನಮ್ಮಲ್ಲಿರುವುದನ್ನೆಲ್ಲಾ ಕಸಿದುಕೊಳ್ಳುವನೋ ಮತ್ತು ಹಿಂಸಕನೂ ಆಗಿದ್ದಾನೆಯೋ, ಆ ಶತ್ರುವನ್ನು ಸೋಲಿಸತಕ್ಕ ಶಕ್ತಿಯನ್ನು ನೀವಿಬ್ಬರೂ ನಮಗೆ ಉಂಟುಮಾಡಿರಿ.

## English Translation.

Fierce Indra and Varuna you hurled the brightshining and most mighty thunderbolt against this (our foe), who is difficult to be resisted by us; (who is) rapacious, malevolent: grant us strength to overcome him.



॥ ಸಂಹಿತಾಪಾಠಃ ॥

ಇಂದ್ರಾ ಯುವಂ ವರುಣಾ ಭೂತಮಸ್ಯಾ ಧಿಯಃ ಪ್ರೇತಾರಾ ವೃಷಭೇವ ಧೇನೋಃ ।

ಸಾ ನೋ ದುಹೀಯದ್ಯವಸೇವ ಗತ್ವೀ ಸಹಸ್ರಧಾರಾ ಪಯಸಾ ಮಹೀ ಗೌಃ ॥

॥ ಪದಪಾಠಃ ॥

ಇಂದ್ರಾ । ಯುವಂ । ವರುಣಾ । ಭೂತಂ । ಅಸ್ಯಾಃ । ಧಿಯಃ । ಪ್ರೇತಾರಾ । ವೃಷಭಾऽಇವ । ಧೇನೋಃ ।

ಸಾ । ನಃ । ದುಹೀಯತ್ । ಯವಸಾऽಇವ । ಗತ್ವೀ । ಸಹಸ್ರऽಧಾರಾ । ಪಯಸಾ । ಮಹೀ । ಗೌಃ ॥೫॥

॥ ಸಾಯಣಭಾಷ್ಯಂ ॥

ಹೇ ಇಂದ್ರಾ ವರುಣಾ ಇಂದ್ರಾವರುಣೌ ಯುವಂ ಯುವಾಮಸ್ಯಾ ಧಿಯಃ ಸ್ತುತ್ಯಾಃ ಪ್ರೇತಾರಾ ಪ್ರೀಣಯಿತಾರೌ ಭೂತಂ । ಭವತಂ । ವೃಷಭಾ ಸೇಕ್ತಾರೌ ವೃಷಭೌ ಧೇನೋರಿವ । ಸಾ ಸ್ತುತಿರೂಪಾ

ಧೇನುರ್ನೋಽಸ್ಮಾಕಂ ದುಹೀಯತ್ । ದುಹ್ಯೇತ್ । ಕಾಮಾನ್ ಪೂರಯೇತ್ । ಯವಸಾ ತೃಣಾದಿಘಾಸೇನ ನಿಮಿತ್ತೇನ ಗತ್ವೀ ಗತ್ವಾ ಪಯಸಾ ಸಹಸ್ರಧಾರಾ ಮಹೀ ಮಹತೀ ಗೌರಿವ ॥

॥ ಪ್ರತಿಪದಾರ್ಥ ॥

ಇಂದ್ರಾ ವರುಣಾ—ಎಲೈ ಇಂದ್ರಾವರುಣರೇ । ವೃಷಭಾ—ಸೇಚನಸಾಮರ್ಥ್ಯವುಳ್ಳ ವೃಷಭಗಳು । ಧೇನೋಃ ಇವ—ಧೇನುವನ್ನು ಪ್ರೇರಿಸುವಂತೆ । ಯುವಂ—ನೀವಿಬ್ಬರೂ । ಅಸ್ಯಾಃ ಧಿಯಃ—ಈ ಸ್ತುತಿಗೆ । ಪ್ರೇತಾರಾ—ಉತ್ತೇಜಕರಾಗಿರಿ । ಯವಸಾ—ತೃಣಾರ್ಥವಾಗಿ (ಹುಲುಗಾವಲಿಗೆ) । ಗತ್ವೀ—ಹೋಗಿರುವುದೂ । ಪಯಸಾ—ಹಾಲಿನಿಂದ ತುಂಬಿದ । ಸಹಸ್ರಧಾರಾ—ಸಾವಿರಾರು ಧಾರೆಯುಳ್ಳದ್ದೂ । ಮಹೀ—ಮಹತ್ತಾದುದೂ ಆದ । ಗೌಃ ಇವ—ಧೇನುವಿನಂತೆ । ಸಾ—ಸ್ತುತಿರೂಪವಾದ ಈ ಧೇನುವು । ನಃ—ನಮಗೆ । ದುಹೀಯತ್—ಇಷ್ಟಾರ್ಥಗಳನ್ನು ಕರೆಯಲಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಸೇಚನಸಾಮರ್ಥ್ಯವುಳ್ಳ ವೃಷಭಗಳು ಧೇನುವನ್ನು ಪ್ರೇರಿಸುವಂತೆ, ನೀವಿಬ್ಬರೂ ಈ ಸ್ತುತಿಗೆ ಉತ್ತೇಜಕರಾಗಿರಿ. ತೃಣಾರ್ಥವಾಗಿ ಹುಲ್ಲುಗಾವಲಿಗೆ ಹೋಗಿರುವುದೂ, ಹಾಲಿನಿಂದ ತುಂಬಿದ ಸಹಸ್ರಧಾರೆಯುಳ್ಳದ್ದೂ, ಮಹತ್ತಾದುದೂ ಆದ ಧೇನುವಿನಂತೆ ಸ್ತುತಿರೂಪವಾದ ಈ ಧೇನುವು ನಮಗೆ ಇಷ್ಟಾರ್ಥಗಳನ್ನು ಕರೆಯಲಿ.

## English Translation.

Indra and Varuna, be the exciters of this our praise, as the bull is of the milch cows : may that cow (of praise) yield us (reward), like a large cow that has gone forth to pasture, whose thousand channels (are filled) with milk.

~~~

॥ ಸಂಹಿತಾಪಾಠಃ ॥

ತೋಕೇ ಹಿತೇ ತನಯ ಉರ್ವರಾಸು ಸೂರೋ ದೃಶೀಕೇ ವೃಷಣಶ್ಚ ಪೌಂಸ್ಯೇ ।
ಇಂದ್ರಾ ನೋ ಅತ್ರ ವರುಣಾ ಸ್ಯಾತಾಮವೋಭಿರ್ದಸ್ಮಾ ಪರಿತಕ್ಮ್ಯಾಯಾಂ ॥

॥ ಪದಪಾಠಃ ॥

ತೋಕೇ । ಹಿತೇ । ತನಯೇ । ಉರ್ವರಾಸು । ಸೂರಃ । ದೃಶೀಕೇ । ವೃಷಣಃ । ಚ । ಪೌಂಸ್ಯೇ ।
ಇಂದ್ರಾ । ನಃ । ಅತ್ರ । ವರುಣಾ । ಸ್ಯಾತಾಂ । ಅವಃಽಭಿಃ । ದಸ್ಮಾ । ಪರಿಽತಕ್ಮ್ಯಾಯಾಂ ॥ ೬ ॥
~~~

॥ ಸಾಯಣಭಾಷ್ಯಂ ॥

ಇಂದ್ರಾವರುಣೌ ದೇವೌ ನೋ ಹಿತೇ ತೋಕೇ ಪುತ್ರೇ ತನಯೇ ತತ್ಪುತ್ರೇ ಚೋರ್ವರಾಸು ಸಸ್ಯಾಢ್ಯಾಸು ಭೂಮಿಷು ನಿಮಿತ್ತಭೂತಾಸು ಸೂರಃ ಪ್ರೇರಕಸ್ಯ ಸೂರ್ಯಸ್ಯ ದೃಶೀಕೇ ಚಿರಕಾಲದರ್ಶನಾಯ । ಚಿರಜೀವನಾಯೇತ್ಯರ್ಥಃ । ತಥಾ ವೃಷಣಃ ಸೇಕ್ತುರ್ಮಮ ಪೌಂಸ್ಯೇ ಚ ಪುಂಸ್ತ್ವಾಯ ಚ ಪುನರಪಿ ಪ್ರಜನನಸಾಮರ್ಥ್ಯಾಯ ಚ ದಸ್ಮಾ ಶತ್ರೂಣಾಂ ಹಿಂಸಕೌ ಸಂತೌ ನೋಽಸ್ಮಾಕಮವೋಭೀ ರಕ್ಷಣೈಃ ಸಹ ಪರಿತಕ್ಮ್ಯಾಯಾಂ ಪರಿತಕನೇ ನಿಮಿತ್ತಭೂತೇ ಸತಿ । ಯದ್ವಾ ರಾತ್ರಿನಾಮೈತತ್ । ರಾತ್ರೌ ಹಿಂಸಕಾನಾಂ ವಧಾಯ ಸ್ಯಾತಾಂ । ಭವೇತಾಂ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣರೇ । ನಃ—ನಮ್ಮ । ಹಿತೇ—ಕಲ್ಯಾಣಕ್ಕಾಗಿಯೂ । ತೋಕೇ—ಪುತ್ರಾರ್ಥವಾಗಿಯೂ । ತನಯೇ—ಪೌತ್ರಾರ್ಥವಾಗಿಯೂ । ಉರ್ವರಾಸು—ಭೂಮ್ಯರ್ಥವಾಗಿಯೂ । ಸೂರಃ—ಸೂರ್ಯನ । ದೃಶೀಕೇ—ಅನೇಕಕಾಲದ ದರ್ಶನಾರ್ಥವಾಗಿಯೂ (ದೀರ್ಘಕಾಲದ ಜೀವನಕ್ಕಾಗಿಯೂ । ವೃಷಣಃ—ವೀರ್ಯಸೇಚಕನಾದ ನನ್ನ । ಪೌಂಸ್ಯೇ ಚ—ವೀರ್ಯಾಭಿವೃದ್ಧಿಗಾಗಿಯೂ ಸಹ । ದಸ್ಮಾ—ಶತ್ರುಹಿಂಸಕರಾದ ನೀವು । ಪರಿತಕ್ಮ್ಯಾಯಾಂ—ಶತ್ರುನಾಶದ ನಿಮಿತ್ತವಾಗಿ । ಅವೋಭಿಃ—ನಿಮ್ಮ ರಕ್ಷಣೆಗಳೊಡನೆ । ಅತ್ರ ಸ್ಯಾತಾಂ—ನಮ್ಮ ಸುತ್ತಲೂ ಇರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಮ್ಮ ಕಲ್ಯಾಣಕ್ಕಾಗಿಯೂ, ಪುತ್ರಾರ್ಥವಾಗಿಯೂ, ಪೌತ್ರಾರ್ಥವಾಗಿಯೂ, ಭೂಮ್ಯರ್ಥವಾಗಿಯೂ ನಮ್ಮ ದೀರ್ಘಕಾಲದ ಜೀವನಕ್ಕಾಗಿಯೂ, ವೀರ್ಯಸೇಚಕನಾದ ನನ್ನ ವೀರ್ಯಾಭಿವೃದ್ಧಿಗಾಗಿಯೂ ಸಹ ಶತ್ರುಹಿಂಸಕರಾದ ನೀವು ಶತ್ರುನಾಶದ ನಿಮಿತ್ತವಾಗಿ ನಿಮ್ಮ ರಕ್ಷಣೆಗಳೊಡನೆ ನಮ್ಮ ಸುತ್ತಲೂ ಇರಿ.

## English Translation.

May Indra and Varuna, the overthrowers (of foes), be around us with (their) protections; (that thereby we may have) good sons and grandsons, and fertile lands, and long life, and virility.

॥ ಸಂಹಿತಾಪಾಠಃ ॥

ಯುವಾಮಿದ್ಧ್ಯವಸೇ ಪೂರ್ವ್ಯಾಯ ಪರಿ ಪ್ರಭೂತೀ ಗವಿಷಃ ಸ್ವಾಪೀ ।
ವೃಣೀಮಹೇ ಸಖ್ಯಾಯ ಪ್ರಿಯಾಯ ಶೂರಾ ಮಂಹಿಷ್ಠಾ ಪಿತರೇವ ಶಂಭೂ ॥

॥ ಪದಪಾಠಃ ॥

ಯುವಾಂ । ಇತ್ । ಹಿ । ಅವಸೇ । ಪೂರ್ವ್ಯಾಯ । ಪರಿ । ಪ್ರಭೂತೀ ಇತಿ ಪ್ರಭೂತೀ । ಗೋ॰ಇಷಃ । ಸ್ವಾಪೀ ಇತಿ ಸು॰ಆಪೀ ।

ವೃಣೀಮಹೇ । ಸಖ್ಯಾಯ । ಪ್ರಿಯಾಯ । ಶೂರಾ । ಮಂಹಿಷ್ಠಾ । ಪಿತರಾ॰ಇವ । ಶಂಭೂ ಇತಿ ಶಂ॰ಭೂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಗವಿಷೋ ಗಾ ಇಚ್ಛಂತೋ ವಯಂ ಯುವಾಮಿತ್ । ಹೀತಿ ಪಾದಪೂರಣಃ । ಯುವಾಮೇವ ಪೂರ್ವ್ಯಾಯ ಪುರಾತನಾಯ ಯುವಾಭ್ಯಾಂ ಕೃತಾಯಾವಸೇ ರಕ್ಷಣಾಯ । ವೃಣೀಮಹ ಇತಿ ಸಂಬಂಧಃ । ಪ್ರಭೂತೀ ಪ್ರಭವಂತೌ ಸ್ವಾಪೀ ಶೋಭನಬಂಧುಭೂತೌ । ಆಪಿರಿತಿ ಬಂಧುಃ । ಯದ್ವಾ। ಸುಷ್ಠು ವ್ಯಾಪನಶೀಲೌ ಶೂರಾ ವಿಕ್ರಾಂತೌ ಮಂಹಿಷ್ಠಾತಿಶಯೇನ ಪೂಜ್ಯೌ ಯುವಾಂ ಸಖ್ಯಾಯ ಸಮಾನಖ್ಯಾನಾಯ೩ ಪ್ರಿಯಾಯ ಚ ಪರಿ ವೃಣೀಮಹೇ । ಪರಿತಃ ಪ್ರಾರ್ಥಯಾಮಹೇ । ಶಂಭೂ ಸುಖಸ್ಯ ಭಾವಯಿತಾರೌ ಪಿತರೇವ ಪಿತರೌ ಪುತ್ರಾಯ ತದ್ವತ್ ॥

॥ ಪ್ರತಿಪದಾರ್ಥ ॥

(ಇಂದ್ರಾ ವರುಣೌ—ಎಲೈ ಇಂದ್ರಾವರುಣರೇ) । ಗವಿಷಃ—ಗೋವನ್ನು ಇಚ್ಛಿಸುವವರಾಗಿಯೂ । ಪೂರ್ವ್ಯಾಯ—ಪುರಾತನವಾದ । ಅವಸೇ—ರಕ್ಷಣಕ್ಕಾಗಿಯೂ । ಯುವಾಮಿತ್—ನಿಮ್ಮನ್ನೇ । ವೃಣೀಮಹೇ—ಪ್ರಾರ್ಥಿಸುತ್ತೇವೆ । ಪಿತರೇವ—ಮಾತಾಪಿತೃಗಳಂತೆ । ಶಂಭೂ—ಸುಖದಾಯಕರೂ । ಪ್ರಭೂತೀ—ಪ್ರಭಾವಶಾಲಿಗಳೂ । ಸ್ವಾಪೀ—ಶ್ರೇಷ್ಠವಾದ ಬಂಧುಗಳೂ । ಶೂರಾ—ಪರಾಕ್ರಮಿಗಳೂ । ಮಂಹಿಷ್ಠಾ—ಪೂಜ್ಯರೂ ಆದ ನಿಮ್ಮನ್ನೇ । ಸಖ್ಯಾಯ—ಸಖಿತ್ವಕ್ಕಾಗಿಯೂ । ಪ್ರಿಯಾಯ ಚ—ನಮ್ಮ ಹಿತಕ್ಕಾಗಿಯೂ ಸಹ । ಪರಿ (ವೃಣೀಮಹೇ)—ಸುತ್ತಲೂ ನಿಂತು ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಗೋವನ್ನು ಇಚ್ಛಿಸುವವರಾಗಿಯೂ, ಪುರಾತನವಾದ ರಕ್ಷಣಕ್ಕಾಗಿಯೂ, ನಿಮ್ಮೊಡನೆ ಸಖಿತ್ವಕ್ಕಾಗಿಯೂ, ನಮ್ಮ ಹಿತರಕ್ಷಣೆಗಾಗಿಯೂ ಸಹ ಮಾತಾಪಿತೃಗಳಂತೆ ಸುಖದಾಯಕರೂ, ಪ್ರಭಾವಗಳೂ, ಶ್ರೇಷ್ಠವಾದ ಬಂಧುಗಳೂ, ಪರಾಕ್ರಮಿಗಳೂ, ಪೂಜ್ಯರೂ ಆದ ನಿಮ್ಮನ್ನೇ ಸುತ್ತಲೂ ನಿಂತು ಪ್ರಾರ್ಥಿಸುತ್ತೇವೆ.

## English Translation.

Desirous of (possessing) cattle, we have recourse to you, Indra and Varuna, for full protection, you are powerful and kind as (kinsmen); we have recourse to you, adorable heroes, for (your) friendship and affection, (to you who are), like parents, givers of happiness.

॥ ಸಂಹಿತಾಪಾಠಃ ॥

ತಾ ವಾಂ ಧಿಯೋಽವಸೇ ವಾಜಯಂತೀರಾಜಿಂ ನ ಜಗ್ಮುರ್ಯುವಯೂಃ ಸುದಾನೂ ।
ಶ್ರಿಯೇ ನ ಗಾವ ಉಪ ಸೋಮಮಸ್ಥುರಿಂದ್ರಂ ಗಿರೋ ವರುಣಂ ಮೇ ಮನೀಷಾಃ ॥ ೮ ॥

॥ ಪದಪಾಠಃ ॥

ತಾಃ । ವಾಂ । ಧಿಯಃ । ಅವಸೇ । ವಾಜಯಂತೀಃ । ಆಜಿಂ । ನ । ಜಗ್ಮುಃ । ಯುವಯೂಃ ॥ ಸುದಾನೂ ಇತಿ ಸುದಾನೂ ।
ಶ್ರಿಯೇ । ನ । ಗಾವಃ । ಉಪ । ಸೋಮಂ । ಅಸ್ಥುಃ । ಇಂದ್ರಂ । ಗಿರಃ । ವರುಣಂ । ಮೇ । ಮನೀಷಾಃ ॥

॥ ಸಾಯಣಭಾಷ್ಯಂ ॥

ಸುದಾನೂ ಶೋಭನಫಲದಾತಾರೌ ಹೇ ದೇವೌ ವಾಂ ಯುವಾಂ ವಾಜಯಂತೀ ರತ್ನಮಿಚ್ಛಂತ್ಯೋ ಧಿಯಃ ಸ್ತುತಯೋ ಜಗ್ಮುಃ। ಗಚ್ಛಂತಿ । ಯುವಯೂರ್ಯುವಾಂ ಕಾಮಯಮಾನಾಃ ಪದಾತಯ ಅವಸೇ ರಕ್ಷಣಾಯ ಆಜಿಂ ನ ಸಂಗ್ರಾಮಮಿವ । ಕಿಂಚ ಶ್ರಿಯೇ ದಧ್ಯಾದಿಶ್ರಯಣಾಯ ಗಾವಃ ಸೋಮಂ ನ ಸೋಮಮಿವೇಂದ್ರಂ ವರುಣಂ ಚ ಮೇ ಮದೀಯಾ ಮನೀಷಾ ಮನಸ ಈಶ್ವರಾ ಗಿರಃ ಸ್ತುತಯ ಉಪಾಸ್ಥುಃ । ತಿಷ್ಠಂತಿ । ಪ್ರೀಣಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಸುದಾನೂ—ಶ್ರೇಷ್ಠವಾದ ದಾತೃಗಳಾದ ಎಲೈ ಇಂದ್ರಾವರುಣರೇ । ತಾಃ ಧಿಯಃ—ನನ್ನ ಸ್ತುತಿಗಳು । ವಾಜಯಂತೀಃ—ಅನ್ನಾಪೇಕ್ಷಿಗಳಾಗಿ । ವಾಂ—ನಿಮ್ಮನ್ನೇ । ಜಗ್ಮುಃ—ಸಮೀಪಿಸುತ್ತವೆ । ಆಜಿಂ ನ—ಪದಾತಿಗಳು ಯುದ್ಧವನ್ನಪೇಕ್ಷಿಸುವಂತೆ । ಅವಸೇ—ರಕ್ಷಣಾರ್ಥವಾಗಿ । ಯುವಯೂಃ—ನಿಮ್ಮನ್ನೇ ಅಪೇಕ್ಷಿಸುವುವೂ । ಗಾವಃ—ಗೋವುಗಳು । ಶ್ರಿಯೇ—ತಮ್ಮ ಹಿತಕ್ಕಾಗಿ । ಸೋಮಂ ನ—ಸೋಮವನ್ನು ಸಮೀಪಿಸುವಂತೆಯೂ । ಮೇ—ನನ್ನ । ಮನೀಷಾಃ—ಮನಸ್ಸಂಕಲ್ಪರೂಪಗಳಾದ । ಗಿರಃ—ಸ್ತುತಿಗಳು । ಇಂದ್ರಂ ವರುಣಂ—ಇಂದ್ರನನ್ನೂ ಮತ್ತು ವರುಣನನ್ನೂ । ಉಪ ಅಸ್ಥುಃ—ಸಮೀಪಿಸುತ್ತವೆ.

॥ ಭಾವಾರ್ಥ ॥

ಶ್ರೇಷ್ಠವಾದ ದಾತೃಗಳಾದ ಇಂದ್ರಾವರುಣರೇ, ನನ್ನ ಸ್ತುತಿಗಳು ಅನ್ನಾಪೇಕ್ಷಿಗಳಾಗಿ ನಿಮ್ಮನ್ನೇ ಸಮೀಪಿಸುತ್ತವೆ. ಪದಾತಿಗಳು ಯುದ್ಧವನ್ನವೇಕ್ಷಿಸುವಂತೆ. ನಿಮ್ಮನ್ನೇ ರಕ್ಷಣೆಗಾಗಿ ಅಪೇಕ್ಷಿಸುವುವೂ, ಗೋವುಗಳು ತಮ್ಮ

ಹಿತಕ್ಕಾಗಿ ಸೋಮವನ್ನು ಸಮೀಪಿಸುವಂತೆಯೂ, ನನ್ನ ಮನಸ್ಸಂಕಲ್ಪರೂಪಗಳಾದ ಸ್ತುತಿಗಳು ಇಂದ್ರನನ್ನೂ ಮತ್ತು ವರುಣನನ್ನೂ ಸಮೀಪಿಸುತ್ತವೆ.

English Translation.

Liberal givers, those (our) praises soliciting (abundant) food have proceeded to you for (your) protection: longing for you as (soldiers long) for battle, and as cattle approach the Soma for (its) advantage, so my heartfelt hymns (approach) Indra and Varuna.



॥ ಸಂಹಿತಾಪಾಠಃ ॥

ಇಮಾ ಇಂದ್ರಂ ವರುಣಂ ಮೇ ಮನೀಷಾ ಅಗ್ಮನ್ನುಪ ದ್ರವಿಣಮಿಚ್ಛಮಾನಾಃ ।
ಉಪೇಮಸ್ಥುರ್ಜೋಷ್ಟಾರ ಇವ ವಸ್ವೋ ರಘ್ವೀರಿವ ಶ್ರವಸೋ ಭಿಕ್ಷಮಾಣಾಃ ॥

॥ ಪದಪಾಠಃ ॥

ಇಮಾಃ । ಇಂದ್ರಂ । ವರುಣಂ । ಮೇ । ಮನೀಷಾಃ । ಅಗ್ಮನ್ । ಉಪ । ದ್ರವಿಣಂ । ಇಚ್ಛಮಾನಾಃ ।
ಉಪ । ಈಂ । ಅಸ್ಥುಃ । ಜೋಷ್ಟಾರಃऽಇವ । ವಸ್ವಃ । ರಘ್ವೀಃऽಇವ । ಶ್ರವಸಃ । ಭಿಕ್ಷಮಾಣಾಃ ॥ ೯ ॥

॥ ಸಾಯಣಭಾಷ್ಯಂ ॥

ಇಂದ್ರಂ ವರುಣಂ ಚ ಮೇ ಮಮ ಮನೀಷಾಃ ಸ್ತುತಯೋ ದ್ರವಿಣಮಿಚ್ಛಮಾನಾಃ ಸತ್ಯ ಉಪಾಗ್ಮನ್ । ಉಪಗಚ್ಛಂತಿ । ಜೋಷ್ಟಾರಃ ಸೇವಕಾ ವಸ್ವೋ ಧನಸ್ಯ ಲಾಭಾಯ ಧನಿಕಂ ಸ್ವಾಮಿನಮಿವ । ರಘ್ವೀರಿವ ಲಘ್ವ್ಯ ಇವ ಶೀಘ್ರಗಾಮಿನ್ಯ ಇವ ಶ್ರವಸೋऽನ್ನಸ್ಯಾನ್ನಂ ಭಿಕ್ಷಮಾಣಾ ಏನಮಿಂದ್ರಂ ವರುಣಂ ಚೋಪಾಸ್ಥುಃ । ಉಪತಿಷ್ಠಂತೇ ॥

॥ ಪ್ರತಿಪದಾರ್ಥ ॥

ಮೇ—ನನ್ನ । ಇಮಾ ಮನೀಷಾಃ—ಈ ಸ್ತುತಿಗಳು । ದ್ರವಿಣಂ—ಧನವನ್ನು । ಇಚ್ಛಮಾನಾಃ—ಅಪೇಕ್ಷಿಸುವುಗಳಾಗಿ । ಇಂದ್ರಂ ವರುಣಂ—ಇಂದ್ರನನ್ನೂ ಮತ್ತು ವರುಣನನ್ನೂ । ಉಪ ಅಗ್ಮನ್—ಸಮೀಪಿಸುತ್ತವೆ । ವಸ್ವಃ—ಧನಕ್ಕಾಗಿ ಧನಿಕನನ್ನು ಸೇವಿಸುವ । ಜೋಷ್ಟಾರ ಇವ—ಸೇವಕರಂತೆಯೂ । ಶ್ರವಸಃ—

ಅನ್ನವನ್ನು | ಭಿಕ್ಷಮಾಣಾಃ—ಯಾಚಿಸುವ | ರಘ್ವೀಃ ಇವ—ವಿನೀತರಾದ ಸ್ತ್ರೀಯರಂತೆಯೂ | ಈಂ ಉಪ ಅಸ್ಥುಃ—ನನ್ನ ಸ್ತುತಿಗಳು ಇಂದ್ರಾವರುಣರನ್ನು ಸಮೀಪಿಸುತ್ತವೆ.

॥ ಭಾವಾರ್ಥ ॥

ಧನಕ್ಕಾಗಿ ಧನಿಕರನ್ನು ಸೇವಿಸುವ ಸೇವಕರಂತೆಯೂ, ಅನ್ನವನ್ನು ಯಾಚಿಸುವ ವಿನೀತರಾದ ಸ್ತ್ರೀಯರಂತೆಯೂ ನನ್ನ ಈ ಸ್ತುತಿಗಳು ಧನಾಪೇಕ್ಷಿಗಳಾಗಿ ಇಂದ್ರನನ್ನೂ, ವರುಣನನ್ನೂ ಸಮೀಪಿಸುತ್ತವೆ.

## English Translation.

These my earnest praises approach Indra and Varuna, desirous to obtain wealth. as dependants attend (upon an opulent man) for the sake of riches, like humble (females) begging for food.



॥ ಸಂಹಿತಾಪಾಠಃ ॥

ಅಶ್ವ್ಯಸ್ಯ ತ್ಮನಾ ರಥ್ಯಸ್ಯ ಪುಷ್ಟೇರ್ನಿತ್ಯಸ್ಯ ರಾಯಃ ಪತಯಃ ಸ್ಯಾಮ ।
ತಾ ಚಕ್ರಾಣಾ ಊತಿಭಿರ್ನವ್ಯಸೀಭಿರಸ್ಮತ್ರಾ ರಾಯೋ ನಿಯುತಃ ಸಚಂತಾಂ॥

॥ ಪದಪಾಠಃ ॥

ಅಶ್ವ್ಯಸ್ಯ | ತ್ಮನಾ | ರಥ್ಯಸ್ಯ | ಪುಷ್ಟೇಃ | ನಿತ್ಯಸ್ಯ | ರಾಯಃ | ಪತಯಃ | ಸ್ಯಾಮ |
ತಾ | ಚಕ್ರಾಣಾ | ಊತಿಽಭಿಃ | ನವ್ಯಸೀಭಿಃ | ಅಸ್ಮಽತ್ರಾ | ರಾಯಃ | ನಿಽಯುತಃ | ಸಚಂತಾಂ ॥ ೧೦॥

॥ ಸಾಯಣಭಾಷ್ಯಂ ॥

ಅಶ್ವ್ಯಸ್ಯಾಶ್ವಸಮೂಹಸ್ಯ ರಥ್ಯಸ್ಯ ರಥರೂಪಸ್ಯ ರಥಾರ್ಹಸ್ಯ ವಾ ಪುಷ್ಟೇಃ ಪೋಷಸ್ಯ ನಿತ್ಯಸ್ಯಾವಿಚಲಿತಸ್ಯ ರಾಯೋ ಧನಸ್ಯ ತ್ಮನಾತ್ಮನಾ ಸ್ವಯಮೇವಾಪ್ರಯತ್ನೇನ ಪತಯಃ ಸ್ಯಾಮ । ತಾ ತೌ ದೇವೌ ಚಕ್ರಾಣಾ ಚಂಕ್ರಮಮಾಣೌ ಗಂತಾರೌ । ಭವತಮಿತಿ ಶೇಷಃ । ನವ್ಯಸೀಭಿರ್ನೂತನಾಭಿರೂತಿಭೀ ರಕ್ಷಾಭಿರಸ್ಮತ್ರಾಸ್ಮಾಸು ನಿಯುತೋಽಶ್ವಾ ರಾಯೋ ಧನಾನಿ ಚ ಸಚಂತಾಂ । ಸೇವಂತಾಂ ॥

॥ ಪ್ರತಿಪದಾರ್ಥ ॥

ಅಶ್ವ್ಯಸ್ಯ—ಅಶ್ವಸಮೂಹವುಳ್ಳದ್ದೂ | ರಥ್ಯಸ್ಯ—ರಥಗಳನ್ನೊಳಗೊಂಡುದುದೂ | ಪುಷ್ಟೇಃ—ಪೋಷಕವಾದುದೂ | ನಿತ್ಯಸ್ಯ—ಶಾಶ್ವತವಾದುದೂ ಆದ | ರಾಯಃ—ಧನಕ್ಕೆ | ತ್ಮನಾ—ಇತರಾಧೀನವಿಲ್ಲದೇ ನಾವೇ

ಸ್ವತಂತ್ರವಾಗಿ | ಪತಯಃ—ಒಡೆಯರಾಗಿ | ಸ್ಯಾಮ—ಆಗಿರುವಂತಾಗಲಿ | ತಾ—ಆ ಇಂದ್ರಾವರುಣರು | ನವ್ಯಸೀಭಿಃ—ನೂತನಗಳಾದ | ಊತಿಭಿಃ—ರಕ್ಷಣೆಗಳೊಡನೆ | ಚಕ್ರಾಣಾ—ಸಂಚರಿಸುತ್ತಾ | ನಿಯುತಃ—ತಮ್ಮ ಅಶ್ವಗಳನ್ನೂ | ರಾಯಃ—ಧನಗಳನ್ನೂ | ಅಸ್ಮತ್ರಾ—ನಮ್ಮ ಕಡೆಗೆ | ಸಚೇಂತಾಂ—ತಿರುಗಿಸಲಿ.

॥ ಭಾವಾರ್ಥ ॥

ಅಶ್ವಸಮೂಹವುಳ್ಳದ್ದೂ, ರಥಗಳನ್ನೊಳಗೊಂಡುದುದೂ, ಪೋಷಕವಾದುದೂ ಆದ ಧನಕ್ಕೆ ಇತರಾಧೀನವಿಲ್ಲದೇ ನಾವೇ ಸ್ವತಂತ್ರವಾಗಿ ಒಡೆಯರಾಗುವಂತಾಗಲಿ. ಆ ಇಂದ್ರಾವರುಣರು ನೂತನಗಳಾದ ರಕ್ಷಣೆಗಳೊಡನೆ ಸಂಚರಿಸುತ್ತಾ ತಮ್ಮ ಅಶ್ವಗಳನ್ನೂ ಮತ್ತು ಧನಗಳನ್ನೂ ನಮ್ಮ ಕಡೆಗೆ ತಿರುಗಿಸಲಿ.

English Translation.

May we of our own (right) be masters of permanent riches, comprising horses, chariots, and nourishment : may those two, traversing (the regions), direct their Niyut steeds towards us, associating (them) with riches and with recent protections.



॥ ಸಂಹಿತಾಪಾಠಃ ॥

ಆ ನೋ ಬೃಹಂತಾ ಬೃಹತೀಭಿರೂತೀ ಇಂದ್ರ ಯಾತಂ ವರುಣ ವಾಜಸಾತೌ।
ಯದ್ದಿದ್ಯವಃ ಪೃತನಾಸು ಪ್ರಕ್ರೀಳಾನ್ತಸ್ಯ ವಾಂ ಸ್ಯಾಮ ಸನಿತಾರ ಆಜೇಃ ॥

॥ ಪದಪಾಠಃ ॥

ಆ | ನಃ | ಬೃಹಂತಾ | ಬೃಹತೀಭಿಃ | ಊತೀ | ಇಂದ್ರ | ಯಾತಂ | ವರುಣ | ವಾಜऽಸಾತೌ |
ಯತ್ | ದಿದ್ಯವಃ | ಪೃತನಾಸು | ಪ್ರऽಕ್ರೀಳಾನ್ | ತಸ್ಯ | ವಾಂ | ಸ್ಯಾಮ | ಸನಿತಾರಃ | ಆಜೇಃ ॥೧೧॥

॥ ಸಾಯಣಭಾಷ್ಯಂ ॥

ಹೇ ಬೃಹಂತಾ ಮಹಾಂತೌ ಹೇ ಇಂದ್ರ ಹೇ ವರುಣ ಬೃಹತೀಭಿರ್ಮಹತೀಭಿರೂತೀ ಊತಿಭೀ ರಕ್ಷಾಭಿಃ ಸಹಾ ಯಾತಂ | ಆಗಚ್ಛತಂ | ವಾಜಸಾತೌ ಸಂಗ್ರಾಮೇऽನ್ನಲಾಭನಿಮಿತ್ತಭೂತೇ ವಾ ಯದ್ಯಸ್ಮಿನ್ನಾಜೌ ಸಂಗ್ರಾಮೇ ಪೃತನಾಸು ಸೇನಾಸು ದಿದ್ಯವಃ | ಆಯುಧನಾಮೈತತ್ | ಆಯುಧಾನಿ ಶತ್ರುಸಂಬಂಧೀನಿ ಪ್ರಕ್ರೀಳಾನ್ | ಪ್ರಕ್ರೀಡಂತೇ | ತಸ್ಯ ತಾದೃಶಸ್ಯಾಜೇಃ ಸನಿತಾರಃ ಸಂಭಕ್ತಾರಃ ಸ್ಯಾಮ | ಭವೇಮ | ವಾಂ ಯುವಯೋರನುಗ್ರಹಾತ್ ॥

॥ ಪ್ರತಿಪದಾರ್ಥ ॥

ಬೃಹಂತಾ—ಮಹಾತ್ಮರಾದ । ಇಂದ್ರ, ವರುಣ,—ಎಲೈ ಇಂದ್ರಾವರುಣರೇ । ಬೃಹಶೀಭಿಃ—ಮಹತ್ತಾದ । ಊತೀ—ರಕ್ಷಣೆಗಳೊಡನೆ । ನಃ—ನಮ್ಮಲ್ಲಿಗೆ । ಆ ಯಾತಂ—ದಯಮಾಡಿರಿ । ವಾಜಸಾತೌ—ಅನ್ನಾರ್ಥವಾಗಿ ನಡೆಯುವ । ಯತ್—ಯಾವ ಯುದ್ಧದಲ್ಲಿ । ಪೃತನಾಸು—(ಶತ್ರು) ಸೇನೆಗಳ ನಡುವೆ । ದಿದ್ಯವಃ—ನಿಮ್ಮ ಆಯುಧಗಳು । ಪ್ರಕ್ರೀಳಾನ್—ಆಟವಾಡುವಂತೆ ಚಲಿಸುವವೋ । ತಸ್ಯ ಆಜೇಃ—ಅಂತಹ ಯುದ್ಧಕ್ಕೆ । ವಾಂ—ನಿಮ್ಮ ಅನುಗ್ರಹದಿಂದ । ಸನಿತಾರಃ—ವಿಜಯಿಗಳಾದ ಸ್ವಾಮಿಗಳಂತೆ । ಸ್ಯಾಮ—ನಾವು ಆಗುವಂತಾಗಲಿ.

॥ ಭಾವಾರ್ಥ ॥

ಮಹಾತ್ಮರಾದ ಎಲೈ ಇಂದ್ರಾವರುಣರೇ, ಮಹತ್ತಾದ ರಕ್ಷಣೆಗಳೊಡನೆ ನಮ್ಮಲ್ಲಿಗೆ ದಯಮಾಡಿರಿ. ಅನ್ನಾರ್ಥವಾಗಿ ನಡೆಯುವ ಯಾವ ಯುದ್ಧದಲ್ಲಿ ಶತ್ರುಸೇನೆಗಳ ನಡುವೆ ನಿಮ್ಮ ಆಯುಧಗಳು ಆಟವಾಡುವಂತೆ ಚಲಿಸುವುವೋ ಅಂತಹ ಯುದ್ಧದಲ್ಲಿ ನಿಮ್ಮ ಅನುಗ್ರಹದಿಂದ ನಾವು ವಿಜಯಿಗಳಾವ ಸ್ವಾಮಿಗಳಂತೆ ಆಗುವಂತಾಗಲಿ.

## English Translation.

Mighty Indra and Varuna, come to us in battle with (your) powerful protections, and where the bright (weapons) play amidst the (hostile) hosts, may we be triumphant in that conflict (through) your (favour).

# ನಲವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಮಮ ದ್ವಿತೇತಿ ಧಶರ್ಚಂ ದಶಮಂ ಸೂಕ್ತಂ । ಪುರುಕುತ್ಸಸ್ಯ ಪುತ್ರಸ್ತ್ರಸದಸ್ಯೂ ರಾಜರ್ಷಿಃ । ಆದ್ಯಾಸು ಷಟ್ಸ್ವಾತ್ಮನಃ ಸ್ತುತ್ಯತ್ವಾದಾತ್ಮಾ ದೇವತಾ । ಅವಶಿಷ್ಟಾನಾಂ ಚತಸೃಣಾಮಿಂದ್ರಾವರುಣೌ ದೇವತಾ । ತ್ರಿಷ್ಟುಪ್ ಛಂದಃ । ಅತ್ರಾನುಕ್ರಮಣಿಕಾ । ಮಮ ದ್ವಿತಾ ದಶ ತ್ರಸದಸ್ಯುಃ ಪೌರುಕುತ್ಸ್ಯಃ ಷಳಾದ್ಯಾ ಆತ್ಮಸ್ತವ ಇತಿ । ಉಕ್ತೋ ವಿನಿಯೋಗಃ ಪೂರ್ವಸೂಕ್ತೇ ॥

ಅನುವಾದವು—ಮಮ ದ್ವಿತಾ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಪುರುಕುತ್ಸನ ಮಗನಾದ ತ್ರಸದಸ್ಯುವೆಂಬ ರಾಜನು ಋಷಿಯು (ರಾಜರ್ಷಿಯು). ಈ ಸೂಕ್ತದ ಮೊದಲನೆ ಆರು ಋಕ್ಕುಗಳಲ್ಲಿ ತನ್ನ ಸ್ತುತಿಯು ಇರುವುದರಿಂದ ಈ ಋಕ್ಕುಗಳಿಗೆ ಆತ್ಮನು ದೇವತೆಯು. ಉಳಿದ ನಾಲ್ಕು ಋಕ್ಕುಗಳಿಗೆ ಇಂದ್ರಾವರುಣರು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಮಮ ದ್ವಿತಾ ದಶ ತ್ರಸದಸ್ಯುಃ ಪೌರುಕುತ್ಸಃ ಷಳಾದ್ಯಾ ಆತ್ಮಸ್ತವಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದಿನ ಸೂಕ್ತದ ವಿನಿಯೋಗದಲ್ಲಿಯೇ ಹೇಳಲಾಗಿದೆ.

## ಸೂಕ್ತ—೪೨

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೪೨ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೧೭, ೧೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ತ್ರಸದಸ್ಯುಃ ಪೌರುಕುತ್ಸಃ ॥
॥ ದೇವತಾ—೧-೬. ಆತ್ಮಾ|೭-೧೦. ಇಂದ್ರಾವರುಣೌ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮಮ ದ್ವಿತಾ ರಾಷ್ಟ್ರಂ ಕ್ಷತ್ರಿಯಸ್ಯ ವಿಶ್ವಾಯೋರ್ವಿಶ್ವೇ ಅಮೃತಾ ಯಥಾ ನಃ ।
ಕ್ರತುಂ ಸಚಂತೇ ವರುಣಸ್ಯ ದೇವಾ ರಾಜಾಮಿ ಕೃಷ್ಟೇರುಪಮಸ್ಯ ವವ್ರೇಃ ॥ ೧ ॥

॥ ಪದಪಾಠಃ ॥

ಮಮ । ದ್ವಿತಾ । ರಾಷ್ಟ್ರಂ । ಕ್ಷತ್ರಿಯಸ್ಯ । ವಿಶ್ವಽಆಯೋಃ । ವಿಶ್ವೇ । ಅಮೃತಾಃ । ಯಥಾ । ನಃ ।
ಕ್ರತುಂ । ಸಚಂತೇ । ವರುಣಸ್ಯ । ದೇವಾಃ । ರಾಜಾಮಿ । ಕೃಷ್ಟೇಃ । ಉಪಮಸ್ಯ । ವವ್ರೇಃ ॥ ೧ ॥

॥ ಸಾಯಣಭಾಷ್ಯಂ ॥

ಕ್ಷತ್ರಿಯಸ್ಯ ಕ್ಷತ್ರಿಯಜಾತ್ಯುತ್ಪನ್ನಸ್ಯ ವಿಶ್ವಾಯೋಃ ಕೃತ್ಸ್ನಮನುಷ್ಯಾಧೀಶಸ್ಯ । ಮಮೇತ್ಯಾತ್ಮನೋ ನಿರ್ದೇಶಃ । ದ್ವಿತಾ ಕ್ಷಿತಿಸ್ವರ್ಗಭೇದೇನ ದ್ವಿತ್ವಾಸನ್ನಂ ರಾಷ್ಟ್ರಂ । ಮಮ ತ್ರಸದಸ್ಯೋರ್ವಿಶ್ವೇ ಸರ್ವೇಽಮೃತಾ ದೇವಾ ಯಥಾ ನೋಽಸ್ಮಾಕಂ ಭವಂತಿ ತಥಾ ರಾಷ್ಟ್ರಂ ಪ್ರಜಾಶ್ಚೇತ್ಯರ್ಥಃ। ವರುಣಸ್ಯ ವಾರಕಸ್ಯ ವರುಣಾತ್ಮನೋ ವಾ ಕೃಷ್ಟೇರ್ಮನುಷ್ಯಸ್ಯ ತದ್ವತೋ ವಾ ಉಪಮಸ್ಯ । ಅಂತಿಕನಾಮೈತತ್। ಸರ್ವೇಷಾಮಂತಿಕತಮಸ್ಯ ವವ್ರೇಃ । ರೂಪನಾಮೈತತ್। ರೂಪವತೋ ಮಮ ಕ್ರತುಂ ಕರ್ಮ ಸಚಂತೇ। ಸೇವಂತೇ ದೇವಾಃ ಸರ್ವೇಽಪಿ । ಅಹಂ ಚ ರಾಜಾಮಿ । ರಾಜತಿರೈಶ್ವರ್ಯಕರ್ಮಾ । ಸರ್ವೇಶ್ವರೋ ಭವಾಮಿ । ಯದ್ವಾ । ಉಪಮಸ್ಯ ವವ್ರೇಃ ಕೃಷ್ಟೇ ರಾಜಾಮೀತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

ಯಥಾ—ಯಾವ ರೀತಿಯಲ್ಲಿ । ವಿಶ್ವೇ - ಸಮಸ್ತವಾದ । ಅಮೃತಾಃ—ದೇವತೆಗಳು । ನಃ—ನಮಗೆ ಸಂಬಂಧಿಸಿದವರಾಗಿದ್ದಾರೋ ಹಾಗೆ । ಕ್ಷತ್ರಿಯಸ್ಯ—ಕ್ಷತ್ರಿಯ ವಂಶೋತ್ಪನ್ನನೂ । ವಿಶ್ವಾಯೋಃ—

ಸಕಲ ಮಾನವರಿಗೂ ಒಡೆಯನೂ । ಮಮ—(ತ್ರಸದಸ್ಯುನಾಮಕನೂ) ಆದ ನನ್ನ । ರಾಷ್ಟ್ರಂ—ರಾಷ್ಟ್ರವು । ದ್ವಿತಾ—ಭೂಮಿ ಮತ್ತು ಸ್ವರ್ಗ ಎಂಬ ಎರಡು ಬಗೆಯುಳ್ಳದ್ದಾಗಿದೆ । ವರುಣಸ್ಯ—ವರುಣಾತ್ಮನೂ । ಕೃಷ್ಟೇಃ—ಮಾನವರೂಪನೂ । ಉಪಮಸ್ಯ– ಸಕಲರಿಗೂ ಸಮೀಪದಲ್ಲಿರುವವನೂ । ವವ್ರೇಃ—ರೂಪವುಳ್ಳವನೂ ಆದ ನನ್ನ । ಕ್ರತುಂ—ಕರ್ಮವನ್ನು । ದೇವಾಃ—ಸಕಲ ದೇವತೆಗಳೂ । ಸಚಂತೇ—ಸೇವಿಸುತ್ತಾರೆ । ರಾಜಾಮಿ—ನಾನೇ ಸಕಲರ ಪ್ರಭುತ್ವವನ್ನೂ ಹೊಂದಿದ್ದೇನೆ.

॥ ಭಾವಾರ್ಥ ॥

ಯಾವ ರೀತಿಯಲ್ಲಿ ಸಮಸ್ತ ದೇವತೆಗಳೂ ನನಗೆ ಸಂಬಂಧಿಸಿದವರಾಗಿ ಇದ್ದಾರೊ, ಹಾಗೆ, ಕ್ಷತ್ರಿಯ ವಂಶೋತ್ಪನ್ನನೂ, ಸಕಲ ಮಾನವರಿಗೂ ಒಡೆಯನೂ ತ್ರಸದಸ್ಯುನಾಮಕನೂ ಆದ ನನ್ನ ರಾಷ್ಟ್ರವು ಭೂಮಿ ಮತ್ತು ಸ್ವರ್ಗ ಎಂಬ ಎರಡು ಬಗೆಯುಳ್ಳದ್ದಾಗಿದೆ. ವರುಣಾತ್ಮನೂ, ಮಾನವರೂಪನೂ, ಸಕಲರಿಗೂ ಸಮೀಪದಲ್ಲಿರುವವನೂ, ರೂಪವುಳ್ಳವನೂ ಆದ ನನ್ನ ಕರ್ಮವನ್ನು ಸಕಲ ದೇವತೆಗಳೂ ಸೇವಿಸುತ್ತಾರೆ. ನಾನೇ ಸಕಲ ಪ್ರಭುತ್ವವನ್ನೂ ಹೊಂದಿದ್ದೇನೆ.

## English Translation.

**Towfold is my empire, that of the whole Kshatriya race, and all the immortals are ours : the gods associate me with the acts of Varuna : I rule over (those) of the proximate form of man.**

॥ ವಿಶೇಷವಿಷಯಗಳು ॥

ಈ ಸೂಕ್ತದ ಋಷಿಯಾದ ತ್ರಸದಸ್ಯು ಎಂಬ ರಾಜನ ಮತ್ತು ಇವನ ತಂದೆಯಾದ ಪುರುಕುತ್ಸನ ವಿಷಯವನ್ನು ನಾವು 368 ನೇ ಪೇಜಿನಲ್ಲಿ ವಿವರಿಸಿದೇವೆ. ಈ ಋಕ್ಕಿನಲ್ಲಿ ಈ ತ್ರಸದಸ್ಯುವು ತಾನು ಕ್ಷತ್ರಿಯನೆಂದೂ ರಾಜನೆಂದೂ, ತನ್ನ ರಾಜ್ಯವು ಎರಡು ವಿಧವಾಗಿರುವುದೆಂದೂ ಹೇಳಿಕೊಂಡಿದಾನೆ. ಸಾಯಣರು ದ್ವಿತಾ ರಾಷ್ಟ್ರಂ—ಎರಡು ವಿಧವಾದ ರಾಜ್ಯವೆಂದರೆ ಕ್ಷಿತಿಸ್ವರ್ಗಭೇದೇನ ಭೂಮಿ ಮತ್ತು ಸ್ವರ್ಗ ಎಂದು ಅರ್ಥವಿವರಣೆ ಮಾಡಿದಾರೆ. ಈ ರಾಜನು ಭೂಮಿಗೆ ರಾಜನಾಗಿರುವುದೇನೋ ಸಹಜವೇ. ಆದರೆ ಸ್ವರ್ಗಕ್ಕೆ ಇವನು ಹೇಗೆ ರಾಜನು ಎನ್ನುವುದು ಸರಿಯಾಗಿ ಅರ್ಥವಾಗುತ್ತಿಲ್ಲ.

ಈ ರಾಜನು ಈ ಸೂಕ್ತದ ೨–೭ ಋಕ್ಕುಗಳಲ್ಲಿ ತಾನೇ ವರುಣನೆಂದೂ ಇಂದ್ರನೆಂದೂ, ದ್ಯಾವಾಪೃಥಿವಿಯೂ ಸಹ ತಾನೇ ಎಂದೂ ಹೇಳಿಕೊಂಡಿದಾನೆ. ಮತ್ತು ತನ್ನ ಪರಾಕ್ರಮವನ್ನೂ ನಾನಾವಿಧವಾಗಿ ಪ್ರಶಂಸೆಮಾಡಿಕೊಂಡಿದಾನೆ. ಈ ತ್ರಸದಸ್ಯುವು ಈ ಸೂಕ್ತಕ್ಕೆ (೧೦ ಋಕ್ಕುಗಳೂ) ಋ. ಸಂ. ೫–೨೭ (೬ ಋಕ್ಕು) ಋ. ಸಂ. ೯–೧೧೦ (೧೨ ಋಕ್ಕುಗಳು) ಎಂಬ ಮೂರು ಸೂಕ್ತಗಳ ಒಟ್ಟು ೨೮ ಋಕ್ಕುಗಳಿಗೆ ಋಷಿಯಾಗಿದ್ದಾನೆ.

ಈ ರಾಜನು—ಸಪ್ತರ್ಷಿಗಳು ಇಂದ್ರಾವರುಣರನ್ನು ಸ್ತೋತ್ರಮಾಡಿ ಅವರ ಕೃಪೆಯಿಂದ ಜನಿಸಿದನಾದುದರಿಂದ ಆ ದೇವತೆಗಳನ್ನು ಈ ಸೂಕ್ತದಲ್ಲಿ ಸ್ತುತಿಸುವುದು ಸಹಜವಾಗಿದೆ. ಇವನ ಜನ್ಮ ವಿಚಾರವು ಇದೇ ಸೂಕ್ತದ ಎಂಟನೆಯ ಋಕ್ಕಿನಲ್ಲಿ ಉಕ್ತವಾಗಿರುವುದು.

॥ ಸಂಹಿತಾಪಾಠಃ ॥

ಅಹಂ ರಾಜಾ ವರುಣೋ ಮಹ್ಯಂ ತಾನ್ಯಸುರ್ಯಾಣಿ ಪ್ರಥಮಾ ಧಾರಯಂತ।
ಕ್ರತುಂ ಸಚಂತೇ ವರುಣಸ್ಯ ದೇವಾ ರಾಜಾಮಿ ಕೃಷ್ಟೇರುಪಮಸ್ಯ ವವ್ರೇಃ॥

॥ ಪದಪಾಠಃ ॥

ಅಹಂ । ರಾಜಾ । ವರುಣಃ । ಮಹ್ಯಂ । ತಾನಿ । ಅಸುರ್ಯಾಣಿ । ಪ್ರಥಮಾ । ಧಾರಯಂತ ।
ಕ್ರತುಂ । ಸಚಂತೇ । ವರುಣಸ್ಯ । ದೇವಾಃ । ರಾಜಾಮಿ । ಕೃಷ್ಟೇಃ । ಉಪಮಸ್ಯ । ವವ್ರೇಃ ॥ ೨ ॥

॥ ಸಾಯಣಭಾಷ್ಯಂ ॥

ಅಹಮೇವ ಚ ರಾಜಾ ವರುಣೋ ಭವಾಮಿ । ಮಹ್ಯಂ ಮದರ್ಥಮೇವ ಪ್ರಥಮಾ ಮುಖ್ಯಾನಿ ತಾನಿ ಪ್ರಸಿದ್ಧಾನ್ಯಸುರ್ಯಾಣ್ಯಸುರವಿಘಾತಕಾನಿ ಬಲಾನಿ ಧಾರಯಂತ। ಅಧಾರಯನ್ದೇವಾಃ। ಶಿಷ್ಟಂ ಗತಂ॥

॥ ಪ್ರತಿಪದಾರ್ಥ ॥

ಅಹಂ—ನಾನೇ । ರಾಜಾ—ಪ್ರಭುವಾದ । ವರುಣಃ—ವರುಣನಾಗಿದ್ದಾನೆ । (ದೇವಾಃ—ದೇವತೆಗಳು) । ಪ್ರಥಮಾ—ಮುಖ್ಯವಾದವೂ । ತಾನಿ—ಪ್ರಸಿದ್ಧವಾದವೂ । ಅಸುರ್ಯಾಣಿ—ಅಸುರನಾಶಕವಾದವೂ ಆದ ಬಲವನ್ನೆಲ್ಲಾ । ಮಹ್ಯಂ—ನನಗಾಗಿಯೇ । ಧಾರಯಂತ—ಪಡೆದಿದ್ದಾರೆ (ನನ್ನಲ್ಲಿಯೇ ಒಪ್ಪಿಸುತ್ತಾರೆ। ವರುಣಸ್ಯ—ವರುಣಾತ್ಮನೂ । ಕೃಷ್ಟೇಃ—ಮಾನವರೂಪನೂ । ಉಪಮಸ್ಯ—ಸಕಲರಿಗೂ ಸಮೀಪದಲ್ಲಿರುವವನೂ । ವವ್ರೇಃ—ರೂಪವುಳ್ಳವನೂ ಆದ ನನ್ನ । ಕ್ರತುಂ—ಕರ್ಮವನ್ನು । ದೇವಾಃ—ದೇವತೆಗಳು । ಸಚಂತೇ—ಸೇವಿಸುತ್ತಾರೆ । ರಾಜಾಮಿ—ನಾನೇ ಸಕಲರ ಪ್ರಭುತ್ವವನ್ನೂ ಹೊಂದಿದ್ದೇನೆ.

॥ ಭಾವಾರ್ಥ ॥

ನಾನೇ ಪ್ರಭುವಾದ ವರುಣನಾಗಿದ್ದೇನೆ. ದೇವತೆಗಳು ಮುಖ್ಯವಾದವೂ, ಪ್ರಸಿದ್ಧವಾದವೂ, ಅಸುರನಾಶಕವಾದವೂ ಆದ ಬಲವನ್ನೆಲ್ಲಾ ನನಗಾಗಿಯೇ ಪಡೆದಿದ್ದಾರೆ, ಮತ್ತು ನನಗೇ ಒಪ್ಪಿಸುತ್ತಾರೆ. ವರುಣಾತ್ಮನೂ, ಮಾನವರೂಪನೂ, ಸಕಲರಿಗೂ ಸಮೀಪದಲ್ಲಿರುವವನೂ, ರೂಪವುಳ್ಳವನೂ ಆದ ನನ್ನ ಕರ್ಮವನ್ನು ಸಕಲದೇವತೆಗಳೂ ಸೇವಿಸುತ್ತಾರೆ. ನಾನೇ ಸಕಲರ ಪ್ರಭುತ್ವವನ್ನೂ ಹೊಂದಿದ್ದೇನೆ.

## English Translation.

I am the king Varuna; on me (the gods) bestow those principal energies (that are) destructive of the Asuras; (they) associate me with the worship of Varuna: I rule over (the acts) of the proximate form of man.

॥ ಸಂಹಿತಾಪಾಠಃ ॥

ಅಹಮಿಂದ್ರೋ ವರುಣಸ್ತೇ ಮಹಿತ್ವೋರ್ವೀ ಗಭೀರೇ ರಜಸೀ ಸುಮೇಕೇ।
ತ್ವಷ್ಟೇವ ವಿಶ್ವಾ ಭುವನಾನಿ ವಿದ್ವಾನ್ತ್ಸಮೈರಯಂ ರೋದಸೀ ಧಾರಯಂ ಚ ॥ ೩ ॥

॥ ಪದಪಾಠಃ ॥

ಅಹಂ । ಇಂದ್ರಃ । ವರುಣಃ । ತೇ ಇತಿ । ಮಹಿಽತ್ವಾ । ಉರ್ವೀ ಇತಿ । ಗಭೀರೇ ಇತಿ । ರಜಸೀ ಇತಿ ।
ಸುಮೇಕೇ ಇತಿ ಸುಽಮೇಕೇ ।
ತ್ವಷ್ಟಾಽಇವ । ವಿಶ್ವಾ । ಭುವನಾನಿ । ವಿದ್ವಾನ್ । ಸಂ । ಐರಯಂ । ರೋದಸೀ ಇತಿ । ಧಾರಯಂ । ಚ ॥

॥ ಸಾಯಣಭಾಷ್ಯಂ ॥

ಅಹಂ ತ್ರಸದಸ್ಯುರಿಂದ್ರ ಇಂದ್ರೋಽಪ್ಯಸ್ಮಿ । ಅಹಂ ವರುಣಶ್ಚ । ತೇ ಮಹಿತ್ವಾ ಮಹಿತ್ವೇನೋರ್ವೀ ವಿಸ್ತೀರ್ಣೇ ಗಭೀರೇ ದುರವಗಾಹೇ ಅವಕಾಶವತ್ಯಾ ವಾ ಸುಮೇಕೇ ಸುರೂಪೇ ರಜಸೀ ದ್ಯಾವಾಪೃಥಿವ್ಯೌ ತೇ ಅಪ್ಯಹಮೇವ । ವಿದ್ವಾನ್ ಜಾನನ್ನಹಂ ತ್ವಷ್ಟೇವ ಪ್ರಜಾಪತಿರಿವ ವಿಶ್ವಾ ಭುವನಾನಿ ಸರ್ವಾಣಿ ಭೂತಾನಿ ಸಮೈರಯಂ । ಸಂಪ್ರೈರಯಂ । ರೋದಸೀ ದ್ಯಾವಾಪೃಥಿವ್ಯೌ ಧಾರಯಂ ಚ । ಧೃತವಾನಸ್ಮಿ ॥

॥ ಪ್ರತಿಪದಾರ್ಥ ॥

ಅಹಂ—ತ್ರಸದಸ್ಯುನಾಮಕನಾದ ನಾನೇ । ಇಂದ್ರಃ—ಇಂದ್ರನಾಗಿದ್ದೇನೆ । ವರುಣಃ—ವರುಣ ರೂಪನೂ ಆಗಿದ್ದೇನೆ । ಮಹಿತ್ವಾ—ಮಾಹಾತ್ಮ್ಯದಿಂದ । ತೇ—ಪ್ರಸಿದ್ಧವಾದವೂ । ಉರ್ವೀ—ವಿಸ್ತೃತ ವಾದವೂ । ಗಭೀರೇ—ಅಳೆಯಲಸಾಧ್ಯವಾದ ಆಳವುಳ್ಳವೂ । ಸುಮೇಕೇ—ಸುಂದರವಾದ ರೂಪವುಳ್ಳವೂ ಆದ । ರಜಸೀ—ದ್ಯಾವಾಪೃಥಿವಿಗಳೂ ನಾನೇ । ವಿದ್ವಾನ್—ಸಕಲವನ್ನೂ ತಿಳಿದ ನಾನು । ತ್ವಷ್ಟಾ ಇವ—ಪ್ರಜಾಪತಿಯಂತೆ । ವಿಶ್ವಾ—ಸಮಸ್ತವಾದ । ಭುವನಾನಿ—ಭೂತಗಳನ್ನೂ । ಸಮೈರಯಂ—ಚೈತನ್ಯಯುಕ್ತವಾಗುವಂತೆ ಮಾಡಿದ್ದೇನೆ । ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಧಾರಯಂ ಚ—ಧರಿಸಿಯೂ ಇದ್ದೇನೆ.

॥ ಭಾವಾರ್ಥ ॥

ತ್ರಸದಸ್ಯುನಾಮಕನಾದ ನಾನೇ ನನ್ನ ಮಾಹಾತ್ಮ್ಯದಿಂದ ಇಂದ್ರರೂಪನೂ ವರುಣರೂಪನೂ ಆಗಿದ್ದೇನೆ. ಪ್ರಸಿದ್ಧವಾದವೂ, ಅತಿ ವಿಸ್ತೃತವಾದವೂ, ಅಳೆಯಲಸಾಧ್ಯವಾದ ಆಳವುಳ್ಳವೂ, ಸುಂದರವಾದ ರೂಪವುಳ್ಳವೂ ಆದ ದ್ಯಾವಾಪೃಥಿವಿಗಳೂ ನಾನೇ, ಸಕಲವನ್ನೂ ತಿಳಿದ ನಾನು ಪ್ರಜಾಪತಿಯಂತೆ ಸಮಸ್ತವಾದ ಭೂತಗಳನ್ನೂ ಚೈತನ್ಯ ಯುಕ್ತವಾಗುವಂತೆ ಮಾಡಿದ್ದೇನೆ. ದ್ಯಾವಾಪೃಥಿವಿಗಳೆರಡನ್ನೂ ಧರಿಸಿಯೂ ಇದ್ದೇನೆ.

## English Translation.

I am Indra, I am Varuna, I am those two in greatness : (I am) the vast, profound, beautiful, heaven and earth : intelligent, I give like Twashtri animation to all beings : I uphold earth and heaven.



॥ ಸಂಹಿತಾಪಾಠಃ ॥

ಅಹಮಪೋ ಅಪಿನ್ವಮುಕ್ಷಮಾಣಾ ಧಾರಯಂ ದಿವಂ ಸದನ ಋತಸ್ಯ ।
ಋತೇನ ಪುತ್ರೋ ಅದಿತೇರ್ಋತಾವೋತ ತ್ರಿಧಾತು ಪ್ರಥಯದ್ವಿ ಭೂಮ ॥

॥ ಪದಪಾಠಃ ॥

ಅಹಂ । ಅಪಃ । ಅಪಿನ್ವಂ । ಉಕ್ಷಮಾಣಾಃ । ಧಾರಯಂ । ದಿವಂ । ಸದನೇ । ಋತಸ್ಯ ।
ಋತೇನ । ಪುತ್ರಃ । ಅದಿತೇಃ । ಋತऽವಾ । ಉತ । ತ್ರಿऽಧಾತು । ಪ್ರಥಯತ್ । ವಿ । ಭೂಮ ॥ ೪ ॥

॥ ಸಾಯಣಭಾಷ್ಯಂ ॥

ಅಹಮೇವೋಕ್ಷಮಾಣಾಃ ಸಿಂಚಂತೀರಪೋಽಪಿನ್ವಂ । ಅಸೇಚಯಂ । ತಥಾ ಋತಸ್ಯೋದಕಸ್ಯಾದಿತ್ಯಸ್ಯ ವಾ ಸದನೇ ಸ್ಥಾನೇ ನಿಮಿತ್ತೇ ಸತಿ ದಿವಂ ದ್ಯುಲೋಕಂ ಧಾರಯಂ । ಯದ್ವಾ । ಉದಕಾಧಾರೇ ಸ್ಥಾನೇ ದಿವಮಾದಿತ್ಯಂ ಧಾರಯಂ । ಅಹಮೇವ ಋತೇನೋದಕೇನ ನಿಮಿತ್ತೇನಾದಿತೇಃ ಪುತ್ರ ಋತಾವಾಭೂವಂ । ಉತಾಪಿ ಚ ಭೂಮ ವ್ಯಾಪ್ತಮಾಕಾಶಂ ತ್ರಿಧಾತು ತ್ರಿಪ್ರಕಾರಂ ವಿ ವಿಶೇಷೇಣ ಪ್ರಥಯತ್ । ಮದರ್ಥಮೇವ ಕ್ಷಿತ್ಯಾದಿಲೋಕತ್ರಯಮಕಾರ್ಷೀತ್ಪರಮೇಶ್ವರಃ ॥

॥ ಪ್ರತಿಪದಾರ್ಥ ॥

ಅಹಂ—ನಾನೇನೆ । ಉಕ್ಷಮಾಣಾಃ—ಪ್ರವಿಸುವ ಸ್ವಭಾವವುಳ್ಳ । ಅಪಃ—ಉದಕಗಳನ್ನು । ಅಪಿನ್ವಂ—ಸರ್ವತ್ರ ಹರಡಿ ಹರಿಯುವಂತೆ ಮಾಡಿದ್ದೇನೆ । ಋತಸ್ಯ—ಉದಕದ । ಸದನೇ—ನಿವಾಸಸ್ಥಾನಕ್ಕಾಗಿ । ದಿವಂ—ದ್ಯುಲೋಕವನ್ನು । ಧಾರಯಂ—ಎತ್ತಿ ಹಿಡಿದಿದ್ದೇನೆ । ಋತೇನ—ಉದಕದಿಂದಲೇ । ಅದಿತೇಃ ಪುತ್ರಃ—ಆದಿಪುತ್ರನಾದ ನಾನು । ತ್ರಿಧಾತು—ಮೂರು ಭಾಗದಲ್ಲಿರತಕ್ಕದ್ದೂ । ಭೂಮ—ವ್ಯಾಪಕವಾದುದೂ ಆದ ಆಕಾಶವನ್ನು । ವಿ ಪ್ರಥಯತ್—ವಿಶೇಷವಾಗಿ ವ್ಯಾಪಿಸುವಂತೆ ಮಾಡುತ್ತಾ । ಋತಾವಾ—ಉದಕರಕ್ಷಕನಾಗಿದ್ದೇನೆ.

॥ ಭಾವಾರ್ಥ ॥

ನಾನೇ ಸ್ರವಿಸುವ ಸ್ವಭಾವವುಳ್ಳ ಉದಕಗಳನ್ನು ಸರ್ವತ್ರ ಹರಡಿ ಹರಿಯುವಂತೆ ಮಾಡಿದ್ದೇನೆ. ಉದಕದ ನಿವಾಸಸ್ಥಾನಕ್ಕಾಗಿ ದ್ಯುಲೋಕವನ್ನೂ ಎತ್ತಿ ಹಿಡಿದಿದ್ದೇನೆ. ಅದಿತಿಪುತ್ರನಾದ ನಾನು, ಮೂರು ವಿಭಾಗಗಳುಳ್ಳದ್ದೂ, ವ್ಯಾಪಕವಾದುದೂ ಆದ ಆಕಾಶವನ್ನು ವಿಶೇಷವಾಗಿ ವ್ಯಾಪಿಸುವಂತೆ ಮಾಡುತ್ತಾ ಉದಕನಿಮಿತ್ತವಾಗಿಯೇ ಉದಕರಕ್ಷಕನಾಗಿದ್ದೇನೆ.

English Translation.

I have distributed the moisture-shedding waters; I have upheld the sky as the abode of the water; by the water I have become the preserver of the water, the son of Aditi, illustrating the threefold elementary space.

॥ ಸಂಹಿತಾಪಾಠಃ ॥

ಮಾಂ ನರಃ ಸ್ವಶ್ವಾ ವಾಜಯಂತೋ ಮಾಂ ವೃತಾಃ ಸಮರಣೇ ಹವಂತೇ ।
ಕೃಣೋಮ್ಯಾಜಿಂ ಮಘವಾಹಮಿಂದ್ರ ಇಯರ್ಮಿ ರೇಣುಮಭಿಭೂತ್ಯೋ-
ಜಾಃ ॥ ೫ ॥

॥ ಪದಪಾಠಃ ॥

ಮಾಂ । ನರಃ । ಸುಽಅಶ್ವಾಃ । ವಾಜಯಂತಃ । ಮಾಂ । ವೃತಾಃ । ಸಂಽಅರಣೇ । ಹವಂತೇ ।
ಕೃಣೋಮಿ । ಆಜಿಂ । ಮಘಽವಾ । ಅಹಂ । ಇಂದ್ರಃ । ಇಯರ್ಮಿ । ರೇಣುಂ । ಅಭಿಭೂತಿಽಓಜಾಃ ॥೫॥

॥ ಸಾಯಣಭಾಷ್ಯಂ ॥

ಮಾಂ ಮಾಮೇವ ಸ್ವಶ್ವಾಃ ಶೋಭನಾಶ್ವಾ ವಾಜಯಂತಃ ಸಂಗ್ರಾಮಮಿಚ್ಛಂತೋ ನರೋ ನೇತಾರೋ ಭಟಾಃ । ಅನುಗಚ್ಛಂತೀತಿ ಶೇಷಃ । ಮಾಮೇವ ವೃತಾಃ ಸಂತಃ ಸಮರಣೇ ಸಂಗ್ರಾಮೇ ಹವಂತೇ । ಆಹ್ವಯಂತಿ ಯುದ್ಧಾರ್ಥಂ । ಮಘವಾ ಧನವಾನಹಮಿಂದ್ರಃ ಸನ್ನಾಜಿಂ ಕೃಣೋಮಿ । ಕರೋಮಿ । ಅಭಿಭೂತ್ಯೋಜಾಃ ಪರೇಷಾಮಭಿಭಾವಿಬಲೋಽಹಂ ರೇಣುಮಿಯರ್ಮಿ । ಪ್ರೇರಯಾಮಿ ॥

॥ ಪ್ರತಿಪದಾರ್ಥ ॥

ಸ್ವಶ್ವಾಃ—ಶ್ರೇಷ್ಠವಾದ ಅಶ್ವಗಳುಳ್ಳವರೂ । ವಾಜಯಂತಃ—ಸಂಗ್ರಾಮಾಪೇಕ್ಷಿಗಳೂ । ನರಃ—ನೇತೃಗಳೂ ಆದ ಭಟರು । ಮಾಂ—ನನ್ನನ್ನೇ । ಹವಂತೇ—(ಸಹಾಯಕ್ಕಾಗಿ) ಕರೆಯುತ್ತಾರೆ । ಸಮರಣೇ—

ಸಂಗ್ರಾಮದಲ್ಲಿ । ವೃತಾಃ—ನಿರತರಾದವರೂ ಸಹ । ಮಾಂ—ನನ್ನನ್ನೇ । (ಹವಂತೇ—ಕರೆಯುತ್ತಾರೆ) । ಅಹಂ—ನಾನೇ । ಮಘವಾ—ಧನವಂತನಾದ । ಇಂದ್ರಃ—ಇಂದ್ರರೂಪನಾಗಿ । ಆಜಿಂ—ಯುದ್ಧವನ್ನು । ಕೃಣೋಮಿ—ನಡೆಸುತ್ತೇನೆ । ಅಭಿಭೂತ್ಯೋಜಾಃ — ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನಾಗಿ । ರೇಣುಂ—ಧೂಳನ್ನು । ಇಯರ್ಮಿ—ಮೇಲಕ್ಕೆರಚಿ ಹರಡುವಂತೆ ಮಾಡುತ್ತೇನೆ.

॥ ಭಾವಾರ್ಥ ॥

ಶ್ರೇಷ್ಠವಾದ ಅಶ್ವಗಳುಳ್ಳವರೂ, ಸಂಗ್ರಾಮಾಪೇಕ್ಷಿಗಳೂ, ನೇತೃಗಳೂ ಆದ ಭಟರು ನನ್ನನ್ನೇ ಸಹಾಯಕ್ಕಾಗಿ ಕರೆಯುತ್ತಾರೆ. ಸಂಗ್ರಾಮದಲ್ಲಿ ನಿರತರಾದವರೂ ಸಹ ನನ್ನನ್ನೇ ಕರೆಯುತ್ತಾರೆ. ನಾನೇ ಧನವಂತನಾದ ಇಂದ್ರರೂಪನಾಗಿ ಯುದ್ಧವನ್ನು ನಡೆಸುತ್ತೇನೆ. ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನಾಗಿ ಧೂಳನ್ನು ಮೇಲಕ್ಕೆರಚಿ ಹರಡುವಂತೆ ಮಾಡುತ್ತೇನೆ.

## English Translation.

**Warriors well mounted, ardent for contest, invoke me: selected (combatants invoke) me in battle: I, the affluent Indra, instigate the conflict, and endowed with victorious prowess, I raise up the dust (in the battle).**



॥ ಸಂಹಿತಾಪಾಠಃ ॥

ಅಹಂ ತಾ ವಿಶ್ವಾ ಚಕರಂ ನಕಿರ್ಮಾ ದೈವ್ಯಂ ಸಹೋ ವರತೇ ಅಪ್ರತೀತಂ।
ಯನ್ಮಾ ಸೋಮಾಸೋ ಮಮದನ್ಯದುಕ್ಥೋಭೇ ಭಯೇತೇ ರಜಸೀ
ಅಪಾರೇ ॥ ೬ ॥

॥ ಪದಪಾಠಃ ॥

ಅಹಂ । ತಾ । ವಿಶ್ವಾ । ಚಕರಂ । ನಕಿಃ । ಮಾ । ದೈವ್ಯಂ । ಸಹಃ । ವರತೇ । ಅಪ್ರತಿऽಇತಂ ।
ಯತ್ । ಮಾ । ಸೋಮಾಸಃ । ಮಮದನ್ । ಯತ್ । ಉಕ್ಥಾ । ಉಭೇ ಇತಿ । ಭಯೇತೇ ಇತಿ ।
ರಜಸೀ ಇತಿ । ಅಪಾರೇ ಇತಿ ॥ ೬ ॥

‖ ಸಾಯಣಭಾಷ್ಯಂ ‖

ಅಹಂ ತ್ರಸದಸ್ಯುಸ್ತಾ ತಾನಿ ಪ್ರಸಿದ್ಧಾನಿ ವಿಶ್ವಾ ಸರ್ವಾಣಿ ಚಕರಂ । ಅಕಾರ್ಷಂ । ಅಪ್ರತೀತಮಪ್ರತಿಗತಂ ಮಾ ಮಾಂ ದೈವ್ಯಂ ಸಹೋ ದೇವಸಂಬಂಧಿ ಸಹೋ ಬಲಂ ನಕಿರ್ವರತೇ । ನೈವ ವಾರಯತಿ । ಯದ್ಯಸ್ಮಾತ್ಸೋಮಾಸಃ ಸೋಮಾ ಮಾ ಮಾಂ ಮಮದನ್। ಅಮದಯನ್। ಯಚ್ಚೋಕ್ಥಾ ಶಸ್ತ್ರಾಣ್ಯಪಿ ಮಮದನ್ ತಸ್ಮಾನ್ಮತ್ತೋಽಪಾರೇ ದೂರಪಾರೇ ಉಭೇ ರಜಸೀ ದ್ಯಾವಾಪೃಥಿವ್ಯೌ ಭಯೇತೇ । ಚಲತಃ ‖

‖ ಪ್ರತಿಪದಾರ್ಥ ‖

ಅಹಂ—ತ್ರಸದಸ್ಯುನಾಮಕನಾದ ನಾನು । ತಾ ವಿಶ್ವಾ—ಮೇಲೆ ಹೇಳಿದ ಸಮಸ್ತ ಕರ್ಮಗಳನ್ನೂ । ಚಕರಂ—ಮಾಡಿದೆನು । ಅಪ್ರತೀತಂ—ಅಪ್ರತಿಹತನಾದ । ಮಾ—ನನ್ನನ್ನೂ । ದೈವ್ಯಂ ಸಹಃ—ನನ್ನ ದೈವೀಶಕ್ತಿಯನ್ನೂ । ನಕಿಃ ವರತೇ—ಯಾರೂ ನಿರೋಧಿಸಲಾರರು । ಯತ್—ಯಾವಾಗ । ಸೋಮಾಸಃ—ಸೋಮರಸಗಳು । ಮಾ—ನನ್ನನ್ನು । ಮಮದನ್—ಹರ್ಷಗೊಳಿಸುವುವೋ । ಯತ್—ಯಾವಾಗ । ಉಕ್ಥಾ—ಶಸ್ತ್ರಮಂತ್ರಗಳು (ನನ್ನನ್ನು ಹರ್ಷಗೊಳಿಸುವುವೋ) ಆಗ । ಅಪಾರೇ—ಅನಂತಗಳಾದ । ಉಭೇ ರಜಸೀ—ದ್ಯಾವಾಪೃಥಿವಿಗಳೆರಡೂ ಸಹ । ಭಯೇತೇ—ಭೀತಿಯಿಂದ ಕಂಪಿಸುತ್ತವೆ.

‖ ಭಾವಾರ್ಥ ‖

ತ್ರಸದಸ್ಯುನಾಮಕನಾದ ನಾನು ಮೇಲೆ ಹೇಳಿದ ಸಮಸ್ತ ಕರ್ಮಗಳನ್ನೂ ಮಾಡಿದೆನು. ಅಪ್ರತಿಹತನಾದ ನನ್ನನ್ನೂ, ನನ್ನ ದೈವೀಶಕ್ತಿಯನ್ನೂ ಯಾರೂ ನಿರೋಧಿಸಲಾರರು. ಯಾವಾಗ ಸೋಮರಸಗಳೂ, ಸ್ತುತಿಗಳೂ ನನ್ನನ್ನು ಹರ್ಷಗೊಳಿಸುವುವೋ ಆಗ ಅನಂತಗಳಾದ ದ್ಯಾವಾಪೃಥಿವಿಗಳೆರಡೂ ಸಹ ಭೀತಿಯಿಂದ ಕಂಪಿಸುತ್ತವೆ.

## English Translation.

I have done all these (deeds): no one resists my divine, unsurpassed vigour; and when the Soma juices, when sacred songs exhilarate me, then the unbounded heaven and earth are both alarmed.



‖ ಸಂಹಿತಾಪಾಠಃ ‖

ವಿದುಷ್ಟೇ ವಿಶ್ವಾ ಭುವನಾನಿ ತಸ್ಯ ತಾ ಪ್ರ ಬ್ರವೀಷಿ ವರುಣಾಯ ವೇಧಃ ।
ತ್ವಂ ವೃತ್ರಾಣಿ ಶೃಣ್ವಿಷೇ ಜಘನ್ವಾನ್ತ್ವಂ ವೃತಾँ ಅರಿಣಾ ಇಂದ್ರ ಸಿಂಧೂನ್ ‖

॥ ಪದಪಾಠಃ ॥

ವಿದುಃ । ತೇ । ವಿಶ್ವಾ । ಭುವನಾನಿ । ತಸ್ಯ । ತಾ । ಪ್ರ । ಬ್ರವೀಷಿ । ವರುಣಾಯ । ವೇಧಃ ।

ತ್ವಂ । ವೃತ್ರಾಣಿ । ಶೃಣ್ವಿಷೇ । ಜಘನ್ವಾನ್ । ತ್ವಂ । ವೃತಾನ್ । ಅರಿಣಾಃ । ಇಂದ್ರ । ಸಿಂಧೂನ್ ॥ ೭ ॥

॥ ಸಾಯಣಭಾಷ್ಯಂ ॥

ಇತಃ ಪರಮಿಂದ್ರಾವರುಣಯೋಃ ಸ್ತುತಿಃ । ಹೇ ವರುಣ ತಸ್ಯ ತೇ ॥ ಕರ್ಮಣಿ ಷಷ್ಠೀ ॥ ತಂ ತ್ವಾಂ ವಿಶ್ವಾ ಸರ್ವಾಣಿ ತಾ ತಾನಿ ಭುವನಾನಿ ಭೂತಜಾತಾನಿ ವಿದುಃ । ಜಾನಂತಿ । ಹೇ ವೇಧಃ । ಸ್ತೋತೃ- ನಾಮೈತತ್ । ಹೇ ಸ್ತೋತರ್ವರುಣಾಯ ಪ್ರ ಬ್ರವೀಷಿ । ವರುಣಂ ಸ್ತೌಷಿ । ಹೇ ಇಂದ್ರ ತ್ವಂ ವೃತ್ರಾಣಿ ವೈರಿಣೋ ಜಘನ್ವಾನ್ ಹತವಾನಿತಿ ಶೃಣ್ವಿಷೇ । ಶ್ರೂಯಸೇ । ಕಿಂಚ ಹೇ ಇಂದ್ರ ತ್ವಂ ವೃತಾನಾಚ್ಛನ್ನಾನ್ ಸಿಂಧೂನ್ ಸ್ಯಂದನಸ್ವಭಾವಾನಪ್ಸಂಘಾನರಿಣಾಃ । ಅಗಮಯಃ ॥

॥ ಪ್ರತಿಪದಾರ್ಥ ॥

(ಎಲೈ ವರುಣನೇ) । ತಸ್ಯ ತೇ—ಪ್ರಸಿದ್ಧನಾದ ನಿನ್ನನ್ನು । ವಿಶ್ವಾ—ಸಮಸ್ತವಾದವೂ । ತಾ— ಪ್ರಸಿದ್ಧವಾದವೂ ಆದ । ಭುವನಾನಿ—ಭೂತಗಳೆಲ್ಲವೂ ಸಹ । ವಿದುಃ—ಅರಿಯುತ್ತವೆ । ವೇಧಃ— ಎಲೈ ಸ್ತುತಿಕರ್ತನೇ । ವರುಣಾಯ—ವರುಣನನ್ನುದ್ದೇಶಿಸಿ । ಪ್ರ ಬ್ರವೀಷಿ—ಅತಿಶಯವಾಗಿ ಸ್ತುತಿಸು । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ವೃತ್ರಾಣಿ—ವೈರಿಗಳನ್ನು । ಜಘನ್ವಾನ್—ನಾಶಮಾಡಿದ್ದೀ ಯೆಂಬುದಾಗಿ । ಶೃಣ್ವಿಷೇ—ಪ್ರಖ್ಯಾತನಾಗಿದ್ದೀಯೆ । ತ್ವಂ—ನೀನು । ವೃತಾನ್—ಆವೃತವಾಗಿದ್ದವೂ । ಸಿಂಧೂನ್—ಪ್ರವಹಿಸುವ ಸ್ವಭಾವವುಳ್ಳವೂ ಆದ ಉದಕಗಳನ್ನು । ಅರಿಣಾಃ—ಬಿಡಿಸಿ ಹರಿಯುವಂತೆ ಮಾಡಿದೆ.

॥ ಭಾವಾರ್ಥ ॥

ಎಲೈ ವರುಣನೇ, ಪ್ರಸಿದ್ಧನಾದ ನಿನ್ನನ್ನು ಸಕಲ ಭೂತಗಳೂ ಅರಿಯುತ್ತವೆ. ಎಲೈ ಸ್ತುತಿಕರ್ತನೇ, ವರುಣನನ್ನುದ್ದೇಶಿಸಿ ನೀನು ಅತಿಶಯವಾಗಿ ಸ್ತುತಿಸು. ಎಲೈ ಇಂದ್ರನೇ, ನೀನು ವೈರಿಗಳನ್ನು ನಾಶಪಡಿಸಿದ್ದೀ ಯೆಂಬುದಾಗಿ ಪ್ರಖ್ಯಾತನಾಗಿದ್ದೀಯೆ. ನೀನು ಆವೃತವಾಗಿದ್ದವೂ, ಪ್ರವಹಿಸುವ ಸ್ವಭಾವವುಳ್ಳವೂ ಆದ ಉದಕಗಳನ್ನು ಬಿಡಿಸಿ ಹರಿಯುವಂತೆ ಮಾಡಿದೆ.

## English Translation.

All beings recognize you (Varuna), and you, worshipper, address these (encomiums) to Varuna: you, Indra, are renowned as slaying Vritra; you have set the obstructed rivers free to flow.



॥ ಸಂಹಿತಾಪಾಠಃ ॥

ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗಹೇ ಬಧ್ಯಮಾನೇ ।

ತ ಆಯಜಂತ ತ್ರಸದಸ್ಯುಮಸ್ಯಾ ಇಂದ್ರಂ ನ ವೃತ್ರತುರಮರ್ಧದೇವಂ ॥೮॥

॥ ಪದಪಾಠಃ ॥

ಅಸ್ಮಾಕಂ । ಅತ್ರ । ಪಿತರಃ । ತೇ । ಆಸನ್ । ಸಪ್ತ । ಋಷಯಃ । ದೌಃಽಗಹೇ । ಬಧ್ಯಮಾನೇ ।

ತೇ । ಆ । ಅಯಜಂತ । ತ್ರಸದಸ್ಯುಂ । ಅಸ್ಯಾಃ । ಇಂದ್ರಂ । ನ । ವೃತ್ರಽತುರಂ । ಅರ್ಧಽದೇವಂ ॥ ೮॥

॥ ಸಾಯಣಭಾಷ್ಯಂ ॥

ಪುರುಕುತ್ಸಸ್ಯ ಮಹಿಷೀ ದೌರ್ಗಹೇ ಬಂಧನಸ್ಥಿತೇ । ಪತ್ಯಾವರಾಜಕಂ ದೃಷ್ಟ್ವಾ ರಾಷ್ಟ್ರಂ ಪುತ್ರಸ್ಯ ಲಿಪ್ಸಯಾ ॥ ಯದೃಚ್ಛಯಾ ಸಮಾಯಾತಾನ್ ಸಪ್ತರ್ಷೀನ್ಪರ್ಯಪೂಜಯತ್ । ತೇ ಚ ಪ್ರೀತಾಃ ಪುನಃ ಪ್ರೋಚುರ್ಯಜೇಂದ್ರಾವರುಣೌ ಭೃಶಂ ॥ ಸಾ ಚೇಂದ್ರಾವರುಣಾವಿಷ್ಟ್ವಾ ತ್ರಸದಸ್ಯುಮಜೀಜನತ್ । ಇತಿಹಾಸಮಿಮಂ ಜಾನನ್ನೃಷಿರ್ಬ್ರೂತೇ ಋಚಾವಿಹ ॥ ಅಥಾಸ್ಮಾಕಮತ್ರಾಸ್ಮಿನ್ನರಾಜಕೇ ದೇಶೇಽಸ್ಯಾಂ ಪೃಥಿವ್ಯಾಂ ವಾ ಪಿತರಃ ಪಾಲಯಿತಾರ ಉತ್ಪಾದಕಾಸ್ತ ಆಸನ್ । ಅಭವನ್ । ಏತೇ ಸಪ್ತರ್ಷಯಃ ಪ್ರಸಿದ್ಧಾ ದೌರ್ಗಹೇ ದುರ್ಗಹಸ್ಯ ಪುತ್ರೇ ಪುರುಕುತ್ಸೇ ಬಧ್ಯಮಾನೇ ದೃಢಂ ಪಾಶೈರ್ಯಸ್ಮಾದಸ್ಯಾ ಅಸ್ಯೈ ಪುರುಕುತ್ಸಾನ್ಯೈ ತ್ರಸದಸ್ಯುಮಾಯಜಂತ । ಪ್ರಾದುರಿಂದ್ರಾವರುಣಯೋರನುಗ್ರಹಾತ್। ಕೀದೃಶಂ ತಂ । ವೃತ್ರತುರಂ ವೃತ್ರಸ್ಯ ಶತ್ರೋರ್ಹಂತಾರಮರ್ಧದೇವಂ ದೇವಾನಾಮರ್ಧೇ ಸಮೀಪೇ ವರ್ತಮಾನಂ । ಯದ್ವಾ । ದೇವಾನಾಮರ್ಧಭೂತಮಿಂದ್ರಂ ನ ಇಂದ್ರಮಿವ ಸ್ಥಿತಂ ಪುತ್ರಂ ದತ್ತವಂತಃ । ಯತ್ಸರ್ವೇಷಾಮರ್ಧಮಿಂದ್ರಃ ಪ್ರತಿ ತಸ್ಮಾದಿಂದ್ರೋ ದೇವತಾನಾಂ ಭೂಯಿಷ್ಠಭಾಕ್ತಮ ಇತಿ ತೈತ್ತಿರೀಯಕಂ । ತೈ. ಸಂ. ೫-೪-೮-೩ ॥

॥ ಪ್ರತಿಪದಾರ್ಥ ॥

ಅಸ್ಮಾಕಂ—ನಮ್ಮ । ಅತ್ರ—(ಅರಾಜಕವಾದ) ಈ ದೇಶದಲ್ಲಿ । ತೇ—ಪ್ರಸಿದ್ಧರಾದ । ಸಪ್ತ. ಋಷಯಃ—ಸಪ್ತಋಷಿಗಳೂ ಸಹ । ಪಿತರಃ—ಪಾಲಕರಾಗಿ । ಆಸನ್—ಆದರು । ದೌರ್ಗಹೇ—ದುರ್ಗಹನ ಪುತ್ರನಾದ ಪುರುಕುತ್ಸನು । ಬಧ್ಯಮಾನೇ—ಬಂಧಿತನಾದಾಗ । ಅಸ್ಯಾಃ—ಪುರುಕುತ್ಸನ ಪತ್ನಿಯಲ್ಲಿ । ಇಂದ್ರಂ ನ—ಇಂದ್ರನಿಗೆ ಸಮಾನವಾಗಿ । ವೃತ್ರತುರಂ—ಶತ್ರುನಾಶಕನೂ । ಅರ್ಧದೇವಂ—ದೇವತೆಗಳ ಸಾನ್ನಿಧ್ಯವುಳ್ಳವನೂ ಆದ । ತ್ರಸದಸ್ಯುಂ—ತ್ರಸದಸ್ಯುವನ್ನು । ತೇ—ಆ ಸಪ್ತಋಷಿಗಳು । ಆ ಅಯಜಂತ—ಉತ್ಪನ್ನವಾಗುವಂತೆ ಮಾಡಿದರು.

॥ ಭಾವಾರ್ಥ ॥

ಪುರುಕುತ್ಸನು ಬಂಧಿತನಾದುದರಿಂದ ಅರಾಜಕವಾದ ಈ ದೇಶದಲ್ಲಿ ಪ್ರಸಿದ್ಧರಾದ ಋಷಿಗಳೂ ಸಹ ಪಾಲಕರಾದರು. ಪುರುಕುತ್ಸನು ಬಂಧಿತನಾದಾಗ ಅದೇ ಋಷಿಗಳು ಇಂದ್ರಾವರುಣರ ಅನುಗ್ರಹದಿಂದ ಪುರುಕುತ್ಸನ ಪತ್ನಿಯಲ್ಲಿ ಇಂದ್ರನಿಗೆ ಸಮಾನವಾದ ಶತ್ರುನಾಶಕನೂ, ದೇವತೆಗಳ ಸಾನ್ನಿಧ್ಯವುಳ್ಳವನೂ ಆದ ತ್ರಸದಸ್ಯುವನ್ನು ಉತ್ಪನ್ನವಾಗುವಂತೆ ಮಾಡಿದರು.

## English Translation.

The seven Rishis were the protectors of this our (kingdom) when the son of Durgaha was in bonds: performing worship they obtained for (his queen) from the favour of Indra and Varuna, a son like Indra the slayer of foes, dwelling near the gods.

॥ ವಿಶೇಷವಿಷಯುಗಳು ॥

ಈ ಋಕ್ಕಿನಲ್ಲಿ ಈ ಸೂಕ್ತದ್ರಷ್ಟೃವಾದ ತ್ರಸದಸ್ಯುವಿನ ಜನ್ಮವೃತ್ತಾಂತವು ಉಕ್ತವಾಗಿರುವುದು. ಈ ವಿಷಯದಲ್ಲಿ ಭಾಷ್ಯಕಾರರು ಒಂದು ಇತಿಹಾಸವನ್ನು ಹೇಳಿರುವರು:—

ಪುರುಕುತ್ಸಸ್ಯ ಮಹಿಷೀ ದೌರ್ಗಹೇ ಬಂಧನಸ್ಥಿತೇ ।
ಪತ್ಯಾವರಾಜಕಂ ದೃಷ್ಟ್ವಾ ರಾಷ್ಟ್ರಂ ಪುತ್ರಸ್ಯ ಲಿಪ್ಸಯಾ ॥
ಯದೃಚ್ಛಯಾ ಸಮಾಯಾತಾನ್ ಸಪ್ತರ್ಷೀನ್ ಪರ್ಯಪೂಜಯತ್ ।
ತೇ ಚ ಪ್ರೀತಾಃ ಪುನಃ ಪ್ರೋಚುರ್ಯಜೇಂದ್ರಾವರುಣೌ ಭೃಶಂ ॥
ಸಾ ಚೇಂದ್ರಾವರುಣಾವಿಷ್ಟ್ವಾ ತ್ರಸದಸ್ಯುಮಜೀಜನತ್ ।
ಇತಿಹಾಸಮಿಮಂ ಜಾನನ್ನೃಷಿರ್ಬ್ರೂತೇ ಋಚಾವಿಹ ॥

ಪೂರ್ವದಲ್ಲಿ ದುರ್ಗಹಪುತ್ರನಾದ ಪುರುಕುತ್ಸನೆಂಬ ರಾಜನು ಯುದ್ಧಮಾಡುತ್ತಿರುವಾಗ ಶತ್ರುಗಳಿಂದ ಬಂಧಿತನಾಗಿ ಕಾರಾಗೃಹದಲ್ಲಿ ಇಡಲ್ಪಟ್ಟಿದ್ದನು. ಆ ರಾಜನ ಬಂಧವಿಮೋಚನೆಯನ್ನು ಮಾಡಲು ಸಾಧ್ಯವಿಲ್ಲದ್ದರಿಂದಲೂ, ಆ ರಾಜನಿಗೆ ಪುತ್ರನಿಲ್ಲದ್ದರಿಂದೂ ಅವನ ಪತ್ನಿಯಾದ ಪುರುಕುತ್ಸಾಣೀ ಎಂಬ ರಾಜಪತ್ನಿಯು–ರಾಜ್ಯವು ಅನಾಯಕವಾಗಿ ಶತ್ರುಗಳ ಪಾಲಾಗುವುದೆಂದು ಚಿಂತಾಕ್ರಾಂತಳಾಗಿದ್ದಳು. ಆ ಸಮಯದಲ್ಲಿ ಅಲ್ಲಿಗೆ ಆಕಸ್ಮಾತ್ತಾಗಿ ಸಪ್ತಋಷಿಗಳು ಬರಲು ರಾಜಮಹಿಷಿಯು ಅವರನ್ನು ಆದರಾತಿಥ್ಯಗಳಿಂದ ಸತ್ಕರಿಸಿ ಪೂಜಿಸಿ ತನ್ನ ವೃತ್ತಾಂತವನ್ನು ಅರಿಕೆಮಾಡಿಕೊಂಡಳು. ಆಗ ಸಪ್ತಋಷಿಗಳು ಅವಳ ಪೂಜಾ ಸತ್ಕಾರಗಳಿಂದ ಪ್ರೀತರಾಗಿ ಅವಳನ್ನು ಕುರಿತು—ಎಲೌ ಮಹಿಷಿ, ನೀನು ಭಕ್ತಿಯಿಂದ ಇಂದ್ರಾವರುಣರನ್ನು ಭಜಿಸು ಎಂದು ಉಪದೇಶಮಾಡಿದರು. ಅದರಂತೆ ರಾಜಪತ್ನಿಯು ಇಂದ್ರಾವರುಣರನ್ನು ಯಾಚಿಸಲು ಅವರ ಅನುಗ್ರಹದಿಂದ ತ್ರಸದಸ್ಯುವೆಂಬ ಪುತ್ರನು ಉತ್ಪನ್ನನಾದನು. ತನ್ನ ಜನ್ಮವೃತ್ತಾಂತವನ್ನು ತನ್ನ ತಾಯಿಯಿಂದ ತಿಳಿದವನಾದ್ದರಿಂದ ತ್ರಸದಸ್ಯುವು ಈ ವಿಷಯನನ್ನು ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕಿನಲ್ಲಿಯೂ ಹೇಳಿಕೊಂಡಿದಾನೆ.

ದುರ್ಗಹ ಎಂಬ ರಾಜನ ಹೆಸರು—

ನಪಾತೋ ದುರ್ಗಹಸ್ಯ ಮೇ ಸಹಸ್ರೇಣ ಸುರಾಧಸಃ ।
(ಋ. ಸಂ. ೮–೬೫–೧೨)

ಅಗ್ನೇ ಬಾಧಸ್ವ ವಿ ಮೃಧೋ ವಿ ದುರ್ಗಹಾಪಾಮೀವಾಮಪ ರಕ್ಷಾಂಸಿ ಸೇಧ ।
(ಋ. ಸಂ. ೧೦–೯೮.೧೨)

ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ. ಈ ರಾಜನು ಪುರುಕುತ್ಸನ್ನತಂದೆಯೆಂದು ಹೇಳಲಾಗಿದೆ. ಈ ಪುರುಕುತ್ಸನನ್ನು ಯುದ್ಧದಲ್ಲಿ ಶತ್ರುಗಳು ಬಂಧಿಸಿ ಸಂಹಾರಮಾಡಿದರೆಂದೂ ಈ ರಾಜನಿಗೆ ಮಕ್ಕಳಿಲ್ಲದ್ದರಿಂದ ಇವನ ಪತ್ನಿಯಾದ ಪುರುಕುತ್ಸಾನೀ ಎಂಬುವಳು ಸಪ್ತರ್ಷಿಗಳ ಉಪದೇಶದಿಂದ ಇಂದ್ರಾವರುಣರನ್ನೂ ಸ್ತುತಿಸಿ ಅವರ ಅನುಗ್ರಹದಿಂದ ತ್ರಸದಸ್ಯುವೆಂಬ ಪುತ್ರನನ್ನು ಪಡೆದಳೆಂದೂ ಪ್ರಕೃತಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಸ್ಪಷ್ಟವಾಗಿ ಹೇಳಿದೆ. ಈ ವಿಷಯದಲ್ಲಿ ಕೆಲವು ಪಾಶ್ಚಾತ್ಯ ಪಂಡಿತರು ಪ್ರತ್ಯೇಕವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ದುರ್ಗಹಾ ಎಂಬ ಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨–೨೭) ಪುರುಕುತ್ಸನು ಅಶ್ವಮೇಧಯಾಗವನ್ನು ಮಾಡಿ ತ್ರಸದಸ್ಯುವೆಂಬ ಪುತ್ರನನ್ನು ಪಡೆದನೆಂದೂ ಕೆಲವರ ಅಭಿಪ್ರಾಯವಿದೆ. ಆದರೆ ಅವೆಲ್ಲಾ ನಂಬಲರ್ಹವಾದುದಲ್ಲ.

---

॥ ಸಂಹಿತಾಪಾಠಃ ॥

ಪುರುಕುತ್ಸಾನೀ ಹಿ ವಾಮದಾಶದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।
ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಂ ॥೯॥

॥ ಪದಪಾಠಃ ॥

ಪುರುಽಕುತ್ಸಾನೀ । ಹಿ । ವಾಂ । ಅದಾಶತ್ । ಹವ್ಯೇಭಿಃ । ಇಂದ್ರಾವರುಣಾ । ನಮಃಽಭಿಃ ।
ಅಥ । ರಾಜಾನಂ । ತ್ರಸದಸ್ಯುಂ । ಅಸ್ಯಾಃ । ವೃತ್ರಽಹನಂ । ದದಥುಃ । ಅರ್ಧಽದೇವಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಪುರುಕುತ್ಸಾನೀ ಪುರುಕುತ್ಸಸ್ಯ ಪತ್ನೀ ಋಷಿಪ್ರೇರಿತಾ ವಾಂ ಯುವಾಮದಾಶದ್ಧಿ । ಅಪ್ರೀಣಯತ್ ಖಲು । ಹವ್ಯೇಭಿರ್ಹವಿರ್ಭಿರ್ನಮೋಭಿಃ ಸ್ತುತಿಭಿಶ್ಚ । ಅಥ ರಾಜಾನಂ ತ್ರಸದಸ್ಯುಂ ವೃತ್ರಹಣಮರ್ಧದೇವಮುಕ್ತಲಕ್ಷಣಂ ಪುತ್ರಮಸ್ಯಾ ಅಸ್ಯೈ ಪುರುಕುತ್ಸಾನ್ಯೈ ದದಥುಃ । ದತ್ತವಂತಾವಿತಿ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ಪುರುಕುತ್ಸಾನೀ—ಪುರುಕುತ್ಸನ ಪತ್ನಿಯು । ವಾಂ—ನಿಮ್ಮಿಬ್ಬರನ್ನೂ । ಹವ್ಯೇಭಿಃ—ಹವಿಸ್ಸುಗಳಿಂದಲೂ । ನಮೋಭಿಃ—ಸ್ತುತಿಗಳಿಂದಲೂ । ಅದಾಶತ್ ಹಿ—ಪೂಜಿಸಿ ತೃಪ್ತಿಪಡಿಸಿದಳಲ್ಲವೇ । ಅಥ—ಅನಂತರ । ಅಸ್ಯಾಃ—ಅವಳಿಗೆ । ವೃತ್ರಹನಂ—ಶತ್ರುನಾಶಕನೂ । ಅರ್ಧದೇವಂ—ದೇವತೆಗಳ ಸಾನ್ನಿಧ್ಯದಲ್ಲಿರುವವನೂ । ರಾಜಾನಂ—ಪ್ರಭುವಾಗಲು ಅರ್ಹನೂ ಆದ । ತ್ರಸದಸ್ಯುಂ—ತ್ರಸದಸ್ಯುವೆಂಬ ಪುತ್ರನನ್ನು । ದದಥುಃ—ಅನುಗ್ರಹಿಸಿಕೊಟ್ಟದ್ದೀರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಪುರುಕುತ್ಸನ ಪತ್ನಿಯು ನಿಮ್ಮಿಬ್ಬರನ್ನೂ ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ಪೂಜಿಸಿ ತೃಪ್ತಿಪಡಿಸಿದಳಲ್ಲವೇ ? ಅದರ ಫಲವಾಗಿ ನೀವು ಅವಳಿಗೆ ಶತ್ರುನಾಶಕನೂ, ದೇವತೆಗಳ ಸಾನ್ನಿಧ್ಯದಲ್ಲಿರುವವನೂ, ಪ್ರಭುವಾಗಲು ಅರ್ಹನೂ ಆದ ತ್ರಸದಸ್ಯುವೆಂಬ ಪುತ್ರನನ್ನು ಅನುಗ್ರಹಿಸಿ ಕೊಟ್ಟದ್ದೀರಿ.

English Translation.

The wife of Purukutsa propitiated you two, Indra and Varuna, with oblations and prostrations, and therefore you gave her the king Trasadasyu, the slayer of foes, dwelling near the gods.



॥ ಸಂಹಿತಾಪಾಠಃ ॥

ರಾಯಾ ವಯಂ ಸಸವಾಂಸೋ ಮದೇಮ ಹವ್ಯೇನ ದೇವಾ ಯವಸೇನ ಗಾವಃ ।
ತಾಂ ಧೇನುಮಿಂದ್ರಾವರುಣಾ ಯುವಂ ನೋ ವಿಶ್ವಾಹಾ ಧತ್ತಮನಪಸ್ಫುರಂತೀಂ ॥ ೧೦ ॥

॥ ಪದಪಾಠಃ ॥

ರಾಯಾ । ವಯಂ । ಸಸ್ವಾಂಸಃ । ಮದೇಮ । ಹವ್ಯೇನ । ದೇವಾಃ । ಯವಸೇನ । ಗಾವಃ ।
ತಾಂ । ಧೇನುಂ । ಇಂದ್ರಾವರುಣಾ । ಯುವಂ । ನಃ । ವಿಶ್ವಾಹಾ । ಧತ್ತಂ । ಅನಪಸ್ಫುರಂತೀಂ ॥ ೧೦ ॥

॥ ಸಾಯಣಭಾಷ್ಯಂ ॥

ರಾಯೊ ಧನೇನ ಮದೇಮ ಸಸವಾಂಸೋ ಯುವಾಂ ಸಂಭಕ್ತಾರೋ ವಯಂ । ಹವ್ಯೇನ ದೇವಾ ಮೋದಂತು ಯವಸೇನ ಚ ಗಾವಃ । ತಾಂ ಧೇನುಂ ಪ್ರೀಣಯಿತ್ರೀಂ ರಯಿಂ ಹೇ ಇಂದ್ರಾವರುಣೌ ವಿಶ್ವಾಹಾ ವಿಶ್ವಸ್ಯ ಹಂತಾರೌ ಯು:ವಂ ಯುವಾಂ ನೋsಸ್ಮಾಕಂ ಧತ್ತಂ। ದತ್ತಂ । ಕೀದೃಶೀಂ । ಅನಪಸ್ಫುರಂತೀಮನವಹಿಂಸಿತಾಂ । ಯದ್ವಾ । ವಿಶ್ವಾಹೇತ್ಯವ್ಯಯಂ । ಸರ್ವದೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣೌ—ಎಲೈ ಇಂದ್ರ ಮತ್ತು ವರುಣರೇ । ಸಸವಾಂಸಃ—ನಿನ್ನ ಪೂಜಕರಾದ । ವಯಂ—ನಾವು । ರಾಯೊ—ಧನದಿಂದ । ಮದೇಮ—ಹರ್ಷಪಡುವಂತಾಗಲಿ । ಹವ್ಯೇನ—ಹವಿಸ್ಸಿನಿಂದ । ದೇವಾಃ—ದೇವತೆಗಳೂ । ಯವಸೇನ—ಹುಲ್ಲುಗಾವಲುಗಳಿಂದ । ಗಾವಃ—ಗೋವುಗಳೂ (ತೃಪ್ತಿಪಡಲಿ) (ಎಲೈ ಇಂದ್ರಾ ವರುಣರೇ) । ಯುವಂ—ನೀವು । ನಃ—ನಮಗೆ । ವಿಶ್ವಾಹಾ—ಪ್ರತಿದಿನವೂ । ಅನಪಸ್ಫುರಂತೀಂ—ದೋಷರಹಿತವಾದುದೂ । ತಾಂ—ಪ್ರಸಿದ್ಧವಾದುದೂ । ಧೇನುಂ—ತೃಪ್ತಿಕಾರಕವಾದುದೂ ಆದ ಸಂಪತ್ತನ್ನು । ದತ್ತಂ—ಅನುಗ್ರಹಿಸಿಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಿನ್ನ ಪೂಜಕರಾದ ನಾವು ಧನಸಂಪತ್ತಿನಿಂದ ಹರ್ಷಪಡುವಂತಾಗಲಿ. ಹವಿಸ್ಸಿನಿಂದ ದೇವತೆಗಳೂ, ಹುಲ್ಲುಗಾವಲುಗಳಿಂದ ಗೋವುಗಳೂ ತೃಪ್ತಿಪಡಲಿ. ಎಲೈ ಇಂದ್ರಾವರುಣರೇ, ನೀವು ನಮಗೆ ಪ್ರತಿದಿನವೂ ದೋಷರಹಿತವಾದುದೂ, ಪ್ರಸಿದ್ಧವಾದುದೂ, ತೃಪ್ತಿಕಾರಕವಾದುದೂ ಆದ ಸಂಪತ್ತನ್ನು ಅನುಗ್ರಹಿಸಿಕೊಡಿರಿ.

English Translation.

May we, glorifying you both, be delighted by riches; may the gods be pleased by oblations, the cows by pasture: and Indra and Varuna, daily grant us that same milch cow, (riches), free from any imperfection.



# ನಲವತ್ತಮೂರನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಸುಹೋತ್ರನ ಪುತ್ರರಾದ ಪುರುಮಾಳ್ಹ ಮತ್ತು ಅಜಮಿಳ್ಹರೆಂಬುವರು ಋಷಿಗಳು. ಪುರುಮಿಳ್ಹನೆಂಬುವನು ಪ್ರಾಚೀನನಾದ ಋಷಿಯೆಂದು ಕೆಲವು ಕಡೆಗಳಲ್ಲಿಯೂ, ರಾಜನೆಂದು ಕೆಲವು ಕಡೆಗಳಲ್ಲಿಯೂ ಪ್ರಸಿದ್ಧನಾಗಿದ್ದಾನೆ. ಇವನ ಕಥೆಯನ್ನು ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದ್ದಾರೆ. ಅಲ್ಲಿ ಕಥೆಯು ಮುಖ್ಯವಾಗಿ ಶ್ಯಾವಾಶ್ವನ ವಿಷಯವಾಗಿದ್ದರೂ ಸಹ ಶ್ಯಾವಾಶ್ವನಿಗೂ ಪುರುಮೀಳ್ಹನಿಗೂ ಸಂಭವಿಸಿದ ಸಂಬಂಧವನ್ನು ತಿಳಿಸುವುದರಿಂದ ಬೃಹದ್ದೇವತಾಕಾರರು ಹೇಳಿರುವ ಕಥೆಯನ್ನು ಇಲ್ಲಿ ಹೇಳಲಾಗಿದೆ.

ರಾಜರ್ಷಿರಭವದ್ಧಾಭ್ರ್ಯೋ ರಥವೀತಿರಿತಿ ಶ್ರುತಃ ।
ಸ ಯಕ್ಷ್ಯಮಾಣೋ ರಾಜಾತ್ರಿಮಭಿಗಮ್ಯ ಪ್ರಸಾದ್ಯ ಚ ॥
ಆತ್ಮಾನಂ ಕಾರ್ಯಮರ್ಥಂ ಚ ಖ್ಯಾಪಯನ್ಪ್ರಾಂಜಲಿಃ ಸ್ಥಿತಃ ।
ಅವೃಣೀತರ್ಷಿಮಾತ್ರೇಯಮಾರ್ತ್ವಿಜ್ಯಾಯಾರ್ಚನಾನಸಂ ॥
ಸ ಸಪುತ್ರೋಽಭ್ಯಗಚ್ಛತ್ತಂ ರಾಜಾನಂ ಯಜ್ಞಸಿದ್ಧಯೇ ।
ಶ್ಯಾವಾಶ್ವಸ್ಯಾತ್ರಿಪುತ್ರಸ್ಯ ಪುತ್ರಃ ಖಲ್ವರ್ಚನಾನಸಃ ॥
ಸಾಂಗೋಪಾಂಗಾನ್ಸರ್ವವೇದಾನ್ ಯಃ ಪಿತ್ರಾಧ್ಯಾಪಿತೋ ಮುದಾ ।
ಅರ್ಚನಾನಾಃ ಸಪುತ್ರೋಽಥ ಗತ್ವಾ ನೃಪಮಯಾಜಯತ್ ॥
ಯಜ್ಞೇ ಚ ವಿತತೇಽಪಶ್ಯದ್ರಾಜಪುತ್ರೀಂ ಯಶಸ್ವಿನೀಂ ।
ಸ್ನುಷಾ ಮೇ ರಾಜಪುತ್ರೀ ಸ್ಯಾದಿತಿ ತಸ್ಯ ಮನೋಽಭವತ್ ॥
ಶ್ಯಾವಾಶ್ವಸ್ಯ ಚ ತಸ್ಯಾಂ ವೈ ಸಕ್ತಮಾಸೀತ್ತದಾ ಮನಃ ।
ಸಂಯುಜ್ಯಸ್ವ ಮಯಾ ರಾಜನ್ನಿತಿ ಯಾಜ್ಯಂ ಚ ಸೋಽಬ್ರವೀತ್ ॥
ಶ್ಯಾವಾಶ್ವಾಯ ಸುತಾಂ ದಿತ್ಸುರ್ಮಹಿಷೀಂ ಸ್ವಾಂ ನೃಪೋಽಬ್ರವೀತ್ ।
ಕಿಂ ತೇ ಮತಮಹಂ ಕನ್ಯಾಂ ಶ್ಯಾವಾಶ್ವಾಯ ದದಾಮಿ ಹಿ ॥
ಅತ್ರಿಪುತ್ರೋಽದುರ್ಬಲೋ ಹಿ ಜಾಮಾತಾ ತ್ವಾವಯೋರಿತಿ ।
ರಾಜಾನಮಬ್ರವೀತ್ಸಾಪಿ ನೃಪರ್ಷಿಕುಲಜಾ ಹ್ಯಹಂ ॥
ನಾನೃಷಿರ್ನೌ ತು ಜಾಮಾತಾ ನೈಷ ಮಂತ್ರಾನ್ ಹಿ ದೃಷ್ಟವಾನ್ ।
ಋಷಯೇ ದೀಯತಾಂ ಕನ್ಯಾ ವೇದಸ್ಯಾಂಬಾ ಭವೇತ್ತಥಾ ॥
ಋಷಿರ್ಮಂತ್ರದೃಶಂ ವೇದಪಿತರಂ ಮನ್ಯತೇ ಯತಃ ।
ಪ್ರತ್ಯಾಚಷ್ಟೇ ಸ ತಂ ರಾಜಾ ಸಹ ಸಂಮಂತ್ರ್ಯ ಭಾರ್ಯಯಾ ॥
ಅನೃಷಿರ್ನೈವ ಜಾಮಾತಾ ಕಶ್ಚಿದ್ಭವಿತುಮರ್ಹತಿ ।
ಪ್ರತ್ಯಾಖ್ಯಾತ ಋಷಿಸ್ತೇನ ವೃತ್ತೇ ಯಜ್ಞೇ ನ್ಯವರ್ತತ ॥
ಶ್ಯಾವಾಶ್ವಸ್ಯ ತು ಕನ್ಯಾಯಾ ಮನೋ ನೈವ ನ್ಯವರ್ತತ ।
ತತಸ್ತೌ ತು ನಿವರ್ತೇತಾಮುಭಾವೇವಾಭಿಜಗ್ಮತುಃ ॥
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ।
ತರಂತಪುರುಮೀಳ್ಹೌ ತು ರಾಜಾನೌ ವೈದದಶ್ವ್ಯೃಷೀ ॥
ತಾಭ್ಯಾಂ ತೌ ಚಕ್ರತುಃ ಪೂಜಾಂ ಋಷಿಭ್ಯಾಂ ನೃಪತೀ ಸ್ವಯಂ ।
ಋಷಿಪುತ್ರಂ ಮಹಿಷ್ಯಾಶ್ಚ ದರ್ಶಯಾಮಾಸ ತಂ ನೃಪಃ ॥
ಅಜಾವಿಕಂ ಗವಾಶ್ವಂ ಚ ಶ್ಯಾವಾಶ್ವಾಯ ಶಶೀಯಸೀ ।
ಅತ್ರಿಂ ಯಾಜ್ಯಾರ್ಚಿತೌ ಗತ್ವಾ ಪಿತಾಪುತ್ರೌ ಸ್ವಮಾಶ್ರಮಂ ॥
ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ।

ಶ್ಯಾವಾಶ್ವಸ್ಯ ವ ನಸ್ಯಾಸೀನ್ಮಂತ್ರಸ್ಯಾದರ್ಶನಾದಹಂ
ನ ಲಬ್ಧವಾನಹಂ ಕನ್ಯಾಂ ಹಂತ ಸರ್ವಾಂಗಶೋಭನಾಂ ।
ಅಪ್ಯಹಂ ಮಂತ್ರದರ್ಶೀ ಸ್ಯಾಂ ಭವೇದ್ಧರ್ಷೋ ಮಹಾನ್ಮಮ ॥
ಇತ್ಯರಣ್ಯೇ ಚಿಂತಯತಃ ಪ್ರಾದುರಾಸೀನ್ಮರುದ್ಗಣಃ ।
ಪದರ್ಶ ಸಂಸ್ಥಿತಾನ್ಪಾರ್ಶ್ವೇ ತುಲ್ಯರೂಪಾನಿವಾತ್ಮನಃ ॥
ಸಮಾನವಯಸಶ್ಚೈವ ಮರುತೋ ರುಕ್ಮವಕ್ಷಸಃ ।
ತಾಂಸ್ತುಲ್ಯವಯಸೋ ದೃಷ್ಟ್ವಾ ದೇವಾನ್ಪುರುಷವಿಗ್ರಹಾನ್ ॥
ಶ್ಯಾವಾಶ್ವೋ ವಿಸ್ಮಿತೋಽಪೃಚ್ಛತ್ಕೇ ಷ್ಠೇತಿ ಮರುತಸ್ತದಾ ।
ತತಸ್ತು ಮರುತೋ ದೇವಾನ್ ರುದ್ರಸೂನೂನಬುಧ್ಯತ ॥
ಯ ಈಂ ವಹಂತ ಇತ್ಯಾಭಿರ್ಬುದ್ಧ್ವಾ ತುಷ್ಟಾವ ತಾಂಸ್ತಥಾ ।
ಅತಿಕ್ರಮಂ ಹಿ ತಂ ಮೇನೇ ಋಷಿರ್ವಿಪುಲಮಾತ್ಮನಃ ॥
.... .... .... .... .... .... .... ....
ರಥವೀತೇರ್ದುಹಿತರಮಗಚ್ಛನ್ಮನಸಾ ತದಾ ।
ಸ ಸದ್ಮ ಋಷಿರಾತ್ಮಾನಂ ಪ್ರವಕ್ಷ್ಯನ್ ರಥವೀತಯೇ ॥
.... .... .... .... .... .... .... ....
ಆದಾಯ ಕನ್ಯಾಂ ತಾಂ ದಾರ್ಭ್ಯ ಉಪೇಯಾಯಾರ್ಚನಾನಸಂ ।
ಪಾದೌ ತಸ್ಯೋಪಸಂಗೃಹ್ಯ ಸ್ಥಿತ್ವಾ ಪ್ರಹ್ವಃ ಕೃತಾಂಜಲಿಃ ॥
ರಥವೀತಿರಹಂ ದಾರ್ಭ್ಯ ಇತಿ ನಾಮ ಶಶಂಸ ಚ ।
ಮಯಾ ಸಂಗತಿಮಿಚ್ಛಂತಂ ತ್ವಾಂ ಪ್ರತ್ಯಾಚಕ್ಷಿ ಯತ್ಪುರಾ ॥
ತತ್ ಕ್ಷಮಸ್ವ ನಮಸ್ತೇಽಸ್ತು ಮಾ ಚ ಮೇ ಭಗವನ್ಕ್ರುಧಃ ।
ಋಷೇಃ ಪುತ್ರಃ ಸ್ವಯಮೃಷಿಃ ಪಿತಾಸಿ ಭಗವನ್ನೃಷೇಃ ॥
ಹಂತ ಪ್ರತಿಗೃಹಾಣೇಮಾಂ ಸ್ನುಷಾಮಿತ್ಯೇವಮಬ್ರವೀತ್ ।
ಪಾದ್ಯಾರ್ಘ್ಯಮಧುಪರ್ಕೈಶ್ಚ ಪೂಜಯಿತ್ವಾ ಸ್ವಯಂ ನೃಪಃ ॥
ಶುಕ್ಲಮಶ್ವಶತಂ ದತ್ವಾ ಅನುಜಜ್ಞೇ ಗೃಹಾನ್ಪ್ರತಿ ।
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥
ಷಡ್ಭಿಃ ಸನದಿತಿ ಸ್ತುತ್ವಾ ಜಗಾಮರ್ಷಿರಪಿ ಕ್ಷಯಂ ।

(ಬೃ. ದೇ. ೫–೫೦ ರಿಂದ ೮೦)

ರಥವೀತಿದಾರ್ಭ್ಯನೆಂಬ ರಾಜರ್ಷಿಯು ಯಾಗಮಾಡಲುದ್ದೇಶಿಸಿ ಅತ್ರಿಋಷಿಯಲ್ಲಿಗೆ ಹೋಗಿ ಆತನನ್ನು ಪೂಜಿಸಿ ಅವನ ಪುತ್ರನಾದ ಅರ್ಚನಾನಸನನ್ನು ತನ್ನ ಯಜ್ಞಕ್ಕೆ ಪೌರೋಹಿತ್ಯವನ್ನು ಸ್ವೀಕರಿಸಿ ತನಗೆ ಯಜ್ಞಮಾಡುವುದಕ್ಕೆ ಸಹಾಯಮಾಡಬೇಕೆಂದು ಪ್ರಾರ್ಥಿಸಿದನು. ಅವನು ಅದಕ್ಕೆ ಒಪ್ಪಿಕೊಂಡು ತನ್ನ ಪುತ್ರನಾದ ಶ್ಯಾವಾಶ್ವನೊಡನೆ ರಾಜನ ಗೃಹಕ್ಕೆ ಯಜ್ಞಕಾರ್ಯಕ್ಕಾಗಿ ಹೋದನು ಮತ್ತು ಯಜ್ಞವನ್ನು ನೆರವೇರಿಸಿದನು. ಯಾಗಮಾಡತಕ್ಕ

ಕಾಲದಲ್ಲಿ ಅರ್ಚನಾನಸನು ದೊರೆಯ ಮಗಳನ್ನು ನೋಡಿ ಆಕರ್ಷಿತನಾಗಿ ಅವಳನ್ನು ಶ್ಯಾವಾಶ್ವನಿಗೆ ಮದುವೆಮಾಡಿ ಕೊಳ್ಳಬೇಕೆಂದು ಆಸೆಪಟ್ಟನು. ಶ್ಯಾವಾಶ್ವನೂ ಸಹ ಅವಳಲ್ಲಿ ಮೋಹಗೊಂಡನು. ಆಗ ತಂದೆಮಕ್ಕಳಿಬ್ಬರೂ ರಾಜನಿಗೆ ತಮ್ಮ ಆಸೆಯನ್ನು ತಿಳಿಸಲು ಅವನೂ ಸಹ ಆ ಸಂಬಂಧಕ್ಕೆ ಒಪ್ಪಿ ತನ್ನ ಪತ್ನಿಯನ್ನು ಕೇಳಿ ಅನಂತರ ಉತ್ತರವನ್ನು ಕೊಡುವೆನೆಂದು ಹೇಳಲು ಅವನ ಪತ್ನಿಯು ಅದಕ್ಕೊಪ್ಪಲಿಲ್ಲ. ಶ್ಯಾವಾಶ್ವನು ಋಷಿಯಲ್ಲವೆಂದೂ, ಋಷಿಸಂತತಿಯಲ್ಲಿ ಹುಟ್ಟದ ತಮ್ಮ ಪುತ್ರಿಯನ್ನು ಅನೃಷಿಗೆ ಕೊಡಲು ಸಮ್ಮತಿಯಿಲ್ಲವೆಂದೂ ಅವಳು ತಿಳಿಸಿಬಿಟ್ಟಳು. ಅದೇ ರೀತಿಯಲ್ಲಿ ದೊರೆಯೂ ಸಹ ತಂದೆಮಕ್ಕಳಿಬ್ಬರಿಗೂ ಉತ್ತರವನ್ನು ಕೊಟ್ಟನಂತರ ಅವರು ತಮ್ಮ ಊರಿಗೆ ಹಿಂತಿರುಗಿದರು. ಆದರೆ ಶ್ಯಾವಾಶ್ವನು ಮಾತ್ರ ರಾಜಕನ್ಯೆಯಲ್ಲಿಯೇ ನೆಟ್ಟಮನಸ್ಸುಳ್ಳವನಾದನು. ಹಿಂತಿರುಗುವಾಗ ದಾರಿಯಲ್ಲಿ ಶಶೀಯಸ ನನ್ನೂ, ತರಂತನನ್ನೂ, ಮತ್ತು ರಾಜನಾದ ಪುರುಮೀಳ್ಹನನ್ನೂ ಸಂಧಿಸಿದರು. ತರಂತ ಮತ್ತು ಪುರುಮೀಳ್ಹ ಇವರಿಬ್ಬರೂ ಸಹ ವಿದದಶ್ವನೆಂಬ ರಾಜನ ಪುತ್ರರೂ ಸ್ವಯಂಋಷಿಗಳೂ ಆಗಿದ್ದರು. ಇವರಿಬ್ಬರೂ ಸಹ ಆಗಂತುಕ ರಾದ ತಂದೆಮಕ್ಕಳಿಬ್ಬರಿಗೂ ನಮಸ್ಕರಿಸಿ ಅವರನ್ನು ಸತ್ಕರಿಸಿ ಪೂಜಿಸಿದರು. ಆಗ ಅಂತಃಪುರದ ಸ್ತ್ರೀಯರೂ ಸಹ ಇವರನ್ನು ಗವಾಶ್ವಾದಿದಾನಗಳಿಂದ ಸತ್ಕರಿಸಿದರು. ಶ್ಯಾವಾಶ್ವನು ಮಾತ್ರ ತನಗೆ ಸುಂದರಸ್ತ್ರೀಯು ಲಭಿಸಲಿಲ್ಲವಲ್ಲ ಎಂದು ಕೊರಗುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಮರುತ್ತುಗಳ ಸಂಘವನ್ನು ಸಂಧಿಸಿದನು. ಆಗ ಅವರು ರುದ್ರ ಪುತ್ರರೂ, ದೈವಾಂಶರೂ ಆದ ಮರುತ್ತುಗಳೆಂದು ತಿಳಿದು ಅವರನ್ನು ಸ್ತುತಿಸಿದನು. ಕೇ ಷ್ಠಾ ನರಃ (೫-೬-೧) ಎಂಬ ಸೂಕ್ತದ ದ್ರಷ್ಟೃವಾದನು. ಇದನ್ನು ತಿಳಿದ ದರ್ಭನ ಮಗನಾದ ರಥವೀತಿಯು ತನ್ನ ಪುತ್ರಿಯನ್ನು ಕರೆದು ಕೊಂಡುಬಂದು ತಾನು ಹಿಂದೆ ತನ್ನ ಮಗಳನ್ನು ಕೊಡಲು ನಿರಾಕರಿಸಿದುದನ್ನು ಕ್ಷಮಿಸಬೇಕೆಂದೂ, ಈಗ ಶ್ಯಾವಾಶ್ವನು ಋಷಿಯಾದುದರಿಂದಲೂ ತನ್ನ ಮಗಳನ್ನು ಪರಿಗ್ರಹಿಸಲು ಅರ್ಹನಾದುದರಿಂದಲೂ ಅವಳನ್ನು ಸ್ವೀಕರಿಸಬೇಕೆಂದೂ ಪ್ರಾರ್ಥಿಸಿದನು. ಶ್ಯಾವಾಶ್ವನೂ ಅವನ ತಂದೆಯೂ ಇದಕ್ಕೆ ಒಪ್ಪಲು ಆಗ ಅರ್ಘ್ಯಪಾದ್ಯಾದಿಗಳ ಪೂರ್ವಕವಾಗಿ ಕನ್ಯಾದಾನವನ್ನು ಮಾಡಿದನು. ಆಗ ಶ್ಯಾವಾಶ್ವನು ಪುರುಮೀಳ್ಹಾದಿಗಳು ತನಗೆ ಮಾಡಿದ ಸಹಾಯಕ್ಕಾಗಿ ಅವರನ್ನು ವಂದಿಸಿ ಅವರನ್ನು ಸ್ತುತಿಸತಕ್ಕ ಆರು ಋಕ್ಕುಗಳನ್ನು ರಚಿಸಿದನು. ಅವುಗಳಲ್ಲಿ,

> ಉತ ಮೇಽರಪದ್ಯುವತಿರ್ಮಮಂದುಷೀ ಪ್ರತಿ ಶ್ಯಾವಾಯ ವರ್ತನಿಂ ।
> ವಿ ರೋಹಿತಾ ಪುರುಮೀಳ್ಹಾಯ ಯೇಮತುರ್ವಿಪ್ರಾಯ ದೀರ್ಘಯಶಸೇ ॥

(ಋ. ಸಂ. ೫-೬೧-೯)

ಎಂಬ ಋಕ್ಕು ಪುರುಮೀಳ್ಹನನ್ನು ಸ್ತುತಿಸತಕ್ಕದ್ದು.

> ಯುವಾಂ ಗೋತಮಃ ಪುರುಮೀಳ್ಹೋ ಅತ್ರಿರ್ದಸ್ರಾ ಹವತೇಽವಸೇ ಹವಿಷ್ಮಾನ್ ।
> ದಿಶಂ ನ ದಿಷ್ಟಾಮೃಜೂಯೇವ ಯಂತಾ ಮೇ ಹವಂ ನಾಸತ್ಯೋಪ ಯಾತಂ ॥

(ಋ ಸಂ. ೧-೧೮೩-೫)

ಎಂಬ ಋಕ್ಕಿನಲ್ಲಿ ಪುರುಮೀಳ್ಹನು ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರ ರಕ್ಷಣೆಯನ್ನು ಪಡೆದನೆಂದು ತಿಳಿಸಿದೆ. ಇದೇ ಕಥೆಯನ್ನು ಸಾಯಣರು ಕೊಂಚ ವ್ಯತ್ಯಾಸಮಾಡಿ ಈ ರೀತಿ ತಿಳಿಸಿದ್ದಾರೆ.

> ಅತ್ರಾಶ್ಚರ್ಯಂ ಪುರಾವೃತ್ತಮಾಹುರಾಗಮಪಾರಗಾಃ ।
> ಅರ್ಚನಾನಾಃ ಪುರಾತ್ರೇಯೋ ದಾರ್ಭ್ಯೇಣ ರಥವೀತಿನಾ ॥

ಆರ್ತ್ವಿಜ್ಯಾಯ ವೃತೋ ಯಜ್ಞೇ ವಿತತೇ ಹೌತ್ರ ಆಸ್ಥಿತಃ ।
ರಥವೀತಿಸುತಾಂ ಕನ್ಯಾಂ ದದರ್ಶ ಪಿತುರಂತಿಕೇ ॥
ಯಯಾಚೇ ಸ್ವಕುಮಾರಾಯ ಶ್ಯಾವಾಶ್ವಾಯ ಚ ತಾಂ ಸುತಾಂ ।
ಸ ಪ್ರದಾನಮನಾ ಭಾರ್ಯಾಮಪೃಚ್ಛತ್ಕಿಂ ಪ್ರಯಚ್ಛಸಿ ॥
ಇತಿ ಪೃಷ್ಟಾ ಪುನಃ ಪ್ರಾಹ ಕಥಮಸ್ಮೈ ಪ್ರದಾಸ್ಯಸಿ ।
ಇತಃ ಪೂರ್ವಂ ಸುತಾ ದತ್ತಾ ನಾಸೀದನೃಷಯೇ ಕ್ವಚಿತ್ ॥
ತತ್ರ ಥೈವೇತಿ ನಿಶ್ಚಿತ್ಯ ಪ್ರತ್ಯಾಚಷ್ಟಾರ್ಚನಾನಸಂ ।
ಶ್ಯಾವಾಶ್ವಃ ಸಂಸ್ಥಿತೇ ಯಜ್ಞೇ ತೇನ ರಾಜ್ಞಾ ನಿರಾಕೃತಃ ॥
ತತ್ಪ್ರತ್ಯಾಖ್ಯಾನ್ವಿತೋ ವಿಪ್ರಸ್ತಪಸ್ತೇಪೇ ಸುದಾರುಣಂ ।
ಬ್ರಹ್ಮಚರ್ಯರತಃ ಶಾಂತೋ ಭಿಕ್ಷಾರ್ಥಂ ಪರ್ಯಟನ್ ದ್ವಿಜಃ ॥
ತರಂತಮಹಿಷೀಂ ಸಾಧ್ವೀಂ ಬಿಭಿಕ್ಷೇಽಸೌ ಶಶೀಯಸೀಂ ।
ಸಾ ಸಂಪ್ರಾಪ್ಯಾಂತಿಕೇ ಪತ್ಯುಃ ಪ್ರೋವಾಚಾಗತವಾನೃಷಿಃ ॥
ಇತ್ಯುಕ್ತೋ ನೃಪತಿರ್ಭಾರ್ಯಾಂ ಪ್ರತ್ಯಾಹೈನಂ ಪ್ರಪೂಜಯ ।
ಸಾನುಜ್ಞಾತಾ ಗವಾಂ ಯೂಥಂ ಪ್ರಾದಾದಾಭರಣಾನಿ ಚ ॥
ತರಂತೋಽಪಿ ಪುನಸ್ತಸ್ಮೈ ಪ್ರಾದಾದ್ಧನಮಪೇಕ್ಷಿತಂ ।
ದತ್ವಾ ಚ ಪುರುಮೀಳ್ಹಸ್ಯ ಸ್ವಾನುಜಸ್ಯಾಂತಿಕಂ ಪ್ರತಿ ॥
ಪ್ರೇರಯಾಮಾಸ ತಮೃಷಿಂ ಸೋಽಪಿ ತ್ವಾಂ ಮಾನಯಿಷ್ಯತಿ ।
ತಥೇತಿ ರಾಜ್ಞೋ ವಚನಂ ನಿಶಮ್ಯ ತದ್ಭಾರ್ಯಯಾ ದರ್ಶಿತಸರ್ವಮಾರ್ಗಃ ॥
ಗಚ್ಛನ್ ಶನೈರರ್ಧಪಥೇ ಮರುದ್ಗಣಾನ್ ಸಮಾನರೂಪಾನ್ ಸ್ವದಿದೃಕ್ಷಯಾಗತಾನ್ ।
ವಿಲೋಕ್ಯ ವಿಪ್ರಃ ಸಭಯಃ ಪ್ರಣಮ್ಯ ಕೃತಾಂಜಲಿಃ ಕಂಟಕಿತಾಂಗಸಂಘಃ ॥
ತುಷ್ಟಾವ ಹೃಷ್ಟಾನ್ ಮರುತೋ ವಿಶಿಷ್ಟೈರರ್ಥೈರ್ವಚೋಭಿಃ ಪರಿತುಷ್ಟಚಿತ್ತಃ ।
ಸಂಪ್ರಾಪ್ಯ ಸರ್ವಂ ಸ್ವಮನೀಷಿತಂ ತದಾ ಮರುದ್ಗಣೇಭ್ಯೋ ಮುದಿತಾತ್ಮವದ್ಭ್ಯಃ ॥
ತದಾಭವದೃಷಿಃ ಸೂಕ್ತದ್ರಷ್ಟಾ ಶ್ಯಾವಾಶ್ವನಾಮಕಃ ।
ಪಶ್ಚಾತ್ಪುನರ್ಗೃಹಂ ಗತ್ವಾ ಭೂಯೋ ಲಬ್ಧ್ವಾ ಗವಾಂ ಶತಂ ॥
ದಾರ್ಭ್ಯೋ ಮಂತ್ರದೃಶೇ ರಾಜ್ಞಾ ಚೋದಿತಃ ಸ್ವಸುತಾಂ ದದೌ ।
ಪುರುಮೀಳ್ಹಸ್ತರಂತಶ್ಚ ತದ್ಭಾರ್ಯಾ ಚ ಶಶೀಯಸೀ ॥
ದಾರ್ಭ್ಯೋ ಯೋ ರಥವೀತ್ಯಾಖ್ಯಃ ಸಪ್ತ ಯೇ ಮರುತಾಂ ಗಣಾಃ ।
ತೇ ತಸ್ಮೈ ಯದ್ದದುಸ್ತುಷ್ಟಾಸ್ತತ್ಕೇ ಷ್ಠೇತ್ಯತ್ರ ವರ್ಣ್ಯತೇ ॥

(೫ ನೇ ಮಂಡಲದ ೬೧ ನೇ ಸೂಕ್ತದ ಸಾಯಣಭಾಷ್ಯದ ಪೂರ್ವಪೀಠಿಕೆ)

ಬೃಹದ್ದೇವತೆಯಲ್ಲಿ ಹೇಳಿರುವಂತೆಯೇ ಇಲ್ಲಿಯೂ ಕಥಾವಿವರಣೆಯಿದ್ದರೂ ಸಹ ಶ್ಯಾವಾಶ್ವನು ತರಂತನ ಪತ್ನಿಯ ಹತ್ತಿರ ಭಿಕ್ಷಾಟನೆಗೆ ಹೋದನೆಂಬುದು ವಿಶೇಷವಿಷಯ. ಈ ಕಥೆಯು ಮುಖ್ಯವಾಗಿ ಶ್ಯಾವಾಶ್ವನ ವಿಷಯವನ್ನು

ಹೇಳಿದರೂ ಸಹ ಪುರುಮೀಳ್ಹನಿಂದ ಶ್ಯಾವಾಶ್ವನಿಗೆ ಆದ ಸಹಾಯವನ್ನು ತಿಳಿಸಿ ಅವನ ಇಷ್ಟಾರ್ಥವು ಈ ಸಹಾಯದಿಂದ ಕೂಡಿದುದರಿಂದ ಪುರುಮೀಳ್ಹನ ಮಹಿಮೆಯನ್ನೂ ಸ್ತುತಿಸಿದ ಸಂದರ್ಭವಾಗಿದೆ. ಈ ಸೂಕ್ತದಲ್ಲಿ (ಋ. ಸಂ. ೫-೬೧) ಶ್ಯಾವಾಶ್ವನು ಪುರುಮೀಳ್ಹನನ್ನು ಸ್ತುತಿಸುವ ಋಕ್ಕನ್ನು ಮೇಲೆ ಉದಹರಿಸಿದೆ.

॥ ಸಾಯಣಭಾಷ್ಯಂ ॥

ಕ ಉ ಶ್ರವದಿತಿ ಸಪ್ತರ್ಚಮೇಕಾದಶಂ ಸೂಕ್ತಂ । ಸುಹೋತ್ರಪುತ್ರೌ ಪುರುಮೀಹ್ಳಾಜಮೀಹ್ಳಾವೃಷೀ । ತ್ರಿಷ್ಟುಪ್ ಛಂದಃ । ಅಶ್ವಿನೌ ದೇವತಾ । ಅತ್ರಾನುಕ್ರಮಣಿಕಾ । ಕ ಉ ಶ್ರವತ್ಸಪ್ತ ಪುರುಮೀಹ್ಳಾಜಮೀಹ್ಳೌ ಸೌಹೋತ್ರಾ ತ್ವಾಶ್ವಿನಂ ಹಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾಶ್ವಿನೇ೭ಕ್ರತೌ ತ್ರೈಷ್ಟುಭೇ ಛಂದಸೀದಮಾದಿಕೇ ದ್ವೇ ಸೂಕ್ತೇ । ಧೇನುಃ ಪ್ರತ್ನಸ್ಯ ಕ ಉ ಶ್ರವತ್ । ಆ. ೪-೧೫ । ಇತಿ ಸೂತ್ರಿತತ್ವಾತ್ ॥

ಅನುವಾದವು—ಕ ಉ ಶ್ರವತ್ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು ಈ ಸೂಕ್ತಕ್ಕೆ ಸುಹೋತ್ರಪುತ್ರರಾದ ಪುರುಮೀಳ್ಹ ಮತ್ತು ಅಜಮೀಳ್ಹ ಎಂಬುವರು ಋಷಿಗಳು; ಅಶ್ವಿನೀದೇವತೆಗಳು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಕ ಉ ಶ್ರವತ್ಸಪ್ತ ಪುರುಮೀಳ್ಹಾಜಮೀಳ್ಹೌ ಸೌಹೋತ್ರಾ ತ್ವಾಶ್ವಿನಂ ಹಿ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಧೇನುಃ ಪ್ರತ್ನಸ್ಯ ಕ ಉ ಶ್ರವತ್ ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

## ಸೂಕ್ತ—೪೩

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೪೩ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ— ೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿ—ಪುರುಮೀಳ್ಹಾಜಮೀಳ್ಹೌ ಸೌಹೋತ್ರಾ ॥
ದೇವತಾ—ಅಶ್ವಿನೌ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕ ಉ ಶ್ರವತ್ಕತಮೋ ಯಜ್ಞಿಯಾನಾಂ ವಂದಾರು ದೇವಃ ಕತಮೋ ಜುಷಾತೇ ॥
ಕಸ್ಯೇಮಾಂ ದೇವೀಮಮೃತೇಷು ಪ್ರೇಷ್ಠಾಂ ಹೃದಿ ಶ್ರೇಷಾಮ ಸುಷ್ಟುತಿಂ ಸುಹವ್ಯಾಂ ॥ ೧ ॥

॥ ಪದಪಾಠಃ ॥

ಕಃ । ಊಂ ಇತಿ । ಶ್ರವತ್ । ಕತಮಃ । ಯಜ್ಞಿಯಾನಾಂ । ವಂದಾರು । ದೇವಃ । ಕತಮಃ । ಜುಷಾತೇ । ಕಸ್ಯ । ಇಮಾಂ । ದೇವೀಂ । ಅಮೃತೇಷು । ಪ್ರೇಷ್ಠಾಂ । ಹೃದಿ । ಶ್ರೇಷಾಮ । ಸುಽಸ್ತುತಿಂ । ಸುಽಹವ್ಯಾಂ ॥ ೧ ॥

॥ ಸಾಯಣಭಾಷ್ಯಂ ॥

ಯಜ್ಞಿಯಾನಾಂ ಯಜ್ಞಾರ್ಹಾಣಾಂ ದೇವಾನಾಂ ಮಧ್ಯೇ ಕ ಉ ದೇವಃ ಶ್ರವತ್। ಶೃಣುಯಾತ್ಸ್ತುತಿಂ । ಕತಮೋ ದೇವೋ ವಂದಾರು ವಂದನಶೀಲಂ ಸ್ತೋತ್ರಂ । ಕತಮೋ ದೇವೋ ಜುಷಾತೇ । ಸೇವತೇ । ಕಸ್ಯ ಹೃದೀಮಾಂ ಪ್ರೇಷ್ಠಾಂ ಪ್ರಿಯತರಾಂ ದೇವೀಂ ದ್ಯೋತಮಾನಾಂ ಸುಹವ್ಯಾಂ ಶೋಭನಾನ್ನೋಪೇತಾಂ ಶೋಭನೈರ್ಹವಿರ್ಭಿರ್ಯುಕ್ತಾಂ ವಾ ಸುಷ್ಟುತಿಮಮೃತೇಷು ಮಧ್ಯೇ ಶ್ರೇಷಾಮ। ಶ್ಲೇಷಯೇಮ ಶ್ರಾವಯೇಮ ವಾ । ಅಶ್ವಿನಾವಂತರೇಣ ಸ್ತುತೇಃ ಕೋ ದೇವಃ ಸ್ವಾಮೀ ಭವೇದಿತಿ ॥

॥ ಪ್ರತಿಪದಾರ್ಥ ॥

ಯಜ್ಞಿಯಾನಾಂ—ಯಜ್ಞಾರ್ಹರಾದ ದೇವತೆಗಳ ನಡುವೆ । ಕ ಉ ದೇವಃ—ಯಾವ ದೇವನು ಶ್ರವತ್—ನಮ್ಮ ಸ್ತುತಿಯನ್ನು ಕೇಳುತ್ತಾನೆ । ಕತಮಃ—ಯಾವ ದೇವನು । ವಂದಾರು—ವಂದನಪೂರ್ವಕವಾದ ಸ್ತುತಿಯನ್ನು ಕೇಳುವನು । ಕತಮಃ—ಅವರಲ್ಲಿ ಯಾರು । ಜುಷಾತೇ—ನಮ್ಮ ಸ್ತುತಿಯನ್ನು ಸೇವಿಸುವನು ॥ ಅಮೃತೇಷು—ಮರಣರಹಿತರಾದ ದೇವತೆಗಳ ಮಧ್ಯೆ । ಕಸ್ಯ ಹೃದಿ—ಯಾವ ದೇವತೆಯ ಹೃದಯದಲ್ಲಿ । ಪ್ರೇಷ್ಠಾಂ—ಅತ್ಯಂತ ಪ್ರೀತಿಕಾರಕವಾದುದೂ । ದೇವೀಂ—ಪ್ರಕಾಶಮಾನವಾದುದೂ । ಸುಹವ್ಯಾಂ—ಶ್ರೇಷ್ಠವಾದ ಹವಿಸ್ಸಿನಿಂದ ಯುಕ್ತವಾದುದೂ ಆದ । ಇಮಾಂ ಸುಷ್ಟುತಿಂ — ಈ ಉತ್ತಮಸ್ತುತಿಯನ್ನು । ಶ್ರೇಷಾಮ—ಅರ್ಪಿಸೋಣ.

॥ ಭಾವಾರ್ಥ ॥

ಯಜ್ಞಾರ್ಹರಾದ ದೇವತೆಗಳ ನಡುವೆ ಯಾವ ದೇವನು ನಮ್ಮ ಸ್ತುತಿಯನ್ನು ಕೇಳುತ್ತಾನೆ ? ಯಾವ ದೇವನು ವಂದನಪೂರ್ವಕವಾದ ಸ್ತುತಿಯನ್ನು ಕೇಳುವನು ? ಅವರಲ್ಲಿ ನಮ್ಮ ಸ್ತುತಿಯನ್ನು ಯಾರು ಸೇವಿಸುತ್ತಾರೆ? ಮರಣರಹಿತರಾದ ದೇವತೆಗಳ ನಡುವೆ ಯಾರ ಹೃದಯದಲ್ಲಿ ಅತ್ಯಂತ ಪ್ರೀತಿಕಾರಕವಾದುದೂ, ಪ್ರಕಾಶಮಾನವಾದುದೂ, ಶ್ರೇಷ್ಠವಾದ ಹವಿಸ್ಸಿನಿಂದ ಯುಕ್ತವಾದುದೂ ಆದ ಉತ್ತಮ ಸ್ತುತಿಯನ್ನು ಅರ್ಪಿಸೋಣ.

## English Translation.

Which of those who are entitled to sacrifice will listen (to our prayers)? which of the gods will hear our praise? which will be propitiated (by it)? upon the heart of whom among the immortals may we impress the devout affectionate adoration, accompanied by sacred oblations?

॥ ಸಂಹಿತಾಪಾಠಃ ॥

ಕೋ ಮೃಳಾತಿ ಕತಮ ಆಗಮಿಷ್ಠೋ ದೇವಾನಾಮು ಕತಮಃ ಶಂಭವಿಷ್ಠಃ।
ರಥಂ ಕಮಾಹುರ್ದ್ರವದಶ್ವಮಾಶುಂ ಯಂ ಸೂರ್ಯಸ್ಯ ದುಹಿತಾವೃಣೀತ॥

॥ ಪದಪಾಠಃ ॥

ಕಃ । ಮೃಳಾತಿ । ಕತಮಃ । ಆऽಗಮಿಷ್ಠಃ । ದೇವಾನಾಂ । ಊಂ ಇತಿ । ಕತಮಃ । ಶಂऽಭವಿಷ್ಠಃ ।
ರಥಂ । ಕಂ । ಆಹುಃ । ದ್ರವತ್ऽಅಶ್ವಂ । ಆಶುಂ । ಯಂ । ಸೂರ್ಯಸ್ಯ । ದುಹಿತಾ । ಅವೃಣೀತ ॥೨॥

॥ ಸಾಯಣಭಾಷ್ಯಂ ॥

ಕೋ ಮೃಳಾತಿ । ಕೋ ದೇವೋ ಮೃಡಾತಿ । ಸುಖಯೇದಸ್ಮಾನ್ । ಕತಮೋ ದೇವ ಆಗಮಿಷ್ಠ ಆಗಂತೃತಮೋऽಸ್ಮದ್ಯಜ್ಞಂ ಪ್ರತಿ । ದೇವಾನಾಮು ದೇವಾನಾಂ ಮಧ್ಯೇ ಕತಮೋ ದೇವಃ ಶಂಭವಿಷ್ಠಃ ಸುಖಸ್ಯ ಭಾವಯಿತೃತಮಃ । ಏವಮುಕ್ತಗುಣವಿಶಿಷ್ಟಃ ಕೋ ಭವೇತ್ ಅಶ್ವಿನಾವಂತರೇಣೇತಿ ಭಾವಃ । ಕಂ ರಥಂ ದ್ರವದಶ್ವಮಾಶುಮಾಹುಃ । ಬ್ರುವತೇ । ಯಂ ರಥಂ ಸೂರ್ಯಸ್ಯ ದುಹಿತಾ ಸೂರ್ಯಸ್ಯ ಪತ್ನ್ಯವೃಣೀತ । ಸಮಭಜತ್ । ತಂ ಕಂ ರಥಂ ವೇಗವಂತಮಾಹುಃ ॥

॥ ಪ್ರತಿಪದಾರ್ಥ ॥

ದೇವಾನಾಂ—ದೇವತೆಗಳ ನಡುವೆ । ಕಃ—ಯಾವ ದೇವನು । ಮೃಳಾತಿ—(ನಮ್ಮನ್ನು) ಸುಖಪಡಿಸುತ್ತಾನೆ । ಕತಮಃ—ಯಾವ ದೇವನು । ಆಗಮಿಷ್ಠಃ—ನಮ್ಮ ಯಜ್ಞಕ್ಕೆ ಬರಲು ಅತ್ಯಂತ ಉತ್ಸಾಹಯುತನಾಗಿದ್ದಾನೆ । ಕತಮಃ—ಅವರಲ್ಲಿ ಯಾರು । ಶಂಭವಿಷ್ಠಃ—ಕಲ್ಯಾಣವನ್ನುಂಟುಮಾಡುವವರು । ಯಂ—ಯಾವ ರಥವನ್ನು । ಸೂರ್ಯಸ್ಯ ದುಹಿತಾ—ಸೂರ್ಯಪತ್ನಿಯು । ಅವೃಣೀತ—ಆರಿಸಿಕೊಂಡಳೋ (ಅಂತಹ) । ಕಂ ರಥಂ—ಯಾವ ರಥವನ್ನು ತಾನೇ । ದ್ರವದಶ್ವಂ—ವೇಗವಾಗಿ ಓಡುವ ಅಶ್ವವುಳ್ಳದ್ದೂ । ಆಶುಂ—ವೇಗಗಾಮಿಯಾದದ್ದು ಎಂದೂ । ಆಹುಃ—ಕರೆಯುತ್ತಾರೆ.

॥ ಭಾವಾರ್ಥ ॥

ದೇವತೆಗಳ ನಡುವೆ (ಅಶ್ವಿನೀದೇವತೆಗಳಲ್ಲದೇ, ಉಳಿದ) ಯಾವ ದೇವನು ತಾನೇ ನಮ್ಮನ್ನು ಸುಖಪಡಿಸುತ್ತಾನೆ? ಯಾವ ದೇವನು ನಮ್ಮ ಯಜ್ಞಕ್ಕೆ ಬರಲು ಅತ್ಯಂತ ಉತ್ಸಾಹಯುತನಾಗಿದ್ದಾನೆ? ಅವರಲ್ಲಿ ನಮಗೆ ಕಲ್ಯಾಣವನ್ನುಂಟುಮಾಡುವವರಾರು? ಸೂರ್ಯಪತ್ನಿಯು ಆರಿಸಿಕೊಂಡ ಯಾವ ದೇವನ ರಥವನ್ನು ತಾನೇ, ವೇಗವಾಗಿ ಓಡುವ ಅಶ್ವಗಳುಳ್ಳದ್ದು ಎಂದೂ ಮತ್ತು ವೇಗಗಾಮಿಯಾದದ್ದು ಎಂದೂ ಕರೆಯುತ್ತಾರೆ.?

## English Translation.

Who will make us happy? which of the gods is the most prompt to come to our sacrifice? which the most willing to grant us felicity? what chariot do they say is quick and drawn by rapid steeds? that which the daughter of Surya selected.



॥ ಸಂಹಿತಾಪಾಠಃ ॥

ಮ॒ಕ್ಷೂ ಹಿ ಷ್ಮಾ॒ ಗಚ್ಛ॑ಥ॒ ಈವ॑ತೋ॒ ದ್ಯೂನಿಂದ್ರೋ॒ ನ ಶ॒ಕ್ತಿಂ ಪರಿ॑ತಕ್ಮ್ಯ-
ಯಾಂ ।
ದಿ॒ವ ಆಜಾ॑ತಾ ದಿ॒ವ್ಯಾ ಸು॑ಪ॒ರ್ಣಾ ಕಯಾ॒ ಶಚೀ॑ನಾಂ ಭವ॒ಥಃ ಶಚಿ॑ಷ್ಠಾ ॥೩॥

॥ ಪದಪಾಠಃ ॥

ಮ॒ಕ್ಷು । ಹಿ । ಸ್ಮ॒ । ಗಚ್ಛ॑ಥಃ । ಈವ॑ತಃ । ದ್ಯೂನ್ । ಇಂದ್ರ॑ಃ । ನ । ಶ॒ಕ್ತಿಂ । ಪರಿ॑ಽತಕ್ಮ್ಯಯಾಂ ।
ದಿ॒ವಃ । ಆಽಜಾ॑ತಾ । ದಿ॒ವ್ಯಾ । ಸು॒ಽಪ॒ರ್ಣಾ । ಕಯಾ॑ । ಶಚೀ॑ನಾಂ । ಭ॒ವ॒ಥಃ । ಶಚಿ॑ಷ್ಠಾ ॥ ೩ ॥

॥ ಸಾಯಣಭಾಷ್ಯಂ ॥

ಮಕ್ಷು ಶೀಘ್ರಂ । ಹಿ ಸ್ಮೇತಿ ಪೂರಣೌ । ಈವತೋ ಗಮನವತ ಆಗಾಮಿನೋ ದ್ಯೂನ್ದಿವಸಾನ್ ಸುತ್ಯಾಸಂಬಂಧಿನಃ ಪ್ರತಿ ಗಚ್ಛಥಃ । ಇಂದ್ರಃ ಶಕ್ತಿಂ ನ ಸ್ವಕೀಯಾಂ ಶಕ್ತಿಂ ಯಥಾ ಪರಿತಕ್ಮ್ಯಯಾಂ ರಾತ್ರಾವತೀತಾಯಾಂ । ಪ್ರದರ್ಶಯತೀತಿ ಶೇಷಃ । ಸುತ್ಯಾಹಸ್ಯುಷಃಕಾಲ ಇಂದ್ರೋ ಯಥಾ ಗಚ್ಛತಿ ತದ್ವದ್ಯುವಾಮಪಿ ಗಚ್ಛತಮಿತ್ಯರ್ಥಃ। ದಿವೋ ದ್ಯುಲೋಕಾದಾಜಾತಾಗತೌ ದಿವ್ಯಾ ದಿವಿ ಭವೌ ಸುಪರ್ಣಾ ಶೋಭನಗಮನೌ ಯುವಾಂ ಶಚೀನಾಂ ಯುಷ್ಮತ್ಸಂಬಂಧಿನಾಂ ಕರ್ಮಣಾಂ ಶಕ್ತೀನಾಂ ವಾ ಮಧ್ಯೇ ಕಯಾ ಶಚ್ಯಾ ಶಚಿಷ್ಠಾ ಶಕ್ತಿಮತ್ತರೌ ಶೋಭನಕರ್ಮವಂತೌ ವಾ ಭವಥಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ಪರಿತಕ್ಮ್ಯಯಾಂ-ರಾತ್ರಿಯ ಕೊನೆಯ ಘಳಿಗೆಯಲ್ಲಿ। ಇಂದ್ರಃ-ಇಂದ್ರನು ಶಕ್ತಿಂ ನ—ತನ್ನ ಶಕ್ತಿಯನ್ನು ಪ್ರಕಟಿಸುವಂತೆ (ನೀವೂ ಸಹ) । ಮಕ್ಷು—ಶೀಘ್ರವಾಗಿ । ಈವತಃ—ಆಗಾಮಿಗಳಾದ । ದ್ಯೂನ್—ದಿವಸಗಳಲ್ಲಿ । ಗಚ್ಛಥಃ—ಸಂಚರಿಸುತ್ತೀರಿ । ದಿವಃ—ದ್ಯುಲೋಕದಿಂದ । ಅಜಾತಾ—

ಬಂದವರೂ । ದಿವ್ಯಾ—ದೇವಾತ್ಮರೂ । ಸುಪರ್ಣಾ—ಶ್ರೇಷ್ಠವಾದ ಸಂಚಾರವುಳ್ಳವರೂ ಆದ ನೀವು । ಶಚೀನಾಂ—(ನಿಮ್ಮ) ಕರ್ಮಗಳಲ್ಲಿ । ಕಯಾ—ಯಾವ (ಉತ್ತಮವಾದ) ಕರ್ಮದಿಂದ । ಶಚಿಷ್ಠಾ—ಶೋಭನಾತ್ಮಕವಾದ ಸ್ವರೂಪವನ್ನು ಪ್ರಕಟಿಸುವವರಾಗಿ । ಭವತಃ—ಆಗಿದ್ದೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ರಾತ್ರಿಯ ಕೊನೆಯ ಗಳಿಗೆಯಲ್ಲಿ ಇಂದ್ರನು ತನ್ನ ಶಕ್ತಿಯನ್ನು ಪ್ರಕಟಿಸುವಂತೆ ನೀವೂ ಸಹ ಶೀಘ್ರವಾಗಿ ಆಗಾಮಿಗಳಾದ ದಿವಸಗಳಲ್ಲಿ ಸಂಚರಿಸುತ್ತೀರಿ. ? ದ್ಯುಲೋಕದಿಂದ ಬಂದವರೂ, ದೇವತಾತ್ಮರೂ, ಶ್ರೇಷ್ಠವಾದ ಸಂಚಾರಳವ್ಳುವರೂ ಆದ ನೀವು ನಿಮ್ಮ ಅನೇಕ ಕರ್ಮಗಳಲ್ಲಿ ಯಾವ ಉತ್ತಮವಾದ ಕ್ರಿಯೆಯಿಂದ ನಿಮ್ಮ ಶೋಭನಾತ್ಮಕವಾದ ವೈಶಿಷ್ಟ್ಯವನ್ನು ಪ್ರಕಟಿಸುವವರಾಗಿ ಆಗಿದ್ದೀರಿ ?

English Translation.

Moving, you proceed rapidly by day, as Indra, at the end of the night, (manifests his) power: descended from heaven, divine, of graceful motion, (Ashwins), by which of (your) acts are you most distinguished?

॥ ಸಂಹಿತಾಪಾಠಃ ॥

ಕಾ ವಾಂ ಭೂದುಪಮಾತಿಃ ಕಯಾ ನ ಆಶ್ವಿನಾ ಗಮಥೋ ಹೂಯಮಾನಾ।
ಕೋ ವಾಂ ಮಹಶ್ಚಿತ್ತ್ಯಜಸೋ ಅಭೀಕ ಉರುಷ್ಯತಂ ಮಾಧ್ವೀ ದಸ್ರಾ ನ ಊತೀ ॥ ೪ ॥

॥ ಪದಪಾಠಃ ॥

ಕಾ । ವಾಂ । ಭೂತ್ । ಉಪಽಮಾತಿಃ । ಕಯಾ । ನಃ । ಆ । ಅಶ್ವಿನಾ । ಗಮಥಃ । ಹೂಯಮಾನಾ ।
ಕಃ । ವಾಂ । ಮಹಃ । ಚಿತ್ । ತ್ಯಜಸಃ । ಅಭೀಕೇ । ಉರುಷ್ಯತಂ । ಮಾಧ್ವೀ ಇತಿ । ದಸ್ರಾ । ನಃ । ಊತೀ ॥ ೪ ॥

॥ ಸಾಯಣಭಾಷ್ಯಂ ॥

ವಾಂ ಯುವಯೋಃ ಕೋಪಮಾತಿಃ । ಉಪ ಸಮೀಪೇ ಮಾತಿರ್ಮಾನಂ ಗುಣಾನಾಂ ಪರಿಚ್ಛಿತ್ತಿರ್ಯಸ್ಯಾಂ ಸಾ ಸ್ತುತಿಃ ಕಾ ಭೂತ್ । ಭವೇತ್ । ಕಯಾ ಸ್ತುತ್ಯಾ ಹೂಯಮಾನಾವಾಹೂಯಮಾನಾ

ಸಂತೌ ನೋಽಸ್ಮಾನಾ ಗಮಥಃ । ಆಗಚ್ಛಥಃ । ವಾಂ ಯುವಯೋರಭೀಕೇ ಆಸನ್ನಪ್ರದೇಶೇ ಮಹಶ್ಚಿನ್ಮ-ಹತೆಸ್ತ್ಯಜಸಃ । ತ್ಯಜ್ಯತೇ ಪರಿತ್ಯಜ್ಯತೇ ಸರ್ವೈರಿತಿ ತ್ಯಜಃ ಕ್ರೋಧಃ । ತಸ್ಯ ಸೋಢಾ ಕೋ ಭವೇತ್ । ಹೇ ಮಾಧ್ವೀ ಮಧುರರಸಸ್ಯೋದಕಸ್ಯ ಸ್ರಷ್ಟಾರೌ ಹೇ ದಸ್ರಾ ಶತ್ರೂಣಾಮುಪಕ್ಷಪಯಿತಾರಾವಶ್ವಿನೌ ನೋಽಸ್ಮಾನೂತೀ ಊತ್ಯಾ ರಕ್ಷಯೋರುಷ್ಯತಂ । ರಕ್ಷಾಕರ್ಮೈತತ್ । ರಕ್ಷತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮಿಬ್ಬರ । ಉಪಮಾತಿಃ—ವೈಶಿಷ್ಟ್ಯವನ್ನು ವಿವರಿಸುವ ಸಾಧನವಾದ ಸ್ತುತಿಯು (ಅಳತೆಯು) । ಕಾ—ಯಾವುದಾಗಿ । ಭೂತ್—ಆಗಬಲ್ಲದು । ಕಯಾ—ಯಾವ ಸ್ತುತಿಯಿಂದ । ಹೂಯಮಾನಾ—ಕರೆಯಲ್ಪಟ್ಟವರಾಗಿ । ನಃ—ನಮ್ಮಲ್ಲಿಗೆ । ಆ ಗಮಥಃ—ದಯಮಾಡುತ್ತೀರಿ । ವಾಂ—ನಿಮ್ಮ । ಅಭೀಕೇ—ಸಮೀಪದಲ್ಲಿ । ಮಹಶ್ಚಿತ್—ಅತ್ಯಧಿಕವಾದ । ತ್ಯಜಸಃ—ಕೋಪಕ್ಕೆ ಪಾತ್ರನಾಗಿ । ಕಃ—ಯಾವನು ತಾನೇ ಇರಬಲ್ಲನು । ಮಾಧ್ವೀ—ಮಧುರರಸದ ಉತ್ಪಾದಕರೂ । ದಸ್ರಾ—ಶತ್ರುನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ । ನಃ—ನಮ್ಮನ್ನು । ಊತೀ—ನಿಮ್ಮ ರಕ್ಷಣೆಗಳಿಂದ । ಉರುಷ್ಯತಂ—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರ ವೈಶಿಷ್ಟ್ಯವನ್ನೂ ವಿವರಿಸುವ ಸಾಧನವಾದ ಸ್ತುತಿಯು ಯಾವುದಾಗ ಬಲ್ಲುದು ? ನೀವು ನಮ್ಮಲ್ಲಿಗೆ ಬರಲು ನಿಮ್ಮನ್ನು ಯಾವ ಸ್ತುತಿಯಿಂದ ಕರೆಯಬೇಕು ? ಯಾರು ತಾನೇ ನಿಮ್ಮ ಕೋಪಕ್ಕೆ ಪಾತ್ರರಾಗಿ ನಿಮ್ಮ ಸಮೀಪದಲ್ಲಿರಬಲ್ಲರು ? ಮಧುರರಸದ ಉತ್ಪಾದಕರೂ, ಶತ್ರುನಾಶಕರೂ, ಆದ ಎಲೈ ಅಶ್ವಿನೀದೇವತೆಗಳೇ, ನಮ್ಮನ್ನು ನಿಮ್ಮ ರಕ್ಷಣೆಗಳಿಂದ ರಕ್ಷಿಸಿರಿ.

## English Translation.

What may be the fit measure (of your merits)? Invoked by what praises do you come to us? Who (can exist as) the object of your great wrath? Dasras, dipensers of sweet (water), defend us with your protection.

॥ ಸಂಹಿತಾಪಾಠಃ ॥

ಉರು ವಾಂ ರಥಃ ಪರಿ ನಕ್ಷತಿ ದ್ಯಾಮಾ ಯತ್ಸಮುದ್ರಾದಭಿ ವರ್ತತೇ
ವಾಂ ।
ಮಧ್ವಾ ಮಾಧ್ವೀ ಮಧು ವಾಂ ಪ್ರುಷಾಯನ್ಯತ್ಸೀಂ ವಾಂ ಪೃಕ್ಷೋ
ಭುರಜಂತ ಪಕ್ವಾಃ ॥ ೫ ॥

॥ ಪದಪಾಠಃ ॥

ಉರು । ವಾಂ । ರಥಃ । ಪರಿ । ನಕ್ಷತಿ । ದ್ಯಾಂ । ಆ । ಯತ್ । ಸಮುದ್ರಾತ್ । ಅಭಿ । ವರ್ತತೇ । ವಾಂ । ಮಧ್ವಾ । ಮಾಧ್ವೀ ಇತಿ । ಮಧು । ವಾಂ । ಪ್ರುಷಾಯನ್ । ಯತ್ । ಸೀಂ । ವಾಂ । ಪೃಕ್ಷಃ । ಭುರಜಂತ । ಪಕ್ವಾಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ರಥೋ ದ್ಯಾಂ ಪರಿ ದ್ಯುಲೋಕಸ್ಯ ಪರಿತ ಉರು ಪ್ರಭೂತಂ ನಕ್ಷತಿ । ಗಚ್ಛತಿ । ಯದ್ಯಸ್ಮಾದಾ ಅರ್ವಾಕ್ ಸಮುದ್ರಾತ್ಸಮುದ್ದ್ರವಣಸಾಧನಾದಂತರಿಕ್ಷಾದ್ವಾಂ ಪ್ರತಿ ಅಭಿ ವರ್ತತೇ । ಆಭಿಮುಖ್ಯೇನ ಗಚ್ಛತಿ । ಹೇ ಮಾಧ್ವೀ ಉಕ್ತಲಕ್ಷಣೌ ಮಧ್ವಾ ಮಧುರೇಣ ಪಯಸಾ ಮಧು ಮಧುರಂ ಸೋಮರಸಂ ಪ್ರುಷಾಯನ್ । ಸಿಂಚಂತ್ಯಧ್ವರ್ಯವಃ । ಯದ್ಯಸ್ಮಾತ್ಸೀಂ ಸರ್ವತೋ ವಾಂ ಪೃಕ್ಷೋ ಯುವಯೋಃ ಸೋಮಂ ಪಕ್ವಾಃ ಪಕ್ವಾ ಯವಾ ಭುರಜಂತ । ಪ್ರಾಪ್ನುವಂತಿ । ತಸ್ಮಾದಭಿವರ್ತತೇ ವಾಮಿತಿ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯತ್—ಯಾವ ಕಾರಣದಿಂದ । ಆ ಸಮುದ್ರಾತ್—ಅಂತರಿಕ್ಷಕ್ಕಿಂತಲೂ ಮೀರಿದ ಪ್ರದೇಶದಲ್ಲಿ । ವಾಂ – ನಿಮಗೆ । ಅಭಿ ವರ್ತತೇ—ಅಭಿಮುಖವಾಗಿ ನಿಲ್ಲಬೇಕೋ । (ಆದುದರಿಂದ) ವಾಂ—ನಿಮ್ಮ । ರಥಃ—ರಥವು । ದ್ಯಾಂ ಪರಿ—ದ್ಯುಲೋಕದ ಸುತ್ತಲೂ । ಉರು—ಅತ್ಯಧಿಕವಾಗಿ । ನಕ್ಷತಿ—ಸಂಚರಿಸುತ್ತದೆ । ಮಧ್ವೀ—ಮಧುರರಸೋತ್ಪಾದಕರಾದ ಎಲೈ ಅಶ್ವಿನೀದೇವತೆಗಳೇ । ಯತ್—ಯಾವ ಉದ್ದಿಶ್ಯಕ್ಕಾಗಿ । ವಾಂ—ನಿಮ್ಮ । ಪೃಕ್ಷಃ—ಸೋಮರೂಪವಾದ ಅನ್ನವು । ಪಕ್ವಾಃ—ಪಕ್ವವಾದ ಯವಗಳನ್ನು । ಭುರಜಂತ—ಸೇರಿಕೊಳ್ಳುವುವೋ (ಆದಕ್ಕಾಗಿ) । ಮಧ್ವಾ—ಮಧುರವಾದ ಹಾಲಿನೊಡನೆ ಮಧು—ಮಧುರವಾದ ಸೋಮವನ್ನು । ಪ್ರುಷಾಯನ್—(ಅಧ್ವರ್ಯುಗಳು) ಮಿಶ್ರಮಾಡಿ ಸೇರಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಂತರಿಕ್ಷಕ್ಕಿಂತಲೂ ಮೀರಿದ ಪ್ರದೇಶದಲ್ಲಿರುವ ನಿಮ್ಮನ್ನು ಕರೆತರಲು ನಿಮ್ಮ ರಥವು ದ್ಯುಲೋಕದ ಸುತ್ತಲೂ ಸಂಚರಿಸಿ ನಿಮ್ಮ ಅಭಿಮುಖವಾಗಿ ಬಂದು ನಿಲ್ಲುತ್ತದೆ. ನಿಮಗೆ ಅರ್ಪಿಸುವ ಉದ್ದಿಶ್ಯದಿಂದ ಸೋಮವನ್ನು ಯವಧಾನ್ಯಗಳೊಡನೆ ಸೇರಿಸುವ ಮೊದಲು ಅಧ್ವರ್ಯುಗಳು ಮಧುರವಾದ ಹಾಲಿನೊಡನೆ ಮಧುರವಾದ ಸೋಮವನ್ನು ಮಿಶ್ರಮಾಡಿ ಸೇರಿಸುತ್ತಾರೆ.

## English Translation.

Your chariot travels widely round the heaven until it places you beyond the firmament : dispensers of sweet (water, the priests) are diluting

the Soma juice with milk, that the boiled (barley) may be united with the libation offered to you.

॥ ಸಂಹಿತಾಪಾಠಃ ॥

ಸಿಂಧುರ್ಹ ವಾಂ ರಸಯಾ ಸಿಂಚದಶ್ವಾನ್ಘೃಣಾ ವಯೋಽರುಷಾಸಃ ಪರಿ ಗ್ಮನ್ ।

ತದೂ ಷು ವಾಮಜಿರಂ ಚೇತಿ ಯಾನಂ ಯೇನ ಪತೀ ಭವಥಃ ಸೂರ್ಯಾಯಾಃ ॥ ೬ ॥

॥ ಪದಪಾಠಃ ॥

ಸಿಂಧುಃ । ಹ । ವಾಂ । ರಸಯಾ । ಸಿಂಚತ್ । ಅಶ್ವಾನ್ । ಘೃಣಾ । ವಯಃ । ಅರುಷಾಸಃ । ಪರಿ । ಗ್ಮನ್ ।

ತತ್ । ಊಂ ಇತಿ ಸು । ವಾಂ । ಅಜಿರಂ । ಚೇತಿ । ಯಾನಂ । ಯೇನ । ಪತೀ ಇತಿ । ಭವಥಃ । ಸೂರ್ಯಾಯಾಃ ॥ ೬ ॥

॥ ಸಾಯಣಭಾಷ್ಯಂ ॥

ವಾಂ ಯುವಯೋರಶ್ವಾನ್ ಸಿಂಧುಃ ಸ್ಯಂದಮಾನೋ ಮೇಘ ಉದಕಂ ವಾ ರಸಯಾ ರಸೇನ ಸಿಂಚತ್ । ಅಸೇಚಯತ್ । ಘೃಣಾ ದೀಪ್ತ್ಯಾ ವಯಃ ಪಕ್ಷಿಸದೃಶಾ ವೇತಾರೋ ವಾ ಆಶ್ವಾ ಅರುಷಾಸ ಆರೋಚಮಾನಾಃ ಸಂತಃ ಪರಿ ಪರಿತೋ ಗ್ಮನ್ । ಗಚ್ಛಂತಿ । ವಾಂ ಯಾನಂ ಗಮನಸಾಧನಂ ಪ್ರಸಿದ್ಧೋ ರಥೋಽಜಿರಂ । ಕ್ಷಿಪ್ರನಾಮೈತತ್। ಸು ಸುಷ್ಠು ಚೇತಿ । ಜ್ಞಾಯತೇ । ಯೇನ ರಥೇನ ಸೂರ್ಯಾಯಾಃ ಪತಿ ಪಾಲಯಿತಾರೌ ವೋಢಾರೌ ಭವಥಃ ಸ ರಥಶ್ಚೇತೀತಿ ॥

॥ ಪ್ರತಿಪದಾರ್ಥ ॥

(ಹೇ ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ) । ವಾಂ—ನಿಮ್ಮ । ಅಶ್ವಾನ್—ಅಶ್ವಗಳನ್ನು । ಸಿಂಧುಃ—ಪ್ರವಿಸುವ ಉದಕವು । ರಸಯಾ—ತನ್ನ ರಸದಿಂದ । ಸಿಂಚತ್—ಪ್ರೋಕ್ಷಿಸಿದೆ । ಅರುಷಾಸಃ—ಆಕರ್ಷಕವಾದ ವರ್ಣವುಳ್ಳವೂ । ವಯಃ—ಪಕ್ಷಿಸದೃಶವೂ ಆದ ನಿಮ್ಮ ಅಶ್ವಗಳು । ಘೃಣಾ—ಕಾಂತಿಯಿಂದ ಕೂಡಿ । ಪರಿ ಗ್ಮನ್—ಸುತ್ತಲೂ ಸಂಚರಿಸುತ್ತವೆ । ಯೇನ—ಯಾವ ರಥದಿಂದ। ಸೂರ್ಯಾಯಾಃ—ಸೂರ್ಯಪುತ್ರಿಯ

ಪತೀ—ಪಾಲಕರಾಗಿ । ಭವಥಃ—ಆಗುವಿರೋ (ಅಂತಹ) । ತತ್ ವಾಂ ಯಾನಂ—ನಿಮ್ಮ ಆ ರಥವು । ಅಜಿರಂ—ಕ್ಷಿಪ್ರವಾಗಿಯೇ । ಸು ಚೇತಿ—ಚೆನ್ನಾಗಿ ಅರಿಯಲ್ಪಡುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಸ್ರವಿಸತಕ್ಕ ಉದಕವು ತನ್ನ ರಸದಿಂದ ನಿಮ್ಮ ಅಶ್ವಗಳನ್ನು ಪ್ರೋಕ್ಷಿಸಿದೆ. ಆಕರ್ಷಕವಾದ ವರ್ಣವುಳ್ಳವೂ ಪಕ್ಷಿಸದೃಶವೂ, ಆದ ನಿಮ್ಮ ಅಶ್ವಗಳು ಕಾಂತಿಯಿಂದೊಡಗೂಡಿ ಸುತ್ತಲೂ ಸಂಚರಿಸುತ್ತವೆ. ನೀವು ಯಾವ ನಿಮ್ಮ ರಥದ ಸಹಾಯದಿಂದ ಸೂರ್ಯಪುತ್ರಿಯ ಪಾಲಕರಾಗುವಿರೋ ಅಂತಹ ನಿಮ್ಮ ಆ ರಥವು ಕ್ಷಿಪ್ರವಾಗಿಯೇ ಎಲ್ಲರಿಂದಲೂ ಚೆನ್ನಾಗಿ ಅರಿಯಲ್ಪಡುತ್ತದೆ.

## English Translation.

The flowing (stream) has sprinkled your steeds with moisturg : the radiant horses (like) birds (in swiftness) pass on, bright with lustre : well known is that quickmoving charriot, whereby you become the lords of Surya.



॥ ಸಂಹಿತಾಪಾಠಃ ॥

ಇಹೇಹ ಯದ್ವಾಂ ಸಮನಾ ಪಪೃಕ್ಷೇ ಸೇಯಮಸ್ಮೇ ಸುಮತಿರ್ವಾಜರತ್ನಾ ।
ಉರುಷ್ಯತಂ ಜರಿತಾರಂ ಯುವಂ ಹ ಶ್ರಿತಃ ಕಾಮೋ ನಾಸತ್ಯಾ ಯುವದ್ರಿಕ್ ॥ ೭ ॥

॥ ಪದಪಾಠಃ ॥

ಇಹಽಇಹ । ಯತ್ । ವಾಂ । ಸಮನಾ । ಪಪೃಕ್ಷೇ । ಸಾ । ಇಯಂ । ಅಸ್ಮೇ ಇತಿ । ಸುಽಮತಿಃ । ವಾಜಽರತ್ನಾ ।

ಉರುಷ್ಯತಂ । ಜರಿತಾರಂ । ಯುವಂ । ಹ । ಶ್ರಿತಃ । ಕಾಮಃ । ನಾಸತ್ಯಾ । ಯುವದ್ರಿಕ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯದ್ಯಸ್ಮಾತ್ । ಯಥಾ ವಾ ಸುಮತ್ಯಾ । ಇಹೇಹಾಸ್ಮಿನ್ನೇವ ಯಜ್ಞೇ ಸಮನಾ ಸಮಾನಮನಸ್ಕೌ । ಸದೃಶಾವಿತ್ಯರ್ಥಃ । ತೌ ವಾಂ ಯುವಾಂ ಸುಮತ್ಯಾ ಪಪೃಕ್ಷೇ । ಸ್ತುತ್ಯಾ ಸಂಯೋ-

ಜಯಾಮಿ । ಸೇಯಮಿದಾನೀಂ ಕ್ರಿಯಮಾಣಾ ಸುಮತಿಃ ಶೋಭನಸ್ತುತಿರಸ್ಮೇ ಅಸ್ಮಾಕಮೇವ ಫಲವತೀ ಭವತ್ವಿತಿ ಶೇಷಃ । ಹೇ ವಾಜರತ್ನಾ ರಮಣೀಯಾನ್ನೌ । ಅನ್ನಂ ವೈ ವಾಜಃ । ಶತ. ಬ್ರಾ. ೯-೩-೪-೧ । ಇತಿ ಶ್ರುತೇಃ । ಯುವಂ ಯುವಾಂ ಜರಿತಾರಂ ಗರಿತಾರಂ ಸ್ತೋತಾರಂ ಮಾಮುರುಷ್ಯತಂ । ರಕ್ಷತಂ । ಹೇ ನಾಸತ್ಯಾಶ್ವಿನೌ ಕಾಮೋಽಸ್ಮದೀಯೋ ಯುವದ್ರಿಕ್ ಹ ಯುವಾಮೇವ ಗಚ್ಛನ್ ಶ್ರಿತಃ ಪ್ರಾಪ್ತಃ ॥

॥ ಪ್ರತಿಪದಾರ್ಥ ॥

(ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ) । ಯತ್—ಯಾವ ಸ್ತುತಿಯಿಂದ । ಇಹೇಹ—ಈ ಯಜ್ಞದಲ್ಲಿಯೇ । ಸಮನಸಾ—ಒಂದೇ ವಿಧವಾದ ಮನಸ್ಸುಳ್ಳ । ವಾಂ—ನಿಮ್ಮಿಬ್ಬರನ್ನೂ । ಪಪೃಕ್ಷೇ—(ಸ್ತುತಿಯೊಡನೆ) ಹೊಂದಿಕೊಳ್ಳುವಂತೆ ಮಾಡುವೆನೋ । ಸೇಯಂ ಸುಮತಿಃ—ಈಗ ಪಠಿಸುತ್ತಿರುವ ಅದೇ ಸ್ತುತಿಯು । ಅಸ್ಮೇ—ನಮಗೆ (ಫಲಪ್ರದವಾಗಲಿ) । ವಾಜರತ್ನಾ—ರಮಣೀಯವಾದ ಅನ್ನವುಳ್ಳ ಅಶ್ವಿನೀದೇವತೆಗಳೇ । ಯುವಂ—ನೀವಿಬ್ಬರೂ । ಜರಿತಾರಂ—ಸ್ತೋತೃವಾದ ನನ್ನನ್ನು । ಉರುಷ್ಯತಂ—ರಕ್ಷಿಸಿರಿ । ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಕಾಮಃ—ನಮ್ಮ ಅಭೀಷ್ಟವು । ಯುವದ್ರಿಕ್ ಹ—ನಿಮ್ಮನ್ನು ತಲಪಿದೊಡನೆಯೇ । ಶ್ರಿತಃ—ಸಿದ್ಧಿಯನ್ನು ಪಡೆಯುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಒಂದೇ ವಿಧವಾದ ಮನಸ್ಸುಳ್ಳ ನಿಮ್ಮಿಬ್ಬರನ್ನೂ ಈ ಯಜ್ಞದಲ್ಲಿಯೇ ಯಾವ ಸ್ತುತಿಯಿಂದ ಪ್ರಾರ್ಥಿಸಿ ಸ್ತುತಿಯೊಡನೆ ಸಂಯೋಜಿತರಾಗುವಂತೆ ಮಾಡುವೆನೋ, ಈಗ ಪಠಿಸುತ್ತಿರುವ ಅದೇ ಸ್ತುತಿಯು ನಮಗೆ ಫಲಪ್ರದವಾಗಲಿ. ರಮಣೀಯವಾದ ಅನ್ನವುಳ್ಳ ಅಶ್ವಿನೀದೇವತೆಗಳೇ, ನೀವಿಬ್ಬರೂ ಸ್ತೋತೃವಾದ ನನ್ನನ್ನು ರಕ್ಷಿಸಿರಿ. ಎಲೈ ಅಶ್ವಿನೀದೇವತೆಗಳೇ, ನಮ್ಮ ಅಭೀಷ್ಟವು ನಿಮ್ಮನ್ನು ತಲಪಿದೊಡನೆಯೇ ಸಿದ್ಧಿಯನ್ನು ಪಡೆಯುತ್ತದೆ.

### English Translation.

May the earnest praise, distributers of food, wherewith I asociate you both like-minded at this sacrifice, be (beneficial) to us: protect your worshipper: my desire, Nasatyas, directed towards you is gratified.



## ನಲವತ್ತನಾಲ್ಕನೆಯ ಸೂಕ್ತವು

ತಂ ವಾಂ ರಥಮಿತಿ ಸಪ್ತರ್ಚಂ ದ್ವಾದಶಂ ಸೂಕ್ತಂ । ಪುರುಮೀಳ್ಹಾಜಮೀಳ್ಹಾವೇವ ಋಷೀ। ತ್ರಿಷ್ಟುಪ್ ಛಂದಃ । ಅಶ್ವಿನೌ ದೇವತಾ । ತಂ ವಾಮಿತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥

ಅನುವಾದವು—ತಂ ವಾಂ ರಥಂ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೂ ಹಿಂದಿನ ಸೂಕ್ತದ ಋಷಿಗಳಾದ ಪುರುಮೀಳ್ಹ ಮತ್ತು ಅಜಮೀಳ್ಹ ಎಂಬುವರೇ ಋಷಿಗಳು ; ಅಶ್ವಿನೀದೇವತೆಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ತಂ ವಾಂ ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದು.

## ಸೂಕ್ತ—೪೪

ಮಂಡಲ—೪ ‖ ಅನುವಾಕ—೪ ‖ ಸೂಕ್ತ—೪೪ ‖

ಅಷ್ಟಕ—೩ ‖ ಅಧ್ಯಾಯ—೭ ‖ ವರ್ಗ—೨೦ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ‖

‖ ಋಷಿಃ—ಪುರುಮೀಳ್ಹಾಜಮೀಳ್ಹೌ ಸೌಹೋತ್ರೌ ‖

‖ ದೇವತಾ—ಅಶ್ವಿನೌ ‖

‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ತಂ ವಾಂ ರಥಂ ವಯಮದ್ಯಾ ಹುವೇಮ ಪೃಥುಜ್ರಯಮಶ್ವಿನಾ ಸಂಗತಿಂ ಗೋಃ ।
ಯಃ ಸೂರ್ಯಾಂ ವಹತಿ ವಂಧುರಾಯುರ್ಗಿರ್ವಾಹಸಂ ಪುರುತಮಂ ವಸೂಯುಂ ‖ ೧ ‖

‖ ಪದಪಾಠಃ ‖

ತಂ । ವಾಂ । ರಥಂ । ವಯಂ । ಅದ್ಯ । ಹುವೇಮ । ಪೃಥುಽಜ್ರಯಂ । ಅಶ್ವಿನಾ । ಸಂಽಗತಿಂ । ಗೋಃ ।
ಯಃ । ಸೂರ್ಯಾಂ । ವಹತಿ । ವಂಧುರಽಯುಃ । ಗಿರ್ವಾಹಸಂ । ಪುರುಽತಮಂ । ವಸುಽಯುಂ ‖ ೧ ‖

‖ ಸಾಯಣಭಾಷ್ಯಂ ‖

ಹೇ ಅಶ್ವಿನೌ ವಾಂ ಯುವಯೋಃ ರಥಂ ಸ್ತೋತಾರೋಽದ್ಯ ಸುತ್ಯಾಹನಿ ಹುವೇಮ । ಆಹ್ವಯಾಮಃ । ಕೀದೃಶಂ ತಂ । ಪೃಥುಜ್ರಯಂ ಪ್ರಥಿತವೇಗಂ ಗೋಃ ಗವಾಂ ಸಂಗತಿಂ ಸಂಗಮಯಿತಾರಂ । ಯೋ ರಥಃ ಸೂರ್ಯಾಂ ವಹತಿ । ಧಾರಯತಿ । ವಂಧುರಯುಃ । ರಥೇ ನಿವಾಸಾಧಾರಭೂತಃ ಕಾಷ್ಠೋ ವಂಧುರಂ ತದ್ವಾನ್ । ತಂ ಗಿರ್ವಾಹಸಂ ಗಿರಾಂ ಸ್ತುತೀನಾಂ ವೋಢಾರಂ ಪುರುತಮಂ ಪ್ರಭೂತತಮಂ ವಸೂಯುಂ ವಸುಮಂತಂ ‖

|| ಪ್ರತಿಪದಾರ್ಥ ||

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ | ಯಃ—ಯಾವ ನಿಮ್ಮ ರಥವು | ಸೂರ್ಯಾಂ—ಸೂರ್ಯೆಯನ್ನು | ವಹತಿ—ವಹಿಸುತ್ತದೆಯೋ ಅಂತಹುದೂ | ಪೃಥುಜ್ರಯಂ—ಪ್ರಖ್ಯಾತವಾದ ವೇಗವುಳ್ಳದ್ದೂ | ಗೋಃ—ರಶ್ಮಿಗಳನ್ನು | ಸಂಗತಿಂ—ಸೇರಿಸತಕ್ಕದ್ದೂ | ವಂಧುರಯುಃ—ಉತ್ತಮವಾದ ಆಸನದ ಕಾಷ್ಠವುಳ್ಳದ್ದೂ | ಗಿರ್ವಾಹಸಂ--ಸ್ತುತಿಗಳನ್ನು ವಹಿಸತಕ್ಕದ್ದೂ | ಪುರುತಮಂ—ಪ್ರಭೂತವಾದ ವಿಸ್ತೃತಿಯುಳ್ಳದ್ದೂ | ವಸೂಯುಂ—ಧನಯುಕ್ತವಾದುದೂ ಆದ | ತಂ ವಾಂ ರಥಂ—ನಿಮ್ಮ ಆ ರಥವನ್ನು | ವಯಂ—ಸ್ತೋತೃಗಳಾದ ನಾವು | ಅದ್ಯ—ಸೋಮರಸವನ್ನು ಹಿಂಡುವ ಈ ದಿನ | ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಥವು ಸೂರ್ಯೆಯನ್ನು ವಹಿಸುತ್ತದೆಯೋ ಅಂತಹುದೂ, ಪ್ರಖ್ಯಾತವಾದ ವೇಗವುಳ್ಳದ್ದೂ, ರಶ್ಮಿಗಳನ್ನು ಒಟ್ಟಿಗೆ ಸೇರಿಸತಕ್ಕದ್ದೂ, ಉತ್ತಮವಾದ ಆಸನದ ಕಾಷ್ಠವುಳ್ಳದ್ದೂ, ಸ್ತುತಿಗಳನ್ನು ವಹಿಸತಕ್ಕದ್ದೂ, ಪ್ರಭೂತವಾದ ವಿಸ್ತೃತಿಯುಳ್ಳದ್ದೂ, ಧನಯುಕ್ತವಾದುದೂ ಆದ ನಿಮ್ಮ ಆ ರಥವನ್ನು ಸ್ತೋತೃಗಳಾದ ನಾವು ಸೋಮರಸವನ್ನು ಹಿಂಡುವ ಈ ದಿನ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

We invoke, Ashwins, to-day, your rapid car, the associator of the solar ray: the banked car which bears Surya, vast, wealthy, and laden with praises.



|| ಸಂಹಿತಾಪಾಠಃ ||

ಯುವಂ ಶ್ರಿಯಮಶ್ವಿನಾ ದೇವತಾ ತಾಂ ದಿವೋ ನಪಾತಾ ವನಥಃ ಶಚೀಭಿಃ |
ಯುವೋರ್ವಪುರಭಿ ಪೃಕ್ಷಃ ಸಚಂತೇ ವಹಂತಿ ಯತ್ಕಕುಹಾಸೋ ರಥೇ ವಾಂ || ೨ ||

|| ಪದಪಾಠಃ ||

ಯುವಂ | ಶ್ರಿಯಂ | ಅಶ್ವಿನಾ | ದೇವತಾ | ತಾಂ | ದಿವಃ | ನಪಾತಾ | ವನಥಃ | ಶಚೀಭಿಃ |
ಯುವೋಃ | ವಪುಃ | ಅಭಿ | ಪೃಕ್ಷಃ | ಸಚಂತೇ | ವಹಂತಿ | ಯತ್ | ಕಕುಹಾಸಃ | ರಥೇ | ವಾಂ ||೨||

॥ ಸಾಯಣಭಾಷ್ಯಂ ॥

ಹೇ ದಿವೋ ನಪಾತಾದಿತ್ಯಸ್ಯ ಪುತ್ರಸ್ಥಾನೀಯೌ ದ್ಯುಲೋಕಸ್ಯ ವಾ ನ ಪಾತಯಿತಾರೌ ಹೇ ಅಶ್ವಿನೌ ಯುವಂ ಯುವಾಂ ದೇವತಾ ದೇವತೇ॥ ವಿಭಕ್ತಿವ್ಯತ್ಯಯಃ॥ ತಾಂ ಪ್ರಸಿದ್ಧಾಂ ಶ್ರಿಯಂ ಶಚೀಭಿಃ ಕರ್ಮಭಿಃ ಶಕ್ತಿಭಿರ್ವಾ ವನಥಃ। ಸಂಭಜೇಥೇ। ಯದ್ವಾ। ವದತಿರ್ದಾನಾರ್ಥಃ। ಯುವೋರ್ಯುವಯೋರ್ವಪುಃ ಶರೀರಂ ಪೃಕ್ಷೋಽನ್ನಾನಿ ಸೋಮಲಕ್ಷಣಾನ್ಯಭಿ ಸಚಂತೇ। ಯದ್ಯದಾ ರಥೇ ವಾಂ ವಹಂತಿ ಕಕುಹಾಸೋ ಮಹಾಂತೋಽಶ್ವಾಃ। ಯದ್ವಾ। ಸ್ತುತಯೋ ವಾಂ ಯುವಾಂ ರಥೇ ವಹಂತಿ॥

॥ ಪ್ರತಿಪದಾರ್ಥ ॥

ದಿವಃ—ಪ್ರಕಾಶಾತ್ಮನಾದ ಆದಿತ್ಯನಿಗೆ। ನಪಾತಾ—ಪುತ್ರರೂಪರಾದ। ಅಶ್ವಿನಾ—ಎಲೈ ಅಶ್ವಿನೀ ದೇವತೆಗಳೇ। ದೇವತಾ—ದೇವತಾತ್ಮರಾದ। ಯುವಂ—ನೀವಿಬ್ಬರೂ। ಶಚೀಭಿಃ—ನಿಮ್ಮ ಉತ್ತಮವಾದ ಕರ್ಮಗಳಿಂದ। ತಾಂ ಶ್ರಿಯಂ—ಪ್ರಸಿದ್ಧವಾದ ಆ ಸಂಪತ್ತನ್ನು। ವನಥಃ—ಅನುಭವಿಸುತ್ತಿದ್ದೀರಿ। ಯತ್—ಯಾವಾಗ। ಕಕುಹಾಸಃ—ಶಕ್ತಿಯುತವಾದ ಅಶ್ವಗಳು। ವಾಂ—ನಿಮ್ಮನ್ನು। ರಥೇ—ರಥದಲ್ಲಿ (ಕುಳ್ಳಿರಿಸಿ)। ವಹಂತಿ—ವಹಿಸುತ್ತವೆಯೋ (ಆಗ)। ಪೃಕ್ಷಃ—ಸೋಮರೂಪವಾದ ಅನ್ನವು। ಯುವೋಃ—ನಿಮ್ಮ। ವಪುಃ—ಶರೀರವನ್ನು। ಅಭಿ ಸಚಂತೇ—ಸೇರಿಕೊಳ್ಳುತ್ತದೆ.

॥ ಭಾವಾರ್ಥ ॥

ಪ್ರಕಾಶಾತ್ಮನಾದ ಆದಿತ್ಯನಿಗೆ ಪುತ್ರರೂಪರಾದ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ನಿಮ್ಮ ಉತ್ತಮವಾದ ಕರ್ಮಗಳಿಂದ ಪ್ರಸಿದ್ಧವಾದ ಸಂಪತ್ತನ್ನು (ಮಹಿಮೆಯನ್ನು) ಅನುಭವಿಸುತ್ತಿದ್ದೀರಿ. ಶಕ್ತಿಯುತವಾದ ಅಶ್ವಗಳು ನಿಮ್ಮನ್ನು ರಥದಲ್ಲಿ ಕುಳ್ಳಿರಿಸಿ ಯಾವಾಗ ವಹಿಸುತ್ತವೆಯೋ ಆಗ ಸೋಮರೂಪನಾದ ಅನ್ನವು ನಿಮ ಶರೀರವನ್ನು ಸೇರಿಕೊಳ್ಳುತ್ತದೆ.

## English Translation.

Ashwins, grandsons of heaven, divinities, you enjoy that glory by your actions, that (sacrificial) food is administered to your persons, and powerful horses draw you in your chariot.

॥ ಸಂಹಿತಾಪಾಠಃ ॥

ಕೋ ವಾಮದ್ಯಾ ಕರತೇ ರಾತಹವ್ಯ ಊತಯೇ ವಾ ಸುತಪೇಯಾಯ ವಾರ್ಕೈಃ।

ಋತಸ್ಯ ವಾ ವನುಷೇ ಪೂರ್ವ್ಯಾಯ ನಮೋ ಯೇಮಾನೋ ಅಶ್ವಿನಾ ವವರ್ತತ್ ॥ ೩ ॥

॥ ಪದಪಾಠಃ ॥

ಕಃ । ವಾಂ । ಅದ್ಯ । ಕರತೇ । ರಾತಽಹವ್ಯಃ । ಊತಯೇ । ವಾ । ಸುತಽಪೇಯಾಯ । ವಾ । ಅರ್ಕೈಃ ।

ಋತಸ್ಯ । ವಾ । ವನುಷೇ । ಪೂರ್ವ್ಯಾಯ । ನಮಃ । ಯೇಮಾನಃ । ಅಶ್ವಿನಾ । ಆ । ವವರ್ತತ್ ॥ ೩ ॥

॥ ಸಾಯಣಭಾಷ್ಯಂ ॥

ಕೋ ಯಜಮಾನೋಽದ್ಯ ವಾಂ ಯುವಯೋಃ ಕರತೇ । ಕುರ್ಯಾತ್ ಸ್ತುತಿಂ । ಅರ್ಕೈರ್ಮಂತ್ರೈ ರಾತಹವ್ಯೋ ದತ್ತಸೋಮ ಊತಯೇ ವಾ ರಕ್ಷಣಾಯ ।ವಾ ಸುತಪೇಯಾಯ ಸೋಮಪಾನಾಯ ವಾ । ಋತಸ್ಯೋದಕಸ್ಯ ಯಜ್ಞಸ್ಯ ವಾ ಪೂರ್ವ್ಯಾಯ ಪುರಾಣಾಯ ವನುಷೇ ಸಂಭಜನಾಯ ಹೇ ಅಶ್ವಿನಾ ನಮೋ ಯೇಮಾನೋ ನಮಸ್ಕಾರಂ ಕುರ್ವಾಣಃ ಕ ಆ ವವರ್ತತ್ । ಆವರ್ತಯೇದ್ಯಜ್ಞಂ ಪ್ರತಿ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅರ್ಕೈಃ—ಮಂತ್ರಪೂರ್ವಕವಾಗಿ । ರಾತಹವ್ಯಃ—ಸೋಮವನ್ನು ಅರ್ಪಿಸಿದ । ಕಃ—ಯಾವ ಯಜಮಾನನು ತಾನೇ । ಊತಯೇ ವಾ—ರಕ್ಷಣಾರ್ಥವಾಗಿಯಾಗಲಿ । ಸುತಪೇಯಾಯ ವಾ—ಸೋಮಪಾನಾರ್ಥವಾಗಿಯಾಗಲಿ । ವನುಷೇ—ಪೂಜ್ಯವಾದ । ಋತಸ್ಯ—ಯಜ್ಞದ । ಪೂರ್ವ್ಯಾಯ ವಾ—ಪರಿಪೂರ್ಣತೆಯನ್ನು ಪಡೆಯುವುದಕ್ಕಾಗಿಯಾಗಲಿ । ಅದ್ಯ—ಇಂದು । ವಾಂ—ನಿಮ್ಮನ್ನುದ್ದೇಶಿಸಿ । ಕರತೇ—ಸ್ತುತಿಯನ್ನರ್ಪಿಸುತ್ತಾನೆ । ನಮೋ ಯೇಮಾನಃ—ನಿಮಗೆ ನಮಸ್ಕಾರವನ್ನರ್ಪಿಸತಕ್ಕ ಯಾವ ಯಜಮಾನನು । ಆ ವವರ್ತತ್—ನಿಮ್ಮನ್ನು ಈ ಯಜ್ಞಕ್ಕೆ ಬರಮಾಡಿಕೊಳ್ಳಬಲ್ಲನು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮಂತ್ರಪೂರ್ವಕವಾಗಿ ಸೋಮವನ್ನು ಅರ್ಪಿಸಿದ ಯಾವ ಯಜಮಾನನು ತಾನೇ, ರಕ್ಷಣಾರ್ಥವಾಗಿಯಾಗಲಿ, ಸೋಮಪಾನಾರ್ಥವಾಗಿಯಾಗಲಿ, ಪೂಜ್ಯವಾದ ಯಜ್ಞದ ಪರಿಪೂರ್ಣತೆಯನ್ನು ಪಡೆಯುವುದಕ್ಕಾಗಿಯಾಗಲಿ, ಇಂದು ನಿಮ್ಮನ್ನುದ್ದೇಶಿಸಿ ಸ್ತುತಿಯನ್ನರ್ಪಿಸುತ್ತಾನೆ? ನಿಮಗೆ ನಮಸ್ಕಾರವನ್ನರ್ಪಿಸುವ ಯಾವ ಯಜಮಾನನು ನಿಮ್ಮನ್ನು ಈ ಯಜ್ಞಕ್ಕೆ ಬರಮಾಡಿಕೊಳ್ಳಬಲ್ಲನು?

## English Translation.

What offerer of oblations addresses you to-day with hymns for the sake (of obtaining) protection, for the drinking of the Soma, or for the ancient fulfilment of the sacrifice? What offerer of adoration may bring you Ashwins (to this rite).

॥ ಸಂಹಿತಾಪಾಠಃ ॥

ಹಿರಣ್ಯಯೇನ ಪುರುಭೂ ರಥೇನೇಮಂ ಯಜ್ಞಂ ನಾಸತ್ಯೋಪ ಯಾತಂ ।
ಪಿಬಾಥ ಇನ್ಮಧುನಃ ಸೋಮ್ಯಸ್ಯ ದಧಥೋ ರತ್ನಂ ವಿಧತೇ ಜನಾಯ ॥ ೪ ॥

॥ ಪದಪಾಠಃ ॥

ಹಿರಣ್ಯಯೇನ । ಪುರುಭೂ ಇತಿ ಪುರುऽಭೂ । ರಥೇನ । ಇಮಂ । ಯಜ್ಞಂ । ನಾಸತ್ಯಾ । ಉಪ । ಯಾತಂ ।
ಪಿಬಾಥಃ । ಇತ್ । ಮಧುನಃ । ಸೋಮ್ಯಸ್ಯ । ದಧಥಃ । ರತ್ನಂ । ವಿಧತೇ । ಜನಾಯ ॥ ೪ ॥

॥ ಸಾಯಣಭಾಷ್ಯಂ ॥

ಹೇ ಪುರುಭೂ ಬಹು ಭವಂತೌ ನಾಸತ್ಯಾವಿಮಂ ಯಜ್ಞಂ ಹಿರಣ್ಯಯೇನ ರಥೇನೋಪ ಯಾತಂ । ಸೋಮ್ಯಸ್ಯ ಸೋಮಸಂಬಂಧಿನೋ ಮಧುನೋ ಮಧುರರಸಸ್ಯ ॥ ಕರ್ಮಣಿ ಷಷ್ಠ್ಯೌ ॥ ಸೋಮರಸಂ ಪಿಬಾಥಃ । ಪಿಬಥಃ । ವಿಧತೇ ಪರಿಚರತೇ ಜನಾಯ ಮಹ್ಯಂ ರತ್ನಂ ರಮಣೀಯಂ ಧನಂ ದಧಥಃ । ಧಾರಯಥಃ ॥ ದಧತೇರ್ದಾನಾರ್ಥಸ್ಯ ಲೇಟಿ ರೂಪಂ ॥

॥ ಪ್ರತಿಪದಾರ್ಥ ॥

ಪುರುಭೂ—ಬಹುರೂಪಗಳಲ್ಲಿರತಕ್ಕ । ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಇಮಂ ಯಜ್ಞಂ—ನಮ್ಮ ಈ ಯಜ್ಞಕ್ಕೆ । ಹಿರಣ್ಯಯೇನ—ಸುವರ್ಣನಿರ್ಮಿತವಾದ । ರಥೇನ—ರಥದಿಂದ । ಉಪ ಯಾತಂ—ದಯಮಾಡಿರಿ । ಸೋಮಸ್ಯ—ಸೋಮಸಂಬಂಧಿಯಾದ । ಮಧುನಃ—ಮಧುರವಾದ ರಸವನ್ನು । ಪಿಬಾಥಃ—ಪಾನಮಾಡಿರಿ । ವಿಧತೇ—ನಿಮ್ಮನ್ನು ಸೇವಿಸುವ । ಜನಾಯ—ಯಜಮಾನನಾದ ನನಗೆ । ರತ್ನಂ—ರಮಣೀಯವಾದ ಧನವನ್ನು । ದಧಥಃ—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ಅನೇಕರೂಪಗಳಲ್ಲಿರುವ ಶಕ್ತಿಯುಳ್ಳ ಎಲೈ ಅಶ್ವಿನೀದೇವತೆಗಳೇ, ನಮ್ಮ ಈ ಯಜ್ಞಕ್ಕೆ ಸುವರ್ಣನಿರ್ಮಿತವಾದ ರಥದಿಂದ ದಯಮಾಡಿರಿ, ಸೋಮಸಂಬಂಧಿಯಾದ ಮಧುರವಾದ ರಸವನ್ನು ಪಾನಮಾಡಿರಿ. ನಿಮ್ಮನ್ನು ಸೇವಿಸುವ ಯಜಮಾನನಾದ ನನಗೆ ರಮಣೀಯವಾದ ಧನವನ್ನು ಒದಗಿಸಿಕೊಡಿರಿ.

## English Translation.

Nasatyas, who are manifold, come with your golden chariot to this sacrifice; drink of the sweet Soma beverage, and give precious things to the man who celebrates (your worship).



॥ ಸಂಹಿತಾಪಾಠಃ ॥

ಆ ನೋ ಯಾತಂ ದಿವೋ ಅಚ್ಛಾ ಪೃಥಿವ್ಯಾ ಹಿರಣ್ಯಯೇನ ಸುವೃತಾ ರಥೇನ ।
ಮಾ ವಾಮನ್ಯೇ ನಿ ಯಮನ್ದೇವಯಂತಃ ಸಂ ಯದ್ದದೇ ನಾಭಿಃ ಪೂರ್ವ್ಯಾ ವಾಂ ॥ ೫ ॥

॥ ಪದಪಾಠಃ ॥

ಆ । ನಃ । ಯಾತಂ । ದಿವಃ । ಅಚ್ಛ । ಪೃಥಿವ್ಯಾಃ । ಹಿರಣ್ಯಯೇನ । ಸುಽವೃತಾ । ರಥೇನ ।
ಮಾ । ವಾಂ । ಅನ್ಯೇ । ನಿ । ಯಮನ್ । ದೇವಽಯಂತಃ । ಸಂ । ಯತ್ । ದದೇ । ನಾಭಿಃ । ಪೂರ್ವ್ಯಾ । ವಾಂ ॥ ೫ ॥

॥ ಸಾಯಣಭಾಷ್ಯಂ ॥

ನೋಽಸ್ಮಾನಚ್ಛಾಭಿ ಪ್ರಾಪ್ತುಂ ದಿವೋ ದ್ಯುಲೋಕಾತ್ಪೃಥಿವ್ಯಾಃ ಸಕಾಶಾದ್ವಾ ಆ ಯಾತಂ । ಕೇನ ಸಾಧನೇನ । ಹಿರಣ್ಯಯೇನ ಹಿತರಮಣೀಯೇನ ಸುವೃತಾ ಶೋಭನಾವರ್ತನೇನ ರಥೇನ । ವಾಂ ಯುವಾಮನ್ಯೇ ದೇವಯಂತೋ ದೇವಾ ಯುವಾಮಿಚ್ಛಂತೋ ಯಜಮಾನಾ ಮಾ ನಿ ಯಮನ್ । ನಿಯಮನಂ ಮಾ ಕುರ್ವನ್ । ಯದ್ಯಸ್ಮಾತ್ಪೂರ್ವ್ಯಾ ಪೂರ್ವಾರ್ಹೇತರಯಷ್ಟೃಭ್ಯಃ ಪೂರ್ವಭಾವಿನೀ ನಾಭಿರ್ಬಂಧಿಕಾ ಸ್ತುತಿಃ ಸಂ ದದೇ । ಸಂಬಧ್ನಾತಿ । ತಸ್ಮಾದಾಯಾತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ನಃ ಅಚ್ಛ—ನಮಗಭಿಮುಖವಾಗಿ ಬರಲು । ದಿವಃ—ಅಂತರಿಕ್ಷದಿಂದಾಗಲಿ (ಅಥವಾ) । ಪೃಥಿವ್ಯಾಃ—ಪೃಥಿವಿಯಿಂದಾಗಲಿ । ಹಿರಣ್ಯಯೇನ—ಹಿರಣ್ಯನಿರ್ಮಿತವಾದುದೂ । ಸುವೃತಾ—ಶ್ರೇಷ್ಠವಾದ ರಚನೆಯುಳ್ಳದ್ದೂ ಆದ । ರಥೇನ—ರಥದೊಡನೆ । ಆ ಯಾತಂ—ಬನ್ನಿರಿ । ಯತ್—ಯಾವ ಕಾರಣದಿಂದ । ಪೂರ್ವ್ಯಾ—ಇತರ ಯಜ್ಞಗಳಿಗಿಂತಲೂ ಮೊದಲು ಅರ್ಪಿತವಾಗತಕ್ಕದ್ದೂ । ನಾಭಿಃ—ಆಕರ್ಷಕವಾದುದೂ ಆದ ಸ್ತುತಿಯು । ವಾಂ—ನಿಮ್ಮನ್ನು । ಸಂ ದದೇ—ಆಕರ್ಷಿಸುವುದೋ ಆ ಕಾರಣದಿಂದ । ವಾಂ—ನಿಮ್ಮನ್ನು । ದೇವಯಂತಃ—ದೇವತೆಗಳನ್ನು ಪ್ರಾರ್ಥಿಸುವ । ಅನ್ಯೇ—ಇತರ ಯಜಮಾನರು । ಮಾ ನಿ ಯಮನ್—ತಮ್ಮ ಪೂಜೆಗಾಗಿ ತಡೆದು ನಿಲ್ಲಿಸದಿರಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಅಂತರಿಕ್ಷದಲ್ಲಿರಲಿ ಅಥವಾ ಪೃಥಿವಿಯಲ್ಲಿರಲಿ, ನಮಗಭಿಮುಖವಾಗಿ ಬರಲು ನಿಮ್ಮ ಹಿರಣ್ಯನಿರ್ಮಿತವಾದುದೂ, ಉತ್ತಮವಾದ ರಚನೆಯುಳ್ಳದ್ದೂ ಆದ ರಥದೊಡನೆ ಬನ್ನಿರಿ. ಇತರ

ಯಜ್ಞಗಳಿಗಿಂತಲೂ ಮೊದಲು ಅರ್ಪಿತವಾಗತಕ್ಕದ್ದೂ, ಆಕರ್ಷಕವಾದುದೂ ಆದ ಸ್ತುತಿಯು ನಿಮ್ಮನ್ನು ನಮ್ಮಲ್ಲಿಗೇ ಆಕರ್ಷಿಸುವುದರಿಂದ ನಿಮ್ಮ ಸಹಾಯವನ್ನಪೇಕ್ಷಿಸುವ ಇತರ ಯಜಮಾನರು ತಮ್ಮ ಪೂಜೆಗಾಗಿ ನಿಮ್ಮನ್ನು ತಡೆದು ನಿಲ್ಲಿಸದಿರಲಿ.

## English Translation.

Come to our presence, whether from heaven or earth, with your well-constructed golden chariot: let not other devout worshippers detain you, for a prior attraction awaits you (here).

॥ ಸಂಹಿತಾಪಾಠಃ ॥

ನೂ ನೋ ರಯಿಂ ಪುರುವೀರಂ ಬೃಹಂತಂ ದಸ್ರಾ ಮಿಮಾಥಾಮುಭ-
ಯೇಷ್ವಸ್ಮೇ ।
ನರೋ ಯದ್ವಾಮಶ್ವಿನಾ ಸ್ತೋಮಮಾವನ್ತ್ಸಧಸ್ತುತಿಮಾಜಮಿಾಳ್ಹಾಸೋ
ಅಗ್ಮನ್ ॥ ೬ ॥

॥ ಪದಪಾಠಃ ॥

ನು । ನಃ । ರಯಿಂ । ಪುರುऽವೀರಂ । ಬೃಹಂತಂ । ದಸ್ರಾ । ಮಿಮಾಥಾಂ । ಉಭಯೇಷು । ಅಸ್ಮೇ ಇತಿ ।
ನರಃ । ಯತ್ । ವಾಂ । ಅಶ್ವಿನಾ । ಸ್ತೋಮಂ । ಆವನ್ । ಸಧऽಸ್ತುತಿಂ । ಆಜऽಮಿಾಳ್ಹಾಸಃ । ಅಗ್ಮನ್ ॥

॥ ಸಾಯಣಭಾಷ್ಯಂ ॥

ನು ಕ್ಷಿಪ್ರಂ ನೋಽಸ್ಮಾಕಂ ರಯಿಂ ಧನಂ ಪುರುವೀರಂ ಬಹುಪುತ್ರೋಪೇತಂ ಬೃಹಂತಂ ಮಹಾಂತಂ ಹೇ ದಸ್ರಾಶ್ವಿನೌ ಮಿಮಾಥಾಂ । ಕುರುತಂ । ಉಭಯೇಷು ಪುರುಮಿಾಳ್ಹಾಜಮಿಾಳ್ಹೇಷ್ವಸ್ಮೇ ಅಸ್ಮಾಸು ಯದ್ಯದಾ ನರೋ ನೇತಾರ ಋತ್ವಿಜಃ ಪುರುಮಿಾಳ್ಹಸಂಬಂಧಿನೋ ವಾಂ ಯುವಯೋಃ ಸ್ತೋಮಂ ಸ್ತೋತ್ರಮಾವನ್ । ಅಗಮನ್ । ಪ್ರಾಪ್ತಾಃ । ತಥಾ ಸಧಸ್ತುತಿಂ ಸಹಸ್ತುತಿಮಾಜಮಿಾಳ್ಹಾಸೋಽಜಮಿಾಳ್ಹಸಂಬಂಧಿನೋಽಪಿ ತೈಃ ಸಹಾಗ್ಮನ್ । ಅಗಮನ್ ॥

॥ ಪ್ರತಿಪದಾರ್ಥ ॥

ದೆಸ್ರಾ—ದರ್ಶನೀಯವಾದ ರೂಪವುಳ್ಳ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಉಭಯೇಷು—ಪುರುಮೀಳ್ಹ ಮತ್ತು ಅಜಮೀಳ್ಹ ಎಂಬ ಎರಡು ಗುಂಪಿಗೂ ಸೇರಿದ । ಅಸ್ಮೇ—ನಮ್ಮಲ್ಲಿ । ಯತ್—ಯಾವಾಗ । ನೆರಃ—(ಪುರುಮೀಳ್ಹನ ಕಡೆಯ) ಋತ್ವಿಕ್ಕುಗಳು । ವಾಂ—ನಿಮ್ಮನ್ನುದ್ದೇಶಿಸಿ । ಸ್ತೋಮಂ—ಸ್ತೋತ್ರವನ್ನು । ಅವನ್—ಪಠಿಸುವರೋ (ಹಾಗೆಯೇ) । ಆಜಮೀಳ್ಹಾಸಃ—ಅಜಮೀಳ್ಹನ ಕಡೆಗೆ ಸೇರಿದ ಋತ್ವಿಕ್ಕುಗಳೂ । ಸಧಸ್ತುತಿಂ—ಮೇಲಿನ ಸ್ತುತಿಗಳೊಂದಿಗೆ ಹೊಂದಿಕೊಳ್ಳಲು ಯೋಗ್ಯವಾದ ಸ್ತೋತ್ರಗಳನ್ನು । ಅಗ್ಮನ್—ಜೊತೆಯಲ್ಲಿ ಪಠಿಸುವರೋ (ಆಗ) । ನು—ಕ್ಷಿಪ್ರವಾಗಿ । ನಃ—ನಮಗೆ । ಪುರುವೀರಂ—ಅನೇಕ ಪುತ್ರಯುಕ್ತವಾದುದೂ । ಬೃಹಂತಂ—ಮಹತ್ತಾದುದೂ ಆದ । ರಯಿಂ—ಧನವನ್ನು । ಮಿಮೂಥಾಂ—ಉಂಟುಮಾಡಿ ಕೊಡಿ.

॥ ಭಾವಾರ್ಥ ॥

ದರ್ಶನೀಯವಾದ ರೂಪವುಳ್ಳ ಎಲೈ ಅಶ್ವಿನೀದೇವತೆಗಳೇ, ಪುರುಮೀಳ್ಹ ಅಜಮೀಳ್ಹ ಎಂಬ ಎರಡು ಗುಂಪಿಗೂ ಸೇರಿದ ನಮ್ಮಲ್ಲಿ ಯಾವಾಗ ಪುರುಮೀಳ್ಹನ ಕಡೆಯ ಋತ್ವಿಕ್ಕುಗಳು ನಿಮ್ಮನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸುವರೋ, ಹಾಗೆಯೇ ಅಜಮೀಳ್ಹನ ಕಡೆಗೆ ಸೇರಿದ ಋತ್ವಿಕ್ಕುಗಳೂ ಅವುಗಳೊಂದಿಗೆ ಹೊಂದಿಕೊಳ್ಳಲು ಯೋಗ್ಯವಾದ ಸ್ತೋತ್ರಗಳನ್ನು ಜೊತೆಯಲ್ಲಿ ಪಠಿಸುವರೋ ಆಗ ಕ್ಷಿಪ್ರವಾಗಿ ನಮಗೆ ಅನೇಕ ಪುತ್ರಯುಕ್ತವಾದುದೂ, ಮಹತ್ತಾದುದೂ ಆದ ಧನವನ್ನು ಉಂಟುಮಾಡಿ ಕೊಡಿ.

## English Translation.

Dasras, mete out for us both great opulence, comprising many descendants, since the leaders of the rite (the Purumilhas), have addressed to you, Ashwins, their praise, and the Ajamilhas have united with it their laudation.



॥ ಸಂಹಿತಾಪಾಠಃ ॥

ಇಹೇಹ ಯದ್ವಾಂ ಸಮನಾ ಪಪೃಕ್ಷೇ ಸೇಯಮಸ್ಮೇ ಸುಮತಿರ್ವಾಜರತ್ನಾ ।
ಉರುಷ್ಯತಂ ಜರಿತಾರಂ ಯುವಂ ಹ ಶ್ರಿತಃ ಕಾಮೋ ನಾಸತ್ಯಾ ಯುವದ್ರಿಕ್ ॥ ೭ ॥

॥ ಪದಪಾಠಃ ॥

ಇಹಽಇಹ । ಯತ್ । ವಾಂ । ಸಮನಾ । ಪಪೃಕ್ಷೇ । ಸಾ । ಇಯಂ । ಅಸ್ಮೇ ಇತಿ । ಸುಽಮತಿಃ । ವಾಜಽರತ್ನಾ ।
ಉರುಷ್ಯತಂ । ಜರಿತಾರಂ । ಯುವಂ । ಹ । ಶ್ರಿತಃ । ಕಾಮಃ । ನಾಸತ್ಯಾ । ಯುವದ್ರಿಕ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯದ್ಯಸ್ಮಾತ್ । ಯಥಾ ವಾ ಸುಮತ್ಯಾ । ಇಹೇಹಾಸ್ಮಿನ್ನೇವ ಯಜ್ಞೇ ಸಮನಾ ಸಮಾನಮನಸ್ಕೌ । ಸಧ್ರ್ಯಶಾವಿತ್ಯರ್ಥಃ । ತೌ ವಾಂ ಯುವಾಂ ಸುಮತ್ಯಾ ಪಪೃಕ್ಷೇ । ಸ್ತುತ್ಯಾ ಸಂಯೋಜಯಾಮಿ । ಸೇಯಮಿದಾನೀಂ ಕ್ರಿಯಮಾಣಾ ಸುಮತಿಃ ಶೋಭನಸ್ತುತಿರಸ್ಮೇ ಅಸ್ಮಾಕಮೇವ ಫಲವತೀ ಭವತ್ವಿತಿ ಶೇಷಃ । ಹೇ ವಾಜರತ್ನಾ ರಮಣೀಯಾನ್ನೌ । ಅನ್ನಂ ವೈ ವಾಜಃ । ಶತ. ಬ್ರಾ. ೯-೩-೪-೧ । ಇತಿ ಶ್ರುತೇಃ । ಯುವಂ ಯುವಾಂ ಜರಿತಾರಂ ಗರಿತಾರಂ ಸ್ತೋತಾರಂ ಮಾಮುರುಷ್ಯತಂ । ರಕ್ಷತಂ । ಹೇ ನಾಸತ್ಯಾಶ್ವಿನೌ ಕಾಮೋಽಸ್ಮದೀಯೋ ಯುವದ್ರಿಕ್ ಹ ಯುವಾಮೇವ ಗಚ್ಛನ್ ಶ್ರಿತಃ ಪ್ರಾಪ್ತಃ ॥

॥ ಪ್ರತಿಪದಾರ್ಥ ॥

(ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ) । ಯತ್—ಯಾವ ಸ್ತುತಿಯಿಂದ । ಇಹೇಹ—ಈ ಯಜ್ಞದಲ್ಲಿಯೇ । ಸಮನಸ್ಕಾ—ಒಂದೇ ವಿಧವಾದ ಮನಸ್ಸುಳ್ಳ । ವಾಂ—ನಿಮ್ಮಿಬ್ಬರನ್ನೂ । ಪಪೃಕ್ಷೇ—(ಸ್ತುತಿಯೊಡನೆ) ಹೊಂದಿಕೊಳ್ಳುವಂತೆ ಮಾಡುವೆನೋ । ಸೇಯಂ ಸುಮತಿಃ—ಈಗ ಪಠಿಸುತ್ತಿರುವ ಅದೇ ಸ್ತುತಿಯು । ಅಸ್ಮೇ—ನಮಗೆ (ಫಲಪ್ರದವಾಗಲಿ) । ವಾಜರತ್ನಾ—ರಮಣೀಯವಾದ ಅನ್ನವುಳ್ಳ ಅಶ್ವಿನೀದೇವತೆಗಳೇ । ಯುವಂ—ನೀವಿಬ್ಬರೂ । ಜರಿತಾರಂ—ಸ್ತೋತೃವಾದ ನನ್ನನ್ನು । ಉರುಷ್ಯತಂ—ರಕ್ಷಿಸಿರಿ । ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಕಾಮಃ—ನಮ್ಮ ಅಭೀಷ್ಟವು । ಯುವದ್ರಿಕ್ ಹ—ನಿಮ್ಮನ್ನು ತಲಪಿದೊಡನೆಯೇ । ಶ್ರಿತಃ—ಸಿದ್ಧಿಯನ್ನು ಪಡೆಯುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಒಂದೇ ವಿಧವಾದ ಮನಸ್ಸುಳ್ಳ ನಿಮ್ಮಿಬ್ಬರನ್ನೂ ಈ ಯಜ್ಞದಲ್ಲಿಯೇ ಯಾವ ಸ್ತುತಿಯಿಂದ ಪ್ರಾರ್ಥಿಸಿ ಸ್ತುತಿಯೊಡನೆ ಸಂಯೋಜಿತರಾಗುವಂತೆ ಮಾಡುವೆನೋ, ಈಗ ಪಠಿಸುತ್ತಿರುವ ಅದೇ ಸ್ತುತಿಯು ನಮಗೆ ಫಲಪ್ರದವಾಗಲಿ. ರಮಣೀಯವಾದ ಅನ್ನವುಳ್ಳ ಅಶ್ವಿನೀದೇವತೆಗಳೇ, ನೀವಿಬ್ಬರೂ ಸ್ತೋತೃವಾದ ನನ್ನನ್ನು ರಕ್ಷಿಸಿರಿ. ಎಲೈ ಅಶ್ವಿನೀದೇವತೆಗಳೇ, ನಮ್ಮ ಅಭೀಷ್ಟವು ನಿಮ್ಮನ್ನು ತಲಪಿದೊಡನೆಯೇ ಸಿದ್ಧಿಯನ್ನು ಪಡೆಯುತ್ತದೆ.

## English Translation.

May the earnest praise, distributers of food, wherewith I asociate you both like-minded at this sacrifice, be (beneficial) to us: protect your worshipper: my desire, Nasatyas, directed towards you is gratified.



# ನಲವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಏಷ ಸ್ಯ ಭಾನುರಿತಿ ಸಪ್ತರ್ಚಂ ತ್ರಯೋದಶಂ ಸೂಕ್ತಂ। ಆದಿತಃ ಷಟ್ ಜಗತ್ಯಃ ಸಪ್ತಮೀ ತ್ರಿಷ್ಟುಪ್ । ಮಂಡಲದ್ರಷ್ಟಾ ವಾಮದೇವ ಋಷಿಃ । ಅಶ್ವಿನೌ ದೇವತಾ । ಏಷ ಸ್ಯ ತ್ರಿಷ್ಟುಬಂತಮಿತಿ ಹ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸೀದಂ ಶಸ್ಯಂ। ತಥಾ ಚ ಸೂತ್ರಿತಂ। ಅಬೋಧ್ಯಗ್ನಿರ್ಜ್ಮ ಏಷ ಸ್ಯ ಭಾನುಃ । ಆ. ೪-೧೫ । ಇತಿ ॥

ಅನುವಾದವು—ಏಷ ಸ್ಯ ಭಾನುಃ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ವಾಮದೇವನು ಋಷಿಯು ; ಅಶ್ವಿನೀದೇವತೆಗಳು ದೇವತೆಯು ; ಈ ಸೂಕ್ತದ ಮೊದಲನೆಯ ಆರು ಋಕ್ಕುಗಳು ಜಗತೀಛಂದಸ್ಕವು ; ಏಳನೆಯದು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ ಏಷ ಸ್ಯ ತ್ರಿಷ್ಟುಬಂತಂ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಜಗತೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಅಬೋಧ್ಯಗ್ನಿರ್ಜ್ಮ ಏಷ ಸ್ಯ ಭಾನುಃ ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

## ಸೂಕ್ತ—೪೫

ಮಂಡಲ—೪ ॥ ಅನುವಾಕ—೪ ॥ ಸೂಕ್ತ—೪೫ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿ—ವಾಮದೇವಃ ॥

॥ ದೇವತಾ—ಅಶ್ವಿನೌ ॥

॥ ಛಂದಃ—೧-೬. ಜಗತೀ ೭. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಏಷ ಸ್ಯ ಭಾನುರುದಿಯರ್ತಿ ಯುಜ್ಯತೇ ರಥಃ ಪರಿಜ್ಮಾ ದಿವೋ ಅಸ್ಯ ಸಾನವಿ ।

ಪೃಕ್ಷಾಸೋ ಅಸ್ಮಿನ್ಮಿಥುನಾ ಅಧಿ ತ್ರಯೋ ದೃತಿಸ್ತುರೀಯೋ ಮಧುನೋ ವಿ ರಪ್ಶತೇ ॥ ೧ ॥

॥ ಪದಪಾಠಃ ॥

ಏಷಃ । ಸ್ಯಃ । ಭಾನುಃ । ಉತ್ । ಇಯರ್ತಿ । ಯುಜ್ಯತೇ । ರಥಃ । ಪರಿಽಜ್ಮಾ । ದಿವಃ । ಅಸ್ಯ । ಸಾನವಿ ।
ಪೃಕ್ಷಾಸಃ । ಅಸ್ಮಿನ್ । ಮಿಥುನಾಃ । ಅಧಿ । ತ್ರಯಃ । ದೃತಿಃ । ತುರೀಯಃ । ಮಧುನಃ । ವಿ । ರಪ್ಶತೇ ॥೧॥

॥ ಸಾಯಣಭಾಷ್ಯಂ ॥

ಏಷ ಪುರತೋ ದೃಶ್ಯಮಾನಃ ಸ್ಯ ಸ ಭಾನುರ್ದೀಪ್ತಿಮಾನಾದಿತ್ಯ ಉದಿಯರ್ತಿ । ಊರ್ಧ್ವಂ ಗಚ್ಛತಿ । ಪುರುಸ್ತಾತ್ಪ್ರಥಿಶ್ಚ ಯುವಯೋಃ ಸಂಬಂಧೀ ಪರಿಜ್ಮಾ ಪರಿತೋ ಗಂತಾಸ್ಯ ದಿವೋ ದ್ಯೋತಮಾನಸ್ಯಾದಿತ್ಯಸ್ಯ ಸಾನವಿ ಸಾನೌ ಸಮುಚ್ಛ್ರಿತಪ್ರದೇಶ ಉದಿಯರ್ತೀತಿ ವಾ ರಪ್ಶತ ಇತಿ ವಾ ಸಂಬಂಧನೀಯಂ । ಅಸ್ಮಿನ್ರಥೇಽಧಿ ಉಪರಿಭಾಗೇ ಮಿಥುನಾ ಮಿಥುನೀಭೂತಾಸ್ತ್ರಯಸ್ತ್ರಿವಿಧಾಃ ಪೃಕ್ಷಾಸೋಽನ್ನಾನಿ । ತ್ರೇಧಾ ವಿಹಿತಂ ಚಾನ್ನಂ । ಇದಮನ್ನಮಶನಂ ಪಾನಂ ಖಾದಶ್ಚೇತಿ ಹಿ ಶ್ರುತಂ । ತ್ರಿಷ್ವಪಿ ಪದಾರ್ಥೇಷು ಮಿಥುನಶಬ್ದಸ್ತ್ರೈತ್ರಿರೀಯೇಷು ದೃಶ್ಯತೇ । ಮಾತಾ ಪಿತಾ ಪುತ್ರಸ್ತ್ರದೇವ ತನ್ಮಿಥುನಮಿತಿ । ದೃತಿಸ್ತುರೀಯಃ । ರಸದ್ರವ್ಯಾಧಾರಃ ಪದಾರ್ಥಶ್ಚರ್ಮಮಯೋ ದೃತಿರಿತ್ಯುಚ್ಯತೇ । ಮಧುನಃ ಸೋಮರಸಸ್ಯ ಸಂಬಂಧೀ ಮಧುಪೂರ್ಣಶ್ಚತುರ್ಥೋ ವಿ ರಪ್ಶತೇ । ವಿವಿಧಂ ರಾಜತೇ ॥

॥ ಪ್ರತಿಪದಾರ್ಥ ॥

ಏಷಃ—ಮುಂದುಗಡೆ ಪ್ರಕಾಶಿಸುತ್ತಿರುವವನೂ । ಸ್ಯಃ—ಪ್ರಸಿದ್ಧನೂ ಆದ । ಭಾನುಃ—ಆದಿತ್ಯನು । ಉದಿಯರ್ತಿ—ಉದಯಿಸಿ ಮೇಲೆದ್ದು ಬರುತ್ತಿದ್ದಾನೆ (ಎಲೈ ಅಶ್ವಿನೀದೇವತೆಗಳೇ) । ರಥಃ—ನಿಮ್ಮ ರಥವು । ಪರಿಜ್ಮಾ—ಸುತ್ತಲೂ ಸಂಚರಿಸುವ ಸ್ವಭಾವವುಳ್ಳದ್ದಾಗಿ । ಅಸ್ಯ ದಿವಃ—ಪ್ರಭಾವಯುತನಾದ ಆದಿತ್ಯನ । ಸಾನವಿ—ಅತ್ಯುನ್ನತ ಶಿಖರ ಪ್ರದೇಶದಲ್ಲಿ ॥ ಯುಜ್ಯತೇ— (ಸೂರ್ಯಬಿಂಬದೊಂದಿಗೆ) ಸೇರಿಕೊಳ್ಳುತ್ತದೆ । ಅಸ್ಮಿನ್—ಈ ರಥದಲ್ಲಿ । ಅಧಿ—ಮೇಲ್ಭಾಗದಲ್ಲಿ । ಮಿಥುನಾಃ—ಒಟ್ಟಿಗೆ ಸೇರಿಕೊಂಡಿರುವುವೂ । ತ್ರಯಃ—ಮೂರು ವಿಧವಾದವೂ ಆದ । ಪೃಕ್ಷಾಸಃ—ಅನ್ನಗಳಿವೆ । ಮಧುನಃ—ಸೋಮರಸದಿಂದ ತುಂಬಿದ । ದೃತಿಃ—ಚರ್ಮಪಾತ್ರೆಯು । ತುರೀಯಃ—ನಾಲ್ಕನೆಯದಾಗಿ । ವಿರಪ್ಶತೇ—ಪ್ರಕಾಶಿಸುತ್ತದೆ.

॥ ಭಾವಾರ್ಥ ॥

ಮುಂದುಗಡೆ ಪ್ರಕಾಶಿಸುತ್ತಿರುವವನೂ, ಪ್ರಸಿದ್ಧನೂ ಆದ ಆದಿತ್ಯನು ಉದಯಿಸಿ ಮೇಲೆದ್ದು ಬರುತ್ತಿದ್ದಾನೆ. ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವು ಸುತ್ತಲೂ ಸಂಚರಿಸುವ ಸ್ವಭಾವವುಳ್ಳದ್ದಾಗಿ, ಪ್ರಭಾವಯುತನಾದ ಈ ಆದಿತ್ಯನ ಅತ್ಯುನ್ನತಶಿಖರಪ್ರದೇಶದಲ್ಲಿ ಸೂರ್ಯಬಿಂಬದೊಂದಿಗೆ ಸೇರಿಕೊಳ್ಳುತ್ತದೆ. ಈ ರಥದ ಮೇಲ್ಭಾಗದಲ್ಲಿ ಒಟ್ಟಿಗೆ ಸೇರಿಕೊಂಡಿರುವುವೂ, ಮೂರು ವಿಧವಾದವೂ ಆದ ಅನ್ನಗಳಿವೆ. ಸೋಮರಸದಿಂದ ತುಂಬಿದ ಚರ್ಮ ಪಾತ್ರೆಯು ನಾಲ್ಕನೆಯದಾಗಿ ಪ್ರಕಾಶಿಸುತ್ತದೆ.

## English Translation.

The sun rises: your chariot, (Ashwins), traversing (the regions), is associated with the divine (orb) on the summit (of the eastern mountain): in it are the three analogous kinds of foud, and the leather vessel of the sweet Soma juice appears as the fourth.

॥ ವಿಶೇಷವಿಷಯಗಳು ॥

ಮಿಥುನಾಃ ತ್ರಯಃ ಪೃಕ್ಷಾಸಃ— ಮಿಥುನೀಭೂತಾಃ ತ್ರಿವಿಧಾಃ ಅನ್ನಾನಿ । ತ್ರೇಧಾ ವಿಹಿತಂ ಚಾನ್ನಂ । ಇದ ಮನ್ನಮಶನಂ ಪಾನಂ ಖಾದೆಶ್ಚ ಇತಿ ಹಿ ಶ್ರುತಂ । ಇಲ್ಲಿ ಮೂರು ವಿಧವಾದ ಅನ್ನಗಳೆಂದು ವಿವರಣೆ ಇದೆ. ಅವುಗಳಾವವೆಂದರೆ—ಅನ್ನ, ಪಾನೀಯ ಮತ್ತು ಖಾದ (ಅಗೆದು ತಿನ್ನುವ ಪದಾರ್ಥ) ಇವೆಲ್ಲವೂ ಒಟ್ಟಿಗೆ ಸೇರಿವೆಯೆಂದು ಮಿಥುನಶಬ್ದಪ್ರಯೋಗವು ಸೂಚಿಸುವುದು. ಮಿಥುನಶಬ್ದಕ್ಕೆ ಎರಡು ವಸ್ತುಗಳ ಪರಸ್ಪರ ಸಂಯೋಗವೆಂದು ಅರ್ಥವಿರುವುದಾದರೂ ಇಲ್ಲಿ ಮೂರು ವಸ್ತುಗಳ ಸಂಯೋಗಕ್ಕೂ ಇದು ಅನ್ವಯಿಸುವುದೆಂದು ಹೇಳಿ ಈ ವಿಷಯದಲ್ಲಿ—

ತ್ರಿವೃದ್ವೈ ಬರ್ಹಿರ್ಭವತಿ । ಮಾತಾ ಪಿತಾ ಪುತ್ರಃ । ತದೇವ ತನ್ಮಿಥುನಂ । ಉಲ್ಬಂ ಗರ್ಭೋ ಜರಾಯು । ತದೇವ ತನ್ಮಿಥುನಂ । ತ್ರೇಧಾ ಬರ್ಹಿಸ್ಸನ್ನದ್ಧಂ ಭವತಿ ।

(ತೈ. ಬ್ರಾ. ೧-೭-೩-೧)

ಎಂಬ ತೈತ್ತಿರೀಯ ಬ್ರಾಹ್ಮಣವಾಕ್ಯವನ್ನುದಾಹರಿಸಿದಾರೆ. ಈ ಉದಾಹರಣೆಯಲ್ಲಿ—ತಾಯಿ, ತಂದೆ, ಮಗ ಎಂಬ ಮೂವರೂ ಭಿನ್ನಾಭಿಪ್ರಾಯವಿಲ್ಲದೆ ಯಾವ ರೀತಿ ಪರಸ್ಪರ ಸಹಕರಿಸಿ ಒಟ್ಟಿಗೆ ಸೇರುವರೋ ಅದರಂತೆ ಯಜ್ಞವೇದಿಯಲ್ಲಿ ದೇವತೆಗಳು ಬಂದು ಕೂಡುವುದಕ್ಕಾಗಿ ಆಸನಗಳನ್ನು ಸಿದ್ಧಪಡಿಸುವಾಗ ಆಸನಗಳು ಮೆತ್ತಗಿರುವುದಕ್ಕಾಗಿ ಒಂದೇ ಸಮನಾಗಿ ಕತ್ತರಿಸಿದ ದರ್ಭೆಗಳನ್ನು ಪದರಪದರಗಳಾಗಿ ಒಂದು ಪದರದ ಮೇಲೊಂದರಂತೆ ಮೂರು ಪದರ ದರ್ಭೆಗಳನ್ನು ಹರಡುವುದು ರೂಢಿಯಾಗಿದೆ. ಈ ಮೂರು ಪದರಗಳೂ ಒಟ್ಟಿಗೆ ಸೇರಿ ಒಂದೇ ಆಸನವಾಗಿರುವುದನ್ನು ವಿವರಿಸುವುದಕ್ಕಾಗಿ ಮಾತಾ ಪಿತಾ ಪುತ್ರರ ಸಂಬಂಧವನ್ನು ದೃಷ್ಟಾಂತವಾಗಿ ಹೇಳಲಾಗಿದೆ. ಪ್ರಕೃತ ಋಕ್ಕಿನಲ್ಲಿ ಮೂರು ವಿಧವಾದ ಅನ್ನಗಳ ವೈಶಿಷ್ಟ್ಯವನ್ನೂ ಇದೇ ದೃಷ್ಟಾಂತದಿಂದ ಭಾಷ್ಯಕಾರರು ವಿವರಿಸಿದ್ದಾರೆ.

॥ ಸಂಹಿತಾಪಾಠಃ ॥

ಉದ್ವಾಂ ಪೃಕ್ಷಾಸೋ ಮಧುಮಂತ ಈರತೇ ರಥಾ ಅಶ್ವಾಸ ಉಷಸೋ ವ್ಯುಷ್ಟಿಷು ।

ಅಪೋರ್ಣುವಂತಸ್ತಮ ಆ ಪರೀವೃತಂ ಸ್ವರ್ಣ ಶುಕ್ರಂ ತನ್ವಂತ ಆ ರಜಃ ॥

‖ ಪದಪಾಠಃ ‖

ಉತ್ । ವಾಂ । ಪೃಕ್ಷಾಸಃ । ಮಧುಽಮಂತಃ । ಈರತೇ । ರಥಾಃ । ಅಶ್ವಾಸಃ । ಉಷಸಃ । ವಿಽಉಷ್ಟಿಷು ।
ಅಪಽಊರ್ಣುವಂತಃ । ತಮಃ । ಆ । ಪರಿಽವೃತಂ । ಸ್ವಃ । ನ । ಶುಕ್ರಂ । ತನ್ವಂತಃ । ಆ । ರಜಃ ॥ ೨ ॥

‖ ಸಾಯಣಭಾಷ್ಯಂ ‖

ಪೃಕ್ಷಾಸಃ ಪೃಕ್ಷಾಸ್ತ್ರಿವಿಧಾನ್ನವಂತೋ ಮಧುಮಂತಃ ಸೋಮರಸೋಪೇತಾ ಅಶ್ವಾಸೋಽಶ್ವ-ಯುಕ್ತಾ ವಾಂ ಯುವಯೋಃ ರಥಾಃ । ಯದ್ವಾ । ಮಧುಮಂತಃ ಪೃಕ್ಷಾ ರಥಾ ಅಶ್ವಾಸೋಽಶ್ವಾ ಉಷಸೋ ವ್ಯುಷ್ಟಿಷು ವ್ಯುಚ್ಛನೇಷು ಸತ್ಸೂದೀರತೇ । ಉನ್ಮುಖಂ ಗಚ್ಛಂತಿ । ಕಿಂ ಕುರ್ವಂತಃ । ಪರೀವೃತಂ ಪರಿತೋ ವ್ಯಾಪ್ತಂ ತಮ ಆ ಸರ್ವತೋಽಪೋರ್ಣುವಂತೋಽಪಾಕುರ್ವಂತಃ ಸ್ವರ್ನ ಆದಿತ್ಯ ಇವ ಶುಕ್ರಂ ದೀಪ್ತಂ ರಜಸ್ತೇಜಶ್ಚ ತನ್ವಂತಃ । ಆಕಾರಶ್ಚಾರ್ಥೇ । ಯದ್ವಾ । ರಜೋಽಂತರಿಕ್ಷಂ ಶುಕ್ರಂ ದೀಪ್ತಂ ತನ್ವಂತಃ ॥

‖ ಪ್ರತಿಪದಾರ್ಥ ‖

ಪೃಕ್ಷಾಸಃ—ಅನ್ನಯುಕ್ತವಾದವೂ । ಮಧುಮಂತಃ—ಸೋಮರಸದಿಂದ ಪೂರ್ಣವಾದವೂ । ಅಶ್ವಾಸಃ—ಅಶ್ವಯೋಜಿತವಾದವೂ ಆದ । ವಾಂ ರಥಾಃ—ನಿಮ್ಮ ರಥಗಳು । ಸ್ವಃ ನ—ಆದಿತ್ಯನಂತೆ । ಪರೀವೃತಂ—ಸುತ್ತಲೂ ಆವರಿಸುವ । ತಮಃ—ಕಗ್ಗತ್ತಲೆಯನ್ನು । ಆ—ಸುತ್ತಲೂ । ಅಪೋರ್ಣುವಂತಃ—ನಾಶಪಡಿಸುತ್ತಲೂ । ಶುಕ್ರಂ—ಪ್ರಕಾಶಮಾನವಾದ । ರಜಃ—ತೇಜಸ್ಸನ್ನು । ಆ ತನ್ವಂತಃ—ಸುತ್ತಲೂ ಪ್ರಸರಿಸ್ಸುತ್ತಲೂ । ಉಷಸಃ—ಉಷಸ್ಸುಗಳ । ವ್ಯುಷ್ಟಿಷು—ಆವಿರ್ಭಾವ ಕಾಲಗಳಲ್ಲಿ । ಉದೀರತೇ—ಊರ್ಧ್ವಮುಖವಾಗಿ ಸಂಚರಿಸುತ್ತವೆ.

‖ ಭಾವಾರ್ಥ ‖

ಅನ್ನಯುಕ್ತವಾದವೂ, ಸೋಮರಸದಿಂದ ಪೂರ್ಣವಾದವೂ, ಅಶ್ವಯೋಜಿತವಾದವೂ ಆದ ನಿಮ್ಮ ರಥಗಳು ಆದಿತ್ಯನಂತೆ ಸುತ್ತಲೂ, ಪ್ರಕಾಶಮಾನವಾದ ತೇಜಸ್ಸನ್ನು ಎಲ್ಲಾ ಕಡೆಯೂ ಪ್ರಸರಿಸುವಂತೆ ಮಾಡುತ್ತಲೂ, ಉಷಸುಗಳ ಆವಿರ್ಭಾವಕಾಲದಲ್ಲಿ ಊರ್ಧ್ವಮುಖವಾಗಿ ಸಂಚರಿಸುತ್ತವೆ.

## English Translation.

Your food-bearing, Soma-laden, well-horsed chariots, appear at the opening of the dawn, scattering the surrounding darkness like the sun, and spreading bright radiance over the firmament.



॥ ಸಂಹಿತಾಪಾಠಃ ॥

ಮಧ್ವಃ ಪಿಬತಂ ಮಧುಪೇಭಿರಾಸಭಿರುತ ಪ್ರಿಯಂ ಮಧುನೇ ಯುಂಜಾಥಾಂ ರಥಂ ।
ಆ ವರ್ತನಿಂ ಮಧುನಾ ಜಿನ್ವಥಸ್ಪಥೋ ದೃತಿಂ ವಹೇಥೇ ಮಧುಮಂತಮಶ್ವಿನಾ ॥ ೩ ॥

॥ ಪದಪಾಠಃ ॥

ಮಧ್ವಃ । ಪಿಬತಂ । ಮಧುಽಪೇಭಿಃ । ಆಸಽಭಿಃ । ಉತ । ಪ್ರಿಯಂ । ಮಧುನೇ । ಯುಂಜಾಥಾಂ । ರಥಂ ।
ಆ । ವರ್ತನಿಂ । ಮಧುನಾ । ಜಿನ್ವಥಃ । ಪಥಃ । ದೃತಿಂ । ವಹೇಥೇ ಇತಿ । ಮಧುಽಮಂತಂ । ಅಶ್ವಿನಾ ॥

॥ ಸಾಯಣಭಾಷ್ಯಂ ॥

ಮಧ್ವೋ ಮಧುರಂ ಸೋಮರಸಂ ಮಧುಪೇಭಿಃ ಸೋಮಪಾನಾರ್ಹೈರಾಸಭಿರಾಸ್ಯೈಃ ಪಿಬತಂ । ಉತಾಪಿ ಚ ಪ್ರಿಯಂ ರಥಂ ಮಧುನೇ ಮಧುಲಾಭಾಯ ಯುಂಜಾಥಾಂ । ಅಶ್ವೈರ್ಯುಕ್ತಂ ಕುರುತಂ । ವರ್ತನಿಂ ಯಜಮಾನಗೃಹಮಾ ಗಚ್ಛತಮಿತಿ ಶೇಷಃ । ಷಥೋ ಗಮನಮಾರ್ಗಾನ್ಮಧುನಾ ಜಿನ್ವಥಃ । ಪ್ರೀಣಯತಂ । ಯದ್ವೈಕಂ ವಾಕ್ಯಂ । ಪಥೋ ವರ್ತನಿಮಾಕಾಶಂ ಜಿನ್ವಥಃ । ದೃತಿಂ ಮಧುಮಂತಂ ಹೇ ಅಶ್ವಿನಾ ವಹೇಥೇ । ಧಾರಯಥಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಮಧುಪೇಭಿಃ—ಮಧುವನ್ನು ಪಾನಮಾಡಲು ಯೋಗ್ಯಗಳಾದ । ಆಸಭಿಃ—ಮುಖಗಳಿಂದ । ಮಧ್ವಃ—ಮಧುರವಾದ ಸೋಮರಸವನ್ನು । ಪಿಬತಂ—ಪಾನಮಾಡಿರಿ । ಉತ—ಮತ್ತು । ಪ್ರಿಯಂ—ಹಿತಕರವಾದ । ರಥಂ—ರಥವನ್ನು । ಮಧುನೇ—ಸೋಮಪಾನಾರ್ಥವಾಗಿ । ಯುಂಜಾಥಾಂ—ಹೂಡಿರಿ । ವರ್ತನಿಂ—ಯಜಮಾನನ ಗೃಹಕ್ಕೆ । ಆ (ಗಚ್ಛತಂ) —ದಯಮಾಡಿರಿ । ಪಥಃ—ನಿಮ್ಮ ಗಮನಮಾರ್ಗವನ್ನು । ಮಧುನಾ—ಸೋಮರಸದಿಂದ । ಜಿನ್ವಥಃ—ಪ್ರಿಯಕರವಾಗುವಂತೆ ಮಾಡಿ । ಮಧುಮಂತಂ—ಸೋಮರಸದಿಂದ ಪೂರ್ಣವಾದ । ದೃತಿಂ—ಚರ್ಮಪಾತ್ರೆಯನ್ನು । ವಹೇಥೇ—ತೆಗೆದುಕೊಂಡುಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮಧುವನ್ನು ಪಾನಮಾಡಲು ಯೋಗ್ಯಗಳಾದ ಮುಖಗಳಿಂದ ಮಧುರವಾದ ಸೋಮರಸವನ್ನು ಪಾನಮಾಡಿರಿ. ಮತ್ತು ಹಿತಕರವಾದ ರಥವನ್ನು ಸೋಮಪಾನಾರ್ಥವಾಗಿ ಹೂಡಿರಿ.

ಯಜಮಾನನ ಗೃಹಕ್ಕೆ ಬನ್ನಿರಿ. ನಿಮ್ಮ ಗಮನಮಾರ್ಗವನ್ನು ಸೋಮರಸದಿಂದ ಪ್ರೀತಿಕರವಾಗುವಂತೆ ಮಾಡಿ. ಸೋಮರಸದಿಂದ ಪೂರ್ಣವಾದ ಚರ್ಮಪಾತ್ರೆಯನ್ನು ತೆಗೆದುಕೊಂಡು ಬನ್ನಿ.

**English Translation.**

Drink of the Soma juice with mouths (fit for) imbibing the beverage: harness your beloved chariot for the Soma juice: (come to the dwelling) of the sacrificer: enliven the path with the Soma: bring, Ashwins, the leather vessels filled with the Soma juice.



॥ ಸಂಹಿತಾಪಾಠಃ ॥

ಹಂಸಾಸೋ ಯೇ ವಾಂ ಮಧುಮಂತೋ ಅಸ್ರಿಧೋ ಹಿರಣ್ಯಪರ್ಣಾ
ಉಹುವ ಉಷರ್ಬುಧಃ ।
ಉದಪ್ರುತೋ ಮಂದಿನೋ ಮಂದಿನಿಸ್ಪೃಶೋ ಮಧ್ವೋ ನ ಮಕ್ಷಃ
ಸವನಾನಿ ಗಚ್ಛಥಃ ॥ ೪ ॥

॥ ಪದಪಾಠಃ ॥

ಹಂಸಾಸಃ । ಯೇ । ವಾಂ । ಮಧುಽಮಂತಃ । ಅಸ್ರಿಧಃ । ಹಿರಣ್ಯಽಪರ್ಣಾಃ । ಉಹುವಃ । ಉಷಃಽಬುಧಃ ।
ಉದಽಪ್ರುತಃ । ಮಂದಿನಃ । ಮಂದಿಽನಿಸ್ಪೃಶಃ । ಮಧ್ವಃ । ನ । ಮಕ್ಷಃ । ಸವನಾನಿ । ಗಚ್ಛಥಃ ॥ ೪ ॥

॥ ಸಾಯಣಭಾಷ್ಯಂ ॥

ಹಂಸಾಸೋಽಧ್ವನಿ ಶೀಘ್ರಂ ಗಂತಾರೋ ಮಧುಮಂತೋ ಮಾಧುರ್ಯೋಪೇತಾ ಅಸ್ರಿಧೋಽದ್ರೋಗ್ಧಾರೋ ಹಿರಣ್ಯಪರ್ಣಾ ಹಿತರಮಣೀಯಪರ್ಣಾ ಉಹುವೋ ವೋಢಾರ ಉಷರ್ಬುಧ ಉಷಸಿ ಬುಧ್ಯಮಾನಾ ಉದಪ್ರುತ ಉದಕಸ್ಯ ಪ್ಲಾವಯಿತಾರೋ ಮಂದಿನೋ ಹರ್ಷಯಿತಾರೋ ಮಂದಿನಿಸ್ಪೃಶೋ ಮಂದಿನಂ ಸೋಮಂ ಸ್ಪೃಶಂತಃ । ಇತ್ಥಂ ಲಕ್ಷಣಾ ಅಶ್ವಾ ಯೇ ಸಂತಿ ತೈರಶ್ವೈರ್ಮಧ್ವೋ ನ ಮಧ್ವಿವ ಮಕ್ಷೋ ಮಕ್ಷಿಕಾಃ ಸವನಾನ್ಯಸ್ಮದೀಯಾನಿ ಗಚ್ಛಥಃ ॥

|| ಪ್ರತಿಪದಾರ್ಥ ||

ಹೇ ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ | ಹಂಸಾಸಃ—ಶೀಘ್ರವಾಗಿ ಸಂಚರಿಸತಕ್ಕವೂ | ಮಧುಮಂತಃ—ಮಾಧುರ್ಯಗುಣದಿಂದ ಕೂಡಿದವೂ | ಅಸ್ರಿಧಃ—ಎದುರುಬೀಳದಿರುವುವೂ | ಹಿರಣ್ಯಪರ್ಣಾಃ—ಸುವರ್ಣನಿರ್ಮಿತವಾದ ರೆಕ್ಕೆಗಳುಳ್ಳವೂ | ಉಹುವಃ—ಭಾರವನ್ನು ವಹಿಸಲು ಸಮರ್ಥವಾದವೂ | ಉಷರ್ಬುಧಃ—ಉಷಃಕಾಲದಲ್ಲಿ ಎಚ್ಚರಗೊಳ್ಳುವುವೂ | ಉದಪ್ರುತಃ—ಉದಕವನ್ನು ಹರಡುವುವೂ | ಮಂದಿನಃ—ಹರ್ಷಕಾರಕವಾದವೂ | ಮಂದಿನಸ್ಪೃಶಃ—ಹರ್ಷಜನಕವಾದ ಸೋಮಸ್ಪರ್ಶದಿಂದ ಉತ್ತೇಜಿತವಾಗುವುವೂ ಆದ | ವಾಂ ಯೇ—ನಿಮ್ಮ ಯಾವ ಅಶ್ವಗಳಿವೆಯೋ (ಅವುಗಳೊಡನೆ) | ಮಕ್ಷಃ—ಜೇನುನೊಣಗಳು | ಮಧ್ವೋ ನ—ಮಧುವನ್ನು ಆರಿಸಿ ಬಂದು ತುಂಬಿಕೊಳ್ಳುವಂತೆ | ಸವನಾನಿ—ನಮ್ಮ ಯಜ್ಞಗಳಿಗೆ | ಗಚ್ಛಥಃ—ದಯಮಾಡಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಶೀಘ್ರವಾಗಿ ಸಂಚರಿಸತಕ್ಕವೂ ಮಾಧುರ್ಯಗುಣದಿಂದ ಕೂಡಿದವೂ ಎದುರುಬೀಳದಿರುವುವೂ, ಸುವರ್ಣನಿರ್ಮಿತವಾದ ರೆಕ್ಕೆಗಳುಳ್ಳವೂ, ಭಾರವನ್ನು ವಹಿಸಲು ಸಮರ್ಥವಾದವೂ, ಉಷಃಕಾಲದಲ್ಲಿ ಎಚ್ಚರಗೊಳ್ಳುವುವೂ, ಉದಕವನ್ನು ಹರಡುವುವೂ, ಹರ್ಷಕಾರಕವಾದವೂ, ಹರ್ಷಜನಕವಾದ ಸೋಮಸ್ಪರ್ಶದಿಂದ ಉತ್ತೇಜಿತವಾಗುವವೂ ಆದ ನಿಮ್ಮ ಯಾವ ಅಶ್ವಗಳಿವೆಯೋ, ಅವುಗಳೊಡನೆ, ಜೇನುನೊಣಗಳು ಮಧುವಿರುವ ಜಾಗಕ್ಕೆ ಬಂದು ತುಂಬಿಕೊಳ್ಳುವಂತೆ ನಮ್ಮ ಯಜ್ಞಗೃಹಗಳಿಗೆ ಆದರದಿಂದ ಬನ್ನಿರಿ.

## English Translation.

Come to sacrifices as flies to honey, (with those horses) that are swift of speed, gentle, unrefractory, goldenwinged, bearers (of burthens) wakers at dawn, dispensers of water, exulting and sipping the Soma juice.



|| ಸಂಹಿತಾಪಾಠಃ ||

ಸ್ವಧ್ವರಾಸೋ ಮಧುಮಂತೋ ಅಗ್ನಯ ಉಸ್ರಾ ಜರಂತೇ ಪ್ರತಿ ವಸ್ತೋರಶ್ವಿನಾ |

ಯನ್ನಿಕ್ತಹಸ್ತಸ್ತರಣಿರ್ವಿಚಕ್ಷಣಃ ಸೋಮಂ ಸುಷಾವ ಮಧುಮಂತಮದ್ರಿಭಿಃ || ೩ ||

॥ ಪದಪಾಠಃ ॥

ಸು॒ऽಅ॒ಧ್ವರಾಸಃ । ಮಧು॑ऽಮಂತಃ । ಅ॒ಗ್ನಯಃ॑ । ಉ॒ಸ್ರಾ । ಜ॒ರಂ॒ತೇ । ಪ್ರತಿ॑ । ವಸ್ತೋಃ॑ । ಅ॒ಶ್ವಿನಾ॑ ।

ಯತ್ । ನಿ॒ಕ್ತಃ॑ऽಹಸ್ತಃ । ತ॒ರಣಿಃ॑ । ವಿ॒ऽಚ॒ಕ್ಷ॒ಣಃ । ಸೋಮಂ॑ । ಸು॒ಸಾವ॑ । ಮಧು॑ऽಮಂತಂ । ಅದ್ರಿ॑ऽಭಿಃ ॥೫॥

॥ ಸಾಯಣಭಾಷ್ಯಂ ॥

ಸ್ವಧ್ವರಾಸಃ ಶೋಭನಯಾಗಸಾಧನಾ ಮಧುಮಂತೋ ಹೋತವ್ಯಸೋಮವಂತೋऽಗ್ನಯೋ ಗಾರ್ಹಪತ್ಯಾದಯ ಉಸ್ರಾ ಸಹ ನಿವಸಂತಾವಶ್ವಿನೌ ಪ್ರತಿ ವಸ್ತೋರನ್ವಹಮುಷಃಕಾಲೇ ಜರಂತೇ । ಸ್ತುವಂತಿ । ಯದ್ಯದಾ ನಿಕ್ತಹಸ್ತಃ ಸಮಂತ್ರೇಣೋದಕೇನ ಶೋಧಿತಹಸ್ತಸ್ತರಣಿಃ ಕರ್ಮಣಸ್ತಾರಯಿತಾ ವಿಚಕ್ಷಣೋ ವಿವಿಧಂ ದ್ರಷ್ಟಾಧ್ವರ್ಯುಃ ಸೋಮಂ ಮಧುಮಂತಮದ್ರಿಭಿರ್ಗ್ರಾವಭಿಃ ಸುಷಾವ । ಅಭಿಷುತವಾನ್ । ತದಾ ತೇऽಗ್ನಯಃ ಸ್ತುವಂತಿ । ತಸ್ಮಾದಾಗಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಯತ್— ಯಾವಾಗ । ನಿಕ್ತಹಸ್ತಃ— ಮಂತ್ರೋದಕದಿಂದ ಶುದ್ಧಿಮಾಡಲ್ಪಟ್ಟ ಹಸ್ತವುಳ್ಳವನೂ । ತರಣಿಃ—ಕರ್ಮವನ್ನು ಸಾಂಗವಾಗಿ ನೆರವೇರಿಸುವಂತೆ ಮಾಡುವವನೂ । ವಿಚಕ್ಷಣಃ—ಯಜ್ಞಕರ್ಮಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡುವವನೂ ಆದ ಅಧ್ವರ್ಯುವು । ಮಧುಮಂತಂ—ಮಧುರರಸದಿಂದ ಕೂಡಿದ । ಸೋಮಂ—ಸೋಮವನ್ನು । ಅದ್ರಿಭಿಃ—ಕಲ್ಲುಗಳಿಂದ । ಸುಷಾವ—ಹಿಂಡುವನೋ (ಆಗ) । ಸ್ವಧ್ವರಾಸಃ— ಶ್ರೇಷ್ಠವಾದ ಯಜ್ಞಸಾಧನವುಳ್ಳವರೂ । ಮಧುಮಂತಃ—ಸೋಮವನ್ನು (ದೇವತೆಗಳಿಗೆ) ವಹಿಸಲು ಹೊಂದಿರುವವರೂ ಆದ । ಅಗ್ನಯಃ—ಗಾರ್ಹಪತ್ಯಾದ್ಯಗ್ನಿಗಳು । ಅಶ್ವಿನಾ—ಅಶ್ವಿನೀದೇವತೆಗಳನ್ನು । ಪ್ರತಿ ವಸ್ತೋಃ— ಪ್ರತಿದಿನವೂ । ಉಸ್ರಾ—ಉಷಃಕಾಲದಲ್ಲಿ । ಜರಂತೇ—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಮಂತ್ರೋದಕದಿಂದ ಶುದ್ಧಿಮಾಡಲ್ಪಟ್ಟ ಹಸ್ತವುಳ್ಳವನೂ, ಕರ್ಮವನ್ನು ಸಾಂಗವಾಗಿ ನೆರವೇರಿಸುವಂತೆ ಮಾಡುವವನೂ, ಯಜ್ಞಕರ್ಮಗಳನ್ನು ಪರಿಶೀಲಿಸುವವನೂ ಆದ ಅಧ್ವರ್ಯುವು ಮಧುರರಸದಿಂದ ಕೂಡಿದ ಸೋಮವನ್ನು ಕಲ್ಲುಗಳಿಂದ ಹಿಂಡಿದಾಗಲೆಲ್ಲಾ, ಶ್ರೇಷ್ಠವಾದ ಯಜ್ಞಸಾಧನವುಳ್ಳವರೂ, ದೇವತೆಗಳಿಗೆ ವಹಿಸಲು ಸೋಮವನ್ನು ಹೊಂದಿರುವವರೂ ಆದ ಗಾರ್ಹಪತ್ಯಾದ್ಯಗ್ನಿಗಳು ಪ್ರತಿದಿನವೂ ಉಷಃಕಾಲದಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸುತ್ತಾರೆ.

## English Translation.

The sacred fires, the insturments of holy sacrifice, the conveyers of libations, praise the associated Ashwins at the break of day, when the observant (priest) the conductor of the rite, with washed hands has expressed by the (grinding) stones the sweet-favoured Soma juice.



॥ ಸಂಹಿತಾಪಾಠಃ ॥

ಆಕೇನಿಪಾಸೋ ಅಹಭಿರ್ದವಿಧ್ವತಃ ಸ್ವ೧ರ್ಣ ಶುಕ್ರಂ ತನ್ವಂತ ಆ ರಜಃ ।
ಸೂರಶ್ಚಿದಶ್ವಾನ್ಯುಯುಜಾನ ಈಯತೇ ವಿಶ್ವಾಂ ಅನು ಸ್ವಧಯಾ ಚೇತಥ-
ಸ್ಪಥಃ ॥ ೬ ॥

॥ ಪದಪಾಠಃ ॥

ಆಕೇऽನಿಪಾಸಃ । ಅಹऽಭಿಃ । ದವಿಧ್ವತಃ । ಸ್ವಃ । ನ । ಶುಕ್ರಂ । ತನ್ವಂತಃ । ಆ । ರಜಃ ।
ಸೂರಃ । ಚಿತ್ । ಅಶ್ವಾನ್ । ಯುಯುಜಾನಃ । ಈಯತೇ । ವಿಶ್ವಾನ್ । ಅನು । ಸ್ವಧಯಾ । ಚೇತಥಃ ।
ಪಥಃ ॥ ೬ ॥

॥ ಸಾಯಣಭಾಷ್ಯಂ ॥

ಆಕೇನಿಪಾಸಃ । ಆಕೇऽಂತಿಕೇ ನಿಪತಂತೀತ್ಯಾಕೇನಿಪಾ ರಶ್ಮಯಃ । ತೇ ಚಾಹಭಿರಹೋಭಿರ್ದ-ವಿಧ್ವತಃ ಕಂಪಯಂತೋ ಧ್ವಂಸಯಂತೋ ವಾ ತಮಾಂಸಿ । ಸ್ವರ್ನ ಆದಿತ್ಯ ಇವ ಶುಕ್ರಂ ದೀಪ್ತಂ ರಜ ಆ ತನ್ವಂತೋ ಭವಂತ್ಯಶ್ವಿನೋರಶ್ವಾಃ । ಸೂರಶ್ಚಿತ್ಸೂರ್ಯಶ್ಚಾಶ್ವಾನ್ಯುಯುಜಾನೋ ಯೋಜಯನ್ನೀ-ಯತೇ । ಗಚ್ಛತಿ । ಹೇ ಅಶ್ವಿನೌ ಯುವಾಂ ವಿಶ್ವಾನ್ಪಥ ಆಗಮನಮಾರ್ಗಾನನುಕ್ರಮೇಣ ಸ್ವಧಯಾನ್ನೇನ ಸೋಮಲಕ್ಷಣೇನ ಚೇತಥಃ । ಚೇತಯಥಃ । ಪ್ರಜ್ಞಾಪಯಥಃ ॥

॥ ಪ್ರತಿಪದಾರ್ಥ ॥

ಆಕೇನಿಪಾಸಃ—ಅಂತಿಕದಲ್ಲಿಯೇ ಪ್ರಸರಿಸುವ ರಶ್ಮಿಗಳು । ಅಹಭಿಃ — ಹಗಲುಕಾಲಗಳಲ್ಲಿ । ದವಿಧ್ವತಃ—ಕಗ್ಗತ್ತಲೆಯನ್ನು ನಾಶಮಾಡುತ್ತಾ । ಸ್ವಃ ನ—ಆದಿತ್ಯನಂತೆ । ಶುಕ್ರಂ—ಪ್ರಕಾಶಮಾನವಾದ । ರಜಃ—ಲೋಕಗಳನ್ನು । ಆ ತನ್ವತಃ—ಅತ್ಯಂತ ವಿಸ್ತೃತವಾಗುವಂತೆ ಮಾಡುತ್ತವೆ । ಸೂರಶ್ಚಿತ್—ಸೂರ್ಯನೂ ಸಹ । ಅಶ್ವಾನ್—ತನ್ನ ಅಶ್ವಗಳನ್ನು । ಯುಯುಜಾನಃ—ಸೇರಿಸಿಕೊಂಡು । ಈಯತೇ —ಸಂಚರಿಸುತ್ತಾನೆ । (ಎಲೈ ಅಶ್ವಿನೀದೇವತೆಗಳೇ) ವಿಶ್ವಾನ್—(ಸೂರ್ಯನ) ಸಮಸ್ತವಾದ । ಪಥಃ—ಸಂಚಾರಮಾರ್ಗಗಳನ್ನು । ಅನು—ಅನುಸರಿಸುತ್ತಾ । ಸ್ವಧಯಾ—ಸೋಮರೂಪವಾದ ಅನ್ನದಿಂದ । ಚೇತಥಃ—ಅವು ಪ್ರಜ್ಞಾವಿಷಯವಾಗುವಂತೆ ಮಾಡಿರಿ.

॥ ಭಾವಾರ್ಥ ॥

ಆದಿತ್ಯನ ಸಮೀಪದಲ್ಲಿಯೇ ಪ್ರಸರಿಸುವ ರಶ್ಮಿಗಳು ಹಗಲುಕಾಲಗಳಲ್ಲಿ ಕಗ್ಗತ್ತಲೆಯನ್ನು ನಾಶಮಾಡುತ್ತಾ ಆದಿತ್ಯನಂತೆ ಪ್ರಕಾಶಮಾನವಾದ ಲೋಕಗಳನ್ನು ಅತ್ಯಂತ ವಿಸ್ತೃತವಾಗುವಂತೆ ಮಾಡುತ್ತವೆ. ಸೂರ್ಯನೂ ಸಹ ತನ್ನ ಅಶ್ವಗಳನ್ನು ಸೇರಿಸಿಕೊಂಡು ತನ್ನ ಮಾರ್ಗಗಳಲ್ಲಿ ಸಂಚರಿಸುತ್ತಾನೆ ಎಲೈ ಅಶ್ವಿನೀದೇವತೆಗಳೇ, ಸೂರ್ಯನ ಸಮಸ್ತ

ಸಂಚಾರಮಾರ್ಗಗಳನ್ನೂ ಅನುಸರಿಸುತ್ತಾ ಅವೆಲ್ಲವನ್ನೂ ಸೋಮರೂಪದ ಅನ್ನದಿಂದ ಅವು ಪ್ರಜ್ಞಾವಿಷಯವಾಗುವಂತೆ ಮಾಡಿರಿ.

## English Translation.

The near-advancing (rays), dispersing (the darkness) by the (light of day), are overspreading the firmament with lustre like the sun: the sun harnessing his horses, (proceeds on his way): do you make known all his paths by (following) after (him) with sacrificial food.

॥ ಸಂಹಿತಾಪಾಠಃ ॥

ಪ್ರ ವಾಮವೋಚಮಶ್ವಿನಾ ಧಿಯಂಧಾ ರಥಃ ಸ್ವಶ್ವೋ ಅಜರೋ ಯೋ ಅಸ್ತಿ ।

ಯೇನ ಸದ್ಯಃ ಪರಿ ರಜಾಂಸಿ ಯಾಥೋ ಹವಿಷ್ಮಂತಂ ತರಣಿಂ ಭೋಜಮಚ್ಛ ॥ ೭ ॥

॥ ಪದಪಾಠಃ ॥

ಪ್ರ । ವಾಂ । ಅವೋಚಂ । ಅಶ್ವಿನಾ । ಧಿಯಂऽಧಾಃ । ರಥಃ । ಸುऽಅಶ್ವಃ । ಅಜರಃ । ಯಃ । ಅಸ್ತಿ ।
ಯೇನ । ಸದ್ಯಃ । ಪರಿ । ರಜಾಂಸಿ । ಯಾಥಃ । ಹವಿಷ್ಮಂತಂ । ತರಣಿಂ । ಭೋಜಂ । ಅಚ್ಛ ॥ ೭ ॥

॥ ಸಾಯಣಭಾಷ್ಯಂ ॥

ಧಿಯಂಧಾಃ ಕರ್ಮಣಾಂ ಧಾರಕೋಽಹಂ ಹೇ ಅಶ್ವಿನಾ ವಾಂ ಪ್ರಾವೋಚಂ । ಪ್ರಬ್ರವೀಮಿ । ಸ್ತೌಮಿ । ಸ್ವಶ್ವೋಽಜರೋಽಜೀರ್ಣೋ ನಿತ್ಯನೂತನೋಽಜರಯಿತಾ ವಾ ರಥೋ ಯೋಽಸ್ತಿ । ಯೇನ ರಥೇನ ಸದ್ಯಸ್ತದಾನೀಮೇವ ರಜಾಂಸಿ ಲೋಕಾನ್ಪರಿ ಯಾಥಃ ತೇನ ರಥೇನ ಹವಿಷ್ಮಂತಂ ಸೋಮಾದಿಹವಿರ್ಯುಕ್ತಂ ತರಣಿಂ ತಾರಕಂ ಶೀಘ್ರಗಾಮಿನಂ ಭೋಜಂ ಭೋಜಯಿತಾರಮಸ್ಮದ್ಯಾಗಮಚ್ಛ ಪ್ರಾಪ್ತುಮಾಗಚ್ಛತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಧಿಯಂಧಾಃ—ಕರ್ಮನಿರ್ವಾಹಕನಾದ ನಾನು । ವಾಂ—ನಿಮ್ಮನ್ನುದ್ದೇಶಿಸಿ । ಪ್ರಾವೋಚಂ—ಸ್ತುತಿಸುತ್ತೇನೆ । ಯಃ ರಥಃ—ಯಾವ ನಿಮ್ಮ ರಥವು ! ಸ್ವಶ್ವಃ—ಉತ್ತಮ

ವಾದ ಅಶ್ವವುಳ್ಳದ್ದೂ| ಅಜರಃ ಅಸ್ತಿ—ಜರಾರಹಿತವಾದುದೂ ಆಗಿದೆಯೋ(ಮತ್ತು)| ಯೇನ—ಯಾವ ರಥದಿಂದ| ಸದ್ಯಃ—ಸಂಕಲ್ಪಿಸಿದೊಡನೆಯೇ | ರಜಾಂಸಿ—ಲೋಕಗಳನ್ನೆಲ್ಲಾ | ಪರಿ ಯಾಥಃ—ಸುತ್ತಿ ಸಂಚರಿಸುವಿರೋ (ಆ ರಥದೊಡನೆ) | ಹವಿಷ್ಮಂತಂ—ಹವಿಸ್ಸಿನೊಡಗೂಡಿದುದೂ | ತರಣಿಂ—ರಕ್ಷಕವಾದುದೂ (ಅಥವಾ ಶೀಘ್ರವಾಗಿ ನೆರವೇರಿಸಲ್ಪಡುವುದೂ) | ಭೋಜಂ ಅಚ್ಛ—ಭೋಗಕಾರಿಯೂ ಆದ ನಮ್ಮ ಯಜ್ಞಕ್ಕೆ (ಬನ್ನಿರಿ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಕಾರ್ಯನಿರ್ವಾಹಕನಾದ ನಾನು ನಿಮ್ಮನ್ನುದ್ದೇಶಿಸಿ ಸ್ತುತಿಸುತ್ತೇನೆ. ಯಾವ ನಿಮ್ಮ ರಥವು ಉತ್ತಮವಾದ ಅಶ್ವವುಳ್ಳದ್ದೂ, ನಾಶರಹಿತವಾದುದೂ ಆಗಿದೆಯೋ, ಮತ್ತು ಯಾವ ರಥದಿಂದ ನೀವು ಸಂಕಲ್ಪಿಸಿದೊಡನೆಯೇ ಲೋಕಗಳನ್ನೆಲ್ಲಾ ಸುತ್ತಿ ಸಂಚರಿಸುವಿರೋ, ಆ ರಥದೊಡನೆ, ಹವಿಸ್ಸಿನೊಡಗೂಡಿದುದೂ, ರಕ್ಷಕವಾದುದೂ, ಭೋಗಕಾರಿಯಾದುದೂ ಆದ ನಮ್ಮ ಯಜ್ಞಕ್ಕೆ ಬನ್ನಿರಿ.

English Translation.

Celebrating (sacred) rites, I glorify you, Ashwins: well-horsed and undecaying is that chariot, whereby you quickly traverse the regions (of space), and come to (our sacrifice) abounding in oblations, promytly passing away, and the yielder of enjoyment.



## ನಲವತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪಂಚಮೇಽನುವಾಕೇ ತ್ರಯೋದಶ ಸೂಕ್ತಾನಿ | ತತ್ರಾಗ್ರಂ ಪಿಬೇತಿ ಸಪ್ತರ್ಚಂ ಪ್ರಥಮಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರಂ | ಕೃತ್ಸ್ನಮಿಂದ್ರವಾಯುದೇವತಾಕಮಾದ್ಯಾ ಕೇವಲವಾಯವ್ಯಾ | ತಥಾ ಚಾನುಕ್ರಾಂತಂ | ಅಗ್ರಂ ವಾಯವ್ಯಾದ್ಯೈಂದ್ರವಾಯವಂ ತು ಗಾಯತ್ರಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ | ಆದ್ಯೇ ದ್ವೇ ಐಂದ್ರವಾಯವಗ್ರಹಸ್ಯ ಯಾಜ್ಯೇ | ತಥಾ ಚ ಸೂತ್ರಿತಂ| ಅಗ್ರಂ ಪಿಬಾ ಮಧೂನಾಮಿತಿ ಯಾಜ್ಯೇ ಅನವಾನಂ | ಆ. ೫-೫ | ಇತಿ ॥

ಅನುವಾದವು—ನಾಲ್ಕನೆಯ ಮಂಡಲದ ಐದನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವವು. ಅವುಗಳಲ್ಲಿ ಅಗ್ರಂ ಪಿಬ ಎಂಬುದು ಮೊದಲನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಈ ಸೂಕ್ತದ ಮೊದಲನೆಯ ಋಕ್ಕು ವಾಯುದೇವತಾಕವು ; ಉಳಿದ ಋಕ್ಕುಗಳಿಗೆ ಇಂದ್ರವಾಯುಗಳು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ--ಅಗ್ರಂ ವಾಯವ್ಯಾದ್ಯೈಂದ್ರವಾಯವಂ ತು ಗಾಯತ್ರಂ ಎಂದು ಹೇಳಿರುವುದು. ಸೂಕ್ತದ ವಿನಿಯೋಗವು ಲೈಂಗಿಕವು. ಈ ಸೂಕ್ತದ ಮೊದಲಿನ

ಎರಡು ಋಕ್ಕುಗಳನ್ನು ಐಂದ್ರವಾಯವಗ್ರಹ ಹೋಮದಲ್ಲಿ ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಅಗ್ರಂ ಪಿಬಾ ಮಧೂನಾಮಿತಿ ಯಾಜ್ಯೇ ಅನವಾನಂ ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು.

## ಸೂಕ್ತ—೪೬

ಮಂಡಲ—೪ ‖ ಅನುವಾಕ—೫ ‖ ಸೂಕ್ತ—೪೬ ‖

ಅಷ್ಟಕ—೩ ‖ ಅಧ್ಯಾಯ—೭ ‖ ವರ್ಗ—೨೨ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ‖

ಋಷಿಃ—ವಾಮದೇವಃ ‖

ದೇವತಾ—೧. ವಾಯುಃ | ೨-೭ ಇಂದ್ರವಾಯೂ ‖

ಛಂದಃ—ಗಾಯತ್ರೀ ‖

‖ ಸಂಹಿತಾಪಾಠಃ ‖

ಅಗ್ರಂ ಪಿಬಾ ಮಧೂನಾಂ ಸುತಂ ವಾಯೋ ದಿವಿಷ್ಟಿಷು |
ತ್ವಂ ಹಿ ಪೂರ್ವಪಾ ಅಸಿ ‖ ೧ ‖

‖ ಪದಪಾಠಃ ‖

ಅಗ್ರಂ | ಪಿಬ | ಮಧೂನಾಂ | ಸುತಂ | ವಾಯೋ ಇತಿ | ದಿವಿಷ್ಟಿಷು |
ತ್ವಂ | ಹಿ | ಪೂರ್ವಽಪಾಃ | ಅಸಿ ‖ ೧ ‖

‖ ಸಾಯಣಭಾಷ್ಯಂ ‖

ಹೇ ವಾಯೋ ತ್ವಮಗ್ರಮಿಂದ್ರಾದಿಭ್ಯಃ ಪೂರ್ವಂ ಮಧೂನಾಂ ಮಧುರರಸಾನಾಂ ಸೋಮಾನಾಂ ಸಂಬಂಧಿನಂ ಸುತಮಭಿಷುತಂ ರಸಂ ಪಿಬ | ಕುತ್ರೇತಿ ತದುಚ್ಯತೇ | ದಿವಿಷ್ಟಿಷು ದಿವಃ ಸ್ವರ್ಗಸ್ಯ ಪ್ರಾಪಕೇಷು ಯಜ್ಞೇಷು | ಯದ್ವಾ | ಅಸ್ಮಾಕಂ ದಿವಃ ಸ್ವರ್ಗಸ್ಯೈಷಣೇಷು ನಿಮಿತ್ತೇಷು | ತ್ವಂ ಹಿ ತ್ವಂ ಖಲು ಪೂರ್ವಪಾ ಅಸಿ | ಹಿಶಬ್ದೋ ದೇವ ದಧಿಷೇ ಪೂರ್ವಪೇಯಂ | ಋಗ್ವೇ. ೭-೯೨-೧ | ಇತ್ಯಾದಿ. ಮಂತ್ರಾಂತರಪ್ರಸಿದ್ಧಿದ್ಯೋತನಾರ್ಥಃ | ವಾಯೋರಗ್ರಪಾನಂ ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯಮಿತ್ಯಾದಿಬ್ರಾಹ್ಮಣೇ | ಐ. ಬ್ರಾಂ. ೨-೨೫ | ಸ್ಪಷ್ಟಮಾಮ್ನಾತಂ | ತತ್ರ ಹಿ ವಾಯುರಾಜಿಂ ಪ್ರಥಮಂ ಧಾವಿತ್ವಾಗ್ರಪಾನಂ ಲಬ್ಧವಾನ್ ‖

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಸುತಂ—ಹಿಂಡಲ್ಪಟ್ಟ । ಮಧೂನಾಂ—ಸೋಮರಸಗಳನ್ನು । ಅಗ್ರಂ—ಇಂದ್ರಾದಿದೇವತೆಗಳಿಗೂ ಮೊದಲೇ । ಪಿಬ—ಪಾನಮಾಡು । ದಿವಿಷ್ಟಿಷು—ಸ್ವರ್ಗಪ್ರಾಪಕಗಳಾದ ಯಜ್ಞಗಳಲ್ಲಿ । ತ್ವಂ ಹಿ—ನೀನೇ । ಪೂರ್ವಪಾಃ—ಎಲ್ಲರಿಗಿಂತಲೂ ಪೂರ್ವದಲ್ಲಿ ಪಾನಮಾಡುವವನಾಗಿ । ಅಸಿ—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ವಾಯುವೇ, ಸೋಮರಸಗಳು ಹಿಂಡಲ್ಪಟ್ಟು ಸಿದ್ಧವಾಗಿವೆ. ಇವನ್ನು ಇಂದ್ರಾದಿಗಳಿಗಿಂತಲೂ ಮೊದಲೇ ನೀನು ಪಾನಮಾಡು. ಸ್ವರ್ಗಪ್ರಾಪಕಗಳಾದ ಯಜ್ಞಗಳಲ್ಲಿ ಎಲ್ಲರಿಗಿಂತಲೂ ಪೂರ್ವಭಾವಿಯಾಗಿ ಪಾನ ಮಾಡುವವನು ನೀನೇ ಆಗಿದ್ದೀಯೆ.

## English Translation.

Drink first, Vayu, the effused libation of the Soma at the rites that secure heaven, for you verily are the first drinker.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರಾದಿ ದೇವತೆಗಳಿಗಿಂತಲೂ ವಾಯುವೇ ಮೊದಲು ಸೋಮಪಾನಮಾಡಲು ಅರ್ಹನೆಂದು ಹೇಳಿದೆ. ಇದರ ಸಮರ್ಥನೆಗಾಗಿ—

ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ ।
ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ ॥
(ಋ. ಸಂ. ೭-೯೨-೧)

ಎಂಬ ಋಕ್ಕನ್ನು ಉದಾಹರಿಸಿ ಅಲ್ಲಿ ವಾಯುವೇ ಮೊದಲು ಸೋಮಪಾನಮಾಡಬೇಕೆಂದು ಋಷಿಯು ಪ್ರಾರ್ಥಿಸಿರುವುದನ್ನು ಸೂಚಿಸಲಾಗಿದೆ. ವಾಯುವಿಗೆ ದೇವತೆಗಳ ಮಧ್ಯೆ ಸೋಮಪಾನವಿಷಯದಲ್ಲಿ ಅಗ್ರಸ್ಥಾನವು ಹೇಗೆ ಲಭಿಸಿತೆಂಬ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿದೆ ಅದನ್ನು ಇಲ್ಲಿ ವಿವರಿಸಿದೇವೆ—

ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯ-ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ।
(ಐ. ಬ್ರಾ. ೯-೨೫)

ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಸೋಮಪಾನ ಮಾಡಬೇಕೆಂದು ಅಪೇಕ್ಷಿಸಿ ತಮ್ಮಲ್ಲಿ ಯಾರು ಮೊದಲು ಸೋಮಪಾನವನ್ನು ಮಾಡಬೇಕೆಂದು ವಿವಾದವುಂಟಾಗಲು ಆಗ ಅವರಲ್ಲಿ ನಾನು ಮೊದಲು, ತಾನು ಮೊದಲು ಪಾನಮಾಡ

ಬೇಕೆಂದು ಚರ್ಚೆಗಾರಂಭವಾಯಿತು. ಈ ವಿಷಯವು ಯಾವ ರೀತಿಯಲ್ಲಿಯೂ ಇತ್ಯರ್ಥವಾಗದ್ದರಿಂದ ಅವರೆಲ್ಲರೂ ಸೇರಿ ಸಮಾಲೋಚನೆಮಾಡಿ ಒಂದು ಒಪ್ಪಂದಕ್ಕೆ ಬಂದರು. ಏನೆಂದರೆ, ನಾವೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸೋಣ ಅದರಲ್ಲಿ ಗೆದ್ದವರು ಮೊದಲು ಸೋಮಪಾನಮಾಡಲು ಅರ್ಹರಾಗುವರು ಎಂದು. ಅದಕ್ಕೆ ಎಲ್ಲರೂ ಒಪ್ಪಲು ಆಗ ಒಂದು ಸ್ಥಳದಿಂದ ದೂರದಲ್ಲಿರುವ ಮತ್ತೊಂದು ಸ್ಥಳಕ್ಕೆ ಓಡಿಹೋಗಿ ಅಲ್ಲಿರುವ ಒಂದು ಕಲ್ಲುಬಂಡೆಯನ್ನಾಗಲಿ, ವೃಕ್ಷವನ್ನಾಗಲಿ ಮೊದಲು ಸಮೀಪಿಸಿದವರು ಗೆದ್ದವರೆಂದು ಭಾವಿಸಬೇಕು ಎಂದು ಸ್ಪರ್ಧೆಯು ನಿಶ್ಚಯವಾಯಿತು. ಈ ರೀತಿ ಗೆದ್ದವರು ನಮ್ಮಗಳ ಮಧ್ಯದಲ್ಲಿ ಜಯಶಾಲಿಯಾಗಿ ಸೋಮಪಾನವನ್ನು ಮಾಡಬೇಕು ಎಂಬ ಒಪ್ಪಂದಕ್ಕೆ ಎಲ್ಲರೂ ಸಮ್ಮತಿಸಲು ಎಲ್ಲಾ ದೇವತೆಗಳೂ ಏಕಕಾಲದಲ್ಲಿ ಓಡಲು ಪ್ರಾರಂಭಿಸಿದರು. ಓಡುತ್ತಿರುವ ಎಲ್ಲಾ ದೇವತೆಗಳಲ್ಲಿ ವಾಯುವು ಎಲ್ಲರಿಗಿಂತಲೂ ಮುಂದಾಗಿ ನಿರ್ದಿಷ್ಟಸ್ಥಳವನ್ನು ಸೇರಿದನು. ಇಂದ್ರನು ವಾಯುವಿನ ಹಿಂಭಾಗದಲ್ಲಿಯೇ ಬಂದು ಎರಡನೆಯವನಾದನು. ಅನಂತರ ಇಂದ್ರನ ಹಿಂದೆ ಮಿತ್ರಾವರುಣರೂ, ಅವರ ಹಿಂದೆ ಅಶ್ವಿನೀ ದೇವತೆಗಳೂ ಓಡಿಬಂದು ನಿರ್ದಿಷ್ಟಸ್ಥಳವನ್ನು ಸೇರಿದರು. ಆದುದರಿಂದ ಈ ದೇವತೆಗಳಲ್ಲಿ ವಾಯುವೇ ಎಲ್ಲರಿಗಿಂತಲೂ ಮುಂದಾಗಿ ಓಡಿ ಜಯಶಾಲಿಯಾದನು.

> ಸೋಽವೇದಿಂದ್ರೋ ವಾಯುರುದ್ವೈ ಜಯತೀತಿ ತಮನು ಪರಾಪಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ತ್ರಿಭಾಗ್ವಾಯುಃ ॥

ವಾಯುವೂ ಅವನ ಹಿಂದೆ ಇಂದ್ರನೂ ಓಡುತ್ತಿರುವಾಗ ಅವರಲ್ಲಿ ಈ ರೀತಿ ಪರಸ್ಪರ ಸಂವಾದವುಂಟಾಯಿತು. ವಾಯುವು ವೇಗವಾಗಿ ಓಡುತ್ತಿರುವುದನ್ನು ಅವನ ಹಿಂದಿದ್ದ ಇಂದ್ರನು ಕಂಡು ಈ ವಾಯುವೇ ಎಲ್ಲರಿಗಿಂತಲೂ ಮುಂಚಿತವಾಗಿ ಓಡಿ ಜಯಶಾಲಿಯಾಗುವನು. ಏನಾದರೂ ಮಾಡಿ ನಾನೂ ಇವನ ಜತೆಗೇ ಓಡಿ ಗೆಲ್ಲಬೇಕು ಎಂದು ನಿಶ್ಚಯಿಸಿ, ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ವಾಯುವಿನ ಸಮೀಪದಲ್ಲಿಯೇ ಓಡಿದನು. ಆದರೂ ವಾಯುವನ್ನು ಹಿಂದಕ್ಕೆ ಹಾಕಿ ತಾನು ಮುಂದುವರಿಯುವ ಸೂಚನೆಯು ಕಾಣದಿರಲು, ಆಗ ಇಂದ್ರನು ವಾಯುವನ್ನು ಕುರಿತು—ಎಲೈ ವಾಯುವೇ, ನಾವಿಬ್ಬರೂ ಎಲ್ಲರಿಗಿಂತಲೂ ಮುಂದಾಗಿರುವೆವು. ಆದ್ದರಿಂದ ನಾವಿಬ್ಬರೂ ಗೆದ್ದಂತೆ ಭಾವಿಸಿ ಪ್ರಥಮ ಸೋಮಪಾನವನ್ನು ಇಬ್ಬರೂ ಹಂಚಿಕೊಳ್ಳೋಣ. ನನಗರ್ಧ ನಿನಗರ್ಧ. ಈ ರೀತಿ ಇಬ್ಬರೂ ಸಹಕರಿಸಿ ಜಯವನ್ನು ಸಂಪಾದಿಸೋಣ ಎಂದನು. ಆ ಮಾತನ್ನು ಕೇಳಿ ವಾಯುವು—ಎಲೈ ಇಂದ್ರನೇ, ನಿನಗಿಂತಲೂ ನಾನು ಸ್ವಲ್ಪಮಟ್ಟಿಗಾದರೂ ಮುಂದಾಗಿಯೇ ಇರುವೆನು. ಆದ್ದರಿಂದ ನಾನೊಬ್ಬನೇ ಜಯಶಾಲಿಯಾಗುವೆನು. ಪ್ರಥಮ ಸೋಮಪಾನದಲ್ಲಿ ಎಲ್ಲವೂ ನನಗೇ ಸೇರಬೇಕು. ನಿನಗೆ ಅರ್ಧವನ್ನು ಕೊಡುವುದಕ್ಕಾಗುವುದಿಲ್ಲ ಎಂದನು. ಆಗ ಇಂದ್ರನು—ಒಳ್ಳೆಯದು ಹಾಗಾದರೆ ನನಗೆ ಅರ್ಧಭಾಗ ಬೇಡ. ಮೂರು ಭಾಗಗಳಲ್ಲಿ ಎರಡನ್ನು ನೀನು ತೆಗೆದುಕೊ. ನನಗೆ ಒಂದು ಭಾಗವನ್ನು ಮಾತ್ರ ಕೊಡು ಎನ್ನಲು, ವಾಯುವು ಅದಕ್ಕೂ ಒಪ್ಪದೆ, ಹೇಗಾದರೂ ನಾನೇ ಗೆಲ್ಲುವೆನು, ಎಲ್ಲಾ ಭಾಗವೂ ನನಗೇ ಸೇರುವುದು, ನಿನಗೆ ಮೂರರಲ್ಲಿ ಒಂದುಭಾಗವನ್ನೂ ಕೊಡಲು ನನಗಿಷ್ಟವಿಲ್ಲ ಎಂದನು. ಆಗ ಇಂದ್ರನು ಮತ್ತೆ ವಾಯುವನ್ನು ಪ್ರಾರ್ಥಿಸುತ್ತಾ, ನನಗೆ ಮೂರರಲ್ಲೊಂದುಭಾಗವೂ ಬೇಡ. ಇನ್ನೂ ಕಡಿಮೆಯಾಗಿ ಎಂದರೆ ನಾಲ್ಕರಲ್ಲೊಂದುಭಾಗವನ್ನು ಕೊಟ್ಟರೆ ಸಾಕು. ಅದಕ್ಕಾದರೂ ಒಪ್ಪು ಎಂದು ಕೇಳಲು, ವಾಯುವು

ಹಾಗೆಯೇ ಆಗಲೆಂದು ಅದಕ್ಕೊಪ್ಪಿದನು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ (ಎಂದರೆ ಇಂದ್ರ ಮತ್ತು ವಾಯು ಇಬ್ಬರು ಸೇರಿ ಸೋಮಪಾನ ಮಾಡುವಾಗ) ಇಂದ್ರನಿಗೆ ಒಂದುಭಾಗವೂ, ವಾಯುವಿಗೆ ಮೂರುಭಾಗವೂ ಇರಬೇಕೆಂದು ವ್ಯವಸ್ಥೆಯಾಯಿತು.

> ತೌ ಸಹೈವೇಂದ್ರವಾಯೂ ಉದಜಯತಾಂ ಸಹ ಮಿತ್ರಾವರುಣೌ ಸಹಾಶ್ವಿನೌ ತ ಏಷಾಮೇತೇ ಯಥೋಜ್ಜಿತಂ ಭಕ್ಷಾ ಇಂದ್ರವಾಯ್ವೋಃ ಪ್ರಥಮೋಽಥ ಮಿತ್ರಾವರುಣಯೋರಥಾಶ್ವಿನೋಃ ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ ।

ಈ ರೀತಿ ಇಂದ್ರ ಮತ್ತು ವಾಯುವು ಸಹಕರಿಸಿ ಸ್ಪರ್ಧೆಯನ್ನು ಗೆದ್ದು ನಿರ್ದಿಷ್ಟಪ್ರದೇಶವನ್ನೂ ಮೊದಲು ತಲಪಿದರು. ಅವರ ಹಿಂದೆ ಮಿತ್ರಾವರುಣರು ಬಂದುಸೇರಿದರು. ಅವರ ಹಿಂದೆ ಅಶ್ವಿನೀದೇವತೆಗಳು ಬಂದರು. ಆದ್ದರಿಂದ ಈ ದೇವತೆಗಳ ಮಧ್ಯದಲ್ಲಿ ಅವರು ಸ್ಪರ್ಧೆಯಲ್ಲಿ ಯಾವ ಯಾವ ಸ್ಥಾನವನ್ನು ಪಡೆದರೋ ಆ ಕ್ರಮದಲ್ಲಿ ಅವರು ಸೋಮಪಾನಕ್ಕೆ ಅರ್ಹರಾದರು. ಎಂದರೆ ಮೊದಲು ಇಂದ್ರವಾಯುಗಳು, ಅನಂತರ ಮಿತ್ರಾವರುಣರು, ಅವರನಂತರ ಅಶ್ವಿನೀದೇವತೆಗಳು ಸೋಮಪಾನ ಮಾಡಲು ವ್ಯವಸ್ಥೆಯುಂಟಾಯಿತು. ಹೀಗೆ ಇಬ್ಬಿಬ್ಬರು ದೇವತೆಗಳು ಸೇರಿ ಸೋಮಪಾನ ಮಾಡುವ ವ್ಯವಸ್ಥೆ ಎಂದು ದ್ವಿದೇವತ್ಯಗ್ರಹದ ಕ್ರಮವು (ಎಂದರೆ ಇಬ್ಬರು ದೇವತೆಗಳು ಒಟ್ಟಿಗೆ ಸೇರಿ ಸೋಮಪಾನ ಮಾಡುವ ಕ್ರಮವು) ರೂಢಿಗೆ ಬಂದಿತು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗ ಮಾತ್ರ ಸೋಮಪಾನದಲ್ಲಿ ವ್ಯವಸ್ಥೆ ಇರುವುದು.

> ತದೇತದೃಷಿಃ ಪಶ್ಯನ್ನಭ್ಯನೂವಾಚ ನಿಯುತ್ವಾँ ಇಂದ್ರಸಾರಥಿರಿತಿ ।

ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗವಿರುವುದನ್ನು ಋಷಿಯು ದಿವ್ಯದೃಷ್ಟಿಯಿಂದ ತಿಳಿದು ಮುಂದಿನ ಋಕ್ಕಿನಲ್ಲಿ ಎಂದರೆ—ಶತೇನಾ ನೋ ಅಭಿಷ್ಟಿಭಿರ್ನಿಯುತ್ವಾँ ಇಂದ್ರಸಾರಥಿಃ । (ಋ. ಸಂ. ೪-೪೬-೨) ಎಂಬ ಋಕ್ಕಿನಲ್ಲಿ ಈ ವಿಷಯವನ್ನೂ ನಿಯುತ್ವಾँ ಇಂದ್ರಸಾರಥಿಃ ಎಂಬ ವಾಕ್ಯದಿಂದ ವ್ಯಕ್ತಪಡಿಸಿರುವನು. ಇಲ್ಲಿ ನಿಯುತೋ ವಾಯೋಃ ಎಂಬ ನಿರುಕ್ತವಚನದಂತೆ (ನಿ. ೨-೨೮) ನಿಯುತ ಎಂಬ ಅಶ್ವಗಳು ವಾಯುದೇವನ ವಾಹನವೆಂದು ಪ್ರಸಿದ್ಧವು. ಆದ್ದರಿಂದ ನಿಯುತ್ವಚ್ಛಬ್ದವು ವಾಯುಸಂಬಂಧವನ್ನು ಸೂಚಿಸುವುದು. ಮೇಲಿನ ಋಕ್ಕಿನಲ್ಲಿ ನಿಯುತ್ವಾನ್ ಎಂಬ ಪದವು ವಾಯುವಿನಿಂದ ಸಹಿತನಾದ ಇಂದ್ರನನ್ನು ಸೂಚಿಸುವುದು. ಅಥಾ ವಾಯುಂ ನಿಯುತಃ ಸಶ್ಚತಸ್ವಾಃ (ತೈ. ಬ್ರಾ. ೨-೮-೧-೧) ಇತ್ಯಾದಿ ಮಂತ್ರಗಳು ಈ ವಿಷಯವನ್ನು ಸಮರ್ಥಿಸುವುವು. ಇಂದ್ರಸಾರಥಿಃ ಎಂಬ ಶಬ್ದಕ್ಕೆ ವಾಯುವಿಗೆ ಸಾರಥಿಯಾದ ಇಂದ್ರನು ಎಂದಭಿಪ್ರಾಯವು. ಇಂದ್ರನು ವಾಯುವಿಗೆ ಸಾರಥಿಸ್ಥಾನದಲ್ಲಿರುವುದರಿಂದ ಇಂದ್ರನಿಗೆ ಪ್ರಥಮ ಸೋಮಪಾನದಲ್ಲಿ ಚತುರ್ಥಾಂಶಮಾತ್ರವಿರುವುದೆಂದು ಇದರಿಂದ ಸೂಚಿತವಾಗುವುದು.

> ತಸ್ಮಾದ್ಧಾಪ್ಯೇತರ್ಹಿ ಭರತಾಃ ಸತ್ವನಾಂ ವಿತ್ತಿಂ ಪ್ರಯಂತಿ ತುರೀಯೇ ಹೈವ ಸಂಗ್ರಹೀತಾರೋ ವದಂತೇಽಮುನೈವಾನೂಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ ॥
>
> (ಐ. ಬ್ರಾ. ೯-೨೫)

ಮೇಲೆ ಹೇಳಿದ ವಿಷಯವನ್ನು ಲೋಕವ್ಯವಹಾರದೃಷ್ಟಿಯಿಂದ ಉದಾಹರಣೆ ಮೂಲಕವಾಗಿ ವಿಶದಪಡಿಸುವರು. ಯುದ್ಧದಲ್ಲಿ ಯೋಧರಾದವರು ರಥಗಳಲ್ಲಿ ಕುಳಿತು ತಮ್ಮ ಸಾರಥಿಯ ಸಹಾಯದಿಂದ ಯುದ್ಧದಲ್ಲಿ ಜಯಶೀಲರಾಗಿ ಶತ್ರುಗಳ ಧನಾದಿಗಳನ್ನು ಆಕ್ರಮಿಸುವರು. ಆ ರೀತಿ ಆಕ್ರಮಿಸಿದಾಗ ಆ ಧನಾದಿಗಳಲ್ಲಿ ಒಂದು ಭಾಗವನ್ನು ಎಂದರೆ ನಾಲ್ಕರಲ್ಲಿ ಒಂದು ಭಾಗವನ್ನು ತಮಗೆ ಸಹಾಯಕರಾದ ಸಾರಥಿಗಳಿಗೆ ಕೊಡುವರು. ಈ ಪದ್ಧತಿಯು ಲೋಕವ್ಯವಹಾರದಲ್ಲಿ ರೂಢಿಯಲ್ಲಿದೆ. ಅದರಂತೆ ದೇವತೆಗಳು ಏರ್ಪಡಿಸಿದ್ದ ಈ ಸ್ಪರ್ಧೆಯಲ್ಲಿ ಇಂದ್ರನು ವಾಯುವಿಗೆ ಸಾರಥಿಯಾಗಿ ವಾಯುವು ಜಯಶೀಲನಾಗಿದ್ದರಿಂದ ಸ್ಪರ್ಧೆಯಲ್ಲಿ ದೊರೆತ ಪ್ರಥಮಸೋಮಪಾನದಲ್ಲಿ ಚತುರ್ಥಾಂಶವು ಇಂದ್ರನ ಭಾಗವಾಯಿತು. ಇಂದ್ರನು ತನ್ನ ಚತುರ್ಥಾಂಶವನ್ನು ವಾಯುವಿಗೆ ಸಾರಥಿಯಾಗಿ ಗಳಿಸಿದನು ಎಂದು ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ಶತೇನಾ ನೋ ಅಭಿಷ್ಟಿಭಿರ್ನಿಯುತ್ವಾँ ಇಂದ್ರಸಾರಥಿಃ ।
ವಾಯೋ ಸುತಸ್ಯ ತೃಂಪತಂ ॥ ೨ ॥

॥ ಪದಪಾಠಃ ॥

ಶತೇನ । ನಃ । ಅಭಿಷ್ಟಿऽಭಿಃ । ನಿಯುತ್ವಾನ್ । ಇಂದ್ರऽಸಾರಥಿಃ ।
ವಾಯೋ ಇತಿ । ಸುತಸ್ಯ । ತೃಂಪತಂ ॥ ೨ ॥

ಹೇ ವಾಯೋ ನಿಯುತ್ವಾನ್ನಿಯುದ್ಭಿಸ್ತದ್ವಾನ್ ಇಂದ್ರಸಾರಥಿರಿಂದ್ರಸಹಾಯಃ ಸನ್ ತ್ವಂ ಶತೇನಾಪರಿಮಿತೈರಭಿಷ್ಟಿಭಿರಭಿತ ಏಷಣೀಯೈಃ ಕಾಮೈರ್ನಿಮಿತ್ತಭೂತೈರಾಗಚ್ಛೇತಿ ಶೇಷಃ । ಆಗತ್ಯ ಚ ಸುತಸ್ಯ ಸುತಮಭಿಷುತಂ ಸೋಮಂ ತೃಂಪತಂ । ಪಿಬತಂ ತ್ವಮಿಂದ್ರಶ್ಚ । ಇಂದ್ರಸ್ಯ ಸಾಹಿತ್ಯಂ ಬ್ರಾಹ್ಮಣ ಏವೋಕ್ತಂ । ತತ್ತುರೀಯಭಾಗಿಂದ್ರೋऽಭವತ್ತ್ರಿಭಾಗ್ವಾಯುರಿತಿ ತುರೀಯೇ ಹ್ಯೇವ ಸಂಗ್ರಹೀತಾऽರೋ ವದಂತೇऽಮುನೈವಾನೂಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ । ಐ. ಬ್ರಾಂ. ೨-೨೫ । ಇತಿ ವಾ ॥

॥ ಪ್ರತಿಪದಾರ್ಥ ॥

ನಿಯುತ್ವಾನ್—ನಿಯುತ್ತುಗಳೆಂಬ ಅಶ್ವಯುಕ್ತನೂ । ಇಂದ್ರಸಾರಥಿಃ— ಇಂದ್ರನೇ ಸಾರಥಿಯಾಗಿ ಉಳ್ಳವನೂ ಆದ । ವಾಯೋ—ಎಲೈ ವಾಯುವೇ । ನಃ—ನಮ್ಮ । ಶತೇನ—ಅಪರಿಮಿತವಾದ । ಅಭಿ-

ಷ್ಟಿಭಿಃ—ಇಷ್ಟಾರ್ಥದ ಸಿದ್ಧಿಗಾಗಿ (ಇಲ್ಲಿ ಬಂದು) । ಸುತಸ್ಯ—ಹಿಂಡಲ್ಪಟ್ಟ ಸೋಮವನ್ನು । ತೃಂಪತಂ— ನೀನೂ ಇಂದ್ರನೂ ಪಾನಮಾಡಿರಿ.

॥ ಭಾವಾರ್ಥ ॥

ನಿಯುತ್ತುಗಳೆಂಬ ಅಶ್ವಯುಕ್ತನೂ, ಇಂದ್ರನೇ ಸಾರಥಿಯಾಗಿ ಉಳ್ಳವನೂ, ಆದ ಎಲೈ ವಾಯುವೇ, ನಮ್ಮ ಅಪರಿಮಿತವಾದ ಇಷ್ಟಾರ್ಥಸಿದ್ಧಿಗಾಗಿ ನಮ್ಮ ಯಜ್ಞಕ್ಕೆ ಬಂದು, ನಾವು ಹಿಂಡಿರುವ ಸೋಮವನ್ನು ನೀನೂ ಇಂದ್ರನೂ ಪಾನಮಾಡಿರಿ.

## English Translation.

Vayu, you are drawn by the Niyuts, and have Indra for charioteer; come (for the fulfilment) of our numerous wishes, and do you (and Indra) drink of the libation.

॥ ವಿಶೇಷವಿಷಯಗಳು ॥

ನಿಯುತ್ವಾನ್ ಇಂದ್ರಸಾರಥಿಃ— ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ಕೊನೆಯ ಭಾಗದಲ್ಲಿ ಈ ವಿಷಯವನ್ನು ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಆ ವಾಂ ಸಹಸ್ರಂ ಹರಯ ಇಂದ್ರವಾಯೂ ಅಭಿ ಪ್ರಯಃ ।
ವಹಂತು ಸೋಮಪೀತಯೇ ॥ ೩ ॥

॥ ಪದಪಾಠಃ ॥

ಆ । ವಾಂ । ಸಹಸ್ರಂ । ಹರಯಃ । ಇಂದ್ರವಾಯೂ ಇತಿ । ಅಭಿ । ಪ್ರಯಃ ।
ವಹಂತು । ಸೋಮsಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ವಾಂ ಯುವಾಂ ಸಹಸ್ರಂ ಹರಯಃ ಸಹಸ್ರಸಂಖ್ಯಾಕಾ ಅಶ್ವಾಃ ಪ್ರಯೋಽನ್ನಂ ಪ್ರತಿ ಆವಹಂತು । ಅತ್ರ ಹರಿಶಬ್ದೋಽಶ್ವಸಾಮಾನ್ಯವಚನಃ । ತೇ ಸೋಮಪೀತಯೇ ಆ ವಹಂತು ॥

॥ ಪ್ರತಿಪದಾರ್ಥ ॥

ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುಗಳೇ । ವಾಂ—ನಿಮ್ಮನ್ನು । ಸಹಸ್ರಂ—ಸಹಸ್ರ ಸಂಖ್ಯಾಕವಾದ । ಹರಯಃ—ಅಶ್ವಗಳು । ಪ್ರಯಃ—ಅನ್ನಾರ್ಥಿಗಳಾಗಿ । ಸೋಮಪೀತಯೇ—ಸೋಮ ಪಾನದ ಉದ್ದಿಶ್ಯದಿಂದ । ಅಭಿ—ನಮ್ಮಲ್ಲಿಗೆ । ಆ ವಹಂತು—(ನಿಮ್ಮನ್ನು) ಕರೆತರಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ನಿಮ್ಮನ್ನು ಸಹಸ್ರಸಂಖ್ಯಾಕಗಳಾದ ಅಶ್ವಗಳು ಅನ್ನಾರ್ಥಿಗಳಾಗಿಯೂ ಮತ್ತು ಸೋಮಪಾನದ ಉದ್ದಿಶ್ಯದಿಂದಲೂ ಕಾದಿರುವ ನಮ್ಮಲ್ಲಿಗೆ ಕರೆತರಲಿ.

## English Translation.

Indra and Vayu, may a thousand steeds, eager for food, bring you to drink the Soma.



॥ ಸಂಹಿತಾಪಾಠಃ ॥

ರಥಂ ಹಿರಣ್ಯವಂಧುರಮಿಂದ್ರವಾಯೂ ಸ್ವಧ್ವರಂ ।

ಆ ಹಿ ಸ್ಥಾಥೋ ದಿವಿಸ್ಪೃಶಂ ॥ ೪ ॥

॥ ಪದಪಾಠಃ ॥

ರಥಂ । ಹಿರಣ್ಯऽವಂಧುರಂ । ಇಂದ್ರವಾಯೂ ಇತಿ । ಸುऽಅಧ್ವರಂ ।

ಆ । ಹಿ । ಸ್ಥಾಥಃ । ದಿವಿऽಸ್ಪೃಶಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ಹಿರಣ್ಯವಂಧುರಂ ಹಿರಣ್ಮಯನಿವಾಸಾಧಾರಕಾಷ್ಠೋಪೇತಂ ದಿವಿಸ್ಪೃಶಂ ದ್ಯುಲೋಕಸ್ಪರ್ಶಿನಂ ಸ್ವಧ್ವರಂ ಶೋಭನಾಧ್ವರವಂತಂ ರಥಮಾ ಸ್ಥಾಥೋ ಹಿ । ಅಸ್ಥಿತಾ ಖಲು । ಯಸ್ಮಾದೇವಂ ತಸ್ಮಾದಾಗಚ್ಛತಮಿತ್ಯರ್ಥಃ । ಸ್ವಧ್ವರಂ ಪ್ರತ್ಯಾಸ್ಥಾಥ ಇತಿ ವಾ ವ್ಯಾಖ್ಯೇಯಂ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುಗಳೇ । ಹಿರಣ್ಯವಂಧುರಂ—ಸುವರ್ಣನಿರ್ಮಿತವಾದ ಆಸನಕಾಷ್ಠವುಳ್ಳದ್ದೂ । ದಿವಿಸ್ಪೃಶಂ—ದ್ಯುಲೋಕವನ್ನು ಮುಟ್ಟತಕ್ಕದ್ದೂ । ಸ್ವಧ್ವರಂ—ಶ್ರೇಷ್ಠವಾದ ಯಜ್ಞಕ್ಕೆ ಶೋಭನಾತ್ಮಕವಾದುದೂ ಆದ । ರಥಂ—ರಥವನ್ನು । ಆ ಸ್ಥಾಥಃ—ಹತ್ತಿಕುಳಿತುಕೊಳ್ಳಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ಸುವರ್ಣನಿರ್ಮಿತವಾದ ಆಸನವುಳ್ಳದ್ದೂ, ದ್ಯುಲೋಕವನ್ನು ಮುಟ್ಟತಕ್ಕದ್ದೂ, ಶ್ರೇಷ್ಠವಾದ ಯಜ್ಞಕ್ಕೆ ಶೋಭನಾತ್ಮಕವಾದುದೂ ಆದ ರಥವನ್ನು ಹತ್ತಿ ಕುಳಿತುಕೊಳ್ಳಿರಿ.

English Translation.

Mount, Indra and Vayu, the golden-seated chariot, propitious to sacrifice, soaring to heaven.



॥ ಸಂಹಿತಾಪಾಠಃ ॥

ರಥೇನ ಪೃಥುಪಾಜಸಾ ದಾಶ್ವಾಂಸಮುಪ ಗಚ್ಛತಂ ।

ಇಂದ್ರವಾಯೂ ಇಹಾ ಗತಂ ॥ ೩ ॥

॥ ಪದಪಾಠಃ ॥

ರಥೇನ । ಪೃಥುऽಪಾಜಸಾ । ದಾಶ್ವಾಂಸಂ । ಉಪ । ಗಚ್ಛತಂ ।

ಇಂದ್ರವಾಯೂ ಇತಿ । ಇಹ । ಆ । ಗತಂ ॥ ೩ ॥

॥ ಸಾಯಣಭಾಷ್ಯಂ ॥

ರಥೇನ ಪೃಥ್ವಿತ್ಯಾದಿಕಸ್ತ್ಯೃಚೋ ದಶರಾತ್ರೇ ಪಂಚಮೇಽಹನಿ ಪ್ರಉಗಶಸ್ತ್ರ ಐಂದ್ರವಾಯವೋ ದ್ವಿತೀಯಃ । ಸೂತ್ರಿತಂ ಚ । ರಥೇನ ಪೃಥುಪಾಜಸಾ ಬಹವಃ ಸೂರಚಕ್ಷಸಃ । ಆ. ೭-೧೨ । ಇತಿ ॥

ಹೇ ಇಂದ್ರವಾಯೂ ಪೃಥುಪಾಜಸಾ ಪ್ರಭೂತಬಲೇನ ರಥೇನ ದಾಶ್ವಾಂಸಂ ದಾತಾರಂ ಯಜಮಾನಮುಪ ಗಚ್ಛತಂ । ತದರ್ಥಮಿಹಾಸ್ಮಿನ್ಯಜ್ಞ ಆ ಗತಂ । ಆಗಚ್ಛತಂ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುಗಳೇ । ಪೃಥುಪಾಜಸಾ—ಅತ್ಯಧಿಕವಾದ ಶಕ್ತಿಯುಳ್ಳ ರಥೇನ—ರಥದೊಡನೆ । ದಾಶ್ವಾಂಸಂ—ಹವಿರ್ದಾತನಾದ ಯಜಮಾನನಲ್ಲಿಗೆ । ಉಪ ಗಚ್ಛತಂ—ಸಮೀಪಿಸಿ ಬನ್ನಿರಿ । ಇಹ—ಈ ಯಜ್ಞದಲ್ಲಿ (ಭಾಗವಹಿಸಲು) । ಆ ಗತಂ—ದಯಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ಅತ್ಯಧಿಕವಾದ ಶಕ್ತಿಯುಳ್ಳ ರಥದೊಡನೆ ಹವಿರ್ದಾತನಾದ ಯಜಮಾನನ ಸಮೀಪಕ್ಕೆ ಬನ್ನಿರಿ. ಈ ಯಜ್ಞದಲ್ಲಿ ಭಾಗವಹಿಸಲು ದಯಮಾಡಿರಿ.

## English Translation.

Indra and Vayu, come with your very strong chariot to the sacrifice; come hither.

॥ ವಿಶೇಷವಿಷಯಗಳು ॥

ರಥೇನ ಪೃಥು ಎಂಬ ತೃಚವು (೫, ೬, ೭ ನೆಯ ಋಕ್ಕುಗಳು) ದಶರಾತ್ರವೆಂಬ ಯಾಗದ ಐದನೆಯ ದಿವಸದಲ್ಲಿ ಪ್ರಉಗಶಸ್ತ್ರ ಮಂತ್ರಗಳನ್ನು ಪಠಿಸುವಾಗ ಇಂದ್ರವಾಯುದೇವತಾಕವಾದ ಎರಡನೆಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ--ರಥೇನ ಪೃಥುಪಾಜಸಾ ಬಹವಃ ಸೂರಚಕ್ಷಸಃ ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಇಂದ್ರವಾಯೂ ಅಯಂ ಸುತಸ್ತಂ ದೇವೇಭಿಃ ಸಜೋಷಸಾ ।
ಪಿಬತಂ ದಾಶುಷೋ ಗೃಹೇ ॥ ೬ ॥

॥ ಪದಪಾಠಃ ॥

ಇಂದ್ರವಾಯೂ ಇತಿ । ಅಯಂ । ಸುತಃ । ತಂ । ದೇವೇಭಿಃ । ಸ್ಯಜೋಷಸಾ ।
ಪಿಬತಂ । ದಾಶುಷಃ । ಗೃಹೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ಅಯಂ ಸೋಮಃ ಸುತೋಽಭಿಷುತಃ । ತಂ ಸೋಮಂ ದೇವೇಭಿರ್ದೇವೈಃ ಸಜೋಷಸಾ ಸಮಾನಪ್ರೀತೌ ದಾಶುಷೋ ಹವಿರ್ದಾತುರ್ಗೃಹೇ ಯಾಗಶಾಲಾಯಾಂ ಪಿಬತಂ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ— ಎಲೈ ಇಂದ್ರ ಮತ್ತು ವಾಯುಗಳೇ । ಅಯಂ—ಈ ಸೋಮವು । ಸುತಃ—ಹಿಂಡಿ ಸಿದ್ಧವಾಗಿದೆ । ತಂ—ಇದೇ ಸೋಮವನ್ನು । ದೇವೇಭಿಃ—ಸಕಲ ದೇವತೆಗಳೊಡನೆಯೂ । ಸಜೋಷಸಾ—ಸಮಾನಪ್ರೀತಿಯುಳ್ಳವರಾಗಿ । ದಾಶುಷಃ—ಹವಿರ್ದಾತನಾದ ಯಜಮಾನನ । ಗೃಹೇ—ಯಜ್ಞಗೃಹದಲ್ಲಿ । ಪಿಬತಂ--ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ಈ ಸೋಮವು ಹಿಂಡಿ ಸಿದ್ಧವಾಗಿದೆ. ಇದೇ ಸೋಮವನ್ನು ಸಕಲ ದೇವತೆಗಳೊಡನೆಯೂ ಸಮಾನಪ್ರೀತಿಯುಳ್ಳವರಾಗಿ ಹವಿರ್ದಾತನಾದ ಯಜಮಾನನ ಯಜ್ಞಗೃಹದಲ್ಲಿ ಪಾನಮಾಡಿರಿ.

## English Translation.

Indra and Vayu, this (libation) is poured out: sympathizing with the gods, drink it in the dwelling of the donor.

॥ ಸಂಹಿತಾಪಾಠಃ ॥

ಇಹ ಪ್ರಯಾಣಮಸ್ತು ವಾಮಿಂದ್ರವಾಯೂ ವಿಮೋಚನಂ ।
ಇಹ ವಾಂ ಸೋಮಪೀತಯೇ ॥ ೭ ॥

॥ ಪದಪಾಠಃ ॥

ಇಹ । ಪ್ರಽಯಾನಂ । ಅಸ್ತು । ವಾಂ । ಇಂದ್ರವಾಯೂ ಇತಿ । ವಿಽಮೋಚನಂ ।
ಇಹ । ವಾಂ । ಸೋಮಽಪೀತಯೇ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ವಾಂ ಯುವಯೋರಿಹಾಸ್ಮಿನ್ಯಜ್ಞೇ ಪ್ರಯಾಣಂ ಗಮನಮಸ್ತು । ಇಹಾಸ್ಮಿನ್ನೇವ ಯಜ್ಞೇ ವಾಂ ಸೋಮಪೀತಯೇ ವಿಮೋಚನಮಶ್ವಾನಾಮಸ್ತು । ಪರ್ಯವಸಾನತ ಏಕಾರ್ಥತ್ವೇಽಪ್ಯಾದರಾರ್ಥತ್ವಾದವಿರೋಧಃ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುಗಳೇ । ವಾಂ—ನಿಮ್ಮ । ಪ್ರಯಾಣಂ—ಗಮನವು । ಇಹ—ಈ ಯಜ್ಞಪ್ರದೇಶಾಭಿಮುಖವಾಗಿ । ಅಸ್ತು—ಇರಲಿ । ವಾಂ—ನಿಮ್ಮ ಅಶ್ವಗಳ । ವಿಮೋಚನಂ—ಬಿಚ್ಚುವಿಕೆಯು । ಇಹ—ಈ ಯಜ್ಞದಲ್ಲಿ । ಸೋಮಪೀತಯೇ—ಸೋಮಪಾನಾರ್ಥವಾಗಿ ಆಗಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ನಿಮ್ಮ ಗಮನವು ಈ ಯಜ್ಞಪ್ರದೇಶಾಭಿಮುಖವಾಗಲಿ. ಈ ಯಜ್ಞವನ್ನು ಸೋಮಪಾನವನ್ನು ಮಾಡುವುದಕ್ಕೋಸ್ಕರ ನಿಮ್ಮ ರಥವನ್ನು ಇಲ್ಲಿ ತಂದು ಅಶ್ವಗಳನ್ನು ಬಿಚ್ಚಿ ನೀವು ಸೋಮಪಾನಮಾಡಿರಿ.

English Translation.

Hither be your course; here, Indra and Vayu, be the letting of your horses loose, for your drinking of the Soma.



# ನಲವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ವಾಯೋ ಶುಕ್ರ ಇತಿ ಚತುರ್ಋಚಂ ದ್ವಿತೀಯಂ ಸೂಕ್ತಮಾನುಷ್ಟುಭಂ ವಾಮದೇವಸ್ಯಾರ್ಷ-ಮೈಂದ್ರವಾಯವಂ । ಆದ್ಯಾ ಕೇವಲವಾಯವ್ಯಾ । ಅತ್ರಾನುಕ್ರಮಣಿಕಾ । ವಾಯೋ ಚತುಷ್ಕಮಾದ್ಯಾ ವಾಯವ್ಯಾನುಷ್ಟುಭಂ ತ್ವಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಆದ್ಯಾ ದಶರಾತ್ರೇ ಚತುರ್ಥೇಽಹನಿ ಪ್ರಉಗಶಸ್ತ್ರೇ ವಾಯವ್ಯತೃಚೇ ಪ್ರಥಮಾ । ವಾಯೋ ಶುಕ್ರೋ ಅಯಾಮಿ ತೇ ವಿಹಿ ಹೋತ್ರಾ ಅವೀತಾಃ । ಆ. ೭-೧೧ । ಇತಿ ಸೂತ್ರಿತಂ ॥

ಅನುವಾದವು—ವಾಯೋ ಶುಕ್ರಃ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರವಾಯುಗಳು ದೇವತೆಯು; ಅನುಷ್ಟುಪ್‌ಛಂದಸ್ಸು. ಈ ಸೂಕ್ತದ ಮೊದಲನೆಯ ಋಕ್ಕಿಗೆ ವಾಯುವು ಮಾತ್ರ ದೇವತೆಯು. ಉಳಿದ ಋಕ್ಕುಗಳಿಗೆ ಇಂದ್ರವಾಯುಗಳು ದೇವತೆಯು. ಅನುಕ್ರಮಣಿಕೆಯಲ್ಲಿ—ವಾಯೋ ಚತುಷ್ಕಮಾದ್ಯಾ ವಾಯ-ವ್ಯಾನುಷ್ಟುಭಂ ತು ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಈ ಸೂಕ್ತದ ಮೊದಲನೆಯ ಋಕ್ಕನ್ನು ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಪ್ರಉಗಶಸ್ತ್ರಮಂತ್ರಗಳ ಪಠನಕಾಲದಲ್ಲಿ ವಾಯುದೇವತಾಕವಾದ ತೃಚದಲ್ಲಿ (ಮೂರು ಋಕ್ಕುಗಳಲ್ಲಿ) ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ವಾಯೋ ಶುಕ್ರೋ ಅಯಾಮಿ ತೇ ವಿಹಿ ಹೋತ್ರಾ ಅವೀತಾಃ ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

## ಸೂಕ್ತ—೪೭

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೪೭ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥

॥ ಋಷಿಃ—ವಾಮದೇವಃ ॥

॥ ದೇವತಾ—೧ ವಾಯುಃ । ೨-೪. ಇಂದ್ರವಾಯೂ

॥ ಛಂದಃ—ಅನುಷ್ಟುಪ್ ।

॥ ಸಂಹಿತಾಪಾಠಃ ॥

ವಾಯೋ॒ ಶು॒ಕ್ರೋ ಅ॑ಯಾಮಿ ತೇ॒ ಮಧ್ವೋ॒ ಅಗ್ರಂ॒ ದಿವಿ॑ಷ್ಟಿಷು ।
ಆ ಯಾ॑ಹಿ॒ ಸೋಮ॑ಪೀತಯೇ ಸ್ಪಾ॒ರ್ಹೋ ದೇ॑ವ ನಿ॒ಯುತ್ವ॑ತಾ ॥ ೧ ॥

॥ ಪದಪಾಠಃ ॥

ವಾ॒ಯೋ ಇತಿ॑ । ಶು॒ಕ್ರಃ । ಅ॒ಯಾ॒ಮಿ॒ । ತೇ॒ । ಮಧ್ವಃ॑ । ಅಗ್ರ॑ಮ್ । ದಿವಿ॑ಷ್ಟಿಷು ।
ಆ । ಯಾ॒ಹಿ॒ । ಸೋಮ॑ಽಪೀತಯೇ । ಸ್ಪಾ॒ರ್ಹಃ । ದೇ॒ವ॒ । ನಿ॒ಯುತ್ವ॑ತಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತೇ ತುಭ್ಯಂ ಶುಕ್ರೋ ವ್ರತಚರ್ಯಾದಿನಾ ದೀಪ್ತೋಽಹಂ ಮಧ್ವೋ ಮಧುರಂ ಸೋಮರಸಂ ॥ ಕರ್ಮಣಿ ಷಷ್ಠೀ ॥ ಅಗ್ರಮಿತರೇಭ್ಯಃ ಪೂರ್ವಮಯಾಮಿ । ಅಯಯಾಮಿ ॥ ಅಯತಿರಂತರ್ಭಾವಿತಣ್ಯರ್ಥಃ ॥ ಕಿಮರ್ಥಂ । ದಿವಿಷ್ಟಿಷು ದಿವೋ ದ್ಯುಲೋಕಸ್ಯೈಷಣೇಷು ಸತ್ಸು ಹೇ ಧೇವ ವಾಯೋ ಸ್ಪಾರ್ಹಃ ಸ್ಪೃಹಣೀಯಸ್ತ್ವಂ ನಿಯುತ್ವತಾ । ನಿಯುದ್ವಾಯೋಃ ಪ್ರತಿನಿಯುತೋಽಶ್ವಃ । ತೇನ ಸಾಧನೇನಾ ಯಾಹಿ ಸೋಮಪೀತಯೇ ಸೋಮಪಾನಾಯ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ತೇ—ನಿನ್ನನ್ನುದ್ದೇಶಿಸಿ । ಶುಕ್ರಃ—(ವ್ರತಚರ್ಯಾದಿಗಳಿಂದ) ಪ್ರಕಾಶಮಾನನಾದ ನಾನು । ಮಧ್ವಃ—ಮಧುರವಾದ ಸೋಮರಸವನ್ನು । ಅಗ್ರಂ—ಇತರ ದೇವತೆಗಳಿಗೆ ಅರ್ಪಿಸುವುದಕ್ಕಿಂತಲೂ ಮೊದಲು । ದಿವಿಷ್ಟಿಷು—ದೇವಲೋಕದ ಸ್ಥಾನವನ್ನಪೇಕ್ಷಿಸಿ ಮಾಡುವ ಈ ಯಜ್ಞದಲ್ಲಿ । ಅಯಾಮಿ—ತಂದರ್ಪಿಸುತ್ತೇನೆ । ದೇವ—ಪ್ರಕಾಶಮಾನನಾದ ಎಲೈ ವಾಯುವೇ । ಸ್ಪಾರ್ಹಃ—ಆದರದಿಂದ ಅಪೇಕ್ಷಿತನಾದ ನೀನು । ನಿಯುತ್ವತಾ—ನಿಯುನ್ನಾಮಕವಾದ ಅಶ್ವದೊಡನೆ । ಸೋಮಪೀತಯೇ—ಸೋಮಪಾನಾರ್ಥವಾಗಿ । ಆ ಯಾಹಿ—ದಯಮಾಡು ।

॥ ಭಾವಾರ್ಥ ॥

ಎಲೈ ವಾಯುವೇ, ದೇವಲೋಕದ ಸ್ಥಾನವನ್ನಪೇಕ್ಷಿಸಿ ವ್ರತಚರ್ಯಾದಿಗಳಿಂದ ಪ್ರಕಾಶಮಾನನಾದ ನಾನು ಮಧುರವಾದ ಸೋಮರಸವನ್ನು ತಂದು ಇತರ ದೇವತೆಗಳಿಗೆ ಅರ್ಪಿಸುವುದಕ್ಕಿಂತಲೂ ಮೊದಲೇ ನಿನಗರ್ಪಿಸುತ್ತೇನೆ. ಪ್ರಕಾಶಮಾನನಾದ ಎಲೈ ವಾಯುವೇ, ಎಲ್ಲರಿಂದಲೂ ಅಪೇಕ್ಷಿತನಾದ ನೀನು ನಿನ್ನ ನಿಯುನ್ನಾಮಕವಾದ ಅಶ್ವದೊಡನೆ ಸೋಮಪಾನಾರ್ಥವಾಗಿ ದಯಮಾಡು.

## English Translation.

Purified (by holy acts) I bring to you, Vayu, the Soma, first (offered to you at sacrifices) that seek to gain heaven : deity, you are ever longed for, come with thy Niyut steeds to drink the Soma juice.

॥ ಸಂಹಿತಾಪಾಠಃ ॥

ಇಂದ್ರಶ್ಚ ವಾಯವೇಷಾಂ ಸೋಮಾನಾಂ ಪೀತಿಮರ್ಹಥಃ ।
ಯುವಾಂ ಹಿ ಯಂತೀಂದವೋ ನಿಮ್ನಮಾಪೋ ನ ಸಧ್ರ್ಯಕ್ ॥ ೨ ॥

॥ ಪದಪಾಠಃ ॥

ಇಂದ್ರಃ । ಚ । ವಾಯೋ ಇತಿ । ಏಷಾಂ । ಸೋಮಾನಾಂ । ಪೀತಿಂ । ಅರ್ಹಥಃ ।
ಯುವಾಂ । ಹಿ । ಯಂತಿ । ಇಂದವಃ । ನಿಮ್ನಂ । ಆಪಃ । ನ । ಸಧ್ರ್ಯಕ್ ॥ ೨ ॥

॥ ಸಾಯಣಭಾಷ್ಯಂ ॥

ಇಂದ್ರಶ್ಚೇತ್ಯಾದಿಸ್ತೃಚೋ ದಶರಾತ್ರೇ ಚತುರ್ಥೇಽಹನ್ಯೈಂದ್ರವಾಯವೋ ದ್ವಿತೀಯಃ । ಸೂತ್ರಿತಂ ಚ । ಇಂದ್ರಶ್ಚ ವಾಯವೇಷಾಂ ಸೋಮಾನಾಮಾ ಚಿಕಿತಾನ ಸುಕ್ರತೂ । ಆ. ೭-೧೧ । ಇತಿ ॥

ಹೇ ವಾಯೋ ತ್ವಮಿಂದ್ರಶ್ಚೈಷಾಂ ಗೃಹೀತಾನಾಂ ಸೋಮಾನಾಂ ಪೀತಿಂ ಪಾನಮರ್ಹಥಃ । ಯುವಾಂ ಹಿ ಖಲ್ವಿಂದವಃ ಸೋಮಾ ಯಂತಿ । ಪ್ರಾಪ್ನುವಂತಿ । ನಿಮ್ನಂ ಖಾತಪ್ರದೇಶಮಾಪೋ ನ ಸಧ್ರ್ಯಕ್ ಉದಕಾನಿ ಯಥಾ ಸಹೈವ ಗಚ್ಛಂತಿ ತದ್ವತ್ಸರ್ವೇ ಸೋಮಾ ಯುವಾಂ ಹಿ ಯಂತಿ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಇಂದ್ರಃ—ಎಲೈ ಇಂದ್ರನೇ । ಯುವಾಂ ಹಿ—ನೀವಿಬ್ಬರೇ । ಏಷಾಂ—ಇಲ್ಲಿ ಸಿದ್ಧವಾಗಿರುವ । ಸೋಮಾನಾಂ—ಸೋಮರಸಗಳ । ಪೀತಿಂ—ಪಾನಕ್ಕೆ । ಅರ್ಹತಃ—ಯೋಗ್ಯರಾಗಿದ್ದೀರಿ । ನಿಮ್ನಂ—ತಗ್ಗು ಪ್ರದೇಶಗಳಿಗೆ । ಸಧ್ರ್ಯಕ್—ಪ್ರವಾಹರೂಪದಲ್ಲಿ ಒಟ್ಟಿಗೆ ಸೇರಿಕೊಂಡು । ಆಪೋ ನ—ಉದಕಗಳು ಹರಿಯುವಂತೆ । ಇಂದವಃ—ಈ ಸೋಮರಸಗಳು । ಯಂತಿ—(ನಿಮ್ಮನ್ನೇ) ಸೇರಿಕೊಳ್ಳುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುಗಳೇ, ಇಲ್ಲಿ ಸಿದ್ಧವಾಗಿರುವ ಸೋಮರಸಗಳ ಪಾನಕ್ಕೆ ನೀವಿಬ್ಬರೇ ಯೋಗ್ಯರಾಗಿದ್ದೀರಿ. ಉದಕಗಳು ಪ್ರವಾಹರೂಪದಲ್ಲಿ ಒಟ್ಟಿಗೆ ಸೇರಿಕೊಂಡು ತಗ್ಗು ಪ್ರದೇಶಗಳಿಗೆ ಹರಿಯುವಂತೆ ಈ ಸೋಮರಸಗಳು ನಿಮ್ಮನ್ನೇ ಸೇರುತ್ತವೆ.

## English Translation.

Indra and Vayu, you are fit for the drinking of thees Soma libations, for the drops flow towards you as waters (run) together into a deep place.

॥ ವಿಶೇಷವಿಷಯಗಳು ॥

ಈ ಸೂಕ್ತದ ಇಂದ್ರಶ್ಚ ಎಂಬ ತೃಚವು (೨-೩-೪ ನೆಯ ಋಕ್ಕುಗಳು) ದಶರಾತ್ರನೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ಇಂದ್ರವಾಯುದೇವತಾಕವಾದ ಎರಡನೆಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಇಂದ್ರಶ್ಚ ವಾಯವೇಷಾಂ ಸೋಮಾನಾಮಾ ಚಿಕಿತಾನ ಸುಕ್ರತೂ ಎಂಬ ಸೂತ್ರದಿಂದ (ಅ. ೭-೧೧) ವಿವೃತವಾಗಿರುವುದು.



॥ ಸಂಹಿತಾಪಾಠಃ ॥

ವಾಯವಿಂದ್ರಶ್ಚ ಶುಷ್ಮಿಣಾ ಸರಥಂ ಶವಸಸ್ಪತೀ ।
ನಿಯುತ್ವಂತಾ ನ ಊತಯ ಆ ಯಾತಂ ಸೋಮಪೀತಯೇ ॥ ೩ ॥

॥ ಪದಪಾಠಃ ॥

ವಾಯೋ ಇತಿ । ಇಂದ್ರಃ । ಚ । ಶುಷ್ಮಿಣಾ । ಸ್ರಥಂ । ಶವಸಃ । ಪತೀ ಇತಿ ॥
ನಿಯುತ್ವಂತಾ । ನಃ । ಊತಯೇ । ಆ । ಯಾತಂ । ಸೋಮ್ಽಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಮಿಂದ್ರಶ್ಚ ಹೇ ಶವಸಸ್ಪತೀ ಬಲಸ್ಯ ಪತೀ ಶುಷ್ಮಿಣಾ ಬಲವಂತೌ ನಿಯುತ್ವಂತಾ ನಿಯುತ್ಸಂಜ್ಞಿಕಾಶ್ವವಂತೌ ಯುವಾಂ ಸರಥಂ ಸಮಾನಮೇವ ರಥಮಾರುಹ್ಯೇತಿ ಶೇಷಃ । ನ ಊತಯೇ ರಕ್ಷಣಾಯ ಸೋಮಪೀತಯೇ ಸೋಮಪಾನಾಯಾತ್ರಾ ಯಾತಂ । ಆಗಚ್ಛತಂ । ಯದ್ವಾ । ಸರಥಮಧಿತಿಷ್ಠತಮಾರುಹ್ಯ ಚಾಯಾತಮಿತಿ ಚ ವಾಕ್ಯದ್ವಯಂ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಇಂದ್ರಃ—ಎಲೈ ಇಂದ್ರನೇ । ಶವಸಸ್ಪತೀ—ಶಕ್ತಿಪಾಲಕರೂ । ಶುಷ್ಮಿಣಾ—ವೀರ್ಯವಂತರೂ । ನಿಯುತ್ವಂತಾ—ನಿಯುನ್ನಾಮಕವಾದ ಅಶ್ವವುಳ್ಳವರೂ ಆದ ನೀವು । ಸರಥಂ—ಒಂದೇ ರಥಾರೂಢರಾಗಿ । ನಃ—ನಮ್ಮ । ಊತಯೇ—ರಕ್ಷಣನಿಮಿತ್ತವಾಗಿಯೂ । ಸೋಮಪೀತಯೇ—ಸೋಮಪಾನಕ್ಕಾಗಿಯೂ । ಆ ಯಾತಂ—ದಯಮಾಡಿರಿ.

॥ ಭಾವಾರ್ಥ ॥

ಶಕ್ತಿಪಾಲಕರೂ, ವೀರ್ಯವಂತರೂ, ನಿಯುನ್ನಾಮಕವಾದ ಅಶ್ವವುಳ್ಳವರೂ ಆದ ಎಲೈ ಇಂದ್ರವಾಯುಗಳೇ, ನೀವಿಬ್ಬರೂ ಒಂದೇ ರಥದಲ್ಲಿ ಕುಳಿತು, ನಮ್ಮ ರಕ್ಷಣನಿಮಿತ್ತವಾಗಿಯೂ ಸೋಮಪಾನಕ್ಕಾಗಿಯೂ ದಯಮಾಡಿರಿ.

English Translation.

Indra and Vayu who are lords of strength, vigorous, and drawn by the Niyut steeds, come (riding in) the same car : drink the Soma for our protection.



॥ ಸಂಹಿತಾಪಾಠಃ ॥

ಯಾ ವಾಂ ಸಂತಿ ಪುರುಸ್ಪೃಹೋ ನಿಯುತೋ ದಾಶುಷೇ ನರಾ ।
ಅಸ್ಮೇ ತಾ ಯಜ್ಞವಾಹಸೇಂದ್ರವಾಯೂ ನಿ ಯಚ್ಛತಂ ॥ ೪ ॥

॥ ಪದಪಾಠಃ ॥

ಯಾಃ । ವಾಂ । ಸಂತಿ । ಪುರುऽಸ್ಪೃಹಃ । ನಿऽಯುತಃ । ದಾಶುಷೇ । ನರಾ ।
ಅಸ್ಮೇ ಇತಿ । ತಾಃ । ಯಜ್ಞऽವಾಹಸಾ । ಇಂದ್ರವಾಯೂ ಇತಿ । ನಿ । ಯಚ್ಛತಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರೌ ಹೇ ಯಜ್ಞವಾಹಸಾ ಯಜ್ಞವಾಹಕಾವಿಂದ್ರವಾಯೂ ಯಾಃ ಪುರುಸ್ಪೃಹೋ ಬಹುಭಿಃ ಸ್ಪೃಹಣೀಯಾ ನಿಯುತಃ ಸಂತಿ ಅಸ್ಮೇ ಅಸ್ಮಭ್ಯಂ ದಾಶುಷೇ ಹವಿರ್ದತ್ತವತೇ ಯಜಮಾನಾಯ ಮದರ್ಥಂ ತಾ ನಿಯುತೋ ನಿ ಯಚ್ಛತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳೂ । ಯಜ್ಞವಾಹಸಾ—ಯಜ್ಞವಾಹಕರೂ ಆದ । ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುಗಳೇ । ಪುರುಸ್ಪೃಹಃ—ಅನೇಕರಿಂದ ಅಪೇಕ್ಷಿತವಾದವೂ । ನಿಯುತಃ—ನಿಯುನ್ನಾಮಕವೂ ಆದ । ಯಾಃ—ಯಾವ ಅಶ್ವಗಳು । ವಾಂ—ನಿಮ್ಮಲ್ಲಿ । ಸಂತಿ—ಪ್ರಸಿದ್ಧವಾಗಿವೆಯೋ । ತಾಃ—ಅವುಗಳನ್ನು । ದಾಶುಷೇ—ಹವಿರ್ದಾತರಾದ । ಅಸ್ಮೇ—ನಮಗೆ । ನಿ ಯಚ್ಛತಂ—ಕೊಡಿರಿ.

॥ ಭಾವಾರ್ಥ ॥

ನೇತೃಗಳೂ ಯಜ್ಞವಾಹಕರೂ ಆದ ಎಲೈ ಇಂದ್ರವಾಯುಗಳೇ, ಅನೇಕರಿಂದ ಅಪೇಕ್ಷಿತವಾದವೂ, ನಿಯುನ್ನಾಮಕವಾದುವೂ, ನಿಮ್ಮ ಪ್ರೀತಿಪಾತ್ರವೂ ಆದ ಯಾವ ಅಶ್ವಗಳು ನಿಮ್ಮಲ್ಲಿ ಪ್ರಸಿದ್ಧವಾಗಿ ಇವೆಯೋ ಅವುಗಳನ್ನು ಹರಿರ್ದಾತರಾದ ನಮಗೆ ಕೊಡಿರಿ.

English Translation.

Leaders (of rites), conveyers of sacrifices, Indra and Vayu, give to us for the offerer (of the oblation), those Niyuts which are your (steeds), and are desired of many.

## ನಲವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ವಿಹಿ ಹೋತ್ರಾ ಇತಿ ಪಂಚರ್ಚಂ ತೃತೀಯಂ ಸೂಕ್ತಂ ವಾಮದೇವ್ಯಂ ವಾಯವ್ಯಂ। ಅತ್ರಾನುಕ್ರಮಣಿಕಾ । ವಿಹಿ ಪಂಚ ವಾಯವ್ಯಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಆದ್ಯಾ ದಶರಾತ್ರೇ ಚತುರ್ಥೇಽಹನಿ ಪ್ರಉಗಶಸ್ತ್ರೇ ವಾಯವ್ಯತೃಚಸ್ಯ ದ್ವಿತೀಯಾ । ತಥಾ ಚ ಸೂತ್ರಿತಂ । ವಿಹಿ ಹೋತ್ರಾ ಅವೀತಾ ವಾಯೋ ಶತಂ ಹರೀಣಾಂ । ಆ. ೭-೧೧ । ಇತಿ ॥

ಅನುವಾದವು—ವಿಹಿ ಹೋತ್ರಾಃ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ವಾಯುವು ದೇವತೆಯು; ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ವಿಹಿ ಪಂಚ ವಾಯವ್ಯಂ ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು, ಈ ಸೂಕ್ತದ ಮೊದಲನೆಯ ಋಕ್ಕನ್ನು ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸ ಪ್ರಉಗಶಸ್ತ್ರಮಂತ್ರ ಪಠನಕಾಲದಲ್ಲಿ ವಾಯುದೇವತಾಕವಾದ ತೃಚದಲ್ಲಿ (ಮೂರು ಋಕ್ಕುಗಳಲ್ಲಿ) ಎರಡನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ವಿಹಿ ಹೋತ್ರಾ ಅವೀತಾ ವಾಯೋ ಶತಂ ಹರೀಣಾಂ ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

### ಸೂಕ್ತ—೪೮

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೪೮ ॥
ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೨೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ವಾಮದೇವಃ ॥
॥ ದೇವತಾ—ವಾಯುಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ವಿಹಿ ಹೋತ್ರಾ ಅವೀತಾ ವಿಪೋ ನ ರಾಯೋ ಅರ್ಯಃ ।
ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೧ ॥

॥ ಪದಪಾಠಃ ॥

ವಿಹಿ । ಹೋತ್ರಾಃ । ಅವೀತಾಃ । ವಿಪಃ । ನ । ರಾಯಃ । ಅರ್ಯಃ ।
ವಾಯೋ ಇತಿ । ಆ । ಚಂದ್ರೇಣ । ರಥೇನ । ಯಾಹಿ । ಸುತಸ್ಯ । ಪೀತಯೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಯೋ ವಿಹಿ । ವೀಹಿ । ಭಕ್ಷಯ । ಹೋತ್ರಾ ಹೋಮಸಾಧಿಕಾಃ ಸೋಮಾಹುತೀರವೀತಾ ಅನ್ಯೈಃ ಪೂರ್ವಮಭಕ್ಷಿತಾ ವಿಪೋ ನ ಶತ್ರೂಣಾಂ ವೇಪಯಿತಾ ರಾಜೇವ । ಕಿಂಚಾರ್ಯಃ ಸ್ತೋತುರ್ಮಮ ರಾಯೋ ಧನಾನಿ ಸಂಪಾದಯೇತಿ ಶೇಷಃ । ಹೇ ವಾಯೋ ಚಂದ್ರೇಣಾಹ್ಲಾದಕೇನ ರಥೇನಾ ಯಾಹಿ ಸುತಸ್ಯ ಸೋಮಸ್ಯ ಪೀತಯೇ ಪಾನಾಯ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಅವೀತಾಃ—ಇತರರಿಂದ ಪರಿಗ್ರಹಿಸಲ್ಪಡದೇ ಶುದ್ಧವಾಗಿರುವ । ಹೋತ್ರಾಃ—ಸೋಮಾಹುತಿಗಳನ್ನು । ವಿಪೋ ನ—ಶತ್ರುಗಳನ್ನು ಭಯಪಡಿಸುವ ಶಕ್ತಿಯುಳ್ಳ ರಾಜನಂತೆ । ವೀಹಿ—ಭಕ್ಷಿಸು । ಅರ್ಯಃ—ಸ್ತೋತೃವಾದ ನನಗೆ । ರಾಯಃ—ಧನಗಳನ್ನು ಕೊಡು । ಚಂದ್ರೇಣ—ಆಹ್ಲಾದಕಾರಕವಾದ । ರಥೇನ—ರಥದೊಡನೆ । ಸುತಸ್ಯ—ಸೋಮರಸದ । ಪೀತಯೇ—ಪಾನಕ್ಕಾಗಿ । ಆ ಯಾಹಿ—ದಯಮಾಡು.

। ಭಾವಾರ್ಥ ॥

ಎಲೈ ವಾಯುವೇ, ಇತರರಿಂದ ಪರಿಗ್ರಹಿಸಲ್ಪಡದೇ ಶುದ್ಧವಾಗಿರುವ ಸೋಮಾಹುತಿಗಳನ್ನು ಶತ್ರುಭೀಕರನಾದ ರಾಜನಂತೆ ಭಕ್ಷಿಸು. ಸ್ತೋತೃವಾದ ನನಗೆ ಧನಗಳನ್ನು ಕೊಡು: ಆಹ್ಲಾದಕಾರಕವಾದ ರಥದೊಡನೆ ಸೋಮರಸದ ಪಾನಕ್ಕಾಗಿ ದಯಮಾಡು.

## English Translation.

Drink, Vayu, the oblations yet untasted, like (a prince) the terr ifier of foes ; (bestow) upon the worshipper wealth : come with your brilliant car to drink the Soma juice



॥ ಸಂಹಿತಾಪಾಠಃ ॥

ನಿಯುರ್ವಾಣೋ ಅಶಸ್ತೀರ್ನಿಯುತ್ವಾಂ ಇಂದ್ರಸಾರಥಿಃ ।
ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೨ ॥

॥ ಪದಪಾಠಃ ॥

ನಿಃಽಯುವಾನಃ । ಅಶಸ್ತೀಃ । ನಿಯುತ್ವಾನ್ । ಇಂದ್ರಽಸಾರಥಿಃ ।
ವಾಯೋ ಇತಿ । ಆ । ಚಂದ್ರೇಣ । ರಥೇನ । ಯಾಹಿ । ಸುತಸ್ಯ । ಪೀತಯೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಮಶಸ್ತೀರಭಿಶಸ್ತೀರ್ನಿರ್ಯುವಾಣೋ ನಿಃಶೇಷೇಣ ನಿಯೋಜಯನ್ನಿಯುತ್ವಾನ್ನಿಯುತ್ಸಂಜ್ಞಕಾಶ್ವವಾನಿಂದ್ರಸಾರಥಿರಿಂದ್ರಸಹಾಯಃ ಸನ್ ಆ ಯಾಹಿ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಅಶಸ್ತೀಃ—ಅಮಂಗಳಗಳನ್ನು । ನಿರ್ಯುವಾಣಃ—ತಡೆಗಟ್ಟುವವನಾಗಿಯೂ । ನಿಯುತ್ವಾನ್—ನಿಯುನ್ನಾಮಕಗಳಾದ ಅಶ್ವಗಳುಳ್ಳವನಾಗಿಯೂ । ಇಂದ್ರಸಾರಥಿಃ—ಇಂದ್ರನೇ ಸಾರಥಿಯಾಗಿ ಉಳ್ಳವನೂ ಆಗಿ । ಚಂದ್ರೇಣ—ಆಹ್ಲಾದಕಾರಕವಾದ । ರಥೇನ—ರಥದೊಡನೆ । ಸುತಸ್ಯ—ಹಿಂಡಿರುವ ಸೋಮದ । ಪೀತಯೇ - ಪಾನಕ್ಕಾಗಿ । ಆ ಯಾಹಿ—ದಯಮಾಡು.

॥ ಭಾವಾರ್ಥ ॥

ಎಲೈ ವಾಯುವೇ, ಅಮಂಗಳಗಳನ್ನು ತಡೆಗಟ್ಟುವವನೂ, ನಿಯುನ್ನಾಮಕಗಳಾದ ಅಶ್ವಗಳುಳ್ಳವನೂ, ಇಂದ್ರಸಾರಥಿಯಾದವನೂ ಆದ ನೀನು ಆಹ್ಲಾದಕಾರಕವಾದ ನಿನ್ನ ರಥದೊಡನೆ ಹಿಂಡಿರುವ ಸೋಮದ ಪಾನಕ್ಕಾಗಿ ದಯಮಾಡು.

## English Translation.

Vayu, who are the represser of calumnies, who are drawn by the Niyuts, and have Indra for you charioteer, come with your brilliant car to drink the Soma juice.



॥ ಸಂಹಿತಾಪಾಠಃ ॥

ಅನು ಕೃಷ್ಣೇ ವಸುಧಿತೀ ಯೇಮಾತೇ ವಿಶ್ವಪೇಶಸಾ ।
ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೩ ॥

॥ ಪದಪಾಠಃ ॥

ಅನು । ಕೃಷ್ಣೇ ಇತಿ । ವಸುಧಿತೀ ಇತಿ ವಸುऽಧಿತೀ । ಯೇಮಾತೇ ಇತಿ । ವಿಶ್ವऽಪೇಶಸಾ ।
ವಾಯೋ ಇತಿ । ಆ । ಚಂದ್ರೇಣ । ರಥೇನ । ಯಾಹಿ । ಸುತಸ್ಯ । ಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಕೃಷ್ಣೇ ಕೃಷ್ಣವರ್ಣೇ ವಸುಧಿತೀ ವಸೂನಾಂ ಧಾತ್ರ್ಯೌ ವಿಶ್ವಪೇಶಸಾ ವಿಶ್ವರೂಪೇ ದ್ಯಾವಾ-ಪೃಥಿವ್ಯೌ ತ್ವಾಮನು ಯೇಮಾತೇ । ಅನುಗಚ್ಛತಃ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಕೃಷ್ಣೇ—ಗಭೀರವಾದ ವರ್ಣವುಳ್ಳವೂ । ವಸುಧಿತೀ—ಸಂಪತ್ಪೋಷಕಗಳೂ । ವಿಶ್ವಪೇಶಸಾ—ನಾನಾವಿಧವಾದ ರೂಪವುಳ್ಳವೂ ಆದ ದ್ಯಾವಾಪೃಥಿವಿಗಳು । ಅನು ಯೇಮಾತೇ—ನಿನ್ನನ್ನೇ ಸೇವಿಸುತ್ತವೆ । ಚಂದ್ರೇಣ—ಆಹ್ಲಾದಕಾರಕವಾದ । ರಥೇನ—ರಥದೊಡನೆ । ಸುತಸ್ಯ—ಹಿಂಡಿರುವ ಸೋಮದ । ಪೀತಯೇ—ಪಾನಕ್ಕಾಗಿ । ಆ ಯಾಹಿ—ದಯಮಾಡು.

॥ ಭಾವಾರ್ಥ ॥

ಎಲೈ ವಾಯುವೇ, ಗಭೀರವಾದ ಕೃಷ್ಣವರ್ಣವುಳ್ಳವೂ, ಸಂಪತ್ಪೋಷಕವೂ, ನಾನಾವಿಧವಾದ ರೂಪವುಳ್ಳವೂ ಆದ ದ್ಯಾವಾಪೃಥಿವಿಗಳು ನಿನ್ನನ್ನೇ ಸೇವಿಸುತ್ತವೆ. ಆಹ್ಲಾದಕಾರಕವಾದ ನಿನ್ನ ರಥದೊಡನೆ ಹಿಂಡಿರುವ ಸೋಮಪಾನಕ್ಕಾಗಿ ದಯಮಾಡು.

## English Translation.

The dark nurses of wealth, the universal forms (heaven and earth), attend upon you; come Vayu with your brilliant car to drink the Soma juice.



॥ ಸಂಹಿತಾಪಾಠಃ ॥

ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್ನವ ।

ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೪ ॥

॥ ಪದಪಾಠಃ ॥

ವಹಂತು । ತ್ವಾ । ಮನಃಽಯುಜಃ । ಯುಕ್ತಾಸಃ । ನವತಿಃ । ನವ ।

ವಾಯೋ ಇತಿ । ಆ । ಚಂದ್ರೇಣ । ರಥೇನ । ಯಾಹಿ । ಸುತಸ್ಯ । ಪೀತಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತ್ವಾ ತ್ವಾಂ ಮನೋಯುಜೋ ಮನಃಸಮಾನಗತಯೋ ಯುಕ್ತಾಸಃ ಪರಸ್ಪರಸಂಯುಕ್ತಾ ನವತಿರ್ನವ ನವೋತ್ತರನವತಿಸಂಖ್ಯಾಕಾ ಅಶ್ವಾ ವಹಂತು । ಧಾರಯಂತು ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಮನೋಯುಜಃ—ಮನೋವೇಗದಂತೆ ವೇಗವುಳ್ಳವೂ । ಯುಕ್ತಾಸಃ—ಒಂದಕ್ಕೊಂದಕ್ಕೆ ಹೊಂದಿಕೊಂಡಿರುವುವೂ । ನವತಿರ್ನವ—ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ ಆದ ಅಶ್ವಗಳು । ವಹಂತು—ನಿನ್ನನ್ನು ವಹಿಸಲಿ । ಚಂದ್ರೇಣ—ಆಹ್ಲಾದಕಾರಕವಾದ । ರಥೇನ—ರಥದೊಡನೆ । ಸುತಸ್ಯ—ಹಿಂಡಿರುವ ಸೋಮದ । ಪೀತಯೇ—ಪಾನಕ್ಕಾಗಿ । ಆ ಯಾಹಿ—ದಯಮಾಡು.

॥ ಭಾವಾರ್ಥ ॥

ಎಲೈ ವಾಯುವೇ, ಮನೋವೇಗದಂತೆ ವೇಗವುಳ್ಳವೂ, ಒಂದಕ್ಕೊಂದಕ್ಕೆ ಹೊಂದಿಕೊಂಡಿರುವುವೂ, ತೊಂಭತ್ತೊಂಭತ್ತು ಸಂಖ್ಯೆಯುಳ್ಳವೂ ಆದ ಅಶ್ವಗಳು ನಿನ್ನನ್ನು ವಹಿಸಲಿ. ಆಹ್ಲಾದಕಾರಕವಾದ ರಥದೊಡನೆ, ಹಿಂಡಿರುವ ಸೋಮಪಾನಕ್ಕಾಗಿ ದಯಮಾಡು.

## English Translation.

May the ninety-nine steeds harnessed together, that are as swift as thought, convey you : come, Vayu, with your brilliant car, to drink the Soma juice.



॥ ಸಂಹಿತಾಪಾಠಃ ॥

ವಾಯೋ ಶತಂ ಹರೀಣಾಂ ಯುವಸ್ವ ಪೋಷ್ಯಾಣಾಂ ।

ಉತ ವಾ ತೇ ಸಹಸ್ರಿಣೋ ರಥ ಆ ಯಾತು ಪಾಜಸಾ ॥ ೫ ॥

॥ ಪದಪಾಠಃ ॥

ವಾಯೋ ಇತಿ । ಶತಂ । ಹರೀಣಾಂ । ಯುವಸ್ವ । ಪೋಷ್ಯಾಣಾಂ ।

ಉತ । ವಾ । ತೇ । ಸಹಸ್ರಿಣಃ । ರಥಃ । ಆ । ಯಾತು । ಪಾಜಸಾ ॥ ೫ ॥

॥ ಸಾಯಣಭಾಷ್ಯಂ ॥

ವಾಯೋ ಶತಮಿತಿ ಪಂಚಮೀ ಪೂರ್ವೋಕ್ತ ಏವ ತೃಚೇ ತೃತೀಯಾ । ಸೂತ್ರಂ ಪೂರ್ವಮೇವೋಕ್ತಂ ॥

ಹೇ ವಾಯೋ ತ್ವಂ ಪೋಷ್ಯಾಣಾಂ ಪೋಷಣೀಯಾನಾಂ ಹರೀಣಾಂ ಶತಂ ಯುವಸ್ವ । ಯೋಜಯ ರಥೇ । ಉತ ವಾ ಅಥವಾ ತೇ ಸಹಸ್ರಿಣಃ ಸಹಸ್ರಸಂಖ್ಯಾಪೂರಕಾ ಅಶ್ವಾಃ । ತೈರ್ಯುಕ್ತೋ ರಥಃ ಪಾಜಸಾ ಬಲೇನಾ ಯಾತು । ಆಗಚ್ಛತು ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ಪೋಷ್ಯಾಣಾಂ—ಪೋಷಿಸಲು ಯೋಗ್ಯವಾದ । ಹರೀಣಾಂ—ಅಶ್ವಗಳ । ಶತಂ—ನೂರನ್ನು । ಯುವಸ್ವ—ರಥಕ್ಕೆ ಯೋಜಿಸು । ಉತ ವಾ—ಮತ್ತು (ಅಥವಾ) । ಸಹಸ್ರಿಣಃ—ಸಹಸ್ರಸಂಖ್ಯಾತವಾದ ಅಶ್ವಗಳೊಡನೆ ಕೂಡಿದ । ತೇ—ನಿನ್ನ । ರಥಃ—ರಥವು । ಪಾಜಸಾ—ತನ್ನ ಶಕ್ತಿಯೊಡನೆ । ಆ ಯಾತು—ದಯಮಾಡಲಿ.

॥ ಭಾವಾರ್ಥ ॥

ಎಲೈ ವಾಯುವೇ, ಪೋಷಿಸಲು ಯೋಗ್ಯವಾದ (ಅಥವಾ ಪುಷ್ಟವಾದ) ನೂರು ಅಶ್ವಗಳನ್ನು ನಿನ್ನ ರಥಕ್ಕೆ ಯೋಜಿಸು. ಅಥವಾ ಸಹಸ್ರಸಂಖ್ಯಾಕವಾದ ಅಶ್ವಗಳೊಡನೆ ಕೂಡಿದ ನಿನ್ನ ರಥವು ತನ್ನ ಶಕ್ತಿಯೊಡನೆ ದಯಮಾಡಲಿ.

English Translation.

Harness, Vayu, a hundred plump steeds, or even a thousand, and let your chariot come with rapidity (hither).

॥ ವಿಶೇಷವಿಷಯಗಳು ॥

ವಾಯೋ ಶತಂ ಹರೀಣಾಂ ಎಂಬ ಈ ಋಕ್ಕನ್ನು ಈ ಸೂಕ್ತದ ವಿನಿಯೋಗದಲ್ಲಿ (ಪುಟ 483) ಹೇಳಿರುವ ತೃಚದಲ್ಲಿ ಮೂರನೆಯ ಋಕ್ಕನ್ನಾಗಿ ಉಪಯೋಗಿಸಬೇಕೆಂದು ಇದರ ವಿನಿಯೋಗವನ್ನು ಅಲ್ಲಿಯೇ ಹೇಳಲಾಗಿದೆ.



# ನಲವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇದಂ ವಾಮಾಸ್ಯ ಇತಿ ಷಡೃಚಂ ಚತುರ್ಥಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರ-ಮೈಂದ್ರಾಬಾರ್ಹಸ್ಪತ್ಯಂ । ಅತ್ರಾನುಕ್ರಮಣಿಕಾ । ಇದಂ ವಾಂ ಷಳೈಂದ್ರಾಬಾರ್ಹಸ್ಪತ್ಯಂ ಗಾಯತ್ರಮಿತಿ । ಸೂಕ್ತವಿನಿಯೋಗೋ ಲೈಂಗಿಕಃ ॥

ಅನುವಾದವು—ಇದಂ ವಾಮಾಸ್ಯೇ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಇಂದ್ರ ಮತ್ತು ಬೃಹಸ್ಪತಿಯು ದೇವತೆಗಳು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ ಇದಂ ವಾಂ ಷಳೈಂದ್ರಾಬಾರ್ಹಸ್ಪತ್ಯಂ ಗಾಯತ್ರಂ ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೪೯

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೪೯ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೨೫ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಾಮದೇವಃ ॥
ದೇವತಾ—ಇಂದ್ರಾಬೃಹಸ್ಪತೀ ॥
ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ ।
ಉಕ್ಥಂ ಮದಶ್ಚ ಶಸ್ಯತೇ ॥ ೧ ॥

॥ ಪದಪಾಠಃ ॥

ಇದಂ । ವಾಂ । ಆಸ್ಯೇ । ಹವಿಃ । ಪ್ರಿಯಂ । ಇಂದ್ರಾ‌ಬೃಹಸ್ಪತೀ ಇತಿ ।

ಉಕ್ಥಂ । ಮದಃ । ಚ । ಶಸ್ಯತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಬೃಹಸ್ಪತೀ ವಾವಾಸ್ಯ ಇದಂ ಪ್ರಿಯಂ ಹವಿಃ ಸೋಮರೂಪಂ ಪ್ರಕ್ಷಿಪಾಮೀತಿ ಶೇಷಃ। ಉಕ್ಥಂ ಶಸ್ತ್ರಂ ಚ ಮದೋ ಮದಜನಕಂ ಶಸ್ಯತೇ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರ ಮತ್ತು ಬೃಹಸ್ಪತಿಗಳೇ । ವಾಂ—ನಿಮ್ಮ । ಆಸ್ಯೇ—ಮುಖದಲ್ಲಿ । ಇದಂ—ಇಲ್ಲಿ ಸಿದ್ಧವಾಗಿರುವುದೂ । ಪ್ರಿಯಂ—ಪ್ರೀತಿಕಾರಕವಾದುದೂ ಆದ । ಹವಿಃ—ಸೋಮರೂಪವಾದ ಹವಿಸ್ಸನ್ನು (ಅರ್ಪಿಸುತ್ತೇನೆ) । ಮದಃ—ಹರ್ಷಕಾರಕವಾದ । ಉಕ್ಥಂ ಚ—ಶಸ್ತ್ರಮಂತ್ರವೂ ಸಹ । ಶಸ್ಯತೇ—ಪಠಿಸಿ ಅರ್ಪಿತವಾಗುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ಇಲ್ಲಿ ಸಿದ್ಧವಾಗಿರುವುದೂ, ನಿಮಗೆ ಅತ್ಯಂತ ಪ್ರಿಯವಾದುದೂ ಆದ ಸೋಮ ರೂಪವಾದ ಹವಿಸ್ಸನ್ನು ನಿಮ್ಮ ಮುಖದಲ್ಲಿ ಅರ್ಪಿಸುತ್ತೇನೆ. ಮತ್ತು ಹರ್ಷಕಾರಕವಾದ ಶಸ್ತ್ರಮಂತ್ರವನ್ನೂ ಪಠಿಸಿ ನಿಮಗೆ ಅರ್ಪಿಸುತ್ತೇನೆ.

## English Translation.

(I present) the agreeable oblation to your mouths, Indra and Brihaspati, and the hymn and the exhilarating beverage are offered.

---

॥ ಸಂಹಿತಾಪಾಠಃ ॥

ಅಯಂ ವಾಂ ಪರಿ ಷಿಚ್ಯತೇ ಸೋಮ ಇಂದ್ರಾಬೃಹಸ್ಪತೀ ।

ಚಾರುರ್ಮದಾಯ ಪೀತಯೇ ॥ ೨ ॥

॥ ಪದಪಾಠಃ ॥

ಅಯಂ । ವಾಂ । ಪರಿ । ಸಿಚ್ಯತೇ । ಸೋಮಃ । ಇಂದ್ರಾಬೃಹಸ್ಪತೀ ಇತಿ ।

ಚಾರುಃ । ಮದಾಯ । ಪೀತಯೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಬೃಹಸ್ಪತೀ ವಾಮಾಸ್ಯೇ ಚಾರುಃ ಶೋಭನೋಽಯಂ ಸೋಮಃ ಪರಿ ಷಿಚ್ಯತೇ । ಪರಿತೋ ದೀಯತೇ । ಮದಾಯ ಹರ್ಷಾಯ ಪೀತಯೇ ಪಾನಾಯ ಚ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರಾಬೃಹಸ್ಪತಿಗಳೇ । ವಾಂ—ನಿಮ್ಮ । (ಆಸ್ಯೇ—ಮುಖದಲ್ಲಿ) । ಚಾರು—ಹಿತಕರವಾದ । ಅಯಂ ಸೋಮಃ—ಈ ಸೋಮರಸವು । ಪೀತಯೇ—ನಿಮ್ಮ ಪಾನಕ್ಕಾಗಿಯೂ । ಮದಾಯ—ನಿಮಗೆ ಹರ್ಷವುಂಟಾಗುವುದಕ್ಕಾಗಿಯೂ । ಪರಿ ಷಿಚ್ಯತೇ—ಸುತ್ತಲೂ ಅರ್ಪಿತವಾಗುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ನಿಮ್ಮ ಮುಖದಲ್ಲಿ ಹಿತಕರವಾದ ಈ ಸೋಮವು ನಿಮ್ಮ ಪಾನಕ್ಕೂ ಅದರಿಂದ ನಿಮಗೆ ಹರ್ಷಲಾಭಕ್ಕೂ ಸುತ್ತಲೂ ಅರ್ಪಿತವಾಗುತ್ತದೆ.

## English Translation.

The delicious Soma is effused, Indra and Brihaspati, for you, for (your) drinking and exhilaration.

॥ ಸಂಹಿತಾಪಾಠಃ ॥

ಆ ನ ಇಂದ್ರಾಬೃಹಸ್ಪತೀ ಗೃಹಮಿಂದ್ರಶ್ಚ ಗಚ್ಛತಂ ।

ಸೋಮಪಾ ಸೋಮಪೀತಯೇ ॥ ೩ ॥

॥ ಪದಪಾಠಃ ॥

ಆ । ನಃ । ಇಂದ್ರಾಬೃಹಸ್ಪತೀ ಇತಿ । ಗೃಹಂ । ಇಂದ್ರಃ । ಚ । ಗಚ್ಛತಂ ।

ಸೋಮಽಪಾ । ಸೋಮಽಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಐಂದ್ರಾಬಾರ್ಹಸ್ಪತ್ಯಾಯಾಮಿಷ್ಟೌ ಪ್ರಧಾನಸ್ಯಾ ನ ಇಂದ್ರೇತಿ ತೃತೀಯಾನುವಾಕ್ಯೋತ್ತರಾ ಯಾಜ್ಯಾ । ಸೂತ್ರಿತಂ ಚ । ಆ ನ ಇಂದ್ರಾಬೃಹಸ್ಪತೀ ಅಸ್ಮೇ ಇಂದ್ರಾಬೃಹಸ್ಪತೀ । ಆ. ೨-೧೧ । ಇತಿ ॥

ಹೇ ಇಂದ್ರಾಬೃಹಸ್ಪತೀ । ಅಥ ವಿವಿಚ್ಯೋಚ್ಯತೇ । ಹೇ ಬೃಹಸ್ಪತೇ ತ್ವಂ ಚೇಂದ್ರಶ್ಚ ಸೋಮಪಾ ಸೋಮಪೌ ಯುವಾಂ ಸೋಮಪೀತಯೇ ಸೋಮಪಾನಾಯ ನೋ ಗೃಹಮಸ್ಮದ್ಯಾಗಸಂಬಂಧ್ಯಾ ಗಚ್ಛತಂ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರಾಬೃಹಸ್ಪತಿಗಳೇ । ಇಂದ್ರಶ್ಚ—(ಎಲೈ ಬೃಹಸ್ಪತಿಯೇ, ನೀನೂ) ಇಂದ್ರನೂ । ಸೋಮಪಾ—ಸೋಮವನ್ನು ಪಾನಮಾಡುವವರಾಗಿ । ಸೋಮಪೀತಯೇ—ಸೋಮಪಾನಕ್ಕಾಗಿ । ನಃ—ನಮ್ಮ । ಗೃಹಂ—ಗೃಹಕ್ಕೆ । ಆ ಗಚ್ಛತಂ—ದಯಮಾಡಿ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ಸೋಮಪಾನವನ್ನು ಮಾಡುವವರಾದ ನೀವಿಬ್ಬರೂ ಸಹ ನಮ್ಮ ಗೃಹಕ್ಕೆ ಸೋಮಪಾನಕ್ಕಾಗಿ ದಯಮಾಡಿ.

## English Translation.

Indra and Brihaspati, come to our dwelling, drinkers of Soma, to drink the Soma juice.

॥ ವಿಶೇಷವಿಷಯಗಳು ॥

ಇಂದ್ರಾಬೃಹಸ್ಪತಿಗಳನ್ನುದ್ದೇಶಿಸಿ ಮಾಡುವ ಐಂದ್ರಾಬಾರ್ಹಸ್ಪತ್ಯವೆಂಬ ಇಷ್ಟಿಯಲ್ಲಿ ಪ್ರಧಾನಹೋಮ ಮಾಡುವಾಗ ಆ ನ ಇಂದ್ರಾ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ ಮುಂದಿನ ಅಸ್ಮೇ ಇಂದ್ರಾಬೃಹಸ್ಪತೀ ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಆ ನ ಇಂದ್ರಾಬೃಹಸ್ಪತೀ ಅಸ್ಮೇ ಇಂದ್ರಾಬೃಹಸ್ಪತೀ ಎಂಬ ಸೂತ್ರದಿಂದ (ಆ. ೨-೧೧) ವಿವೃತ ವಾಗಿರುವುದು.

---

। ಸಂಹಿತಾಪಾಠಃ ।

ಅಸ್ಮೇ ಇಂದ್ರಾಬೃಹಸ್ಪತೀ ರಯಿಂ ಧತ್ತಂ ಶತಗ್ವಿನಂ ।
ಅಶ್ವಾವಂತಂ ಸಹಸ್ರಿಣಂ ॥ ೪ ॥

॥ ಪದಪಾಠಃ ॥

ಅಸ್ಮೇ ಇತಿ । ಇಂದ್ರಾಬೃಹಸ್ಪತೀ ಇತಿ । ರಯಿಂ । ಧತ್ತಂ । ಶತಽಗ್ವಿನಂ ।
ಅಶ್ವಽವಂತಂ । ಸಹಸ್ರಿಣಂ ॥ ೪ ॥

॥ ಸಾಯಣಭಾಷ್ಯಂ ॥

ಅಸ್ಯಾ ವಿನಿಯೋಗಃ ಪೂರ್ವಮಂತ್ರೇಣ ಸಹೋಕ್ತಃ । ಹೇ ಇಂದ್ರಾಬೃಹಸ್ಪತೀ ಅಸ್ಮೇ ಅಸ್ಮಭ್ಯಂ ರಯಿಂ ಧನಂ ಧತ್ತಂ । ಕೀದೃಶಂ ರಯಿಂ । ಶತಗ್ವಿನಂ ಶತಸಂಖ್ಯಾಕಾಭಿರ್ಗೋಭಿರ್ಯುಕ್ತಮಶ್ವಾವಂತ- ಮಶ್ವವಂತಂ ಸಹಸ್ರಿಣಂ ಸಹಸ್ರಸಂಖ್ಯಾಯುಕ್ತಂ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರಾಬೃಹಸ್ಪತಿಗಳೇ। ಶತಗ್ವಿನಂ—ನೂರು ಗೋವುಗಳಿಂದ ಕೂಡಿದುದೂ। ಸಹಸ್ರಿಣಂ—ಸಹಸ್ರ ಸಂಖ್ಯಾಕವಾದ। ಅಶ್ವವಂತಂ—ಅಶ್ವಗಳೊಡನೆ ಕೂಡಿದುದೂ ಆದ। ರಯಿಂ—ಧನವನ್ನು। ಅಸ್ಮೇ—ನಮಗೆ। ಧತ್ತಂ—ಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ನೂರು ಗೋವುಗಳಿಂದ ಕೂಡಿದುದೂ, ಸಹಸ್ರ ಅಶ್ವಗಳೊಡನೆ ಕೂಡಿದುದೂ ಆದ ಧನವನ್ನು ನಮಗೆ ಕೊಡಿರಿ.

**English Translation.**

Grant to us, Indra and Brihaspati, riches comprising a hundred (cattle), a thousend horses.

॥ ಸಂಹಿತಾಪಾಠಃ ॥

ಇಂದ್ರಾಬೃಹಸ್ಪತೀ ವಯಂ ಸುತೇ ಗೀರ್ಭಿರ್ಹವಾಮಹೇ ।

ಅಸ್ಯ ಸೋಮಸ್ಯ ಪೀತಯೇ ॥ ೫ ॥

॥ ಪದಪಾಠಃ ॥

ಇಂದ್ರಾಬೃಹಸ್ಪತೀ ಇತಿ । ವಯಂ । ಸುತೇ । ಗೀಃಽಭಿಃ । ಹವಾಮಹೇ ।

ಅಸ್ಯ । ಸೋಮಸ್ಯ । ಪೀತಯೇ ॥ ೫ ॥

[illegible]

ಸುತೇ ಸೋಮೇಽಭಿಷುತೇ ಗೀರ್ಭಿಃ ಸ್ತುತಿಭಿಃ । ಶಿಷ್ಟಂ ಗತಂ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರಾಬೃಹಸ್ಪತಿಗಳೇ | ಸುತೇ—(ನಿಮಗಾಗಿ) ಸೋಮರಸವು ಹಿಂಡಿ ಸಿದ್ಧರಾಗಿರುವಾಗ | ವಯಂ—ನಾವು | ಅಸ್ಯ ಸೋಮಸ್ಯ—ಈ ಸೋಮದ | ಪೀತಯೇ—ಪಾನಕ್ಕಾಗಿ | ಗೀರ್ಭಿಃ—ಸ್ತುತಿವಾಕ್ಯಗಳಿಂದ | ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ನಿಮಗಾಗಿ ಈ ಸೋಮವನ್ನು ಹಿಂಡಿ ಸಿದ್ಧಪಡಿಸಿದ್ದೇವೆ. ಇದರ ಪಾನಕ್ಕೆ ನಿಮ್ಮನ್ನು ಸ್ತುತಿವಾಕ್ಯಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ.

**English Translation.**

Indra and Brishaspati, we invoke you with praisas, when the libation is effused, to drink of this Soma juice.



॥ ಸಂಹಿತಾಪಾಠಃ ॥

ಸೋಮಮಿಂದ್ರಾಬೃಹಸ್ಪತೀ ಪಿಬತಂ ದಾಶುಷೋ ಗೃಹೇ |
ಮಾದಯೇಥಾಂ ತದೋಕಸಾ ॥ ೬ ॥

॥ ಪದಪಾಠಃ ॥

ಸೋಮಂ | ಇಂದ್ರಾಬೃಹಸ್ಪತೀ ಇತಿ | ಪಿಬತಂ | ದಾಶುಷಃ | ಗೃಹೇ |
ಮಾದಯೇಥಾಂ | ತತ್‌ಽಓಕಸಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಬೃಹಸ್ಪತೀ ಯುವಾಂ ದಾಶುಷೋ ಹವಿರ್ದಾತುರ್ಯಜಮಾನಸ್ಯ ಗೃಹೇ ತದೋಕಸಾ | ತದೇವ ಯಜಮಾನಗೃಹಮೋಕೋ ನಿವಾಸಸ್ಥಾನಂ ಯಯೋಸ್ತೌ | ತಾದೃಶೌ ಸಂತೌ ಸೋಮಂ ಪಿಬತಂ | ಪೀತ್ವಾ ಚ ಮಾದಯೇಥಾಮಿತಿ ॥ ೨೫ ॥

॥ ಪ್ರತಿಪದಾರ್ಥ ॥

ಇಂದ್ರಾಬೃಹಸ್ಪತೀ—ಎಲೈ ಇಂದ್ರಾಬೃಹಸ್ಪತಿಗಳೇ | ದಾಶುಷಃ—ಹವಿರ್ದಾತನಾದ ಯಜಮಾನನ | ಗೃಹೇ—ಗೃಹದಲ್ಲಿ | ತದೋಕಸಾ—ಅದೇ ಗೃಹವನ್ನೇ ನಿಮ್ಮ ನಿವಾಸಸ್ಥಾನವನ್ನಾಗಿ ಮಾಡಿಕೊಂಡವರಾಗಿ | ಸೋಮಂ—ಸೋಮರಸವನ್ನು | ಪಿಬತಂ—ಪಾನಮಾಡಿರಿ | (ಮತ್ತು) ಮಾದಯೇಥಾಂ—ಹರ್ಷಪಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಬೃಹಸ್ಪತಿಗಳೇ, ಹವಿರ್ದಾತನಾದ ಯಜಮಾನನ ಗೃಹದಲ್ಲಿ, ನೀವು ಅದೇ ಗೃಹವನ್ನೇ ನಿಮ್ಮ ನಿಮ್ಮ ನಿವಾಸಸ್ಥಾನವನ್ನಾಗಿ ಮಾಡಿಕೊಂಡು ಅಲ್ಲಿ ಅರ್ಪಿತವಾದ ಸೋಮವನ್ನು ಪಾನಮಾಡಿರಿ ಮತ್ತು ತತ್ಫಲವಾದ ಹರ್ಷವನ್ನು ವ್ಯಕ್ತಪಡಿಸಿ.

**English Translation.**

Drink, Indra and Brihaspati, the Soma, in the dwelling of the donor, and be exhilarated in his abode.

# ಐವತ್ತನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತದ ೧-೯ ಋಕ್ಕುಗಳಲ್ಲಿ ಬೃಹಸ್ಪತಿಯನ್ನು ಸ್ತುತಿಸಲಾಗಿದೆ. ಬೃಹಸ್ಪತಿದೇವತಾ ವಿಷಯವಾಗಿ ಇಲ್ಲಿ ಸೂಕ್ಷ್ಮವಾಗಿ ವಿವರಣೆಯನ್ನು ಕೊಟ್ಟಿರುವೆವು.

ಯಾಸ್ಕರು ತಮ್ಮ ನಿರುಕ್ತದಲ್ಲಿ ಬೃಹಸ್ಪತಿಶಬ್ದದ ನಿರ್ವಚನವನ್ನು ವಿವರಿಸುತ್ತಾ—

ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ ।

(ನಿ. ೧೦-೧೧)

ಎಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು—ಬೃಹಸ್ಪತಿಃ ಕಸ್ಮಾತ್? "ಬೃಹತಃ ಪಾತಾ ವಾ ಪಾಲಯಿತಾ ವಾ" ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ, ಪಾಲಯಿತಾ ಅಪಿ ರಕ್ಷಿತೈವ ಧಾತ್ವನ್ಯತ್ವಮರ್ಥೈಕತ್ವಂ ॥ ಎಂದರೆ ದೊಡ್ಡದಾದ ಜಗತ್ತಿನ ಅಥವಾ ಉದಕದ ಸಂರಕ್ಷಕನು, ಕಾಪಾಡುವವನು. ಪತಿಶಬ್ದದ ಅರ್ಥವನ್ನು ಸೂಚಿಸುವುದಕ್ಕೆ ಪಾತಾ, ಪಾಲಯಿತಾ ಎಂಬ ಬೇರೆ ಬೇರೆ ಧಾತುಗಳಿಂದ ನಿಷ್ಪನ್ನವಾದ ಶಬ್ದಗಳಿದ್ದರೂ ಅರ್ಥವು ಮಾತ್ರ ಒಂದೇ ಆಗಿರುವುದೆಂದು ಹೇಳಿರುವರು. ಸಾಯಣರು ಅನೇಕ ಸಂದರ್ಭಗಳಲ್ಲಿ ಬೃಹತಃ ಪಾತಾ ಎಂಬುದನ್ನು ವಿವರಿಸುವಾಗ ಬೃಹತಃ ಎಂಬ ಶಬ್ದಕ್ಕೆ ಬೃಹತಃ ಯಜ್ಞಾಖ್ಯಕರ್ಮಣಃ ಅಥವಾ ವೃಷ್ಟ್ಯಾಖ್ಯಕರ್ಮಣಃ ಎಂದರೆ ಯಜ್ಞರೂಪವಾದ ಕರ್ಮದ ಅಥವಾ ವೃಷ್ಟಿಪ್ರದಾನ ರೂಪವಾದ ಕರ್ಮದ ಎಂದು ಅರ್ಥವನ್ನು ಹೇಳಿರುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಕರ್ಮವನ್ನು ನೆರವೇರಿಸುವುದರಿಂದಲೂ, ಮನುಷ್ಯರಿಗೆ ಅವಶ್ಯಕವಾದ ವೃಷ್ಟಿಯನ್ನುಂಟುಮಾಡುವುದರಿಂದಲೂ ಈ ಎರಡು ವಿಧವಾದ ವಿಶೇಷಣಗಳೂ ಸಹಜವಾಗಿರುವುವು. ಬೃಹಸ್ಪತಿಯ ಪುರೋಹಿತತ್ವವನ್ನೂ ವೃಷ್ಟಿಪ್ರದಾನ ವನ್ನೂ ವರ್ಣಿಸುವ,

ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ ।
ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥
(ಋ. ಸಂ. ೧೦-೯೮-೭)

ಎಂಬ ಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ನಿರ್ವಚನದಲ್ಲಿ ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್—ಎಂದರೆ ಬೃಹಸ್ಪತಿಯು ಶಂತನುವೆಂಬ ರಾಜನು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಪುರೋಹಿತನಾಗಿ ವಾಕ್ಯರೂಪವಾದ ಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರದಿಂದ ಯಜಮಾನನು ಸ್ತುತಿಸಲಾಗಿ ವೃಷ್ಟಿ ಉಂಟಾಯಿತೆಂದೂ ವರ್ಣಿತವಾಗಿದೆ. ಇದಲ್ಲದೆ ಯಜುರ್ವೇದಾದಿಗಳಲ್ಲಿ—

ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ ।
(ತೈ. ಸಂ. ೬-೪-೧೦-೧)

ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿದ್ದನು. ಶಂಡಾಮರ್ಕರೆಂಬುವರು ಅಸುರರಿಗೆ ಪುರೋಹಿತರಾಗಿದ್ದರು ಎಂದು ಹೇಳಿದೆ.

ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ ।
(ತೈ. ಸಂ. ೨-೨-೯-೧)

ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ।
(ಋ. ಸಂ. ೪-೫೦-೮)

ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥
(ಋ. ಸಂ. ೪-೫೦-೯)

ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ।
ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ॥
(ಋ. ಸಂ. ೧೦-೧೪೧-೩)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯು ಋತ್ವಿಜನು ಎಂದು ವರ್ಣನೆ ಇದೆ.

ಋಗ್ವೇದದಲ್ಲಿ ಬೃಹಸ್ಪತಿಗೆ ಪ್ರಾಮುಖ್ಯವಾದ ಸ್ಥಾನವೇ ಇದೆ. ಹನ್ನೊಂದು ಸೂಕ್ತಗಳಲ್ಲಿ ಸ್ತುತನಾಗಿರುವುದಲ್ಲದೆ ಎರಡು ಸೂಕ್ತಗಳಲ್ಲಿ (ಋ. ಸಂ. ೪-೪೯; ೭-೯೭) ಇಂದ್ರನ ಜತೆಯಲ್ಲಿ ದ್ವಂದ್ವದೇವತೆಯಾಗಿಯೂ ಸ್ತುತನಾಗಿದ್ದಾನೆ. ಬೃಹಸ್ಪತಿ ಶಬ್ದವು ಋಗ್ವೇದದಲ್ಲಿ ಸುಮಾರು ೧೨೦ ಸಲ ಪಠಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿದೇವತೆಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿ ಸ್ತುತರಾಗಿದಾರೆ ಆದರೂ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ದೇವತೆಗಳು.

ಕೆಲವು ಪಾಶ್ಚಾತ್ಯಪಂಡಿತರೂ, ಆಧುನಿಕ ವಿದ್ವಾಂಸರಲ್ಲಿ ಕೆಲವರೂ ಸಹ ಋ. ಸಂ. ೨-೨೩ ನೆಯ ಸೂಕ್ತದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಪರಸ್ಪರ ವಿನಿಮಯವಾಗಿ ಸ್ತುತಿಸಲ್ಪಟ್ಟಿರುವುದರಿಂದ ಇಬ್ಬರೂ ಒಂದೇ ದೇವತೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ ಯಾಸ್ಕರು, ಶೌನಕರು, ಸಾಯಣರು ಮೊದಲಾದ

ಪುರಾತನ ವೇದಭಾಷ್ಯಕಾರರು ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ಎಂದು ಸ್ಪಷ್ಟವಾಗಿ ಹೇಳಿರುವರು. ಮೇಲೆ ಹೇಳಿದ ಋ. ಸಂ. ೨-೨೩ ನೆಯ ಸೂಕ್ತದಲ್ಲಿರುವ ೧೯ ಋಕ್ಕುಗಳಲ್ಲಿ ೧, ೫, ೯, ೧೧, ೧೭, ೧೯ ಎಂಬ ೬ ಋಕ್ಕುಗಳು ಮಾತ್ರ ಬೃಹಸ್ಪತಿಯನ್ನು ಸ್ತುತಿಸುತ್ತವೆ. ಉಳಿದ ೧೩ ಋಕ್ಕುಗಳು ಬ್ರಹ್ಮಣಸ್ಪತಿಯ ಪರವಾಗಿವೆ. ಯಾಸ್ಕರೂ ಸಹ ಬೃಹಸ್ಪತಿಶಬ್ದಕ್ಕೂ ಬ್ರಹ್ಮಣಸ್ಪತಿಶಬ್ದಕ್ಕೂ ಬೇರೆ ಬೇರೆ ನಿರ್ವಚನವನ್ನು ಹೇಳಿದಾರೆ. ಆದುದರಿಂದ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ.

ಇತರ ದೇವತೆಗಳಿಗಿಂತ ತೀರಾ ಭಿನ್ನವಾದ ವೈಶಿಷ್ಟ್ಯವು ಬೃಹಸ್ಪತಿಗೆ ಇದೆ. ಇತರ ದೇವತೆಗಳೆಲ್ಲಾ ಪ್ರಕೃತಿ ಅಥವಾ ಪ್ರಕೃತಿ ಶಕ್ತಿಯ ರೂಪವಿಶೇಷಗಳಾದರೆ ಬೃಹಸ್ಪತಿಯು ಮಾನವನ ನೈತಿಕ ಮತ್ತು ಧಾರ್ಮಿಕ-ಜೀವನ ಕ್ಷೇತ್ರಕ್ಕೆ ಸಂಬಂಧಿಸಿದಂತಿದೆ. ಸ್ತುತಿ, ಸ್ತೋತ್ರ ಅಥವಾ ಪ್ರಾರ್ಥನೆಗೆ ರಕ್ಷಕನಾದ ಈ ದೇವತೆಯು ದೇವತೆಗಳ ಮನಸ್ಸಿನ ನಿರ್ಧಾರ, ಸಂಕಲ್ಪ ಅಥವಾ ಶಕ್ತಿಯ ಮೇಲೆ ತನ್ನ ಪ್ರಭಾವವನ್ನು ಬೀರುವನೆಂಬುದಕ್ಕೆ ಋಗ್ವೇದದಲ್ಲಿ ಅನೇಕ ಉದಾಹರಣೆಗಳಿವೆ. ಋಗ್ವೇದ ೧೦ ನೇ ಮಂಡಲದ ೯೮ ನೆಯ ಸೂಕ್ತದಲ್ಲಿ ದೇವಾಪಿ ಮತ್ತು ಶಂತನು ಎಂಬ ಕುರುವಂಶದ ರಾಜಪುತ್ರರ ವಿಷಯಕವಾದ ಒಂದು ಇತಿಹಾಸವರ್ಣನೆ ಇದೆ. ಅದರಲ್ಲಿ ಬೃಹಸ್ಪತಿಯ ಪಾತ್ರವು ಬಹು ಮುಖ್ಯವಾದುದೆಂಬುದನ್ನು ನಿರುಕ್ತಕಾರರು ಈ ರೀತಿ ವರ್ಣಿಸಿದ್ದಾರೆ.

> ಅತ್ರೇತಿಹಾಸಮಾಚಕ್ಷತೇ। ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ। ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ। ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥
>
> (ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜನಿಗೆ ದೇವಾಪಿ, ಶಂತನು ಎಂಬ ಇರ್ವರು ಪುತ್ರರಿದ್ದರು. ಅವರಲ್ಲಿ ದೇವಾಪಿಯೆಂಬುವನು ಹಿರಿಯನು; ಶಂತನು ಎಂಬುವನು ಕಿರಿಯನು. ಇವರ ತಂದೆಯಾದ ಋಷಿಷ್ಟೇಣನು ಮೃತನಾದ ಬಳಿಕ ಅವನ ಹಿರಿಯ ಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶ ಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇ ರಾಜ್ಯವಾಳಲು ಮೊದಲು ಮಾಡಿದನು. ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಓಡಿ ಹೋಗಿ ತಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರೆಗೆ ಮಳೆಯೇ ಬರದೆ ಮಹಾ ಕ್ಷಾಮವು ಪ್ರಾಪ್ತವಾಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನು ಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದರು. ಅದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು ಧರ್ಮಶಾಸ್ತ್ರಪ್ರಕಾರ ರಾಜನ ಹಿರಿಯ ಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶ ಕೊಡದೆ ಅವನನ್ನು ಓಡಿಸಿ

ರಾಜ್ಯವನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು. ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪ ಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸನ್ನು ಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞ ಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯವನ್ನು ವಹಿಸಿ ವೃಷ್ಟಿಯಾಗಲು ಸಹಾಯ ಮಾಡುವೆನೆಂದೂ ಹೇಳಿದನು. ಅದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಬೃಹಸ್ಪತಿಯು ಬ್ರಹ್ಮನೆಂದು ಋತ್ವಿಜನಾದನು. ವೃಷ್ಟಿವರ್ಷಣಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋತೃವಾದ ದೇವಾಪಿಯು ಬ್ರಹ್ಮನಾದ ಬೃಹಸ್ಪತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ ಮೇಲೆ ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿಸಬೇಕು. ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿವರ್ಷಣಕ್ಕೆ ಬೇಕಾದ ದೇವತೆಗಳ ಪ್ರಾರ್ಥನೆ ಗಳನ್ನೊಳಗೊಂಡ ಮಂತ್ರಗಳನ್ನು ಹೋತೃವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆ ಗಳನ್ನುದ್ದೇಶಿಸಿ ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿಕಾಮ ಸೂಕ್ತವೆಂದೂ ಹೆಸರು. ಈ ವಿಷಯವು ಕೆಲವು ವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭; ಮಹಾಭಾರತ ಆದಿಪರ್ವ; ಭಾಗವತಪುರಾಣ ೯-೨೨-೧೪ ರಿಂದ ೧೭; ಇತ್ಯಾದಿ ಪುರಾಣಗ್ರಂಥಗಳಲ್ಲಿಯೂ ಉಕ್ತವಾಗಿದೆ.

ಋ. ಸಂ. ೧೦ನೆಯ ಮಂಡಲದಲ್ಲಿ ೧೦೮ನೆಯ ಸೂಕ್ತದಲ್ಲಿ ಮತ್ತೊಂದು ಉಪಾಖ್ಯಾನವಿರುವುದು. ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು (ಉದಕವಿಶಿಷ್ಟಗಳಾದ ಮೇಘಗಳನ್ನು) ಅಪಹರಿಸಿ ಅಭೇದ್ಯವಾದ ಒಂದು ದುರ್ಗದಲ್ಲಿ ಬಚ್ಚಿಟ್ಟಿದ್ದರು. ಅದನ್ನು ಹುಡುಕುವಂತೆ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿ ದನು. ಆ ಸರಮೆಯು ಪಣಿಗಳಲ್ಲಿಗೆ ಬಂದು ಅವರೊಡನೆ ವಾಗ್ವಾದವನ್ನು ಬೆಳೆಸಿ ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ಕೊಡುವಂತೆ ಕೇಳಲು ಆ ಪಣಿಗಳು-ಇಂದ್ರನ ಶಕ್ತಿಯೆಷ್ಟರದು? ತಾವು ಮಹಾವೀರರು ಮತ್ತು ತಮ್ಮ ಆಯುಧಗಳು ತುಂಬಾ ಹರಿತವಾದವು. ಆದ್ದರಿಂದ ತಮ್ಮನ್ನು ಗೆಲ್ಲಲು ದೇವತೆಗಳಿಂದ ಸಾಧ್ಯವಿಲ್ಲವೆಂದೂ, ಗೋವುಗಳನ್ನು ಇಟ್ಟಿರುವ ಸ್ಥಳವನ್ನು ತಿಳಿಯಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ, ಆದುದರಿಂದ ಸರಮೆಯು ದೇವತೆಗಳ ಪಕ್ಷವನ್ನು ಬಿಟ್ಟು ತಮ್ಮ ಗುಂಪಿಗೇ ಸೇರಿದಲ್ಲಿ ಬೇಕಾದ ಐಶ್ವರ್ಯಾದಿಗಳನ್ನು ಕೊಡುವುವೆಂದೂ, ನಾನಾವಿಧವಾಗಿ ಪ್ರೇರಿಸಿದರೂ ಸರಮೆಯು ಅದಕ್ಕೊಪ್ಪದೆ ಅಲ್ಲಿಂದ ಹಿಂತಿರುಗಿ ಆ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದಳು. ಆಗ ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಪತ್ತೆಮಾಡಿದನು. ಬಳಿಕ ದೇವತೆಗಳು ಅವರನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದರು ಎಂಬ ಉಪಾಖ್ಯಾನವಿದೆ.

ಇಂತಹ ಅನೇಕ ಸಾಹಸಕಾರ್ಯಗಳಲ್ಲಿ ಬೃಹಸ್ಪತಿಯ ಪಾತ್ರವು ಬಹಳ ಮುಖ್ಯವಾಗಿದೆ. ಅದರಲ್ಲಿಯೂ ಮಾನವರಿಗೆ ವೃಷ್ಟಿಬೇಕಾದಲ್ಲಿ ಸಹಾಯಮಾಡಲು ಬೃಹಸ್ಪತಿಯ ಸಹಾಯವು ಆವಶ್ಯಕವಾಗಿದೆ. ಈ ವಿಧವಾದ ಪ್ರಾರ್ಥನೆಯೇ ಬೃಹಸ್ಪತಿದೇವತಾಕವಾದ ಸೂಕ್ತಗಳಲ್ಲಿ ವಿಶೇಷವಾಗಿ ಕಂಡುಬರುವುದು.

ಋಗ್ವೇದದಲ್ಲಿ ವರ್ಣಿಸಿರುವಂತೆ ಬೃಹಸ್ಪತಿಯ ಗುಣಗಳು, ಕಾರ್ಯಸಾಧನೆಗಳು ಯಾವ ರೀತಿ ಇವೆ ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಬೃಹಸ್ಪತಿಯು ದ್ಯಾವಾಪೃಥಿವಿಗಳಿಂದ ಜನಿಸಿದವನು ಮತ್ತು ಅವರ ಮಹತ್ವದಿಂದಲೇ ಅವನ ಪೋಷಣೆಯಾಗಿದೆ. (ಋ. ಸಂ. ೭–೯೭–೮) ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿ ಮಾಡಿದನೆಂದು ಒಂದು ಕಡೆ (೨–೨೩–೧೭) ಹೇಳಿದೆ. ಅವನಿಗೆ ದೇವತೆಗಳ ಜನಕನೆಂದು ಹೆಸರಿದೆ. (೨–೨೬–೩); ಕಮ್ಮಾರನ ಸುತ್ತಿಗೆಯ ಏಟಿನಿಂದ ಅಗ್ನಿಕಣಗಳು ಹಾರುವಂತೆ ದೇವತೆಗಳು ಇವನಿಂದ ಉತ್ಪನ್ನರಾದರು (೧೦-೭೨-೮) ಎಂದೂ ಹೇಳಿದೆ.

ಅವನಿಗೆ ಬ್ರಹ್ಮ (ಬ್ರಹ್ಮ ಎಂಬ ಋತ್ವಿಜ) ನೆಂದು ಹೆಸರಿದೆ. (೧೦–೧೪೧–೩) ಋತ್ವಿಜರೊಡನೆ ಇವನಿಗೆ ಸಂಬಂಧವಿದೆ (೭–೧೦–೪ ; ೧೦–೧೪–೩) ಆಂಗೀರಸನೆಂತಲೂ ಹೆಸರಿದೆ. (೪–೪೦–೧ : ೪–೭೩–೧; ೧೦–೪೭–೬) ಸ್ತುತಿವಾಕ್ಯಗಳನ್ನು ರಚಿಸುವವನು, ಉಚ್ಚರಿಸುವವನು, ಅವುಗಳಿಗೆ ಅಧಿಪತಿ, ಪ್ರೇರಕ (೨–೨೩–೧, ೨; ೧–೪೦–೫; ೧೦-೯೮-೭); ಮಂತ್ರದಿಂದಲೇ ತನ್ನ ಉದ್ದೇಶಗಳನ್ನೆಲ್ಲಾ ಸಾಧಿಸುತ್ತಾನೆ (೨–೨೪–೩); ಯಜ್ಞವೆಂಬ ದೇದೀಪ್ಯಮಾನವಾದ ರಥವನ್ನೇರಿಕೊಂಡು ದೇವತೆಗಳ ಮತ್ತು ಸ್ತೋತೃಗಳ ಶತ್ರುಗಳನ್ನು ಜಯಿಸಲು ಹೊರಡುತ್ತಾನೆ. (೨–೨೩–೩); ಇವನು ಶ್ರದ್ಧಾಳುಗಳ ಪೋಷಕ ಮತ್ತು ರಕ್ಷಕನು, ಅವರಿಗೆ ಮಾರ್ಗದರ್ಶಕನಾಗಿದಾನೆ; ಅವರನ್ನು ವಿಪತ್ತುಗಳಿಂದ ಪಾರುಮಾಡುತ್ತಾನೆ (೨–೨೩–೪). ಅವರಿಗೆ ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೨–೨೩–೯) ದೇವತೆಗಳಿಗೆಲ್ಲಾ ಪಿತೃವೆನಿಸಿಕೊಂಡಿದಾನೆ; ದಿವ್ಯವಾದ ಸಮಸ್ತ ಗುಣಗಳಿಂದ ಕೂಡಿದಾನೆ (೩–೬೨–೪; ೪–೫೦–೬) ವಿಶ್ವರೂಪನು; ಎಲ್ಲರೂ ಅಪೇಕ್ಷಿಸುವ ವಸ್ತುಗಳೆಲ್ಲವೂ ಇವನಲ್ಲಿವೆ (೭–೧೦–೪, ೭–೯೭–೪), ಸುವರ್ಣಮಯವಾದ ಈಟಿಯನ್ನು ಧರಿಸಿದಾನೆ (೭–೯೭–೭) ಇಂದ್ರನೊಡನೆ ಸೇರಿ ಇವನೂ ಸೈನ್ಯಗಳಿಗೆ ನಾಯಕನಾಗಿದಾನೆ (೧೦–೧೦೩–೮) ಆಯುಸ್ಸನ್ನು ವೃದ್ಧಿಮಾಡುವವನು (೧೦–೧೦೦–೫), ಸಸ್ಯಗಳು ಇವನಿಂದ ಉದ್ಭೂತವಾದವು, (೧೦–೯೭–೧೫ ಮತ್ತು ೧೯); ಕಪಿಲವರ್ಣದ ಅಶ್ವಗಳೇ ಅವನ ವಾಹನವೆಂದು ಹೇಳಿದೆ (ನಿ. ೨–೨೪).

ರಾಕ್ಷಸರಿಂದ ಭಾವಿಯಲ್ಲಿ ಎಸೆಯಲ್ಪಟ್ಟು, ಸಹಾಯಕ್ಕಾಗಿ ದೇವತೆಗಳನ್ನು ಕರೆಯುತ್ತಿದ್ದ ತ್ರಿತನ ಆರ್ತನಾದವನ್ನು ಕೇಳಿ, ಆ ಅಪಾಯಕರವಾದ ಅವಸ್ಥೆಯಿಂದ ಬೃಹಸ್ಪತಿಯು ಅವನನ್ನು ಬಿಡುಗಡೆಮಾಡಿದನೆಂದೂ (೧–೧೦೫–೧೭), ಇಂದ್ರನೊಡನೆ ಸೇರಿ ಬೃಹಸ್ಪತಿಯು ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನೆಂದೂ (೨–೨೩–೧೮ ; ೧–೫೬–೫) ಹೇಳಿದೆ.

ಮಧುಭರಿತವಾದ ಕೂಪದ ಶಿಲಾದ್ವಾರವನ್ನು ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು. ದೇವತೆಗಳು ಆ ಮಧುವನ್ನು ಪಾನಮಾಡಿ ಯಥೇಚ್ಛವಾಗಿ ಮಳೆಗರೆದರು. (೨–೨೪–೩, ೪); ಬೃಹಸ್ಪತಿಯು ಬೆಂಕಿ ಕಾರುತ್ತಿರುವ ಕಿರಣಗಳಿಂದ ವಲನ ದುರ್ಗಗಳನ್ನು ಭೇದಿಸಿದಾಗ ಗೋಸಮೂಹಗಳು ಗೋಚರವಾದವು; ಮೊಟ್ಟೆಯನ್ನು ಒಡೆಯುವಂತೆ ಗೋವುಗಳನ್ನು ಹೊರಕ್ಕೆ ಅಟ್ಟಿದನು; ಶಿಲೆಯಿಂದ ಆವೃತವಾದ (ನೀರು) ಮಧುವನ್ನು ಕಂಡು ತನ್ನ ಸಿಂಹನಾದದಿಂದಲೇ ಸೀಳಿ ಅದನ್ನು ಹೊರಕ್ಕೆ ಬರಮಾಡಿದನು (೧೦–೬೮–೪ರಿಂದ ೯) ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಹೊರಕ್ಕೆ ತಂದನು; ವಲನ ಗೋವುಗಳನ್ನು ಹಿಡಿದು ತನ್ನ ವಶಪಡಿಸಿಕೊಂಡನು (೧೦–೬೮–೮).

ಬೃಹಸ್ಪತಿಯು ದೇವತ್ವವಿಶಿಷ್ಟನು (೨-೨೩-೨); ಎಲ್ಲಾ ದೇವತೆಗಳಿಗೂ ಸ್ವಕೀಯನು (೩-೬೨-೪; ೪-೫೦-೬); ಮತ್ತು ದೇವತೆಗಳಲ್ಲೆಲ್ಲಾ ಹೆಚ್ಚು ದೇವತ್ವವುಳ್ಳವನು; ದೇವತೆಯ ರೂಪದಿಂದ ಎಲ್ಲಾ ದೇವತೆಗಳನ್ನೂ ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ (೨-೨೪-೧೧; ೮-೬೧-೧೮). ಭೂಮಿಯ ಎರಡು ಕೊನೆಗಳನ್ನು ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ. (೪-೫೦-೧): ಸೂರ್ಯಚಂದ್ರರು ಒಬ್ಬರಾದ ಮೇಲೊಬ್ಬರು ಉದಯಿಸುವುದೂ ಅವನ ಅನುಕರಣೀಯವಾದ ಕೃತ್ಯವೇ ಆಗಿದೆ (೧೦-೬೮-೧೦). ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ. ಬೃಹಸ್ಪತಿಯು ಪುಷ್ಯ ನಕ್ಷತ್ರದ ದೇವತೆ (ತೈ. ಸಂ ೪-೪-೧೦-೧); ಪುರಾಣಾದಿಗಳಲ್ಲಿ ಬೃಹಸ್ಪತಿಯನ್ನು ವಾಚಸ್ಪತಿಯೆಂದೂ ಬೃಹಸ್ಪತಿ ಗ್ರಹಾಭಿಮಾನಿದೇವತೆಯೆಂದೂ ವರ್ಣಿಸಿದೆ.

॥ ಸಾಯಣಭಾಷ್ಯಂ ॥

**ಯಸ್ತಸ್ತಂಭೇತ್ಯೇಕಾದಶರ್ಚಂ ಪಂಚಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಂ। ದಶಮೀ ಜಗತೀ। ದಶಮ್ಯೇಕಾದಶ್ಯಾವಿಂದ್ರಾಬೃಹಸ್ಪತಿದೇವತಾಕೇ ಶಿಷ್ಟಾ ನವ ಬಾರ್ಹಸ್ಪತ್ಯಃ। ಅತ್ರಾನುಕ್ರಮಣಿಕಾ। ಯಸ್ತಸ್ತಂಭೈಕಾದಶ ಬಾರ್ಹಸ್ಪತ್ಯಮಂತ್ಯೇ ಐಂದ್ರ್ಯೌ ಚೋಪಾಂತ್ಯಾ ಜಗತೀ॥ ಆಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿನಃ ಸ್ತೋಮವೃದ್ಧಾವಿದಂ ಸೂಕ್ತಮಾವಾಪಾರ್ಥಂ। ತಥಾ ಚ ಸೂತ್ರಂ। ಯಸ್ತಸ್ತಂಭ ಯೋ ಅದ್ರಿಭಿತ್। ಆ. ೭-೯। ಇತಿ॥ ಆದ್ಯೇ ಬೃಹಸ್ಪತಿಸವನೇ ಮರುತ್ವತೀಯನಿಷ್ಕೇವಲ್ಯಯೋಃ ಸೂಕ್ತಮುಖೀಯೇ। ಸೂತ್ರಿತಂ ಚ। ಯಸ್ತಸ್ತಂಭ ಧುನೇತಯ ಇತಿ ಸೂಕ್ತಮುಖೀಯೇ। ಆ. ೯-೫। ಇತಿ॥**

ಅನುವಾದವು—**ಯಸ್ತಸ್ತಂಭ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಈ ಸೂಕ್ತದ ಹತ್ತು ಮತ್ತು ಹನ್ನೊಂದನೆಯ ಋಕ್ಕುಗಳು ಇಂದ್ರಾಬೃಹಸ್ಪತಿದೇವತಾಕವು. ಉಳಿದ ಒಂಭತ್ತು ಋಕ್ಕುಗಳು ಬೃಹಸ್ಪತಿದೇವತಾಕವು; ಹತ್ತನೆಯ ಋಕ್ಕು ಜಗತೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಯಸ್ತಸ್ತಂಭೈಕಾದಶ ಬಾರ್ಹಸ್ಪತ್ಯಮಂತ್ಯೇ ಐಂದ್ರ್ಯೌ ಚೋಪಾಂತ್ಯಾ ಜಗತೀ** ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗದಲ್ಲಿ ತೃತೀಯಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಸ್ತೋಮವೃದ್ಧಿಗಾಗಿ ಪಠಿಸುವ ಸೂಕ್ತಗಳಲ್ಲಿ ಈ ಸೂಕ್ತವನ್ನು ಆವಾಪಾರ್ಥವಾಗಿ (ಹೆಚ್ಚಿಸುವುದಕ್ಕಾಗಿ) ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಸ್ತಸ್ತಂಭ ಯೋ ಅದ್ರಿಭಿತ್** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು. ಮತ್ತು ಈ ಸೂಕ್ತದ ಮೊದಲನೆಯ ಎರಡು ಋಕ್ಕುಗಳನ್ನು ಬೃಹಸ್ಪತಿಸವನನೆಂಬ ಯಾಗದಲ್ಲಿ ಪಠಿಸುವ ಮರುತ್ವತೀಯ ನಿಷ್ಕೇವಲ್ಯಶಸ್ತ್ರಮಂತ್ರಗಳ ಪ್ರಾರಂಭದಲ್ಲಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಸ್ತಸ್ತಂಭ ಧುನೇತಯ ಇತಿ ಸೂಕ್ತಮುಖೀಯೇ** ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

## ಸೂಕ್ತ—೫೦

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೦ ॥

ಅಷ್ಟಕ—೩ ॥ ಅಧ್ಯಾಯ—೭ ॥ ವರ್ಗ—೨೬, ೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ವಾಮದೇವಃ ॥

॥ ದೇವತಾ—೧-೯, ಬೃಹಸ್ಪತಿಃ । ೧೦-೧೧. ಇಂದ್ರಾಬೃಹಸ್ಪತೀ ॥

॥ ಛಂದಃ—೧-೯, ೧೧. ತ್ರಿಷ್ಟುಪ್ । ೧೦. ಜಗತೀ ॥

॥ ಸಂಹಿತಾಪಾಠಃ ॥

ಯಸ್ತಸ್ತಂಭ ಸಹಸಾ ವಿ ಜ್ಮೋ ಅಂತಾನ್ಬೃಹಸ್ಪತಿಸ್ತ್ರಿಷಧಸ್ಥೋ ರವೇಣ ।
ತಂ ಪ್ರತ್ನಾಸ ಋಷಯೋ ದೀಧ್ಯಾನಾಃ ಪುರೋ ವಿಪ್ರಾ ದಧಿರೇ ಮಂದ್ರಜಿಹ್ವಂ ॥ ೧ ॥

॥ ಪದಪಾಠಃ ॥

ಯಃ । ತಸ್ತಂಭ । ಸಹಸಾ । ವಿ । ಜ್ಮಃ । ಅಂತಾನ್ । ಬೃಹಸ್ಪತಿಃ । ತ್ರಿಽಸಧಸ್ಥಃ । ರವೇಣ ।
ತಂ । ಪ್ರತ್ನಾಸಃ । ಋಷಯಃ । ದೀಧ್ಯಾನಾಃ । ಪುರಃ । ವಿಪ್ರಾಃ । ದಧಿರೇ । ಮಂದ್ರಽಜಿಹ್ವಂ ॥ ೧ ॥

॥ ಸಾಯಣಭಾಷ್ಯಂ ॥

ಯೋ ಬೃಹಸ್ಪತಿರ್ಬೃಹತೋ ದೇವಸ್ಯೈ ಯಜ್ಞಸ್ಯ ವಾ ಪಾಲಯಿತಾ ದೇವಃ ಸಹಸಾ ಬಲೇನ ಜ್ಮಃ ಪೃಥಿವ್ಯಾ ಅಂತಾನ್ । ದಶ ದಿಶ ಇತ್ಯರ್ಥಃ । ತಾನ್ವಿ ತಸ್ತಂಭ । ವಿವಿಧಂ ಸ್ತಂಭಿತವಾನ್ । ನಿಯಮಿತವಾನ್ । ತ್ರಿಷಧಸ್ಥಸ್ತ್ರಿಷು ಸ್ಥಾನೇಷು ವರ್ತಮಾನೋ ರವೇಣೈವಂ ತಿಷ್ಠತೇತ್ಯನೇನ ಶಬ್ದೇನ ತಂ ದೇವಂ ಪ್ರತ್ನಾಸಃ ಪುರಾಣಾ ಋಷಯೋಽತೀಂದ್ರಿಯದ್ರಷ್ಟಾರೋ ದೀಧ್ಯಾನಾ ದೀಪ್ಯಮಾನಾ ವಿಪ್ರಾ ಮೇಧಾವಿನೋ ಯಜಮಾನಾದಯಃ ಪುರೋ ದಧಿರೇ । ಪುರಸ್ತಾತ್ಸ್ಥಾಪಿತವಂತಃ ಸ್ತುತ್ಯಾದಿನಾ । ಮಂದ್ರಜಿಹ್ವಂ ಮಾದನಜಿಹ್ವಂ ಮೋದನಜಿಹ್ವಂ ॥

॥ ಪ್ರತಿಪದಾರ್ಥ ॥

ಯಃ—ಯಾವ । ಬೃಹಸ್ಪತಿಃ—ಬೃಹಸ್ಪತಿಯು । ಸಹಸಾ—ತನ್ನ ಬಲದಿಂದ । ಜ್ಮಃ—ಪೃಥಿವಿಯ । ಅಂತಾನ್—ಕೊನೆಗಳನ್ನು (ಹತ್ತು ದಿಕ್ಕುಗಳನ್ನೂ) । ವಿ ತಸ್ತಂಭ—ವಿಶೇಷರೀತಿಯಿಂದ ನಿಯಮಿಸಿ ನಿಲ್ಲಿಸಿದನೋ (ಮತ್ತು) । ರವೇಣ—ತನ್ನ ವಿಶೇಷರೀತಿಯ ಶಬ್ದದಿಂದ । ತ್ರಿಷಧಸ್ಥಃ—ಮೂರು ಲೋಕಗಳಲ್ಲೂ ವ್ಯಾಪಿಸಿದ್ದಾನೋ । ತಂ—ಅಂತಹ । ಮಂದ್ರಜಿಹ್ವಂ—ಸಂತೋಷಕಾರಕವಾದ ಜಿಹ್ವೆಯುಳ್ಳ

ಬೃಹಸ್ಪತಿಯನ್ನು । ಪ್ರತ್ನಾಸಃ—ಪುರಾತನರೂ । ದೀಧ್ಯಾನಾಃ—ಪ್ರಕಾಶಮಾನರೂ । ವಿಪ್ರಾಃ—ಮೇಧಾವಿಗಳೂ ಆದ । ಋಷಯಃ—ಋಷಿಗಳು । ಪುರಃ—ತಮ್ಮ ಮುಂದುಗಡೆ । ದಧಿರೇ—(ಸ್ತುತಿಗಳಿಂದ) ಸ್ಥಾಪಿಸಿದ್ದಾರೆ.

॥ ಭಾವಾರ್ಥ ॥

ತನ್ನ ಸ್ವಶಕ್ತಿಯಿಂದ ಪೃಥಿವಿಯ ಅಂತಗಳನ್ನು ಎಂದರೆ ಹತ್ತು ದಿಕ್ಕುಗಳನ್ನೂ ವಿಶೇಷರೀತಿಯಿಂದ ನಿಯಮಿಸಿ ನಿಲ್ಲಿಸಿದವನೂ, ತನ್ನ ವಿಶೇಷರೀತಿಯ ಶಬ್ದದಿಂದ ಮೂರು ಲೋಕಗಳಲ್ಲೂ ವ್ಯಾಪಿಸಿದವನೂ, ಸಂತೋಷಕಾರಕವಾದ ಜಿಹ್ವೆಯುಳ್ಳವನೂ ಆದ ಬೃಹಸ್ಪತಿಯನ್ನು ಪುರಾತನರೂ, ಪ್ರಕಾಶಮಾನರೂ, ಮೇಧಾವಿಗಳೂ ಆದ ಋಷಿಗಳು ತಮ್ಮ ಸ್ತುತಿಗಳಿಂದ ತಮ್ಮೆದುರಿಗೆ ಸ್ಥಾಪಿಸಿದ್ದಾರೆ.

## English Translation.

The ancient sages, illustrious, intelligent, have placed before (them) the pleasing-tongued Brihaspati, who propped up by (his) strength the ends of the earth, and who adides with noise in the three regions.



॥ ಸಂಹಿತಾಪಾಠಃ ॥

ಧುನೇತಯಃ ಸುಪ್ರಕೇತಂ ಮದಂತೋ ಬೃಹಸ್ಪತೇ ಅಭಿ ಯೇ ನಸ್ತತಸ್ರೇ ।
ಪೃಷಂತಂ ಸೃಪ್ರಮದಬ್ಧಮೂರ್ವಂ ಬೃಹಸ್ಪತೇ ರಕ್ಷತಾದಸ್ಯ ಯೋನಿಂ ॥ ೨ ॥

॥ ಪದಪಾಠಃ ॥

ಧುನಽಇತಯಃ । ಸುಽಪ್ರಕೇತಂ । ಮದಂತಃ । ಬೃಹಸ್ಪತೇ । ಅಭಿ । ಯೇ । ನಃ । ತತಸ್ರೇ ।
ಪೃಷಂತಂ । ಸೃಪ್ರಂ । ಅದಬ್ಧಂ । ಊರ್ವಂ । ಬೃಹಸ್ಪತೇ । ರಕ್ಷತಾತ್ । ಅಸ್ಯ । ಯೋನಿಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಬೃಹಸ್ಪತೇ ಧುನೇತಯಃ । ಧುನಾ ಶತ್ರೂಣಾಂ ಕಂಪಯಿತ್ರೀರ್ಗತಿರ್ಯೇಷಾಂ ತೇ । ತಾದೃಶಾಃ ಸುಪ್ರಕೇತಂ ಶೋಭನಪ್ರಜ್ಞಂ ತ್ವಾಂ ಮದಂತೋ ಮಾದಯಂತೋ ನೋಽಸ್ಮತ್ಸಂಬಂಧಿನೋ ಯ ಋತ್ವಿಜೋಽಭಿ ತತಸ್ರೇ ಆತ್ಮಾನಮುಪಕ್ಷಿಪಂತಿ ಸ್ತುವಂತಿ ವಾ ಅಸ್ಯೈಷಾಂ ಯೋನಿಂ ಕಾರಣಂ ಯಜ್ಞಂ ಯಜಮಾನಂ ವಾ ಮಾಂ ರಕ್ಷತಾತ್ । ರಕ್ಷ । ಯೋನಿರ್ವಿಶೇಷ್ಯತೇ । ಪೃಷಂತಂ ಫಲಾನಿ ಸಿಂಚಂತಂ ಸೃಪ್ರಂ ಸರ್ಪಣಸ್ವಭಾವಮದಬ್ಧಮಹಿಂಸಿತಮೂರ್ವಮುರುಂ ॥

॥ ಪ್ರತಿಪದಾರ್ಥ ॥

ಬೃಹಸ್ಪತೇ—ಎಲೈ ಬೃಹಸ್ಪತಿಯೇ | ಧುನೇತಯಃ—ಶತ್ರುವಿಗೆ ಭಯವನ್ನುಂಟುಮಾಡುವವರೂ | ಸುಪ್ರಕೇತಂ—ಶ್ರೇಷ್ಠಪ್ರಜ್ಞನಾದ ನಿನ್ನನ್ನು | ಮದಂತಃ— ಹರ್ಷಪಡಿಸುವವರೂ ಆದ | ಯೇ—ಯಾವ ಋತ್ವಿಕ್ಕುಗಳು | ನಃ—ನಮಗಾಗಿ | ಅಭಿ ತತಸ್ರೇ—ನಿನ್ನನ್ನು ಅಪಾರವಾಗಿ ಸ್ತುತಿಸಿದರೋ ಅಂತಹ ಋತ್ವಿಕ್ಕುಗಳ (ಅಥವಾ ಯಜಮಾನರ) | ಪೃಷಂತಂ—ಫಲಪ್ರದವಾದುದೂ | ಸೃಪ್ರಂ—ಮುಂದುವರಿಯುವ ಸ್ವರೂಪವುಳ್ಳದ್ದೂ | ಅದಬ್ಧಂ—ಅಹಿಂಸಿತವಾದುದೂ | ಊರ್ವಂ—ವಿಸ್ತೃತವಾದುದೂ ಆದ | ಅಸ್ಯ ಯೋನಿಂ—ಈ ಯಜ್ಞವನ್ನು ರಕ್ಷತಾತ್—ಕಾಪಾಡು.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ಶತ್ರುಭೀಕರರೂ, ಶ್ರೇಷ್ಠಪ್ರಜ್ಞನಾದ ನಿನ್ನನ್ನು ಪಚರಿಸಿ ನಿನಗೆ ಸಂತೋಷವನ್ನುಂಟು ಮಾಡುವವರೂ ಆದ ಯಾವ ಋತ್ವಿಕ್ಕುಗಳು ನಮಗಾಗಿ ನಿನ್ನನ್ನು ಅಪಾರವಾಗಿ ಸ್ತುತಿಸಿದರೋ ಅಂತಹ ಋತ್ವಿಕ್ಕು ಗಳಿಂದ ನೆರವೇರಲ್ಪಟ್ಟ ಫಲಪ್ರದವಾದುದೂ, ನಿರ್ವಿಘ್ನವಾಗಿ ಮುಂದುವರೆಯುವ ಸ್ವರೂಪವುಳ್ಳದ್ದೂ, ಅಹಿಂಸಿತ ವಾದುದೂ, ವಿಸ್ತೃತವಾದುದೂ ಆದ ಈ ಯಜ್ಞವನ್ನು ಕಾಪಾಡು.

## English Translation.

Brihaspathi, protect the fruit-yielding, progressive, uninjured, ample sacrifice of this (your worshipper, at which) they who are the terrifiers, (of foes), the delighters of you who are possessed of great wisdom, glorify (you) in our behalf.



॥ ಸಂಹಿತಾಪಾಠಃ ॥

ಬೃಹಸ್ಪತೇ ಯಾ ಪರಮಾ ಪರಾವದತ ಆ ತ ಋತಸ್ಪೃಶೋ ನಿ ಷೇದುಃ ।
ತುಭ್ಯಂ ಖಾತಾ ಅವತಾ ಅದ್ರಿದುಗ್ಧಾ ಮಧ್ವಃ ಶ್ಚೋತಂತ್ಯಭಿತೋ ವಿರಪ್ಶಂ ॥

॥ ಪದಪಾಠಃ ॥

ಬೃಹಸ್ಪತೇ । ಯಾ । ಪರಮಾ । ಪರಾವತ್ । ಅತಃ । ಆ । ತೇ । ಋತಽಸ್ಪೃಶಃ । ನಿ । ಸೇದುಃ ।
ತುಭ್ಯಂ । ಖಾತಾಃ । ಅವತಾಃ । ಅದ್ರಿಽದುಗ್ಧಾಃ । ಮಧ್ವಃ । ಶ್ಚೋತಂತಿ । ಅಭಿತಃ । ವಿಽರಪ್ಶಂ ॥ ೩ ॥

॥ ಸಾಯಣಭಾಷ್ಯಂ ॥

ಬೃಹಸ್ಪತೇ ಯೇತ್ಯಾದಿಕೇ ದ್ವೇ ಬಾರ್ಹಸ್ಪತ್ಯೇ ಪಶೌ ವಪಾಪುರೋಡಾಶಯೋರನುವಾಕ್ಯೇ । ಬೃಹಸ್ಪತೇ ಯಾ ಪರಮಾ ಪರಾವದಿತಿ ದ್ವೇ । ಆ. ೩-೭ । ಇತಿ ಹಿ ಸೂತ್ರಿತಂ ॥

ಹೇ ಬೃಹಸ್ಪತೇ ಯಾ ಪ್ರಸಿದ್ಧಾ ಪರಮೋತ್ಕೃಷ್ಟಾ ಪರಾವದತ್ಯಂತಂ ದೂರಭೂತಾ ವಸತಿಃ ಸ್ವರ್ಗಾಖ್ಯಾಸ್ತಿ । ಯದ್ವಾ ಲಿಂಗವ್ಯತ್ಯಯಃ । ಪರಮಂ ಸ್ಥಾನಮಸ್ತಿ । ಅತೋಽಸ್ಮಾದ್ದೇಶಾದಾ । ಆ ಇತ್ಯರ್ವಾಗರ್ಥೇ । ಅಧಸ್ತಾತ್ತೇ ತವ ಸಂಬಂಧಿನ ಋತಸ್ಪೃಶೋ ಯಜ್ಞಂ ಸ್ಪೃಶಂತೋಽಶ್ವಾ ನಿ ಷೇದುಃ । ನಿಷಣ್ಣಾ ಭವಂತಿ । ತುಭ್ಯಂ ಖಾತಾ ಅವತಾಃ । ಲುಪ್ತೋಪಮೈಷಾ । ಯಥಾ ಖಾತಾಃ ಕೂಪಾ ಅಭಿತಃ ಶ್ಚೋತಂತಿ ತದ್ವದದ್ರಿದುಗ್ಧಾ ಗ್ರಾವಭಿರಭಿಷುತಾಃ ಸೋಮಾ ವಿರಪ್ಶಂ ವಿಶೇಷೇಣ ಶಬ್ದೇನ ಸ್ತೋತ್ರಂ ಯಥಾ ಭವತಿ ತಥಾ ಮಧ್ವೋ ಮಧುರರಸಂ ಶ್ಚೋತಂತಿ । ಸ್ರವಂತಿ ॥

॥ ಪ್ರತಿಪದಾರ್ಥ ॥

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಯಾ—ಯಾವ ಪ್ರಸಿದ್ಧವಾದುದೂ । ಪರಮಾ—ಅತ್ಯುತ್ಕೃಷ್ಟವಾದುದೂ । ಪರಾವತ್—ದೂರಸ್ಥಿತವಾದುದೂ ಆದ ಸ್ವರ್ಗರೂಪವಾದ ವಸತಿಯಿದೆಯೋ । ಅತ ಆ—ಅಲ್ಲಿಂದ ಇಳಿದು ಬಂದಿರುವುವೂ । ಋತಸ್ಪೃಶಃ—ಯಜ್ಞವನ್ನು ಸ್ಪರ್ಶಿಸುವುವೂ ಆದ । ತೇ—ನಿನ್ನ ಅಶ್ವಗಳು । ನಿ ಷೇದುಃ—(ಯಜ್ಞಸ್ಥಾನದಲ್ಲಿ ಬಂದು) ಕುಳಿತಿವೆ । ಖಾತಾಃ—ಅಗೆಯಲ್ಪಟ್ಟ । ಅವತಾಃ—ಭಾವಿಗಳಂತೆ । ತುಭ್ಯಂ—ನಿನಗಾಗಿ । ಅದ್ರಿದುಗ್ಧಾಃ—ಹಿಂಡುವ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟ । ಮಧ್ವಃ—ಸೋಮರಸಗಳು ಅಭಿತಃ—ಸುತ್ತಲೂ । ವಿರಪ್ಶಂ—ನಾನಾವಿಧವಾಗಿ ಸ್ತುತ್ಯಾತ್ಮಕವಾದ ಶಬ್ದವನ್ನು ಮಾಡಿಕೊಂಡು । ಶ್ಚೋತಂತಿ—ಪ್ರವಹಿಸುತ್ತವೆ.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ಯಾವ ಪ್ರಸಿದ್ಧವಾದುದೂ, ಅತುತ್ಕೃಷ್ಟವಾದುದೂ, ದೂರಸ್ಥಿತವಾದುದೂ ಆದ ಸ್ವರ್ಗಾಖ್ಯವಾದ ವಸತಿಯಿದೆಯೋ ಅಲ್ಲಿಂದ ಇಳಿದು ಬಂದಿರುವುವೂ ಯಜ್ಞವನ್ನು ಸ್ಪರ್ಶಿಸುವುವೂ ಆದ ನಿನ್ನ ಅಶ್ವಗಳು ಯಜ್ಞಸ್ಥಾನದಲ್ಲಿ ಬಂದು ಕುಳಿತಿವೆ. ಹೊಸದಾಗಿ ಅಗೆದ ಭಾವಿಯಿಂದ ಬುಗ್ಗೆಯ ರೂಪದಲ್ಲಿ ಉದಕವು ಪ್ರವಹಿಸುವಂತೆ, ನಿನಗಾಗಿ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟ ಸೋಮರಸಗಳು ಸುತ್ತಲೂ ನಾನಾವಿಧವಾಗಿ ಸ್ತುತ್ಯಾತ್ಮಕವಾದ ಶಬ್ದವನ್ನು ಮಾಡಿಕೊಂಡು ಪ್ರವಹಿಸುತ್ತವೆ.

## English Translation.

Those (steeds), Brihaspati, which had come from that distant (region), the best (of all), have sat down in connection with the ceremony, and to you the Some juices expressed by the stones flow copiously, (accompanied) by the sounds of praise, like deep wells that supply water.

॥ ವಿಶೇಷವಿಷಯಗಳು ॥

ಬೃಹಸ್ಪತೇ ಯೊ ಎಂಬ ಈ ಋಕ್ಕನ್ನೂ, ಇದರ ಮುಂದಿನ ಋಕ್ಕನ್ನೂ ಬೃಹಸ್ಪತಿಸಂಬಂಧವಾದ ಪಶುಯಾಗದಲ್ಲಿ ವಪಾ ಮತ್ತು ಪುರೋಡಾಶಗಳನ್ನು ಹೋಮಮಾಡುವಾಗ ಅನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಬೃಹಸ್ಪತೇ ಯೊ ಪರಮಾ ಪರಾವದಿತಿ ದ್ವೇ ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.



॥ ಸಂಹಿತಾಪಾಠಃ ॥

ಬೃಹಸ್ಪತಿಃ ಪ್ರಥಮಂ ಜಾಯಮಾನೋ ಮಹೋ ಜ್ಯೋತಿಷಃ ಪರಮೇ ವ್ಯೋಮನ್ ।
ಸಪ್ತಾಸ್ಯಸ್ತುವಿಜಾತೋ ರವೇಣ ವಿ ಸಪ್ತರಶ್ಮಿರಧಮತ್ತಮಾಂಸಿ ॥ ೪ ॥

॥ ಪದಪಾಠಃ ॥

ಬೃಹಸ್ಪತಿಃ । ಪ್ರಥಮಂ । ಜಾಯಮಾನಃ । ಮಹಃ । ಜ್ಯೋತಿಷಃ । ಪರಮೇ । ವಿಽಓಮನ್ ।
ಸಪ್ತಽಆಸ್ಯಃ । ತುವಿಽಜಾತಃ । ರವೇಣ । ವಿ । ಸಪ್ತಽರಶ್ಮಿಃ । ಅಧಮತ್ । ತಮಾಂಸಿ ॥ ೪ ॥

॥ ಸಾಯಣಭಾಷ್ಯಂ ॥

ಅಯಂ ಬೃಹಸ್ಪತಿರ್ಮಂತ್ರಾಭಿಮಾನೀ ದೇವೋ ಮಹೋ ಮಹತೋ ಜ್ಯೋತಿಷೋ ದೀಪ್ತಸ್ಯಾದಿತ್ಯಸ್ಯ ಪರಮೇ ನಿರತಿಶಯೇ ವ್ಯೋಮನ್ ವ್ಯೋಮನಿ ಪ್ರಥಮಂ ಜಾಯಮಾನಃ ಪ್ರಾದುರ್ಭವನ್ ಸಪ್ತಾಸ್ಯಃ ಸಪ್ತಚ್ಛಂದೋಮಯಮುಖಸ್ತುವಿಜಾತೋ ಬಹುಪ್ರಕಾರಂ ಸಂಭೂತೋ ರವೇಣ ಶಬ್ದೇನ ಸಪ್ತರಶ್ಮಿಃ ಸರ್ಪಣಸ್ವಭಾವತೇಜೋಯುಕ್ತಸ್ತಮಾಂಸಿ ವ್ಯಧಮತ್ । ಧಮತಿರ್ಗತಿಕರ್ಮೇತಿ ನಿರುಕ್ತಂ । ೬-೨ । ವಿವಿಧಂ ಗಚ್ಛತಿ । ನಾಶಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಬೃಹಸ್ಪತಿಃ—ಬೃಹಸ್ಪತಿಯು । ಮಹಃ—ಮಹತ್ತಾದುದೂ । ಜ್ಯೋತಿಷಃ—ಪ್ರಕಾಶಾತ್ಮಕವಾದುದೂ ಆದ ಆದಿತ್ಯನ । ಪರಮೇ—ಉತ್ಕೃಷ್ಟವಾದ । ವ್ಯೋಮನ್—ಅಂತರಿಕ್ಷದಲ್ಲಿ । ಪ್ರಥಮಂ—ಮೊದಲು । ಜಾಯಮಾನಃ—ಉತ್ಪನ್ನನಾಗಿ । ಸಪ್ತಾಸ್ಯಃ—ಸಪ್ತಚ್ಛಂದೋರೂಪವಾದ ಮುಖವುಳ್ಳವನಾಗಿಯೂ । ತುವಿಜಾತಃ—ಅನೇಕ ಪ್ರಕಾರದಲ್ಲಿ ಉತ್ಪನ್ನನಾಗಿಯೂ । ರವೇಣ—ಶಬ್ದಮಿಶ್ರಿತನಾಗಿಯೂ । ಸಪ್ತರಶ್ಮಿಃ—ಸಪ್ತರಶ್ಮಿಯುಕ್ತನಾಗಿಯೂ ಇದ್ದು । ತಮಾಂಸಿ—ಕಗ್ಗತ್ತಲೆಗಳನ್ನು । ವ್ಯಧಮತ್—ನಾಶಪಡಿಸಿದನು.

॥ ಭಾವಾರ್ಥ ॥

ಬೃಹಸ್ಪತಿಯು, ಮಹತ್ತಾದುದೂ, ಪ್ರಕಾಶಾತ್ಮಕವಾದುದೂ ಆದ ಆದಿತ್ಯನ ಉತ್ಕೃಷ್ಟವಾದ ಅಂತರಿಕ್ಷದಲ್ಲಿ ಮೊದಲು ಉತ್ಪನ್ನನಾಗಿ, ಸಪ್ತಚ್ಛಂದೋರೂಪವಾದ ಮುಖವುಳ್ಳವನಾಗಿಯೂ, ಅನೇಕಪ್ರಕಾರದಲ್ಲಿ ಉತ್ಪನ್ನನಾಗಿಯೂ, ಶಬ್ದಮಿತ್ರನಾಗಿಯೂ, ಸಪ್ತರಶ್ಮಿಯುಕ್ತನಾಗಿಯೂ ಇದ್ದು ಕಗ್ಗತ್ತಲೆಗಳನ್ನು ನಾಶಪಡಿಸಿದನು.

## English Translation.

Brihaspati, when first being born in the highest heaven of supreme light, seven-mouthed, multiform, (comdined) with sound, and seven-rayed, has subdued the darkness.



॥ ಸಂಹಿತಾಪಾಠಃ ॥

ಸ ಸುಷ್ಟುಭಾ ಸ ಋಕ್ವತಾ ಗಣೇನ ವಲಂ ರುರೋಜ ಫಲಿಗಂ ರವೇಣ ।
ಬೃಹಸ್ಪತಿರುಸ್ರಿಯಾ ಹವ್ಯಸೂದಃ ಕನಿಕ್ರದದ್ವಾವಶತೀರುದಾಜತ್ ॥ ೫॥

॥ ಪದಪಾಠಃ ॥

ಸಃ । ಸುऽಸ್ತುಭಾ । ಸಃ । ಋಕ್ವತಾ । ಗಣೇನ । ವಲಂ । ರುರೋಜ । ಫಲಿऽಗಂ । ರವೇಣ ।
ಬೃಹಸ್ಪತಿಃ । ಉಸ್ರಿಯಾಃ । ಹವ್ಯऽಸೂದಃ । ಕನಿಕ್ರದತ್ । ವಾವಶತೀಃ । ಉತ್ । ಆಜತ್ ॥ ೫ ॥

॥ ಸಾಯಣಭಾಷ್ಯಂ ॥

ಸ ಬೃಹಸ್ಪತಿಃ ಸುಷ್ಟುಭಾ ಶೋಭನಸ್ತುತಿಮತರ್ಕ್ವತಾ ದೀಪ್ತಿಮತಾ ಗಣೇನಾಂಗಿರಸಾಂ ರವೇಣ ಶಬ್ದೇನ ಚ ಸಹ ಫಲಿಗಂ ॥ ಞಿಫಲಾ ವಿಶರಣೇ ॥ ಫಲಿರ್ಭೇದಃ । ತೇನ ಗಚ್ಛತೀತಿ ಫಲಿಗಂ । ವಲಂ ವಲನಾಮಾನಮಸುರಂ ರುರೋಜ। ಬಭಂಜ । ದ್ವಿತೀಯಃ ಸಶಬ್ದಃ ಪೂರಣಃ। ಸ ಏವ ದೇವ ಉಸ್ರಿಯಾ ಭೋಗಾನಾಮುತ್ಸ್ರಾವಿಣೀರ್ಹವ್ಯಸೂದಃ ಕ್ಷೀರಾದಿಹವಿಃಪ್ರೇರಿಕಾ ವಾವಶತೀರ್ವಾವಶ್ಯಮಾನಾ ಗಾಃ ಕನಿಕ್ರದತ್ ಶಬ್ದಂ ಕುರ್ವನ್ನುದಾಜತ್ । ಉದ್ಘಾಟಯತಿ ಸ್ಮ ॥

॥ ಪ್ರತಿಪದಾರ್ಥ ॥

ಸಃ—ಅದೇ ಪ್ರಸಿದ್ಧನಾದ । ಬೃಹಸ್ಪತಿಃ—ಬೃಹಸ್ಪತಿಯು । ಸುಷ್ಟುಭಾ—ಶ್ರೇಷ್ಠವಾದ ಸ್ತುತಿಗಳುಳ್ಳದ್ದೂ । ಋಕ್ವತಾ—ಪ್ರಕಾಶಮಾನವಾದುದೂ ಆದ। ಗಣೇನ—(ಅಂಗಿರಸ್ಸುಗಳ) ಸಂಘದಿಂದಲೂ। ರವೇಣ—ಶಬ್ದದಿಂದಲೂ ಕೂಡಿಕೊಂಡು । ಫಲಿಗಂ—ದುಷ್ಟಬುದ್ಧಿಯುಳ್ಳ । ವಲಂ—ವಲನೆಂಬ ಅಸುರನನ್ನು ।

ರುರೋಜ—ಸೀಳಿಹಾಕಿದನು । ಸಃ—ಅದೇ ಬೃಹಸ್ಪತಿಯು । ಉಸ್ರಿಯಾಃ—ವರಪ್ರದವಾದವೂ । ಹವ್ಯಸೂದಃ—ಹವಿಸ್ಸಿಗೆ ಸಾಧನವಾದ ಕ್ಷೀರಾದಿಗಳನ್ನು ಕರೆಯುವುವೂ । ವಾವಶತೀಃ—ಶಬ್ದಮಾಡುತ್ತಿದ್ದವೂ ಆದ ಗೋವುಗಳನ್ನು । ಕನಿಕ್ರದತ್—ತಾನೂ ಶಬ್ದಮಾಡುತ್ತಾ । ಉದಾಜತ್—ಸ್ವತಂತ್ರವಾಗಿ ಓಡಾಡುವಂತೆ ಬಿಡಿಸಿದನು.

॥ ಭಾವಾರ್ಥ ॥

ಲೋಕಪ್ರಸಿದ್ಧನಾದ ಬೃಹಸ್ಪತಿಯು ಶ್ರೇಷ್ಠವಾದ ಸ್ತುತಿಗಳುಳ್ಳದ್ದೂ, ಪ್ರಕಾಶಮಾನವಾದುದೂ ಆದ ಅಂಗಿರಸ್ಸುಗಳ ಸಂಘದೊಡನೆ ಕೂಡಿ ಶಬ್ದಮಾಡುತ್ತಾ, (ಮಂತ್ರಪಠನಮಾಡುತ್ತಾ) ದುಷ್ಟಬುದ್ಧಿಯುಳ್ಳ ವಲನೆಂಬ ಅಸುರನನ್ನು ಸೀಳಿಹಾಕಿದನು. ಅದೇ ಬೃಹಸ್ಪತಿಯು, ವರಪ್ರದವಾದವೂ, ಹವಿಸ್ಸಿಗೆ ಸಾಧನವಾದ ಕ್ಷೀರಾದಿಗಳನ್ನು ಕರೆಯುವುವೂ, ಶಬ್ದಮಾಡುತ್ತಿದ್ದವೂ ಆದ ಗೋವುಗಳನ್ನು, ಅವುಗಳಂತೆಯೇ ಶಬ್ದಮಾಡುತ್ತಾ ಬಿಡಿಸಿ ಅವುಗಳನ್ನು ಸ್ವತಂತ್ರವಾಗಿ ಓಡಾಡುವಂತೆ ಮಾಡಿದನು.

English Translation.

(Aided) by the praised and brilliant troop (of the Angiṛasas), he destroyed with sound the mischievous Vala : Brisahpati, shouting aloud, set free the boon-bestowing, oblation-supplying cows.



॥ ಸಂಹಿತಾಪಾಠಃ ॥

ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।
ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಂ ॥

॥ ಪದಪಾಠಃ ॥

ಏವ । ಪಿತ್ರೇ । ವಿಶ್ವಽದೇವಾಯ । ವೃಷ್ಣೇ । ಯಜ್ಞೈಃ । ವಿಧೇಮ । ನಮಸಾ । ಹವಿಃಽಭಿಃ ।
ಬೃಹಸ್ಪತೇ । ಸುಽಪ್ರಜಾಃ । ವೀರಽವಂತಃ । ವಯಂ । ಸ್ಯಾಮ । ಪತಯಃ । ರಯೀಣಾಂ ॥ ೬ ॥

॥ ಸಾಯಣಭಾಷ್ಯಂ ॥

ಏವಾ ಪಿತ್ರ ಇತಿ ಬಾರ್ಹಸ್ಪತ್ಯೇ ಪಶೌ ಹವಿಷೋ ಯಾಜ್ಯಾ । ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ವಿಶ್ವೇ ಅದ್ಯ ಮರುತೋ ವಿಶ್ವ ಊತೀ । ಆ. ೩-೭ । ಇತಿ ಸೂತ್ರಿತತ್ವಾತ್ ॥ ಅಗ್ನಿಷ್ಟೋಮೇ ವೈಶ್ವದೇವಶಸ್ತ್ರ ಏಷೈವ ಧಾಯ್ಯಾ । ತಥಾ ಚ ಸೂತ್ರಂ । ಏವಾ ಪಿತ್ರೇ ವಿಶ್ವದೇವಾಯ ವೃಷ್ಣ ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ । ಆ. ೫-೧೮ । ಇತಿ ॥

ಪಿತ್ರೇ ಪಾಲಕಾಯ ವಿಶ್ವದೇವಾಯ ಸರ್ವದೇವತಾರೂಪಾಯ । ದೇವಾನಾಂ ಮಂತ್ರಪ್ರತಿಪಾದ್ಯತ್ವಾದಸ್ಯ ಚ ಮಂತ್ರಾಭಿಮಾನಿತ್ವಾದ್ವೈಶ್ವದೇವತ್ವಂ । ಯದ್ವಾ । ಅತ್ರ ದೇವಶಬ್ದಃ ಸ್ತುತ್ಯರ್ಥಃ । ಸರ್ವೈಃ ಸ್ತುತ್ಯಾಯ ವೃಷ್ಣೇ ವರ್ಷಕಾಯ ಬೃಹಸ್ಪತಯೇ ದೇವಾಯೈವ್ಯೈವಮುಕ್ತಪ್ರಕಾರೇಣ ಯಜ್ಞೈಸ್ತತ್ಸಾಧನೈರ್ಹವಿರ್ಭಿರಾಜ್ಯಚರ್ವಾದಿಲಕ್ಷಣೈರ್ನಮಸಾ ಸ್ತುತ್ಯಾ ಚ ವಿಧೇಮ । ಪರಿಚರೇಮ । ಹೇ ಬೃಹಸ್ಪತೇ ಸುಪ್ರಜಾಃ ಶೋಭನಪುತ್ರಾ ವೀರವಂತೋ ವೀರ್ಯೋಪೇತಾ ವಯಂ ರಯೀಣಾಂ ಧನಾನಾಂ ಪತಯಃ ಸ್ಯಾಮ ॥

। ಪ್ರತಿಪದಾರ್ಥ ।

ಪಿತ್ರೇ—ಪಾಲಕನೂ । ವಿಶ್ವದೇವಾಯ—ಸರ್ವದೇವತಾತ್ಮನೂ । ವೃಷ್ಣೇ—ಕಾಮವರ್ಷಕನೂ ಆದ ಬೃಹಸ್ಪತಿಯನ್ನುದ್ದೇಶಿಸಿ । ಏವ—ವಿಧ್ಯುಕ್ತಪ್ರಕಾರವಾಗಿ । ಯಜ್ಞೈಃ—ಯಜ್ಞಸಾಧನಗಳಾದ । ಹವಿರ್ಭಿಃ—ಹವಿಸ್ಸುಗಳಿಂದಲೂ । ನಮಸಾ—ಸ್ತುತಿಯಿಂದಲೂ । ವಿಧೇಮ—ಪೂಜಿಸೋಣ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ವಯಂ—ನಾವು । ಸುಪ್ರಜಾಃ—ಶ್ರೇಷ್ಠವಾದ ಪುತ್ರವಂತರಾಗುವಂತೆಯೂ । ವೀರವಂತಃ—ವೀರ್ಯದಿಂದ ಕೂಡಿದವರಾಗಿಯೂ ಆಗಿ । ರಯೀಣಾಂ—ಧನಕ್ಕೆ । ಪತಯಃ—ಒಡೆಯರಾಗಿ । ಸ್ಯಾಮ—ಆಗುವಂತಾಗಲಿ.

। ಭಾವಾರ್ಥ ।

ವಿಶ್ವಪಾಲಕನೂ, ಸರ್ವದೇವತಾತ್ಮನೂ, ಕಾಮವರ್ಷಕನೂ ಆದ ಬೃಹಸ್ಪತಿಯನ್ನುದ್ದೇಶಿಸಿ, ವಿಧ್ಯುಕ್ತ ಪ್ರಕಾರವಾಗಿ, ಯಜ್ಞಸಾಧಕಗಳಾದ ಹವಿಸ್ಸುಗಳಿಂದಲೂ, ಸ್ತುತಿಯಿಂದಲೂ ಪೂಜಿಸೋಣ. ಎಲೈ ಬೃಹಸ್ಪತಿಯೇ, ನಾವು ಶ್ರೇಷ್ಠರಾದ ಪುತ್ರವಂತರಾಗುವಂತೆಯೂ, ವೀರ್ಯದಿಂದ ಕೂಡಿದವರಾಗುವಂತೆಯೂ ಆಗಿ ಧನಾಧೀಶರಾಗುವಂತೆಯೂ ಅನುಗ್ರಹಿಸು.

## English Translation.

Thus may we offer worship with sacrifices, with oblations, with praise, to the paternal, uvniversal deity, the showerer (of benefits) ; and may we, Brihaspati, become possessed of riches, and be blessed with excellent progeny and valiant descendants.

॥ ವಿಶೇಷವಿಷಯಗಳು ॥

ಏವಾ ಪಿತ್ರೇ ಎಂಬ ಈ ಋಕ್ಕನ್ನು ಬೃಹಸ್ಪತಿಸಂಬಂಧವಾದ ಪಶುಯಾಗದಲ್ಲಿ ಹವಿಸ್ಸನ್ನು ಹೋಮ ಮಾಡುವಾ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ವಿಶ್ವೇ ಅದ್ಯ ಮರುತೋ ವಿಶ್ವ ಊತೀ ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು. ಮತ್ತು ಇದೇ ಋಕ್ಕನ್ನು ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಏವಾ ಪಿತ್ರೇ ವಿಶ್ವದೇವಾಯ ವೃಷ್ಣ ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ ಎಂಬ ಸೂತ್ರದಿಂದ (ಆ. ೫-೧೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ಶುಷ್ಮೇಣ ತಸ್ಥಾವಭಿ ವೀರ್ಯೇಣ ।

ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ ವಲ್ಗೂಯತಿ ವಂದತೇ ಪೂರ್ವಭಾಜಂ॥

॥ ಪದಪಾಠಃ ॥

ಸಃ । ಇತ್ । ರಾಜಾ । ಪ್ರತಿऽಜನ್ಯಾನಿ । ವಿಶ್ವಾ । ಶುಷ್ಮೇಣ । ತಸ್ಥೌ । ಅಭಿ । ವೀರ್ಯೇಣ ।

ಬೃಹಸ್ಪತಿಂ । ಯಃ । ಸುऽಭೃತಂ । ಬಿಭರ್ತಿ । ವಲ್ಗುऽಯತಿ । ವಂದತೇ । ಪೂರ್ವऽಭಾಜಂ ॥ ೭ ॥

॥ ಸಾಯಣಭಾಷ್ಯಂ ॥

ಇಪವಮಾದ್ಯೈಕ್ರಯಂ ಪುರೋಹಿತಪ್ರಶಂಸೇತಿ ಬ್ರಾಹ್ಮಣಂ ॥ ಐ. ಬ್ರಾಂ. ೮-೨೬ । ಅಥವಾ ಸೂಕ್ತಸ್ಯ ಋಗ್ದ್ವಯವರ್ಜಿತಸ್ಯ ಬಾರ್ಹಸ್ಪತ್ಯತ್ವಾದ್ಬೃಹಸ್ಪತೇರೇವ ಸ್ತುತಿಃ । ಸ ಇತ್ಸ ಏವ ರಾಜಾ ಮೂರ್ಧಾಭಿಷಿಕ್ತೋऽನ್ಯೋ ವಾ ರಾಜಮಾನಃ ಪ್ರತಿಜನ್ಯಾನಿ । ಜನ್ಯಂ ಯುದ್ಧಂ ಪ್ರತಿ ಬಲಾನೀತ್ಯರ್ಥಃ। ಪ್ರತ್ಯರ್ಥಿಜನಪದಾನಿ ವಾ ತಾನಿ ವಿಶ್ವಾ ಸರ್ವಾಣಿ ಶುಷ್ಮೇಣ ಬಲೇನ ವೀರ್ಯೇಣ ಶರೀರಸಾಮರ್ಥ್ಯೇನ ವಾಭಿ ಅಭಿಗಮ್ಯಾಕ್ರಮ್ಯ ತಸ್ಥೌ । ತಿಷ್ಠತಿ । ಸ ಇತ್ಯುಕ್ತಂ ಕ ಇತ್ಯಾಹ । ಯೋ ಬೃಹಸ್ಪತಿಂ ಬೃಹತಾಂ ಮಹತಾಂ ಪಾಲಯಿತಾರಂ ದೇವಮುಕ್ತಲಕ್ಷಣಂ ಪುರೋಹಿತಂ ವಾ ಸುಭೃತಂ ಸುಷ್ಠು ಹವಿಃಸ್ತೋತ್ರಾದಿನಾನ್ನಾಚ್ಛಾದನಾದಿನಾ ವಾ ಬಿಭರ್ತಿ ಭರತಿ । ವಲ್ಗೂಯತಿ ಸ್ತೌತಿ । ವಂದತೇ ನಮಸ್ಕರೋತಿ ಚ ಪೂರ್ವಭಾಜಮಿತರೇಭ್ಯಃ ಪ್ರಥಮಸಂಭಕ್ತಾರಂ ಕೃತ್ವಾ । ಏವಂ ಯಃ ಕರೋತಿ ಸ ಏವ ತಸ್ಥಾವಿತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ರಾಜನು । ಬೃಹಸ್ಪತಿಂ—ಬೃಹಸ್ಪತಿಯನ್ನು । ಪೂರ್ವಭಾಜಂ—ಇತರ ದೇವತೆಗಳಿಗಿಂತ ಮೊದಲೇ ಹವಿಸ್ಸನ್ನು ಸ್ವೀಕರಿಸುವಂತೆ ಮಾಡಿ । ಸುಭೃತಂ—ಶ್ರೇಷ್ಠವಾದ ಹವಿರಾದಿಗಳಿಂದ । ಬಿಭರ್ತಿ—ಭರಿಸುವವನೋ । ವಲ್ಗೂಯತಿ—ಸ್ತುತಿಸುವನೋ । ವಂದತೇ—ನಮಸ್ಕರಿಸುತ್ತಾನೆಯೋ । ಸ ಇತ್ ರಾಜಾ—ಆ ರಾಜನು ಮಾತ್ರ । ವಿಶ್ವಾ—ಸಮಸ್ತವಾದ । ಪ್ರತಿಜನ್ಯಾನಿ—ಶತ್ರುಸೈನ್ಯಗಳನ್ನೂ ಸಹ । ಶುಷ್ಮೇಣ—ತನ್ನ ಶಕ್ತಿಯಿಂದಲೂ । ವೀರ್ಯೇಣ—ವೀರ್ಯದಿಂದಲೂ । ಅಭಿ ತಸ್ಥೌ—ಆಕ್ರಮಿಸಿ ವಿಜಯಿಯಾಗುತ್ತಾನೆ.

॥ ಭಾವಾರ್ಥ ॥

ಯಾವ ರಾಜನು ಯಜ್ಞಕಾಲಗಳಲ್ಲಿ ಬೃಹಸ್ಪತಿಗೇ ಹವಿಃ ಸ್ವೀಕಾರದ ಪ್ರಥಮಸ್ಥಾನವನ್ನು ಕಲ್ಪಿಸಿ ಅವನನ್ನು ಶ್ರೇಷ್ಠವಾದ ಹವಿರ್ಧಾನಾದಿಗಳಿಂದಲೂ, ಸ್ತುತಿಗಳಿಂದೂ, ನಮಸ್ಕಾರಗಳಿಂದಲೂ, ಪೂಜಿಸುವನೋ, ಆ ರಾಜನು ಮಾತ್ರ ಸಮಸ್ತ ಶತ್ರು ಸೈನ್ಯಗಳನ್ನೂ ತನ್ನ ಶಕ್ತಿಯಿಂದಲೂ, ವೀರ್ಯದಿಂದಲೂ ಆಕ್ರಮಿಸಿ ವಿಜಯಿಯಾಗುತ್ತಾನೆ.

## English Translation.

That prince overcomes by his strength and prowess all hostile people, who cherishes liberally Brihaspati, and glorifies and honours him as the first sharer (of the offering).

|| ವಿಶೇಷವಿಷಯಗಳು ||

ಭಾಷ್ಯಕಾರರು ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಸಹ—ಇದಮಾದ್ಯೈಸ್ತ್ರಿಯಂ ಪುರೋಹಿತ-ಪ್ರಶಂಸಾ ಇತಿ ಬ್ರಾಹ್ಮಣಂ ಐ. ಬ್ರಾ. ೮-೨೬ । ಅಥವಾ ಋಗ್ದ್ವಯವರ್ಜಿತಸ್ಯ ಬಾರ್ಹಸ್ಪತ್ಯತ್ವಾತ್ ಬೃಹಸ್ಪತೇರೇವ ಸ್ತುತಿಃ । ಎಂದು ಪುರೋಹಿತಪ್ರಶಂಸೆಯನ್ನೊಳಗೊಂಡಿರುವುದು; ಅಥವಾ ಈ ಸೂಕ್ತದಲ್ಲಿ ಇಂದ್ರಾಬೃಹಸ್ಪತಿದೇವಾತಾಕವಾದ ಕೊನೆಯ ಎರಡು ಋಕ್ಕುಗಳನ್ನು ಬಿಟ್ಟು ಉಳಿದ ಒಂಭತ್ತು ಋಕ್ಕುಗಳೂ ಬೃಹಸ್ಪತಿಯ ಸ್ತುತಿಯೇ ಆಗಿರುವುದು ಎಂದು ಹೇಳಿದಾರೆ. ಮತ್ತು—

ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ ।

(ತೈ. ಸಂ. ೬-೪-೧೦-೧)

ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ. ಎಂದರೆ ಬೃಹಸ್ಪತಿಯು ದೇವತೆಗಳ ಪುರೋಹಿತನೆಂದೂ, ಶಂಡಾಮರ್ಕರೆಂಬುವದು ಅಸುರರ ಪುರೋಹಿತರೆಂದೂ ಪ್ರಸಿದ್ಧಿಯು. ಆದುದರಿಂದ ಇಲ್ಲಿ ಪುರೋಹಿತನೆಂದರೇನು? ಅವನ ಕರ್ತವ್ಯವೇನು? ಅವನ ಸ್ಥಾನಮಾನಗಳೇನು? ಇವೇ ಮೊದಲಾದ ವಿಷಯಗಳನ್ನು ಐತರೇಯಬ್ರಾಹ್ಮಣದಲ್ಲಿ ಹೇಳಿರುವಂತೆಯೇ ಇಲ್ಲಿ ವಿವರಿಸಲಾಗಿದೆ—

## ಪುರೋಹಿತನ ಸ್ಥಾನಮಾನಗಳು

ತದಪ್ಯೇತದೃಷಿಣೋಕ್ತಂ—ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ತಸ್ಥಾವಭಿ ವೀರ್ಯೇಣೇತಿ ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನೇವ ತಚ್ಛುಷ್ಮೇಣ ವೀರ್ಯೇಣಾಧಿತಿಷ್ಠತಿ ।

(ಐ. ಬ್ರಾ. ೪೦-೨೬)

ಪುರೋಹಿತನಿಗೆ ಇರುವ ಶಕ್ತಿಸಾಮರ್ಥ್ಯಗಳನ್ನೂ, ಅವನ ಮಹಿಮೆಯನ್ನೂ ಮಂತ್ರದ್ರಷ್ಟೃವಾದ ವಾಮದೇವ ಋಷಿಯು—ಸ ಇದ್ರಾಜಾ ಪ್ರತಿಜನ್ಯಾನಿ ಎಂದು ಮೊದಲಾಗುವ (ಋ. ಸಂ. ೪-೫೦-೭, ೮, ೯ ನೇ ಋಕ್ಕುಗಳು) ಮೂರು ಋಕ್ಕುಗಳಲ್ಲಿ ವರ್ಣಿಸಿದ್ದಾನೆ ಆ ಮೂರು ಮಂತ್ರಗಳಲ್ಲಿ ಮೊದಲನೆಯ ಋಕ್ಕಿನ ಪೂರ್ವಾರ್ಧವು—ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ಶುಷ್ಮೇಣ ತಸ್ಥಾವಭಿ ವೀರ್ಯೇಣ ಎಂದಿರುವುದು. ಇದಕ್ಕೆ—ಪುರೋಹಿತ ಯುಕ್ತನಾದ (ಆ) ರಾಜನೇ ತನ್ನ ಸಾಮರ್ಥ್ಯದಿಂದ ತನ್ನ ಸಮಸ್ತಶತ್ರುಗಳನ್ನು ಸೋಲಿಸುವನು ಎಂದರ್ಥವು. ಇಲ್ಲಿ ಸಪತ್ನಾ ಎಂದರೆ ದ್ವೇಷಿಸುವ ಶತ್ರುಗಳು. ಇವರನ್ನು ಭ್ರಾತೃವ್ಯಾ ಅಥವಾ ಜನ್ಯಾನಿ ಎಂಬ ಶಬ್ದದಿಂದ ಇಲ್ಲಿ ವಿವರಿಸಿದೆ. ಶತ್ರುಗಳೆಂದರೆ ತನ್ನನ್ನು ದ್ವೇಷಿಸುವ ಅಥವಾ ತಾನು ದ್ವೇಷಿಸುವ, ತನಗೆ ಹಿತವನ್ನು ಬಯಸದಿರುವ, ಅಪಕಾರ ಅಥವಾ ಕೆಡುಕನ್ನೇ ಮಾಡುವ ಜನರು. ಇಂತಹ ಶತ್ರುಗಳನ್ನು ಪುರೋಹಿತಯುಕ್ತನಾದ ರಾಜನು ಸೋಲಿಸುವನು ಎಂದಭಿಪ್ರಾಯವು.

ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಬೃಹಸ್ಪತಿರ್ಹ ವೈ ದೇವಾನಾಂ ಪುರೋಹಿತಸ್ತಮನ್ವನ್ಯೇ ಮನುಷ್ಯರಾಜ್ಞಾಂ ಪುರೋಹಿತಾ ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಯದಾಹ ಪುರೋಹಿತಂ ಯಃ ಸುಭೃತಂ ಬಿಭರ್ತೀತ್ಯೇವ ತದಾಹ । ವಲ್ಗೂಯತಿ ವಂದತೇ ಪೂರ್ವಭಾಜಮಿತ್ಯಪಚಿತಿಮೇವಾಸ್ಮಾ ಏತದಾಹ ।

ಈ ಋಕ್ಕಿನ ಮೂರನೆಯ ಪಾದವನ್ನು ವಿವರಿಸುವರು—ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ ಎಂದು ಮೂರನೆಯ ಪಾದವಿರುವುದು. ಬೃಹಸ್ಪತಿಗೆ ಸಮಾನನಾದ ಪುರೋಹಿತನನ್ನು ತನ್ನಲ್ಲಿಟ್ಟುಕೊಂಡು ಪೋಷಿಸುವ ರಾಜನು ಶತ್ರುಗಳನ್ನು ಜಯಿಸುವನು ಎಂದು ಹಿಂದೆ ಹೇಳಿದ ವಾಕ್ಯಕ್ಕೆ ಸಮನ್ವಯವು. ಬೃಹಸ್ಪತಿಯು ದೇವತೆಗಳ ಪುರೋಹಿತನು. ಅಂತಹ ಬೃಹಸ್ಪತಿಯನ್ನು ಅನುಸರಿಸುತ್ತಾ ಮನುಷ್ಯ ಪುರೋಹಿತರೂ ಕೂಡ ರಾಜನ ಸಮೀಪ ವರ್ತಿಯಾಗಿರುವರು. ಆದುದರಿಂದ ಪುರೋಹಿತರ ವಿಷಯವನ್ನು ಪ್ರಸ್ತಾಪಮಾಡುವಾಗ ಅವರನ್ನು ಬೃಹಸ್ಪತಿ ಶಬ್ದದಿಂದಲೇ ಕರೆಯುವುದು ಸಾಮಾನ್ಯವಾಗಿದೆ. ಇನ್ನು ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು. ರಾಜನು ತನ್ನ ಪುರೋಹಿತನಿಗೆ ಅಗ್ರಸ್ಥಾನವನ್ನು ಎಂದರೆ ಶ್ರೇಷ್ಠವಾದ ಸ್ಥಾನಮಾನಗಳನ್ನು ಕಲ್ಪಿಸುವನು. ಅವನನ್ನು ಪೂಜಿಸುವನು, ಮತ್ತು ನಮಸ್ಕರಿಸುವನು.

ಸ ಇತ್ಕ್ಷೇತಿ ಸುಧಿತ ಓಕಸಿ ಸ್ವ ಇತಿ ಗೃಹಾ ವಾ ಓಕಃ ಸ್ವೇಷ್ವೇವ ತದ್ಗೃಹೇಷು ಸುಹಿತೋ ವಸತಿ । ತಸ್ಮಾ ಇಳಾ ಪಿನ್ವತೇ ವಿಶ್ವದಾನೀಮಿತ್ಯನ್ನಂ ವಾ ಇಳಾನ್ನಮೇವಾಸ್ಮಾ ಏತದೂರ್ಜಸ್ವಚ್ಛಶ್ವದ್ಭವತಿ। ತಸ್ಮೈ ವಿಶಃ ಸ್ವಯಮೇವಾನಮಂತ ಇತಿ ರಾಷ್ಟ್ರಾಣಿ ವೈ ವಿಶೋ ರಾಷ್ಟ್ರಾಣ್ಯೈವೈನಂ ತತ್ಸ್ವಯಮುಪನಮಂತಿ । ಯಸ್ಮಿನ್ಬ್ರಹ್ಮಾ ರಾಜನಿ ಪೂರ್ವ ಏತೀತಿ ಪುರೋಹಿತಮೇವೈತದಾಹ ॥

ಎರಡನೆಯ ಋಕ್ಕಿನ ಅರ್ಥವನ್ನು ವಿವರಿಸುವರು. ರಾಜನಿಂದ ಪೂಜಿತನಾದ ಪುರೋಹಿತನು ಸುಪ್ರೀತನಾಗಿ ಸುಸಜ್ಜಿತವಾದ ತನ್ನ ಗೃಹದಲ್ಲಿ ವಾಸಮಾಡುತ್ತಾನೆ. ಓಕಃಶಬ್ದಕ್ಕೆ ಗೃಹವೆಂದರ್ಥವು. ಇಂತಹ ಪುರೋಹಿತ ನಿಂದ ಯುಕ್ತನಾದ ರಾಜನಿಗೆ ಸರ್ವಕಾಲದಲ್ಲಿಯೂ ಅನ್ನಸಮೃದ್ಧಿಯುಂಟಾಗುವುದು. ಇಲ್ಲಿ ಇಳಾ ಶಬ್ದಕ್ಕೆ ಅನ್ನವೆಂದರ್ಥವು. ಊರ್ಜವೆಂದರೆ ರಸವು. ಆ ರಾಜನಿಗೆ ಅನ್ನಸಮೃದ್ಧಿಯೂ ಕ್ಷೀರಾದಿ ರಸಸಮೃದ್ಧಿಯೂ ಸರ್ವದಾ ಉಂಟಾಗುವುದು. ಅಂತಹ ರಾಜನನ್ನು ಅವನ ಪ್ರಜೆಗಳು (ಇತರರ ನಿರ್ಬಂಧವಿಲ್ಲದೆ) ತಾವೇ ತಮ್ಮ ಸ್ವಯಿಚ್ಛೆಯಿಂದ ಎಂದರೆ ಸಂತೋಷದಿಂದ ನಮಸ್ಕರಿಸಿ ಗೌರವಿಸುವರು. ಈ ಪಾದದಲ್ಲಿರುವ ವಿಟ್ ಶಬ್ದಕ್ಕೆ ರಾಷ್ಟ್ರದ ಪ್ರಜೆಗಳು ಅಥವಾ ಪ್ರಜೆಗಳಿಂದ ಕೂಡಿದ ರಾಷ್ಟ್ರವೆಲ್ಲಾ ಎಂದರ್ಥವು. ಯಾವ ರಾಜನ ಸಮೀಪದಲ್ಲಿ ಬ್ರಾಹ್ಮಣನಾದ ಪುರೋಹಿತನು ಇದ್ದುಕೊಂಡು ಅವನಿಗೆ ಸದುಪದೇಶವನ್ನು ಮಾಡುತ್ತಿರುವನೋ ಅಂತಹ ರಾಜನಿಗೆ ದೇಶದಲ್ಲಿ ಅಥವಾ ರಾಷ್ಟ್ರದಲ್ಲಿ ಅತ್ಯುನ್ನತಸ್ಥಾನವಿರುವುದು. ಅವನು ಸಕಲರಿಂದಲೂ ಗೌರವಿಸಲ್ಪಡುವನು.

ಅಪ್ರತೀತೋ ಜಯತಿ ಸಂ ಧನಾನೀತಿ ರಾಷ್ಟ್ರಾಣಿ ವೈ ಧನಾನಿ ತಾನ್ಯಪ್ರತೀತೋ ಜಯತಿ । ಪ್ರತಿಜನ್ಯಾನ್ಯುತ ಯಾ ಸಜನ್ಯೇತಿ ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನಪ್ರತೀತೋ ಜಯತಿ । ಅವಸ್ಯವೇ ಯೋ ವರಿವಃ ಕೃಣೋತೀತಿ ಯದಾಹಾವಸೀಯಸೇ ಯೋಽವಸೀಯಃ ಕರೋತೀತ್ಯೇವ ತದಾಹ । ಬ್ರಹ್ಮಣೇ ರಾಜಾ ತಮವಂತಿ ದೇವಾ ಇತಿ ಪುರೋಹಿತಮೇವೈತದಭಿವದತಿ । (ಐ. ಬ್ರಾ. ೪೦-೨೬)

ಮೂರನೆಯ ಋಕ್ಕಿನ ಅರ್ಥವನ್ನು ವಿವರಿಸುವರು—ಪುರೋಹಿತಯುಕ್ತನಾದ ರಾಜನು ಧನಸಮೃದ್ಧವಾದ ಶತ್ರುಗಳ ರಾಷ್ಟ್ರವನ್ನು ಯಾವ ಪ್ರತಿಭಟನೆಯೂ ಇಲ್ಲದೆ ಸುಲಭವಾಗಿ ಜಯಿಸಿ ವಶಪಡಿಸಿಕೊಳ್ಳುವನು. ಅಪ್ರತೀತಃ ಎಂಬ ಶಬ್ದಕ್ಕೆ ಪ್ರತಿಕೂಲರಾದ ಶತ್ರುಗಳಿಂದ ರಹಿತವಾದ, ನಿರ್ಬಾಧಿತವಾದ ಎಂದರ್ಥವು. ಈ ಪಾದದಲ್ಲಿರುವ ಧನಶಬ್ದಕ್ಕೆ ರಾಷ್ಟ್ರಗಳು ಎಂದರ್ಥವು. ಅಂತಹ ಶತ್ರುರಾಷ್ಟ್ರಗಳನ್ನು ಯಾವ ಪ್ರತಿಭಟನೆಯೂ ಇಲ್ಲದೆ ಜಯಿಸುವನು ಎಂದಭಿಪ್ರಾಯವು. ಜನ್ಯಾನಿ ಎಂದರೆ ಶತ್ರುಗಳು. ಸಜನ್ಯಾ ಎಂದರೆ ಸೇನೆಗಳಿಂದ ಸಹಿತರಾದ ಶತ್ರುಗಳು ಎಂದರ್ಥವು. ಇಂತಹ ಶತ್ರುಗಳನ್ನು ಸುಲಭವಾಗಿ ರಾಜನು ಜಯಿಸುವನು. ಉತ್ತರಾರ್ಧದ ಅರ್ಥವನ್ನು ವಿವರಿಸುವರು. ಯಾವ ರಾಜನು ಧನರಹಿತನಾದ ಎಂದರೆ ದರಿದ್ರನಾದ ತನ್ನ ಬ್ರಾಹ್ಮಣಪುರೋಹಿತನಿಗೆ ಧನಾದಿಗಳನ್ನು ಕೊಟ್ಟು ಗೌರವಿಸುವನೋ ಅಂತಹ ರಾಜನನ್ನು ದೇವತೆಗಳು ಸರ್ವದಾ ರಕ್ಷಿಸುವರು. ಇಲ್ಲಿ ಬ್ರಹ್ಮಣೇ ಎಂಬ ಶಬ್ದವು ಪುರೋಹಿತನಿಗೆ ಎಂಬರ್ಥವನ್ನು ಸೂಚಿಸುವುದು.

ಐತರೇಯ ಬ್ರಾಹ್ಮಣದಲ್ಲಿ ಪುರೋಹಿತನಿಗೂ, ರಾಜನಿಗೂ ಇರಬೇಕಾದ ಸಂಬಂಧ, ಪುರೋಹಿತನ ಕರ್ತವ್ಯಗಳು ಮೊದಲಾದ ವಿಷಯಗಳು ಉಕ್ತವಾಗಿದೆ. ಅದನ್ನೇ ಇಲ್ಲಿ ವಿವರಿಸಲಾಗಿರುವುದು—

(ರಾಜನು ಪುರೋಹಿತನನ್ನು ನೇಮಿಸಿಕೊಳ್ಳುವ ಆವಶ್ಯಕತೆ—ಆಹವನೀಯಾದ್ಯಗ್ನಿಗಳನ್ನು ತೃಪ್ತಿಪಡಿಸುವ ಬಗೆ—ಐದು ವಿಧವಾದ ಕೆಡಕುಗಳಿಂದ ಪಾರಾಗುವ ಬಗೆ)

ಅಥಾತಃ ಪುರೋಧಾಯಾ ಏವ । ನ ಹ ವಾ ಅಪುರೋಹಿತಸ್ಯ ರಾಜ್ಞೋ ದೇವಾ ಅನ್ನಮದಂತಿ ತಸ್ಮಾದ್ರಾಜಾ ಯಕ್ಷ್ಯಮಾಣೋ ಬ್ರಾಹ್ಮಣಂ ಪುರೋ ದಧೀತ ದೇವಾ ಮೇಽನ್ನಮದನ್ನಿತಿ ।
(ಐ. ಬ್ರಾ. ೪೦–೨೪)

ಈಗ ಪೌರೋಹಿತ್ಯದ ವಿಧಿಗಳನ್ನೂ, ಕಾರ್ಯಕಲಾಪಗಳನ್ನೂ ವಿವರಿಸಲಾಗುವುದು. ಪುರೋಹಿತನನ್ನು ನೇಮಿಸಿಕೊಳ್ಳದೆ ರಾಜನು ತಾನೇ ಯಜ್ಞಾದಿಗಳನ್ನು ಮಾಡಿದಲ್ಲಿ ಅಂತಹ ಯಜ್ಞದಲ್ಲಿ ದೇವತೆಗಳು ಆ ರಾಜನ ಹವಿಸ್ಸನ್ನು (ಅನ್ನವನ್ನು) ಸ್ವೀಕರಿಸುವುದಿಲ್ಲ. ಆದುದರಿಂದ ರಾಜನಾದವನು ವೇದಾಧ್ಯಯನಸಂಪನ್ನನೂ, ಸತ್ಕುಲಪ್ರಸೂತನೂ, ನಿಯಮಾಚಾರಸಂಪನ್ನನೂ ಆದ ಓರ್ವ ಬ್ರಾಹ್ಮಣನನ್ನು ತನಗೆ ಪುರೋಹಿತನಾಗಿರುವಂತೆ ನಿಯಮಿಸಿಕೊಳ್ಳಬೇಕು. ಆ ಪುರೋಹಿತನ ಸಹಾಯದಿಂದ ಯಜ್ಞಯಾಗಾದಿಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಬೇಕು. ಏಕೆಂದರೆ, ಪ್ರಜಾಪರಿಪಾಲನೆಮಾಡುವಾಗ ಪ್ರಜೆಗಳು ಸುಖದಿಂದಿರುವುದಕ್ಕಾಗಿಯೂ, ಕಾಲಕಾಲದಲ್ಲಿ ವೃಷ್ಟಿಯಾಗುವುದಕ್ಕಾಗಿಯೂ, ರಾಜ್ಯದಲ್ಲಿ ರೋಗರುಜಿನಾದಿಗಳೂ, ಕ್ಷಾಮ ಮೊದಲಾದ ಈತಿಬಾಧೆಗಳೂ ಇಲ್ಲದಿರುವುದಕ್ಕಾಗಿಯೂ ಯಜ್ಞಯಾಗಾದಿಗಳನ್ನು ರಾಜನು ಅವಶ್ಯಕವಾಗಿ ಮಾಡಬೇಕು. ಈ ಕಾರ್ಯಕ್ಕಾಗಿ ಪುರೋಹಿತನು ಅವಶ್ಯಕವಾಗಿರುವುದರಿಂದ ರಾಜನಾದವನು ಪುರೋಹಿತನನ್ನು ನೇಮಿಸಿಕೊಳ್ಳಬೇಕು.

ಅಗ್ನೀನ್ವಾ ಏಷ ಸ್ವರ್ಗ್ಯಾನ್ರಾಜೋದ್ಧರತೇ ಯತ್ಪುರೋಹಿತಂ । ತಸ್ಯ ಪುರೋಹಿತ ಏವಾಹವನೀಯೋ ಭವತಿ ಜಾಯಾ ಗಾರ್ಹಪತ್ಯಃ ಪುತ್ರೋಽನ್ವಾಹಾರ್ಯಪಚನಃ ಸ ಯತ್ಪುರೋಹಿತಾಯ ಕರೋತ್ಯಾಹವನೀಯ ಏವ ತಜ್ಜುಹೋತ್ಯಥ ಯಜ್ಜಾಯಾಯೈ ಕರೋತಿ ಗಾರ್ಹಪತ್ಯ ಏವ ತಜ್ಜುಹೋತ್ಯಥ ಯತ್ಪುತ್ರಾಯ ಕರೋತ್ಯನ್ವಾಹಾರ್ಯಪಚನ ಏವ ತಜ್ಜುಹೋತಿ ತ ಏನಂ ಶಾಂತತನವೋಽಭಿಹುತಾ ಅಭಿಪ್ರೀತಾಃ ಸ್ವರ್ಗಂ ಲೋಕಮಭಿವಹಂತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ ।

ರಾಜನು ಪುರೋಹಿತನನ್ನು ನೇಮಿಸಿಕೊಳ್ಳುವುದರಿಂದ ತನಗೆ ಸ್ವರ್ಗವನ್ನು ಒದಗಿಸಿಕೊಡುವ ಅಗ್ನಿಯನ್ನೇ ತನ್ನಲ್ಲಿಟ್ಟು ಕೊಂಡಂತಾಗುವದು. ಆಗ್ನೇಯೋ ವೈ ಬ್ರಾಹ್ಮಣಃ (ತೈ. ಬ್ರಾ. ೨-೭-೩-೧) ಬ್ರಾಹ್ಮಣನು ಅಗ್ನಿಸ್ವರೂಪನು ಎಂದು ಶ್ರುತಿವಾಕ್ಯವೇ ಇರುವುದು. ರಾಜನಿಗೆ ಪುರೋಹಿತನೇ ಆಹವನೀಯವೆಂಬ ಅಗ್ನಿಸ್ಥಾನೀಯನು ಎಂದರೆ ಅವನನ್ನು ಆವಹನೀಯಾಗ್ನಿಯೆಂದೇ ಭಾವಿಸಬೇಕು. ಆ ಪುರೋಹಿತನ ಪತ್ನಿಯು ಗಾರ್ಹಪತ್ಯಾಗ್ನಿಯು ; ಪುತ್ರನು ದಕ್ಷಿಣಾಗ್ನಿಯು. ಆದುದರಿಂದ ರಾಜನು—ಪುರೋಹಿತ, ಅವನ ಪತ್ನಿ, ಪುತ್ರ ಇವರುಗಳಿಗೆ ಅವರು ಅಪೇಕ್ಷಿಸುವ ಧನಾದಿಗಳನ್ನು ಕೊಟ್ಟರೆ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಅಗ್ನಿತ್ರಯಗಳಲ್ಲಿ ಹೋಮಮಾಡಿ ಅಗ್ನಿಯನ್ನು ತೃಪ್ತಿಗೊಳಿಸಿದಂತಾಗುವುದು. ಇದಲ್ಲದೆ ಪುರೋಹಿತನ ಮೂಲಕ ರಾಜನು ಹೋಮಾದಿಗಳನ್ನು ಮಾಡಿದರೆ ಮೇಲೆ ಹೇಳಿದ ಆಹವನೀಯಾದ್ಯಗ್ನಿಗಳು ತಮ್ಮ ಉಗ್ರರೂಪವನ್ನು ಬಿಟ್ಟು ರಾಜನ ವಿಷಯದಲ್ಲಿ ಸೌಮ್ಯರೂಪ ದಿಂದಿರುತ್ತಾ ರಾಜನ ಸಮಸ್ತ ಅಭೀಷ್ಟಗಳನ್ನು ನೆರವೇರಿಸುವುದಲ್ಲದೆ ಆ ರಾಜನಿಗೆ ಸ್ವರ್ಗಾದಿಲೋಕಪ್ರಾಪ್ತಿಯನ್ನೂ, ಮಾನಸೋತ್ಸಾಹರೂಪವಾದ ಶೌರ್ಯವನ್ನೂ, ಶರೀರಸಂಬಧವಾದ ಬಲವನ್ನೂ (ಪರಾಕ್ರಮವನ್ನೂ) ದೇಶವನ್ನೂ ಪ್ರಜೆಗಳನ್ನು ಒದಗಿಸಿಕೊಟ್ಟು ಪ್ರೀತಿಯಿಂದ ರಾಜನನ್ನು ಸಂರಕ್ಷಿಸುವರು.

> ತ ಏವೈನಮಶಾಂತತನವೋಽನಭಿಹುತಾ ಅನಭಿಪ್ರೀತಾಃ ಸ್ವರ್ಗಾಲ್ಲೋಕಾನ್ನುದಂತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ।

ಒಂದು ವೇಳೆ ರಾಜನು ಪುರೋಹಿತನನ್ನು ನೇಮಿಸಿಕೊಳ್ಳದೆ, ಅವನ ಮೂಲಕ ಯಜ್ಞಯಾಗಾದಿಗಳನ್ನು ಮಾಡದೇ ಇದ್ದಲ್ಲಿ ಆಗ ಆಹವನೀಯಾದ್ಯಗ್ನಿಗಳು ರಾಜನ ವಿಷಯದಲ್ಲಿ ಅಸಮಾಧಾನಗೊಂಡು ಅವನಿಗೆ ಕೆಡಕನ್ನುಂಟು ಮಾಡುವರು. ಆ ರಾಜನಿಗೆ ಸ್ವರ್ಗಪ್ರಾಪ್ತಿ, ಮನೋಧೈರ್ಯ, ಬಲ, ಪರಾಕ್ರಮ, ರಾಷ್ಟ್ರ, ಪ್ರಜೆಗಳು ಯಾವವೂ ಇಲ್ಲದಂತೆ ಮಾಡುವರು.

> ಅಗ್ನಿರ್ವಾ ಏಷ ವೈಶ್ವಾನರಃ ಪಂಚಮೇನಿರ್ಯತ್ಪುರೋಹಿತಸ್ತಸ್ಯ ವಾಚ್ಯೇವೈಕಾ ಮೇನಿರ್ಭವತಿ ಪಾದಯೋರೇಕಾ ತ್ವಚ್ಯೇಕಾ ಹೃದಯ ಏಕೋಪಸ್ಥ ಏಕಾ ತಾಭಿರ್ಜ್ವಲಂತೀಭಿರ್ದೀಪ್ಯಮಾನಾಭಿರುಪೋದೇತಿ ರಾಜಾನಂ ಸ ಯದಾಹ ಕ್ವ ಭಗವೋಽವಾತ್ಸೀಸ್ತೃಣಾನ್ಯಸ್ಮಾ ಆಹರತೇತಿ ತೇನಾಸ್ಯ ತಾಂ ಶಮಯತಿ ಯಾಸ್ಯ ವಾಚಿ ಮೇನಿರ್ಭವತ್ಯಥ ಯದಸ್ಮಾ ಉದಕಮಾನಯಂತಿ ಪಾದ್ಯಂ ತೇನಾಸ್ಯ ತಾಂ ಶಮಯತಿ ಯಾಸ್ಯ ಪಾದಯೋರ್ಮೇನಿರ್ಭವತ್ಯಥ ಯದೇನಮಲಂ ಕುರ್ವಂತಿ ತೇನಾಸ್ಯ ತಾಂ ಶಮಯತಿ ಯಾಸ್ಯ ತ್ವಚಿ ಮೇನಿರ್ಭವತ್ಯಥ ಯದೇನಂ ತರ್ಪಯಂತಿ ತೇನಾಸ್ಯ ತಾಂ ಶಮಯತಿ ಯಾಸ್ಯ ಹೃದಯೇ ಮೇನಿರ್ಭವತ್ಯಥ ಯದಸ್ಯಾನಾರುದ್ಧೋ ವೇಶ್ಮಸು ವಸತಿ ತೇನಾಸ್ಯ ತಾಂ ಶಮಯತಿ ಯಾಸ್ಯೋಪಸ್ಥೇ ಮೇನಿರ್ಭವತಿ । ಸ ಏನಂ ಶಾಂತತನುರಭಿಹುತೋಽಭಿಪ್ರೀತಃ ಸ್ವರ್ಗಂ ಲೋಕಮಭಿವಹತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ ಸ ಏವೈನಮಶಾಂತತನುರನಭಿಹುತೋಽನಭಿಪ್ರೀತಃ ಸ್ವರ್ಗಾಲ್ಲೋಕಾನ್ನುದತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ॥ (ಐ. ಬ್ರಾ. ೪೦-೨೪)

ಈ ಪುರೋಹಿತನ ಪ್ರಭಾವವನ್ನು ಪ್ರಕಾರಾಂತರವಾಗಿ ವರ್ಣಿಸುವರು. ಇಲ್ಲಿ ಉಪಯೋಗಿಸಿರುವ ಮೇನಿಶಬ್ದಕ್ಕೆ ಕೋಪದಿಂದ ಕೆಡಕನ್ನುಂಟುಮಾಡಬೇಕೆಂಬ ಮನೋಭಾವವು ಎಂದರ್ಥವು. ಅಗ್ನಿಯ ಜ್ವಾಲೆಗಳು ಯಾವರೀತಿ

ಸ್ಪರ್ಶಮಾಡಿದವರನ್ನು ಸುಡುವವೋ ಅದರಂತೆ ಎಂದಭಿಪ್ರಾಯವು. ಆದ್ದರಿಂದ ಪುರೋಹಿತನಾದವನು ವೈಶ್ವಾನರನೆಂಬ ಅಗ್ನಿಗೆ ಸಮಾನನಾದವನು. ಇವನಲ್ಲಿ ಐದು ವಿಧವಾದ ಮೇನಿಗಳಿರುವವು ಎಂದರೆ, ಐದು ವಿಧವಾದ ಕೆಡಕನ್ನುಂಟುಮಾಡುವ ಶಕ್ತಿಸಾಮರ್ಥ್ಯಗಳಿರುವವು. ಅವುಗಳು ಯಾವುವೆಂದರೆ, ವಾಕ್ (ಮಾತು), ಪಾದಗಳು, ಚರ್ಮ, ಹೃದಯ, ಉಪಸ್ಥ ಎಂಬ ಸ್ಥಾನಗಳು. ಇವುಗಳಲ್ಲಿ ಕೆಡಕನ್ನುಂಟುಮಾಡುವ ಶಕ್ತಿಸಾಮರ್ಥ್ಯಗಳಿರುವವು. ಇವುಗಳನ್ನು ಪರಿಹರಿಸಿ ಪುರೋಹಿತನನ್ನು ಶಾಂತನನ್ನಾಗಿ ಮಾಡುವ ಕ್ರಮವು ಹೇಗೆಂದರೆ, ಪುರೋಹಿತನು ರಾಜನ ಬಳಿಗೆ ಬಂದಾಗ ರಾಜನು ಆ ಪುರೋಹಿತನನ್ನು ಆದರದಿಂದ ಸ್ವಾಗತಿಸಿ ಸತ್ಕರಿಸಿ, ಎಲೈ ಪುರೋಹಿತನೇ, ಇದುವರೆಗೂ ನೀನು ಎಲ್ಲಿ ಇದ್ದೆ ? ಎಲ್ಲಿಂದ ದಯಮಾಡಿಸಿರುವೆ ? ಎಂದು ಹಿತೋಕ್ತಿಗಳನ್ನು ನುಡಿದು ಸೇವಕರನ್ನು ಕುರಿತು ಎಲೈ ಪರಿಚಾರಕರೇ, ಪುರೋಹಿತರು ಕುಳಿತುಕೊಳ್ಳುವುದಕ್ಕಾಗಿ ಉತ್ತಮವಾದ ತೃಣನಿರ್ಮಿತವಾದ ಉತ್ತಮ ಕುಶಾಸನವನ್ನು ಬೇಗನೆ ತೆಗೆದುಕೊಂಡು ಬನ್ನಿ ಎಂದು ಹೇಳಬೇಕು. ಹೀಗೆ ಹೇಳುವುದರಿಂದ ಪುರೋಹಿತನಲ್ಲಿರುವ ವಾಕ್ಸಂಬಂಧವಾದ ಮೇನಿಯು (ಕೆಡಕನ್ನುಂಟುಮಾಡುವ ಶಕ್ತಿಯು) ಪರಿಹಾರವಾಗಿ ರಾಜನ ವಿಷಯದಲ್ಲಿ ಸಮಾಧಾನಗೊಂಡು ಅನುಗ್ರಹವನ್ನುಂಟುಮಾಡುವುದು. ಆ ಪುರೋಹಿತನನ್ನು ಸತ್ಕರಿಸುವುದಕ್ಕಾಗಿ ಎಂದರೆ ಪಾದಪ್ರಕ್ಷಾಳನೆಗಾಗಿ ಉದಕವನ್ನು ತಂದು ಉಪಚರಿಸುವುದರಿಂದ ಪಾದಗಳಲ್ಲಿರುವ ಮೇನಿಯು ಶಮನವಾಗುವುದು. ವಸ್ತ್ರಗಂಧಾದಿಗಳಿಂದ ಉಪಚರಿಸಿದರೆ ತ್ವಕ್ಸಂಬಂಧವಾದ (ಚರ್ಮದಲ್ಲಿರುವ) ಮೇನಿಯು ಶಾಂತವಾಗುವುದು. ಆ ಪುರೋಹಿತನಿಗೆ ಇಷ್ಟವಾದ ಧನಾದಿಗಳನ್ನು ಕೊಡುವುದರಿಂದ ಹೃದಯಗತವಾದ ಮೇನಿಯು ಶಾಂತವಾಗುವುದು. ಆ ರಾಜನು ಪುರೋಹಿತನನ್ನು ಕುರಿತು—ಸ್ವಾಮಿ, ಈ ರಾಜಗೃಹವೇ ತಮ್ಮದು. ಇಲ್ಲಿ ನಿಮಗೆ ಸರ್ವಸ್ವಾತಂತ್ರ್ಯವೂ ಇರುವುದು. ನಿಮಗೆ ಇಷ್ಟ ಬಂದಂತೆ ವರ್ತಿಸುತ್ತಾ ಇಲ್ಲಿ ಸುಖವಾಗಿರಬಹುದು. ಯಾರೂ ನಿಮಗೆ ಯಾವವಿಧವಾದ ತೊಂದರೆಯನ್ನೂ ಉಂಟು ಮಾಡುವುದಿಲ್ಲ. ಎಂದು ಮೊದಲಾದ ಉಪಚಾರೋಕ್ತಿಯನ್ನು ಹೇಳುವುದರಿಂದ ಉಪಸ್ಥಾಸಂಬಂಧವಾದ ಮೇನಿಯು ಪರಿಹಾರವಾಗುವುದು. ಆದ್ದರಿಂದ ಗೃಹಕ್ಕೆ ಬಂದ ಪುರೋಹಿತನ ವಿಷಯದಲ್ಲಿ ಈ ವಿಧವಾದ ಉಪಚಾರಗಳನ್ನು ಮಾಡಬೇಕು. ವಿಧ್ಯುಕ್ತವಾಗಿ ಉಪಚಾರಮಾಡಿದಲ್ಲಿ ಅಗ್ನಿಯು ಅಥವಾ ಪುರೋಹಿತನು ರಾಜನ ವಿಷಯದಲ್ಲಿ ಸೌಮ್ಯಸ್ವಭಾವವುಳ್ಳವನಾಗಿ ಅವನು ಮಾಡುವ ಹೋಮಾದಿಗಳಿಂದ ಅವನಿಗೆ ಸ್ವರ್ಗಾದಿ ಇಷ್ಟಾರ್ಥಗಳನ್ನು ಸಾಧಿಸಿಕೊಡುವನು. ಹಾಗಿಲ್ಲದೆ ಮನೆಗೆ ಬಂದ ಪುರೋಹಿತನನ್ನು ತಿರಸ್ಕಾರಭಾವದಿಂದ ಅನಾದರಣೆಮಾಡಿದಲ್ಲಿ ಆ ರಾಜನಿಗೆ ಸ್ವರ್ಗಾದಿಪ್ರಾಪ್ತಿಯಾಗಲಿ, ವೀರ್ಯ, ಪರಾಕ್ರಮ; ಬಲ, ರಾಷ್ಟ್ರ, ಪ್ರಜೆಗಳು ಮುಂತಾದ ಯಾವ ಸುಖಸಂಪತ್ತುಗಳೂ ಲಭಿಸುವುದಿಲ್ಲ.

[ಪುರೋಹಿತನನ್ನು ನೇಮಿಸಿಕೊಂಡು ಅವನ ಸಹಾಯದಿಂದ ಯಜ್ಞಯಾಗಾದಿಗಳನ್ನು ಮಾಡುವ ರಾಜನನ್ನು ಅಗ್ನಿಯು ರಕ್ಷಿಸುವನು]

> ಅಗ್ನಿರ್ವಾ ಏಷ ವೈಶ್ವಾನರಃ ಪಂಚಮೇನಿರ್ಯತ್ಪುರೋಹಿತಸ್ತಾಭೀ ರಾಜಾನಂ ಪರಿಗೃಹ್ಯ ತಿಷ್ಠತಿ ಸಮುದ್ರ ಇವ ಭೂಮಿಂ ।
>
> (ಐ. ಬ್ರಾ. ೪೦-೫)

ರಾಜನು ನೇಮಿಸಿಕೊಳ್ಳುವ ಪುರೋಹಿತನಾದ ಬ್ರಾಹ್ಮಣನು ಐದು ವಿಧವಾದ ಮೇನಿಗಳಿಂದ ಯುಕ್ತನಾಗಿ ಎಂದರೆ ನಿಗ್ರಹಾನುಗ್ರಹಶಕ್ತಿಗಳುಳ್ಳ ವೈಶ್ವಾನರಾಗ್ನಿಸ್ವರೂಪವಾಗಿಯೇ ಇರುವನು. ಆದರೆ ಆ ಪುರೋಹಿತನು ಕೆಡಕು ಮಾಡುವ ತನ್ನ ಶಕ್ತಿಸಾಮರ್ಥ್ಯಗಳನ್ನು ರಾಜನ ವಿಷಯದಲ್ಲಿ ಉಪಯೋಗಿಸದೆ ಶಾಂತಸ್ವಭಾವವುಳ್ಳವನಾಗಿ

ರಾಜನನ್ನು ಸರ್ವವಿಧದಲ್ಲಿಯೂ ಸಂರಕ್ಷಿಸುತ್ತಿರುವನು. ಭೂಮಿಯು ಸುತ್ತಲೂ ಸಮುದ್ರದಿಂದ ಸುತ್ತುವರೆಯಲ್ಪಟ್ಟು ಹೇಗೆ ಸುರಕ್ಷಿತವಾಗಿರುವುದೋ ಅವರಂತೆ ಪುರೋಹಿತಸಹಿತನಾದ ರಾಜನು ಶತ್ರುಬಾಧೆ ಮೊದಲಾದುವುಗಳಿಂದ ತೊಂದರೆಯಿಲ್ಲದೆ ಸುರಕ್ಷಿತನಾಗಿರುವನು.

**ಅಯುುವಮಾರ್ಯಸ್ಯ ರಾಷ್ಟ್ರಂ ಭವತಿ ನೈನಂ ಪುರಾಯುಷಃ ಪ್ರಾಣೋ ಜಹಾತ್ಯಜರಸಂ ಜೀವತಿ ಸರ್ವಮಾಯುರೇತಿ ನ ಪುನರ್ಮ್ರಿಯತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ।**

ಇಂತಹ ರಾಜನ, ಎಂದರೆ, ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದು ಧರ್ಮಾಧರ್ಮಗಳನ್ನು ವಿವೇಚಿಸಿ ಬೋಧಿಸಲು ಶಕ್ತನಾಗಿರುವವನೂ, ರಾಜ್ಯಕ್ಕೆ ಅಪಾಯವಾಗದಂತೆ ರಾಜ್ಯಪರಿಪಾಲನೆ ಮಾಡುವುದರಲ್ಲಿ ಕಾಲೋಚಿತವಾದ ಉಪದೇಶಾದಿಗಳಿಂದ ರಾಜನಿಗೆ ಸಹಾಯಕನೂ ಆದ ಬ್ರಾಹ್ಮಣಪುರೋಹಿತನನ್ನು ಪಡೆದಿರುವ ರಾಜನ ರಾಜ್ಯವು ಯಾವಾಗಲೂ ಸುರಕ್ಷಿತವಾಗಿರುವುದು. ರಾಜ್ಯದಲ್ಲಿ ಅಶಾಂತಿಯು ತಲೆದೋರುವುದಿಲ್ಲ. ಪ್ರಜೆಗಳು ಸುಖದಿಂದಿದ್ದು ರಾಜ್ಯವು ಈತಿಬಾಧೆರಹಿತವಾಗಿರುವುದು. ಅವನ ರಾಜ್ಯದಲ್ಲಿ ಯುವಕರು ಮೃತ್ಯುವಶರಾಗುವುದಿಲ್ಲ. ಎಂದರೆ ನೂರುವರ್ಷ ಪೂರ್ತಿಯಾಗುವವರಿಗೂ ಯಾರಿಗೂ ಅಪಮೃತ್ಯುಭಯವಿಲ್ಲ. ರಾಜನಿಗೂ ಸಹ ಅಪಮೃತ್ಯುಭಯವಿಲ್ಲದೆ ದೀರ್ಘಾಯುಸ್ಸನ್ನು ಪಡೆದು ಜೀವಿಸುವನು. ವೃದ್ಧನಾಗುವವರೆಗೂ ರೋಗಾದಿರಹಿತನಾಗಿ ಸುಖದಿಂದ ಜೀವಿಸುವನು. ತನಗೆ ನಿರ್ದಿಷ್ಟವಾಗಿರುವ ಪರ್ಯಂತರ ಎಂದರೆ ನೂರು ವರ್ಷಗಳವರೆಗೆ ಜೀವಿಸಿರುವನು. ಆ ರಾಜನು ಪುರೋಹಿತನಿಂದ ತತ್ತ್ವೋಪದೇಶವನ್ನು ಪಡೆಯುವುದರಿಂದ ಮರಣಾನಂತರ ಸದ್ಗತಿಯನ್ನು ಪಡೆಯುವುದಲ್ಲದೆ ಪುನರ್ಜನ್ಮದ ಮತ್ತು ಪುನರ್ಮರಣದ ಭಯವು ಅವನಿಗಿರುವುದಿಲ್ಲ.

**ಕ್ಷತ್ರೇಣ ಕ್ಷತ್ರಂ ಜಯತಿ ಬಲೇನ ಬಲಮಶ್ನುತೇ ಯಸ್ಯೈವಂ ವಿದ್ವಾನ್ ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ । ತಸ್ಮೈ ವಿಶಃ ಸಂಜಾನತೇ ಸಂಮುಖಾ ಏಕಮನಸೋ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥**

(ಐ. ಬ್ರಾ. ೪೦–೨೫)

ಇಂತಹ ಉತ್ತಮಪುರೋಹಿತನಿಂದ ಯುಕ್ತನಾದ ರಾಜನು ಉತ್ತಮನಾದ ಪುತ್ರನನ್ನು ಪಡೆದು ತನ್ನ ಶೌರ್ಯ ಪರಾಕ್ರಮಗಳಿಂದ ಶತ್ರುರಾಜನನ್ನು ನಿಗ್ರಹಿಸುವನು. ಪರಕೀಯ ಸೈನ್ಯಬಲವನ್ನು ತನ್ನ ಸ್ವಸೈನ್ಯಬಲದಿಂದ ಸೋಲಿಸುವನು. ಈ ರಾಜನ ರಾಜ್ಯದಲ್ಲಿ ಪ್ರಜೆಗಳು ಏಕಮನಸ್ಕರಾಗಿ ಎಂದರೆ ಪರಸ್ಪರ ಸಹಕಾರದಿಂದ ವರ್ತಿಸುತ್ತಾ ರಾಜನ ಆಜ್ಞಾನುವರ್ತಿಗಳಾಗಿರುವರು.

[ಪುರೋಹಿತನ ಯೋಗ್ಯತೆ ಇತ್ಯಾದಿ—ಮೂರು ವಿಧ ಪುರೋಹಿತರು—ಪುರೋಹಿತಸ್ಥಾನಕ್ಕೆ ಇರುವ ಅರ್ಹತೆ—ಯಾವ ಮಂತ್ರಪಠನದಿಂದ ಮತ್ತು ಯಾವ ಕರ್ಮದಿಂದ ರಾಜನು ಪುರೋಹಿತನನ್ನು ನೇಮಿಸಿಕೊಳ್ಳುವನು ಇತ್ಯಾದಿ.]

**ಯೋ ಹ ವೈ ತ್ರೀನ್ಪುರೋಹಿತಾಂಸ್ತ್ರೀನ್ಪುರೋಧಾತೄನ್ವೇದ ಸ ಬ್ರಾಹ್ಮಣಃ ಪುರೋಹಿತಃ ಸ ವದೇತ ಪುರೋಧಾಯಾ ಅಗ್ನಿರ್ವಾವ ಪುರೋಹಿತಃ ಪೃಥಿವೀ ಪುರೋಧಾತಾ ವಾಯುರ್ವಾವ ಪುರೋಹಿತೋಽನ್ತರಿಕ್ಷಂ ಪುರೋಧಾತಾದಿತ್ಯೋ ವಾವ ಪುರೋಹಿತೋ ದ್ಯೌಃ ಪುರೋಧಾತೈಷ ಹ ವೈ ಪುರೋಹಿತೋ ಯ ಏವಂ ವೇದಾಥ ಸ ತಿರೋಹಿತೋ ಯ ಏವಂ ವೇದ ।**

(ಐ. ಬ್ರಾ. ೪೦–೨೭)

ರಾಜನಾದವನು ತನ್ನ ಹಿತೋಪದೇಶಾರ್ಥವಾಗಿ ನೇಮಿಸಿಕೊಳ್ಳುವ ಬ್ರಾಹ್ಮಣನಿಗೆ ಪುರೋಹಿತನೆಂದು ಹೆಸರು. ಅಂತಹ ಪುರೋಹಿತನನ್ನು ನೇಮಿಸುವ ರಾಜನಿಗೆ ಪುರೋಧಾತಾ ಎಂದು ಹೆಸರು. ಎಂದರೆ ಪುರೋಹಿತನು ಮತ್ತು ಪುರೋಹಿತನನ್ನು ನೇಮಿಸುವವನು ಎಂದು ಎರಡು ವಿಧ. ದೇವತೆಗಳಲ್ಲಿ ಮೂರು ಮಂದಿ ಪುರೋಹಿತರೂ ಅವರನ್ನು ನೇಮಿಸುವ ಮೂರು ಮಂದಿ ಪುರೋಧಾತೃಗಳೂ ಇರುವರು. ಈ ವಿಧವಾದ ಅರ್ಥವನ್ನು ತಿಳಿದಿರುವ ಬ್ರಾಹ್ಮಣನೇ ಪುರೋಹಿತನಾಗಲು ಯೋಗ್ಯನು. ಆ ಬ್ರಾಹ್ಮಣನು ಪೌರೋಹಿತ್ಯವನ್ನು ಮಾಡುವುದಕ್ಕಾಗಿ— ಅಗ್ನಿರ್ವಾವ ಪುರೋಹಿತಃ ಪೃಥಿವೀ ಪುರೋಧಾತಾ । ವಾಯುರ್ವಾವ ಪುರೋಹಿತಃ ಅಂತರಿಕ್ಷಂ ಪುರೋಧಾತಾ । ಆದಿತ್ಯೋ ವಾವ ಪುರೋಹಿತಃ ದ್ಯೌಃ ಪುರೋಧಾತಾ ಎಂಬ ಮಂತ್ರವನ್ನು ಪಠಿಸಬೇಕು. ಎಂದರೆ, ದೇವತೆಗಳಲ್ಲಿ ಅಗ್ನಿಯು ಪುರೋಹಿತನು, ಪೃಥಿವಿಯು ಪುರೋಧಾತೃವು (ಪುರೋಹಿತನನ್ನು ನೇಮಿಸಿಕೊಳ್ಳುವ ವ್ಯಕ್ತಿಯು); ವಾಯುವು ಪುರೋಹಿತನು, ಅಂತರಿಕ್ಷವು ಪುರೋಧಾತೃವು; ಆದಿತ್ಯನು ಪುರೋಹಿತನು, ದ್ಯೌಃ (ಸ್ವರ್ಗವು) ಪುರೋಧಾತೃವು ಎಂದು ಈ ಮಂತ್ರದ ಅರ್ಥವು. ಈ ಮಂತ್ರಾರ್ಥವನ್ನು ಚೆನ್ನಾಗಿ ತಿಳಿದವನು ಪೌರೋಹಿತ್ಯ ಮಾಡಲು ಅರ್ಹನು ಇದನ್ನು ತಿಳಿಯದ ಪುರುಷನು ಪುರೋಹಿತಪದವಿಗೆ ಅರ್ಹನಲ್ಲ.

> ತಸ್ಮೈ ರಾಜಾ ಮಿತ್ರಂ ಭವತಿ ದ್ವಿಷಂತಮುಪಬಾಧತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರ-ಗೋಪಃ ಪುರೋಹಿತಃ ।

ಮೇಲೆ ಹೇಳಿದ ಗುಣಗಳಿಂದ ಯುಕ್ತನಾದ ಪುರೋಹಿತನನ್ನು ಪಡೆದಿರುವ ರಾಜನು ಇತರ ದೇಶಗಳ ರಾಜರೊಡನೆ ಸ್ನೇಹದಿಂದಿರುವನು. ಆ ರಾಜರೂ ಈ ರಾಜನೊಡನೆ ಸ್ನೇಹವನ್ನೂ ಬಂಧುತ್ವವನ್ನೂ ಪಡೆಯಲಿಚ್ಛಿಸುವರು. ಹಾಗೆಯೇ ತನಗೆ ಶತ್ರುವಾದ ರಾಜನನ್ನು ಪುರೋಹಿತಸಹಿತನಾದ ರಾಜನು ಸೋಲಿಸುವನು. ಆದ್ದರಿಂದ ಸಮಸ್ತವನ್ನೂ ತಿಳಿದ ಬ್ರಾಹ್ಮಣಪುರೋಹಿತನು ರಾಷ್ಟ್ರದ ರಕ್ಷಣೆಗೂ ಅಭಿವೃದ್ಧಿಗೂ ಅವಶ್ಯಕವು.

> ಕ್ಷತ್ರೇಣ ಕ್ಷತ್ರಂ ಜಯತಿ ಬಲೇನ ಬಲಮಶ್ನುತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಸ್ತಸ್ಮೈ ವಿಶಃ ಸಂಜಾನತೇ ಸಂಮುಖಾ ಏಕಮನಸೋ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ।

ಇಂತಹ ಉತ್ತಮಜ್ಞಾನಿಯಾದ ಬ್ರಾಹ್ಮಣಪುರೋಹಿತನಿಂದ ಯುಕ್ತನಾದ ರಾಜನು ಶ್ರೇಷ್ಠನಾದ ಮತ್ತು ಪರಾಕ್ರಮವುಳ್ಳ ಪುತ್ರನನ್ನು ಪಡೆದು ತನ್ನ ಶೌರ್ಯಪರಾಕ್ರಮಗಳಿಂದ ಶತ್ರುರಾಜನನ್ನು ನಿಗ್ರಹಿಸುವನು. ಪರಕೀಯ ಸೈನ್ಯ ಬಲವನ್ನು ತನ್ನ ಸ್ವಸೈನ್ಯಬಲದಿಂದ ಸೋಲಿಸುವನು. ಈ ರಾಜನ ರಾಜ್ಯದಲ್ಲಿ ಪ್ರಜೆಗಳು ಏಕಮನಸ್ಕರಾಗಿ ಎಂದರೆ ರಾಜನೂ ಪ್ರಜೆಗಳೂ ಪರಸ್ಪರ ಸಹಕಾರದಿಂದ ವರ್ತಿಸುತ್ತಾ ರಾಜನ ಆಜ್ಞಾನುವರ್ತಿಗಳಾಗಿ ಸುಖದಿಂದಿರುವರು.

[ರಾಜನು ಪಠಿಸುವ ಪುರೋಹಿತವರಣಮಂತ್ರ ಇತ್ಯಾದಿ.]

> ಭೂರ್ಭುವಃ ಸ್ವರೋಮಮೋಽಹಮಸ್ಮಿ ಸ ತ್ವಂ ಸ ತ್ವಮಸ್ಯಮೋಽಹಂ ದ್ಯೌರಹಂ ಪೃಥಿವೀ ತ್ವಂ ಸಾಮಾಹಮೃಕ್ತ್ವಂ ತಾವೇಹ ಸಂವಹಾವಹೈ । ಪುರಾಣ್ಯಸ್ಮಾನ್ಮಹಾಭಯಾತ್ । ತನೂರಸಿ ತನ್ವಂ ಮೇ ಪಾಹಿ ।

ಈ ಮಂತ್ರವನ್ನು ಪುರೋಹಿತನನ್ನು ವರಣಮಾಡುವಾಗ (ನೇಮಿಸುವಾಗ) ಪಠಿಸಬೇಕಾಗಿರುವುದು. **ಭೂಃ ಭುವಃ ಸ್ವಃ** ಎಂಬ ಶಬ್ದಗಳು ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಲೋಕಗಳ ಅಭಿಮಾನಿದೇವತೆಗಳನ್ನು ಸೂಚಿಸುವವು. ಓಂ ಎಂಬ ಪ್ರಣವವು ಪರಮಾತ್ಮನನ್ನು ನಿರ್ದೇಶಿಸುವುದು. ಈ ದೇವತೆಗಳೆಲ್ಲಾ ನನ್ನನ್ನು ಅನುಗ್ರಹಿಸಲಿ ಎಂದಭಿಪ್ರಾಯವು. ಪುರೋಹಿತನಾದ ನಾನು ದ್ಯು (ಸ್ವರ್ಗ) ಲೋಕಸ್ವರೂಪನು, ನೀನು ಭೂಲೋಕಸ್ವರೂಪ ನಾಗಿರುವೆ. ಮತ್ತು ನೀನು ಭೂಲೋಕಸ್ವರೂಪನಾಗಿರುವೆ, ನಾನು ಸ್ವರ್ಗಲೋಕಸ್ವರೂಪನಾಗಿರೆ (ವಿಷಯವನ್ನು ಒತ್ತಿ ಹೇಳುವುದಕ್ಕಾಗಿ ಈ ವಾಕ್ಯವು ಎರಡಾವರ್ತಿ ಪಠಿತವಾಗಿದೆ. ಅದರಂತೆಯೇ ನಾನು ಸಾಮವೇದಸ್ವರೂಪನು, ನೀನು ಋಗ್ವೇದಸ್ವರೂಪನು. ನಾವಿಬ್ಬರೂ ಈ ರಾಷ್ಟ್ರವನ್ನೂ (ದೇಶವನ್ನೂ) ಈ ದೇಶದ ಗ್ರಾಮಗಳನ್ನೂ ರಕ್ಷಿಸುವ ಕಾರ್ಯದಲ್ಲಿ ಆಸಕ್ತರಾಗೋಣ. ಎಂದರೆ ರಾಜ್ಯಭಾರನಿರ್ವಹಣಕಾರ್ಯದಲ್ಲಿ ಪರಸ್ಪರ ಸಹಾಯಮಾಡೋಣ. ನೀನು (ಪುರೋಹಿತ) ನನ್ನ (ರಾಜ) ಶರೀರವಾಗಿರುವೆ. ಆದುದರಿಂದ ನೀನು ನನ್ನ ಶರೀರವನ್ನು ಈ ಲೋಕ ಮತ್ತು ಪರಲೋಕಸಂಬಂಧವಾದ ಭಯಾದಿಗಳಿಂದ ರಕ್ಷಿಸಿ ಕಾಪಾಡು. ಇದು ರಾಜನು ಪಠಿಸುವ ಮಂತ್ರವು. ಈ ರೀತಿ ರಾಜನು ಪುರೋಹಿತನನ್ನು ಉದ್ದೇಶಿಸಿ ಹೇಳಿದ ಮೇಲೆ ಪುರೋಹಿತನು ರಾಜನು ತನಗೆ ಕುಳಿತುಕೊಳ್ಳುವುದಕ್ಕಾಗಿ ಸಿದ್ಧಪಡಿಸಿರುವ ಆಸನವನ್ನು ಅಭಿಮಂತ್ರಿಸುವ ಮಂತ್ರವನ್ನು ಪಠಿಸುವನು.

**ಯಾ ಓಷಧೀಃ ಸೋಮರಾಜ್ಞೀರ್ಬಹ್ವೀಃ ಶತವಿಚಕ್ಷಣಾಃ ।**
**ತಾಮುಹ್ಯಮಸ್ಮಿನ್ನಾಸನೇಽಚ್ಛಿದ್ರಂ ಶರ್ಮ ಯಚ್ಛತ ॥**

ಪುರೋಹಿತನು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿರುವ ಆಸನವನ್ನು ತೃಣ, ಕುಶ, ದರ್ಭೆ, ಕಾಷ್ಠ ಮೊದಲಾದ ಸಸ್ಯ ವರ್ಗದ ಪದಾರ್ಥಗಳಿಂದ ರಚಿತವಾಗಿರುವುದರಿಂದ ಸಸ್ಯವರ್ಗ ಎಂದರೆ ಓಷಧಿವನಸ್ಪತಿಗಳನ್ನು ಈ ಮಂತ್ರದಲ್ಲಿ ಸ್ತುತಿಸಲಾಗಿದೆ. ಈ ಆಸನಕ್ಕಾಗಿ ಉಪಯೋಗಿಸಲ್ಪಟ್ಟಿರುವ ಓಷಧಿಗಳಿಗೆ (ತೃಣ, ದರ್ಭೆ ಮೊದಲಾದವುಗಳಿಗೆ) ಸೋಮನು ದೇವತೆಯು, ಈ ಓಷಧಿವನಸ್ಪತಿಗಳೆಲ್ಲಾ ಸೋಮದೇವತೆಯ ಅಧೀನಕ್ಕೊಳಪಟ್ಟಿರುವುದು. ಇವುಗಳು ನಾನಾಜಾತಿಗೆ ಸೇರಿದ ಸಸ್ಯಗಳು, ಅನೇಕ ಶಾಖೆ (ಕೊಂಬೆ) ಗಳಿಂದ ಸಹಿತವಾದವು. ಈ ಆಸನ ನಿರ್ಮಾಣದಲ್ಲಿ ಉಪಯೋಗಿಸಿರುವ ಇಂತಹ ಓಷಧಿಗಳು ಪುರೋಹಿತನಾದ ನನಗೆ ಯಾವ ಬಾಧೆಯೂ ಇಲ್ಲದೆ ಸುಖವನ್ನುಂಟು ಮಾಡಲಿ. ಮುಳ್ಳು ಮುಂತಾದ ಹಿಂಸೆಗಳಿಲ್ಲದಂತೆಯೂ ಮೆತ್ತಗಿರುವಂತೆಯೂ ಆಗಿ ಸುಖವನ್ನುಂಟುಮಾಡಲಿ. ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು. ಈ ರೀತಿ ಆಸನವನ್ನು ಅಭಿಮಂತ್ರಿಸುವ ಮಂತ್ರವನ್ನು ಉಚ್ಚರಿಸಿ ಆಸನದಲ್ಲಿ ಕುಳಿತುಕೊಳ್ಳುವಾಗ ಮುಂದಿನ ಮಂತ್ರವನ್ನು ಪಠಿಸುವನು.

**ಯಾ ಓಷಧೀಃ ಸೋಮರಾಜ್ಞೀರ್ವಿಷ್ಠಿತಾಃ ಪೃಥಿವೀಮನು ।**
**ತಾ ಮುಹ್ಯಮಸ್ಮಿನ್ನಾಸನೇಽಚ್ಛಿದ್ರಂ ಶರ್ಮ ಯಚ್ಛತ ॥**

ಸೋಮರಾಜನ ಅಧಿಕಾರಕ್ಕೊಳಪಟ್ಟು ಯಾವ ಓಷಧಿಗಳಿರುವವೋ ಅವುಗಳಿಂದ ನಿರ್ಮಿತವಾದ ಈ ಆಸನವನ್ನು ಭೂಮಿಯ ಮೇಲೆ ಹಾಸಿ ಕುಳಿತುಕೊಳ್ಳುವುದಕ್ಕಾಗಿ ಸಿದ್ಧಪಡಿಸಲಾಗಿದೆ. ನಾನು ಈ ಆಸನದಲ್ಲಿ ಕುಳಿತುಕೊಂಡಾಗ ಈ ಓಷಧಿಗಳು ನನಗೆ ಅವಿಚ್ಛಿನ್ನವಾದ ಸುಖವನ್ನುಂಟುಮಾಡಲಿ ಎಂದು ಮಂತ್ರಾಭಿಪ್ರಾಯವು.

ಅಸ್ಮಿನ್ರಾಷ್ಟ್ರೇ ಶ್ರಿಯಮಾವೇಶಯಾಮ್ಯತೋ ದೇವೀಃ ಪ್ರತಿಪಶ್ಯಾಮ್ಯಾಪಃ ।

ಪುರೋಹಿತನ ಪಾದಪ್ರಕ್ಷಾಳನಾರ್ಥವಾಗಿ ತಂದು ಸಿದ್ಧವಾಗಿರುವ ಉದಕವನ್ನು ನೋಡಿ ಪುರೋಹಿತನು ಈ ಮಂತ್ರ ವನ್ನು ಪಠಿಸುವನು. ಎಲೈ ಉದಕಾಭಿಮಾನಿದೇವತೆಗಳೇ, ಈಗ ನಾನು ಈ ದೇಶದ ರಾಜನಿಗೆ ಪುರೋಹಿತ ನಾಗಿರುವೆನು. ಈ ರಾಷ್ಟ್ರವು ಧನಧಾನ್ಯಾದಿಸಂಪತ್ತುಗಳಿಂದ ಕೂಡಿ ಸುಖದಿಂದಿರುವುದಕ್ಕಾಗಿಯೂ ಅದರ ಶ್ರೇಯೋಭಿ ವೃದ್ಧಿಗಾಗಿಯೂ ಸತತವೂ ಪ್ರಯತ್ನಿಸುವೆನು. ಆದುದರಿಂದ ನನಗೆ ಈ ಕಾರ್ಯದಲ್ಲಿ ಸಹಾಯಭೂತವಾದ ಈ ಉದಕಗಳನ್ನು (ಉದಕಾಭಿಮಾನಿದೇವತೆಗಳಾದ ನಿಮ್ಮನ್ನು) ನೋಡುವೆನು.

> ದಕ್ಷಿಣಂ ಪಾದಮವನೇನಿಜೇಽಸ್ಮಿನ್ರಾಷ್ಟ್ರ ಇಂದ್ರಿಯಂ ದಧಾಮಿ । ಸವ್ಯಂ ಪಾದಮವನೇನಿಜೇಽಸ್ಮಿನ್ರಾಷ್ಟ್ರ ಇಂದ್ರಿಯಂ ವರ್ಧಯಾಮಿ । ಪೂರ್ವಮನ್ಯಮಪರಮನ್ಯಂ ಪಾದಾವವನೇನಿಜೇ । ದೇವಾ ರಾಷ್ಟ್ರಸ್ಯ ಗುಪ್ತ್ಯಾ ಅಭಯಸ್ಯಾವರುದ್ಧ್ಯೈ । ಆಪಃ ಪಾದಾವನೇಜನೀರ್ದ್ವಿಷಂತಂ ನಿರ್ದಹಂತು ಮೇ ॥
>
> (ಐ. ಬ್ರಾ. ೪೦-೨೭)

ನೀರಿನಿಂದ ಪುರೋಹಿನು ಪಾದಪ್ರಕ್ಷಾಳನಮಾಡುವಾಗ (ಕಾಲುಗಳನ್ನು ತೊಳೆದುಕೊಳ್ಳುವಾಗ) ಮೇಲೆ ಹೇಳಿದ ಮಂತ್ರವನ್ನು ಪಠಿಸುವನು. ಎಲೈ ಉದಕಗಳೇ ನಾನು ಮೊದಲು ನನ್ನ ಬಲಗಾಲನ್ನು ತೊಳೆದುಕೊಳ್ಳುವೆನು. ಅದರಿಂದ ರಾಷ್ಟ್ರದ ಜನಗಳ ಮತ್ತು ಪ್ರಾಣಿಗಳ ಇಂದ್ರಿಯಾದಿಗಳ (ಶರೀರಾವಯವಗಳ) ಪಟುತ್ವವನ್ನೂ ಧನವನ್ನೂ ಒದಗಿಸಿಕೊಡುವೆನು. ಅನಂತರ ಎಡಗಾಲನ್ನು ತೊಳೆದುಕೊಳ್ಳುವೆನು. ಆದರಿಂದ ಪ್ರಾಣಿಗಳ ಇಂದ್ರಿಯಪಾಲನವನ್ನೂ ಧನವನ್ನೂ ಅಭಿವೃದ್ಧಿಪಡಿಸುವೆನು. ನಾನು ಈ ರೀತಿ ಕಾಲುಗಳನ್ನು ತೊಳೆದುಕೊಂಡದ್ದರಿಂದ ದೇವತೆಗಳು ಪ್ರೀತರಾಗಿ ಈ ರಾಷ್ಟ್ರವನ್ನು ಕಳ್ಳರ ಭಯವೇ ಮೊದಲಾದ ಬಾಧೆಗಳಿಂದ ರಕ್ಷಿಸಿ ಕಾಪಾಡಲಿ. ಮತ್ತೂ ನನ್ನ ಪಾದಪ್ರಕ್ಷಾಳನೆಗಾಗಿ ಉಪಯೋಗಿಸಿದ ಈ ಉದಕಗಳು ನನ್ನ ಶತ್ರುಗಳನ್ನು ನಿಶ್ಶೇಷವಾಗಿ ನಾಶಮಾಡಲಿ ಎಂದು ಈ ಮಂತ್ರಾಭಿಪ್ರಾಯವು.

---

॥ ಸಂಹಿತಾಪಾಠಃ ॥

ಸ ಇತ್ಕ್ಷೇತಿ ಸುಧಿತ ಓಕಸಿ ಸ್ವೇ ತಸ್ಮಾ ಇಳಾ ಪಿನ್ವತೇ ವಿಶ್ವದಾನೀಂ ।
ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ಬ್ರಹ್ಮಾ ರಾಜನಿ ಪೂರ್ವ ಏತಿ ॥ ೮ ॥

॥ ಪದಪಾಠಃ ॥

ಸಃ । ಇತ್ । ಕ್ಷೇತಿ । ಸುಽಧಿತಃ । ಓಕಸಿ । ಸ್ವೇ । ತಸ್ಮೈ । ಇಳಾ । ಪಿನ್ವತೇ । ವಿಶ್ವಽದಾನೀಂ ।
ತಸ್ಮೈ । ವಿಶಃ । ಸ್ವಯಂ । ಏವ । ನಮಂತೇ । ಯಸ್ಮಿನ್ । ಬ್ರಹ್ಮಾ । ರಾಜನಿ । ಪೂರ್ವಃ । ಏತಿ ॥ ೮ ॥

॥ ಸಾಯಣಭಾಷ್ಯಂ ॥

ಸ ಇತ್ಸ ಏವ ಕ್ಷೇತಿ । ನಿವಸತಿ । ಸುಧಿತಃ ಸುಷ್ಠು ತೃಪ್ತಃ ಸನ್ ಸ್ವೇ ಸ್ವಕೀಯೇ ಏವಾಕಸಿ ಸದನೇ । ಸ ಏವ ಸಮೃದ್ಧೋ ನಿರ್ಬಾಧಃ ಸನ್ ಸುಖೇನಾಸ್ತೇ । ತಸ್ಮಾ ಇಳಾ ಭೂಮಿರ್ವಿಶ್ವದಾನೀಂ ಸರ್ವಕಾಲಂ ಪಿನ್ವತೇ । ವರ್ಧತೇ ಫಲೈಃ । ತಸ್ಮೈ ವಿಶಃ ಪ್ರಜಾಃ ಸ್ವಯಮೇವ ನಮಂತೇ । ಪ್ರಣತಾ ಭವಂತಿ । ದಂಡನಮಂತರೇಣ ಸ್ವಯಮೇವ ದತ್ತಕರಾ ಭವಂತಿ । ಯಸ್ಮಿನ್ರಾಜನಿ ಬ್ರಹ್ಮಾ ಪೂರ್ವಃ ಪ್ರಥಮಃ ಪೂಜ್ಯಃ ಸನ್ನೇತಿ । ಗಚ್ಛತಿ । ವರ್ತತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯಸ್ಮಿನ್ ರಾಜನಿ—ಯಾವ ರಾಜನಲ್ಲಿಗೆ । ಬ್ರಹ್ಮಾ—ಬ್ರಹ್ಮನು (ಬ್ರಹ್ಮಶಕ್ತಿಯುಳ್ಳ ಬ್ರಾಹ್ಮಣನು) । ಪೂರ್ವಃ—ಪ್ರಥಮ ಪೂಜ್ಯಸ್ಥಾನವನ್ನಲಂಕರಿಸಿ । ಏತಿ—ಹೋಗಿ ಸೇರುವನೋ । ಸ ಇತ್—ಅದೇ ರಾಜನು । ಸುಧಿತಃ—ಅತ್ಯಂತ ಶ್ರೇಷ್ಠವಾದ ತೃಪ್ತಿಯನ್ನು ಹೊಂದಿ । ಸ್ವೇ ಓಕಸಿ—ತನ್ನ ಸ್ವಂತ ನಿವಾಸಸ್ಥಾನದಲ್ಲಿ । ಕ್ಷೇತಿ—ಸುಖವಾಗಿ ವಾಸಮಾಡುತ್ತಾನೆ । ತಸ್ಮೈ—ಆ ರಾಜನಿಗೆ । ಇಳಾ—ಭೂಮಿಯು । ವಿಶ್ವದಾನೀಂ—ಸರ್ವಕಾಲವೂ । ಪಿನ್ವತೇ—ಫಲಗಳಿಂದ ವೃದ್ಧಿಯನ್ನು ಹೊಂದುತ್ತವೆ । ತಸ್ಮೈ—ಆ ರಾಜನಿಗೆ । ವಿಶಃ—ಸಕಲ ಪ್ರಜೆಗಳೂ । ಸ್ವಯಮೇವ—ಸ್ವಪ್ರೇರಣೆಯಿಂದಲೇ । ನಮಂತೇ—ನಮಸ್ಕಾರಮಾಡುತ್ತಾರೆ.

॥ ಭಾವಾರ್ಥ ॥

ಯಾವ ಕ್ಷತ್ರಿಯನಲ್ಲಿಗೆ ಬ್ರಹ್ಮನು ಪ್ರಥಮಪೂಜ್ಯಸ್ಥಾನವನ್ನಲಂಕರಿಸಿ ಹೋಗಿ ಸೇರುವನೋ, ಅದೇ ರಾಜನು ಅತ್ಯಂತ ಶ್ರೇಷ್ಠವಾದ ತೃಪ್ತಿಯನ್ನು ಹೊಂದಿ ತನ್ನ ಸ್ವಂತ ನಿವಾಸಸ್ಥಾನದಲ್ಲಿ ಸುಖವಾಗಿ ವಾಸಮಾಡುತ್ತಾನೆ. ಆ ರಾಜನಿಗೆ ಭೂಮಿಯು ಸರ್ವದಾ ಸಸ್ಯಸಂಪತ್ತುಗಳಿಂದ ಕೂಡಿ ಉತ್ತಮವಾದ ಫಲವನ್ನು ಕೊಡುತ್ತದೆ. ಅದೇ ರಾಜನಿಗೆ ಸಕಲ ಪ್ರಜೆಗಳೂ ಸಹ ಸ್ವಸಂತೋಷದಿಂದಲೇ ಪ್ರೇರಿತರಾಗಿ ನಮಸ್ಕಾರವನ್ನರ್ಪಿಸುವರು.

## English Translation.

Verily he abides prosperous in his own abode; for him the earth bears fruit at all seasons; to him (his) subjects willingly pay homage, the Brahmana first, (duly reverenced), repairs,

॥ ಸಂಹಿತಾಪಾಠಃ ॥

ಅಪ್ರತೀತೋ ಜಯತಿ ಸಂ ಧನಾನಿ ಪ್ರತಿಜನ್ಯಾನ್ಯುತ ಯಾ ಸಜನ್ಯಾ ।

ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥

॥ ಪದಪಾಠಃ ॥

ಅಪ್ರತಿऽಇತಃ । ಜಯತಿ । ಸಂ । ಧನಾನಿ । ಪ್ರತಿऽಜನ್ಯಾನಿ । ಉತ । ಯಾ । ಸ್ಽಜನ್ಯಾ ।

ಅವಸ್ಯವೇ । ಯಃ । ವರಿವಃ । ಕೃಣೋತಿ । ಬ್ರಹ್ಮಣೇ । ರಾಜಾ । ತಂ । ಅವಂತಿ । ದೇವಾಃ ॥ ೯ ॥

॥ ಸಾಯಣಭಾಷ್ಯಂ ॥

ಸ ಏವಾಪ್ರತೀತೋऽನ್ಯೈರಪ್ರತಿಗತಃ ಸನ್ ಯಾನಿ ಧನಾನಿ ಪ್ರತಿಜನ್ಯಾನಿ ಪ್ರತಿಸ್ಪರ್ಧಿಜನಸಂಬಂಧೀನಿ ಉತಾಪಿ ಚ ಸಜನ್ಯಾ ಜನಸಂಬಂಧೀನಿ ಧನಾನಿ ಸಂ ಜಯತಿ । ಯೋ ರಾಜಾವಸ್ಯವೇऽವಸೀಯಸೇ ಧನರಹಿತಾಯ ರಕ್ಷಣಮಿಚ್ಛತೇ ಬ್ರಹ್ಮಣೇ ಬ್ರಾಹ್ಮಣಾಯ ವಾ ಪ್ರೀಣನಮಿಚ್ಛತೇ ಬೃಹಸ್ಪತಯೇ ವಾ ವರಿವೋ ಧನಂ ಕೃಣೋತಿ । ಕರೋತಿ । ದದಾತಿ । ಸ ಉಕ್ತಪ್ರಕಾರೇಣ ಮಹಾನ್ಭವತಿ । ತಮೇವ ದೇವಾ ಅವಂತಿ । ರಕ್ಷಂತಿ ॥

॥ ಪ್ರತಿಪದಾರ್ಥ ॥

ಯಃ ರಾಜಾ—ಯಾವ ರಾಜನು । ಅವಸ್ಯವೇ—ಅವನ ರಕ್ಷಣೆಯನ್ನಪೇಕ್ಷಿಸಿದ । ಬ್ರಹ್ಮಣೇ—ಬ್ರಹ್ಮಶಕ್ತಿಯುಳ್ಳ ಬ್ರಾಹ್ಮಣನಿಗೆ । ವರಿವಃ—ಧನವನ್ನು । ಕೃಣೋತಿ—ಅರ್ಪಿಸುವನೋ (ಅದೇ ರಾಜನು) । ಅಪ್ರತೀತಃ—ಶತ್ರುಗಳಿಂದ ಅಪ್ರತಿಹತನಾಗಿ । ಪ್ರತಿಜನ್ಯಾನಿ—ಶತ್ರುಜನಗಳಿಗೆ ಸೇರಿದುದೂ । ಉತ—ಮತ್ತು । ಯಾ—ಯಾವುದು । ಸಜನ್ಯಾ—ತನ್ನ ಸ್ವಂತಜನರಿಗೆ ಸೇರಿದುದೋ ಅದೂ ಆದ । ಧನಾನಿ—ಸಕಲ ಧನಗಳನ್ನೂ । ಸಂ ಜಯತಿ—ತನ್ನ ಸಂಪತ್ತನ್ನಾಗಿಯೇ ಮಾಡಿಕೊಳ್ಳುತ್ತಾನೆ । ತಂ—ಆ ರಾಜನನ್ನು । ದೇವಾಃ—ದೇವತೆಗಳು । ಅವಂತಿ—ರಕ್ಷಿಸುತ್ತಾರೆ.

॥ ಭಾವಾರ್ಥ ॥

ಯಾವ ರಾಜನು ಅವನ ರಕ್ಷಣೆಯನ್ನಪೇಕ್ಷಿಸಿದ ಬ್ರಹ್ಮಶಕ್ತಿಯುಳ್ಳ ಬ್ರಾಹ್ಮಣನಿಗೆ ಧನವನ್ನರ್ಪಿಸುವನೋ, ಆ ರಾಜನೇ ಶತ್ರುಗಳಿಂದ ಅಪ್ರತಿಹತನಾಗಿ ಶತ್ರುಜನಗಳಿಗೆ ಸೇರಿದುದೂ ಮತ್ತು ತನ್ನ ಸ್ವಂತ ಜನಗಳಿಗೆ ಸೇರಿದುದೂ ಆದ ಸಕಲ ಸಂಪತ್ತನ್ನೂ ತನ್ನ ಪ್ರಭುತ್ವದಲ್ಲೇ ಇಟ್ಟುಕೊಳ್ಳುತ್ತಾನೆ. ಆ ರಾಜನನ್ನು ಸಕಲ ದೇವತೆಗಳೂ ರಕ್ಷಿಸುತ್ತಾರೆ.

## English Translation.

Unopposed he is the master of the riches of hostile people, and of his own subjects : the Raja who bestows riches upon the Brahmana seeking his protection, him the gods protect.



|| ಸಂಹಿತಾಪಾಠಃ ||

ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇಽಸ್ಮಿನ್ಯಜ್ಞೇ ಮಂದಸಾನಾ ವೃಷಣ್ವಸೂ ।
ಆ ವಾಂ ವಿಶಂತ್ವಿಂದವಃ ಸ್ವಾಭುವೋಽಸ್ಮೇ ರಯಿಂ ಸರ್ವವೀರಂ ನಿ ಯಚ್ಛತಂ || ೧೦ ||

|| ಪದಪಾಠಃ ||

ಇಂದ್ರಃ । ಚ । ಸೋಮಂ । ಪಿಬತಂ । ಬೃಹಸ್ಪತೇ । ಅಸ್ಮಿನ್ । ಯಜ್ಞೇ । ಮಂದಸಾನಾ । ವೃಷಣ್ವಸೂ ಇತಿ ವೃಷಣ್ಽವಸೂ ।
ಆ । ವಾಂ । ವಿಶಂತು । ಇಂದವಃ । ಸುಽಆಭುವಃ । ಅಸ್ಮೇ ಇತಿ । ರಯಿಂ । ಸರ್ವಽವೀರಂ । ನಿ । ಯಚ್ಛತಂ || ೧೦ ||

|| ಸಾಯಣಭಾಷ್ಯಂ ||

ಇಂದ್ರಶ್ಚ ಸೋಮಮಿತಿ ದಶಮೀ ತೃತೀಯೆಸವನೇ ಬ್ರಾಹ್ಮಣಾಚ್ಛಂಸಿನಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತ ಆ ವೋ ವಹಂತು ಸಪ್ತಯೋ ರಘುಷ್ಯದಃ । ಆ. ೫-೫ । ಇತಿ ||

ಹೇ ಬೃಹಸ್ಪತೇ ತ್ವಮಿಂದ್ರಶ್ಚ ಸೋಮಂ ಪಿಬತಂ । ಕೀದೃಶೌ ಯುವಾಂ । ಅಸ್ಮಿನ್ಯಜ್ಞೇ ಮಂದಸಾನಾ ಹೃಷ್ಯಂತೌ ವೃಷಣ್ವಸೂ ವರ್ಷಿತೃಧನೌ । ಯಜಮಾನೇಭ್ಯೋ ದೀಯಮಾನಧನಾವಿತ್ಯರ್ಥಃ। ವಾಂ ಯುವಾಂ ಸ್ವಾಭುವಃ ಸುಷ್ಠು ಸರ್ವತೋ ಭವಂತಃ । ಕೃತ್ಸ್ನಶರೀರವ್ಯಾಪನಸಮರ್ಥಾ ಇತ್ಯರ್ಥಃ । ತಾದೃಶಾ ಇಂದವಃ ಸೋಮಾ ವಿಶಂತು । ಯುವಯೋಃ ಶರೀರಂ ಪ್ರವಿಶಂತು । ಅಸ್ಮೇ ಅಸ್ಮಭ್ಯಂ ರಯಿಂ ಧನಂ ಸರ್ವವೀರಂ ಸರ್ವಪುತ್ರಾದ್ಯುಪೇತಂ ನಿ ಯಚ್ಛತಂ । ದತ್ತಂ ||

|| ಪ್ರತಿಪದಾರ್ಥ ||

ಬೃಹಸ್ಪತೇ—ಎಲೈ ಬೃಹಸ್ಪತಿಯೇ । (ತ್ವಂ—ನೀನೂ) । ಇಂದ್ರಶ್ಚ—ಇಂದ್ರನೂ । ಮಂದಸಾನಾ—ಹರ್ಷಗೊಂಡವರಾಗಿಯೂ । ವೃಷಣ್ವಸೂ—ಇಷ್ಟಾರ್ಥಪ್ರದರಾಗಿಯೂ ಆಗಿ । ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ । ಸೋಮಂ—ಸೋಮರಸವನ್ನು । ಪಿಬತಂ—ಪಾನಮಾಡಿರಿ । ಸ್ವಾಭುವಃ—ಸರ್ವತ್ರ ಪ್ರಸರಿಸುವ ಶಕ್ತಿಯುಳ್ಳ । ಇಂದವಃ—ಸೋಮರಸಗಳು । ವಾಂ—ನಿಮ್ಮ ಶರೀರಗಳನ್ನು । ಆ ವಿಶಂತು—ಪ್ರವೇಶಿಸಲಿ ।

**ಅಸ್ಮೇ**—ನಮಗೆ | **ಸರ್ವವೀರಂ**—ಸಕಲ ವೀರಪುತ್ರಾದಿಗಳಿಂದ ಕೂಡಿದ | **ರಯಿಂ**—ಧನವನ್ನು | **ನಿ ಯಚ್ಛತಂ**—ಒದಗಿಸಿಕೊಡಿರಿ.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ನೀನೂ ಇಂದ್ರನೂ ಸಹ ಒಟ್ಟಿಗೆ ಹರ್ಷಗೊಂಡವರಾಗಿಯೂ, ಇಷ್ಟಾರ್ಥಪ್ರದ ರಾಗಿಯೂ ಆಗಿ ಈ ಯಜ್ಞದಲ್ಲಿ ಸೋಮರಸವನ್ನು ಪಾನಮಾಡಿರಿ. ಸರ್ವತ್ರ ಪ್ರಸರಿಸುವ ಶಕ್ತಿಯುಳ್ಳ ಸೋಮ ರಸಗಳು ನಿಮ್ಮ ಶರೀರಗಳನ್ನು ಪೂರ್ಣವಾಗಿ ಪ್ರವೇಶಿಸಲಿ. ನಮಗೆ ಸಕಲ ವೀರಪುತ್ರಾದಿಗಳಿಂದ ಕೂಡಿದ ಧನವನ್ನು ಒದಗಿಸಿಕೊಡಿರಿ.

## English Translation.

Brihaspati, you and Indra, both exulting and showering riches, drink the Soma at this sacrifice : may the all-pervading drops enter you : bestow upon us riches comprising all male descendants.

॥ ವಿಶೇಷವಿಷಯಗಳು ॥

ಇಂದ್ರಶ್ಚ ಸೋಮಂ ಎಂಬ ಈ ಹತ್ತನೆಯ ಋಕ್ಕನ್ನು ತೃತೀಯ ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇ ಆ ವೋ ವಹಂತು ಸಪ್ತಯೋ ರಘುಷ್ಯದಃ ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಬೃಹಸ್ಪತ ಇಂದ್ರ ವರ್ಧತಂ ನಃ ಸಚಾ ಸಾ ವಾಂ ಸುಮತಿರ್ಭೂತ್ವಸ್ಮೇ ।
ಅವಿಷ್ಟಂ ಧಿಯೋ ಜಿಗೃತಂ ಪುರಂಧೀರ್ಜಜಸ್ತಮರ್ಯೋ ವನುಷಾಮ
ರಾತೀಃ ॥ ೧೧ ॥

॥ ಪದಪಾಠಃ ॥

ಬೃಹಸ್ಪತೇ । ಇಂದ್ರ । ವರ್ಧತಂ । ನಃ । ಸಚಾ । ಸಾ । ವಾಂ । ಸುಽಮತಿಃ । ಭೂತು । ಅಸ್ಮೇ ಇತಿ ।
ಅವಿಷ್ಟಂ । ಧಿಯಃ । ಜಿಗೃತಂ । ಪುರಂಽಧೀಃ । ಜಜಸ್ತಂ । ಅರ್ಯಃ । ವನುಷಾಂ । ಅರಾತೀಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಬೃಹಸ್ಪತೇ ಹೇ ಇಂದ್ರ ಯುವಾಂ ನೋಽಸ್ಮಾನ್ವರ್ಧತಂ। ವರ್ಧಯತಂ। ಪ್ರವೃದ್ಧಾನ್ಕುರುತಂ । ಸಾ ಸುಮತಿರ್ಯುವಯೋರನುಗ್ರಹಬುದ್ಧಿರಸ್ಮೇ ಅಸ್ಮಾಸು ಸಚಾ ಸಹ ಭೂತು। ಭವತು। ಧಿಯಃ ಕರ್ಮಾಣ್ಯವಿಷ್ಟಂ। ರಕ್ಷತಂ। ಪಾರಂ ನಯತಂ। ಪುರಂಧೀಃ ಪುರಂ ಶರೀರಂ ಧೀಯತೇ ಸ್ಥಾಪ್ಯತೇ ಯಾಭಿರ್ಮತಿಭಿಸ್ತಾಃ ಸ್ತುತೀರ್ಜಿಗೃತಂ। ಪ್ರಬುಧ್ಯತಂ। ವನುಷಾಂ ಸಂಭಕ್ತ್ರೀಣಾಮಸ್ಮಾಕಮರ್ಯೋಽ ಗಂತ್ರೀರರಾತೀಃ। ಶತ್ರೂನಿತ್ಯರ್ಥಃ। ಜಜಸ್ತಂ। ಯುಧ್ಯತಂ। ಕ್ಷಪಯತಮಿತ್ಯರ್ಥಃ ॥ ಛಂದಸ್ಯರಾತಿಶಬ್ದಃ ಸ್ತ್ರೀಲಿಂಗಃ ॥ ಏವಂ ಸ್ತುತಿಂ ನಿಗಮಯ್ಯಾಭೀಷ್ಟಂ ಪ್ರಾರ್ಥಿತವಾನ್ ॥

॥ ಪ್ರತಿಪದಾರ್ಥ ॥

ಬೃಹಸ್ಪತೇ—ಎಲೈ ಬೃಹಸ್ಪತಿಯೇ। ಇಂದ್ರ—ಎಲೈ ಇಂದ್ರನೇ। ನಃ—ನಮ್ಮನ್ನು। ವರ್ಧತಂ—ಪ್ರವೃದ್ಧರನ್ನಾಗಿ ಮಾಡಿರಿ। ವಃ ಸಾ ಸುಮತಿಃ—ನಿಮ್ಮ ಪ್ರಸಿದ್ಧವಾದ ಅನುಗ್ರಹಬುದ್ಧಿಯು। ಅಸ್ಮೇ—ನಮ್ಮಲ್ಲಿ। ಸಚಾ ಭೂತು—ಹೊಂದಿಕೊಂಡಿರಲಿ। ಧಿಯಃ—ನಮ್ಮ ಕರ್ಮಗಳನ್ನು। ಅವಿಷ್ಟಂ—ರಕ್ಷಿಸಿರಿ। ಪುರಂಧೀಃ—ನಮ್ಮ ಸ್ತುತಿಗಳನ್ನು। ಜಿಗೃತಂ—ಚೆನ್ನಾಗಿ ಅರಿತು (ಶ್ಲಾಘಿಸಿರಿ)। ವನುಷಾಂ—ಹವಿರ್ದಾತರಾದ ನಮ್ಮ ಮೇಲೆ। ಅರ್ಯಃ—ಎದುರುಬೀಳುವ। ಅರಾತೀಃ—ಶತ್ರುಗಳನ್ನು। ಜಜಸ್ತಂ—ಎದುರಿಸಿ ನಾಶಮಾಡಿರಿ.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ಮತ್ತು ಎಲೈ ಇಂದ್ರನೇ, ನಮ್ಮನ್ನು ಪ್ರವೃದ್ಧರನ್ನಾಗಿ ಮಾಡಿರಿ. ನಿಮ್ಮ ಪ್ರಸಿದ್ಧವಾದ ಅನುಗ್ರಹ ಬುದ್ಧಿಯು ನಮ್ಮಲ್ಲಿ ಹೊಂದಿಕೊಂಡಿರಲಿ. ನಮ್ಮ ಕರ್ಮಗಳನ್ನು ರಕ್ಷಿಸಿರಿ. ನಮ್ಮ ಸ್ತುತಿಗಳನ್ನು ಚೆನ್ನಾಗಿ ಅರಿತು ಶ್ಲಾಘಿಸಿರಿ. ಹವಿರ್ದಾತರಾದ ನಮ್ಮ ಮೇಲೆ ಎದುರು ಬೀಳುವ ಶತ್ರುಗಳನ್ನು ಎದುರಿಸಿ ನಾಶಮಾಡಿರಿ.

## English Translation.

Brihaspati, Indra, elevate us: may the favourable disposition of you both be combined for us: protect our rites: be awake to our laudations, confound the arrogant (foes) of us ;who are the donors (of oblations).

॥ ವಿಶೇಷವಿಷಯಗಳು ॥

ಸುಮತಿಃ—ಒಳ್ಳೆಯ ಬುದ್ಧಿಯು. ಎಂದರೆ ಯಜ್ಞಮಾಡುತ್ತಿರುವ ಅಥವಾ ಸ್ತುತಿಸುತ್ತಿರುವ ಯಜಮಾನರಾದ ನಮ್ಮ ವಿಷಯದಲ್ಲಿ ಅನುಗ್ರಹಮಾಡಬೇಕೆಂಬ ಸದ್ಬುದ್ಧಿಯು ಇಂದ್ರಾಬೃಹಸ್ಪತಿಗಳಾದ ನಿಮಗೆ ಉಂಟಾಗಿರಲಿ ಎಂದಭಿಪ್ರಾಯವು.

ಪುರಂಧೀಃ—ಪುರಂ ಶರೀರಂ ಧೀಯತೇ ಸ್ಥಾಪ್ಯತೇ ಯೋಭಿರ್ಮತಿಭಿಸ್ತಾಃ ಸ್ತುತೀಃ । ನಮ್ಮ ಶರೀರದಲ್ಲಿದ್ದು ನಮಗೆ ಉತ್ತೇಜನವನ್ನುಂಟುಮಾಡುವ ಬುದ್ಧಿಯಿಂದ ನಾವು ಪ್ರೇರಿತರಾಗಿ ದೇವತೆಗಳನ್ನು ಸ್ತುತಿಸುವ ಸ್ತೋತ್ರ ಅಥವಾ ವಾಕ್ಯವು. ಅಥವಾ ಪುರಂಧೀರ್ಬಹುಧೀಃ ಬಹಳ (ಉತ್ತಮವಾದ) ಬುದ್ಧಿಯಿಂದ ರಚಿತವಾದ ಸ್ತುತಿ ಎಂದು ಅರ್ಥವು.

ಅರಾತೀಃ—ಛಂದಸ್ಸಿನಲ್ಲಿ ಎಂದರೆ ವೇದಮಂತ್ರಗಳಲ್ಲಿ—ಅದರಲ್ಲಿಯೂ ಋಗ್ವೇದ ಮಂತ್ರಗಳಲ್ಲಿ—ಅರಾತಿ ಶಬ್ದವು (ಸಾಧಾರಣವಾಗಿ ಪುಲ್ಲಿಂಗಶಬ್ದವಾಗಿದ್ದರೂ) ಸ್ತ್ರೀಲಿಂಗದಲ್ಲಿ ಉಪಯೋಗಿಸುವುದೇ ರೂಢಿಯಾಗಿದೆ. ಎಂದರೆ ಇಲ್ಲಿ ಅರಾತೀನ್ ಎಂಬುವುದಕ್ಕೆ ಬದಲಾಗಿ ಅರಾತೀಃ (ದ್ವಿತೀಯಾ ಬಹುವಚನ) ಎಂಬ ಶಬ್ದದ ಪ್ರಯೋಗವಿದೆ.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯೇನ್ ।<br>
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥<br>
ಶ್ರೀಮತ್ಸಾಯಣಮಂತ್ರೀಶೋ ದಾಶತಯ್ಯಾಸ್ತೃತೀಯಕೇ ।<br>
ಅಷ್ಟಕೇ ಸಪ್ತಮಾಧ್ಯಾಯಂ ವ್ಯಾಕಾರ್ಷೀದತಿಪೇಶಲಂ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ<br>
ಋಗ್ವೇದಸಂಹಿತೆಯ ತೃತೀಯಾಷ್ಟಕದಲ್ಲಿ<br>
ಏಳನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।<br>
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ತೃತೀಯಾಷ್ಟಕೇಽಷ್ಟಮೋಽಧ್ಯಾಯಃ

## ಮೂರನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು.

ಚತುರ್ಥಮಂಡಲದ ಸೂಕ್ತಗಳು ೫೧—೫೮
ಮತ್ತು
ಪಂಚಮಂಡಲದ ಸೂಕ್ತಗಳು ೧—೮

## ಐವತ್ತೊಂದನೆಯ ಸೂಕ್ತವು.

### ಪೀಠಿಕೆ

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಉಷಸ್ಸೇ ದೇವತೆಯು. ಉಷೋದೇವತೆಯ ವಿಷಯದಲ್ಲಿ—ಯಾಸ್ಕಮಹರ್ಷಿಗಳು— ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥ (ನಿ. ೨-೧೯) ಎಂದು ಹೇಳಿದಾರೆ. ಎಂದರೆ ಉಷೋದೇವತೆಯು ಯಾರು? ಅದರ ಸ್ವರೂಪವೇನು? ಅದಕ್ಕೆ ಈ ಹೆಸರು ಬರಲು ಕಾರಣವೇನು? ಎಂದು ಮೊದಲಾದ ವಿಷಯ ವಿಮರ್ಶೆಮಾಡುತ್ತಾ ಉಷಃ ಕಸ್ಮಾತ್ । ಉಚ್ಛತೀತಿ ಸತ್ಯಾಃ । ಉಚ್ಛೀ ವಿವಾಸೇ । ವಿವಾಸಯತಿ ಹೀಯಂ ತಮಾಂಸಿ ತಸ್ಮಾದುಚ್ಛತೀತ್ಯೇ-

ವಮುಸ್ಯಾ ಏತಸ್ಮಿನ್ಕರ್ಮಣಿ ಸತ್ಯಾಃ ಕರ್ತರಿ ಕಾರಕೇ ಉಷಾ ಇತ್ಯೇತದಭಿಧಾನಂ ಭವತಿ । ಕಾ ಪುನರಿಯಮುಷಾ ಇತಿ । ರಾತ್ರೇರಪರಃಕಾಲಃ ಸ ಉಷಾ ಇತ್ಯುಚ್ಯತೇ ॥ ಎಂದರೆ ಹೊರದೂಡು ಎಂಬರ್ಥವುಳ್ಳ ಉಚ್ಛೀ-ವಿವಾಸೇ ಎಂಬ ಧಾತುವಿನಿಂದ ಈ ಉಷಶ್ಶಬ್ದದ ನಿಷ್ಪತ್ತಿಯಾಗಿದೆಯೆಂದು ವಿವರಿಸುತ್ತಾರೆ. ಏನನ್ನು ಹೊರದೂಡುವುದು ಎಂದರೆ ಕತ್ತಲೆಯನ್ನು ಎಂದರ್ಥವು. ಕತ್ತಲೆಯನ್ನು ಹೊರದೂಡಿ ಬೆಳಕನ್ನು ಪ್ರಸರಿಸುವುದರಿಂದ ಈ ದೇವತೆಗೆ ಉಷಾಃ ಎಂದು ಹೆಸರು. ಆ ಕಾಲವು ಯಾವುದು ಎಂದರೆ ರಾತ್ರಿಯ ಕೊನೆಯ ಭಾಗವು. ರಾತ್ರಿಯು ಮುಗಿದು ಸೂರ್ಯೋದಯವಾಗುವುದಕ್ಕೆ ಮುಂಚಿತವಾಗಿ ಕತ್ತಲೆ ಇಲ್ಲದ ಮತ್ತು ಬೆಳಕಾಗಿರುವ ಕಾಲಕ್ಕೆ ಉಷಃ ಕಾಲವೆಂದು ಹೆಸರು ಎಂದು ಅರ್ಥವಿವರಣೆಮಾಡಿರುವರು.

ರಾತ್ರಿಯು ಕಳೆದನಂತರ ಉಷಃಕಾಲವಾಗುವುದರಿಂದ ಉಷಃಕಾಲವು ರಾತ್ರಿಯಿಂದ ಹುಟ್ಟಿದ್ದೆಂದು ಹೇಳುವ ರೂಢಿ ಇರುವುದು. ಇವನ್ನು ಸಮರ್ಥನೆಮಾಡುವುದಕ್ಕಾಗಿ ಯಾಸ್ಕರು—

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।
ಯಥಾ ಪ್ರಸೂತಾ ಸವಿತುಃ ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥

(ಋ. ಸಂ. ೧-೧೧೩-೧)

ಎಂಬ ಋಕ್ಕನ್ನು ಉದಹರಿಸಿರುವರು. ಮತ್ತು ಈ ಕ್ರಮವನ್ನನುಸರಿಸಿ ಉಷಃಕಾಲವಾದನಂತರ ಸೂರ್ಯೋದಯವಾಗುವುದರಿಂದ ಉಷಸ್ಸಿನಿಂದ ಸೂರ್ಯನು ಉತ್ಪನ್ನನಾಗುವನೆಂದು ಹೇಳುವ ವಿಷಯದಲ್ಲಿಯೂ ಯಾಸ್ಕರು—

ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ।
ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ॥

(ಋ. ಸಂ. ೧-೧೧೩-೨)

ಎಂಬ ಋಕ್ಕನ್ನು ವಿಷಯಸಮರ್ಥನೆಗಾಗಿ ಉದಾಹರಿಸಿರುವರು (ನಿ. ೨-೨೦).

ಈ ಉಷೋದೇವತೆಯ ಸ್ವರೂಪವನ್ನು ಋಷಿಗಳು ವಿಧವಿಧವಾಗಿ ವರ್ಣನೆಮಾಡಿರುವರು. ಈ ವರ್ಣನೆಗನುಸಾರವಾಗಿ ನಾನಾವಿಧ ವಿಶೇಷಣಗಳನ್ನು ಉಪಯೋಗಿಸಿರುವರು. ಅವುಗಳಲ್ಲಿ ಮುಖ್ಯವಾದ ಹದಿನಾರು ಶಬ್ದಗಳು ಉಷೋದೇವತೆಗೆ ಅನ್ವಯಿಸುವವು. ಅವುಗಳನ್ನು ಯಾಸ್ಕರು ಈ ರೀತಿ ಹೇಳಿರುವರು (ನಿ. ೨-೧೯).

ವಿಭಾವರೀ—ವಿಶೇಷಪ್ರಭಾವಯುಕ್ತಾ । ವಿಶಿಷ್ಟಪ್ರಕಾಶಯುಕ್ತಾ । ಬಹಳ ಪ್ರಕಾಶಮಾನವಾದ—Resplendent. ಈ ಶಬ್ದವು ಋ. ಸಂ. ೧-೩೦-೨೨; ೧-೪೮-೧; ೧-೪೮-೧೦; ೧-೯೨-೧೪; ೪-೫೨-೬; ೫-೭೯-೪; ೫-೭೯-೧೦; ೮-೪೭-೧೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

ಸೂನರೀ—ಸುಷ್ಠು ನೇತ್ರೀ । ಸುಂದರವಾದ—Beautiful. ಈ ಶಬ್ದವು ಋ. ಸಂ. ೧-೪೮ ೧೦; ೧-೪೮-೫; ೧-೪೮-೨; ೪-೫೨-೧; ೭-೮೧-೧ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

ಭಾಸ್ವತೀ—ತೇಜಸ್ವತೀ । ವಿಶಿಷ್ಟಪ್ರಕಾಶನಯುಕ್ತಾ । ಹೊಳೆಯುತ್ತಿರುವ—Shining. ಈ ಶಬ್ದವು ಋ. ಸಂ. ೧-೯೨-೭; ೧-೧೧೩-೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

ಓದತೀ—ಉಂದೀ ಕ್ಲೇದನೇ। ಉನತ್ತಿ ಸರ್ವಂ ನೀಹಾರೇಣೇತ್ಯೋದತೀ। ಹರಿಯುತ್ತಿರುವ, ಚಿಮ್ಮುತ್ತಿರುವ, ಪ್ರಸರಿಸುತ್ತಿರುವ, ಮಂಜಿನಿಂದ ಎಲ್ಲವನ್ನೂ ನೆನೆಯಿಸುವ—flowing, gushing & c—ಈ ಶಬ್ದವು ಋ. ಸಂ. ೧-೪೬-೬ ; ೮-೬೯-೨ ರಲ್ಲಿ ಮಾತ್ರವಿರುವುದು.

ಚಿತ್ರಮಘಾ—ವಿಚಿತ್ರಧನಾ। ವಿವಿಧರಶ್ಮ್ಯಾಖ್ಯಧನಾ ವಾ॥ ವಿಧವಿಧವಾದ ಅಥವಾ ಪ್ರಕಾಶಮಾನವಾದ ಐಶ್ವರ್ಯವುಳ್ಳ—possessed of brilliant riches. ಈ ಶಬ್ದವು ಋ. ಸಂ. ೭-೭೫-೫; ೭-೭೭-೩; ೮-೫೮-೩ ರಲ್ಲಿ ಪಠಿತವಾಗಿರುವುದು.

ಅರ್ಜುನೀ—ಶುಭ್ರವರ್ಣಾ। ಬೆಳ್ಳಗಿರುವ—the white. ಈ ಶಬ್ದವು ಋ. ಸಂ. ೧-೪೯-೩ ; ೫-೮೪-೨ ಎಂಬ ಋಕ್ಕುಗಳಲ್ಲಿರುವುದು.

ವಾಜಿನೀ—ಅಥವಾ ವಾಜಿನೀವತೀ—ವಾಜೋಽನ್ನಮಸ್ಯಾ ಅಸ್ತೀತಿ। ಬಹ್ವನ್ನಾ। ಅನ್ನಯುಕ್ತವಾದ ಅಥವಾ ಅನ್ನವನ್ನು ತಂದುಕೊಡುವ—the bringer of food. ಈ ಶಬ್ದಗಳು ಋ. ಸಂ. ೩-೬-೧; ೩-೬೦-೧; ೬-೬೧-೬ ಮತ್ತು ಋ. ಸಂ. ೧-೩-೧೦; ೬-೬೧-೪; ೭-೭೫-೫; ೭-೯೬-೩; ೧೦-೭೫-೮; ೧-೪೮-೬; ೧-೪೮-೧೬; ೧-೯೨-೧೩; ೧-೯೨-೧೫; ೨-೪೧-೧೮; ೪-೫೫-೯; ೬-೬೧-೩; ೮-೨೪-೨೮ ಎಂಬ ಋಕ್ಕುಗಳಲ್ಲಿರುವುದು.

ಸುಮ್ನಾವರೀ—ಸುಮ್ನಮಿತಿ ಸುಖನಾಮ । ತದ್ವತೀ । ಸಂತೋಷವನ್ನುಂಟುಮಾಡುವ—the giver of joy. ಈ ಶಬ್ದವು ಋ. ಸಂ. ೧-೧೧೩-೧೨ ನೆಯ ಋಕ್ಕಿನಲ್ಲಿ ಮಾತ್ರವಿರುವುದು.

ಅಹನಾ, ದ್ಯೋತನಾ—ಕೃತ್ಸ್ನಂ ಜಗದ್ದ್ಯೋತನಶೀಲಾ । ಪ್ರಕಾಶಮಾನವಾದ—Bright, ಈ ಶಬ್ದಗಳು ಋ. ಸಂ. ೧-೧೨೩-೪ ಮತ್ತು ಋ. ಸಂ. ೧-೧೨೩-೪ ರಲ್ಲಿ ಮಾತ್ರವಿರುವುದು.

ಶ್ವೇತ್ಯಾ—ಶ್ವೇತವರ್ಣೋಷಾ। ಶ್ವಿತಾ ವರ್ಣೇ । ಶುಭ್ರವರ್ಣವುಳ್ಳ—the fair-colured. ಈ ಶಬ್ದವು ಋ. ಸಂ. ೧-೧೧೩-೨; ೧೦-೭೫-೬ ರಲ್ಲಿರುವುದು.

ಅರುಷೀ—ಆರೋಚಮಾನಾ। ರಕ್ತವರ್ಣಾ ವಾ। ಕೆಂಪುವರ್ಣವುಳ್ಳ, ಸ್ವಲ್ಪ ಕೆಂಪಾದ ಛಾಯೆಯುಳ್ಳ—the ruddy. ಈ ಶಬ್ದವು ಋ. ಸಂ. ೩-೫೫-೧೧; ೪-೫೨-೨; ೮-೬೮-೮ ಇತ್ಯಾದಿ ಋಕ್ಕುಗಳಲ್ಲಿ ಪಠಿತವಾಗಿರುವುದು.

ಸೂನೃತಾ, ಸೂನೃತಾವತೀ, ಸೂನೃತಾವರೀ—ಪ್ರಿಯಸತ್ಯರೂಪಾ। ಪ್ರಿಯಸತ್ಯಾತ್ಮಿಕಾ ವಾಕ್ ತಾದೃಶ್ಯಾ ವಾಚಾ ಯುಕ್ತಾ। ಪ್ರಿಯವಾದ ಮತ್ತು ಹಿತವಾದ ಮಾತುಗಳನ್ನಾಡುವ—the utterer of pleasent or sacred voices. ಈ ಶಬ್ದಗಳು ಋ. ಸಂ. ೧-೮-೮: ೧-೩೦-೫; ೧-೪೩-೩ ಇತ್ಯಾದಿ ಋಕ್ಕುಗಳಲ್ಲಿಯೂ ಋ. ಸಂ. ೧-೯೨-೧೪; ೧-೨೨-೩; ೭-೮೧-೬; ಮತ್ತು ಋ. ಸಂ ೪-೫೨-೪ ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿರುವುದು.

ಈ ಶಬ್ದಗಳು ಸಾಧಾರಣವಾಗಿ ಉಷೋದೇವತೆಯ ಪರವಾಗಿಯೇ ಉಪಯೋಗಿಸಲ್ಪಟ್ಟಿರುವುದಾದರೂ ಕೆಲವು ಸಂದರ್ಭಗಳಲ್ಲಿ ಇತರ ದೇವತೆಗಳ ಪರವಾಗಿಯೂ ಉಪಯುಕ್ತವಾಗಿರುವುದು.

ಯಾಸ್ಕರು ಮೇಲೆ ಉದಾಹರಿಸಿರುವ ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮತ್ । ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿರಾದಿತ್ಯಸ್ಯ । ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಂ । ಸ್ತ್ರೀಯೋನಿರಭಿಯೊತ ಏನಾಂ ಗರ್ಭಃ ॥

(ನಿ. ೨-೧೯)

ರಾತ್ರೇರಪರಃ ಕಾಲ ಉಷ ಇತ್ಯುಚ್ಯತೇ ಎಂಬ ವಚನಾನುಸಾರವಾಗಿ ರಾತ್ರಿಯ ಕೊನೆಯ ಭಾಗವು ಎಂದರೆ ಸೂರ್ಯೋದಯಕ್ಕೆ ಮುಂಚಿತವಾದ ಕಾಲವು ಉಷಃಕಾಲವೆನಿಸುವುದು. ಈ ಉಷಃಕಾಲದ ತೇಜಸ್ಸು ಎಂದರೆ ಬೆಳಕು ಎಲ್ಲಾ ಬೆಳಕುಗಳಿಗಿಂತಲೂ ಶ್ರೇಷ್ಠವಾದದ್ದು. ಪ್ರಪಂಚದಲ್ಲಿ ಸೂರ್ಯಚಂದ್ರನಕ್ಷತ್ರಗಳು ಪ್ರಕಾಶಯುತವಾದವು. ಇವುಗಳಲ್ಲಿ ಸೂರ್ಯನ ಬೆಳಕು ಬಹಳ ತೀಕ್ಷ್ಣವಾಗಿರುವುದು. ನಕ್ಷತ್ರಗಳ ಬೆಳಕು ನಕ್ಷತ್ರಗಳನ್ನು ಮಾತ್ರವೇ ಪ್ರಕಾಶಗೊಳಿಸುತ್ತಾ ಇತರ ಪದಾರ್ಥಗಳನ್ನು ಪ್ರಕಾಶಪಡಿಸುವುದಿಲ್ಲ ಎಂದರೆ ನಕ್ಷತ್ರಗಳ ಬೆಳಕಿನಿಂದ ಇತರ ವಸ್ತುಗಳನ್ನು ನೋಡಲು ಸಾಧ್ಯವಾಗುವುದಿಲ್ಲ. ಚಂದ್ರನ ಬೆಳಕು ಶೀತಳವಾಗಿದ್ದರೂ ಹೆಚ್ಚುಪ್ರಕಾಶವಿಲ್ಲದ್ದರಿಂದ ಪದಾರ್ಥಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಆದರೆ ಉಷಃಕಾಲದ ಬೆಳಕು ಸೂರ್ಯನ ಬೆಳಕಿನಂತೆ ತೀಕ್ಷ್ಣವೂ ಅಲ್ಲ, ಚಂದ್ರನ ಪ್ರಕಾಶವಂತೆ ಶೀತಳವೂ ಅಲ್ಲ, ಅಸ್ಪಷ್ಟವೂ ಅಲ್ಲ. ಎಲ್ಲಾ ವಸ್ತುವನ್ನೂ ಬಹಳ ಚೆನ್ನಾಗಿ ಪ್ರಕಾಶಪಡಿಸುವ ಸಾಮರ್ಥ್ಯವುಳ್ಳದ್ದಾಗಿರುವುದು. ಆದುದರಿಂದಲೇ ಈ ಉಷಃಕಾಲದ ಪ್ರಕಾಶವು ಸೂರ್ಯಚಂದ್ರನಕ್ಷತ್ರಾದಿಗಳ ಪ್ರಕಾಶಕ್ಕಿಂತಲೂ ಅತ್ಯಂತ ಶ್ರೇಷ್ಠವಾದುದೆಂದು ಇಲ್ಲಿ ಹೇಳಿರುವುದು. ಇದಲ್ಲದೆ ಈ ಉಷಃಕಾಲದ ಪ್ರಕಾಶವು ಎಲ್ಲಾ ಪ್ರದೇಶಗಳಲ್ಲಿಯೂ ಏಕಕಾಲದಲ್ಲಿ ಹರಡಿ ಮನಸ್ಸಿಗೆ ಬಹು ಆಹ್ಲಾದಕರವಾಗಿರುವುದು. ಇಂತಹ ಉಷಃಕಾಲದ ಉದಯವು ಈಗ ಪ್ರಾಪ್ತವಾಗಿರುವುದು. ಇದು ಈ ಋಕ್ಕಿನ ಪೂರ್ವಾರ್ಧದ ಅನುವಾದವು.

ಪ್ರಪಂಚದಲ್ಲಿ ಸೂರ್ಯನು ಮುಳುಗಿದ ನಂತರ ರಾತ್ರಿಯು ಉಂಟಾಗುವುದು. ರಾತ್ರಿಯು ಕಳೆದನಂತರ ಉಷಃಕಾಲವೂ, ಉಷಃಕಾಲಾನಂತರ ಸೂರ್ಯೋದಯವೂ ಉಂಟಾಗುವುದು. ಈ ರೀತಿ ಒಂದಾಗುತ್ತಲೊಂದು ಕ್ರಮವಾಗಿ ಪ್ರಾಪ್ತವಾಗುವುದರಿಂದ ಒಂದರ ಉತ್ಪತ್ತಿಗೆ ಒಂದು ಕಾರಣವೆಂದು ಹೇಳಲ್ಪಡುವುದು. ಹೇಗೆಂದರೆ ಸೂರ್ಯನು ಅಸ್ತನಾದನಂತರ ರಾತ್ರಿಯು ಉಂಟಾಗುವುದರಿಂದ ರಾತ್ರಿಯ ಉತ್ಪತ್ತಿಗೆ ಸೂರ್ಯನು ಕಾರಣನು ಎಂದರೆ ಸೂರ್ಯನಿಂದ ರಾತ್ರಿಯು ಉತ್ಪತ್ತಿಯುಂಟಾಗುವುದು. ಅದರಂತೆಯೇ ರಾತ್ರಿಯಿಂದ ಉಷಃಕಾಲದ ಉತ್ಪತ್ತಿಯಾಗುವುದು. ಉಷಃಕಾಲದಿಂದ ಸೂರ್ಯನ ಉದಯವಾಗುವುದು. ಈ ಅಭಿಪ್ರಾಯವನ್ನೇ ಈ ಋಕ್ಕಿನಲ್ಲಿ— ರಾತ್ರಿಯು ಸೂರ್ಯನಿಂದ ಹೇಗೆ ಉತ್ಪನ್ನವಾಯಿತೋ ಹಾಗೆ ರಾತ್ರಿಯಿಂದ ಉಷಃಕಾಲವು ಆವಿರ್ಭವಿಸಿತು ಎಂದ ವರ್ಣಿಸಿರುವುದು.

**ಪ್ರಕೇತಃ**—ಕಿತ ಜ್ಞಾನೇ । ಅಂಧಕಾರಾವೃತಸ್ಯ ಸರ್ವಸ್ಯ ಪದಾರ್ಥಸ್ಯ ಪ್ರಜ್ಞಾಪಕಃ । ಕತ್ತಲೆಯಿಂದ ಕಾಣಿಸದಿರುವ ಪದಾರ್ಥಗಳನ್ನು ತನ್ನ ಬೆಳಕಿನಿಂದ ಕಾಣುವಂತೆ ಮಾಡುವ.

**ವಿಭ್ವಾ**—ವಿಭುರ್ವ್ಯಾಪ್ತಃ । ವ್ಯಾಪ್ತವಾದ, [ಆವರಿಸಿರುವ.

**ಸವಾಯ**—ಉತ್ಪತ್ತ್ಯೈಯೇ । ಹುಟ್ಟುವುದಕ್ಕೆ; ಉದಯಿಸುವುದಕ್ಕೆ

**ಯೋನಿಃ**—ಉತ್ಪತ್ತಿಸ್ಥಾನವು, ಕಾರಣಭೂತವಾದುದು.

# ಐವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಥಾಷ್ಟಮಂ ವ್ಯಾಖ್ಯಾತುಮಾರಭತೇ । ಇದಮು ತ್ಯದಿತ್ಯೇಕಾದಶರ್ಚಂ ಷಷ್ಠಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮುಷೋದೇವತಾಕಂ । ಇದಮುಷಸ್ಯಂ ತ್ರಿತ್ಯನುಕ್ರಾಂತಂ ॥ ಪ್ರಾತರನುವಾಕ ಉಷಸ್ಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ಉಷೋ ವಾಜೇನೇದಮು ತ್ಯತ್ । ಆ. ೪–೧೪ । ಇತಿ ॥

ಅನುವಾದವು— ಈಗ ಮೂರನೆಯ ಅಷ್ಟಕದ ಎಂಟನೆಯ ಅಧ್ಯಾಯದ ವ್ಯಾಖ್ಯಾನವನ್ನು ಪ್ರಾರಂಭಿಸುವೆವು. ಇದಮು ತ್ಯತ್ ಎಂಬ ಈ ಸೂಕ್ತವು ನಾಲ್ಕನೆಯ ಮಂಡಲದ ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಉಷಸ್ಸು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ ಇದಮುಷಸ್ಯಂ ತು ಎಂದು ಹೇಳಿರುವುದು. ಪ್ರಾತರನುವಾಕಮಂತ್ರ ಪಠನಕಾಲದಲ್ಲಿ ಉಷಸ್ಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಪಠನ ಕ್ಕಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— ಉಷೋ ವಾಜೇನೇದಮು ತ್ಯತ್ ಎಂಬ ಸೂತ್ರದಿಂದ (ಆ. ೪–೧೪) ವಿವೃತವಾಗಿರುವುದು.

## ಸೂಕ್ತ—೫೧

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೧ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೧, ೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ವಾಮದೇವಃ ॥

ದೇವತಾ—ಉಷಾಃ ॥

ಛಂದಃ—ತ್ರಿಷ್ಟುಬ್ ॥

॥ ಸಂಹಿತಾಪಾಠಃ ॥

ಇದಮು ತ್ಯತ್ಪುರುತಮಂ ಪುರಸ್ತಾಜ್ಜ್ಯೋತಿಸ್ತಮಸೋ ವಯುನಾವದ- ಸ್ಥಾತ್ ।
ನೂನಂ ದಿವೋ ದುಹಿತರೋ ವಿಭಾತೀರ್ಗಾತುಂ ಕೃಣವನ್ನುಷಸೋ ಜನಾಯ ॥ ೧ ॥

॥ ಪದಪಾಠಃ ॥

ಇದಂ । ಊಂ ಇತಿ । ತ್ಯತ್ । ಪುರುಽತಮಂ । ಪುರಸ್ತಾತ್ । ಜ್ಯೋತಿಃ । ತಮಸಃ । ವಯುನಽವತ್ । ಅಸ್ಥಾತ್ ।

ನೂನಂ । ದಿವಃ । ದುಹಿತರಃ । ವಿಽಭಾತೀಃ । ಗಾತುಂ । ಕೃಣವನ್ । ಉಷಸಃ । ಜನಾಯ ॥ ೧ ॥

॥ ಸಾಯಣಭಾಷ್ಯಂ ॥

ಇದಮು ಪುರತೋ ದೃಶ್ಯಮಾನಮಿದಂ ತ್ಯತ್ತದಸ್ಮಾಭಿಃ ಸ್ತುತ್ಯಂ ಸರ್ವಪ್ರಸಿದ್ಧಂ ಪುರುತಮಮು-ತ್ಯಂತಪ್ರಭೂತಂ ಜ್ಯೋತಿಸ್ತೇಜೋ ವಯುನಾವತ್ । ವೇತೇಃ ಕಾಂತಿಕರ್ಮಣ ಇದಂ ॥ ಪ್ರಕೃಷ್ಟಕಾಂ-ತಿಮತ್ । ಅಥವಾ ವಯುನಮಿತಿ ಪ್ರಜ್ಞಾನಾಮ । ಪ್ರಜ್ಞೋಪೇತಂ । ಸರ್ವಸ್ಯ ಪ್ರಜ್ಞಾಪಕಮಿತ್ಯರ್ಥಃ । ಕೀದೃಕ್ ತೇಜಃ । ಪುರಸ್ತಾತ್ ಪೂರ್ವಸ್ಯಾಂ ದಿಶಿ ತಮಸೋಽಂಧಕಾರಾದಸ್ಥಾತ್ । ಉದತಿಷ್ಠತ್ । ಏವಂ ಸತಿ ನೂನಂ ಸತ್ಯಂ ದಿವ ಆದಿತ್ಯಸ್ಯ ದುಹಿತರೋ ದುಹಿತೃಸ್ಥಾನೀಯಾ ವಿಭಾತೀರ್ವಿಭಾನಂ ಕುರ್ವತೀರುಷಸೋ ಜನಾಯ ಯಜಮಾನಾನಾಂ ಗಾತುಂ ಗಮನಂ ಗಮನಾದಿವ್ಯಾಪಾರಸಾಮರ್ಥ್ಯಂ ಕೃಣವನ್ । ಅಕುರ್ವನ್ ॥

॥ ಪ್ರತಿಪದಾರ್ಥ ॥

ಪುರಸ್ತಾತ್—ಪೂರ್ವದಿಕ್ಕಿನಲ್ಲಿ । ತಮಸಃ—ಅಂಧಕಾರಮಧ್ಯದಿಂದ । ಅಸ್ಥಾತ್—ಉದಯಿಸಿದುದೂ । ಇದಮು—ಮುಂದೆ ಕಾಣುತ್ತಿರುವುದೂ । ತ್ಯತ್—ಲೋಕಪ್ರಸಿದ್ಧವಾದುದೂ । ಪುರುತಮಂ—ಅತ್ಯಂತ ಪ್ರಭೂತವಾದುದೂ ಆದ । ಜ್ಯೋತಿಃ—(ಉಷಸ್ಸಿನ) ತೇಜಸ್ಸು । ವಯುನಾವತ್—(ಲೋಕಕ್ಕೆಲ್ಲಾ) ಚೈತನ್ಯ ದಾಯಿಯಾಗಿರುತ್ತದೆ । ನೂನಂ—ಖಂಡಿತವಾಗಿಯೂ । ದಿವಃ—ಆದಿತ್ಯನ । ದುಹಿತರಃ—ಪುತ್ರೀರೂಪ ರಾದವರೂ । ವಿಭಾತೀಃ—ಪ್ರಭಾಯುತರೂ ಆದ । ಉಷಸಃ—ಉಷಸ್ಸುಗಳು । ಜನಾಯ—ಯಜ್ಞಕರ್ತರ । ಗಂತುಂ—ಗಮನಾದಿ ವ್ಯಾಪಾರಸಾಮರ್ಥ್ಯವನ್ನು । ಕೃಣವನ್—ಉಂಟುಮಾಡುತ್ತಾರೆ.

॥ ಭಾವಾರ್ಥ ॥

ಪೂರ್ವದಿಕ್ಕಿನಲ್ಲಿ ಅಂಧಕಾರಮಧ್ಯದಿಂದ ಉದಯಿಸಿದುದೂ, ಮುಂದೆ ಕಾಣುತ್ತಿರುವುದೂ, ಲೋಕಪ್ರಸಿದ್ಧ ವಾದುದೂ, ಅತ್ಯಂತಪ್ರಸಿದ್ಧವಾದುದೂ ಆದ ಉಷಸ್ಸಿನ ತೇಜಸ್ಸು ಲೋಕಕ್ಕೆಲ್ಲಾ ಚೈತನ್ಯದಾಯಿಯಾಗಿರುತ್ತದೆ. ಆದಿತ್ಯನ ಪುತ್ರೀರೂಪರಾದವರೂ, ಪ್ರಭಾಯುತರೂ ಆದ ಉಷಸ್ಸುಗಳು ಖಂಡಿತವಾಗಿಯೂ ಯಜ್ಞಕರ್ತರಿಗೆ ಗಮನಾದಿವ್ಯಾಪಾರಸಾಮರ್ಥ್ಯವನ್ನುಂಟುಮಾಡಲಿ.

## English Translation.

This widely-spread and sense-bestowing light has sprung up in the ast from out of the darkness. verily the brilliant Dawns, the daughters of heaven, are giving to man (the faculty to act).



॥ ಸಂಹಿತಾಪಾಠಃ ॥

ಅಸ್ಥುರು ಚಿತ್ರಾ ಉಷಸಃ ಪುರಸ್ತಾನ್ಮಿತಾಇವ ಸ್ವರವೋಽಧ್ವರೇಷು ।
ವ್ಯೂ ವ್ರಜಸ್ಯ ತಮಸೋ ದ್ವಾರೋಚ್ಛಂತೀರವ್ರಞ್ಛುಚಯಃ ಪಾವಕಾಃ ॥೨॥

॥ ಪದಪಾಠಃ ॥

ಅಸ್ಥುಃ । ಊಂ ಇತಿ । ಚಿತ್ರಾಃ । ಉಷಸಃ । ಪುರಸ್ತಾತ್ । ಮಿತಾಃಇವ । ಸ್ವರವಃ । ಅಧ್ವರೇಷು ।
ವಿ । ಊಂ ಇತಿ । ವ್ರಜಸ್ಯ । ತಮಸಃ । ದ್ವಾರಾ । ಉಚ್ಛಂತೀಃ । ಅವ್ರನ್ । ಶುಚಯಃ । ಪಾವಕಾಃ ॥ ೨ ॥

॥ ಸಾಯಣಭಾಷ್ಯಂ ॥

ಚಿತ್ರಾಶ್ಚಾಯನೀಯಾ ಉಷಸಃ ಪುರಸ್ತಾತ್ಪೂರ್ವಸ್ಯಾಂ ದಿಶ್ಯಸ್ಥುಃ । ತಿಷ್ಠಂತಿ । ವ್ಯಾಪ್ತಾ ಇತ್ಯರ್ಥಃ । ತತ್ರ ದೃಷ್ಟಾಂತಃ । ಅಧ್ವರೇಷು ಮಿತಾಃ ಖಾತಾಃ ಸ್ವರವೋ ಯೂಪಾ ಇವ । ತೇ ಯಥಾ ವೇದ್ಯಾಃ ಪುರತೋ ಭಾಸಂತೇ ತದ್ವತ್ । ಯದ್ಯಪಿ ಸ್ವರುಶಬ್ದೋ ಯೂಪಚ್ಛೇದಪತಿತಪ್ರಥಮಶಕಲವಾಚೀ ಯಃ ಪ್ರಥಮಃ ಶಕಲಃ ಪರಾಪತೇತ್ಸ ಸ್ವರುಃ ಕಾರ್ಯ ಇತ್ಯುಕ್ತತ್ವಾತ್ ತಥಾಪ್ಯತ್ರ ಮಿತಶಬ್ದಶ್ರವಣಾಚ್ಚಷಾಲವಂತಃ ಸ್ವರವಃ । ಋಗ್ವೇ. ೩-೮-೧೦ । ಇತ್ಯಾದೌ ತಥಾ ದರ್ಶನಾಚ್ಚಾತ್ರ ಯೂಪವಚನಃ । ತಾ ವ್ರಜಸ್ಯ ವಾರಕಸ್ಯ ತಮಸೋ ದ್ವಾರಾ ದ್ವಾರಾಣಿ ವ್ಯುಚ್ಛಂತೀಃ ಶುಚಯೋ ದೀಪ್ತಾಃ ಪಾವಕಾಃ ಶೋಧಿಕಾ ಅವ್ರನ್ । ವ್ಯವೃಣ್ವನ್ ॥

॥ ಪ್ರತಿಪದಾರ್ಥ ॥

ಅಧ್ವರೇಷು—ಯಜ್ಞಶಾಲೆಗಳಲ್ಲಿ । ಮಿತಾಃ—ನೆಟ್ಟಿರುವ । ಸ್ವರವ ಇವ— ಯೂಪಸ್ತಂಭಗಳಂತೆ । ಚಿತ್ರಾಃ—ಆಕರ್ಷಕವಾದ ಅವಯವಗಳುಳ್ಳ । ಉಷಸಃ—ಉಷಸ್ಸುಗಳು । ಪುರಸ್ತಾತ್—ಪೂರ್ವದಿಕ್ಕಿನಲ್ಲಿ । ಅಸ್ಥುಃ—ಉದಯಿಸಿ ವ್ಯಾಪಿಸಿವೆ । ವ್ರಜಸ್ಯ—ಎಲ್ಲವನ್ನೂ ಮುಚ್ಚುವ ಸ್ವಭಾವವುಳ್ಳ । ತಮಸಃ—ಅಂಧಕಾರದ । ದ್ವಾರಾ—ಬಾಗಿಲುಗಳನ್ನು ! ವ್ಯುಚ್ಛಂತೀಃ—ಬಿಡಿಸುತ್ತಾ । ಶುಚಯಃ—ಪ್ರಕಾಶಮಾನವಾಗಿಯೂ । ಪಾವಕಾಃ—ಶುದ್ಧಿಕಾರಕಗಳಾಗಿಯೂ । ಅವ್ರನ್—ಆವಿರ್ಭೂತವಾಗಿವೆ.

॥ ಭಾವಾರ್ಥ ॥

ಯಜ್ಞಶಾಲೆಗಳಲ್ಲಿ ನೆಟ್ಟಿರುವ ಯೂಪಸ್ತಂಭಗಳಂತೆ ಆಕರ್ಷಕವಾದ ಅವಯವಗಳುಳ್ಳ ಉಷಸ್ಸುಗಳು ಪೂರ್ವದಿಕ್ಕಿನಲ್ಲಿ ಉದಯಿಸಿ ವ್ಯಾಪಿಸಿವೆ. ಎಲ್ಲವನ್ನೂ ಮುಚ್ಚುವ ಸ್ವಭಾವವುಳ್ಳ ಅಂಧಕಾರದ ಬಾಗಿಲುಗಳನ್ನು ಬಿಡಿಸುತ್ತಾ, ಪ್ರಕಾಶಮಾನವಾಗಿಯೂ, ಶುದ್ಧಿಕಾರಕಗಳಾಗಿಯೂ ಆವಿರ್ಭೂತವಾಗಿವೆ.

## English Translation.

The many-limbed Dawns rise up in the east, like the pillars planted at sacrifices (round the alter); radiant and purifying, they are manifested, opening the gates of the obstructing gloom.



॥ ಸಂಹಿತಾಪಾಠಃ ॥

ಉಚ್ಛಂತೀರದ್ಯ ಚಿತಯಂತ ಭೋಜಾನ್ರಾಧೋದೇಯಾಯೋಷಸೋ ಮಘೋನೀಃ ।

ಅಚಿತ್ರೇ ಅಂತಃ ಪಣಯಃ ಸಸಂತ್ವಬುಧ್ಯಮಾನಾಸ್ತಮಸೋ ವಿಮಧ್ಯೇ ॥೩॥

॥ ಪದಪಾಠಃ ॥

ಉಚ್ಛಂತೀಃ । ಅದ್ಯ । ಚಿತಯಂತ । ಭೋಜಾನ್ । ರಾಧಃऽದೇಯಾಯ । ಉಷಸಃ । ಮಘೋನೀಃ ।

ಅಚಿತ್ರೇ । ಅಂತರಿತಿ । ಪಣಯಃ । ಸಸಂತು । ಅಬುಧ್ಯಮಾನಾಃ । ತಮಸಃ । ವಿऽಮಧ್ಯೇ ॥ ೩ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿನೆ ಉಚ್ಛಂತೀಸ್ತಮೋ ವಿವಾಸಯಂತ್ಯೋ ಮಘೋನೀರ್ಧನವತ್ಯ ಉಷಸೋ ಭೋಜಾನ್ ಭೋಜಯಿತ್ರ್ಯನ್ಯಜಮಾನಾನ್ ತೇಷಾಂ ರಾಧೋದೇಯಾಯ ಸೋಮಾದಿಧನದಾನಾಯ ಚಿತಯಂತ । ಪ್ರಜ್ಞಾಪಯಂತಿ । ಅಚಿತ್ರೇऽಚಾಯನೀಯೇ ತಮಸೋ ವಿಮಧ್ಯೇ । ಅತ್ಯಂತಗಾಢಾಂಧಕಾರ ಇತ್ಯರ್ಥಃ । ತತ್ರ ಪಣಯೋ ವಣಿಜ ಇವಾದಾತಾರೋऽಬುಧ್ಯಮಾನಾಃ ಸಸಂತು । ಸ್ವಪಂತು ॥

॥ ಪ್ರತಿಪದಾರ್ಥ ॥

ಅದ್ಯ—ಈ ಯಾಗದ ದಿನ । ಉಚ್ಛಂತೀಃ—ಕಗ್ಗತ್ತಲೆಯನ್ನು ನಾಶಪಡಿಸುವವರೂ । ಮಘೋನೀಃ—ಧನವಂತರೂ ಆದ । ಉಷಸಃ—ಉಷಸ್ಸುಗಳು । ಭೋಜಾನ್—ದೇವತೆಗಳಿಗೆ ಆಹಾರವನ್ನರ್ಪಿಸುವ ಯಜಮಾನರನ್ನು । ರಾಧೋದೇಯಾಯ—ಸೋಮಾದಿ ಧನವನ್ನರ್ಪಿಸುವುದಕ್ಕಾಗಿ । ಚಿತಯಂತ—ಎಚ್ಚರಗೊಳಿಸುತ್ತಾರೆ । ಪಣಯಃ—ಕರ್ತವ್ಯಜ್ಞಾನವಿಲ್ಲದ ಲೋಭಿಗಳು । ಅಚಿತ್ರೇ—ಜುಗುಪ್ಸಿತವಾದ । ತಮಸಃ—ಕಗ್ಗತ್ತಲೆಯ । ವಿಮಧ್ಯೇ—ಮಧ್ಯಭಾಗದಲ್ಲಿ । ಅಬುಧ್ಯಮಾನಾಃ—ಪ್ರಜ್ಞಾಶೂನ್ಯರಾಗಿ । ಸಸಂತು—ಆಲಸ್ಯದಿಂದ ಮಲಗಿ ನಿದ್ರೆಮಾಡಲಿ.

॥ ಭಾವಾರ್ಥ ॥

ಕಗ್ಗತ್ತಲೆಯನ್ನು ನಾಶಪಡಿಸುವವರೂ, ಧನವಂತರೂ ಆದ ಉಷಸ್ಸುಗಳು ಈ ಯಾಗದ ದಿನ ದೇವತೆಗಳಿಗೆ ಆಹಾರವನ್ನರ್ಪಿಸುವ ಯಜಮಾನರನ್ನು ಸೋಮಾದಿಧನವನ್ನರ್ಪಿಸುವುದಕ್ಕಾಗಿ ಎಚ್ಚರಗೊಳಿಸುತ್ತಾನೆ. ಕರ್ತವ್ಯಜ್ಞಾನವಿಲ್ಲದ ಲೋಭಿಗಳು ಜುಗುಪ್ಸಿತವಾದ ಕಗ್ಗತ್ತಲೆಯ ಮಧ್ಯಭಾಗದಲ್ಲಿ ಪ್ರಜ್ಞಾಶೂನ್ಯರಾಗಿ ಆಲಸ್ಯದಿಂದ ಮಲಗಿ ನಿದ್ರೆಮಾಡಲಿ.

English Translation.

The gloom-dispelling, affluent Dawns animate the pious worshippers to offer (sacrificial) treasure : may the churlish (traffickers) sleep on unawakened, in the unlovely depth of darkness.



॥ ಸಂಹಿತಾಪಾಠಃ ॥

ಕುವಿತ್ಸ ದೇವೀಃ ಸನಯೋ ನವೋ ವಾ ಯಾಮೋ ಬಭೂಯಾದುಷಸೋ ವೋ ಅದ್ಯ ।

ಯೇನಾ ನವಗ್ವೇ ಅಂಗಿರೇ ದಶಗ್ವೇ ಸಪ್ತಾಸ್ಯೇ ರೇವತೀ ರೇವದೂಷ ॥ ೪ ॥

॥ ಪದಪಾಠಃ ॥

ಕುವಿತ್ । ಸಃ । ದೇವೀಃ । ಸನಯಃ । ನವಃ । ವಾ । ಯಾಮಃ । ಬಭೂಯಾತ್ । ಉಷಸಃ । ವಃ । ಅದ್ಯ ।

ಯೇನ । ನವಽಗ್ವೇ । ಅಂಗಿರೇ । ದಶಽಗ್ವೇ । ಸಪ್ತಽಆಸ್ಯೇ । ರೇವತೀಃ । ರೇವತ್ । ಊಷ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವೀರ್ದ್ಯೋತಮಾನಾ ಉಷಸೋ ವೋ ಯುಷ್ಮಾನ್ ಸನಯಃ ಪುರಾಣೋ ನವೋ ವಾ ಯಾಮೋ ಗಮನಸಾಧನಃ ಸ ರಥೋಽದ್ಯಾಸ್ಮಿನ್ಯಾಗದಿನೇ ಕುವಿದ್ಬಹುವಾರಂ ಬಭೂಯಾತ್ । ಭವೇತ್ । ಗಚ್ಛೇದಿತ್ಯರ್ಥಃ । ಯೇನ ರಥೇನ ಹೇ ರೇವತೀರ್ಧನವತ್ಯೋ ಯೂಯಂ ನವಗ್ವೇ ದಶಗ್ವೇ ಸಪ್ತಾಸ್ಯೇ ಸಪ್ತಚ್ಛಂದೋಯುಕ್ತಮುಖೇಽಂಗಿರೇಽಂಗಿರೋಗಣೇ । ತೌ ದ್ವೌ ತತ್ರ ಯೇಽಪ್ಯಂಗಿರಸಸ್ತೇಷಾಂ ಗಣೇ । ಕಥಾನ್ಯತ್ರ ನವಗ್ವೋ ನು ದಶಗ್ವೋ ಅಂಗಿರಸ್ತಮಃ । ಋಗ್ವೇ. ೧೦-೬೨-೬ । ಇತಿ । ರೇವದ್ಧನವದ್ಯಥಾ ಭವತಿ ತಥೋಷ । ವಿಭಾತಂ ಕೃತವತ್ಯಃ ॥ ವಸೇರ್ವ್ಯುಚ್ಛನಕರ್ಮಣೋ ಲಿಣ್ಮಧ್ಯಮಬಹುವಚನಸ್ಯೇದಂ ರೂಪಂ ॥

॥ ಪ್ರತಿಪದಾರ್ಥ ॥

ದೇವೀಃ—ಪ್ರಕಾಶಮಾನರಾದ । ಉಷಸಃ—ಎಲೈ ಉಷಸ್ಸುಗಳೇ । ಯೇನ—ಯಾವ ರಥದಿಂದ ಬಂದು । ರೇವತೀಃ—ಧನವತಿಯರಾದ ನೀವು । ನವಗ್ವೇ—ನವಗ್ವನಾಮದಿಂದ ಪ್ರಸಿದ್ಧರೂ । ದಶಗ್ವೇ—ದಶಗ್ವನಾಮದಿಂದ ಪ್ರಸಿದ್ಧರೂ । ಸಪ್ತಾಸ್ಯೇ—ಸಪ್ತಚ್ಛಂದೋರೂಪವಾದ ಮುಖವುಳ್ಳವರೂ ಆದ । ಅಂಗಿರೇ—ಅಂಗಿರಸ್ಸುಗಳ ಸಮೂಹದಲ್ಲಿ । ರೇವತ್—ಧನಯುಕ್ತರಾಗುವಂತೆ । ಊಷ—ಪ್ರಕಾಶವನ್ನುಂಟುಮಾಡುತ್ತೀರೋ ಅಂತಹ । ಸನಯಃ—ಪುರಾತನವಾದುದಾಗಲಿ । ನವೋ ವಾ—ಅಥವಾ ನೂತನವಾದುದಾಗಲಿ । ಯಾಮಃ—ಗಮನಸಾಧನವಾದ । ಸಃ—ರಥವು । ಅದ್ಯ—ಈ ಯಾಗ ದಿನದಲ್ಲಿ । ಕುವಿತ್—ಅನೇಕವೇಳೆ । ವಃ—ನಿಮ್ಮನ್ನು ಇಲ್ಲಿಗೆ ಕರೆತರಲು । ಬಭೂಯಾತ್—ನಿಮ್ಮಲ್ಲಿಗೆ ಬರಲಿ.

॥ ಭಾವಾರ್ಥ ॥

ಪ್ರಕಾಶಮಾನರಾದ ಎಲೈ ಉಷಸ್ಸುಗಳೇ; ಯಾವ ರಥದಿಂದ ಧನವತಿಯರಾದ ನೀವು ಬಂದು ನವಗ್ವನಾಮದಿಂದ ಪ್ರಸಿದ್ಧರೂ, ದಶಗ್ವನಾಮದಿಂದ ಪ್ರಸಿದ್ಧರೂ ಸಪ್ತಚ್ಛಂದೋರೂಪವಾದ ಮುಖವುಳ್ಳವರೂ ಆದ ಅಂಗೀರಸ್ಸುಗಳ ಸಮೂಹದಲ್ಲಿ ಧನಯುಕ್ತರಾಗುವಂತೆ ಪ್ರಕಾಶಿಸುತ್ತೀರೋ ಅಂತಹ ರಥವು ನಿಮ್ಮನ್ನು ಈ ಯಾಗದಿನದಲ್ಲಿ ಇಲ್ಲಿಗೆ ಕರೆತರಲು ಪುರಾತನವಾದುದಾಗಲಿ ಅಥವಾ ನೂತನವಾದುದಾಗಲಿ ನಿಮ್ಮಲ್ಲಿಗೆ ಅನೇಕವೇಳೆ ಬರಲಿ.

## English Translation.

Divine Dawns, may your chariot, whether old or new, be frequent at this day's (worship), wherewith affluent Dawns, possessing riches, (you shine) upon the seven-mouthed (troop of the) Angirasas, the observers of the nine or ten days' rite.

॥ ವಿಶೇಷವಿಷಯಗಳು ॥

ನವಗ್ವೇ, ದಶಗ್ವೇ— ನವಭಿರ್ಮಾಸೈರ್ಗಚ್ಛಂತೀತಿ ನವಗ್ವಾ । ದಶಭಿರ್ಮಾಸೈರ್ಗಚ್ಛಂತೀತಿ ದಶಗ್ವಾಃ । ಅಂಗಿರಸಾಂ ಸತ್ರಮಾಸೀನಾನಾಂ ಮಧ್ಯೇ ಯೇ ನವಭಿರ್ಮಾಸೈರವಾಪ್ತಫಲಾ ಉತ್ಥಿತಾಸ್ತೇಷಾಂ ನವಗ್ವಾ ಇತಿ ಸಂಜ್ಞಾ । ದಶಭಿರ್ಮಾಸೈರ್ದಶಗ್ವಾ ಇತಿ ಚ ॥ ಅಂಗಿರಾಋಷಿಯ ವಂಶದಲ್ಲಿ ಕೆಲವರು ಸಂವತ್ಸರಕಾಲಮಾಡುವ ಸತ್ರಯಾಗದಲ್ಲಿ ಒಂಭತ್ತುತಿಂಗಳಲ್ಲಿಯೇ ಯಜ್ಞಾನುಷ್ಠಾನದಿಂದ ಸಿದ್ಧಿಯನ್ನು ಪಡೆದಿರುವರು. ಅವರನ್ನು ಅಂಗಿರಸ್ತಮಾ ನವಗ್ವಾಃ ಒಂಭತ್ತು ತಿಂಗಳಲ್ಲಿಯೇ ಇಷ್ಟಸಿದ್ಧಿಯನ್ನು ಪಡೆದ ಅಂಗಿರಾಋಷಿ ವಂಶಸ್ಥರಲ್ಲಿ ಶ್ರೇಷ್ಠರಾದವರು ಎಂದೂ, ಹತ್ತುತಿಂಗಳಲ್ಲಿ ಇಷ್ಟಸಿದ್ಧಿಯನ್ನು ಪಡೆದ ಅಂಗಿರಾ ಋಷಿವಂಶಸ್ಥರನ್ನು ದಶಗ್ವಾಃ ಎಂದೂ ಹೇಳುವ ರೂಢಿ ಇದೆ. ಈ ವಿಷಯದಲ್ಲಿ ಪಾಶ್ಚಾತ್ಯ ಪಂಡಿತರು ಈ ಶಬ್ದದ ಅರ್ಥವಿವರಣೆ ಮಾಡುವಾಗ— The term Navagva is applied to a man generally an Angiras, in the highest degree (Angirastama-ಅಂಗಿರಸ್ತಮ) who appears as a mystic race of olden times coupled with, and conceived probably as related to the Angir-

ases they are often associated with the Dasagvas (ದಶಗ್ವ). ಈ ಶಬ್ದಪ್ರಯೋಗವು ಋಗ್ವೇದದ ಅನೇಕ ಋಕ್ಕುಗಳಲ್ಲಿರುವುವು ಕೆಲವು ಉದಾಹರಣೆಗಳನ್ನು ಕೊಡುವೆವು.

ಯೇನಾ ನವಗ್ವೋ ದಧ್ಯಙ್ಙಪೋರ್ಣುತೇ ಯೇನ ವಿಪ್ರಾಸ ಆಪಿರೇ ।

(ಋ. ಸಂ. ೯-೧೦೮-೪)

ನವಗ್ವೋ ನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು ಮಂಹತೇ ।

(ಋ. ಸಂ. ೧೦-೬೨-೬)

ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।

(ಋ. ಸಂ. ೩-೩೯-೫)

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ॥

(ಋ. ಸಂ. ೧೦-೧೪-೬)

ಸ ಸುಷ್ಟುಭಾ ಸ ಸ್ತುಭಾ ಸಪ್ತ ವಿಪ್ರೈಃ ಸ್ವರೇಣಾದ್ರಿಂ ಸ್ವರ್ಯೋ೩ ನವಗ್ವೈಃ ।
ಸರಣ್ಯುಭಿಃ ಫಲಿಗಮಿಂದ್ರ ಶಕ್ರ ವಲಂ ರವೇಣ ದರಯೋ ದಶಗ್ವೈಃ ॥

(ಋ. ಸಂ. ೧-೬೨-೪)

ಇತ್ಯಾದಿ ಅನೇಕ ಋಗ್ವೇದದ ಋಕ್ಕುಗಳಲ್ಲಿಯೂ, ಅಥರ್ವವೇದ ಸಂ ೧೯-೧-೫೬; ೧೮-೩-೨೦ ಮೊದಲಾದ ಮಂತ್ರಗಳಲ್ಲಿಯೂ ಈ ಶಬ್ದಗಳ ಪ್ರಯೋಗವಿದೆ. ಇವುಗಳಲ್ಲಿ ಎರಡನೆಯ ಉದಾಹರಣೆಯಲ್ಲಿ ಹೇಳಿರುವ ನವಗ್ವ ಮತ್ತು ದಶಗ್ವ ಎಂಬ ಪ್ರಖ್ಯಾತಿ ನಾಮವನ್ನು ಪಡೆದ ಅಂಗಿರಾಋಷಿವಂಶದಲ್ಲಿ ಶ್ರೇಷ್ಠನಾದವನು ದೇವತೆಗಳಿಂದಲೂ ಗೌರವಿಸಲ್ಪಡುತ್ತಾನೆ ಎಂಬುದು ಗಮನಾರ್ಹವಾಗಿದೆ.



॥ ಸಂಹಿತಾಪಾಠಃ ॥

ಯೂಯಂ ಹಿ ದೇವೀರ್ಋತಯುಗ್ಭಿರಶ್ವೈಃ ಪರಿಪ್ರಯಾಥ ಭುವನಾನಿ ಸದ್ಯಃ ।
ಪ್ರಬೋಧಯಂತೀರುಷಸಃ ಸಸಂತಂ ದ್ವಿಪಾಚ್ಚತುಷ್ಪಾಚ್ಚರಥಾಯ ಜೀವಂ ॥

॥ ಪದಪಾಠಃ ॥

ಯೂಯಂ । ಹಿ । ದೇವೀಃ । ಋತಯುಕ್ಽಭಿಃ । ಅಶ್ವೈಃ । ಪರಿಽಪ್ರಯಾಥ । ಭುವನಾನಿ । ಸದ್ಯಃ ।
ಪ್ರಽಬೋಧಯಂತೀಃ । ಉಷಸಃ । ಸಸಂತಂ । ದ್ವಿಽಪಾತ್ । ಚತುಃಽಪಾತ್ । ಚರಥಾಯ । ಜೀವಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ದೇವೀರ್ದ್ಯೋತಮಾನಾ ಉಷಸೋ ಯೂಯಂ ಹಿ ಖಲು ಋತಯುಗ್ಭಿರ್ಯಜ್ಞ-ಗಾಮಿಭಿರಶ್ವೈರ್ಭುವನಾನಿ ಸದ್ಯಃ ಪರಿಪ್ರಯಾಥ । ಪರಿತಃ ಪ್ರಕೃಷ್ಟಂ ಗಚ್ಛಥ । ಕಿಂ ಕುರ್ವತ್ಯಃ । ಸಸಂತಂ ಸ್ವಪಂತಂ ದ್ವಿಪಾಚ್ಚತುಷ್ಪಾನ್ಮನುಷ್ಯಗವಾದಿಲಕ್ಷಣಂ ಜೀವಂ ಚರಥಾಯ ಚರಣಾಯ ಗಮನಾದಿವ್ಯವಹಾರಾಯ ಪ್ರಬೋಧಯಂತೀಃ ಪ್ರಬೋಧಯಂತ್ಯಃ ಸತ್ಯಃ ಪರಿಪ್ರಯಾಥ ॥

॥ ಪ್ರತಿಪದಾರ್ಥ ॥

ದೇವೀಃ—ಪ್ರಕಾಶಮಾನರಾದ । ಉಷಸಃ—ಎಲೈ ಉಷಸ್ಸುಗಳೇ । ಯೂಯಂ ಹಿ—ನೀವುಗಳು । ಸಸಂತಂ—ನಿದ್ರೆಮಾಡುತ್ತಿರುವ । ದ್ವಿಪಾತ್—ಎರಡು ಕಾಲುಗಳುಳ್ಳವೂ । ಚತುಷ್ಪಾತ್—ನಾಲ್ಕು ಕಾಲುಗಳುಳ್ಳವೂ ಆದ । ಜೀವಂ—ಪ್ರಾಣಿಗಳನ್ನು । ಚರಥಾಯ—ಅವುಗಳ ಗಮನಾದಿ ವ್ಯಾಪಾರಕ್ಕಾಗಿ । ಪ್ರಬೋಧಯಂತೀಃ—ಎಚ್ಚರಗೊಳಿಸುತ್ತಾ । ಋತಯುಗ್ಭಿಃ—ಯಜ್ಞಗಾಮಿಗಳಾದ । ಅಶ್ವೈಃ—ಅಶ್ವಗಳೊಡನೆ । ಭುವನಾನಿ—ಪ್ರಪಂಚಗಳನ್ನೆಲ್ಲಾ । ಸದ್ಯಃ—ಶೀಘ್ರವಾಗಿ । ಪರಿಪ್ರಯಾಥ—ಸಂಚರಿಸಿರಿ.

॥ ಭಾವಾರ್ಥ ॥

ಪ್ರಕಾಶಮಾನರಾದ ಎಲೈ ಉಷಸ್ಸುಗಳೇ, ನೀವುಗಳು ನಿದ್ರೆಮಾಡುತ್ತಿರುವ ಎರಡುಕಾಲುಗಳುಳ್ಳವೂ, ನಾಲ್ಕು ಕಾಲುಗಳುಳ್ಳವೂ ಆದ ಪ್ರಾಣಿಗಳನ್ನು ಅವುಗಳ ಗಮನಾದಿ ವ್ಯಾಪಾರಕ್ಕಾಗಿ ಎಚ್ಚರಗೊಳಿಸುತ್ತಾ, ಯಜ್ಞಗಾಮಿಗಳಾದ ಅಶ್ವಗಳೊಡನೆ ಪ್ರಪಂಚಗಳನ್ನೆಲ್ಲಾ ಶೀಘ್ರವಾಗಿ ಸಂಚರಿಸಿರಿ.

## English Translation.

Divine Dawns, with horses that frequent sacrifices you quickly travel round the regions (of space) : awake the sleeping being, weather biped or quadruped, to pursue (his functions).



॥ ಸಂಹಿತಾಪಾಠಃ ॥

ಕ್ವ ಸ್ವಿದಾಸಾಂ ಕತಮಾ ಪುರಾಣೀ ಯಯಾ ವಿಧಾನಾ ವಿದಧುರ್ಋಭೂಣಾಂ ।
ಶುಭಂ ಯಚ್ಛುಭ್ರಾ ಉಷಸಶ್ಚರಂತಿ ನ ವಿ ಜ್ಞಾಯಂತೇ ಸದೃಶೀರಜುರ್ಯಾಃ ॥ ೬ ॥

॥ ಪದಪಾಠಃ ॥

ಕ್ವ । ಸ್ವಿತ್ । ಆಸಾಂ । ಕತಮಾ । ಪುರಾಣೀ । ಯಯಾ । ವಿಽಧಾನಾ । ವಿಽದಧುಃ । ಋಭೂಣಾಂ ।
ಶುಭಂ । ಯತ್ । ಶುಭ್ರಾಃ । ಉಷಸಃ । ಚರಂತಿ । ನ । ವಿ । ಜ್ಞಾಯಂತೇ । ಸಽದೃಶೀಃ । ಅಜುರ್ಯಾಃ ॥

॥ ಸಾಯಣಭಾಷ್ಯಂ ॥

ಆಸಾಮುಷಸಾಂ ಮಧ್ಯೇ ಕ್ವ ಸ್ವಿದಭೂದದ್ಯ ಕತಮಾ ಪುರಾಣೀ ಪುರಾತನೀ । ಯಯಾ ಋಭೂಣಾಂ ಸಂಬಂಧೀನಿ ವಿಧಾನಾ ಚಮಸಾದಿನಿರ್ಮಾಣಾನಿ ವಿದಧುಃ । ಆಕುರ್ವನ್ನೃಭವಃ । ಯದ್ಯಾಸ್ಯುಷಸಃ ಶುಭ್ರಾ ದೀಪ್ತಾಃ ಶುಭಂ ಚರಂತಿ । ಶೋಭಾಂ ದೀಪ್ತಿಂ ಕುರ್ವಂತಿ । ತಾ ಅಜುರ್ಯಾ ಅಶೀರ್ಣಾ ನಿತ್ಯನೂತನಾ ನ ವಿ ಜ್ಞಾಯಂತೇ । ಯತಃ ಸದೃಶೀಃ ಸದೃಶ್ಯಃ ಸರ್ವೇಷ್ವಪಿ ದಿವಸೇಷ್ವೇಕರೂಪಾ ಅತೋಽದ್ಯತನ್ಯ ಏತಾ ಏತಾಃ ಪುರಾಣ್ಯ ಇತಿ ನ ಜ್ಞಾಯಂತೇ ಉಷಾಸಾದೃಶ್ಯಂ ಸದೃಶೀರದ್ಯ ಸದೃಶೀರಿದು ಶ್ವಃ । ಋಗ್ವೇ. ೧-೧೨೩-೮ । ಇತ್ಯತ್ರ ಪ್ರತಿಪಾದಿತಂ ॥

॥ ಪ್ರತಿಪದಾರ್ಥಃ ॥

ಯಯಾ—ಯಾವ ಪುರಾತನಳಾದ ಉಷಸ್ಸಿನ ಸಹಾಯದಿಂದ । ಋಭೂಣಾಂ—ಋಭುಗಳ । ವಿಧಾನಾ—ಚಮಸಾದಿ ನಿರ್ಮಾಣಕಾರ್ಯಗಳು । ವಿದಧುಃ—ನೆರವೇರಿದವೋ (ಅಂತಹ) । ಪುರಾಣೀ—ಪುರಾತನಗಳಾದ ಉಷಸ್ಸು । ಆಸಾಂ—ಈ ಅಸಂಖ್ಯಾತವಾದ ಉಷಸ್ಸುಗಳ ನಡುವೆ । ಕತಮಾ—ಯಾರು ? ಕ್ವಸ್ವಿತ್—ಅವಳ ಸ್ಥಾನವೆಲ್ಲಿ । ಯತ್—ಯಾವ । ಉಷಸಃ—ಉಷಸ್ಸುಗಳು । ಶುಭ್ರಾಃ—ಪ್ರಕಾಶಮಾನರಾಗಿಯೂ । ಶುಭಂ—ಮಂಗಳಾತ್ಮಕರಾಗಿಯೂ । ಚರಂತಿ—ಸಂಚರಿಸುತ್ತಾರೆಯೋ (ಅವರು) । ಅಜುರ್ಯಾಃ—ಜರಾರಹಿತರಾಗಿಯೂ । ಸದೃಶೀಃ—ಒಂದೇರೂಪವುಳ್ಳವರಾಗಿಯೂ ಇರುವುದರಿಂದ । ನ ವಿ ಜ್ಞಾಯಂತೇ—ವೈಯುಕ್ತಿಕವಾದ ಭೇದದಿಂದ ಅರಿಯಲ್ಪಡಲಾರರು.

॥ ಭಾವಾರ್ಥಃ ॥

ಯಾವ ಪುರಾತನಗಳಾದ ಉಷಸ್ಸಿನ ಸಹಾಯದಿಂದ ಋಭುಗಳ ಚಮಸಾದಿ ನಿರ್ಮಾಣಕಾರ್ಯಗಳು ನೆರವೇರಿದವೋ ಅಂತಹ ಪುರಾತನಗಳಾದ ಉಷಸ್ಸು ಈ ಅಸಂಖ್ಯಾತವಾದ ಉಷಸ್ಸುಗಳ ನಡುವೆ ಯಾರು? ಅವಳ ಸ್ಥಾನವೆಲ್ಲಿ? ಯಾವ ಉಷಸ್ಸುಗಳು ಪ್ರಕಾಶಮಾನರಾಗಿಯೂ ಮಂಗಳಾತ್ಮಕರಾಗಿಯೂ ಸಂಚರಿಸುತ್ತಾರೆಯೋ ಜರಾರಹಿತರಾಗಿಯೂ, ಒಂದೇ ರೂಪವುಳ್ಳವರಾಗಿಯೂ ಇರುವುದರಿಂದ ವೈಯುಕ್ತಿಕವಾದ ಭೇದದಿಂದ ಅರಿಯಲ್ಪಡಲಾರರು.

## English Translation.

Where is that ancient one of those (Dawns), through whom the works of the Ribhus were accomplished? for as the bright Dawns happily proceed, they are not distinguished, being alike and undecaying.

॥ ವಿಶೇಷವಿಷಯಗಳು ॥

ಸದೃಶೀರದ್ಯ ಸದೃಶೀರಿದು ಶ್ವಃ—ಅಸ್ಮಿನ್ನಹನಿ ಪರಸ್ಪರಂ ಸದೃಶ್ಯಃ । ಪರಸ್ಮಿನ್ನಹನ್ಯಪಿ ಪರಸ್ಪರಂ ಸದೃಶ್ಯ ಏವ । ಅದ್ಯತನ್ಯೋಽಪಿ ಶ್ವಸ್ತನೀಭಿಃ ಸದೃಶ್ಯಃ ಶ್ವಸ್ತನ್ಯಶ್ಚ ಅದ್ಯತನೀಭಿಃ । ಏವಮುಹರಂತರೇಣ

ಸಾದೃಶ್ಯಂ । ಇಲ್ಲಿ ದಿನಗಳಿಗೆ ಪರಸ್ಪರವಾಗಿ ಹೋಲಿಕೆಯನ್ನು ವರ್ಣಿಸಿದೆ. ಇವತ್ತಿನ ಅಹಸ್ಸಿಗೆ (ದಿನಕ್ಕೆ) ನಾಳೆಯ ದಿನವು ಸಮನಾಗಿರುತ್ತದೆ. ನಾಳೆಯ ದಿನಕ್ಕೆ ಇವತ್ತಿನ ದಿನವು ಸಮಾನವು. ನಿನ್ನೆಯ ದಿನಕ್ಕೆ ಇವತ್ತಿನ ದಿನವೂ, ನಾಳೆಯ ದಿನವು ಇವತ್ತಿಗೂ ಸಮಾನವೆಂದು ಪರಸ್ಪರವಾದ ಸಾದೃಶ್ಯವನ್ನು ಇಲ್ಲಿ ವಿವರಿಸಿದೆ ಸೂರ್ಯನ ಗತಿವಿಶೇಷ ದಿಂದ ಉಂಟಾಗಿರುವ ಪ್ರಕಾಶನ ಸಮಾನ ಧರ್ಮವನ್ನು ನಿಮಿತ್ತಮಾಡಿಕೊಂಡು ಬೇರೆಯ ದಿನಗಳಿಗೂ ಸಾದೃಶ್ಯವನ್ನು ಹೇಳಬಹುದಾಗಿರುತ್ತದೆ ಎಂದು ಅರ್ಥ. ಹೀಗೆ ಇರುವ ಸಾದೃಶ್ಯವನ್ನು ಸಾಯಣರು ವಿವರಿಸಿರುವರು.

ನಕ್ಷತ್ರಗಳು ಕಾಣದಂತೆ ಇರುವಾಗ ಸೂರ್ಯನು ಉದಯವನ್ನು ಹೊಂದುವವರೆಗಿನ ಕಾಲವು ಇಪ್ಪತ್ತೊಂದು ಘಳಿಗೆಗಳಿಂದ ಇಪ್ಪತ್ತಾರು ಘಳಿಗೆಗಳವರೆಗಿನ ಕಾಲವು ಎಂತಲೂ ಅದನ್ನು ರಾತ್ರಿಯ ಕೊನೆಯ ಭಾಗದಲ್ಲಿ ಪ್ರಾಪ್ತ ವಾಗುವ ಉಷಃಕಾಲವೆಂತಲೂ ವ್ಯವಹಾರಮಾಡುತ್ತಾರೆ. ಸೂರ್ಯನು ಪ್ರತಿದಿನದಲ್ಲಿಯೂ ಐದು ಸಾವಿರದ ಐವತ್ತೊಂಭತ್ತು ಯೋಜನಗಳನ್ನು ಮೇರುವಿನ ಸುತ್ತಲೂ ಪ್ರದಕ್ಷಿಣೆಯನ್ನು ಮಾಡುವ ಕ್ರಮದಿಂದ ಸುತ್ತುತ್ತಿರುವನು. ಸೂರ್ಯನು ಉದಯಿಸುವುದಕ್ಕೆ ಮುಂಚಿತವಾಗಿ (ಉದಯವನ್ನು ಹೊಂದುವ ಪ್ರದೇಶವಾದ ಲಂಕಾನಗರವೇ ಮೊದಲಾದ ಪ್ರದೇಶಕ್ಕೆ ಸೂರ್ಯನು ಬರುವ ವೇಳೆಗೆ ಮುಂಚಿತವಾಗಿ) ಅವನ ಮುಂದುಗಡೆಯಲ್ಲಿ ಉಷಸ್ಸು ಮೂವತ್ತು ಯೋಜನಗಳನ್ನು ಬಂದಿರುತ್ತದೆ. ಇದರಿಂದ ಸೂರ್ಯನು ಇರುವ ಪ್ರದೇಶದ ಮುಂದುಗಡೆಯಲ್ಲಿ ಮೂವತ್ತು ಯೋಜನಗಳ ದೂರದಲ್ಲಿ ಸೂರ್ಯನ ಉದಯವು ಆದಹಾಗೆ ಕಾಣುತ್ತದೆ. ಈ ಪ್ರಕಾರವಾದ ಸನ್ನಿವೇಶವು ಎಲ್ಲಾ ಪ್ರದೇಶಗಳಲ್ಲಿಯೂ ಸಂಭವಿಸುವುದಾಗಿರುತ್ತದೆ.

ಹೀಗೆಯೇ ಉಷಸ್ಸೂ ಕೂಡ ತಾನು ಇರುವ ಪ್ರದೇಶದ ಮುಂದುಗಡೆಯಲ್ಲಿ ಮೂವತ್ತು ಯೋಜನಗಳ ದೂರ ದಲ್ಲಿರುವ ಪ್ರದೇಶದಲ್ಲಿ ಉದಯವನ್ನು ಹೊಂದಿರುತ್ತದೆ. ಲಂಕಾನಗರವೇ ಮೊದಲಾದ ಎಲ್ಲಾ ಪ್ರದೇಶಗಳಲ್ಲಿಯೂ ಇರುವವರೆಲ್ಲರಿಗೂ ಉಷಸ್ಸಿನ ಉದಯವು ಒಂದೇ ವಿಧವಾಗಿ ಗೋಚರವಾಗುತ್ತದೆ ಎಂದು ತಿಳಿಯಬೇಕು.

ಹೀಗೆ ಇರುವಾಗ ಒಂದು ಪ್ರದೇಶದಲ್ಲಿ ಉಷಸ್ಸಿನ ಪ್ರಕಾಶವು ಕಂಡುಬರುವಂತೆಯೇ ಇತರ ಎಲ್ಲಾ ಪ್ರದೇಶ ಗಳಲ್ಲಿಯೂ ಒಂದೇಕಾಲದಲ್ಲಿ ಒಂದೇ ಸಮನಾದ ಉಷಸ್ಸಿನ ಪ್ರಕಾಶವು ಎಲ್ಲರಿಗೂ ಗೋಚರವಾಗುತ್ತದೆ. ಇದರಿಂದ ಉಷಃಕಾಲವನ್ನು ಪ್ರಾರಂಭಮಾಡಿಕೊಂಡು ದಿನಗಳನ್ನು ಬೇರೆಬೇರೆಯಾಗಿರುವಂತೆ ವ್ಯವಹಾರಮಾಡುವ ಕಾರಣ ದಿಂದಲೂ, ಆಯಾಯ ಪ್ರದೇಶಗಳು ಬೇರೆಬೇರೆಯಾಗಿರುವುದರಿಂದಲೂ ಒಂದೇ ಉಷಸ್ಸನ್ನು ಬೇರೆಬೇರೆಯಾಗಿ ಇರುವುದೆಂದು ತಿಳಿದು ಉಷಸ್ಸಿನ ಅನೇಕತ್ವವನ್ನೂ ಅವುಗಳಿಗೆ ಪರಸ್ಪರವಾದ ಸಾದೃಶ್ಯವನ್ನೂ (ಹೋಲಿಕೆಯನ್ನೂ) ಇಲ್ಲಿ ವಿವರಿಸಿರುತ್ತದೆ.

ಆಯಾಯ ಪ್ರದೇಶಗಳ ವಿವಕ್ಷಯಿಲ್ಲದಿರುವಾಗ ಉಷಸ್ಸು ತನ್ನ ಸ್ವಭಾವದಿಂದ ಪರಿಶುದ್ಧವಾಗಿ ಉದಯ ವನ್ನು ಹೊಂದುವುದರಿಂದಲೂ, ಆಯಾಯ ಪದಾರ್ಥಗಳೆಲ್ಲವನ್ನೂ ಪರಿಶುದ್ಧವನ್ನಾಗಿ ಮಾಡುವ (ಅಧಿಕವಾದ) ನಿರತಿಶಯವಾದ ಪರಿಶುದ್ಧತೆಯು ಉಷಸ್ಸಿನಲ್ಲಿರುವುದರಿಂದಲೂ; ಉಷಸ್ಸಿನ ಶುಚಿತ್ವ ವಿಷಯದಲ್ಲಿ ಹೆಚ್ಚು ವಿವರಿಸ ಬೇಕಾದುದಿಲ್ಲ.



॥ ಸಂಹಿತಾಪಾಠಃ ॥

ತಾ ಘಾ ತಾ ಭದ್ರಾ ಉಷಸಃ ಪುರಾಸುರಭಿಷ್ಟಿದ್ಯುಮ್ನಾ ಋತಜಾತಸತ್ಯಾಃ ।
ಯಾಸ್ವೀಜಾನಃ ಶಶಮಾನ ಉಕ್ಥೈಃ ಸ್ತುವಞ್ಛಂಸನ್ದ್ರವಿಣಂ ಸದ್ಯ ಆಪ ॥

॥ ಪದಪಾಠಃ ॥

ತಾಃ । ಘ । ತಾಃ । ಭದ್ರಾಃ । ಉಷಸಃ । ಪುರಾ । ಆಸುಃ । ಅಭಿಷ್ಟಿऽದ್ಯುಮ್ನಾಃ । ಋತಜಾತऽಸತ್ಯಾಃ ।
ಯಾಸು । ಈಜಾನಃ । ಶಶಮಾನಃ । ಉಕ್ಥೈಃ । ಸ್ತುವನ್ । ಶಂಸನ್ । ದ್ರವಿಣಂ । ಸದ್ಯಃ । ಆಪ ॥ ೭ ॥

॥ ಸಾಯಣಭಾಷ್ಯಂ ॥

ತಾ ಘ । ಘೇತಿ ಪ್ರಸಿದ್ಧೌ । ತಾಃ ಖಲೂಪಕಾರಿಣ್ಯಸ್ತಾ ಭದ್ರಾಃ ಕಲ್ಯಾಣ್ಯಃ ಸ್ತುತ್ಯಾ ವಾ ಉಷಸಃ ಪುರಾ ಪೂರ್ವಮಾಸುಃ । ಅಭವನ್ । ಅಭಿಷ್ಟಿದ್ಯುಮ್ನಾಃ ಅಭಿಗಮನಮಾತ್ರೇಣ ದ್ಯುಮ್ನಂ ಧನಂ ಯಾಸಾಂ ತಾಃ । ಋತಜಾತಸತ್ಯಾಃ । ಋತಾರ್ಥಂ ಯಜ್ಞಾರ್ಥಂ ಜಾತಾಶ್ಚ ತಾಃ ಸತ್ಯಾಃ ಸತ್ಯ-ಫಲಾಶ್ಚ ತಾದೃಶ್ಯಃ । ಯಾಸೂಷಃಸ್ವೀಜಾನೋ ಯಾಗಂ ಕುರ್ವಾಣ ಉಕ್ಥೈಃ ಶಸ್ತ್ರೈಃ ಶಶಮಾನಃ ಶಂಸಮಾನಃ ಸ್ತುವನ್ ಸಾಮಭಿಃ ಸ್ತೋತ್ರಂ ನಿಷ್ಪಾದಯನ್ ಶಂಸನ್ ಶಸ್ತ್ರಾಣಿ ಕುರ್ವನ್ ದ್ರವಿಣಂ ಧನಂ ಸದ್ಯ ಆಪ । ಪ್ರಾಪ್ನೋತಿ । ತಾ ಭದ್ರಾ ಇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಈಜಾನಃ—ಯಜ್ಞಕರ್ತನು । ಯಾಸು—ಯಾವ ಉಷಸ್ಸುಗಳಲ್ಲಿ । ಉಕ್ಥೈಃ—ಶಸ್ತ್ರಮಂತ್ರಗಳಿಂದ । ಶಶಮಾನಃ—ಪ್ರಶಂಸಿಸುತ್ತಲೂ । ಸ್ತುವನ್—ಸ್ತುತಿಯನ್ನು ಸಂಪಾದಿಸುತ್ತಲೂ । ಶಂಸನ್—ಸ್ತೋತ್ರಗಳನ್ನು ನಿರ್ಮಿಸುತ್ತಲೂ । ದ್ರವಿಣಂ—ಧನವನ್ನು । ಸದ್ಯಃ—ಒಡನೆಯೇ । ಆಪ—ಹೊಂದುತ್ತಾನೆಯೋ । ತಾ ಘ—ಆ ಉಷಸ್ಸುಗಳೇ (ಉಪಕಾರಿಗಳಾಗುತ್ತಾರೆ) । ತಾಃ ಭದ್ರಾಃ—ಅವರೇ ಕಲ್ಯಾಣಾತ್ಮರಾಗಿ ಆಗುತ್ತಾರೆ । ಪುರಾ—ಹಿಂದೆಯೇ । ಅಭಿಷ್ಟಿದ್ಯುಮ್ನಾಃ—ಆಗಮನಕಾಲದಲ್ಲಿಯೇ ಧನಸಂಪತ್ತಿನಿಂದ ಕೂಡಿದವರೂ । ಋತಜಾತಸತ್ಯಾಃ—ಯಜ್ಞಾರ್ಥವಾಗಿ ಉತ್ಪನ್ನರಾದವರೂ ಮತ್ತು ಸತ್ಯಫಲವುಳ್ಳವರೂ । ಆಸನ್—ಆದರು.

॥ ಭಾವಾರ್ಥ ॥

ಯಜ್ಞಕರ್ತನು ಯಾವ ಉಷಸ್ಸುಗಳನ್ನು ಶಸ್ತ್ರಮಂತ್ರಗಳಿಂದ ಪ್ರಶಂಸಿಸುತ್ತಲೂ, ಅವರಿಗಾಗಿ ಸ್ತುತಿಯನ್ನು ಸಂಪಾದಿಸುತ್ತಲೂ ಶಸ್ತ್ರಮಂತ್ರಗಳನ್ನು ನಿರ್ಮಿಸುತ್ತಲೂ ಅವರಿಂದ ಒಡನೆಯೇ ಧನವನ್ನು ಹೊಂದುತ್ತಾನೆಯೋ, ಆ ಉಷಸ್ಸುಗಳೇ ಜಗದುಪಕಾರಿಗಳು. ಅವರೇ ಕಲ್ಯಾಣಾತ್ಮರೂ ಕಲ್ಯಾಣಕಾರಕರೂ ಆಗಿದ್ದಾರೆ. ಅವರು ಆರಂಭ ಕಾಲದಿಂದಲೇ, ತಮ್ಮ ಆಗಮನ ಕಾಲದಲ್ಲಿಯೇ ಧನಸಂಪತ್ತಿನಿಂದ ಕೂಡಿದವರೂ, ಯಜ್ಞಾರ್ಥವಾಗಿ ಉತ್ಪನ್ನರಾದವರೂ, ಮತ್ತು ಸತ್ಯಫಲವುಳ್ಳವರೂ ಆದರು.

## English Translation.

Verily those auspicious Dawns have been of old, rich with desired blessings, truthful (bestowers) of the results of sacrifice; at which the sacrificer, adoring with (silent) praise, glorifying (with hymns), has quickly obtained wealth.



॥ ಸಂಹಿತಾಪಾಠಃ ॥

ತಾ ಆ ಚರಂತಿ ಸಮನಾ ಪುರಸ್ತಾತ್ಸಮಾನತಃ ಸಮನಾ ಪಪ್ರಥಾನಾಃ ।

ಋತಸ್ಯ ದೇವೀಃ ಸದಸೋ ಬುಧಾನಾ ಗವಾಂ ನ ಸರ್ಗಾ ಉಷಸೋ ಜರಂತೇ ॥ ೮ ॥

॥ ಪದಪಾಠಃ ॥

ತಾಃ । ಆ । ಚರಂತಿ । ಸಮನಾ । ಪುರಸ್ತಾತ್ । ಸಮಾನತಃ । ಸಮನಾ । ಪಪ್ರಥಾನಾಃ ।

ಋತಸ್ಯ । ದೇವೀಃ । ಸದಸಃ । ಬುಧಾನಾಃ । ಗವಾಂ । ನ । ಸರ್ಗಾಃ । ಉಷಸಃ । ಜರಂತೇ ॥ ೮ ॥

॥ ಸಾಯಣಭಾಷ್ಯಂ ॥

ತಾ ಉಷಸ ಆ ಸರ್ವತಶ್ಚರಂತಿ । ಸಮನಾ ಸರ್ವತಃ ಸಮಾನಾಃ ಪುರಸ್ತಾತ್ಪೂರ್ವಸ್ಯಾಂ ದಿಶಿ ಸಮಾನತಃ ಸಮಾನಾದ್ದೇಶಾದಂತರಿಕ್ಷಾತ್ಸಮನಾ ಸರ್ವತಃ ಪಪ್ರಥಾನಾಃ ಪ್ರಥಮಾನಾ ಋತಸ್ಯ ಯಜ್ಞಸ್ಯ ಸದಸಃ ಸದಃ । ತತ್ರತ್ಯಮೃರ್ತ್ವಿಗ್ಗೃವಿರಾದಿಕಮಿತ್ಯರ್ಥಃ । ಬುಧಾನಾ ಬೋಧಯಂತ್ಯಃ ॥ ಅಂತರ್ಭಾವಿತಣ್ಯರ್ಥೋಽಯಂ ॥ ಏವಂ ಮಹಾನುಭಾವಾ ಉಷಸೋ ಜರಂತೇ । ಸ್ತೂಯಂತೇ । ಗವಾಂ ಸರ್ಗಾ ನ ಉದಕಾನಾಂ ಸೃಷ್ಟಯ ಇವ । ಗವಾಂ ಸರ್ಗಾ ನ ರಶ್ಮಯಃ । ಋಗ್ವೇ. ೪-೫೨-೫ । ಇತಿ ಹಿ ಶ್ರುತಂ । ತಾ ಯಥಾ ಸರ್ವತ್ರ ಪ್ರಸಂಗಾದುಪಕಾರತ್ವಾಚ್ಚ ಸ್ತೂಯಂತೇ ತದ್ವತ್ ॥

॥ ಪ್ರತಿಪದಾರ್ಥ ॥

ಸಮಾನತಃ—ಅಂತರಿಕ್ಷಾಖ್ಯವಾದ ಸಮಾನಪ್ರದೇಶದಲ್ಲಿ। ಪುರಸ್ತಾತ್—ಪೂರ್ವದಿಕ್ಕಿನಲ್ಲಿ। ಸಮನಾ—ಒಂದೇ ವಿಧವಾಗಿ । ಪಪ್ರಥಾನಾಃ—ಪ್ರಸಿದ್ಧರಾದವರೂ । ಸಮನಾ—ಒಂದೇ ವಿಧವಾದ ರೂಪವುಳ್ಳವರೂ ಆದ । ತಾಃ—ಆ ಉಷಸ್ಸುಗಳು । ಆ ಚರಂತಿ—ಸರ್ವತ್ರ ಪ್ರಸರಿಸುತ್ತಾರೆ । ಋತಸ್ಯ—ಯಜ್ಞದ । ಸದಸಃ—

ಪರಿಷತ್ತನ್ನು ಎಂದರೆ ಋತ್ವಿಗಾದಿಗಳನ್ನು । ಬುಧಾನಾಃ—ಅವರವರ ಕರ್ಮನಿರ್ವಹಣಕ್ಕಾಗಿ ಎಚ್ಚರಿಸುತ್ತಾ । ದೇವೀಃ—ದೇವತಾತ್ಮರಾದ । ಉಷಸಃ—ಉಷಸ್ಸುಗಳು । ಸರ್ಗಾಃ—ಉದಕಸೃಷ್ಟಿಗೆ ಕಾರಣಗಳಾದ । ಗವಾಂ ನ—ರಶ್ಮಿಗಳಂತೆ । ಜರಂತೇ—ಸ್ತುತಿಸಲ್ಪಡುತ್ತಾರೆ.

॥ ಭಾವಾರ್ಥ ॥

ಅಂತರಿಕ್ಷಾಖ್ಯವಾದ ಸಮಾನಪ್ರದೇಶದಲ್ಲಿ ಪೂರ್ವದಿಕ್ಕಿನಲ್ಲಿ ಒಂದೇ ರೀತಿಯಾಗಿ ಪ್ರಸಿದ್ಧರಾದವರೂ, ಒಂದೇ ವಿಧವಾದ ರೂಪವುಳ್ಳವರೂ ಆದ ಉಷಸ್ಸುಗಳು ಸರ್ವತ್ರ ಪ್ರಸರಿಸುತ್ತಾರೆ. ಯಜ್ಞದ ಸದಸ್ಸನ್ನು ಎಂದರೆ ಋತ್ವಿಗಾದಿಗಳನ್ನು ಅವರವರ ಕರ್ಮನಿರ್ವಹಣಕ್ಕಾಗಿ ಎಚ್ಚರಿಸುತ್ತಾ, ದೇವತಾತ್ಮರಾದ ಉಷಸ್ಸುಗಳು ಉದಕಸೃಷ್ಟಿಗೆ ಕಾರಣಗಳಾದ ರಶ್ಮಿಗಳಂತೆ ಸ್ತುತಿಸಲ್ಪಡುತ್ತಾರೆ.

### English Translation.

They spread around of similar form, (coming) from the east, (coming) from the same region alike renowned : the divine Dawns, arousing the assembly of the sacrifice, are glorified llke the (rays) creative of the waters.



॥ ಸಂಹಿತಾಪಾಠಃ ॥

ತಾ ಇನ್ನ್ವೇ೩ವ ಸಮನಾ ಸಮಾನೀರಮೀತವರ್ಣಾ ಉಷಸಶ್ಚರಂತಿ ।
ಗೂಹಂತೀರಭ್ವಮಸಿತಂ ರುಶದ್ಭಿಃ ಶುಕ್ರಾಸ್ತನೂಭಿಃ ಶುಚಯೋ ರುಚಾನಾಃ ॥

॥ ಪದಪಾಠಃ ॥

ತಾಃ । ಇತ್ । ನು । ಏವ । ಸಮನಾ । ಸಮಾನೀಃ । ಅಮೀತಽವರ್ಣಾಃ । ಉಷಸಃ । ಚರಂತಿ ।
ಗೂಹಂತೀಃ । ಅಭ್ವಂ । ಅಸಿತಂ । ರುಶತ್ಽಭಿಃ । ಶುಕ್ರಾಃ । ತನೂಭಿಃ । ಶುಚಯಃ । ರುಚಾನಾಃ ॥ ೯ ॥

॥ ಸಾಯಣಭಾಷ್ಯಂ ॥

ತಾ ಏವೋಷಸಃ । ಇದಿತಿ ಪೂರಣಃ । ನು ಅದ್ಯ ಸಮನಾ ಸಮಾನಾಃ । ಏಕಥೇತ್ಯರ್ಥಃ । ಸಮಾನೀರೇಕರೂಪಾ ಅಮೀತವರ್ಣಾ ಅಹಿಂಸಿತವರ್ಣಾ ಅಪರಿಮಿತವರ್ಣಾ ವಾ ಉಷಸಶ್ಚರಂತಿ ಸರ್ವತಃ । ಕಿಂ ಕುರ್ವತ್ಯಃ । ಅಭ್ವಂ । ಮಹನ್ನಾಮೈತತ್ । ಅತಿಮಹದಸಿತಂ ಕೃಷ್ಣಂ ರೂಪಂ ಗೂಹಂತೀರ್ಗೋಪಯಂತ್ಯೋ ರುಶದ್ಭೀ ರೋಚಮಾನೈಸ್ತನೂಭಿಃ ಸ್ವಶರೀರೈಃ ಶುಕ್ರಾ ದೀಪ್ತಾಃ ಶುಚಯಃ ಶುದ್ಧಾ ರುಚಾನಾ ರೋಚಮಾನಾ ರೋಚಯಂತ್ಯೋ ವಾ ॥

॥ ಪ್ರತಿಪದಾರ್ಥ ॥

ತಾ ಏವ ಉಷಸಃ—ಪ್ರಸಿದ್ಧರಾದ ಅದೇ ಉಷಸ್ಸುಗಳು । ನು—ಈಗ । ಸಮನಾ—ಒಂದೇ ವಿಧವಾಗಿಯೂ । ಸಮಾನೀಃ—ಒಂದೇ ರೂಪವುಳ್ಳವರಾಗಿಯೂ । ಅಮಿತವರ್ಣಾಃ—ಅಪರಿಮಿತವಾದ ವರ್ಣವುಳ್ಳವರಾಗಿಯೂ । ರುಶದ್ಭಿಃ—ಪ್ರಕಾಶಮಾನಗಳಾದ । ತನೂಭಿಃ—ತಮ್ಮ ಶರೀರಗಳಿಂದ । ಶುಕ್ರಾಃ—ಪ್ರಕಾಶಮಾನರಾಗಿಯೂ । ಶುಚಯಃ—ಶುದ್ಧರಾಗಿಯೂ । ರುಚಾನಾಃ—ಆಕರ್ಷಕರಾಗಿಯೂ ಇದ್ದು । ಅಭ್ವಂ—ಮಹತ್ತಾದ । ಅಸಿತಂ—ಕಗ್ಗತ್ತಲೆಯನ್ನು । ಗೂಹಂತೀಃ—ಮರೆಮಾಡುತ್ತಾ । ಚರಂತಿ—ಸುತ್ತಲೂ ಸಂಚರಿಸುತ್ತಾರೆ.

॥ ಭಾವಾರ್ಥ ॥

ಪ್ರಸಿದ್ಧರಾದ ಅದೇ ಉಷಸ್ಸುಗಳು ಒಂದೇ ವಿಧವಾಗಿಯೂ, ಒಂದೇ ರೂಪವುಳ್ಳವರಾಗಿಯೂ, ಅಪರಿಮಿತವಾದ ವರ್ಣವುಳ್ಳವರಾಗಿಯೂ, ಆರೋಚಕಗಳಾದ ತಮ್ಮ ಶರೀರಗಳಿಂದ ಪ್ರಕಾಶಮಾನರಾಗಿಯೂ, ಶುದ್ಧರಾಗಿಯೂ, ಆಕರ್ಷಕರಾಗಿಯೂ ಇದ್ದು ಮಹತ್ತಾದ ಕಗ್ಗತ್ತಲೆಯನ್ನು ಮರೆಮಾಡುತ್ತಾ ಸುತ್ತಲೂ ಸಂಚರಿಸುತ್ತಾರೆ.

## English Translation.

Those Dawns proceed verily all alike, of similar form, of infinate hues, pure, bright, illumining, concealing by their radiant persons the very great gloom.

॥ ಸಂಹಿತಾಪಾಠಃ ॥

ರಯಿಂ ದಿವೋ ದುಹಿತರೋ ವಿಭಾತೀಃ ಪ್ರಜಾವಂತಂ ಯಚ್ಛತಾಸ್ಮಾಸು ದೇವೀಃ ।
ಸ್ಯೋನಾದಾ ವಃ ಪ್ರತಿಬುಧ್ಯಮಾನಾಃ ಸುವೀರ್ಯಸ್ಯ ಪತಯಃ ಸ್ಯಾಮ ॥

॥ ಪದಪಾಠಃ ॥

ರಯಿಂ । ದಿವಃ । ದುಹಿತರಃ । ವಿऽಭಾತೀಃ । ಪ್ರಜಾऽವಂತಂ । ಯಚ್ಛತ । ಅಸ್ಮಾಸು । ದೇವೀಃ ।
ಸ್ಯೋನಾತ್ । ಆ । ವಃ । ಪ್ರತಿऽಬುಧ್ಯಮಾನಾಃ । ಸುऽವೀರ್ಯಸ್ಯ । ಪತಯಃ । ಸ್ಯಾಮ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ದಿವೋ ದುಹಿತರೋ ದ್ಯೋತಮಾನಸ್ಯಾದಿತ್ಯಸ್ಯ ದುಹಿತೃಸ್ಥಾನೀಯಾ ವಿಭಾತೀರ್ವಿಭಾತ್ಯೋ ವಿಶೇಷೇಣ ಭಾನಂ ಕುರ್ವತ್ಯೋऽಸ್ಮಾಸು ಪ್ರಜಾವಂತಂ ರಯಿಂ ಪುತ್ರಾದ್ಯುಪೇತಂ ಧನಂ ಯಚ್ಛತ ।

ದತ್ತ । ಹೇ ದೇವೀರ್ದೇವ್ಯಃ ಸ್ಯೋನಾತ್ಸುಖಾನ್ನಿಮಿತ್ತಭೂತಾದ್ವೋ ಯುಷ್ಮಾನ್ ಪ್ರತಿಬುಧ್ಯಮಾನಾಃ ಪ್ರತಿಬೋಧಯಂತೋ ವಯಂ ಸುವೀರ್ಯಸ್ಯ ಪತಯಃ ಸ್ಯಾಮ । ಪುತ್ರಾದಿಸಹಿತಸ್ಯ ಧನಸ್ಯ ಪಾಲಕಾ ಭವೇಮ ॥

॥ ಪ್ರತಿಪದಾರ್ಥ ॥

ದಿವಃ—ಪ್ರಕಾಶಮಾನನಾದ ಆದಿತ್ಯನಿಗೆ । ದುಹಿತರಃ—ಪುತ್ರೀರೂಪರೂ । ವಿಭಾತೀಃ—ವಿಶೇಷ ರೀತಿಯಿಂದ ಕಂಗೊಳಿಸುವವರೂ ಆದ ಎಲೈ ಉಷಸ್ಸುಗಳೇ । ಅಸ್ಮಾಸು—ನಮ್ಮಲ್ಲಿ । ಪ್ರಜಾವಂತಂ—ಪುತ್ರಾದಿ ಗಳಿಂದ ತುಂಬಿದ । ರಯಿಂ—ಧನವನ್ನು । ಯಚ್ಛತ—ಒದಗಿಸಿಕೊಡಿರಿ । ದೇವೀಃ—ದೇವತಾತ್ಮರಾದ ಉಷಸ್ಸುಗಳೇ । ಸ್ಯೋನಾತ್—ಸುಖದ ನಿಮಿತ್ತವಾಗಿ । ವಃ—ನಿಮ್ಮನ್ನು । ಪ್ರತಿಬುಧ್ಯಮಾನಾಃ—ಎಚ್ಚರ ಗೊಳ್ಳಿಸುವ ನಾವು । ಸುವೀರ್ಯಸ್ಯ—ಶಕ್ತಿಯುತವಾದ ಪುತ್ರಾದಿ ಧನಕ್ಕೆ । ಪತಯಃ—ಒಡೆಯರಾಗಿ । ಸ್ಯಾಮ—ಆಗುವಂತಾಗಲಿ.

॥ ಭಾವಾರ್ಥ ॥

ಪ್ರಕಾಶಮಾನನಾದ ಆದಿತ್ಯನಿಗೆ ಪುತ್ರೀರೂಪರೂ, ವಿಶೇಷರೀತಿಯಿಂದ ಕಂಗೊಳಿಸುವವರೂ ಆದ ಉಷಸ್ಸುಗಳೇ, ನಮಗೆ ಸತ್ಪುತ್ರಾದಿಗಳಿಂದ ತುಂಬಿದ ಧನವನ್ನು ಒದಗಿಸಿಕೊಡಿರಿ. ದೇವತಾತ್ಮರಾದ ಉಷಸ್ಸುಗಳೇ, ಸುಖದ ನಿಮಿತ್ತವಾಗಿ ನಿಮ್ಮನ್ನು ಎಚ್ಚರಗೊಳ್ಳಿಸುವ ನಾವು ಶಕ್ತಿಯುತವಾದ ಪುತ್ರಾದಿ ಧನಕ್ಕೆ ಒಡೆಯರಾಗಿ ಆಗುವಂತಾಗಲಿ.

## English Translation.

Divine, resplendent daughters of heaven, bestow upon us wealth, comprehending progeny: awaking you for our benifit, may we be the lords of excellent decendants.



॥ ಸಂಹಿತಾಪಾಠಃ ॥

ತದ್ವೋ ದಿವೋ ದುಹಿತರೋ ವಿಭಾತೀರುಪ ಬ್ರುವ ಉಷಸೋ ಯಜ್ಞಕೇತುಃ ।

ವಯಂ ಸ್ಯಾಮ ಯಶಸೋ ಜನೇಷು ತದ್ದ್ಯೌಶ್ಚ ಧತ್ತಾಂ ಪೃಥಿವೀ ಚ ದೇವೀ ॥ ೧೧ ॥

॥ ಪದಪಾಠಃ ॥

ತತ್ । ವಃ । ದಿವಃ । ದುಹಿತರಃ । ವಿಽಭಾತೀಃ । ಉಪ । ಬ್ರುವೇ । ಉಷಸಃ । ಯಜ್ಞಽಕೇತುಃ ।

ವಯಂ । ಸ್ಯಾಮ । ಯಶಸಃ । ಜನೇಷು । ತತ್ । ದ್ಯೌಃ । ಚ । ಧತ್ತಾಂ । ಪೃಥಿವೀ । ಚ । ದೇವೀ ॥೧೧॥

॥ ಸಾಯಣಭಾಷ್ಯಂ ॥

ತದ್ವೋ ದಿವ ಇತಿ ವ್ಯುಷ್ಟಾಯಾಂ ಜಪೇತ್ ॥

ಹೇ ದಿವೋ ದುಹಿತರೋ ಹೇ ಉಷಸೋ ವಿಭಾತೀರ್ವೋ ಯುಷ್ಮಾನ್ ತದುತ್ತರಾರ್ಧಪ್ರಥಮ-ಪಾದೇನ ವಕ್ಷ್ಯಮಾಣಂ ಫಲಂ ಯಜ್ಞಕೇತುಃ । ಯಜ್ಞ ಏವ ಕೇತುಃ ಪ್ರಜ್ಞಾಪಕೋ ಯಸ್ಯ ತಾದೃಶೋಽಹಮುಪ ಬ್ರುವೇ । ಉಪೇತ್ಯ ಬ್ರವೀಮಿ । ಅಥ ಬಹುವದುಚ್ಯತೇ । ವಯಂ ಸ್ತುವಂತೋ ಜನೇಷ್ವಸ್ಮತ್ಸಮಾನೇಷು ಮಧ್ಯೇ ಯಶಸಃ ಕೀರ್ತೇರನ್ನಸ್ಯ ವಾ ಸ್ವಾಮಿನಃ ಸ್ಯಾಮ । ತದ್ಯಶೋ ದ್ಯೌಃ ಪೃಥಿವೀ ಚ ದೇವೀ ಧತ್ತಾಂ ಧಾರಯತಾಂ ॥

॥ ಪ್ರತಿಪದಾರ್ಥ ॥

ದಿವಃ—ದ್ಯುಲೋಕಸಂಬಂಧಿಯಾದ ಆದಿತ್ಯನ । ದುಹಿತರಃ—ಪುತ್ರಿಯರಾದ । ಉಷಸಃ—ಎಲೈ ಉಷಸ್ಸುಗಳೇ । ಯಜ್ಞಕೇತುಃ—ಯಜ್ಞವೇ ಪ್ರಜ್ಞಾಪಕವಾಗಿ ಉಳ್ಳ ನಾನು ।। ವಿಭಾತೀಃ—ಪ್ರಕಾಶಮಾನರಾದ । ವಃ—ನಿಮ್ಮನ್ನು । ತತ್—ನಮ್ಮ ಉದ್ದಿಷ್ಟವನ್ನು ಕುರಿತು । ಉಪ ಬ್ರುವೇ—ನಿಮ್ಮನ್ನು ಸಮೀಪಿಸಿ ಪ್ರಾರ್ಥಿಸಿ ಕೇಳುತ್ತೇನೆ । ವಯಂ—ಸ್ತೋತೃಗಳಾದ ನಾವು । ಜನೇಷು—ನಮ್ಮ ಸಮಾನರಾದ ಜನರ ನಡುವೆ । ಯಶಸಃ—ಕೀರ್ತಿಗೆ ಅಥವಾ ಅನ್ನಕ್ಕೆ ಒಡೆಯರಾಗಿ । ಸ್ಯಾಮ—ಆಗುವಂತಾಗಲಿ । ತತ್—ನಮ್ಮ ಆ ಅನ್ನವನ್ನು । ದ್ಯೌಃ—ದ್ಯುಲೋಕವೂ । ದೇವೀ—ದೇವತಾತ್ಮಳಾದ । ಪೃಥಿವೀ ಚ—ಪೃಥಿವಿಯೂ ಸಹ । ಧತ್ತಾಂ—ಧರಿಸಲಿ.

॥ ಭಾವಾರ್ಥ ॥

ದ್ಯುಲೋಕಸಂಬಂಧಿಯಾದ ಆದಿತ್ಯನ ಪುತ್ರಿಯರಾದ ಉಷಸ್ಸುಗಳೇ, ಯಜ್ಞವೇ ಪ್ರಜ್ಞಾಪಕವಾಗಿ ಉಳ್ಳ ನಾನು ಪ್ರಕಾಶಮಾನರಾದ ನಿಮ್ಮಲ್ಲಿ ನಮ್ಮ ಉದ್ದಿಷ್ಟವನ್ನು ಕುರಿತು ನಿಮ್ಮನ್ನು ಸಮೀಪಿಸಿ ಪ್ರಾರ್ಥಿಸಿ ಕೇಳುತ್ತೇನೆ. ಸ್ತೋತೃಗಳಾದ ನಾವು ನಮಗೆ ಸಮಾನರಾದ ಜನರ ನಡುವೆ ಅನ್ನಸಂಪತ್ತಿಗೆಲ್ಲಾ ಒಡೆಯರಾಗಿ ಆಗುವಂತಾಗಲಿ. ನಮ್ಮ ಆ ಅನ್ನಸಂಪತ್ತನ್ನು ದ್ಯುಲೋಕವೂ ದೇವತಾತ್ಮಗಳಾದ ಪೃಥಿವಿಯೂ ಸಹ ಧರಿಸಲಿ.

## English Translation.

Daughters of heaven, resplendent Dawns, I address you (as) the announcer of the sacrifice : may we be (the possessors) of celebrity amongst men, and may heaven and the divine earth perpetuate (it).

# ಐವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರತಿ ಷ್ಯೇತಿ ಸಪ್ತರ್ಚಂ ಸಪ್ತಮಂ ಸೂಕ್ತಂ ಗಾಯತ್ರಮುಷೋದೇವತಾಕಂ । ಪ್ರತಿ ಷ್ಯಾ ಸಪ್ತ ಗಾಯತ್ರಮಿತ್ಯನುಕ್ರಮಣಿಕಾ ॥ ಪ್ರಾತರನುವಾಕ ಉಷಸ್ಯೇ ಕ್ರತೌ ಗಾಯತ್ರೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಶಸ್ಯಂ । ಅಥೋಷಸ್ಯಃ ಪ್ರತಿ ಷ್ಯಾ ಸೂನರೀ । ಆ. ೪-೧೪ । ಇತಿ ಹಿ ಸೂತ್ರಿತಂ ॥

ಅನುವಾದವು—ಪ್ರತಿ ಷ್ಯಾ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಉಷಸ್ಸು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರತಿ ಷ್ಯಾ ಸಪ್ತ ಗಾಯತ್ರಂ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಉಷಸ್ಯಕ್ರತುಸಂಬಂಧವಾದ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—ಅಥೋಷಸ್ಯಃ ಪ್ರತಿ ಷ್ಯಾ ಸೂನರೀ ಎಂಬ ಸೂತ್ರದಿಂದ (ಆ. ೪-೧೪) ವಿವೃತವಾಗಿರುವುದು.



## ಸೂಕ್ತ—೫೨

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೨ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ವಾಮದೇವಃ ॥

॥ ದೇವತಾ—ಉಷಾಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರತಿ ಷ್ಯಾ ಸೂನರೀ ಜನೀ ವ್ಯುಚ್ಛಂತೀ ಪರಿ ಸ್ವಸುಃ ।
ದಿವೋ ಅದರ್ಶಿ ದುಹಿತಾ ॥ ೧ ॥

॥ ಪದಪಾಠಃ ॥

ಪ್ರತಿ । ಸ್ಯಾ । ಸೂನರೀ । ಜನೀ । ವಿಽಉಚ್ಛಂತೀ । ಪರಿ । ಸ್ವಸುಃ ।
ದಿವಃ । ಅದರ್ಶಿ । ದುಹಿತಾ ॥ ೧ ॥

॥ ಸಾಯಣಭಾಷ್ಯಂ ॥

ಸ್ಯಾ ಸಾ ಸಂಸ್ತೂಯಮಾನಾ ಸೂನರೀ ಸುಷ್ಠು ಪ್ರಾಣಿನಾಂ ನೇತ್ರೀ ಜನೀ ಜನಯಿತ್ರೀ ಫಲಾನಾಂ ಸ್ವಸುಃ ಸಸ್ಸ್ಯಸ್ಥಾನೀಯಾಯಾ ರಾತ್ರೇಃ ಪರಿ ಉಪರಿಭಾಗೇ ರಾತ್ರಿಪರ್ಯವಸಾನಕಾಲೇ ವ್ಯುಚ್ಛಂತೀ ತಮೋ ವಿವಾಸಯಂತೀ । ಸ್ವಸಾ ಸ್ವಸ್ರೇ ಜ್ಯಾಯಸ್ಯೈ । ಋಗ್ವೇ. ೧-೧೨೪-೮ । ಇತ್ಯುಕ್ತಂ । ದಿವೋ ದ್ಯೋತಮಾನಸ್ಯಾದಿತ್ಯಸ್ಯ ದುಹಿತೋಷಾಃ ಪತ್ಯದರ್ಶಿ । ಪ್ರತಿದೃಶ್ಯತೇ ಸರ್ವೈಃ ॥

॥ ಪ್ರತಿಪದಾರ್ಥ ॥

ದಿವಃ—ಪ್ರಕಾಶಮಾನನಾದ ಆದಿತ್ಯನ । ದುಹಿತಾ—ದುಹಿತೃರೂಪಳೂ । ಸ್ಯಾ—ಪ್ರಶಸ್ಯಳೂ । ಸೂನರೀ—ಪ್ರಾಣಿಗಳಿಗೆ ಶ್ರೇಷ್ಠವಾದ ನೇತ್ರಿಯೂ । ಜನೀ—ಫಲಗಳಿಗೆ ಉತ್ಪಾದಕಳೂ ಆದ ಉಷೋದೇವಿಯು । ಸ್ವಸುಃ—ತನ್ನ ಸಹೋದರಿಯಾದ ರಾತ್ರಿಯ । ಪರಿ—ಕೊನೆಯ ಭಾಗದಲ್ಲಿ । ವ್ಯುಚ್ಛಂತೀ—ತಮಸ್ಸನ್ನು ನಾಶಪಡಿಸುತ್ತಾ । ಪ್ರತಿ ಅದರ್ಶಿ—ಎಲ್ಲರಿಂದಲೂ ನೋಡಲ್ಪಡುತ್ತಾಳೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಆದಿತ್ಯನ ದುಹಿತೃರೂಪಳೂ, ಪ್ರಶಸ್ಯಳೂ, ಪ್ರಾಣಿಗಳಿಗೆ ಶ್ರೇಷ್ಠವಾದ ನೇತ್ರಿಯೂ, ಫಲಗಳಿಗೆ ಉತ್ಪಾದಕಳೂ ಆದ ಉಷೋದೇವಿಯು ತನ್ನ ಸಹೋದರಿಯಾದ ರಾತ್ರಿಯ ಕೊನೆಯ ಭಾಗದಲ್ಲಿ ತಮಸ್ಸನ್ನು ನಾಶಪಡಿಸುತ್ತಾ ಎಲ್ಲರಿಗೂ ಗೋಚರಳಾಗುತ್ತಾಳೆ.

## English Translation.

The daughter of heaven has been seen; the kind conductress (of men), the parent (of benefits), shedding radiance upon (the departure of her) sister night.

---

॥ ಸಂಹಿತಾಪಾಠಃ ॥

ಅಶ್ವೇವ ಚಿತ್ರಾರುಷೀ ಮಾತಾ ಗವಾಮೃತಾವರೀ ।
ಸಖಾಭೂದಶ್ವಿನೋರುಷಾಃ ॥ ೨ ॥

॥ ಪದಪಾಠಃ ॥

ಅಶ್ವಾಽಇವ । ಚಿತ್ರಾ । ಅರುಷೀ । ಮಾತಾ । ಗವಾಂ । ಋತಽವರೀ ।
ಸಖಾ । ಅಭೂತ್ । ಅಶ್ವಿನೋಃ । ಉಷಾಃ ॥ ೨ ॥

॥ ಸಾಯಣಭಾಷ್ಯಂ ॥

ಅಶ್ವೇವ ಚಿತ್ರಾ ಚಾಯನೀಯಾರುಷೀ ಆರೋಚಮಾನಾ ಗವಾಂ ರಶ್ಮೀನಾಂ ಮಾತಾ ನಿರ್ಮಾತ್ರೀ ಋತಾವರೀ ಯಜ್ಞವತ್ಯುಷಾ ಅಶ್ವಿನೋಃ ಸಖಾ ಸಮಾನಖ್ಯಾನಾ ಸಹ ಸ್ತೂಯಮಾನಾಭೂತ್ । ಭವತಿ । ಅಶ್ವಿನೋರುಷಸಾ ಸಹ ಸ್ತೂಯಮಾನತ್ವಾತ್ಸಖಿತ್ವಂ ಪರಸ್ಪರಂ ॥

॥ ಪ್ರತಿಪದಾರ್ಥ ॥

ಅಶ್ವೇವ—ಒಳ್ಳೆಯ ಜಾತ್ಯಶ್ವದಂತೆ । ಚಿತ್ರಾ—ಆಕರ್ಷಕಳೂ । ಅರುಷೀ—ಹೊಂಬಣ್ಣವುಳ್ಳವಳೂ । ಗವಾಂ—ರಶ್ಮಿಗಳ । ಮಾತಾ—ನಿರ್ಮಾತ್ರಿಯೂ (ಜನನಿಯೂ) । ಋತಾವರೀ—ಯಜ್ಞವತಿಯೂ ಆದ । ಉಷಾಃ—ಉಷೋದೇವಿಯು । ಅಶ್ವಿನೋಃ—ಅಶ್ವಿನೀದೇವತೆಗಳಿಗೆ । ಸಖಾ—ಸಮಾನವಾದ ಪೂಜ್ಯತೆ ಯುಳ್ಳವಳಾಗಿ । ಅಭೂತ್—ಆಗುತ್ತಾಳೆ.

॥ ಭಾವಾರ್ಥ ॥

ಒಳ್ಳೆಯ ಜಾತ್ಯಶ್ವದಂತೆ ಆಕರ್ಷಕಳೂ, ಹೊಂಬಣ್ಣವುಳ್ಳವಳೂ, ರಶ್ಮಿಗಳ ಜನನಿಯೂ, ಯಜ್ಞವತಿಯೂ ಆದ ಉಷೋದೇವಿಯು ಅಶ್ವಿನೀದೇವತೆಗಳಿಗೆ ಸಮಾನವಾದ ಪೂಜ್ಯತೆಯುಳ್ಳವಳಾಗಿ ಆಗುತ್ತಾಳೆ. ಎಂದರೆ, ಯಜ್ಞದಲ್ಲಿ ಅವರೊಂದಿಗೆ ಭಾಗವನ್ನು ವಹಿಸುತ್ತಾಳೆ.

## English Translation.

Like a beautiful mare, the radiant mother of the rays of light, the object of sacrifice, (she) is friend of the Aswins.

॥ ಸಂಹಿತಾಪಾಠಃ ॥

ಉತ ಸಖಾಸ್ಯಶ್ವಿನೋರುತ ಮಾತಾ ಗವಾಮಸಿ ।
ಉತೋಷೋ ವಸ್ವ ಈಶಿಷೇ ॥ ೩ ॥

॥ ಪದಪಾಠಃ ॥

ಉತ । ಸಖಾ । ಅಸಿ । ಅಶ್ವಿನೋಃ । ಉತ । ಮಾತಾ । ಗವಾಂ । ಅಸಿ ।
ಉತ । ಉಷಃ । ವಸ್ವಃ । ಈಶಿಷೇ ॥ ೩ ॥

॥ ಸಾಯಣಭಾಷ್ಯಂ ॥

ಉತಾಪಿ ಚಾಶ್ವಿನೋಃ ಸಖಾಸಿ । ಉತಾಪಿ ಚ ಗವಾಂ ರಶ್ಮೀನಾಂ ಮಾತಾಸಿ । ಉತಾಪಿ ಚ ಹೇ ಉಷೋ ವಸ್ವೋ ಧನಸ್ಯೇಶಿಷೇ । ಈಶ್ವರಾ ಭವಸಿ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ । ಅಶ್ವಿನೋಃ—ಅಶ್ವಿನೀದೇವತೆಗಳಿಗೆ । ಸಖಾ—ಸಖಿಭೂತಳಾಗಿ । ಅಸಿ—ಆಗಿದ್ದೀಯೆ । ಉತ—ಮತ್ತು । ಗವಾಂ—ರಶ್ಮಿಗಳಿಗೆ । ಮಾತಾ—ಜನನಿಯಾಗಿ । ಅಸಿ—ಆಗಿದ್ದೀಯೆ । ಉತ—ಮತ್ತು । ವಸ್ವಃ—ಧನಕ್ಕೆ । ಈಶಿಷೇ—ಒಡೆಯಳಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ಅಶ್ವಿನೀ ದೇವತೆಗಳಿಗೆ ಸಖಿಭೂತಳಾಗಿದ್ದೀಯೆ. ರಶ್ಮಿಗಳಿಗೆ ಜನನಿಯಾಗಿಯೂ, ಧನಕ್ಕೆ ಒಡೆಯಳಾಗಿಯೂ ಆಗಿದ್ದೀಯೆ.

## English Translation.

You are the friend of the Aswins : you are the mother of the rays of light : you, Ushas, rule over riches.

---

॥ ಸಂಹಿತಾಪಾಠಃ ॥

ಯಾವಯದ್ದ್ವೇಷಸಂ ತ್ವಾ ಚಿಕಿತ್ವಿತ್ಸೂನೃತಾವರಿ ।

ಪ್ರತಿಸ್ತೋಮೈರಭುತ್ಸ್ಮಹಿ ॥ ೪ ॥

॥ ಪದಪಾಠಃ ॥

ಯವಯತ್ಽದ್ವೇಷಸಂ । ತ್ವಾ । ಚಿಕಿತ್ವಿತ್ । ಸೂನೃತಾಽವರಿ ।

ಪ್ರತಿ । ಸ್ತೋಮೈಃ । ಅಭುತ್ಸ್ಮಹಿ ॥ ೪ ॥

॥ ಸಾಯಣಭಾಷ್ಯಂ ॥

ಯಾವಯದ್ದ್ವೇಷಸಂ । ಯವಯಂತೋ ವಿಯುಜ್ಯಮಾನಾ ದ್ವೇಷಾಂಸಿ ದ್ವೇಷ್ಟಾರೋ ಯಸ್ಯಾಸ್ತಾದೃಶೀ । ಪೃಥಕ್ಕ್ರಿಯಂತೇ ದ್ವೇಷಾಂಸ್ಯನಯೇತಿ ವಾ । ರಾತ್ರೌ ಹನನಾಯೋದ್ಯುಕ್ತಾ ದ್ವೇಷಿಣ ಉಷಃಕಾಲೇ ಹಿ ಪಲಾಯಂತೇ । ತಾದೃಶೀಂ ಚಿಕಿತ್ವಿತ್ ಜ್ಞಾಪಯಂತೀಂ ತ್ವಾ ತ್ವಾಂ

ಸೂನೃತಾವರಿ । ಸೂನೃತೇತಿ ವಾಙ್ನಾಮ । ತದ್ವತಿ ದೇವಿ ಸ್ತೋಮೈಃ ಸ್ತುತಿಭಿಃ ಪ್ರತ್ಯಭುತ್ಸ್ಮಹಿ । ಪ್ರತಿಬೋಧಯಾಮಃ । ಸ್ತುಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಸೂನೃತಾವರಿ—ಸತ್ಯವಾಕ್ಕುಳ್ಳ ಉಷೋದೇವಿಯೇ! ಯೋವಯದ್ದ್ವೇಷಸಂ—ದ್ವೇಷಿಸುವ ಶತ್ರುಗಳನ್ನು ಓಡಿಸುವವಳೂ । ಚಿಕಿತ್ವಿತ್—ಲೋಕಕ್ಕೆಲ್ಲಾ ಪ್ರಜ್ಞಾಪಕಳೂ ಆದ । ತ್ವಾ—ನಿನ್ನನ್ನು । ಸ್ತೋಮೈಃ—ಸ್ತುತಿಗಳಿಂದ । ಪ್ರತಿ ಅಭುತ್ಸ್ಮಹಿ—ಎಚ್ಚರಗೊಳಿಸುತ್ತೇವೆ.

॥ ಭಾವಾರ್ಥ ॥

ಸತ್ಯವಾಕ್ಕುಳ್ಳ ಉಷೋದೇವಿಯೇ, ರಾತ್ರಿಕಾಲದ ಕತ್ತಲೆಯಲ್ಲಿ ಹಿಂಸಿಸಲು ಬಂದ ಶತ್ರುಗಳನ್ನು ನೀನು ಆವಿರ್ಭೂತಳಾಗಿ ಹೊಡದೋಡಿಸುವವಳೂ, ಲೋಕಕ್ಕೆಲ್ಲಾ ಪ್ರಜ್ಞಾಪಕಳೂ ಆದ ನಿನ್ನನ್ನು ಸ್ತುತಿಸಿ ಸ್ತೋತೃಗಳಾದ ನಮ್ಮ ಕಡೆ ಗಮನಕೊಡುವಂತೆ ಎಚ್ಚರಿಸುತ್ತೇವೆ.

## English Translation.

With praises we awaken you, you are endowed with truth; you, the baffler of animosities, the restorer of consciousness.



॥ ಸಂಹಿತಾಪಾಠಃ ॥

ಪ್ರತಿ ಭದ್ರಾ ಅದೃಕ್ಷತ ಗವಾಂ ಸರ್ಗಾ ನ ರಶ್ಮಯಃ ।
ಓಷಾ ಅಪ್ರಾ ಉರು ಜ್ರಯಃ ॥ ೫ ॥

॥ ಪದಪಾಠಃ ॥

ಪ್ರತಿ । ಭದ್ರಾಃ । ಅದೃಕ್ಷತ । ಗವಾಂ । ಸರ್ಗಾಃ । ನ । ರಶ್ಮಯಃ ।
ಆ । ಉಷಾಃ । ಅಪ್ರಾಃ । ಉರು । ಜ್ರಯಃ ॥ ೫ ॥

॥ ಸಾಯಣಭಾಷ್ಯಂ ॥

ಭದ್ರಾಃ ಸ್ತುತ್ಯಾ ರಶ್ಮಯಃ ಪ್ರತ್ಯದೃಕ್ಷತ । ಪ್ರತಿದೃಶ್ಯಂತೇ । ಗವಾಮುದಕಾನಾಂ ಸರ್ಗಾ ನ ವರ್ಷಧಾರಾ ಇವೇಯಮುಷಾ ಉರು ಜ್ರಯೋ ಮಹತ್ತೇಜ ಆಪ್ರಾಃ । ಆಪೂರಯತ್ ॥

॥ ಪ್ರತಿಪದಾರ್ಥ ॥

ಭದ್ರಾಃ—ಮಂಗಳಕಾರಕಗಳಾದ । ರಶ್ಮಯಃ—ರಶ್ಮಿಗಳು । ಗವಾಂ—ಉದಕಗಳ । ಸರ್ಗಾ ನ—ಧಾರೆಗಳಂತೆ । ಪ್ರತಿ ಅದೃಕ್ಷತ—ಎಲ್ಲರಿಗೂ ಗೋಚರವಾಗುತ್ತವೆ । ಉಷಾಃ—ಉಷೋದೇವಿಯು । ಉರು—ಪ್ರಭೂತವಾದ । ಜ್ರಯಃ—ತೇಜಸ್ಸನ್ನು । ಆ ಅಪ್ರಾಃ—ಹರಡಿ ವ್ಯಾಪಿಸುವಂತೆ ಮಾಡಿದ್ದಾಳೆ.

॥ ಭಾವಾರ್ಥ ॥

ಮಂಗಳಕಾರಕಗಳಾದ ರಶ್ಮಿಗಳು, ಉದಕಗಳ ಧಾರೆಗಳಂತೆ ಎಲ್ಲರಿಗೂ ಗೋಚರವಾಗುತ್ತವೆ. ಉಷೋದೇವಿಯು ತನ್ನ ಪ್ರಭೂತವಾದ ತೇಜಸ್ಸನ್ನು ಜಗತ್ತಿಗೆಲ್ಲಾ ಹರಡಿ ವ್ಯಾಪಿಸುವಂತೆ ಮಾಡಿದ್ದಾಳೆ.

English Translation.

The auspicious rays are visible like showers of rain, the dawn has filled (the world) with ample light.

॥ ಸಂಹಿತಾಪಾಠಃ ॥

ಆಪಪ್ರುಷೀ ವಿಭಾವರಿ ವ್ಯಾವಜ್ಜ್ಯೋತಿಷಾ ತಮಃ ।
ಉಷೋ ಅನು ಸ್ವಧಾಮವ ॥ ೬ ॥

॥ ಪದಪಾಠಃ ॥

ಆಽಪಪ್ರುಷೀ । ವಿಭಾಽವರಿ । ವಿ । ಆವಃ । ಜ್ಯೋತಿಷಾ । ತಮಃ ।
ಉಷಃ । ಅನು । ಸ್ವಧಾಂ । ಅವ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಿಭಾವರಿ ವಿಭಾವತ್ಯುಷಸ್ತ್ವಮಾಪಪ್ರುಷ್ಯಾಪೂರಯಂತೀ ತೇಜಸಾ ಜಗತ್ ಜ್ಯೋತಿಷಾ ತೇಜಸಾ ತಮೋಽಂಧಕಾರಂ ವ್ಯಾವಃ । ವ್ಯಾವೃಣೋಃ । ಕಿಂಚ ಅನು ಪಶ್ಚಾತ್ ಸ್ವಧಾಂ ಹವಿರ್ಲಕ್ಷಣಮನ್ನಮವ । ರಕ್ಷ ॥

॥ ಪ್ರತಿಪದಾರ್ಥ ॥

ವಿಭಾವರಿ—ಪ್ರಭಾಯುತಳಾದ । ಉಷಃ—ಎಲೈ ಉಷೋದೇವಿಯೇ । ಆಪಪ್ರುಷೀ—ನಿನ್ನ ತೇಜಸ್ಸಿನಿಂದ ಜಗತ್ತನ್ನೆಲ್ಲಾ ವ್ಯಾಪಿಸುವವಳಾಗಿ । ಜ್ಯೋತಿಷಾ—ಅದೇ ತೇಜಸ್ಸಿನಿಂದ । ತಮಃ—ಅಂಧಕಾರವನ್ನು । ವ್ಯಾವಃ—ಓಡಿಸಿದ್ದೀಯೆ । ಅನು—ತದನಂತರ । ಸ್ವಧಾಂ—ಹವಿಸ್ಸಿನ ರೂಪದ ಅನ್ನವನ್ನು । ಅವ—ರಕ್ಷಿಸು.

॥ ಭಾವಾರ್ಥ ॥

ಪ್ರಭಾಯುತಳಾದ ಎಲೈ ಉಷೋದೇವಿಯೇ, ನಿನ್ನ ತೇಜಸ್ಸಿನಿಂದ ಜಗತ್ತನ್ನೆಲ್ಲಾ ವ್ಯಾಪಿಸುವವಳಾಗಿ ಅದೇ ತೇಜಸ್ಸಿನಿಂದ ಅಂಧಕಾರವನ್ನು ಓಡಿಸಿದ್ದೀಯೆ. ತದನಂತರ ಹವಿಸ್ಸಿನ ರೂಪದ ಅನ್ನವನ್ನು ರಕ್ಷಿಸು.

English Translation.

Brilliant Ushas, filling (the world with light), you disperse the darkness with radiance : thereafter protect the oblation.



॥ ಸಂಹಿತಾಪಾಠಃ ॥

ಆ ದ್ಯಾಂ ತನೋಷಿ ರಶ್ಮಿಭಿರಾಂತರಿಕ್ಷಮುರು ಪ್ರಿಯಂ ॥

ಉಷಃ ಶುಕ್ರೇಣ ಶೋಚಿಷಾ ॥ ೭ ॥

॥ ಪದಪಾಠಃ ॥

ಆ । ದ್ಯಾಂ । ತನೋಷಿ । ರಶ್ಮಿಃಭಿಃ । ಆ । ಅಂತರಿಕ್ಷಂ । ಉರು । ಪ್ರಿಯಂ ।

ಉಷಃ । ಶುಕ್ರೇಣ । ಶೋಚಿಷಾ ॥ ೭ ॥

॥ ಸಾಯಣಭಾಷ್ಯಂ ॥

ಆ ದ್ಯಾಂ ತನೋಷೀತ್ಯೇಷಾ ದೇವಾನಾಂ ಹವಿಃಷೂಷಸೋಽನುವಾಕ್ಯಾ । ಸೂತ್ರಿತಂ ಚ । ಆ ದ್ಯಾಂ ತನೋಷಿ ರಶ್ಮಿಭಿರಾವಹಂತೀ ಪೋಷ್ಯಾ ವಾರ್ಯಾಣಿ । ಆ. ೬-೧೪ । ಇತಿ ॥

ಹೇ ಉಷೋ ರಶ್ಮಿಭಿರ್ದ್ಯಾಂ ದಿವಮಾ ತನೋಷಿ । ಉರು ವಿಸ್ತೀರ್ಣಂ ಪ್ರಿಯಮಂತರಿಕ್ಷಂ ರಶ್ಮಿಭಿರಾ ತನೋಷಿ । ಶುಕ್ರೇಣ ದೀಪ್ತೇನ ಶೋಚಿಷಾ ಪ್ರಕಾಶೇನ ಯುಕ್ತಾ ಸತ್ಯೇವಂ ಕರೋಷಿ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ । ರಶ್ಮಿಭಿಃ—ನಿನ್ನ ರಶ್ಮಿಗಳಿಂದ । ದ್ಯಾಂ—ದ್ಯುಲೋಕವನ್ನು । ಆ ತನೋಷಿ—ವಿಸ್ತೃತವಾಗುವಂತೆ ಮಾಡಿದ್ದೀಯೆ । ಉರು—ವಿಸ್ತೃತವಾದುದೂ । ಪ್ರಿಯಂ—ಪ್ರೀತಿ ಕಾರಕವಾದುದೂ ಆದ । ಅಂತರಿಕ್ಷಂ—ಅಂತರಿಕ್ಷವನ್ನು । ಶುಕ್ರೇಣ—ಪ್ರಭಾಯುತವಾದ । ಶೋಚಿಷಾ—ನಿನ್ನ ಕಾಂತಿಯಿಂದ । ಆ (ತನೋಷಿ)—ವ್ಯಾಪಿಸುತ್ತೀಯೆ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ನಿನ್ನ ರಶ್ಮಿಗಳಿಂದ ದ್ಯುಲೋಕವನ್ನು ವಿಸ್ತೃತವಾಗುವಂತೆ ಮಾಡುತ್ತಾ ವ್ಯಾಪಿಸಿದ್ದೀಯೆ. ವಿಸ್ತೃತವಾದುದೂ, ಪ್ರೀತಿಕಾರಕವಾದುದೂ ಆದ ಅಂತರಿಕ್ಷವನ್ನು ಪ್ರಭಾಯುತವಾದ ಕಾಂತಿಯಿಂದ ವ್ಯಾಪಿಸುತ್ತೀಯೆ.

English Translation.

You overspread, Ushas, the heaven with rays, as well as the vast and beloved firmament with pure lustre.

॥ ವಿಶೇಷವಿಷಯಗಳು ॥

ಆ ದ್ಯಾಂ ತನೋಷಿ ಎಂಬ ಈ ಋಕ್ಕನ್ನು ದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಉಷೋದೇವತೆಗೆ ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಆ ದ್ಯಾಂ ತನೋಷಿ ರಶ್ಮಿಭಿರಃವಹಂತೀ ಪೋಷ್ಯಾ ವಾರ್ಯೋಣಿ ಎಂಬ ಸೂತ್ರದಿಂದ (ಆ. ೬-೧೪) ವಿವೃತವಾಗಿರುವುದು.



# ಐವತ್ತಮೂರನೆಯ ಸೂಕ್ತವು.



॥ ಸಾಯಣಭಾಷ್ಯಂ ॥

ತದ್ದೇವಸ್ಯೇತಿ ಸಪ್ತರ್ಚಮಷ್ಟಮಂ ಸೂಕ್ತಂ ವಾಮದೇವಸ್ಯಾರ್ಷಂ ಜಾಗತಂ ಸಾವಿತ್ರಂ । ತಥಾ ಚಾನುಕ್ರಮ್ಯತೇ । ತದ್ದೇವಸ್ಯ ಸಾವಿತ್ರಂ ತು ಜಾಗತಮಿತಿ ॥ ಆಭಿಪ್ಲವಿಕೇ ತೃತೀಯೇಽಹನಿ ವೈಶ್ವದೇವಶಸ್ತ್ರೇ ಸಾವಿತ್ರನಿವಿದ್ಧಾನಮಿದಂ । ತಥಾ ಚ ಸೂತ್ರಿತಂ । ತದ್ದೇವಸ್ಯ ಘೃತೇನ ದ್ಯಾವಾಪೃಥಿವೀ ಇತಿ ತಿಸ್ರಃ । ಆ. ೭-೭ । ಇತಿ ॥

ಅನುವಾದವು—ತದ್ದೇವಸ್ಯ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಸವಿತೃವು ದೇವತೆಯು ; ಜಗತೀ ಛಂದಸ್ಸು ; ಅನುಕ್ರಮಣಿಕೆಯಲ್ಲಿ—ತದ್ದೇವಸ್ಯ ಸಾವಿತ್ರಂ ತು ಜಾಗತಂ ಎಂದು ಹೇಳಿರುವುದು. ಅಭಿಪ್ಲವವೆಂಬ ಯಾಗದಲ್ಲಿ ಮೂರನೆಯ ದಿವಸ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ಸವಿತೃದೇವತೆಯ ನಿವಿತ್ಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ತದ್ದೇವಸ್ಯ ಘೃತೇನ ದ್ಯಾವಾಪೃಥಿವೀ ಇತಿ ತಿಸ್ರಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೭)

## ಸೂಕ್ತ—೫೩

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೩ ॥
ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ವಾಮದೇವಃ ॥
॥ ದೇವತಾ—ಸವಿತಾ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ತದ್ದೇವಸ್ಯ ಸವಿತುರ್ವಾರ್ಯಂ ಮಹದ್ವೃಣೀಮಹೇ ಅಸುರಸ್ಯ ಪ್ರಚೇತಸಃ ।
ಛರ್ದಿರ್ಯೇನ ದಾಶುಷೇ ಯಚ್ಛತಿ ತ್ಮನಾ ತನ್ನೋ ಮಹಾಁ ಉದಯಾ-
ನ್ದೇವೋ ಅಕ್ತುಭಿಃ ॥ ೧ ॥

॥ ಪದಪಾಠಃ ॥

ತತ್ । ದೇವಸ್ಯ । ಸವಿತುಃ । ವಾರ್ಯಂ । ಮಹತ್ । ವೃಣೀಮಹೇ । ಅಸುರಸ್ಯ । ಪ್ರಽಚೇತಸಃ ।
ಛರ್ದಿಃ । ಯೇನ । ದಾಶುಷೇ । ಯಚ್ಛತಿ । ತ್ಮನಾ । ತತ್ । ನಃ । ಮಹಾನ್ । ಉತ್ । ಅಯಾನ್ ।
ದೇವಃ । ಅಕ್ತುಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಸವಿತುಃ ಪ್ರೇರಕಸ್ಯ ದೇವಸ್ಯ ವಾರ್ಯಂ ವರಣೀಯಂ ಮಹತ್ಪೂಜ್ಯಂ ತದ್ಧನಂ ವೃಣೀಮಹೇ । ಪ್ರಾರ್ಥಯಾಮಃ । ಅಸುರಸ್ಯ । ಅಸುರ್ಬಲಂ । ತದ್ವತಃ ಪ್ರಚೇತಸಃ ಪ್ರಕೃಷ್ಟಮತೇಃ । ದೇವಸ್ಯೇತಿ ಸಂಬಂಧಃ । ಯೇನ ಧನೇನ ಯುಕ್ತಃ ಸನ್ ಛರ್ದಿಃ। ಗೃಹನಾಮೈತತ್ । ಗೃಹೋಪಲಕ್ಷಿತಂ ಧನಜಾತಂ ದಾಶುಷೇ ಹವಿರ್ದತ್ತವತೇ ಯಜಮಾನಾಯ ತ್ಮನಾತ್ಮನೈವ ಯಚ್ಛತಿ ತಚ್ಛರ್ದಿರ್ಮಹಾನ್ದೇವಃ ಸವಿತಾಕ್ತುಭೀ ರಾತ್ರಿಭಿಃ। ಏತದಹ್ನಾಮಪ್ಯುಪಲಕ್ಷಣಂ। ಸರ್ವೈರ್ದಿವಸೈಃ ಸರ್ವೇಷು ದಿವಸೇಷು ನೋಽಸ್ಮಾಕಮುದಯಾನ್ । ಉದ್ಯಚ್ಛತು । ಕರೋತ್ವಿತ್ಯರ್ಥಃ । ಯದ್ವಾ । ಛರ್ದಿರಿತಿ ತೇಜೋನಾಮ । ತತ್ತೇಜ ಉದ್ಯಚ್ಛತ್ವಿತಿ ॥

॥ ಪ್ರತಿಪದಾರ್ಥ ॥

ಯೇನ—ಯಾವ ಧನದಿಂದ ಪೂರ್ಣವಾಗಿ । ದಾಶುಷೇ—ಹವಿರ್ದಾತನಾದ ಯಜಮಾನನಿಗೆ । ತ್ಮನಾ—ಸ್ವಸಂತೋಷದಿಂದಲೇ । ಛರ್ದಿಃ—ಗೃಹವೇ ಮುಂತಾದ ಸಂಪತ್ತುಗಳನ್ನು । ಯಚ್ಛತಿ—(ಸವಿತೃವು)

ಕೊಡುವನೋ ಅಂತಹ | ಅಸುರಸ್ಯ—ಬಲಶಾಲಿಯೂ | ಪ್ರಚೇತಸಃ—ಪ್ರಕೃಷ್ಟವಾದ ಜ್ಞಾನವುಳ್ಳವನೂ | ದೇವಸ್ಯ—ಪ್ರಕಾಶಮಾನನೂ ಆದ | ಸವಿತುಃ—ಸವಿತೃವಿನ | ವಾರ್ಯಂ—(ಎಲ್ಲರಿಂದಲೂ) ಅಪೇಕ್ಷಿತವಾದುದೂ | ಮಹತ್—ಪೂಜ್ಯವಾದುದೂ | ತತ್—ಪ್ರಸಿದ್ಧವಾದುದೂ ಆದ ಅದೇ ಧನವನ್ನು | ವೃಣೀಮಹೇ—ಅಪೇಕ್ಷಿಸಿ ಪ್ರಾರ್ಥಿಸುತ್ತೇವೆ | ತತ್ ಛರ್ದಿಃ—ತೇಜೋಯುತವಾದ ಅದೇ ಸಂಪತ್ತುಗಳನ್ನು | ಮಹಾನ್—ಪೂಜ್ಯನೂ | ದೇವಃ—ದೇವಾತ್ಮನೂ ಆದ ಸವಿತೃವು | ಅಕ್ತುಭಿಃ—ಸಕಲವಾದ (ಅಹೋ) ರಾತ್ರಿಗಳಲ್ಲೂ | ನಃ—ನಮಗೆ | ಉದಯಾನ್—ಉಂಟುಮಾಡಲಿ.

॥ ಭಾವಾರ್ಥ ॥

ಬಲಶಾಲಿಯೂ, ಪ್ರಕೃಷ್ಟವಾದ ಜ್ಞಾನವುಳ್ಳವನೂ, ಪ್ರಕಾಶಮಾನನೂ ಆದ ಸವಿತೃವು ಯಾವ ಧನದಿಂದ ಪೂರ್ಣನಾಗಿ ಹವಿರ್ದಾತನಾದ ಯಜಮಾನನಿಗೆ ಸ್ವಸಂತೋಷದಿಂದಲೇ, ಗೃಹವೇ ಮುಂತಾದ ಸಂಪತ್ತುಗಳನ್ನು ಕೊಡುವನೋ, ಎಲ್ಲರಿಂದಲೂ ಅಪೇಕ್ಷಿತವಾದುದೂ, ಪೂಜ್ಯವಾದುದೂ, ಪ್ರಸಿದ್ಧವಾದುದೂ ಆದ ಅದೇ ಧನವನ್ನಪೇಕ್ಷಿಸಿ ನಾವೂ ಪ್ರಾರ್ಥಿಸುತ್ತೇವೆ. ತೇಜೋಯುತವಾದ ಅದೇ ಸಂಪತ್ತುಗಳನ್ನು ಪೂಜ್ಯನೂ, ದೇವತಾತ್ಮನೂ ಆದ ಸವಿತೃವು ಸಕಲವಾದ ಅಹೋರಾತ್ರಗಳಲ್ಲೂ ನಮಗೆ ಉಂಟುಮಾಡಲಿ.

## English Translation.

We solicit of the divine, powerful, and inteligent Savitri that desirable and ample (wealth), along with which he grants a dwelling to the offerer of the oblation of his own accord : may the great deity us such every day.



॥ ಸಂಹಿತಾಪಾಠಃ ॥

ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ ಪಿಶಂಗಂ ದ್ರಾಪಿಂ ಪ್ರತಿ ಮುಂಚತೇ ಕವಿಃ |

ವಿಚಕ್ಷಣಃ ಪ್ರಥಯನ್ನಾಪೃಣನ್ನುರ್ವಜೀಜನತ್ಸವಿತಾ ಸುಮ್ನಮುಕ್ಥ್ಯಂ ||

॥ ಪದಪಾಠಃ ॥

ದಿವಃ | ಧರ್ತಾ | ಭುವನಸ್ಯ | ಪ್ರಜಾಽಪತಿಃ | ಪಿಶಂಗಂ | ದ್ರಾಪಿಂ | ಪ್ರತಿ | ಮುಂಚತೇ | ಕವಿಃ |

ವಿಽಚಕ್ಷಣಃ | ಪ್ರಥಯನ್ | ಆಽಪೃಣನ್ | ಉರು | ಅಜೀಜನತ್ | ಸವಿತಾ | ಸುಮ್ನಂ | ಉಕ್ಥ್ಯಂ ॥೨॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಸ್ಯ ಧರ್ತಾ ಧಾರಕಃ । ನ ಕೇವಲಂ ದಿವ ಏವ ಅಪಿ ತು ಭುವನಸ್ಯ ಕೃತ್ಸ್ನ-ಸ್ಯಾಪಿ ಲೋಕಸ್ಯ ಧರ್ತಾ ಪ್ರಜಾಪತಿಃ ಪ್ರಜಾನಾಂ ಪ್ರಕಾಶವೃಷ್ಟ್ಯಾದಿನಾ ಪಾಲಯಿತಾ ಕವಿಃ ಪ್ರಾಜ್ಞೋ ದೇವಃ ಪಿಶಂಗಂ ದ್ರಾಪಿಂ ಹಿರಣ್ಮಯಂ ಕವಚಂ ಪ್ರತಿ ಮುಂಚತೇ । ಆಚ್ಛಾದಯತಿ ಪ್ರತ್ಯುದಯಂ । ವಿಚಕ್ಷಣೋ ವಿವಿಧಂ ದ್ರಷ್ಟಾ ಸ ಏವ ದೇವಃ ಪ್ರಥಯನ್ ಪ್ರಖ್ಯಾಪಯನ್ ತೇಜ ಆಪೃಣನ್ನಾಪೂರಯನ್ ಪರಿತ ಉರು ಪ್ರಭೂತಂ ಸುಮ್ನಂ ಸುಖಮುಕ್ಥ್ಯಂ ಸ್ತುತ್ಯಮಜೀಜನತ್ । ಉತ್ಪಾದಯತಿ ॥

॥ ಪ್ರತಿಪದಾರ್ಥ ॥

ದಿವಃ—ದ್ಯುಲೋಕಕ್ಕೂ । ಭುವನಸ್ಯ—ಸಕಲಭೂತಜಾತಗಳಿಗೂ । ಧರ್ತಾ—ಧಾರಕನೂ । ಕವಿಃ—ಪ್ರಾಜ್ಞನೂ ಆದ । ಪ್ರಜಾಪತಿಃ—ಪ್ರಜಾಪತಿಯು । ಪಿಶಂಗಂ—ಹೊಂಬಣ್ಣದ । ದ್ರಾಪಿಂ—ಕವಚವನ್ನು । ಪ್ರತಿ ಮುಂಚತೇ—ಹೊದ್ದುಕೊಂಡಿದಾನೆ । ವಿಚಕ್ಷಣಃ—ಅನೇಕದೃಷ್ಟಿಯಿಂದ ನೋಡತಕ್ಕ । ಸವಿತಾ—ಸವಿತೃವು । ಪ್ರಥಯನ್—ತನ್ನ ತೇಜಸ್ಸನ್ನು ಪ್ರಕಾಶಪಡಿಸುತ್ತಲೂ । ಆಪೃಣನ್—ಅದನ್ನು ಸರ್ವತ್ರ ವ್ಯಾಪಿಸುವಂತೆ ಮಾಡುತ್ತಲೂ । ಉರು—ಪ್ರಭೂತವಾದುದೂ । ಉಕ್ಥ್ಯಂ—ಪ್ರಶಸ್ಯವಾದುದೂ ಆದ । ಸುಮ್ನಂ—ಸುಖವನ್ನು । ಅಜೀಜನತ್—ಉಂಟುಮಾಡುತ್ತಾನೆ.

॥ ಭಾವಾರ್ಥ ॥

ದ್ಯುಲೋಕಕ್ಕೂ ಸಕಲ ಭೂತಜಾತಗಳಿಗೂ ಧಾರಕನೂ, ಪ್ರಾಜ್ಞನೂ ಆದ ಪ್ರಜಾಪತಿಯು (ಸವಿತೃವು) ಹೊಂಬಣ್ಣದ ಕವಚವನ್ನು ಹೊದ್ದುಕೊಂಡಿದಾನೆ. ಅನೇಕದೃಷ್ಟಿಯಿಂದ ನೋಡತಕ್ಕ ಆ ಸವಿತೃವು ತನ್ನ ತೇಜಸ್ಸನ್ನು ಪ್ರಕಾಶಪಡಿಸುತ್ತಲೂ, ಅದನ್ನು ಸರ್ವತ್ರ ವ್ಯಾಪಿಸುವಂತೆ ಮಾಡುತ್ತಲೂ ಸಹ ಪ್ರಭೂತವಾದುದೂ, ಪ್ರಶಸ್ಯವಾದುದೂ ಆದ ಸುಖವನ್ನು ಉಂಟುಮಾಡುತ್ತಾನೆ.

## English Translation.

The supporter of heaven, the protector of the world, the wise (Savitri) puts on his golden armour: discriminator (of object), filling (the world with light), Savitri has engendered great and laudable felicity.

॥ ಸಂಹಿತಾಪಾಠಃ ॥

ಆಪ್ರಾ ರಜಾಂಸಿ ದಿವ್ಯಾನಿ ಪಾರ್ಥಿವಾ ಶ್ಲೋಕಂ ದೇವಃ ಕೃಣುತೇ ಸ್ವಾಯ ಧರ್ಮಣೇ ।

ಪ್ರ ಬಾಹೂ ಅಸ್ರಾಕ್ಸವಿತಾ ಸವೀಮನಿ ನಿವೇಶಯನ್ಪ್ರಸುವನ್ನಕ್ತುಭಿರ್ಜಗತ್ ॥

॥ ಪದಪಾಠಃ ॥

ಆ । ಅಪ್ರಾಃ । ರಜಾಂಸಿ । ದಿವ್ಯಾನಿ । ಪಾರ್ಥಿವಾ । ಶ್ಲೋಕಂ । ದೇವಃ । ಕೃಣುತೇ । ಸ್ವಾಯ । ಧರ್ಮಣೇ ।
ಪ್ರ । ಬಾಹೂ ಇತಿ । ಅಸ್ರಾಕ್ । ಸವಿತಾ । ಸವೀಮನಿ । ನಿಽವೇಶಯನ್ । ಪ್ರಽಸುವನ್ । ಅಕ್ತುಽಭಿಃ ।
ಜಗತ್ ॥ ೩ ॥

॥ ಸಾಯಣಭಾಷ್ಯಂ ॥

ಅಯಂ ದೇವಃ ಸವಿತಾ ದಿವ್ಯಾನಿ ದ್ಯುಸಂಬಂಧೀನಿ ಪಾರ್ಥಿವಾ ಪಾರ್ಥಿವಾನಿ ರಜಾಂಸಿ ಲೋಕಾನ್ । ತಿಸ್ರಃ ಖಲು ದ್ಯಾವಃ ಪೃಥಿವ್ಯಶ್ಚ । ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ । ಋಗ್ವೇ. ೨-೨೭-೮ । ಇತಿ ಹಿ ಶ್ರುತಂ । ಆಪ್ರಾಃ । ಆಪೂರಯತಿ ಸ್ವಾಭಿರ್ಭಾಭಿರ್ದೇವಃ । ಸ್ವಾಯ ಧರ್ಮಣೇ ಸ್ವಕೀಯಾಯ ಧಾರಣಾಯ ಶ್ಲೋಕಂ ಪ್ರಶಸ್ತಿಂ ಕೃಣುತೇ । ಕರೋತಿ । ಸವಿತಾ ಸವೀಮನಿ ಪ್ರಸವೇಽನುಜ್ಞಾಯಾಂ ನಿಮಿತ್ತಾಯಾಂ ಬಾಹೂ ಸ್ವೀಯೌ ಪ್ರಾಸ್ರಾಕ್ । ಪ್ರಸೃಜತಿ । ಪ್ರಸಾರಯತೀ-ತ್ಯರ್ಥಃ । ಕಿಂ ಕುರ್ವನ್ । ಅಕ್ತುಭಿಃ ಕಾಂತಿಭಿರ್ಜಗನ್ನಿವೇಶಯನ್ ಸ್ವಸ್ವಕಾರ್ಯೇ ಸ್ಥಾಪಯನ್ ಪ್ರಸುವನ್ ಪ್ರೇರಯನ್ । ಅಥವಾ ಅಕ್ತುಭಿರಿತಿ ರಾತ್ರಿನಾಮ । ತದುಪಲಕ್ಷಿತೈಃ ಸರ್ವೈರ್ವಾಸರೈಃ ಸರ್ವೇಷ್ವಪಿ ದಿನೇಷ್ವೇವಂ ಕರೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವಃ—ದೇವತಾತ್ಮನಾದ ಸವಿತೃವು । ದಿವ್ಯಾನಿ—ಸ್ವರ್ಗಸಂಬಂಧವಾದುದೂ । ಪಾರ್ಥಿವಾ—ಪೃಥಿವೀ ಸಂಬಂಧವಾದುದೂ ಆದ । ರಜಾಂಸಿ—ಲೋಕಗಳನ್ನು । ಆಪ್ರಾಃ—ತನ್ನ ತೇಜಸ್ಸಿನಿಂದ ವ್ಯಾಪಿಸಿದ್ದಾನೆ । ಸ್ವಾಯ—ತನಗೆ ಸಂಬಂಧಿಸಿದ । ಧರ್ಮಣೇ—ಲೋಕಧಾರಣಾದಿ ವ್ಯಾಪಾರದ ಉತ್ತೇಜನಕ್ಕಾಗಿ । ಶ್ಲೋಕಂ—ಪ್ರಶಂಸೆಯನ್ನೂ । ಕೃಣುತೇ—ಮಾಡುತ್ತಾನೆ । ಸವಿತಾ—ಸವಿತೃದೇವನು । ಅಕ್ತುಭಿಃ—ತನ್ನ ಕಾಂತಿಗಳಿಂದ । ಜಗತ್—ಲೋಕವನ್ನು । ನಿವೇಶಯನ್—ಆಯಾ ನಿಯಮಿತಕಾರ್ಯಗಳಲ್ಲಿ ಸ್ಥಾಪಿಸುತ್ತಲೂ । ಪ್ರಸುವನ್—ಚೈತನ್ಯದಾನದಿಂದ ಪ್ರೇರಿಸುತ್ತಲೂ ಸಹ । ಸವೀಮನಿ—ಸೃಷ್ಟಿಕಾರ್ಯದ ನಿಮಿತ್ತವಾಗಿ । ಬಾಹೂ—ತನ್ನ ಬಾಹುಗಳನ್ನು । ಪ್ರ ಅಸ್ರಾಕ್—ಹರಡುತ್ತಾನೆ.

॥ ಭಾವಾರ್ಥ ॥

ದೇವತಾತ್ಮನಾದ ಸವಿತೃವು ಸ್ವರ್ಗಸಂಬಂಧವಾದುದೂ, ಪೃಥಿವೀಸಂಬಂಧವಾದುದೂ ಆದ ಲೋಕಗಳನ್ನು ತನ್ನ ತೇಜಸ್ಸಿನಿಂದ ವ್ಯಾಪಿಸಿದ್ದಾನೆ. ತನಗೆ ಸಂಬಂಧಿಸಿದ ಲೋಕಾಧಾರಣಾದಿ ವ್ಯಾಪಾರದ ಉತ್ತೇಜನಕ್ಕಾಗಿ ಪ್ರಶಂಸೆಯನ್ನು ಮಾಡುತ್ತಾನೆ. ಸವಿತೃದೇವನು, ತನ್ನ ಕಾಂತಿಗಳಿಂದ ಲೋಕವನ್ನು ಆಯಾ ನಿಯಮಿತ ಕಾರ್ಯಗಳಲ್ಲಿ ಸ್ಥಾಪಿಸುತ್ತಲೂ, ಚೈತನ್ಯದಾನದಿಂದ ಪ್ರೇರಿಸುತ್ತಲೂ, ಸೃಷ್ಟಿಕಾರ್ಯದ ನಿಮಿತ್ತವಾಗಿ ತನ್ನ ಬಾಹುಗಳನ್ನು ಹರಡುತ್ತಾನೆ.

## English Translation.

The divine (Savitri) fills (with radiance) the celestial and terrestrial regions, and boasts of his own function : Savitri puts forth his arms for (the work of) production, regulating the world, and animating it with light.



॥ ಸಂಹಿತಾಪಾಠಃ ॥

ಅದಾಭ್ಯೋ ಭುವನಾನಿ ಪ್ರಚಾಕಶದ್ವ್ರತಾನಿ ದೇವಃ ಸವಿತಾಭಿ ರಕ್ಷತೇ ।

ಪ್ರಾಸ್ರಾಗ್ಬಾಹೂ ಭುವನಸ್ಯ ಪ್ರಜಾಭ್ಯೋ ಧೃತವ್ರತೋ ಮಹೋ ಅಜ್ಮಸ್ಯ ರಾಜತಿ ॥ ೪ ॥

॥ ಪದಪಾಠಃ ॥

ಅದಾಭ್ಯಃ । ಭುವನಾನಿ । ಪ್ರಽಚಾಕಶತ್ । ವ್ರತಾನಿ । ದೇವಃ । ಸವಿತಾ । ಅಭಿ । ರಕ್ಷತೇ ।

ಪ್ರ । ಅಸ್ರಾಕ್ । ಬಾಹೂ ಇತಿ । ಭುವನಸ್ಯ । ಪ್ರಽಜಾಭ್ಯಃ । ಧೃತಽವ್ರತಃ । ಮಹಃ । ಅಜ್ಮಸ್ಯ । ರಾಜತಿ ॥

॥ ಸಾಯಣಭಾಷ್ಯಂ ॥

ಸವಿತಾ ದೇವೋಽದಾಭ್ಯೋಽನ್ಯೈರಹಿಂಸಿತಃ ಸನ್ ಭುವನಾನಿ ಪ್ರಚಾಕಶತ್ ದೀಪಯನ್ ವ್ರತಾನಿ ಕರ್ಮಾಣಿ ಪ್ರಾಣಿನಾಮಭಿ ರಕ್ಷತೇ । ಭುವನಸ್ಯ ಲೋಕಸ್ಯ ಪ್ರಜಾಭ್ಯಸ್ತತ್ರತ್ಯಾಭ್ಯೋ ಬಾಹೂ ಸ್ವೀಯೌ ಪ್ರಾಸ್ರಾಕ್ । ಪ್ರಸಾರಯತಿ । ಸ್ವಸ್ವಕರ್ಮಣೇಽನುಜಾನಾತೀತ್ಯರ್ಥಃ । ಸರ್ವವ್ಯಾಪಾರಾಣಾಂ ಸೂರ್ಯಾಧೀನತ್ವಾತ್ । ಸವಿತಾ ವೈ ಪ್ರಸವಾನಾಮೀಶೇ । ಐ. ಬ್ರಾ. ೧-೧೬ । ಇತಿ ಹಿ ಶ್ರುತಿಃ । ಧೃತವ್ರತೋ ಧೃತಕರ್ಮಾ ಸ ತಥಾ ಕುರ್ವನ್ ಮಹೋ ಮಹತೋಽಜ್ಮಸ್ಯ ಜಗತೋ ರಾಜತಿ । ಈಶ್ವರೋ ಭವತಿ ॥

। ಪ್ರತಿಪದಾರ್ಥ ॥

ಸವಿತಾ ದೇವಃ—ಸವಿತೃದೇವನು । ಅದಾಭ್ಯಃ—ಶತ್ರುಗಳ ಹಿಂಸೆಯಿಂದ ಅತೀತನಾಗಿ । ಭುವನಾನಿ—ಲೋಕಗಳನ್ನೆಲ್ಲಾ । ಪ್ರಚಾಕಶತ್—ಪ್ರಕಾಶಿಸುವಂತೆ ಮಾಡುತ್ತಾ । ವ್ರತಾನಿ—ಯಜ್ಞಯಾಗಾದಿ ಕರ್ಮಗಳನ್ನು । ಅಭಿರಕ್ಷತೇ—ರಕ್ಷಿಸುತ್ತಾನೆ । ಭುವನಸ್ಯ—ಲೋಕದ । ಪ್ರಜಾಭ್ಯಃ—ಪ್ರಜೆಗಳ ಪಾಲನೆಗೋಸ್ಕರ । ಬಾಹೂ—ತನ್ನ ಬಾಹುಗಳನ್ನು । ಪ್ರಾಸ್ರಾತ್—ಪ್ರಸರಿಸುತ್ತಾನೆ । ಧೃತವ್ರತಃ—(ಜಗತ್ಪಾಲನಾದಿ) ವ್ರತಗಳನ್ನು ಧರಿಸಿದವನಾಗಿ । ಮಹಃ—ಮಹತ್ತಾದ । ಅಜ್ಮಸ್ಯ—ಜಗತ್ತಿಗೆ । ರಾಜತಿ—ಪ್ರಭುವಾಗಿದ್ದಾನೆ.

॥ ಭಾವಾರ್ಥ ॥

ಸವಿತೃದೇವನು ಶತ್ರುಗಳ ಹಿಂಸೆಗೆ ಸಿಲುಕದೆ, ಲೋಕಗಳನ್ನೆಲ್ಲಾ ಪ್ರಕಾಶಿಸುವಂತೆ ಮಾಡುತ್ತಾ ಯಜ್ಞಯಾಗಾದಿ ಕರ್ಮಗಳನ್ನು ರಕ್ಷಿಸುತ್ತಾನೆ. ಲೋಕದ ಪ್ರಜೆಗಳ ಪಾಲನೆಗೋಸ್ಕರ ತನ್ನ ಬಾಹುಗಳನ್ನು ಪ್ರಸರಿಸುತ್ತಾನೆ. ಜಗತ್ಪಾಲನಾದಿ ವ್ರತಗಳನ್ನು ಧರಿಸಿದವನಾಗಿ ಮಹತ್ತಾದ ಜಗತ್ತಿಗೆ ಪ್ರಭುವಾಗಿದ್ದಾನೆ.

**English Translation.**

The divine Savitri unrestrained, illumining the regions, protects the righteous acts (of men); he extends his arms for (the direction of) the people of the earth : observer of obligations, he rules over the wide world.

॥ ಸಂಹಿತಾಪಾಠಃ ॥

ತ್ರಿರಂತರಿಕ್ಷಂ ಸವಿತಾ ಮಹಿತ್ವನಾ ತ್ರೀ ರಜಾಂಸಿ ಪರಿಭೂಸ್ತ್ರೀಣಿ ರೋಚನಾ ।
ತಿಸ್ರೋ ದಿವಃ ಪೃಥಿವೀಸ್ತಿಸ್ರ ಇನ್ವತಿ ತ್ರಿಭಿರ್ವ್ರತೈರಭಿ ನೋ ರಕ್ಷತಿ ತ್ಮನಾ ॥

॥ ಪದಪಾಠಃ ॥

ತ್ರಿಃ । ಅಂತರಿಕ್ಷಂ । ಸವಿತಾ । ಮಹಿಽತ್ವನಾ । ತ್ರೀ । ರಜಾಂಸಿ । ಪರಿಽಭೂಃ । ತ್ರೀಣಿ । ರೋಚನಾ ।
ತಿಸ್ರಃ । ದಿವಃ । ಪೃಥಿವೀಃ । ತಿಸ್ರಃ । ಇನ್ವತಿ । ತ್ರಿಽಭಿಃ । ವ್ರತೈಃ । ಅಭಿ । ನಃ । ರಕ್ಷತಿ । ತ್ಮನಾ ॥ ೫ ॥

॥ ಸಾಯಣಭಾಷ್ಯಂ ॥

ಅಯಂ ಸವಿತಾ ತ್ರಿಸ್ತ್ರಿಭೇದಮಂತರಿಕ್ಷಂ । ಅಂತರಾ ಕ್ಷಾಂತಂ ಭವತಿ ಜಗದಿತ್ಯಂತರಿಕ್ಷಂ ಪರಿಭೂಃ ಪರಿಭವಿತಾ ಸನ್ ಮಹಿತ್ವನಾ ಮಹಿತ್ವೇನೇನ್ವತಿ । ವ್ಯಾಪ್ನೋತಿ । ವಾಯುವಿದ್ಯುದ್ವರುಣಾಖ್ಯಾಸ್ತ್ರಯೋ ಲೋಕಾ ಅಂತರಿಕ್ಷಭೇದಾಃ ಸ ವಾಯುಲೋಕಂ ಸ ವರುಣಲೋಕಮಿತ್ಯಾದಿಶ್ರುತೇಃ । ಕೌ. ಉ. ೧-೩ । ತ್ರೀ ರಜಾಂಸಿ ರಂಜನಾತ್ಮಕಾನಿ ತ್ರೀಣಿ ಕ್ಷಿತ್ಯಂತರಿಕ್ಷದ್ಯುಲಕ್ಷಣಾನ್ ತ್ರೀನ್ ಲೋಕಾನಿನ್ವತಿ । ಪೂರ್ವಮಂತರಿಕ್ಷಸ್ಯೈವಾವಾಂತರಭೇದ ಉಕ್ತ ಇಹ ತು ಸಾಮಾನ್ಯಾಕಾರೇಣೇತ್ಯಪುನರುಕ್ತಿಃ । ತ್ರೀಣಿ ರೋಚನಾ ರೋಚನಾನಿ ರೋಚಮಾನಾನಗ್ನಿವಾಯ್ವಾದಿತ್ಯಾನುಕ್ತಸ್ಥಾನತ್ರಯಸ್ವಾಮಿತ್ವೇನೇನ್ವತಿ । ಪೂರ್ವಮಂತರಿಕ್ಷಸ್ಯೈವಾವಾಂತರಭೇದ ಉಕ್ತಃ । ಅಥ ದ್ಯುಪೃಥಿವ್ಯೋರವಾಂತರ-

ಭೇದ ಉಚ್ಯತೇ । ತಿಸ್ರೋ ದಿವ ಇಂದ್ರಪ್ರಜಾಪತಿಸತ್ಯಾಖ್ಯಾನ್ ತ್ರೀನ್ ಲೋಕಾನಿನ್ವತಿ । ತಥಾ ತಿಸ್ರಃ ಪೃಥಿವೀರಿನ್ವತಿ । ಕ್ಷಿತ್ಯವಾಂತರಭೇದಾನ್ ಲೋಕಾನಿನ್ವತಿ । ಏವಂ ಸರ್ವತ್ರ ವ್ಯಾಪ್ತೋ ದೇವಸ್ತ್ರಿಭಿರ್ವ್ರತೈಃ ಕರ್ಮಭಿರುಷ್ಣವರ್ಷಹಿಮಾಖ್ಯೈರ್ನೋಽಸ್ಮಾನ್ ತ್ಮನಾತ್ಮನೈವ ಸ್ವೀಯಾನುಗ್ರಹಬುದ್ಧ್ಯೈವಾಭಿ ರಕ್ಷತಿ । ಅಭಿರಕ್ಷತು । ಪರಿಪಾಲಯತು ॥

॥ ಪ್ರತಿಪದಾರ್ಥ ॥

ಸವಿತಾ—ಸವಿತೃದೇವನು । ತ್ರಿಃ—ಮೂರು ಪ್ರಕಾರವಾದ । ಅಂತರಿಕ್ಷಂ—ಅಂತರಿಕ್ಷವನ್ನು (ಅಥವಾ ಜಗತ್ತನ್ನು) । ಪರಿಭೂಃ—ತನ್ನಧೀನದಲ್ಲಿಟ್ಟುಕೊಂಡು । ಮಹಿತ್ವನಾ—ತನ್ನ ಮಾಹಾತ್ಮ್ಯದಿಂದ । ಇನ್ವತಿ—ವ್ಯಾಪಿಸುತ್ತಾನೆ । ತ್ರೀ ರಜಾಂಸಿ—ಮೂರು ಲೋಕಗಳನ್ನೂ । ತ್ರೀಣಿ ರೋಚನಾ—ಅಗ್ನಿ ವಾಯು ಆದಿತ್ಯ ಎಂಬ ಮೂರು ಪ್ರಭಾಯುತವಾದ ತತ್ತ್ವಗಳನ್ನೂ । ತಿಸ್ರಃ ದಿವಃ—ಇಂದ್ರ, ಪ್ರಜಾಪತಿ, ಸತ್ಯ ಎಂಬ ಮೂರು ದಿವ್ಯಲೋಕಗಳನ್ನೂ । ತಿಸ್ರಃ ಪೃಥಿವೀಃ—ಮೂರು ಭಾಗಗಳಾಗಿರತಕ್ಕ ಪೃಥಿವಿಯನ್ನೂ ವ್ಯಾಪಿಸಿದ್ದಾನೆ (ಇಂತಹ ಸರ್ವವ್ಯಾಪಕನಾದ ದೇವನು) । ತ್ರಿಭಿರ್ವ್ರತೈಃ—ತನ್ನ ಮೂರು ವಿಧವಾದ ಅಸಾಧಾರಣ ಕರ್ಮಗಳಿಂದ । ನಃ—ನಮ್ಮನ್ನು । ತ್ಮನಾ—ಸ್ವಸಂತೋಷದಿಂದಲೇ । ಅಭಿ ರಕ್ಷತಿ—ಪೂರ್ಣವಾಗಿ ರಕ್ಷಿಸಲಿ.

॥ ಭಾವಾರ್ಥ ॥

ಸವಿತೃದೇವನು ಮೂರು ಪ್ರಕಾರವಾದ ಅಂತರಿಕ್ಷವನ್ನೂ, ತನ್ನಧೀನದಲ್ಲಿಟ್ಟುಕೊಂಡು ತನ್ನ ಮಾಹಾತ್ಮ್ಯದಿಂದ ವ್ಯಾಪಿಸುತ್ತಾನೆ. ಮೂರು ಲೋಕಗಳನ್ನೂ, ಅಗ್ನಿ, ವಾಯು, ಆದಿತ್ಯ ಎಂಬ ಮೂರು ಪ್ರಭಾಯುತವಾದ ತತ್ತ್ವಗಳನ್ನೂ, ಇಂದ್ರ, ಪ್ರಜಾಪತಿ, ಸತ್ಯ ಎಂಬ ಮೂರು ದಿವ್ಯಲೋಕಗಳನ್ನೂ, ತ್ರಿಪ್ರಕಾರವಾದ ಪೃಥಿವಿಯನ್ನೂ ವ್ಯಾಪಿಸಿದ್ದಾನೆ. ಇಂತಹ ಸರ್ವವ್ಯಾಪಕನಾದ ದೇವನು ತನ್ನ ಮೂರು ವಿಧವಾದ ಅಸಾಧಾರಣಕರ್ಮಗಳಿಂದ ನಮ್ಮನ್ನು ಸ್ವಪ್ರೇರಣೆಯಿಂದಲೂ, ಸ್ವಸಂತೋಷದಿಂದಲೂ ರಕ್ಷಿಸಲಿ.

## English Translation.

Savitri, encompassing them by his magnitude, pervades the three (divisons of the) firmament, the three worlds. the three brilliant spheres, the three heavens, the threefold earth : may he, by his three functions, of his own (pleasure) protect us.

॥ ಸಂಹಿತಾಪಾಠಃ ॥

ಬೃಹತ್ಸುಮ್ನಃ ಪ್ರಸವೀತಾ ನಿವೇಶನೋ ಜಗತಃ ಸ್ಥಾತುರುಭಯಸ್ಯ ಯೋ ವಶೀ ।

ಸ ನೋ ದೇವಃ ಸವಿತಾ ಶರ್ಮ ಯಚ್ಛತ್ವಸ್ಮೇ ಕ್ಷಯಾಯ ತ್ರಿವರೂಥ-
ಮಂಹಸಃ ‖ ೬ ‖

‖ ಪದಪಾಠಃ ‖

ಬೃಹತ್ಽಸುಮ್ನಃ । ಪ್ರಽಸವಿತಾ । ನಿಽವೇಶನಃ । ಜಗತಃ । ಸ್ಥಾತುಃ । ಉಭಯಸ್ಯ । ಯಃ । ವಶೀ ।
ಸಃ । ನಃ । ದೇವಃ । ಸವಿತಾ । ಶರ್ಮ । ಯಚ್ಛತು । ಅಸ್ಮೇ ಇತಿ । ಕ್ಷಯಾಯ । ತ್ರಿಽವರೂಥಂ ।
ಅಂಹಸಃ ‖ ೬ ‖

‖ ಸಾಯಣಭಾಷ್ಯಂ ‖

ಯೋ ಬೃಹತ್ಸುಮ್ನಃ ಪ್ರಭೂತಧನಃ ಪ್ರಭೂತಸುಖೋ ವಾ ಪ್ರಸವಿತಾ ಪ್ರಕರ್ಷೇಣಾನುಜ್ಞಾತಾ ಕರ್ಮಣಾಂ ನಿವೇಶನಃ ಸರ್ವೈರ್ಗಂತವ್ಯಃ । ಜಗತೋ ಜಂಗಮಸ್ಯ ಸ್ಥಾತುಃ ಸ್ಥಾವರಸ್ಯೋಭಯಸ್ಯ ಯೋ ವಶೀ ಸ ಮಹಾನ್ ಸವಿತಾ ದೇವೋ ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛತು । ಕೀದೃಶಂ ಶರ್ಮ । ತ್ರಿವರೂಥಂ । ತ್ರೀಣಿ ವರೂಥಾನಿ ಗೃಹಾಣಿ ಸ್ಥಾನಾನಿ ಕ್ಷಿತ್ಯಾದೀನಿ ಯಸ್ಯ ತತ್ತಾದೃಶಂ । ಅಸ್ಮೇ ಅಸ್ಮಾಕಮಂಹಸಃ ಪಾಪಸ್ಯ ಕ್ಷಯಾಯ ಭವತ್ವಿತಿ ಶೇಷಃ ‖

‖ ಪ್ರತಿಪದಾರ್ಥ ‖

ಬೃಹತ್ಸುಮ್ನಃ—ನಾನಾವಿಧವಾದ ಸುಖಕ್ಕೆ ಆಧಾರನೂ । ಪ್ರಸವಿತಾ—ಸತ್ಕರ್ಮಗಳಿಗೆ ಪ್ರೇರಕನೂ । ನಿವೇಶನಃ—ಸಕಲರಿಗೂ ಆಶ್ರಯನೂ । ಜಗತಃ—ಸಂಚಾರಾತ್ಮಕವಾದುದೂ । ಸ್ಥಾತುಃ—ಸ್ಥಿರವಾದುದೂ ಆದ । ಉಭಯಸ್ಯ—ಉಭಯ ಸ್ಥಿತಿಯ ಭೂತಜಾತಗಳಿಗೂ । ಯಃ—ಯಾವನು । ವಶೀ—ಪ್ರಭುವೋ । ಸಃ—ಅಂತಹ । ಸವಿತಾ ದೇವಃ—ಸವಿತೃದೇವನು । ನಃ—ನಮಗೆ । ತ್ರಿವರೂಥಂ—ಕ್ಷಿತ್ಯಾದಿ ಸ್ಥಾನತ್ರಯ ಸ್ಥಿತವಾದ । ಶರ್ಮ—ಸುಖವನ್ನು । ಯಚ್ಛತು—ಕೊಡಲಿ । ಅಸ್ಮೇ—ನಮ್ಮ । ಅಂಹಸಃ—ಪಾಪದ । ಕ್ಷಯಾಯ—ನಾಶಕ್ಕೆ (ಕಾರಣನಾಗಲಿ).

‖ ಭಾವಾರ್ಥ ‖

ನಾನಾವಿಧವಾದ ಸುಖಕ್ಕೆ ಆಧಾರನೂ, ಸತ್ಕರ್ಮಗಳಿಗೆ ಪ್ರೇರಕನೂ, ಸಕಲರಿಗೂ ಆಶ್ರಯನೂ, ಸಂಚಾರಾತ್ಮಕವಾದುದೂ, ಸ್ಥಿರವಾದುದೂ ಆದ ಉಭಯವಿಧವಾದ ಪ್ರಾಣಿಗಳಿಗೂ ಪ್ರಭುವಾದವನೂ ಆದ ಸವಿತೃದೇವನು ನಮಗೆ ಕ್ಷಿತ್ಯಾದಿ ಸ್ಥಾನತ್ರಯವಾದ ಸುಖವನ್ನು ಕೊಡಲಿ. ನಮ್ಮ ಪಾಪಗಳನ್ನು ನಾಶಮಾಡಲಿ.

## English Translation.

May that divine Savitri, who is the source of great happiness, the engenderer (of good works), the comprehender (of all beings), the regula-

tor of both the moveable and stationary, grant us happiness in the three worlds, and (be) to us for the destruction of sin.

॥ ಸಂಹಿತಾಪಾಠಃ ॥

ಆಗನ್ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾ-
ಮಿಷಂ ।
ಸ ನಃ ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ॥

॥ ಪದಪಾಠಃ ॥

ಆ । ಅಗನ್ । ದೇವಃ । ಋತುऽಭಿಃ । ವರ್ಧತು । ಕ್ಷಯಂ । ದಧಾತು । ನಃ । ಸವಿತಾ । ಸುಽಪ್ರಜಾಂ ।
ಇಷಂ ।
ಸಃ । ನಃ । ಕ್ಷಪಾಭಿಃ । ಅಹಽಭಿಃ । ಚ । ಜಿನ್ವತು । ಪ್ರಜಾಽವಂತಂ । ರಯಿಂ । ಅಸ್ಮೇ ಇತಿ । ಸಂ ।
ಇನ್ವತು ॥ ೭ ॥

ರಾಜಕ್ರಿಯೆ ಆಗನ್ದೇವ ಇತ್ಯೇಷಾನುವಚನೀಯಾ । ಸೂತ್ರಿತಂ ಚ । ಆಗನ್ದೇವ ಋತುಭಿರ್ವರ್ಧತು ಕ್ಷಯಮಿತ್ಯರ್ಧರ್ಚ ಆರಮೇತ್ । ಆ. ೪-೪ । ಇತಿ ॥

ದೇವಃ ಸವಿತಾ ಋತುಭಿಃ ಸಹಾಗನ್ । ಆಗಚ್ಛತು ॥ ಗಮೇರ್ಲುಙಿ ರೂಪಂ ॥ ಕಿಂಚ ಕ್ಷಯಂ ಗೃಹಂ ವರ್ಧತು । ವರ್ಧಯತು । ನೋऽಸ್ಮಾಕಂ ಸುಪ್ರಜಾಂ ಶೋಭನಪುತ್ರಾದ್ಯುಪೇತಮಿಷಮನ್ನಂ ದಧಾತು । ದದಾತು । ಸ ಏವ ನೋऽಸ್ಮಾನ್ ಕ್ಷಪಾಭೀ ರಾತ್ರಿಭಿರಹಭಿಶ್ಚ । ಸರ್ವೇಷು ದಿನೇಷ್ವಿತ್ಯರ್ಥಃ । ಜಿನ್ವತು । ಪ್ರೀಣಯತು ಧನಾದಿಭಿಃ । ಅಸ್ಮೇ ಅಸ್ಮಾಸು ಪ್ರಜಾವಂತಂ ರಯಿಂ ಸಮಿನ್ವತು । ವ್ಯಾಪ್ನೋತು। ಪ್ರಾಪಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವಃ—ದೇವತಾತ್ಮನಾದ । ಸವಿತಾ—ಸವಿತೃದೇವನು । ಋತುಭಿಃ ಸಹ—ಋತುದೇವತೆಗಳೊಡನೆ । ಆಗನ್—(ನಮ್ಮ ಯಜ್ಞಕ್ಕೆ) ಬರಲಿ । ಕ್ಷಯಂ—ನಮ್ಮ ಗೃಹವನ್ನು । ವರ್ಧತು—ಬೆಳೆಸಲಿ । ನಃ—ನಮಗೆ । ಸುಪ್ರಜಾಂ—ಶ್ರೇಷ್ಠವಾದ ಪ್ರಜೆಗಳಿಂದ ಕೂಡಿದ । ಇಷಂ—ಅನ್ನವನ್ನು । ದಧಾತು—ಕೊಡಲಿ । ಸಃ—ಅವನೇ । ನಃ—ನಮಗೆ । ಕ್ಷಪಾಭಿಃ—ರಾತ್ರಿಗಳಲ್ಲಿಯೂ । ಅಹಭಿಶ್ಚ—ಹಗಲುಗಳಲ್ಲಿಯೂ ।

**ಜಿನ್ವತು**—ಸಂತೋಷವನ್ನುಂಟುಮಾಡಲಿ | **ಅಸ್ಮೇ**—ನಮಗೆ | **ಪ್ರಜಾವಂತಂ**—ಸತ್ಪುತ್ರರೊಡಗೂಡಿದ | **ರಯಿಂ**—ಧನವನ್ನು | **ಸಮಿನ್ವತು**—ಒದಗಿಸಿಕೊಡಲಿ.

॥ ಭಾವಾರ್ಥ ॥

ದೇವತಾತ್ಮನಾದ ಸವಿತೃದೇವನು ಋತುದೇವತೆಗಳೊಡನೆ ನಮ್ಮ ಯಜ್ಞಕ್ಕೆ ಬರಲಿ. ನಮ್ಮ ಗೃಹವು ಬೆಳೆಯುವಂತೆ ಮಾಡಲಿ. ನಮಗೆ ಶ್ರೇಷ್ಠವಾದ ಪ್ರಜೆಗಳಿಂದ ಕೂಡಿದ ಅನ್ನವನ್ನು ಕೊಡಲಿ. ಅಹೋರಾತ್ರಗಳಲ್ಲಿಯೂ ನಮಗೆ ಸಂತೋಷಕಾರಕನಾಗಲಿ. ನಮಗೆ ಸತ್ಪುತ್ರರೊಡಗೂಡಿದ ಧನವನ್ನು ಒದಗಿಸಿಕೊಡಲಿ.

English Translation.

May the divine Savitri approach along with the Ritus, prosper our dwelling, and bestow upon us good progeny and food; may he be favourable to us by night and by day: may he heap upon us wealth comprehending offspring.

# ಐವತ್ತನಾಲ್ಕನೆಯ ಸೂಕ್ತವು

## ಪೀಠಿಕೆ.

**ಸವಿತೃ**—ಸವಿತೃವು ಅತಿ ಪ್ರಾಚೀನವೂ, ಪ್ರಸಿದ್ಧವೂ ಆಗಿ ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿರುವ ದೇವತೆ. ವೈಯಕ್ತಿಕವಾಗಿ ಕೇವಲ ಸವಿತೃದೇವತೆಯನ್ನೇ ಉದ್ದೇಶಿಸಿರುವ ಸೂಕ್ತಗಳು ಯಾವುವೆಂದರೆ, ೧-೩೫ ; ೨-೩೮ ; ೪-೫೩ ; ೪-೫೪ ; ೫-೮೧ ; ೫-೮೨ ; ೬-೭೧ ; ೭-೩೭ ; ೭-೪೫ ; ೧೦-೧೪೯. ಇತರ ದೇವತೆಗಳೊಡನೆ ಸೇರಿಸಿ ಸ್ತುತನಾಗಿರುವ ಸನ್ನಿವೇಶಗಳೂ ಬಹಳವಾಗಿವೆ. ೧-೨೨-೫ ರಿಂದ ೮ ; ೩-೫೬-೬ ; ೩-೫೬-೭ ; ೩-೬೨-೧೦ ರಿಂದ ೧೨ ಇತ್ಯಾದ್ಯನೇಕ ಸೂಕ್ತಾಂತರ್ಗತವಾದ ಮಂತ್ರಗಳಲ್ಲಿ ಸವಿತೃದೇವನ ಪ್ರಶಂಸೆಯಿದೆ.

ಸವಿತೃವಿನ ವೈಯಕ್ತಿಕವಾದ ಗುಣಗಳನ್ನೂ, ವಿಶ್ವವ್ಯವಹಾರಕ್ಕೆ ಸಂಬಂಧಿಸಿದ ಅವನ ಕರ್ಮಗಳನ್ನೂ ತಿಳಿಯಲು ಕೆಲವು ಮಂತ್ರಗಳನ್ನು ಉದಾಹರಿಸಿ ಪರಿಶೀಲಿಸಬಹುದು.

**ಹಿರಣ್ಯಾಕ್ಷ** (ಸುವರ್ಣರೂಪದ ಕಣ್ಣುಳ್ಳವನು) **ಹಿರಣ್ಯಪಾಣಿಃ, ಹಿರಣ್ಯಹಸ್ತಃ** (ಸುವರ್ಣಮಯವಾದ ಹಸ್ತವುಳ್ಳವನು) ಇತ್ಯಾದಿ ವಿಶೇಷಣಗಳಿಂದ ವರ್ಣಿತನಾದ ಸವಿತೃವು ಸುವರ್ಣರೂಪದ ಪ್ರಭೆಯುಳ್ಳವನೆಂದು ಅನೇಕ ಕಡೆಗಳಲ್ಲಿ ವರ್ಣಿತನಾಗಿದ್ದಾನೆ. (೧-೨೨-೫ ; ೧-೩೫-೯, ೧೦ ; ೩-೫೪-೧೧ ; ೬-೫೦-೮ ; ೬-೭೧-೪ ; ೭-೩೮-೨ ; ಸಾ. ವೇ. ೧-೪೬೪ ; ವಾ. ಸ. ೧-೨೬ ; ೪-೨೫ ; ಅ. ವೇ. ೩-೨೧-೮ ; ೭-೧೪-೨ ; ೭-೧೫-೨ ;) ಇದಲ್ಲದೇ **ಪೃಥುಪಾಣಿಃ**—ವಿಸ್ತೃತವಾದ ಹಸ್ತವುಳ್ಳವನು, (೨-೩೮-೨) **ಸುಪಾಣಿಃ**:—ಸುಂದರವಾದ ಪಾಣಿಯುಳ್ಳವನು, (೩-೩೩-೬ ; ೭-೪೫-೪) ಇತ್ಯಾದಿ ವಿಶೇಷಣಗಳೂ ಸವಿತೃವಿನ ಆಕರ್ಷಕವಾದ ಹಸ್ತಗಳನ್ನು ವರ್ಣಿಸುತ್ತವೆ.

೬-೭೧-೩ ರಲ್ಲಿ ಸವಿತೃವನ್ನು **ಹಿರಣ್ಯಜಿಹ್ವ** ಎಂದರೆ ಸುವರ್ಣಮಯವಾದ ಜಿಹ್ವೆಯುಳ್ಳವನೆಂದೂ, ೩-೫೪-೧೧; ಮತ್ತು ೭-೪೫-೪ರಲ್ಲಿ **ಸುಜಿಹ್ವ** (ಸುಂದರವಾದ ಜಿಹ್ವೆಯುಳ್ಳವ) ನು ಎಂದೂ, ೬-೭೧-೪ರಲ್ಲಿ **ಮಂದ್ರಜಿಹ್ವ** ಎಂದರೆ ಆಹ್ಲಾದಕರವಾದ ಜಿಹ್ವೆಯುಳ್ಳವನು ಎಂದೂ ವರ್ಣಿಸಿದೆ. ಸವಿತೃವು ತನ್ನ ದೇಹವನ್ನೆಲ್ಲಾ ಸುವರ್ಣಮಯವಾದ ಕವಚದಿಂದ ಆಚ್ಛಾದಿಸಿಕೊಳ್ಳುತ್ತಾನೆ. ಆದುದರಿಂದಲೇ ಹೊಂಬಣ್ಣದ ರೂಪವನ್ನು ಧರಿಸಿದ್ದಾನೆ. (೪-೫೩-೨) ವಿಶ್ವರೂಪವನ್ನು ಧರಿಸುವ ಶಕ್ತಿಯನ್ನು ಹೊಂದಿದ್ದಾನೆ. **(ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ೫-೮೧-೨).** **ಹಿರಣ್ಯಕೇಶ**ನಾದ ಎಂದರೆ ಸುವರ್ಣಮಯವಾದ ಕೇಶಗಳುಳ್ಳ (೧೦-೧೩೯-೧) ಈ ಸವಿತೃವು ತೇಜೋಮಯವಾದ ಸ್ವರೂಪವುಳ್ಳವನಾಗಿ, ಪ್ರಭಾಯುತವಾದುದೂ, ಹೊಂಬಣ್ಣವುಳ್ಳದ್ದೂ ಆದ ಅಶ್ವಗಳಿಂದ ಎಳೆಯಲ್ಪಡುವ ಹೊಂಬಣ್ಣದ ರಥವನ್ನು ಹತ್ತುತ್ತಾನೆ. ಸಕಲ ಭೂತಗಳನ್ನೂ ವೀಕ್ಷಿಸುತ್ತಾ ಆರೋಹಣಾವರೋಹಣಾತ್ಮಕವಾದ ಮಾರ್ಗಗಳಲ್ಲಿ ಸಂಚರಿಸುತ್ತಾನೆ. (೧-೩೫-೨ ರಿಂದ ೫; ೭-೪೫-೧) ಸುವರ್ಣಾತ್ಮಕವಾದ ಪ್ರಭೆಯಿಂದ ಆವೃತನಾಗಿ ಅಂತರಿಕ್ಷವನ್ನೂ, ಪೃಥ್ವೀಪ್ರದೇಶಗಳನ್ನೂ ಪ್ರಕಾಶಿಸುವಂತೆ ಮಾಡುತ್ತಾನೆ. (೩-೩೮-೮ ; ೭-೩೮-೧; ೭-೪೫-೩ ; ೧-೩೫-೭, ೮ ; ೪-೧೪-೨ ; ೪-೫೩-೪ ; ೫-೮೧-೨) ಸಕಲ ಭೂತಗಳನ್ನೂ ಅನುಗ್ರಹಿಸಲು ಅವನು ಹರಡುವುದೂ, ಸಕಲ ಭೂತಗಳಿಗೂ ಚೈತನ್ಯದಾಯಿಯೂ ಆದ ಅವನ ಪುಷ್ಟವಾದುದೂ ಮತ್ತು ಸುವರ್ಣಮಯವಾದುದೂ ಆದ ಬಾಹುಗಳು ಅಂತರಿಕ್ಷದ ಅತ್ಯಂತ ಸೀಮಾಪ್ರದೇಶಗಳನ್ನು ಮುಟ್ಟುತ್ತವೆ. (೨-೩೮-೨; ೪-೫೩-೩, ೪; ೬-೭೧-೧, ೫; ೭-೪೫-೨). ೬-೭೧-೪ನೇ ಮಂತ್ರದಲ್ಲಿ ಮಾತ್ರ ಸವಿತೃವು ಅಯೋಹನು ಎಂಬ ವಿಶೇಷಣದಿಂದ ವರ್ಣಿತನಾಗಿದ್ದಾನೆ. **ಅಯೋಹನು**ವೆಂದರೆ ಉಕ್ಕಿನಿಂದ ನಿರ್ಮಿತವಾದ ದವಡೆಯುಳ್ಳವನೆಂದರ್ಥ. ಆದರೆ, ಭಾಷ್ಯಕಾರರು ಈ ಸಂದರ್ಭದಲ್ಲಿ **ಅಯಃ** ಶಬ್ದಕ್ಕೆ ಸುವರ್ಣವೆಂದೇ ಅರ್ಥಮಾಡಬೇಕೆಂದು ತಿಳಿಸಿದ್ದಾರೆ. **(ರುಕ್ಮಂ ಅಯಃ ಇತಿ ಹಿರಣ್ಯನಾಮಸು ಪಾಠಾತ್)** ಪುರಾತನಗಳಾದ ಅವನ ಸಂಚಾರಮಾರ್ಗಗಳು ಪೂರ್ಣವಾಗಿ ರಜೋರಹಿತವಾಗಿವೆ. **(ಅರೇಣವಃ)**. ವರುಣನಿಗೂ ಮತ್ತು ಲೋಕಪ್ರಭುಗಳೆಂದೆನ್ನಿಸಿಕೊಂಡಿರುವ ಇತರ ದೇವತೆಗಳಿಗೂ ಅವರ ಶಕ್ತ್ಯತಿಶಯವನ್ನು ತೋರಿಸುವ ಯಾವ **ಅಸುರ** ಎಂಬ ವಿಶೇಷಣವುಂಟೋ ಅದೇ ವಿಶೇಷಣದಿಂದ ಸವಿತೃವೂ ವರ್ಣಿತನಾಗಿದ್ದಾನೆ (೧-೩೫-೭; ೧-೩೫-೧೦; ೪-೫೩-೧). ಇಂದ್ರ, ವರುಣ, ಮಿತ್ರ, ಅರ್ಯಮ, ರುದ್ರ ಇವರಲ್ಲಾರಾದರೂ ಆಗಲಿ ಅಥವಾ ಇತರ ದೇವತೆಗಳಾಗಲಿ ಈ ಸವಿತೃವಿನ ಸಂಕಲ್ಪವನ್ನೂ, ಸ್ವಪ್ರಭುತ್ವವನ್ನೂ ನಿರೋಧಿಸಲಾರರು (೨-೩೮-೭, ೯; ೫-೮೨-೨). ಸತ್ಯಧರ್ಮನಾದ ಸವಿತೃವು ಸ್ಥಿರವಾದ ವ್ರತಗಳನ್ನೇ ಆಚರಿಸುತ್ತಾನೆ. ಅವನ ನಿಯಮಗಳೆಲ್ಲವೂ ಅಚಲವಾದವು (೪-೫೩-೪; ೧೦-೩೪-೮; ೧೦-೧೩೯-೩). ಆದುದರಿಂದಲೇ ಇತರ ದೇವತೆಗಳೆಲ್ಲರೂ ಇವನ ನಿಯಮಕ್ಕನುಸಾರವಾಗಿಯೇ ವರ್ತಿಸುವರು (೫-೮೧-೩) ಉದಕಗಳೂ, ವಾಯುವೂ ಇವನ ಸಂಕಲ್ಪವನ್ನೇ ಅನುಸರಿಸಿ ವ್ಯವಹರಿಸುವುವು (೨-೩೮-೨). ವಸುಗಳೂ, ಅದಿತಿಯೂ, ಪ್ರಭುವಾದ ವರುಣನೂ, ಮಿತ್ರನೂ, ಅರ್ಯಮನೂ ಸಹ ಈ ದೇವನನ್ನು ಸ್ತುತಿಸಿ, ಪಠಿಸಿ, ಇವನನ್ನು ಪ್ರಶಂಸಿಸುತ್ತಾರೆ (೭-೩೮-೩, ೪) ದೇವಮಾನವಾದಿಗಳೆಲ್ಲರಿಂದಲೂ ಅಪೇಕ್ಷಿತಗಳಾದ ಸಕಲ ಪದಾರ್ಥಗಳಿಗೂ ಈ ಸವಿತೃವೇ ಸ್ವಾಮಿಯು. ಅವುಗಳೆಲ್ಲವನ್ನೂ ಅವನು ದ್ಯುಲೋಕದಿಂದಲೂ, ಅಂತರಿಕ್ಷದಿಂದಲೂ, ಪೃಥ್ವಿಯಿಂದಲೂ, ಅನುಗ್ರಹರೂಪದಲ್ಲಿ ಕಳುಹುತ್ತಾನೆ (೧-೨೪-೩; ೨-೩೮-೧೧). ಉಷಸ್ಸಿನ ಆವಿರ್ಭಾವಕ್ಕಿಂತಲೂ ಪೂರ್ವಭಾವಿಯಾಗಿಯೇ ಅವನು ಅಶ್ವಿನೀದೇವತೆಗಳ ರಥವನ್ನು ಪ್ರೇರಿಸಿ ಕಳುಹುತ್ತಾನೆ (೧-೩೪-೧೦) ಸಕಲ ಭೂತಗಳಿಗೂ ಸ್ವಾಮಿಯಾದ ಪ್ರಜಾಪತಿಯೇ ಈ ಸವಿತೃವು. ದ್ಯುಲೋಕಕ್ಕೂ ಮತ್ತು ಪೃಥ್ವಿಗೂ ಆಧಾರಭೂತನಾಗಿದ್ದಾನೆ. ಪಶುಗಳು ತಮ್ಮ ಮೇವನ್ನು ಮುಗಿಸಿಕೊಂಡು

ಸಂಜೆಯ ವೇಳೆ ಮನೆಗೆ ಯಾವ ಆದರದಿಂದಲೂ, ಆತುರದಿಂದಲೂ ಹೋಗುವುವೋ ಅದೇ ಆದರ ಮತ್ತು ಆತುರ ದಿಂದಲೂ, ಯೋಧರು ಯಾವ ಉತ್ಸಾಹದಿಂದ ರಣರಂಗಕ್ಕೆ ಹೋಗಲು ತಮ್ಮ ಅಶ್ವಗಳನ್ನು ಸಮೀಪಿಸುವರೋ ಅದೇ ಉತ್ಸಾಹದಿಂದಲೂ, ಕರುವಿಗೆ ಹಾಲು ಕೊಡಲು ಹಸುವು ಯಾವ ಮಮತೆಯಿಂದ ಹೋಗುವುದೋ ಅದೇ ಮಮತೆ ಯಿಂದಲೂ, ಪತ್ನಿಯ ಸಮೀಪಕ್ಕೆ ಹೋಗಲು ಪುರುಷನು ಯಾವ ಆತುರವನ್ನು ತೋರಿಸುವನೋ ಅದೇ ಆತುರ ದಿಂದಲೂ, ಯಜಮಾನನನ್ನು ಅನುಗ್ರಹಿಸಲು ಶೀಘ್ರವಾಗಿ ಅಂತಹ ಮಮತೆಯಿಂದ ಬರಬೇಕೆಂದು ಪ್ರಾರ್ಥಿತನಾಗಿ ದ್ದಾನೆ (೪-೫೩-೨; ೪-೫೪-೪; ೧೦-೧೪೯-೧, ೪).

ಋಕ್ಸಂಹಿತೆಯಲ್ಲಿ "ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ" ।

(೪-೫೩-೨)

ಎಂಬ ವಾಕ್ಯದಿಂದ ಯಾವರೀತಿ ಸವಿತೃವಿಗೆ ಪ್ರಜಾಪತಿಶಬ್ದವು ಅವನ ಭೂತನಾಯಕತ್ವವನ್ನು ತಿಳಿಸುವ ವಿಶೇಷಣವಾಗಿದೆಯೋ, ಅದರಂತೆಯೇ ತೈತ್ತಿರೀಯಬ್ರಾಹ್ಮಣದಲ್ಲೂ ಸಹ ಈ ಎರಡು ಪದಗಳಿಗೂ ತಾದಾತ್ಮ್ಯವನ್ನು ತೋರಿಸು ವರ್ಣನೆಯು ಇರುವುದನ್ನು ಗಮನಿಸಬಹುದು. ಉದಾಹರಣೆಗೆ—

"ಪ್ರಜಾಪತಿಃ ಸವಿತಾ ಭೂತ್ವಾ ಪ್ರಜಾ ಅಸೃಜತ"

(ತೈ. ಬ್ರಾ. ೧-೬-೪-೧)

ಪ್ರಜಾಪತಿಯೇ ಸವಿತೃರೂಪದಿಂದ ಆವಿರ್ಭವಿಸಿ ಪ್ರಜೆಗಳನ್ನು ಸೃಷ್ಟಿಸಿದನು. ಇದೇ ತಾದಾತ್ಮ್ಯವನ್ನು ಸಮರ್ಥಿಸುತ್ತಾ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ—

"ಯೋ ಹ್ಯೇವ ಸವಿತಾ ಸ ಪ್ರಜಾಪತಿರಿತಿ ವದಂತಃ"

(ಶ. ಬ್ರಾ ೧೨-೩.೫-೧)

ಯಾವನು ಸವಿತೃದೇವನೋ ಅವನನ್ನೇ ಪ್ರಜಾಪತಿಯೆಂದು ಕರೆಯುವ ವಾಡಿಕೆ.

೫-೮೨-೭ರಲ್ಲು ಇವನನ್ನು ವಿಶ್ವದೇವ ಎಂಬ ವಿಶೇಷಣದಿಂದ ಪ್ರಶಂಸಿಸಿದೆ. ಈ ಪದಕ್ಕೆ ತಾತ್ಪರ್ಯವನ್ನು ವಿವರಿಸುವಾಗ ಸಾಯಣರು "ವಿಶ್ವೇ ದೇವಾ ಯಸ್ಯ ವಶೇ ಭವಂತಿ" ಇತರ ಸಕಲದೇವತೆಗಳೂ ಯಾವನ ವಶವರ್ತಿಗಳಾಗಿದ್ದಾರೋ ಆ ಸವಿತೃವು ಎಂದಾಗಲಿ ಅಥವಾ "ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ ಎಂದು ೧-೧೬೪-೪೬ನೇ ಋಕ್ಕಿನಲ್ಲಿ ವರ್ಣಿತವಾಗಿರುವಂತೆ, ಇಂದ್ರಾದಿದೇವತೆಗಳೆಲ್ಲರೂ ಯಾವ ವಿಶ್ವಾತ್ಮನ ವಿಭೂತಿ ವಿಶೇಷಣಗಳಾಗಿರುವರೋ ಅಂತಹ ವಿಶ್ವಾತ್ಮನು ಎಂದಾಗಲಿ ಅರ್ಥವೆಂದು ತಿಳಿಸಿದ್ದಾರೆ. ಈ ಸವಿತೃವು ಪೃಥಿವೀ ಪ್ರದೇಶಗಳಿಗೆಲ್ಲಾ ನಿರ್ಮಾತೃವಾಗಿದ್ದಾನೆ. (೫-೮೧-೩) ಮತ್ತು ದೇವತೆಗಳಿಗೆಲ್ಲಾ ಅಮೃತತ್ವವನ್ನನುಗ್ರಹಿಸುತ್ತಾನೆ. (೪-೫೪-೨), ತಮ್ಮ ಕರ್ಮಗಳಿಂದ ಮಾಹಾತ್ಮ್ಯವನ್ನು ಪಡೆದ ಋಭುಗಳಿಗೂ ಅಮರ್ತ್ಯತ್ವವನ್ನು ಅನುಗ್ರಹಿಸಿದನು. (೧-೧೧೦-೨; ೩;) ಮೃತರಾದವರ ಆತ್ಮಗಳನ್ನು ಸುಕೃತಿಗಳ ಲೋಕಕ್ಕೆ ಕರೆದೊಯ್ಯಬೇಕೆಂದು ೧೦-೧೭-೪ರಲ್ಲಿ ಪ್ರಾರ್ಥಿತನಾಗಿದ್ದಾನೆ. ೪-೫೪-೩ನೇ ಮಂತ್ರದಲ್ಲಿ ತನ್ನ ಆರಾಧಕರನ್ನು ಪಾಪರಹಿತರನ್ನಾಗಿ ಮಾಡಬೇಕೆಂದು ಪ್ರಾರ್ಥಿತನಾಗಿದ್ದಾನೆ.

ಅಗ್ನಿಗೆ ವಿಶೇಷಣವಾಗಿ ಅವನ ವಿಶೇಷಗುಣವನ್ನು ತಿಳಿಸತಕ್ಕ **ಅಪಾಂ ನಪಾತ್** ಎಂಬ ವಿಶೇಷಣವು ೧೦-೧೪೯-೨ನೇ ಮಂತ್ರದಲ್ಲಿ ಸವಿತೃವಿನ ಗುಣವನ್ನೂ ತಿಳಿಸುವ ಪದವಾಗಿದೆ. ಆದರೆ, **ಅಪಾಂ ನಪಾತ್** ಎಂಬ ಪದಕ್ಕೆ ಅಗ್ನಿಯೆಂದೇ ಅರ್ಥಮಾಡಿ ಸಾಯಣರು ಸವಿತೃ ಶಬ್ದಕ್ಕೂ **ಅಪಾಂ ನಪಾತ್** ಎಂಬುದಕ್ಕೆ ವಿಶೇಷ್ಯವಿಶೇಷಣ ಸಂಬಂಧವು ಪ್ರಕೃತವಾಗಿ ಉದಾಹೃತವಾದ ಮಂತ್ರದಲ್ಲಿ ಸೂಚಿಸಿಲ್ಲವೆಂದು ತಿಳಿಸಿದ್ದಾರೆ.

**೨. ಸವಿತೃಶಬ್ದದ ನಿರ್ವಚನವನ್ನು ತಿಳಿಸುವ ವಾಕ್ಯಗಳು—**

ಯಾಸ್ಕರು ಸವಿತೃಶಬ್ದಕ್ಕೆ **ಸರ್ವಸ್ಯ ಪ್ರಸವಿತಾ** ಎಂದು ತಾತ್ಪರ್ಯವೆಂದು ವಿವರಿಸಿದ್ದಾರೆ. (ನಿ. ೧೦-೩೧) ಆದರೆ **ಪ್ರಸವಿತೃ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವೇನೆಂಬುದನ್ನು ತಿಳಿಸಿಲ್ಲ. ಈ ಶಬ್ದದ ಮೂಲವಾದ **ಸು** ಅಥವಾ **ಸೂ** ಎಂಬ ಧಾತುವಿಗೆ ಮೂರು ವಿಧವಾದ ಅರ್ಥಗಳಲ್ಲಿ ಪ್ರಯೋಗವಿದೆ.

೧. ಉತ್ಪನ್ನವಾಗುವಂತೆ ಮಾಡು ಎಂಬರ್ಥದಲ್ಲೂ,

೨. ಆಹುತಿಯನ್ನರ್ಪಿಸು ಎಂಬರ್ಥದಲ್ಲೂ, ಮತ್ತು

೩. ಪ್ರಚೋದಿಸು—ಚೈತನ್ಯಯುಕ್ತವಾಗುವಂತೆ ಮಾಡು ಎಂಬರ್ಥದಲ್ಲೂ ಈ ಧಾತುವಿನ ಪ್ರಯೋಗವು ಸಾಧ್ಯವಾಗುತ್ತದೆ.

ಸವಿತೃಶಬ್ದಕ್ಕೆ ಮೂಲವಾದ ಈ ಧಾತ್ವರ್ಥವನ್ನು ವಿವರಿಸುವಾಗ ಸಾಯಣರು ಒಂದೊಂದು ಸಲ ಪ್ರಚೋದಿಸು ಎಂದೂ, ಇನ್ನೊಂದುಸಲ ಅನುಜ್ಞೆಯನ್ನು ಕೊಡು ಎಂಬರ್ಥವೆಂದೂ ತಿಳಿಸಿದ್ದಾರೆ. ೧-೧೫೩-೧ರಲ್ಲಿ **ಪ್ರಸೂತಾ** ಎಂಬುದಕ್ಕೆ **ಉತ್ಪನ್ನಾ** ಎಂದೂ, **ಸವಃ** ಎಂಬುದಕ್ಕೆ **ಉತ್ಪತ್ತಿ** ಎಂದೂ ವಿವರಿಸಿದ್ದಾರೆ. ಇತರ ದೇವತೆಗಳಿಗೆ ಉಪಯುಕ್ತವಾಗುವ ಯಾವ ವಿಶೇಷಣವಾಗಲಿ, ಸವಿತೃದೇವನ ಈ ವಿಶೇಷಣದಂತೆ ನಾನಾ ಶಕ್ತಿಗಳನ್ನು ಸೂಚಿಸುವ ಶಕ್ತಿಯನ್ನು ಹೊಂದಿಲ್ಲ. ಈ ಪದವು ಸವಿತೃವಿನ ಅನೇಕ ವಿಧವಾದ ದಿವ್ಯಶಕ್ತಿಗಳನ್ನು ತೋರಿಸುತ್ತಾ, ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಈ ದೇವನ ಅನಂತಶಕ್ತಿಗಳನ್ನು ತಿಳಿಸುತ್ತವೆ. ಈ ವಿಶೇಷಣದಿಂದ ವರ್ಣಿತನಾಗುವ ಸವಿತೃವಿನ ಪ್ರಶಂಸೆಯನ್ನು ಹೇಳತಕ್ಕ ಕೆಲವು ಮಂತ್ರಗಳನ್ನು ಇಲ್ಲಿ ಉದಾಹರಿಸಬಹುದು.

"ದ್ವಿಪಾದಗಳುಳ್ಳ ಪ್ರಾಣಿಗಳನ್ನೂ, ನಾಲ್ಕು ಪಾದಗಳುಳ್ಳ ಪ್ರಾಣಿಗಳನ್ನೂ ಸವಿತೃದೇವನು ಅವುಗಳ ಇಷ್ಟಾರ್ಥಗಳನ್ನು ಸಾಧಿಸುವ ಶಕ್ತಿಯನ್ನು ಕೊಟ್ಟು ಎಲ್ಲವನ್ನೂ ಪ್ರಚೋದಿಸಿದ್ದಾನೆ.'' (೭-೧೨೪-೧)

"ಜಂಗಮಾತ್ಮಕವಾದ ಸಕಲ ಜಗತ್ತಿಗೂ ಸವಿತೃವು ಉತ್ಪತ್ತಿಕಾರಣನಾಗಿ ಅವುಗಳಿಗೆಲ್ಲಾ ಚೈತನ್ಯದಾಯಿಯಾಗಿದ್ದಾನೆ." (೧-೧೫೭-೧)

"ಈ ಸವಿತೃದೇವನು ವಿಶ್ವಾತ್ಮಕವಾದ ಸಮಸ್ತ ರೂಪಗಳನ್ನೂ ಧರಿಸಬಲ್ಲನು. ದ್ವಿಪಾದಗಳುಳ್ಳ ಮಾನವಾದಿಗಳಿಗೂ, ನಾಲ್ಕು ಪಾದಗಳುಳ್ಳ ಪಶ್ವಾದಿ ಪ್ರಾಣಿಗಳಿಗೂ ಸಹ ಸಂಪದ್ವೃದ್ಧಿಯನ್ನೂ ಕಲ್ಯಾಣವನ್ನೂ ಉಂಟುಮಾಡಿದ್ದಾನೆ. ಇಷ್ಟಾರ್ಥಪ್ರದನಾದ ಸವಿತೃವು ಅಂತರಿಕ್ಷವನ್ನೆಲ್ಲಾ ಪ್ರಕಾಶಿಸುವಂತೆ ಮಾಡಿದ್ದಾನೆ. ಉಷಸ್ಸಿನ ಸಂಚಾರ ಮಾರ್ಗದಲ್ಲಿ ಪ್ರಕಾಶಿಸುತ್ತಿದ್ದಾನೆ. "ಎಲೈ ಸವಿತೃವೇ, ನೀನೊಬ್ಬನೇ ಸಕಲ ಜಗತ್ತಿನ ಉತ್ಪತ್ತಿಗೂ ಕಾರಣನು. ನಿನ್ನ ಅನಂತಶಕ್ತಿಯುತವಾದ ಸಂಚಾರಗಳಿಂದ ಜಗತ್ಪೋಷಕನಾಗಿ ನೀನೇ ಪೂಷದೇವನಾಗಿದ್ದೀಯೆ." (೫-೮೧-೨, ೫)

" ಸುಧನ್ವಪುತ್ರರಾದ ಎಲೈ ಋಭುಗಳೇ, ನೀವು ನಿಮ್ಮ ಸತ್ಕರ್ಮಗಳ ಮಹತ್ವದಿಂದ ಉದಾರದಾನಿಯಾದ ಸವಿತೃವಿನ ಗೃಹವನ್ನು ಸೇರಿದಿರಿ. ಅವನು ನಿಮಗೆ ಅಮೃತತ್ವವನ್ನು ಅನುಗ್ರಹಿಸಿಕೊಟ್ಟನು.'' (೧–೧೧೦–೩, ೩.)

" ಸವಿತೃವಿನ ಅನುಗ್ರಹಾತ್ಮಕವಾದ ಪ್ರಚೋದನೆಯಿಂದ ನಾವು ಅಪೇಕ್ಷಿತಗಳಾದ ಧನಗಳನ್ನು ಇಂದು ಪಡೆಯೋಣ.'' (೧–೧೫೯–೫)

" ಜಗದ್ಧಾರಕನೂ, ಜಗದುದ್ಧಾರಕ್ಕಾಗಿ ಸರ್ವದಾ ಶ್ರಮಿಸುವವನೂ ಆದ ಸವಿತೃವು ನಮಗೆ ಚೈತನ್ಯದಾನಕ್ಕಾಗಿ ಆವಿರ್ಭೂತನಾಗಿದ್ದಾನೆ.'' (೨–೩೮–೧)

" ದೇವನಾದ ಸವಿತೃವು ನಮಗೆ (ಉದಕಗಳಿಗೆ) ಮಾರ್ಗದರ್ಶಕನಾಗಿದ್ದಾನೆ. ಅವನ ಪ್ರೇರಣೆಯಿಂದಲೇ ನಾವು ವಿಸ್ತೃತವಾದ ಪ್ರವಾಹರೂಪದಿಂದ ಹರಿಯುತ್ತೇವೆ.'' (೩–೩೩–೬)

" ಎಲೈ ಸವಿತೃದೇವನೇ, ಪ್ರತಿದಿನವೂ ಮೂರು ಸಲ ನಮಗೆ ಅಂತರಿಕ್ಷದಿಂದ ನಮ್ಮ ಆದೃತವಾದ ಪದಾರ್ಥಗಳನ್ನು ಕಳುಹಿಸಿಕೊಡು. ಸವಿತೃವೂ, ಮಿತ್ರಾವರುಣರೂ ಸಹ ನಮ್ಮ ಇಷ್ಟಾರ್ಥಗಳನ್ನು ಪ್ರತಿದಿನವೂ ಮೂರು ಸಲ ನಮಗೆ ಕಳುಹಿಸಿಕೊಟ್ಟು, ತಮ್ಮ ಉದಾರ ಹಸ್ತಗಳಿಂದ ನಮ್ಮನ್ನು ಅನುಗ್ರಹಿಸುವರು.'' (೩–೫೬–೬)

" ಜಗತ್ತಿಗೆಲ್ಲಾ ಚೈತನ್ಯದಾಯಿಗಳಾದ ಬಾಹುಗಳನ್ನು ಸವಿತೃವು ವಿಸ್ತೃತವಾಗಿ ಹರಡಿದ್ದಾನೆ. ತನ್ನ ಕಿರಣಗಳಿಂದ ಜಗತ್ತಿಗೆ ಜೀವಕಳೆಯನ್ನು ತುಂಬಿದ್ದಾನೆ. ಪ್ರಭೂತವಾದ ಸುಖವನ್ನು ಕೊಡತಕ್ಕವನೂ, ಜಗತ್ತಿಗೆ ವ್ಯಾವಹಾರಿಕಶಕ್ತಿಯನ್ನು ಕೊಡತಕ್ಕವನೂ, ಜಗತ್‌ಸ್ಥಾಪಕನೂ, ಸ್ಥಾವರ ಜಂಗಮಾತ್ಮಕಗಳಾದ ಸಕಲ ವಿಶ್ವಕ್ಕೂ ಪ್ರಭುವಾದವನೂ ಆದ ಸವಿತೃದೇವನು ನಮಗೆ ರಕ್ಷಣೆಯನ್ನು ನೀಡಲಿ.'' (೪–೫೩–೩, ೬)

" ಎಲೈ ಸವಿತೃದೇವನೇ, ಮನೋದೌರ್ಬಲ್ಯದಿಂದ ನಾವು ದೇವತೆಗಳ ವಿಷಯದಲ್ಲಿ ಮಾಡಿರುವ ಯಾವ ಅಪರಾಧವಿದ್ದರೂ, ಮತ್ತು ಮಾನವರಿಗೆ ಸಹಜವಾದ ಅಜ್ಞಾನದಿಂದಾಗಲಿ, ದುಃಖದಾಯಕವಾದ ವ್ಯವಹಾರಗಳಿಂದಾಗಲಿ ದೇವತೆಗಳಿಗೂ ಮತ್ತು ನಿನ್ನ ಭಕ್ತರಾದ ಮಾನವರಿಗೂ ಮಾಡಿರುವ ಯಾವ ಅಪರಾಧವಿದ್ದರೂ ಸಹ ಇವೆಲ್ಲವನ್ನೂ ಕ್ಷಮಿಸಿ ನಮ್ಮನ್ನು ಪಾಪರಹಿತರನ್ನಾಗಿ ಮಾಡು '' (೪–೫೪–೩)

'' ಪೂಜ್ಯನೂ, ಭಗರೂಪನೂ ಆದ ಸವಿತೃವು ತನ್ನ ಭಕ್ತರಿಗೆ ಸಂಪತ್ತನ್ನೊದಗಿಸಲಿ. ಎಲೈ ಸವಿತೃವೇ ನಮಗೆ ಪುತ್ರಸಂಪತ್ತನ್ನೂ, ಧನಸಂಪತ್ತನ್ನೂ ಒದಗಿಸಿ ನಮ್ಮ ಆಲಸ್ಯರೂಪವಾದ ಜಾಡ್ಯವನ್ನು ನಾಶಪಡಿಸು. ಎಲೈ ದೇವತಾತ್ಮನಾದ ಸವಿತೃವೇ, ನಮ್ಮ ಆಪತ್ತುಗಳನ್ನೆಲ್ಲಾ ದೂರಮಾಡಿ, ನಮಗೆ ಅಪೇಕ್ಷಿತವಾದ ವಸ್ತುಗಳನ್ನು ಅನುಗ್ರಹಿಸಿ ಕೊಡು. ಸವಿತೃದೇವನ ಅನುಗ್ರಹದಿಂದ ನಾವು ಅದಿತಿಯ ವಿಷಯದಲ್ಲಿ ಯಾವ ಅಪರಾಧವನ್ನೂ ಆಚರಿಸದೆ ಆದೃತವಾದ ವಸ್ತುಗಳನ್ನೆಲ್ಲಾ ಪಡೆಯೋಣ. ಸಜ್ಜನರಿಗೆ ಪಾಲಕನೂ, ಸತ್ಯಪ್ರಸವನೂ, ಮತ್ತು ಸಕಲವಾದ ದಿವ್ಯಗುಣಗಳನ್ನು ಪಡೆದಿರುವವನೂ ಆದ ಸವಿತೃದೇವನನ್ನು ಇಂದು ನಾವು ಸ್ತುತಿಗಳಿಂದ ಪೂಜಿಸಿ ಆರಸುತ್ತೇವೆ.'' (೫–೮೨–೩ ರಿಂದ ೭)

" ದಿವ್ಯಶಕ್ತಿಯುತನಾದ ಸವಿತೃವು ಜಗತ್ತಿಗೆ ಚೈತನ್ಯವನ್ನುಂಟುಮಾಡಲು ತನ್ನ ಸುವರ್ಣಮಯವಾದ ಬಾಹುಗಳನ್ನು ವಿಸ್ತರಿಸಿ ಹರಡಿದ್ದಾನೆ. ಈ ದಿವ್ಯಶಕ್ತಿಯ ಅಂಶವನ್ನು ನಾವೂ ಪಡೆಯುವಂತಾಗಲಿ. ಎಲೈ ಸವಿತೃವೇ, ನಮಗೆ ಆದೃತವಾದ ವಸ್ತುಗಳನ್ನು ಇಂದೂ ನಾಳೆಯೂ ಅನುಸ್ಯೂತವಾಗಿ ಪ್ರತಿದಿನವೂ ಕಳುಹಿಸಿಕೊಡು.'' (೬–೭೧–೧, ೨)

"ಎಲೈ ಸವಿತೃವೇ, ಮಾನವರಿಗೆ ಯೋಗ್ಯವಾದ ಆಹಾರಗಳನ್ನು ಒದಗಿಸುವವನಾಗಿ ಉದಯಿಸು. ಇದೇ ಮಹಾತ್ಮನಾದವನೂ, ಅನಂತಶಕ್ತಿಯುಳ್ಳವನೂ ಆದ ಸವಿತೃವನ್ನು ದೇವಿಯಾದ ಅದಿತಿಯೂ, ವರುಣನೂ, ಮಿತ್ರನೂ ಮತ್ತು ಅರ್ಯಮನೂ ಒಟ್ಟಿಗೆ ಸೇರಿಕೊಂಡು ಸ್ತುತಿಸುತ್ತಾ ಪೂಜಿಸುತ್ತಾರೆ. (೭-೩೮-೩, ೪)

"ಸಂಪದ್ಯುತನಾದ ಸವಿತೃವು ಇಂದು ನಮಗೆ ಒದಗಿಸಿಕೊಡತಕ್ಕ ಐಶ್ವರ್ಯವನ್ನು ನಾವು ಇಂದು ಹಂಚಿಕೊಳ್ಳೋಣ." (೭-೪೦-೧)

"ದೇವನಾದ ಸವಿತೃವು ಅಂತರಿಕ್ಷವನ್ನೆಲ್ಲಾ ವ್ಯಾಪಿಸುತ್ತಲೂ, ಅಶ್ವಗಳಿಂದ ಎಳೆಯಲ್ಪಡುತ್ತಲೂ; ತನ್ನ ಕೈಯಲ್ಲಿ ಮಾನವರಿಗೆ ಯೋಗ್ಯವಾದ ಅನೇಕ ಪದಾರ್ಥಗಳನ್ನು ದಾನಮಾಡುವುದಕ್ಕೋಸ್ಕರ ಹಿಡಿದವನಾಗಿಯೂ, ಲೋಕವನ್ನೆಲ್ಲಾ ಪ್ರಕಾಶವನ್ನುಂಟುಮಾಡುತ್ತಲೂ ಬರುತ್ತಿದ್ದಾನೆ." (೭-೪೫-೧)

"ಸವಿತೃವಿನ ಲೋಕಪ್ರಸವಾತ್ಮಕವಾದ ಶಕ್ತಿಯನ್ನೂ ಮತ್ತು ಭಗನ ಔದಾರ್ಯವನ್ನೂ ನಾನು ಸ್ತುತಿಸಿ ಪ್ರಾರ್ಥಿಸುವಂತೆಯೇ, ಅಂತರಿಕ್ಷರೂಪವಾದ ಸಮುದ್ರದಿಂದ ಆಚ್ಛಾದಿತನಾದ ಅಗ್ನಿಯನ್ನೂ ಸ್ತುತಿಸಿ ಪ್ರಾರ್ಥಿಸುತ್ತೇನೆ" (೮-೯೧-೬)

"ಎಲೈ ಸವಿತೃವೇ, ನೀನು ಸಕಲಸಂಪದ್ಯುಕ್ತನು. ನಮಗೆ ಇಂದು ಅತ್ಯುತ್ತಮವಾದುದೂ, ಅಪೇಕ್ಷಿತವಾದುದೂ ಆದ ನಿನ್ನ ಸಂಪತ್ತಿನ ಕೊಂಚಭಾಗವನ್ನು ಕಳುಹಿಸಿಕೊಡು" (೧೦-೩೫-೭)

"ಸವಿತೃವು ನಮಗೆ ಸಕಲವಾದ ಅಭ್ಯುದಯವನ್ನೂ ಒದಗಿಸಲಿ" (೧೦-೩೬-೧೪)

"ಸವಿತೃವು ನನ್ನ ಆಲಸ್ಯವನ್ನು ನಾಶಮಾಡಲಿ" (೧೦-೧೦೦-೮)

"ಸೂರ್ಯರಶ್ಮಿಗಳಿಂದ ಆಚ್ಛಾದಿತನೂ, ಹೊಂಬಣ್ಣದ ಕೇಶಗಳಿಂದ ಯುಕ್ತನಾದವನೂ ಆದ ಸವಿತೃವು ಪೂರ್ವದಿಕ್ಕಿನಲ್ಲಿ ಅನುಸ್ಯೂತವಾಗಿ ತನ್ನ ಪ್ರಭೆಗಳೊಡನೆ ಉದಯಿಸುತ್ತಾನೆ. ಜಗತ್ಪೋಷಕನೂ, ಜಗತ್ಪಾಲಕನೂ, ಆದ ಸವಿತೃವು ಸಕಲಲೋಕಗಳನ್ನೂ ವೀಕ್ಷಿಸುತ್ತಾ ಸಂಚರಿಸುತ್ತಾನೆ" (೧೦-೧೩೯-೧)

(ಇದೇ ವರ್ಣನೆಯನ್ನು ಅ. ವೇ. ೫-೨೪-೧; ೭-೧೪-೧, ೩; ೭-೧೫-೧ ಇತ್ಯಾದಿ ಮಂತ್ರಗಳಲ್ಲೂ ವಿವರಿಸಿದೆ.)

ಮೇಲೆ ಉದ್ಧೃತವಾದ ಮಂತ್ರಗಳಲ್ಲಿ ಸು ಧಾತುವಿನ ಪ್ರಯೋಗವು ಆಯಾ ಸಂದರ್ಭಕ್ಕನುಸಾರವಾದ ಅರ್ಥವನ್ನು ಕೊಡತಕ್ಕದ್ದಾಗಿರುತ್ತದೆ. ಮೇಲಿನ ಉದಾಹರಣೆಗಳಲ್ಲಿ ಕೆಲವು ಪ್ರಯೋಗಗಳನ್ನು ಪರಿಶೀಲಿಸಬಹುದು.

| | |
|---|---|
| ೧-೧೧೦-೩ | **ಆಸುವತ್** :—ದಯಪಾಲಿಸಿದನು. |
| ೩- ೩೮-೧ | **ಸವಾಯೆ** :—ಪ್ರೇರಿಸಲು ; ಪ್ರಚೋದಿಸಲು. |
| ೩- ೩೩-೬ | **ತಸ್ಯ ಪ್ರಸವೇ** :—ಅವನ ಅನುಜ್ಞೆಯಿಂದ ; ಸಂಕಲ್ಪಕ್ಕನುಸಾರವಾಗಿ. |
| ೩- ೫೬-೬ | **ಆಸುವಃ** :—ಒದಗಿಸು. |
| ೪- ೫೩-೩ | **ಸವೀಮನಿ** :—ಚೈತನ್ಯದಾಯಿಯಾದ ಅನುಜ್ಞೆಗಾಗಿ. |
| ೪- ೫೪-೩ | **ಸುವತಾತ್** :—ಪರಿವರ್ತಿತರಾಗುವಂತೆ ಮಾಡು. |

೫-೮೨-೩ **ಸಾವೀಃ** :—ಒದಗಿಸು.

೫-೮೨-೪ **ಸಾವೀಃ** :—ಒದಗಿಸು.

೫-೮೨-೪ **ಪರಾಸುವ** :—ದೂರಕ್ಕೆ ಓಡಿಸು.

೫-೮೨-೭ **ಸತ್ಯಸವ** :—ಸತ್ಯಾತ್ಮಕವಾದ ಶಕ್ತಿ ಅಥವಾ ಅನುಜ್ಞೆ.

೮-೯೧-೬ **ಸವಂ ಯಥಾ** :—ಪ್ರಸವದಂತೆ.

೧೦-೧೦೦-೮ **ಅಪ ಸಾವಿಷತ್** :—ನಾಶಪಡಿಸಲಿ.

ಈ ರೀತಿ ಒಂದೇ ಧಾತುವು ಸವಿತೃವಿನ ನಾನಾ ಶಕ್ತಿಗಳನ್ನು ತೋರಿಸುವ ಬೇರೆ ಬೇರೆ ಸನ್ನಿವೇಶಗಳಲ್ಲಿ ಪ್ರಯುಕ್ತವಾಗಿದೆ.

ಈ **ಸೂ** ಧಾತುವಿನಿಂದಲೇ ನಿಷ್ಪನ್ನವಾದ ಪದಗಳು ಸವಿತೃವಿಗೆ ವಿಶೇಷಣಗಳಾಗಿ ಪ್ರಯುಕ್ತವಾಗಿರುವಂತೆಯೇ, ಸೂರ್ಯನಿಗೂ ಸಹ ವಿಶೇಷಣಗಳಾಗಿದ್ದು ಅವನ ವೈಯಕ್ತಿಕಪ್ರಭಾವಗಳನ್ನು ತಿಳಿಸುತ್ತವೆ. ೭-೬೩-೨ ಮತ್ತು ೭-೬೩-೪ನೇ ಮಂತ್ರಗಳಲ್ಲಿ **ಪ್ರಸವಿತಾ** ಮತ್ತು **ಪ್ರಸೂತಃ** ಎಂಬ ವಿಶೇಷಣಗಳೂ, ೧೦-೩೭-೪ರಲ್ಲಿ **ಅಪಸುವ** ಎಂಬ ಸೂರ್ಯನ ಕರ್ಮದ್ಯೋತಕವಾದ ಪದವೂ ಪ್ರಯುಕ್ತವಾಗಿವೆ.

೩-೩೦-೧೨ರಲ್ಲಿ **ಹರ್ಯಶ್ವಪ್ರಸೂತಃ** ಎಂದು ಇಂದ್ರಪರವಾಗಿಯೂ, ೨-೨೮-೯ರಲ್ಲಿ ಪರಾಸುವ ಎಂದು ವರುಣನ ಪರವಾಗಿಯೂ, ಹೀಗೆಯೇ ೭-೬೬-೪ ಇತ್ಯಾದಿ ಮಂತ್ರಗಳಲ್ಲಿ **ಪರಾಸುವ** ಎಂದು ಮಿತ್ರ, ಅರ್ಯಮ. ಭಗ ಇತ್ಯಾದಿಗಳ ಪರವಾಗಿಯೂ ಪ್ರಯುಕ್ತವಾಗಿವೆ.

೭-೭೭-೧ರಲ್ಲಿ **ಪ್ರಸುವಂತೀ** ಎಂಬುದು ಉಷಸ್ಸಿಗೆ ವಿಶೇಷಣಪದವಾಗಿರುತ್ತದೆ. ಸಕಲ ಜಂತುಗಳಿಗೂ ವ್ಯವಹಾರಕ್ಕೆ ಉಚಿತನಾದ ಚೈತನ್ಯದಾಯಿಯೆಂದರ್ಥ. ಹೀಗೆಯೇ, ೮-೧೮-೧ನೇ ಮಂತ್ರದಲ್ಲಿ ಆದಿತ್ಯನ ಅನುಗ್ರಹಾತ್ಮಕವಾದ ಸಹಾಯವೆಂಬರ್ಥವನ್ನು ಸೂಚಿಸಲು **ಸವೀಮನಿ** ಎಂಬ ಪದದ ಪ್ರಯೋಗವಿರುತ್ತದೆ.

**೩. ಸವಿತೃವಿಗೂ ಸೂರ್ಯನಿಗೂ ತಾದಾತ್ಮ್ಯವನ್ನೂ ಹಾಗೆಯೇ ಭಿನ್ನತೆಯನ್ನೂ ತೋರಿಸುವ ಶ್ರುತಿವಾಕ್ಯಗಳು—**

ಕೆಲವು ಸಂದರ್ಭಗಳಲ್ಲಿ ಸವಿತೃವು ಸೂರ್ಯನಿಗಿಂತಲೂ ಭಿನ್ನದೇವತೆಯೆಂಬುದು ಸ್ಪಷ್ಟವಾಗಿ ವರ್ಣಿತವಾಗಿರುತ್ತದೆ. ೧-೩೫-೯ರಲ್ಲು ಸವಿತೃವು ಸೂರ್ಯನ ಸಮೀಪಕ್ಕೆ ಹೋಗತಕ್ಕ ವರ್ಣನೆಯಿದೆ. ಈ ಉದಾಹರಣೆಯಲ್ಲಿ ಇವರಿಬ್ಬರೂ ಭಿನ್ನದೇವತೆಗಳೆಂದೇ ತೋರುತ್ತದೆ. ಆದರೆ ಸಾಯಣರು ಈ ಸಂದರ್ಭದಲ್ಲಿ ಈ ಅಂಶವನ್ನು ಈ ರೀತಿ ವಿವರಿಸಿದ್ದಾರೆ.

> **"ಯದ್ಯಪಿ ಸವಿತೃಸೂರ್ಯಯೋರೇಕದೇವತಾತ್ವಂ ತಥಾಪಿ ಮೂರ್ತಿಭೇದೇನ ಗಂತೃಗತವ್ಯಭಾವಃ"** ॥

ಸೂರ್ಯನೂ ಸವಿತೃವೂ ಒಂದೇ ದೇವತಾತ್ವವಾದರೂ ಸಹ ಈ ಎರಡು ರೂಪಗಳೂ ಮೂಲದೇವತೆಯ ಎರಡು ಬೇರೆ ಬೇರೆ ಮೂರ್ತರೂಪಗಳು, ಎಂಬ ಈ ಸಾಯಣರ ವಿವರಣೆಯಲ್ಲಿ ಸೂರ್ಯಸವಿತೃಗಳ ಭಿನ್ನಾತ್ಮಕವಾದ

ಐಕ್ಯವು ವಿವೃತವಾಗಿದೆ. ೧-೧೨೩-೩ ರಲ್ಲಿ ಸವಿತೃವು ಸೂರ್ಯನಲ್ಲಿ ಯಜಮಾನರ ಪಾಪರಾಹಿತ್ಯವನ್ನು ಅರಿಕೆಮಾಡಬೇಕೆಂದು ಪ್ರಾರ್ಥಿಸಿದೆ. ೫-೮೧-೪ ನೇ ಮಂತ್ರದಲ್ಲಿ ಸೂರ್ಯನ ರಶ್ಮಿಗಳೊಂದಿಗೆ ಐಕ್ಯವಾಗುವ ವಿಷಯವು ತಿಳಿಸಿದೆ. "ಸೂರ್ಯಸ್ಯ ರಶ್ಮಿಭಿಃ ಸಮುಚ್ಯಸಿ" ಎಂಬ ಈ ಮಂತ್ರದ ವಾಕ್ಯಕ್ಕೆ ಸಾಯಣರು ಈ ರೀತಿ ವಿವರಣೆಯನ್ನು ತಿಳಿಸಿದ್ದಾರೆ, "**ಉದಯಾತ್ ಪೂರ್ವಭಾವೀ ಸವಿತಾ ಉದಯಾಸ್ತಮಯವರ್ತೀ ಸೂರ್ಯ ಇತಿ ।** ಉದಯಕ್ಕಿಂತಲೂ ಪೂರ್ವಭಾವಿಯಾಗಿ ಸವಿತೃನಾಮದಿಂದಲೂ, ಉದಯದಾರಭ್ಯ ಅಸ್ತಮಯದ ಪರ್ಯಂತ ಸೂರ್ಯನೆಂದೂ ಒಬ್ಬನೇ ದೇವನು ಕರೆಯಲ್ಪಡುವನು ಎಂಬುದೇ ಈ ವಿವರಣೆಯ ತಾತ್ಪರ್ಯ. ಇದೇ ರೀತಿಯಲ್ಲಿ ಯಾಸ್ಕರೂ ಸಹ ಈ ವಿಷಯವನ್ನು ವಿವರಿಸಿದ್ದಾರೆ.

"**ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾ ಆಕೀರ್ಣರಶ್ಮಿರ್ಭವತಿ**"

(ನಿ. ೧೨-೧೨)

ಅಂತರಿಕ್ಷದ ತಮಸ್ಸೆಲ್ಲಾ ನಾಶವಾಗಿ ಅಂತರಿಕ್ಷವೆಲ್ಲವೂ ತೇಜಸ್ಸಿನಿಂದ ವ್ಯಾಪ್ತವಾದ ಕಾಲವೇ ಈ ಸವಿತೃವಿನ ಆವಿರ್ಭಾವಸಮಯವು. ಆದುದರಿಂದ ವ್ಯವಹಾರ ಕರ್ಮಗಳೂ ಸಹ ಅಹಸ್ಸಿನ ಚರಮಭಾಗದವರೆಗೂ ಅನುವರ್ತಿಸಬೇಕಾಗುತ್ತದೆ. ೭-೬೬-೪ ರಲ್ಲಿ ಸವಿತೃವು ಅಹರ್ದೇವತೆಯಾದ ಮಿತ್ರನೊಂದಿಗೂ, ಅರ್ಯಮ ಮತ್ತು ಭಗರೊಂದಿಗೂ ಸಹ ಸೂರ್ಯೋದಯವಾದನಂತರ ಯಜಮಾನನಿಗೆ ಚೈತನ್ಯವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ. ೧೦-೧೩೯-೧ ರಲ್ಲು **ಸೂರ್ಯರಶ್ಮಿಃ** ಎಂಬ ವಿಶೇಷಣಪೂರ್ವಕವಾಗಿ ನಿರ್ದಿಷ್ಟನಾಗಿದ್ದಾನೆ. (ಸೂರ್ಯರಶ್ಮಿಗಳಿಂದ ಆಚ್ಛಾದಿತನಾದ ಶರೀರವುಳ್ಳವನೆಂದರ್ಥ)

೭-೩೫-೮ ಮತ್ತು ೭-೩೫-೧೦ ರಲ್ಲಿ ಇಬ್ಬರೂ ಪ್ರತ್ಯೇಕವಾಗಿ ಉದ್ದಿಷ್ಟರಾಗಿದ್ದಾರೆ. ಇದೇ ರೀತಿಯಲ್ಲಿ ೧೦-೧೮೧-೩ ರಲ್ಲೂ ಸಹ, "**ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರಾಸೂರ್ಯಾದಭರನ್**" ಎಂದು ಸೂರ್ಯ, ಸವಿತೃ ಎಂದು ದೇವತಾಭೇದವನ್ನು ತೋರಿಸಿದೆ. ಅಥವಾ ಈ ಮಂತ್ರದ ಕೊನೆಯ ಭಾಗವನ್ನು ಪರಿಶೀಲಿಸಿದರೆ, ಧಾತೃ, ಸವಿತೃ, ವಿಷ್ಣು ಮತ್ತು ಸೂರ್ಯ ಈ ನಾಲ್ಕು ದೇವತೆಗಳಿಗೂ ಐಕ್ಯವನ್ನು ಸೂಚಿಸುವುದಾಗಿ ಹೇಳುವುದಕ್ಕೂ ಒಂದು ದೃಷ್ಟಿಯಿಂದ ಸಾಧ್ಯವಾಗುತ್ತದೆ. ೧-೧೫೭-೧ ಸೂರ್ಯ ಮತ್ತು ಸವಿತೃಗಳೊಡನೆ ಇತರ ದೇವತೆಗಳೂ ನಿರ್ದಿಷ್ಟರಾಗಿದ್ದಾರೆ.

"ಅಗ್ನಿಯು ಪೃಥ್ವಿಯಿಂದ ಪ್ರಾದುರ್ಭೂತನಾಗಿದ್ದಾನೆ. ಸೂರ್ಯನು ಉದಯಿಸುತ್ತಾನೆ. ಮಹಾತ್ಮಳಾದ ಉಷಸ್ಸು ತನ್ನ ಪ್ರಭೆಯೊಂದಿಗೆ ಆವಿರ್ಭೂತಳಾಗಿದ್ದಾಳೆ. ಅಶ್ವಿನೀದೇವತೆಗಳು ತಮ್ಮ ರಥಕ್ಕೆ ಅಶ್ವಗಳನ್ನು ಯೋಜಿಸುತ್ತಾರೆ. ಸವಿತೃವು ಜಗತ್ತಿನ ಸಕಲ ಪ್ರಾಣಿಗಳಿಗೂ ಅವುಗಳ ನಿಯತವಾದ ಕರ್ಮವನ್ನು ಮಾಡುವುದಕ್ಕಾಗಿ ಚೈತನ್ಯವನ್ನು ಕೊಡಲಿ." ಎಂಬ ತಾತ್ಪರ್ಯವುಳ್ಳ ಈ ಮಂತ್ರದಲ್ಲಿ ಸೂರ್ಯನಿಗೂ, ಸವಿತೃವಿಗೂ ಇರುವ ಭೇದವು ಸ್ಪಷ್ಟವಾಗಿದೆ.

ಇನ್ನು ಕೆಲವು ಸಂದರ್ಭಗಳಲ್ಲಿ ಈ ಎರಡೂ ಸಹ ಒಂದೇ ದೇವತೆಯನ್ನು ನಿರ್ದೇಶಿಸುವುದಾಗಿ ತಿಳಿಯುತ್ತದೆ. ಉದಾಹರಣೆಗೆ ೪-೧೪-೨ ಮತ್ತು ೧೦-೧೫೮-೧,೨,೩ **ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯತ್** ಎಂಬ ಮಂತ್ರದಲ್ಲಿ (೧-೩೫-೭) ಸೂರ್ಯ ಶಬ್ದವು ಸವಿತೃವಿನ ಪ್ರಸಿದ್ಧವಾದ ಕರ್ಮಗಳನ್ನು ತೋರಿಸುವುದಾಗಿದೆ. ಎಂದರೆ ಸೂರ್ಯನ

ಕರ್ಮಗಳೇ ಸವಿತೃವಿನ ಕರ್ಮಗಳೆಂದು ತಿಳಿಸಿದಂತಾಗುತ್ತದೆ. ಇದೇ ಅಂಶವು ೧-೧೨೪-೧ ; ೭-೬೩-೧ರಿಂದ ೪ ಇತ್ಯಾದಿ ಸನ್ನಿವೇಶಗಳಲ್ಲಾ ವಿಶದವಾಗಿ ತಿಳಿಯುತ್ತದೆ.

ಋ. ಸಂ. ೫-೮೧-೪ ಮತ್ತು ೫ನೇ ಮಂತ್ರಗಳಲ್ಲಿ ' ಉತ ಮಿತ್ರೋ ಭವಸಿ ' ' ಉತ ಪೂಷಾ ಭವಸಿ' ಎಂದು ಸವಿತೃವಿಗೆ, ಮಿತ್ರ ಮತ್ತು ಪೂಷನೊಂದಿಗೆ ತಾದಾತ್ಮ್ಯವನ್ನು ತಿಳಿಸಿದೆ; ಅಥವಾ ಆ ದೇವತೆಗಳ ಕರ್ಮಗಳನ್ನು ಸಾಂಗಗೊಳಿಸುವವನು ಎಂದಾದರೂ ಅರ್ಥವಾಗಬಹುದು. ೫-೮೨-೧, ೩; ೭-೩೮-೧, ೬ ಇತ್ಯಾದಿ ಮಂತ್ರಗಳಲ್ಲಿ ಭಗ ಶಬ್ದವು ಸವಿತೃವಿಗೆ ವಿಶೇಷಣವಾಗಿದೆ. ಇಂತಹ ಸಂದರ್ಭಗಳಲ್ಲಿ ಭಗ ಶಬ್ದಕ್ಕೆ ಪೂಜ್ಯನು ಎಂದಾದರೂ ಅರ್ಥವಾಗಬಹುದು. ಅಥವಾ ಸವಿತೃವಿಗೂ ಭಗನಿಗೂ ತಾದಾತ್ಮ್ಯವನ್ನಾದರೂ ತೋರಿಸಬಹುದು. ಈ ಸಂದರ್ಭಗಳಲ್ಲದೇ ಇನ್ನು ಬೇರೆ ಸನ್ನಿವೇಶಗಳಲ್ಲಿ, ಎಂದರೆ ೩-೫೪-೧೧, ೧೨ ; ೬-೪೯-೧೪ ; ೬-೫೦-೧೧, ೩ ; ೮-೧೮-೩ ; ೮-೯೧-೬ ; ೧೦-೧೩೯-೧ ಇತ್ಯಾದಿ ಮಂತ್ರಗಳಲ್ಲಿ ಸವಿತೃವಿಗೂ ಇತರ ದೇವತೆಗಳಿಗೂ ನಿಷ್ಕೃಷ್ಟವಾಗಿ ಭೇದವು ತೋರಿಸಲ್ಪಟ್ಟಿದೆ.

ಸವಿತೃ ಶಬ್ದವು ಪ್ರಯುಕ್ತವಾಗಿರುವಾಗಲ್ಲೆಲ್ಲಾ ವೈಯಕ್ತಿಕವಾದ ದೇವತಾ ನಿರ್ದೇಶವೆಂದು ನಿಯಮವಿಲ್ಲ. ೨-೩೦-೧ರಲ್ಲಿ ಇಂದ್ರನಿಗೆ ವಿಶೇಷಣವಾಗಿರುತ್ತದೆ. ೩-೫೫-೧೯ ಮತ್ತು ೧೦-೧೦-೫ (ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ) ಈ ಮಂತ್ರಗಳಲ್ಲಿ ವಿಶ್ವರೂಪಃ ಎಂಬ ವಿಶೇಷಣವಿರುವಂತೆಯೇ, ಸವಿತೃ ಪದವೂ ತ್ವಷ್ಟೃವಿನ ವಿಶೇಷಗುಣಗಳನ್ನು ಸೂಚಿಸುವುದಾಗಿದೆ. ಇಂತಹ ಸಂದರ್ಭಗಳಲ್ಲಿ ಜಗತ್ತಿಗೆ ಚೈತನ್ಯದಾಯೀ ಎಂಬ ಅರ್ಥವನ್ನು ಕೊಡುವುದು ಎಂಬುದಕ್ಕಿಂತಲೂ, ಜಗದುತ್ಪಾದಕಸಾಮರ್ಥ್ಯವುಳ್ಳವನು ಎಂದು ಹೇಳುವುದೇ ಉಚಿತವಾಗಿರುತ್ತದೆ.

॥ ಸಾಯಣಭಾಷ್ಯಂ ॥

ಅಭೂದ್ದೇವ ಇತಿ ಷಡೃಚಂ ನವಮಂ ಸೂಕ್ತಂ ವಾಮದೇವಸ್ಯಾರ್ಷಂ ಸಾವಿತ್ರಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ತಥಾ ಚಾನುಕ್ರಮಣಿಕಾ । ಅಭೂದ್ದೇವಃ ಷಟ್ ತ್ರಿಷ್ಟುಬಂತಮಿತಿ ॥ ಅಗ್ನಿಷ್ಟೋಮೇ ವೈಶ್ವದೇವಶಸ್ತ್ರೇ ಸಾವಿತ್ರನಿವಿದ್ಧಾನಮಿದಂ । ತಥಾ ಚ ಸೂತ್ರಂ । ಅಭೂದ್ದೇವ ಏಕಯಾ ಚ ದಶಭಿಶ್ಚ ಸ್ವಭೂತೇ। ಆ. ೫-೧೮ । ಇತಿ ॥ ಆದ್ಯಾ ಸಾವಿತ್ರಗ್ರಹಸ್ಯಾನುವಾಕ್ಯಾ। ತಥಾ ಚ ಸೂತ್ರಂ । ಸಾವಿತ್ರೇಣ ಗ್ರಹೇಣ ಚರಂತ್ಯಭೂದ್ದೇವಃ ಸವಿತಾ ವಂದ್ಯೋ ನು ನಃ । ಆ. ೫-೧೮ । ಇತಿ ॥

ಅನುವಾದವು— ಅಭೂದ್ದೇವಃ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು ಈ ಸೂಕ್ತಕ್ಕೆ ವಾಮದೇವನು ಋಷಿಯು ; ಸವಿತೃವು ದೇವತೆಯು ; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಸುವು; ಉಳಿದ ಋಕ್ಕುಗಳು ಜಗತೀ ಛಂದಸ್ಸುವು. ಅನುಕ್ರಮಣಿಕೆಯಲ್ಲಿ— ಅಭೂದ್ದೇವಃ ಷಟ್ ತ್ರಿಷ್ಟುಬಂತಂ ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾಗ ಸವಿತೃದೇವತಾಸಂಬಂಧವಾದ ನಿವಿದ್ಧಾನೀಯ ಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— ಅಭೂದ್ದೇವ ಏಕಯಾ ಚ ದಶಭಿಶ್ಚ ಸ್ವಭೂತೇ ಎಂಬ ಸೂತ್ರದಿಂದ (೫-೧೮) ವಿವೃತವಾಗಿರುವುದು. ಮತ್ತು ಈ ಸೂಕ್ತದ ಮೊದಲನೆಯ ಋಕ್ಕನ್ನೂ ಸವಿತೃಗ್ರಹಹೋಮದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಸಾವಿತ್ರೇಣ ಗ್ರಹೇಣ ಚರಂತ್ಯಭೂದ್ದೇವಃ ಸವಿತಾ ವಂದ್ಯೋ ನು ನಃ ಎಂಬ ಸೂತ್ರದಿಂದ (ಆ. ೫-೧೮) ವಿವೃತವಾಗಿರುವುದು.

## ಸೂಕ್ತ—೫೪

ಮಂಡಲ—೪ ‖ ಅನುವಾಕ—೫ ‖ ಸೂಕ್ತ—೫೪ ‖

ಅಷ್ಟಕ—೩ ‖ ಅಧ್ಯಾಯ—೮ ‖ ವರ್ಗ—೫ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖

ಋಷಿಃ—ವಾಮದೇವಃ ‖

ದೇವತಾ—ಸವಿತಾ ‖

ಛಂದಃ—೧-೫. ಜಗತೀ । ೬ ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಅಭೂದ್ದೇವಃ ಸವಿತಾ ವಂದ್ಯೋ ನು ನ ಇದಾನೀಮಹ್ನ ಉಪವಾಚ್ಯೋ ನೃಭಿಃ ।

ವಿ ಯೋ ರತ್ನಾ ಭಜತಿ ಮಾನವೇಭ್ಯಃ ಶ್ರೇಷ್ಠಂ ನೋ ಅತ್ರ ದ್ರವಿಣಂ ಯಥಾ ದಧತ್ ‖ ೧ ‖

‖ ಪದಪಾಠಃ ‖

ಅಭೂತ್ । ದೇವಃ । ಸವಿತಾ । ವಂದ್ಯಃ । ನು । ನಃ । ಇದಾನೀಂ । ಅಹ್ನಃ । ಉಪऽವಾಚ್ಯಃ । ನೃऽಭಿಃ ‖

ವಿ । ಯಃ । ರತ್ನಾ । ಭಜತಿ । ಮಾನವೇಭ್ಯಃ । ಶ್ರೇಷ್ಠಂ । ನಃ । ಅತ್ರ । ದ್ರವಿಣಂ । ಯಥಾ । ದಧತ್ ‖ ೧ ‖

‖ ಸಾಯಣಭಾಷ್ಯಂ ‖

ಸ ಸವಿತಾ ದೇವೋऽಭೂತ್ । ಪ್ರಾದುರಾಸೀತ್ । ಅತೋ ನು ಕ್ಷಿಪ್ರಮೇವ ನೋऽಸ್ಮಾಕಂ ವಂದ್ಯೋ ವಂದನೀಯೋ ಭವತಿ । ಇದಾನೀಂ ಯಾಗಕಾಲೇऽಹ್ನಸ್ತೃತೀಯೇಸವನೇ ನೃಭಿರಸ್ಮದೀಯೈರ್ಹೋತೃಭಿರುಪವಾಚ್ಯಃ ಸ್ತುತ್ಯೋ ಭವತಿ । ಯೋ ದೇವೋ ಮಾನವೇಭ್ಯೋ ಮನೋರಪತ್ಯೇಭ್ಯೋ ಯಜಮಾನೇಭ್ಯಸ್ತೇಷಾಮರ್ಥಾಯ ರತ್ನಾ ರಮಣೀಯಾನಿ ಧನಾನಿ ವಿ ಭಜತಿ ಸ ದೇವಃ ಶ್ರೇಷ್ಠಂ ಪ್ರಶಸ್ಯಂ ದ್ರವಿಣಂ ಗವಾದಿಲಕ್ಷಣಂ ಧನಂ ನೋऽಸ್ಮಭ್ಯಮತ್ರಾಸ್ಮಿನ್ಕರ್ಮಣಿ ಯಥಾ ದಧತ್ । ದದ್ಯಾದಿತ್ಯರ್ಥಃ । ತಥಾ ವಂದ್ಯ ಉಪವಾಚ್ಯಶ್ಚಾಭೂದಿತಿ ‖

‖ ಪ್ರತಿಪದಾರ್ಥ ‖

ದೇವಃ—ದೇವತಾತ್ಮನಾದ । ಸವಿತಾ—ಸವಿತೃದೇವನು । ಅಭೂತ್—ಗೋಚರನಾಗಿದ್ದಾನೆ । ನು—ಶೀಘ್ರವಲ್ಲಿಯೇ । ನಃ—ನಮಗೆ । ವಂದ್ಯಃ—ಪೂಜ್ಯನಾಗುತ್ತಾನೆ । ಇದಾನೀಂ— ಈ ಯಾಗಕಾಲದಲ್ಲಿ ।

ಅಹ್ನಃ—ತೃತೀಯಸವನದ ವೇಳೆಯಲ್ಲಿ। ನೃಭಿಃ—ಮಾನವರಾದ ನಮ್ಮಿಂದ । ಉಪವಾಚ್ಯಃ—ಸ್ತುತ್ಯನಾಗುತ್ತಾನೆ । ಯಃ—ಯಾವ ಸವಿತೃದೇವನು । ಮಾನವೇಭ್ಯಃ—ಮನುಸಂಬಂಧಿಗಳಾದ ಯಜಮಾನರಾದ । ರತ್ನಾ—ರಮಣೀಯವಾದ ಧನಗಳನ್ನು । ವಿ ಭಜತಿ—ವಿಭಾಗಮಾಡಿ ಹಂಚುವನೋ । ನಃ—ನಮಗೆ । ಅತ್ರ—ಈ ಯಜ್ಞಕರ್ಮದಲ್ಲಿ । ಶ್ರೇಷ್ಠಂ—ಉತ್ತಮವಾದ। ದ್ರವಿಣಂ—ಸಂಪತ್ತನ್ನು। ಯಥಾ—ಯಾವ ರೀತಿ। ದಧತ್—ಕೊಡಲು ಸಾಧ್ಯವೋ (ಆ ರೀತಿ ಅನುಗ್ರಹಿಸಲಿ).

॥ ಭಾವಾರ್ಥ ॥

ದೇವತಾತ್ಮನಾದ ಸವಿತೃದೇವನು ಉದಯಿಸಿದ್ದಾನೆ. ಅವನು ನಮಗೆ ಗೋಚರನಾಗುತ್ತಾನೆ. ನಮಗೆ ಪೂಜ್ಯನಾಗಿದ್ದಾನೆ. ಈ ಯಾಗದ ತೃತೀಯಸವನದ ವೇಳೆಯಲ್ಲಿ ಮಾನವರಾದ ನಮಗೆಲ್ಲಾ ಸ್ತುತ್ಯನಾಗುತ್ತಾನೆ. ಯಾವ ಸವಿತೃದೇವನು ಮನುಸಂಬಂಧಿಗಳಾದ ಯಜಮಾನರಿಗೆ ರಮಣೀಯವಾದ ಧನಗಳನ್ನು ವಿಭಾಗಮಾಡಿ ಹಂಚುವನೋ, ಅದೇ ದೇವನು ನಮಗೆ ಈ ಯಜ್ಞಕರ್ಮದಲ್ಲಿ ಉತ್ತಮವಾದ ಸಂಪತ್ತನ್ನು ಕೊಡುವಂತೆ ಅನುಗ್ರಹಿಸಲಿ.

## English Translation.

The divine Savitri has been manifested : he is at once to be glorified by us : he is to be praised by the priests at the present (rite), and at the close (of the day), in order that he who appotions precious things to the descendants of Manu may bestow upon us, on this occasion, most excellent wealth.

॥ ಸಂಹಿತಾ ॥

ದೇವೇಭ್ಯೋ ಹಿ ಪ್ರಥಮಂ ಯಜ್ಞಿಯೇಭ್ಯೋಽಮೃತತ್ವಂ ಸುವಸಿ ಭಾಗಮುತ್ತಮಂ ।

ಆದಿದ್ದಾಮಾನಂ ಸವಿತರ್ವ್ಯೂರ್ಣುಷೇಽನೂಚೀನಾ ಜೀವಿತಾ ಮಾನುಷೇಭ್ಯಃ॥

॥ ಪದಪಾಠಃ ॥

ದೇವೇಭ್ಯಃ । ಹಿ । ಪ್ರಥಮಂ । ಯಜ್ಞಿಯೇಭ್ಯಃ । ಅಮೃತತ್ವಂ । ಸುವಸಿ । ಭಾಗಂ । ಉತ್ಽತಮಂ ।

ಆತ್ । ಇತ್ । ದಾಮಾನಂ । ಸವಿತಃ । ವಿ । ಊರ್ಣುಷೇ। ಅನೂಚೀನಾ । ಜೀವಿತಾ । ಮಾನುಷೇಭ್ಯ ॥೨॥

॥ ಸಾಯಣಭಾಷ್ಯಂ ॥

ಪ್ರಥಮಂ ದೇವೇಭ್ಯೋ ಹಿ । ಹಿಶಬ್ದಃ ಪ್ರಸಿದ್ಧೌ । ದೇವೇಭ್ಯೋ ಯಜ್ಞಿಯೇಭ್ಯೋ ಯಜ್ಞಾರ್ಹೇಭ್ಯೋಽಮೃತತ್ವಂ ತತ್ಸಾಧನಮುತ್ತಮಮುತ್ಕೃಷ್ಟತಮಂ ಭಾಗಂ ಸೋಮಾದಿಲಕ್ಷಣಂ ಸುವಸಿ। ಅನುಜಾನಾಸಿ। ಆದಿದನಂತರಮೇವ ದಾಮಾನಂ ಹವಿಷಾಂ ದಾತಾರಂ ಹೇ ಸವಿತರ್ವ್ಯೂರ್ಣುಷೇ। ಪ್ರಕಾಶಯಸಿ । ಮಾನುಷೇಭ್ಯೋ ಯಜಮಾನೇಭ್ಯೋ ಜೀವಿತಾ ಜೀವಿತಾನ್ಯನೂಚೀನಾನುಕ್ರಮಯುಕ್ತಾನಿ । ಪಿತೃಪುತ್ರಪೌತ್ರ ಇತ್ಯನುಕ್ರಮಃ । ಈದೃಶಾನಿ ಜೀವಿತಾನಿ ಪಶ್ಚಾದ್ವ್ಯೂರ್ಣುಷೇ ॥

॥ ಪ್ರತಿಪದಾರ್ಥ ॥

ಸವಿತಃ—ಎಲೈ ಸವಿತೃದೇವನೇ ! ಪ್ರಥಮಂ—ಮೊದಲು । ಯಜ್ಞಿಯೇಭ್ಯಃ—ಯಜ್ಞಾರ್ಹರಾದ । ದೇವೇಭ್ಯಃ—ದೇವತೆಗಳಿಗೆ । ಉತ್ತಮಂ—ಉತ್ಕೃಷ್ಟವಾದುದೂ । ಅಮೃತತ್ವಂ—ಅಮೃತತ್ವಸಾಧಕವಾದುದೂ ಆದ । ಭಾಗಂ—ಸೋಮರಸದ ಭಾಗವನ್ನು (ಹೊಂದಲು) । ಸುವಸಿ ಹಿ—ಅನುಜ್ಞೆಯನ್ನು ಕೊಡುತ್ತೀಯೆ । ಆದಿತ್—ಒಡನೆಯೇ । ದಾಮಾನಂ—ಹವಿರ್ದಾತನಾದ ಯಜಮಾನನನ್ನು । ವ್ಯೂರ್ಣುಷೇ—ಪ್ರಕಾಶಿಸುವಂತೆ ಮಾಡುತ್ತೀಯೆ । ಮಾನುಷೇಭ್ಯಃ—ಮಾನವರಾದ ಯಜಮಾನರಿಗೆ । ಜೀವಿತಾ—ಜೀವನಗಳನ್ನು । ಅನೂಚೀನಾ—ಪುತ್ರಪೌತ್ರಾದಿಕ್ರಮದಲ್ಲಿ (ಅನುಗ್ರಹಿಸುತ್ತೀಯೆ).

॥ ಭಾವಾರ್ಥ ॥

ಎಲೈ ಸವಿತೃದೇವನೇ, ನೀನು ಮೊದಲು ಯಜ್ಞಾರ್ಹರಾದ ದೇವತೆಗಳಿಗೆ ಉತ್ಕೃಷ್ಟವಾದುದೂ, ಅಮೃತತ್ವಸಾಧಕವಾದುದೂ ಆದ ಸೋಮರಸದ ಭಾಗವನ್ನು ಹೊಂದಲು ಅನುಜ್ಞೆಯನ್ನು ಕೊಡುತ್ತೀಯೆ. ಆ ಒಡನೆಯೇ, ಹವಿರ್ದಾತನಾದ ಯಜಮಾನನನ್ನು ಪ್ರಕಾಶಿಸುವಂತೆ ಮಾಡುತ್ತೀಯೆ. ಮಾನವರಾದ ಯಜಮಾನರಿಗೆ ಜೀವನಗಳನ್ನು ಪುತ್ರಪೌತ್ರಾದಿಕ್ರಮದಲ್ಲಿ ಅನುಗ್ರಹಿಸುತ್ತೀಯೆ.

## English Translation.

First you engender for the adorable gods the best portion, immortality; then, Savitri, you set open (the day) to the donor (of the oblation), and (grant) successive existences to men.

॥ ಸಂಹಿತಾಪಾಠಃ ॥

ಅಚಿತ್ತೀ ಯಚ್ಚಕೃಮಾ ದೈವ್ಯೇ ಜನೇ ದೀನೈರ್ದಕ್ಷೈಃ ಪ್ರಭೂತೀ ಪೂರುಷತ್ವತಾ ।

ದೇವೇಷು ಚ ಸವಿತರ್ಮಾನುಷೇಷು ಚ ತ್ವಂ ನೋ ಅತ್ರ ಸುವತಾದನಾಗಸಃ ॥

॥ ಪದಪಾಠಃ ॥

ಅಚಿತ್ತೀ । ಯತ್ । ಚಕೃಮ । ದೈವ್ಯೇ । ಜನೇ । ದೀನೈಃ । ದಕ್ಷೈಃ । ಪ್ರಭೂತೀ । ಪುರುಷತ್ವತಾ । ದೇವೇಷು । ಚ । ಸವಿತಃ । ಮಾನುಷೇಷು । ಚ । ತ್ವಂ । ನಃ । ಅತ್ರ । ಸುವತಾತ್ । ಅನಾಗಸಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸವಿತರ್ವಯಮಚಿತ್ತೀ ಅಪ್ರಜ್ಞಯಾ ದೈವ್ಯೇ ಜನೇ ದೇವೇ ತ್ವಯಿ ದೀನೈರ್ದುರ್ಬಲೈಃ ಪುತ್ರಾದಿಭಿರ್ಋತ್ವಿಗ್ಭಿರ್ವಾ ತಥಾ ದಕ್ಷೈಃ ಪ್ರವೃದ್ಧೈರ್ವಾ ತೈಃ ಪ್ರಭೂತೀ ಪ್ರಭೂತ್ಯಾ। ಐಶ್ವರ್ಯಮದೇನೇತಿ ಯಾವತ್ । ಪುರುಷತ್ವತಾ ಪುರುಷವತ್ತಯಾ ಚ ಯದಾಗಶ್ಚಕೃಮ । ನ ಕೇವಲಂ ತ್ವಯ್ಯೇವ ಕೃತಮಪಿ ತು ದೇವೇಷ್ವನ್ಯೇಷು ಮಾನುಷೇಷು ಚಾಜ್ಞಾನಾದಿಭಿರ್ಯಚ್ಚಕೃಮ ನಃ ಕೃತವತೋಽಸ್ಮಾನ್ ತ್ವಮತ್ರಾಸ್ಮಿನ್ಕರ್ಮಣ್ಯನಾಗಸಃ ಸುವತಾತ್ । ಅನುಜಾನೀಹಿ ॥

॥ ಪ್ರತಿಪದಾರ್ಥ ॥

ಸವಿತಃ—ಎಲೈ ಸವಿತೃದೇವನೇ । ಅಚಿತ್ತೀ—ಪ್ರಜ್ಞಾರಾಹಿತ್ಯದಿಂದಾಗಲಿ । ದೀನೈಃ—ಅಶಕ್ತರ ಅಶಕ್ತಿಯಿಂದಾಗಲಿ । ದಕ್ಷೈಃ—ಶಕ್ತಿವಂತರ ಅಹಂಕಾರಾದಿಗಳಿಂದಾಗಲಿ । ಪ್ರಭೂತೀ—ಅತ್ಯಧಿಕವಾದ । ಪುರುಷತ್ವತಾ—ಮಾನುಷದೋಷದಿಂದಾಗಲಿ । ದೈವ್ಯೇ ಜನೇ—ದೇವತಾತ್ಮನಾದ ನಿನ್ನಲ್ಲಿಯೂ । ದೇವೇಷು—ಇತರ ದೇವತೆಗಳಲ್ಲಿಯೂ (ಅಥವಾ) । ಮಾನುಷೇಷು ಚ--ಇತರ ಮಾನವರಲ್ಲಿಯೂ ಕೂಡ । ಯತ್—ಯಾವುದಾದರೂ ಪಾಪವನ್ನು । ಚಕೃಮ—ಮಾಡಿದ್ದೇ ಆದರೆ । ನಃ—ಅಂತಹ ಪಾಪಿಷ್ಠರಾದ ನಮ್ಮನ್ನು । ತ್ವಂ—ನೀನು । ಅತ್ರ—ಈ ಕರ್ಮಕಾಲದಲ್ಲಿ । ಅನಾಗಸಃ—ಪಾಪರಹಿತರನ್ನಾಗಿ ಮಾಡಿ । ಸುವತಾತ್—ಪುರಸ್ಕರಿಸು.

॥ ಭಾವಾರ್ಥ ॥

ಎಲೈ ಸವಿತೃದೇವನೇ, ಪ್ರಜ್ಞಾರಾಹಿತ್ಯದಿಂದಾಗಲಿ, ಅಶಕ್ತರ ಶಕ್ತಿಯಿಂದಾಗಲಿ ಅಥವಾ ಶಕ್ತಿಯುತರ ಅಹಂಕಾರಾದಿಗಳಿಂದಾಗಲಿ, ಅತ್ಯಧಿಕವಾದ ಮಾನುಷದೋಷದಿಂದಾಗಲಿ, ದೇವತಾತ್ಮನಾದ ನಿನ್ನಲ್ಲಿಯೂ, ಇತರ ದೇವತೆಗಳಲ್ಲಿಯೂ ಅಥವಾ ಇತರ ಮಾನವರಲ್ಲಿಯೂ ಸಹ ಯಾವುದಾದರೂ ಪಾಪವನ್ನು ನಾವು ಮಾಡಿದ್ದೇ ಆದರೆ, ಅಂತಹ ಪಾಪಿಷ್ಠರಾದ ನಮ್ಮನ್ನು ನೀನು ಈ ಕರ್ಮಕಾಲದಲ್ಲಿ ಪಾಪರಹಿತರನ್ನಾಗಿ ಮಾಡಿ ಪುರಸ್ಕರಿಸು.

## English Translation.

If, Savitri, through ignorance, through pride in feeble or powerful (dependants), or through human infirmity, we have commited (offence) against your divine person, or against gods or men, do you, on this occasiou hold us to be unoffending.



॥ ಸಂಹಿತಾಪಾಠಃ ॥

ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಯಥಾ ವಿಶ್ವಂ ಭುವನಂ ಧಾರಯಿಷ್ಯತಿ ।
ಯತ್ಪೃಥಿವ್ಯಾ ವರಿಮನ್ನಾ ಸ್ವಂಗುರಿರ್ವರ್ಷ್ಮನ್ದಿವಃ ಸುವತಿ ಸತ್ಯಮಸ್ಯ ತತ್ ॥

॥ ಪದಪಾಠಃ ॥

ನ । ಪ್ರ೽ಮಿಯೇ । ಸವಿತುಃ । ದೈವ್ಯಸ್ಯ । ತತ್ । ಯಥಾ । ವಿಶ್ವಂ । ಭುವನಂ । ಧಾರಯಿಷ್ಯತಿ ।
ಯತ್ । ಪೃಥಿವ್ಯಾಃ । ವರಿಮನ್ । ಆ । ಸು೽ಅಂಗುರಿಃ । ವರ್ಷ್ಮನ್ । ದಿವಃ । ಸುವತಿ । ಸತ್ಯಂ । ಅಸ್ಯ । ತತ್ ॥ ೪ ॥

॥ ಸಾಯಣಭಾಷ್ಯಂ ॥

ದೇವಸುವಾಂ ಹವಿಃಷು ಸವಿತುಃ ಸತ್ಯಪ್ರಸವಸ್ಯ ನ ಪ್ರಮಿಯೆ ಇತಿ ಯಾಜ್ಯಾ । ಸೂತ್ರಿತಂ ಚ । ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಬೃಹಸ್ಪತೇ ಪ್ರಥಮಂ । ಆ. ೪–೧೧ । ಇತಿ ॥

ಸವಿತುರ್ದೈವ್ಯಸ್ಯ ದೇವಸ್ಯ ತತ್ಕರ್ಮ ನ ಪ್ರಮಿಯೇ । ನ ಪ್ರಮಿಾಯೇತ । ನ ಪ್ರಹಿಂಸ್ಯೇತ । ಹಿಂಸಾರ್ಹಂ ನ ಭವತೀತ್ಯರ್ಥಃ ॥ ಕೃತ್ಯಾರ್ಥೇ ಕೇನ್ಪ್ರತ್ಯಯಃ । ಯದ್ವಾ । ದೈವ್ಯಸ್ಯೇತ್ಯಧಿಕರಣೇ ಷಷ್ಠೀ । ಸಾ ಚ ಕರ್ಮಾರ್ಥಾ । ದೈವ್ಯಂ ಕರ್ಮೇತ್ಯರ್ಥಃ । ಕಥಮಹಿಂಸ್ಯಮಿತ್ಯತ ಆಹ । ಯಥಾ ವಿಶ್ವಂ ಭುವನಂ ಧಾರಯಿಷ್ಯತಿ । ಧಾರಯತಿ । ವಿಶ್ವಧಾರಣರೂಪಂ ಯತ್ಕರ್ಮಾಸ್ತಿ ತನ್ನ ಪ್ರಮಿಯೇ । ತಥಾ ಸ್ವಂಗುರಿಃ ಶೋಭನಾಂಗುಲ್ಯುಪಲಕ್ಷಿತಹಸ್ತೋ ಯತ್ ಯಃ ಪೃಥಿವ್ಯಾ ವರಿಮನ್ನಾ । ಆಕಾರಶ್ಚಾರ್ಥೇ । ಭೂಮ್ಯಾ ಉರುತ್ವೇ ಚ ಸುವತಿ । ತಥಾ ದಿವೋ ದ್ಯುಲೋಕಸ್ಯ ವರ್ಷ್ಮನ್ನುರುತ್ವೇ ಚ ಸುವತಿ ಅಸ್ಯ ದೇವಸ್ಯ ತದುಕ್ತಂ ಕರ್ಮ ಸತ್ಯಮಬಾಧ್ಯಮಿತಿ ॥

॥ ಪ್ರತಿಪದಾರ್ಥ ॥

ಸ್ವಂಗುರಿಃ—ಶ್ರೇಷ್ಠವಾದ ಅಂಗುಲಿಗಳಿಂದ ಕೂಡಿದ ಹಸ್ತವುಳ್ಳ । ಯತ್—ಯಾವ ಸವಿತೃವು । ಯಥಾ—ಯಾವ ರೀತಿಯಲ್ಲಿ । ವಿಶ್ವಂ ಭುವನಂ—ಸಕಲ ಲೋಕವನ್ನೂ । ಧಾರಯಿಷ್ಯತಿ—ಧರಿಸುವುನೋ । ಪೃಥಿವ್ಯಾಃ—ಪೃಥಿವಿಯ । ವರಿಮನ್—ವಿಸ್ತೃತಿಯನ್ನು । ಆ ಸುವತಿ—ಪ್ರೇರಿಸುತ್ತಾನೆಯೋ । ದಿವಃ—ದ್ಯುಲೋಕದ । ವರ್ಷ್ಮನ್—ಆಧಿಕ್ಯವನ್ನೂ ಪ್ರೇರಿಸುವನೋ (ಅಂತಹ) । ದೈವ್ಯಸ್ಯ—ದೇವತಾತ್ಮನಾದ । ಸವಿತುಃ—ಸವಿತೃ ವಿನ । ತತ್—ಶ್ರೇಷ್ಠವಾದ ಆ ಕರ್ಮಗಳನ್ನು । ನ ಪ್ರಮಿಯೇ—ನಾವು ಹಿಂಸಿಸಬಾರದು । ಅಸ್ಯ—ಈ ದೇವನ । ತತ್—ಈ ಮಹತ್ತಾದ ಕರ್ಮವು । ಸತ್ಯಂ—ಸ್ಥಿರವೂ ನಾಶರಹಿತವೂ ಆದುದು.

॥ ಭಾವಾರ್ಥ ॥

ಶ್ರೇಷ್ಠವಾದ ಅಂಗುಲಿಗಳಿಂದ ಕೂಡಿದ ಹಸ್ತವುಳ್ಳ ಸವಿತೃವು ಯಾವ ತನ್ನ ಮಹತ್ಕರ್ಮಗಳಿಂದ ಸಕಲ ಲೋಕವನ್ನೂ ಧರಿಸುವನೋ, ಮತ್ತು ಪೃಥಿವಿಯ ವಿಸ್ತೃತಿಯನ್ನೂ ದ್ಯುಲೋಕದ ಆಧಿಕ್ಯವನ್ನೂ ಪ್ರೇರಿಸುವನೋ ಅಂತಹ ದೇವತಾತ್ಮಕನಾದ ಸವಿತೃವಿನ ಶ್ರೇಷ್ಠವಾದ ಆ ಕರ್ಮಗಳನ್ನು ನಾವು ಹಿಂಸಿಸಬಾರದು. ಈ ದೇವನ ಮಹತ್ತಾದ ಕರ್ಮವು ಸ್ಥಿರವೂ ನಾಶರಹಿತವೂ ಆದುದಾಗಿದೆ.

## English Translation.

(It is) not (fit) to obstruct (the acts) of the divine Savitri, since by them he upholds the whole world, whereby his gracious hand spreads fertility over the extent of the earth, and the magnitude of the heaven : such is his true (powcr).

॥ ವಿಶೇಷವಿಷಯಗಳು ॥

ದೇವಸುವ ಎಂಬ ಎಂಟು ಹವಿಸ್ಸುಗಳನ್ನು ನಾನಾ ದೇವತೆಗಳನ್ನುದ್ದೇಶಿಸಿ ಹೋಮಮಾಡುವಾಗ ಸತ್ಯಪ್ರಸವಃ ಸವಿತಾ ಎಂಬ ದೇವತೆಯ ಹೋಮದಲ್ಲಿ ನ ಪ್ರಮಿಯೇ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರ ವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಬೃಹಸ್ಪತೇ ಪ್ರಥಮಂ ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಇಂದ್ರಜ್ಯೇಷ್ಠಾನ್ಬೃಹದ್ಭ್ಯಃ ಪರ್ವತೇಭ್ಯಃ ಕ್ಷಯಾಁ ಏಭ್ಯಃ ಸುವಸಿ ಪಸ್ತ್ಯಾವತಃ ।
ಯಥಾಯಥಾ ಪತಯಂತೋ ವಿಯೇಮಿರ ಏವೈವ ತಸ್ಥುಃ ಸವಿತಃ ಸವಾಯ ತೇ ॥ ೫ ॥

॥ ಪದಪಾಠಃ ॥

ಇಂದ್ರಜ್ಯೇಷ್ಠಾನ್ । ಬೃಹತ್ಽಭ್ಯಃ । ಪರ್ವತೇಭ್ಯಃ । ಕ್ಷಯಾನ್ । ಏಭ್ಯಃ । ಸುವಸಿ । ಪಸ್ತ್ಯಽವತಃ ।
ಯಥಾಽಯಥಾ । ಪತಯಂತಃ । ವಿಽಯೇಮಿರೇ । ಏವ । ಏವ । ತಸ್ಥುಃ । ಸವಿತರಿತಿ । ಸವಾಯ । ತೇ ॥

‖ ಸಾಯಣಭಾಷ್ಯಂ ‖

ಹೇ ಸವಿತರಿಂದ್ರಜ್ಯೇಷ್ಠಾನ್ । ಇಂದ್ರಃ ಪರಮೈಶ್ವರ್ಯಯುಕ್ತಸ್ತ್ವಮೇವೇಂದ್ರೋ ವಾ ಜ್ಯೇಷ್ಠೋ ಜ್ಯಾಯಾನ್ ಪೂಜ್ಯೋ ಯೇಷಾಂ ತೇ ತಾದೃಶಾಃ । ತಾನಸ್ಮಾನ್ಬೃಹದ್ಭ್ಯೋ ಮಹದ್ಭ್ಯಃ ಪರ್ವತೇಭ್ಯೋಽಪ್ಯಧಿಕಾನ್ ಸುವಸಿ । ಪ್ರೇರಯಸಿ । ಕಿಂಚ ಏಭ್ಯೋ ಯಜಮಾನೇಭ್ಯಃ ಪಸ್ತ್ಯಾವತೋ ಗೃಹವತಃ ಕ್ಷಯಾನ್ನಿವಾಸಾನ್ ಗ್ರಾಮನಗರಾದೀನ್ ಸುವಸಿ । ಪ್ರೇರಯಸಿ । ಯಥಾ ಯಥಾ ಪತಯಂತೋ ಗಚ್ಛಂತಸ್ತ್ವಾಂ ವಿಯೇಮಿರೇ । ವಿನಿಯಮ್ಯಂತೇ ತ್ವಯಾ । ತೇ ತವ ಸವಾಯಾನುಜ್ಞಾಯಾ ಏವ್ವೈವ-ಮೇವ ನಿಯಮನಮನತಿಕ್ರಮ್ಯ ತಸ್ಥುಃ । ತಿಷ್ಠಂತಿ ‖

‖ ಪ್ರತಿಪದಾರ್ಥ ‖

ಸವಿತಃ—ಎಲೈ ಸವಿತೃದೇವನೇ । ಇಂದ್ರಜ್ಯೇಷ್ಠಾನ್—ಇಂದ್ರನೇ ಪೂಜ್ಯನಾಗಿ ಉಳ್ಳ ನಮ್ಮನ್ನು । ಬೃಹದ್ಭ್ಯಃ—ಅತ್ಯಧಿಕವಾದ (ಎತ್ತರವುಳ್ಳ) । ಪರ್ವತೇಭ್ಯಃ—ಮೇಘಗಳಿಗಿಂತಲೂ ಉನ್ನತಪ್ರದೇಶದಲ್ಲಿ । ಸುವಸಿ—ಏರಿಸಿದ್ದೀಯೆ । ಏಭ್ಯಃ—ಇದೇ ಯಜಮಾನರಿಗೆ । ಪಸ್ತ್ಯಾವತಃ— ವಸತಿಯೋಗ್ಯವಾದ ಗೃಹ ಗಳುಳ್ಳ । ಕ್ಷಯಾನ್—ನಿವಾಸಸ್ಥಾನಗಳನ್ನು (ನಿರ್ಮಿಸಿದ್ದೀಯೆ)। ಯಥಾ ಯಥಾ—ಯಾವಯಾವ ರೀತಿಯಲ್ಲಿ । ಪತಯಂತಃ—ಸಂಚರಿಸುತ್ತಿದ್ದ ಅವರು । ವಿಯೇಮಿರೇ—(ನಿನ್ನನ್ನು) ತಡೆದು ನಿಲ್ಲಿಸಿದರೋ । ಏವ್ವೈವ—ಅದೇ ರೀತಿಯಲ್ಲಿ । ತೇ—ನಿನ್ನ । ಸವಾಯ—ಅನುಜ್ಞೆಯನ್ನು ಪಾಲಿಸಲು । ತಸ್ಥುಃ—ನಿಂತರು.

‖ ಭಾವಾರ್ಥ ‖

ಎಲೈ ಸವಿತೃದೇವನೇ, ಇಂದ್ರನೇ ಪೂಜ್ಯನಾಗಿ ಉಳ್ಳ ನಮ್ಮನ್ನು ಅತ್ಯಧಿಕವಾದ ಎತ್ತರವುಳ್ಳ ಮೇಘ ಗಳಿಗಿಂತಲೂ ಉನ್ನತಪ್ರದೇಶದಲ್ಲಿ ಏರಿಸಿದ್ದೀಯೆ. ಅದೇ ಯಜಮಾನರಿಗೆ ವಸತಿಯೋಗ್ಯವಾದ ಗೃಹಗಳುಳ್ಳ ನಿವಾಸಸ್ಥಾನಗಳನ್ನು ನಿರ್ಮಿಸಿದ್ದೀಯೆ. ಯಾವ ರೀತಿ ಸಂಚರಿಸುತ್ತಿದ್ದ ಅವರು ನಿನ್ನನ್ನು ತಡೆದು ನಿಲ್ಲಿಸಿದರೋ, ಅದೇ ರೀತಿಯಲ್ಲಿ ನಿನ್ನ ಅನುಜ್ಞೆಯನ್ನು ಪಾಲಿಸಲು ಅವರು ನಿಂತರು.

## English Translation.

You elevate those, of whom Indra is chief, above the vast clouds; for these (your worshippers), you provide dwelling (places) filled with habitations: as when advancing they detained you so in like manner at your command they stayed.

‖ ಸಂಹಿತಾಪಾಠಃ ‖

ಯೋ ತೇ ತ್ರಿರಹನ್ತ್ಸವಿತಃ ಸವಾಸೋ ದಿವೇದಿವೇ ಸೌಭಗಮಾಸುವಂತಿ । ಇಂದ್ರೋ ದ್ಯಾವಾಪೃಥಿವೀ ಸಿಂಧುರದ್ಭಿರಾದಿತ್ಯೈರ್ನೋ ಅದಿತಿಃ ಶರ್ಮ ಯಂಸತ್ ‖ ೬ ‖

॥ ಪದಪಾಠಃ ॥

ಯೇ । ತೇ । ತ್ರಿಃ । ಅಹನ್ । ಸವಿತರಿತಿ । ಸವಾಸಃ । ದಿವೇऽದಿವೇ । ಸೌಭಗಂ । ಆऽಸುವಂತಿ । ಇಂದ್ರಃ । ದ್ಯಾವಾಪೃಥಿವೀ ಇತಿ । ಸಿಂಧುಃ । ಅತ್ऽಭಿಃ । ಆದಿತ್ಯೈಃ । ನಃ । ಅದಿತಿಃ । ಶರ್ಮ । ಯಂಸತ್ ॥ ೬ ॥

। ಸಾಯಣಭಾಷ್ಯಂ ।

ಯೇ ಯಜಮಾನಾ ಹೇ ಸವಿತಸ್ತೇ ತ್ವದರ್ಥಂ ಸವಾಸಃ ಸವಾಃ ಸೋಮಾಃ । ದ್ವಿತೀಯಾರ್ಥೇ ಪ್ರಥಮಾ । ಸೋಮಾನ್ । ಯದ್ವಾ । ಸವಾಸಃ ಸವನಾನಿ ಪ್ರಾತರಾದೀನಿ ಪ್ರತಿ ತ್ರಿರಹನ್ನಭಿಷುಣ್ವಂತಿ । ನ ಕೇವಲಮೇಕಸ್ಮಿನ್ನೇವಾಹನಿ ಸವನತ್ರಯೇಷು ಅಪಿ ತು ದಿವೇ ದಿವೇ ಪ್ರತಿದಿನಂ ಸೌಭಗಂ ಸೌಭಾಗ್ಯಜನಕಮಾಸುವಂತಿ । ಅಭಿಷುಣ್ವಂತಿ । ತೇಭ್ಯೋ ನೋऽಸ್ಮಭ್ಯಮಿಂದ್ರಃ ಶರ್ಮ ಯಂಸತ್ । ಯಚ್ಛತು । ದ್ಯಾವಾಪೃಥಿವ್ಯೌ ಚಾದ್ಭಿರ್ವಿಶಿಷ್ಟಾ ಸಿಂಧುಃ ಸಿಂಧ್ವಭಿಮಾನಿದೇವತಾ ಚಾದಿತ್ಯೈಃ ಸಹಿತಾದಿತಿಶ್ಚ ಶರ್ಮ ಯಂಸತ್ । ಸಾವಿತ್ರೇ ಸೂಕ್ತ ಇಂದ್ರಾದೀನಾಂ ನಿಪಾತಮುಕ್ತ್ವಾ ತೇಷಾಂ ಪ್ರಾರ್ಥನಾ ನ ವಿರುಧ್ಯತೇ ॥

। ಪ್ರತಿಪದಾರ್ಥ ।

ಸವಿತಃ—ಎಲೈ ಸವಿತೃವೇ । ಯೇ—ಯಾವ ಯಜಮಾನರು । ತೇ—ನಿನ್ನನ್ನುದ್ದೇಶಿಸಿ । ಸೌಭಗಂ—ಸೌಭಾಗ್ಯಜನಕವಾದ । ಸವಾಸಃ—ಸೋಮಗಳನ್ನು । ದಿವೇದಿವೇ—ಪ್ರತಿದಿನವೂ । ತ್ರಿರಹನ್—ಸವನತ್ರಯಕಾಲಗಳಲ್ಲೂ । ಆಸುವಂತಿ—ಹಿಂಡುವರೋ (ಅಂತಹ) । ನಃ—ನಮಗೆ । ಇಂದ್ರಃ—ಇಂದ್ರನೂ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳೂ । ಅದ್ಭಿಃ—ಉದಕಗಳಿಂದ ಕೂಡಿದ । ಸಿಂಧುಃ—ನದ್ಯಭಿಮಾನಿ ದೇವತೆಯೂ । ಆದಿತ್ಯೈಃ—ಆದಿತ್ಯರಿಂದೊಡಗೂಡಿದ । ಅದಿತಿಃ—ಅದಿತಿಯೂ । ಶರ್ಮ—ಸುಖವನ್ನು । ಯಂಸತ್—ಒದಗಿಸಿಕೊಡಲಿ.

॥ ಭಾವಾರ್ಥ ॥

ಎಲೈ ಸವಿತೃವೇ, ಯಾವ ಯಜಮಾನರು ನಿನ್ನನ್ನುದ್ದೇಶಿ ಸೌಭಾಗ್ಯಜನಕಗಳಾದ ಸೋಮರಸಗಳನ್ನು ಪ್ರತಿದಿನವೂ ಸವನತ್ರಯಕಾಲಗಳಲ್ಲೂ ಹಿಂಡುವರೋ, ಅಂತಹ ನಮಗೆ ಇಂದ್ರನೂ, ದ್ಯಾವಾಪೃಥಿವಿಗಳೂ, ಉದಕಗಳಿಂದ ಕೂಡಿದ ನದ್ಯಭಿಮಾನಿದೇವಿಯೂ, ಆದಿತ್ಯರಿಂದೊಡಗೂಡಿದ ಅದಿತಿಯೂ ಸುಖವನ್ನೊದಗಿಸಲಿ.

## English Translation.

May Indra, heaven and earth, Sindhu with the waters, and Aditi with the Adityas, bestow happiness upon us, who, offering libations, Savitri, pour out the auspicious Soma, day by day, thrice a day.



# ಐವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಕೋ ವಸ್ತ್ರಾತೇತಿ ದಶರ್ಚಂ ದಶಮಂ ಸೂಕ್ತಂ ವಾಮದೇವಸ್ಯಾರ್ಷಂ ವಿಶ್ವದೇವದೇವತಾಕಂ । ಅಷ್ಟಮ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ ಶಿಷ್ಟಾ ಅನಾದೇಶಪರಿಭಾಷಯಾ ತ್ರಿಷ್ಟುಭಃ । ತಥಾ ಚಾನುಕ್ರ-ಮ್ಯತೇ । ಕೋ ವೋ ದಶ ವೈಶ್ವದೇವಂ ತ್ರಿಗಾಯತ್ರ್ಯಂತಂ ತ್ವಿತಿ । ವಿನಿಯೋಗೋ ಲೈಂಗಿಕಃ ॥

ಅನುವಾದವು—ಕೋ ವಸ್ತ್ರಾತಾ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ೮, ೯, ೧೦ ನೆಯ ಋಕ್ಕುಗಳು ಗಾಯತ್ರೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಕೋ ವಾ ದಶ ವೈಶ್ವದೇವಂ ತ್ರಿಗಾಯತ್ರ್ಯಂತ್ರಂ ತು ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೫೫

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೫ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೬, ೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ವಾಮದೇವಃ ॥

॥ ದೇವತಾ—ವಿಶ್ವದೇವಾಃ ॥

॥ ಛಂದಃ—೧-೭, ತ್ರಿಷ್ಟುಪ್ । ೮-೧೦. ಗಾಯತ್ರೀ ॥

॥ ಸಂಹಿತಾಪಾಠಃ ॥

ಕೋ ವಸ್ತ್ರಾತಾ ವಸವಃ ಕೋ ವರೂತಾ ದ್ಯಾವಾಭೂಮೀ ಅದಿತೇ ತ್ರಾಸೀ-
ಥಾಂ ನಃ ।
ಸಹೀಯಸೋ ವರುಣ ಮಿತ್ರ ಮರ್ತಾತ್ಕೋ ವೋಽಧ್ವರೇ ವರಿವೋ ಧಾತಿ
ದೇವಾಃ ॥ ೧ ॥

॥ ಪದಪಾಠಃ ॥

ಕಃ । ವಃ । ತ್ರಾತಾ । ವಸವಃ । ಕಃ । ವರೂತಾ । ದ್ಯಾವಾಭೂಮೀ ಇತಿ । ಅದಿತೇ । ತ್ರಾಸೀಥಾಂ । ನಃ ।
ಸಹೀಯಸಃ । ವರುಣ । ಮಿತ್ರ । ಮರ್ತಾತ್ । ಕಃ । ವಃ । ಅಧ್ವರೇ । ವರಿವಃ । ಧಾತಿ । ದೇವಾಃ ॥೧॥

|| ಸಾಯಣಭಾಷ್ಯಂ ||

ಹೇ ವಸವಃ ಸರ್ವಸ್ಯ ವಾಸಯಿತಾರೋ ದೇವಾ ವೋ ಯುಷ್ಮಾನ್ ಕಸ್ತ್ರಾತಾಸ್ತಿ । ಯತೋ ಯೂಯಂ ವಸವೋಽತ ಇತ್ಯಭಿಪ್ರಾಯಃ । ಕಶ್ಚ ವರೂತಾ ಸಂಭಕ್ತಾಸ್ತಿ । ಯದ್ವಾ । ವೋ ಯುಷ್ಮಾಕಂ ಮಧ್ಯೇ ಕಸ್ತ್ರಾತಾ ರಕ್ಷಕೋ ದೇವಃ ಕಶ್ಚ ವರೂತಾ ವಾರಯಿತಾ ದುಃಖಾನಾಂ ವರಣೀಯೋ ವಾ ಭವತಿ । ಹೇ ದ್ಯಾವಾಭೂಮೀ ನೋಽಸ್ಮಾನ್ ತ್ರಾಸೀಥಾಂ । ರಕ್ಷತಂ । ಹೇ ಅದಿತೇ ಅಖಂಡನೀಯೇ । ಏತದಪಿ ದ್ಯಾವಾಭೂಮ್ಯೋರ್ವಿಶೇಷಣಂ । ಸಂಖ್ಯಾವ್ಯತ್ಯಯಃ । ಯದೀದಂ ಪೃಥಗ್ದೇವತಾಮಂತ್ರಣಂ ಸ್ಯಾತ್ ತರ್ಹಿ ನಿಘಾತೋ ನ ಸ್ಯಾತ್ । ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾವಿದ್ಯಮಾನವತ್ತ್ವೇನಾಸ್ಯೈವ ಪಾದಾದಿತ್ವಾತ್ । ಅದಿತೇ ಮಿತ್ರ ವರುಣೋತ ಮೃಳ । ಋಗ್ವೇ. ೨-೨೭-೧೪ । ಇತಿ ಆದಿತ್ಯಾ ರುದ್ರಾ ವಸವಃ ಸುದಾನವಃ । ಋಗ್ವೇ. ೧೦-೬೬-೧೨ । ಇತಿವತ್ । ತಸ್ಯೈವ ವಿಶೇಷಣತ್ವೇ ಸಮಾನಾಧಿಕರಣ ಇತಿ ಸಾಮಾನಾಧಿಕರಣ್ಯಾತ್ ಅಗ್ನೇ ಪಾವಕ ರೋಚಿಷಾ । ಋಗ್ವೇ. ೫-೨೬-೧ । ಇತಿವತ್ ।ಅಸ್ಯ ನಿಘಾತಃ ಸಿಧ್ಯತಿ । ತಸ್ಮಾತ್ ದ್ಯಾವಾಭೂಮೀ ಇತ್ಯೇತಸ್ಯ ವಿಶೇಷಣಂ । ಹೇ ವರುಣ ಹೇ ಮಿತ್ರ ಯುವಾಂ ಸಹೀಯಸೋ ಮರ್ತಾದಭಿಭವಿತುರ್ಮನುಷ್ಯಾತ್ ನಸ್ತ್ರಾಸೀಥಾಂ । ಹೇ ದೇವಾ ವೋ ಯುಷ್ಮಾಕಮಧ್ವರೇ ಯಾಗೇ ಕೋ ವರಿವೋ ಧನಂ ಧಾತಿ । ದದಾತಿ । ಯದ್ವಾ । ವೋ ಯುಷ್ಮಾಕಂ ಮಧ್ಯೇ ಕೋ ವರಿವೋ ಧಾತಿ । ಧಾರಯತಿ ||

|| ಪ್ರತಿಪದಾರ್ಥ ||

ವಸವಃ—ಎಲೈ ವಸುಗಳೇ । ವಃ—ನಿಮ್ಮಲ್ಲಿ । ಕಃ—ಯಾರು । ತ್ರಾತಾ—ರಕ್ಷಕನಾಗಿದ್ದಾನೆ । ಕಃ—ಯಾರು । ವರೂತಾ—ದುಃಖನಿವಾರಕನು । ಅದಿತೇ—ಖಂಡರಹಿತರಾದ । ದ್ಯಾವಾಭೂಮೀ—ಎಲೈ ದ್ಯಾವಾಭೂಮಿಗಳೇ । ನಃ—ನಮ್ಮನ್ನು । ತ್ರಾಸೀಥಾಂ—ರಕ್ಷಿಸಿರಿ । ವರುಣ—ಎಲೈ ವರುಣನೇ । ಮಿತ್ರ—ಎಲೈ ಮಿತ್ರನೇ । ಸಹೀಯಸಃ—(ನಮ್ಮ) ಎದುರುಬೀಳುವ । ಮರ್ತಾತ್—ಮಾನವನಿಂದ (ಶತ್ರುವಿನಿಂದ) ರಕ್ಷಿಸಿರಿ । ದೇವಾಃ—ಎಲೈ ದೇವತೆಗಳೇ । ಅಧ್ವರೇ—ಯಾಗದಲ್ಲಿ । ವಃ—ನಿಮ್ಮಲ್ಲಿ । ಕಃ—ಯಾವ ದೇವನು ! ವರಿವಃ—ಧನವನ್ನು । ಧಾತಿ—ಕೊಡುತ್ತಾನೆ.

॥ ಭಾವಾರ್ಥ ॥

ಎಲೈ ವಸುಗಳೇ, ನಿಮ್ಮಲ್ಲಿ ನಮ್ಮ ರಕ್ಷಕನಾರು ? ದುಃಖನಿವಾರಕನಾರು ? ಖಂಡರಹಿತರಾದ ಎಲೈ ದ್ಯಾವಾಪೃಥಿವಿಗಳೇ ನಮ್ಮನ್ನು ರಕ್ಷಿಸಿರಿ. ಎಲೈ ವರುಣನೇ, ಎಲೈ ಮಿತ್ರನೇ, ನಮ್ಮ ಎದುರುಬೀಳುವ ಮಾನವ ಶತ್ರುವಿನಿಂದ ನಮ್ಮನ್ನು ರಕ್ಷಿಸಿರಿ ಎಲೈ ದೇವತೆಗಳೇ, ಯಜ್ಞಕಾಲದಲ್ಲಿ ನಿಮ್ಮಲ್ಲಿನಮಗೆ ಧನವನ್ನು ಕೊಡುವವರಾರು?

## English Translation.

Which of you, Vasus, is a defender ? which is a protector ? heaven and earth and Aditi preserve us : defend us, Mitra and Varuna, from the strong man : who is it, gods, that offers you wealth at the sacrifice ?



॥ ಸಂಹಿತಾಪಾಠಃ ॥

ಪ್ರ ಯೇ ಧಾಮಾನಿ ಪೂರ್ವ್ಯಾಣ್ಯರ್ಚಾನ್ವಿ ಯದುಚ್ಛಾನ್ವಿಯೋತಾರೋ

ಅಮೂರಾಃ ।

ವಿಧಾತಾರೋ ವಿ ತೇ ದಧುರಜಸ್ರಾ ಋತಧೀತಯೋ ರುರುಚಂತ ದಸ್ಮಾಃ ॥

॥ ಪದಪಾಠಃ ॥

ಪ್ರ । ಯೇ । ಧಾಮಾನಿ । ಪೂರ್ವ್ಯಾಣಿ । ಅರ್ಚಾನ್ । ವಿ । ಯತ್ । ಉಚ್ಛಾನ್ । ವಿಽಯೋ-

ತಾರಃ । ಅಮೂರಾಃ ।

ವಿಽಧಾತಾರಃ । ವಿ । ತೇ । ದಧುಃ । ಅಜಸ್ರಾಃ । ಋತಽಧೀತಯಃ । ರುರುಚಂತ । ದಸ್ಮಾಃ ॥ ೨ ॥

॥ ಸಾಯಣಭಾಷ್ಯಂ ॥

ಯೇ ದೇವಾಃ ಪೂರ್ವ್ಯಾಣಿ ಪುರಾತನಾನಿ ಧಾಮಾನಿ ಸ್ಥಾನಾನಿ ವಾ ಪ್ರಾರ್ಚಾನ್ । ಅರ್ಚಂತಿ । ಪ್ರಯಚ್ಛಂತಿ ಸ್ತೋತೃಭ್ಯಃ । ಯತ್ ಯೇ ಚ ವಿಯೋತಾರೋ ದುಃಖಾನಾಮಮಿಶ್ರಯಿತಾರೋಽಮೂರಾ ಅಮೂಢಾ ವ್ಯುಚ್ಛಾನ್ । ವ್ಯುಚ್ಛಂತಿ । ತಮೋ ವಿವಾಸಯಂತಿ ದೇವಾಃ । ತೇ ವಿಧಾತಾರಃ ಫಲಾನಾಂ ಕರ್ತಾರೋಽಜಸ್ರಾ ನಿತ್ಯಾ ವಿ ದಧುಃ । ಕುರ್ವಂತ್ಯಭಿಮತಂ । ಕಿಂಚ ಋತಧೀತಯಃ ಸತ್ಯಕರ್ಮಾಣೋ ದಸ್ಮಾ ದರ್ಶನೀಯಾಸ್ತೇ ರುರುಚಂತ । ರೋಚಂತೇ ॥

॥ ಪ್ರತಿಪದಾರ್ಥ ॥

ಯೇ—ಯಾವ ದೇವತೆಗಳು । ಪೂರ್ವ್ಯಾಣಿ—ಪುರಾತನಗಳಾದ । ಧಾಮಾನಿ—(ಸುಖದಾಯಕ) ಸ್ಥಾನಗಳನ್ನು । ಪ್ರ ಅರ್ಚನ್—(ಯಜಮಾನರಿಗೆ) ಕೊಡುವರೋ । ಯತ್—ಯಾರು । ವಿಯೋತಾರಃ—ದುಃಖರಹಿತರಾಗಿಯೂ । ಅಮೂರಾಃ—ಮೌಢ್ಯರಹಿತರಾಗಿಯೂ । ವ್ಯುಚ್ಛಾನ್—ಕತ್ತಲನ್ನು ನಾಶಪಡಿಸುವರೋ (ಅವರು) । ಅಜಸ್ರಾಃ—ನಿತ್ಯವಾದ । ವಿಧಾತಾರಃ—ಫಲನಿರ್ಮಾಪಕರಾಗಿ । ವಿ ದಧುಃ—(ಅಪೇಕ್ಷಿತ ಫಲಗಳನ್ನು) ಕೊಡಲಿ । ತೇ—ಆ ದೇವತೆಗಳು । ಋತಧೀತಯಃ—ಸತ್ಯಕರ್ಮವುಳ್ಳವರಾಗಿಯೂ । ದಸ್ಮಾಃ—ಆಕರ್ಷಕವಾದ ರೂಪವುಳ್ಳವರಾಗಿಯೂ । ರುರುಚಂತ—ಪ್ರಕಾಶಿಸುತ್ತಾರೆ.

॥ ಭಾವಾರ್ಥ ॥

ಯಾವ ದೇವತೆಗಳು ಪುರಾತನವೂ, ಸುಖದಾಯಕವೂ ಆದ ಸ್ಥಾನಗಳನ್ನು ಯಜಮಾನರಿಗೆ ಕೊಡುವರೋ ಯಾರು ದುಃಖರಹಿತರಾಗಿಯೂ, ಮೌಢ್ಯರಹಿತರಾಗಿಯೂ ಕತ್ತಲನ್ನು ನಾಶಪಡಿಸುವರೋ, ಅವರು ನಿತ್ಯವಾದ ಫಲ

ನಿರ್ಮಾಪಕರಾಗಿ ಅಪೇಕ್ಷಿತ ಫಲಗಳನ್ನು ಕೊಡಲಿ. ಆ ದೇವತೆಗಳು ಸತ್ಯಕರ್ಮವುಳ್ಳವರಾಗಿಯೂ, ಆಕರ್ಷಕವಾದ ರೂಪವುಳ್ಳವರಾಗಿಯೂ ಪ್ರಕಾಶಿಸುತ್ತಾರೆ.

## English Translation.

The (deities) who bestow ancient places (of enjoyment on their worshippers), and (with minds) unperplexed, are the separators of light (from darkness); they, the eternal distributors (of rewards), grant (what is desired), and shine of pleasing aspect, the true (recompensers) of pious acts.

॥ ಸಂಹಿತಾಪಾಠಃ ॥

ಪ್ರ ಪಸ್ತ್ಯ೧ಮದಿತಿಂ ಸಿಂಧುಮರ್ಕೈಃ ಸ್ವಸ್ತಿಮೀಳೇ ಸಖ್ಯಾಯ ದೇವೀಂ ।
ಉಭೇ ಯಥಾ ನೋ ಅಹನೀ ನಿಪಾತ ಉಷಾಸಾನಕ್ತಾ ಕರತಾಮದಬ್ಧೇ ॥

॥ ಪದಪಾಠಃ ॥

ಪ್ರ । ಪಸ್ತ್ಯಂ । ಅದಿತಿಂ । ಸಿಂಧುಂ । ಅರ್ಕೈಃ । ಸ್ವಸ್ತಿಂ । ಈಳೇ । ಸಖ್ಯಾಯ । ದೇವೀಂ ।
ಉಭೇ ಇತಿ । ಯಥಾ । ನಃ । ಅಹನೀ ಇತಿ । ನಿ್ಪಾತಃ । ಉಷಸಾನಕ್ತಾ । ಕರತಾಂ । ಅದಬ್ಧೇ ಇತಿ ॥

॥ ಸಾಯಣಭಾಷ್ಯಂ ॥

ಪಸ್ತ್ಯಂ ಸರ್ವೈರ್ಗಂತವ್ಯಾಮದಿತಿಮದೀನಾಂ ದೇವಮಾತರಂ ತಾಂ ದೇವೀಂ ಸಿಂಧುಂ ಸ್ಯಂದನ-ಶೀಲಾಂ ನದ್ಯಭಿಮಾನಿದೇವೀಂ ಸ್ವಸ್ತಿಂ ಸುಖನಿವಾಸಾಮೇತನ್ನಾಮಿಕಾಂ ದೇವೀಂ ಸಖ್ಯಾಯಾನುಕೂ-ಲ್ಯಾಯಾರ್ಕೈರ್ಮಂತ್ರೈರೀಳೇ । ಸ್ತೌಮಿ । ಉಭೇ ಅಹನೀ ದ್ಯಾವಾಪೃಥಿವ್ಯೌ ಯಥಾ ನೋಽಸ್ಮಾನ್ನಿಪಾತಃ ನಿತರಾಂ ಪಾತಃ ತಥಾ ಸ್ತೌಮಿ । ಉಷಾಸಾನಕ್ತಾಹೋರಾತ್ರಾಭಿಮಾನಿದೇವತೇ ಅದಬ್ಧೇ ಅದಂಭನೀಯೇ ಕರತಾಂ । ಕುರುತಾಂ । ಅಭಿಮತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

ಪಸ್ತ್ಯಂ—ಪೂಜ್ಯಳಾದ । ಅದಿತಿಂ—ಅದಿತಿಯನ್ನೂ । ಸಿಂಧುಂ—ನದ್ಯಭಿಮಾನಿದೇವತೆಯನ್ನೂ । ದೇವೀಂ—ದೇವತಾತ್ಮಳೂ । ಸ್ವಸ್ತಿಂ—ಸುಖಕಾರಕಳೂ ಆದ ಸ್ವಸ್ತಿ ಎಂಬದೇವಿಯನ್ನೂ । ಸಖ್ಯಾಯ—ಅವರ ಸ್ನೇಹಕ್ಕಾಗಿ । ಅರ್ಕೈಃ—ಮಂತ್ರಗಳಿಂದ । ಈಳೇ—ಸ್ತುತಿಸುತ್ತೇನೆ । ಉಭೇ ಅಹನೀ-ದ್ಯಾವಾಪೃಥಿವಿಗಳಿಬ್ಬರೂ ।

**ಯಥಾ**—ಯಾವ ರೀತಿಯಲ್ಲಿ | **ನಃ**—ನಮ್ಮನ್ನು | **ನಿಪಾತಃ**—ಪೂರ್ಣವಾಗಿ ರಕ್ಷಿಸುವರೋ (ಆ ರೀತಿಯಲ್ಲಿ ಸ್ತುತಿಸುತ್ತೇನೆ | **ಅದಬ್ಧೇ**—ನಾಶರಹಿತರಾದ | **ಉಷಾಸಾನಕ್ತಾ**—ಅಹೋರಾತ್ರದೇವತೆಗಳು | **ಕರತಾಂ**—(ನಮ್ಮ ಇಷ್ಟಾರ್ಥಸಿದ್ಧಿಯನ್ನು) ಉಂಟುಮಾಡಲಿ.

॥ ಭಾವಾರ್ಥ ॥

ಪೂಜ್ಯಳಾದ ಅದಿತಿಯನ್ನೂ, ನದ್ಯಭಿಮಾನಿದೇವಿಯನ್ನೂ, ದೇವತಾತ್ಮಳೂ ಸುಖಕಾರಕಳೂ ಆದ ಸ್ವಸ್ತಿ ದೇವಿಯನ್ನೂ ಅವರ ಸಖ್ಯಕ್ಕಾಗಿ ಮಂತ್ರಗಳಿಂದ ಅತಿಶಯವಾಗಿ ಸ್ತುತಿಸುತ್ತೇನೆ. ದ್ಯಾವಾಪೃಥಿವಿಗಳಿಬ್ಬರೂ ನಮ್ಮನ್ನು ಯಾವ ರೀತಿ ರಕ್ಷಿಸುವರೋ ಆ ರೀತಿ ಅವರನ್ನು ಸ್ತುತಿಸುತ್ತೇನೆ. ನಾಶರಹಿತರಾದ ಅಹೋರಾತ್ರ ದೇವತೆಗಳು ನಮ್ಮ ಇಷ್ಟಾರ್ಥಸಿದ್ಧಿಯನ್ನುಂಟುಮಾಡಲಿ.

English Translation.

I adore thc venerated Aditi, the Sindhu and the divine Swasti for their friendship: (I praise you) both, Day and Night, that you may protect us unimpeded; night and morning do (what we desire).



॥ ಸಂಹಿತಾಪಾಠಃ ॥

ವ್ಯರ್ಯಮಾ ವರುಣಶ್ಚೇತಿ ಪಂಥಾಮಿಷಸ್ಪತಿಃ ಸುವಿತಂ ಗಾತುಮಗ್ನಿಃ ।
ಇಂದ್ರಾವಿಷ್ಣೂ ನೃವದು ಷು ಸ್ತವಾನಾ ಶರ್ಮ ನೋ ಯಂತಮಮವ-
ದ್ವರೂಥಂ ॥ ೪ ॥

॥ ಪದಪಾಠಃ ॥

ವಿ । ಅರ್ಯಮಾ । ವರುಣಃ । ಚೇತಿ । ಪಂಥಾಂ । ಇಷಃ । ಪತಿಃ । ಸುವಿತಂ । ಗಾತುಂ । ಅಗ್ನಿಃ ।
ಇಂದ್ರಾವಿಷ್ಣೂ ಇತಿ । ನೃವತ್ । ಊಂ ಇತಿ । ಸು । ಸ್ತವಾನಾ । ಶರ್ಮ । ನಃ । ಯಂತಂ । ಅಮವತ್ ।
ವರೂಥಂ ॥ ೪ ॥

॥ ಸಾಯಣಭಾಷ್ಯಂ ॥

ಅರ್ಯಮಾ ದೇವೋಽಸ್ಮಾಕಂ ಪಂಥಾಂ ಯಜ್ಞಾದಿಮಾರ್ಗಂ ವಿ ಚೇತಿ । ಜ್ಞಾಪಯತಿ । ತಥಾ ವರುಣೋ ವಿ ಚೇತಿ । ಇಷೋಽನ್ನಸ್ಯ ಹವಿರ್ಲಕ್ಷಣಸ್ಯ ಪತಿಃ ಪಾಲಕೋಽಗ್ನಿಃ ಸುವಿತಂ ಸುಖಕರಂ ಗಾತುಂ ಗಮನಂ ಮಾರ್ಗಂ ವಾ ಸ್ವರ್ಗಾದೇರ್ವಿ ಚೇತಿ । ಇಂದ್ರಾವಿಷ್ಣೂ ಸು ಸುಷ್ಠು ಸ್ತವಾನಾ ಸ್ತೂಯಮಾನೌ ನೃವನ್ನನುಷ್ಯವನ್ಮನುಷ್ಯೋಪೇತಂ ವರೂಥಂ ವರಣೀಯಮಮುವದ್ಬಲೋಪೇತಂ ಶರ್ಮ ಗೃಹಂ ಸುಖಂ ವಾ ನೋಽಸ್ಮಾಕಂ ಯಂತಂ । ಯಚ್ಛತಂ ॥

॥ ಪ್ರತಿಪದಾರ್ಥ ॥

ಅರ್ಯಮಾ—ಅರ್ಯಮನೂ । ವರಣಃ—ವರುಣನೂ । ಪಂಥಾಂ—ಶ್ರೇಷ್ಠವಾದ ಮಾರ್ಗವನ್ನು । ವಿ ಚೇತಿ—ತಿಳಿಸುತ್ತಾರೆ । ಇಷಃ—ಅನ್ನಕ್ಕೆ । ಪತಿಃ—ಪಾಲಕನಾದ । ಅಗ್ನಿಃ—ಅಗ್ನಿಯು । ಸುವಿತಂ—ಸುಖಕಾರಕವಾದ । ಗಾತುಂ—ಮಾರ್ಗವನ್ನು (ತಿಳಿಸುತ್ತಾನೆ) । ಇಂದ್ರಾವಿಷ್ಣೂ—ಇಂದ್ರಾವಿಷ್ಣುಗಳು । ಸು—ಶ್ರೇಷ್ಠವಾಗಿ । ಸ್ತವಾನಾ—ಸ್ತುತಿಸಲ್ಪಟ್ಟವರಾಗಿ । ನೃವತ್—ಪುತ್ರಾದಿಗಳಿಂದ ಕೂಡಿದುದೂ । ವರೂಥಂ—ಆದರಣೀಯವಾದುದೂ । ಅಮುವತ್—ಶಕ್ತಿಯುತವಾದುದೂ ಆದ । ಶರ್ಮ—ಸುಖವನ್ನು । ನಃ—ನಮಗೆ । ಯಂತಂ—ಕೊಡಲಿ.

॥ ಭಾವಾರ್ಥ ॥

ಅರ್ಯಮನೂ, ವರುಣನೂ ನಮಗೆ ಉತ್ತಮವಾದ ಕರ್ಮಮಾರ್ಗವನ್ನು ತಿಳಿಸುತ್ತಾರೆ. ಅನ್ನಪಾಲಕನಾದ ಅಗ್ನಿಯು ಸುಖಕಾರಕನಾದ ಮಾರ್ಗವನ್ನು ತಿಳಿಸುತ್ತಾರೆ. ಇಂದ್ರಾವಿಷ್ಣುಗಳು ಉತ್ತಮವಾಗಿ ಸ್ತುತಿಸಲ್ಪಟ್ಟು ಪುತ್ರಾದಿಗಳಿಂದ ಕೂಡಿದೂದೂ, ಆದರಣೀಯವಾದುದೂ, ಶಕ್ತಿಯುತವಾಮದೂ ಆದ ಸುಖವನ್ನು ನಮಗೆ ಉಂಟುಮಾಡಲಿ.

## English Translation.

Aryaman and Varuna, instruct us in the path (of worship): Agni the lord of food, points out the way to happiness: Indra and Vishnu, being glorified, bestow upon us desirable prosperity comprehending descendants and strength.

---

॥ ಸಂಹಿತಾಪಾಠಃ ॥

ಆ ಪರ್ವತಸ್ಯ ಮರುತಾಮವಾಂಸಿ ದೇವಸ್ಯ ತ್ರಾತುರವ್ರಿ ಭಗಸ್ಯ ।

ಪಾತ್ಪತಿರ್ಜನ್ಯಾದಂಹಸೋ ನೋ ಮಿತ್ರೋ ಮಿತ್ರಿಯಾದುತ ನ ಉರುಷ್ಯೇತ್ ॥ ೫ ॥

॥ ಪದಪಾಠಃ ॥

ಆ । ಪರ್ವತಸ್ಯ । ಮರುತಾಂ । ಅವಾಂಸಿ । ದೇವಸ್ಯ । ತ್ರಾತುಃ । ಅವ್ರಿ । ಭಗಸ್ಯ ।

ಪಾತ್ । ಪತಿಃ । ಜನ್ಯಾತ್ । ಅಂಹಸಃ । ನಃ । ಮಿತ್ರಃ । ಮಿತ್ರಿಯಾತ್ । ಉತ । ನಃ । ಉರುಷ್ಯೇತ್ ॥

॥ ಸಾಯಣಭಾಷ್ಯಂ ॥

ಪರ್ವತಸ್ಯೇಂದ್ರಸಖಸ್ಯೈತನ್ನಾಮಕಸ್ಯ ದೇವಸ್ಯ ಮರುತಾಂ ಚ ತ್ರಾತೂ ರಕ್ಷಕಸ್ಯ ಭಗಸ್ಯ ದೇವಸ್ಯ ಚಾವಾಂಸಿ ರಕ್ಷಣಾನ್ಯಾವ್ರಿ। ಆವೃಣೇ। ಕಿಂಚ ಪತಿರ್ವರುಣೋ ದೇವೋ ಜನ್ಯಾಜ್ಜನಸಂಬಂಧಾದಂಹಸಃ ಪಾಪಾತ್ ನೋಽಸ್ಮಾನ್ಪಾತ್ । ಪಾತು । ರಕ್ಷತು । ಉತಾಪಿ ಚ ಮಿತ್ರಶ್ಚ ಮಿತ್ರಿಯಾತ್ ಮಿತ್ರಭಾವೇನ ನ ಉರುಷ್ಯೇತ್ । ರಕ್ಷತು ॥

॥ ಪ್ರತಿಪದಾರ್ಥ ॥

ದೇವಸ್ಯ—ದೇವತಾತ್ಮನಾದ । ಪರ್ವತಸ್ಯ—ಪರ್ವತದೇವನಿಂದಲೂ । ಮರುತಾಂ (ಚ)—ಮರುತ್ತುಗಳಿಂದಲೂ । ತ್ರಾತುಃ—ರಕ್ಷಕನಾದ । ಭಗಸ್ಯ—ಭಗನಿಂದಲೂ । ಅವಾಂಸಿ—ರಕ್ಷಣೆಗಳನ್ನು । ಆ ಅವ್ರಿ—ನಾನು ಅಪೇಕ್ಷಿಸಿ ಪ್ರಾರ್ಥಿಸುತ್ತೇನೆ । ಪತಿಃ—ಪಾಲಕನಾದ ವರುಣನು । ಜನ್ಯಾತ್—ಪುರುಷದೋಷದಿಂದ ಉತ್ಪನ್ನವಾದ । ಅಂಹಸಃ—ಪಾಪದಿಂದ । ನಃ—ನಮ್ಮನ್ನು । ಪಾತ್—ರಕ್ಷಿಸಲಿ । ಉತ—ಮತ್ತು । ಮಿತ್ರಃ—ಮಿತ್ರನೂ । ಮಿತ್ರಿಯಾತ್—ಸುಹೃದ್ಭಾವದಿಂದ । ನಃ—ನಮ್ಮನ್ನು । ಉರುಷ್ಯೇತ್—ರಕ್ಷಿಸಲಿ.

॥ ಭಾವಾರ್ಥ ॥

ದೇವತಾತ್ಮರಾದ ಪರ್ವತ, ಮರುತ್ತುಗಳು, ರಕ್ಷಕನಾದ ಭಗ ಇವರೆಲ್ಲರ ರಕ್ಷಣೆಗಳನ್ನೂ ಅಪೇಕ್ಷಿಸಿ ನಾನು ಪ್ರಾರ್ಥಿಸುತ್ತೇನೆ. ಪಾಲಕನಾದ ವರುಣನು ಪುರುಷದೋಷದಿಂದ ಉತ್ಪನ್ನವಾದ ಪಾಪದಿಂದ ನಮ್ಮನ್ನು ರಕ್ಷಿಸಲಿ. ಮಿತ್ರನೂ ಸಹ ಅದೇ ಸುಹೃದ್ಭಾವದಿಂದ ನಮ್ಮನ್ನು ರಕ್ಷಿಸಲಿ.

## English Translation.

I have recourse to the protection of Parvata, of the Maruts, and of the divine protector, Bhaga: may the lord (Varuna) presrve us from human wretchedness, and may Mitra defend us with a friendly regard.



॥ ಸಂಹಿತಾಪಾಠಃ ॥

ನೂ ರೋದಸೀ ಅಹಿನಾ ಬುಧ್ನ್ಯೇನ ಸ್ತುವೀತ ದೇವೀ ಅಪ್ಯೇಭಿರಿಷ್ಟೈಃ ।
ಸಮುದ್ರಂ ನ ಸಂಚರಣೇ ಸನಿಷ್ಯವೋ ಘರ್ಮಸ್ವರಸೋ ನದ್ಯೋ೩ ಅಪ
ವ್ರನ್ ॥ ೬ ॥

॥ ಪದಪಾಠಃ ॥

ನು । ರೋದಸೀ ಇತಿ । ಅಹಿನಾ । ಬುಧ್ನ್ಯೇನ । ಸ್ತುವೀತ । ದೇವೀ ಇತಿ । ಅಪ್ಯೇಭಿಃ । ಇಷ್ಟೈಃ ।
ಸಮುದ್ರಂ । ನ । ಸಂಽಚರಣೇ । ಸನಿಷ್ಯವಃ । ಘರ್ಮಽಸ್ವರಸಃ । ನದ್ಯಃ । ಅಪ । ವ್ರನ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ರೋದಸೀ ದ್ಯಾವಾಪೃಥಿವ್ಯೌ ಯುವಾಮಹಿನಾ ಬುಧ್ನ್ಯೇನಾಹಿರ್ಬುಧ್ನ್ಯನಾಮಕೇನ ದೇವೇನ ಸಹ ನು ಕ್ಷಿಪ್ರಮಪ್ಯೇಭಿರಾಪನೀಯೈರಿಷ್ಟೈಃ ಕಾಮ್ಯೈರ್ನಿಮಿತ್ತಭೂತೈಃ ಸ್ತುವೀತ । ಸ್ತುವೇ । ಸನಿಷ್ಯವೋ ಧನಾನಾಂ ಸಂಭಕ್ತುಮಿಚ್ಛಂತಃ ಸಂಚರಣೇ ಸಂಚಾರಾಯ ಸಮುದ್ರಮಧ್ಯಗಮನಾಯ ಸಮುದ್ರಮಿವ । ತಂ ಯಥಾ ಸ್ತುವಂತಿ ತದ್ವತ್ । ಯಸ್ಮಾದೇತೇ ದೇವಾ ಘರ್ಮಸ್ವರಸೋ ದೀಪ್ತಧ್ವನಯೋ ನದ್ಯೋ ನದೀರಪ ವ್ರನ್ । ಅಪವೃಣ್ವಂತೀತಿ ಪರೋಕ್ಷ ಇವ । ಅಥವಾ ಶೇ ದೇವಾ ನದೀರಪವೃಣ್ವಂತ್ವಿತ್ಯಾಶೀಃ । ತಸ್ಮಾತ್ ಸ್ತುವ ಇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ದೇವೀ—ದೇವತಾತ್ಮರಾದ । ರೋದಸೀ—ಎಲೈ ದ್ಯಾವಾಪೃಥಿಗಳೇ । ಸನಿಷ್ಯವಃ—ಧನಾಪೇಕ್ಷಿಗಳು। ಸಂಚರಣೇ—ಸಂಚಾರಾರ್ಥವಾಗಿ (ಸಹಾಯಮಾಡಲು)। ಘರ್ಮಸ್ವರಸಃ—ಪ್ರಕಾಶಕವಾದ ಶಬ್ದಗಳಿಂದ ಕೂಡಿದ। ನದ್ಯಃ—ನದಿಗಳು । ಅಪವ್ರನ್—(ಎಲ್ಲಿ) ಅಂತರ್ಹಿತವಾಗುವುವೋ ಅಂತಹ । ಸಮುದ್ರಂ ನ—ಸಮುದ್ರವನ್ನು ಪ್ರಾರ್ಥಿಸುವಂತೆ । ಅಹಿನಾ ಬುಧ್ನ್ಯೇನ—ಅಹಿರ್ಬುಧ್ನ್ಯದೇವನೊಡನೆ ಕೂಡಿದ ನಿಮ್ಮನ್ನು । ನು—ಶೀಘ್ರವಾಗಿ । ಅಪ್ಯೇಭಿಃ—ಅಪೇಕ್ಷಿತವಾದ । ಇಷ್ಟೈಃ—ಇಷ್ಟಾರ್ಥಗಳ ಸಿದ್ಧಿಗಾಗಿ । ಸ್ತುವೀತ—ಪ್ರಾರ್ಥಿಸುತ್ತೇನೆ.

ಭಾವಾರ್ಥ ।

ದೇವತಾತ್ಮರಾದ ಎಲೈ ದ್ಯಾವಾಪೃಥಿವಿಗಳೇ, ಧನಾಪೇಕ್ಷಿಗಳು ತಮ್ಮ ಸಂಚಾರಕ್ಕೆ ಸಹಾಯಮಾಡಲು ಪ್ರಕಾಶಕವಾದ ಶಬ್ದಗಳಿಂದ ಕೂಡಿದ ನದಿಗಳು ಎಲ್ಲಿ ಅಂತರ್ಹಿತವಾಗುವುವೋ ಅಂತಹ ಸಮುದ್ರವನ್ನು ಪ್ರಾರ್ಥಿಸುವಂತೆ, ಅಹಿರ್ಬುಧ್ನ್ಯದೇವನೊಡನೆ ಕೂಡಿದ ನಿಮ್ಮನ್ನು ಅಪೇಕ್ಷಿತವಾದ ಇಷ್ಟಾರ್ಥಗಳ ಶೀಘ್ರವಾದ ಸಿದ್ಧಿಗಾಗಿ ಪ್ರಾರ್ಥಿಸುತ್ತೇನೆ.

## English Translation.

Divine Heaven and Earth, I praise you together with Ahibudhnya for those (good things that are) desired. as those desirous of acquiring (riches) praise the ocean on traversing it (in which) the sounding rivers disappear.



॥ ಸಂಹಿತಾಪಾಠಃ ॥

ದೇವೈರ್ನೋ ದೇವ್ಯದಿತಿರ್ನಿ ಪಾತು ದೇವಸ್ತ್ರಾತಾ ತ್ರಾಯತಾಮಪ್ರ-
ಯುಚ್ಛನ್ ।

ನಹಿ ಮಿತ್ರಸ್ಯ ವರುಣಸ್ಯ ಧಾಸಿಮರ್ಹಾಮಸಿ ಪ್ರಮಿಯಂ ಸಾನ್ವಗ್ನೇಃ ॥ ೭ ॥

॥ ಪದಪಾಠಃ ॥

ದೇವೈಃ । ನಃ । ದೇವೀ । ಅದಿತಿಃ । ನಿ । ಪಾತು । ದೇವಃ । ತ್ರಾತಾ । ತ್ರಾಯತಾಂ । ಅಪ್ರಽಯುಚ್ಛನ್ ॥

ನಹಿ । ಮಿತ್ರಸ್ಯ । ವರುಣಸ್ಯ । ಧಾಸಿಂ । ಅರ್ಹಾಮಸಿ । ಪ್ರಽಮಿಯಂ । ಸಾನು । ಅಗ್ನೇಃ ॥ ೭ ॥

॥ ಸಾಯಣಭಾಷ್ಯಂ ॥

ಅತಿತಿರ್ದೇವ್ಯದೀನಾ ದೇವಮಾತಾ ದೇವೈರನ್ಯೈರ್ಮಿತ್ರಾದಿಭಿಃ ಸಹ ನೋಽಸ್ಮಾನ್ನಿ ಪಾತು । ಪಾಲಯತು । ತಥಾ ತ್ರಾತಾ ಪಾಲಕೋ ದೇವಃ । ಇಂದ್ರ ಇತ್ಯರ್ಥಃ । ಸೋಽಪ್ಯಪ್ರಯುಚ್ಛನ್ ಅಪ್ರಮಾ-ದ್ಯನ್ ತ್ರಾಯತಾಂ । ವಯಂ ಚ ಮಿತ್ರಸ್ಯ ವರುಣಸ್ಯಾಗ್ನೇಶ್ಚ ಸಾನು ಸಮುಚ್ಛ್ರಿತಂ ಧಾಸಿಮನ್ನಂ ಸೋಮಾದಿಲಕ್ಷಣಂ ಪ್ರಮಿಯಂ ಹಿಂಸಿತುಂ ನಹ್ಯರ್ಹಾಮಸಿ । ಅರ್ಹಾಮಃ । ಸಮರ್ಥಾ ಭವಾಮಃ । ಕಿಂತ್ವನುಷ್ಠಾನೇನ ಸಂವರ್ಧಿತುಮರ್ಹಾಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವೀ—ದೇವಮಾತೆಯಾದ । ಅದಿತಿಃ—ಅದಿತಿಯು । ದೇವೈಃ—ಮಿತ್ರಾದಿಸಕಲದೇವತೆಗಳೊಡನೆಯೂ ಕೂಡಿ । ನಃ—ನಮ್ಮನ್ನು । ನಿ ಪಾತು—ಪೂರ್ಣವಾಗಿ ರಕ್ಷಿಸಲಿ । ತ್ರಾತಾ—ಪಾಲಕನಾದ । ದೇವಃ—ಇಂದ್ರದೇವನು । ಅಪ್ರಯುಚ್ಛನ್—ಬೇರೆ ಯಾವ ಗಮನವೂ ಇಲ್ಲದೇ । ತ್ರಾಯತಾಂ—ರಕ್ಷಿಸಲಿ ।

ಮಿತ್ರಸ್ಯ—ಮಿತ್ರನಿಗೂ । ವರುಣಸ್ಯ—ವರುಣನಿಗೂ । ಅಗ್ನೇಃ—ಅಗ್ನಿಗೂ । ಸಾನು—ಉತ್ಕೃಷ್ಟರೀತಿಯಿಂದ ಅರ್ಪಿತವಾಗತಕ್ಕ । ಧಾಸಿಂ—ಅನ್ನವನ್ನು । ಪ್ರಮಿಯಂ—ನಿರೋಧಿಸಲು । ನಹಿ ಅರ್ಹಾಮಸಿ—ನಾವು ಶಕ್ತರಲ್ಲ (ನಾವು ತಡೆಯುವುದಿಲ್ಲ).

॥ ಭಾವಾರ್ಥ ॥

ದೇವಮಾತೆಯಾದ ಅದಿತಿಯು ಮಿತ್ರಾದಿಸಕಲದೇವತೆಗಳೊಡನೆಯೂ, ಕೂಡಿ ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ. ಪಾಲಕನಾದ ಇಂದ್ರದೇವನು ಬೇರೆ ಯಾವ ಗಮನವೂ ಇಲ್ಲದೇ ರಕ್ಷಿಸಲಿ. ಮಿತ್ರನಿಗೂ, ವರುಣನಿಗೂ, ಅಗ್ನಿಗೂ, ಉತ್ಕೃಷ್ಟರೀತಿಯಿಂದ ಅರ್ಪಿತವಾಗತಕ್ಕ ಅನ್ನವನ್ನು ನಿರೋಧಿಸಲು ನಾವು ಶಕ್ತರಲ್ಲ.

## English Translation.

May the divine Aditi, with the gods, preserve us: may the ever-attentive protecting (deity, Indra,) protect us: we are not able to withhold the elevated (sacrificial) food of Mitra, of Varuna, of Agni.

॥ ವಿಶೇಷವಿಷಯಗಳು ॥

ಅದಿತಿ—ನಿಷ್ಟಿಗ್ರೀ ಮತ್ತು ಉಷಸ್ಸು ಈ ಎರಡು ದೇವತೆಗಳನ್ನು ಬಿಟ್ಟರೆ ದೇವಮಾತೆಯೆಂದು ಸಾಕ್ಷಾತ್ತಾಗಿನಿರ್ದಿಷ್ಟವಾಗಿರುವವರಲ್ಲಿ ಅದಿತಿಯೇ ಪ್ರಥಮ ದೇವತೆಯೆಂದು ತಿಳಿದುಬರುತ್ತದೆ.

1. ಅದಿತಿಯ ಸ್ವರೂಪವನ್ನು ವರ್ಣಿಸುವ ವಿಶೇಷಗಳು.

ಅದಿತಿಯನ್ನು ಉದ್ದೇಶಿಸಿದ ಪ್ರತ್ಯೇಕವಾದ ಸೂಕ್ತವಾವುದೂ ಇಲ್ಲದಿದ್ದರೂ ಸಹ, ಅನೇಕ ಸೂಕ್ತಗಳಲ್ಲಿ ಅಂತರ್ಗತವಾಗಿರುವ ಮಂತ್ರಗಳಿಂದ ಅದಿತಿಯು ಪ್ರಶಂಸಿತಳೂ, ಪ್ರಾರ್ಥಿತಳೂ ಆಗಿದ್ದಾಳೆ. ಪುತ್ರಾದಿಗಳನ್ನೂ, ಪಶ್ವಾದಿಸಂಪತ್ತುಗಳನ್ನೂ ಅನುಗ್ರಹಿಸಿಕೊಡಬೇಕೆಂದು ಪ್ರಾರ್ಥಿತಳಾಗಿದ್ದಾಳೆ. ಅವಳ ರಕ್ಷಣೆಯೂ, ಕ್ಷಮೆಯೂ ಅನೇಕ ಕಡೆಗಳಲ್ಲಿ ಬೇಡಲ್ಪಟ್ಟಿದೆ (೧-೪೩-೨). ವರುಣನಿಗೂ, ಇನ್ನೂ ಇತರ ಕೆಲವು ದೇವತೆಗಳಿಗೂ ಮಾತೃವೆಂದೂ ವರ್ಣಿತಳಾಗಿದ್ದಾಳೆ. ನಿಘಂಟುವಿನಲ್ಲಿ ಅದಿತಿ ಪದವನ್ನು, (1) ಪೃಥ್ವೀನಾಮಗಳಲ್ಲಿಯೂ, (2) ವಾಙ್ನಾಮಗಳಲ್ಲಿಯೂ, (3) ಗೋನಾಮಗಳಲ್ಲಿಯೂ, (4) ದ್ಯಾವಾಪೃಥಿವೀನಾಮಗಳಲ್ಲಿಯೂ ಸೇರಿಸಿ ಪಠಿಸಿದೆ (ನಿ. ೧-೧; ೧-೧೧; ೨-೧೧; ೩-೩೦). ನಿರುಕ್ತದ ೪-೨೨ ನೇ ಪ್ರಕರಣದಲ್ಲಿ ಅದಿತಿಯನ್ನು ಅದೀನಾ ದೇವಮಾತಾ, ಮಹಾತ್ಮಳಾದ ದೇವಮಾತೆಯೆಂದು ವರ್ಣಿಸಿದೆ.

ಋಕ್ಸಂಹಿತೆಯಲ್ಲಿ (೧-೧೧೩-೧೯) ದೇವಮಾತೆಯಾದ ಉಷಸ್ಸೇ ಅದಿತಿಯ ಅನೀಕವೆಂದು ವರ್ಣಿಸಿದೆ (ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ). ಇಲ್ಲಿ ಅದಿತಿಯ ಮುಖವೆಂದು ಸ್ಥೂಲವಾದ ಅರ್ಥ. ಅವಳ ರೂಪಾಂತರವೆಂದು ಹೇಳಿದರೂ ಹೇಳಬಹುದು. ನಿರುಕ್ತದ ಬೇರೆ ಭಾಗದಲ್ಲಿ (೧೧-೨೨) ದೇವತೆಗಳ ವರ್ಗೀಕರಣವನ್ನು (ಹಿಂದೆ ತೋರಿಸಿದಂತೆ) ಅನುಸರಿಸಿ ಅಂತರಿಕ್ಷಸ್ಥರಾದ ದೇವತೆಗಳ ವಿಷಯವನ್ನು ವಿವರಿಸುವಾಗ ಸ್ತ್ರೀದೇವತೆಗಳಲ್ಲಿ ಅದಿತಿಗೆ ಅಗ್ರಸ್ಥಾನವನ್ನು ಕೊಟ್ಟಿದೆ.

" ಅಥಾತೋ ಮಧ್ಯಸ್ಥಾನಾಃ ಸ್ತ್ರಿಯಃ । ತಾಸಾಂ ಅದಿತಿಃ ಪ್ರಥಮಾಗಾಮಿನೀ ಭವತಿ "

(ನಿ. ೧೧-೨೨)

ಮಧ್ಯಮಲೋಕದ ಸ್ತ್ರೀದೇವತೆಗಳಲ್ಲಿ ಅದಿತಿಯು ಪ್ರಥಮಸ್ಥಾನವನ್ನಾಕ್ರಮಿಸುತ್ತಾಳೆ.

ಋಕ್ಸಂಹಿತೆಯಲ್ಲಿ ೪-೫೫-೩; ೪-೫೫-೭; ೫-೫೧-೧೧; ೬-೫೦-೧; ೭-೩೮-೪; ೭-೪೦-೨; ೮-೨೫-೧೦; ೮-೨೭-೫ ; ೮-೫೬-೧೦. ಇತ್ಯಾದಿ ಋಕ್ಕುಗಳಲ್ಲಿ ಅದಿತಿಯನ್ನು ದೇವಿಯೆಂದೂ, ೨-೪೦-೬ ; ೭-೪೦-೪; ೧೦-೯೨-೧೪ ನೇ ಮಂತ್ರಗಳಲ್ಲಿ ದೇವೀ ಅದಿತಿರನರ್ವಾ; ಅಪ್ರತಿಹತವಾದ ಶಕ್ತಿಯುಳ್ಳವಳೂ, ದೇವತಾತ್ಮಳೂ ಆದ ಅದಿತಿಯೆಂದೂ; ೧-೧೩೬-೩ ರಲ್ಲಿ ಪ್ರಭಾಯುತಳೂ, ಕ್ಷಿತಿಯನ್ನು ಧರಿಸುವವಳೆಂದೂ, ದ್ಯುಲೋಕಸ್ಥಳೆಂದೂ (ಜ್ಯೋತಿಷ್ಮತೀಮದಿತಿಂ.....................) ವರ್ಣಿಸಿದೆ. ಇದಲ್ಲದೇ, ಉರುವ್ಯಚಾಃ; ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವವಳು ; (೫-೪೬-೬); ವಿಶ್ವಜನ್ಯಾಂ; ಸಕಲಮಾನವರಿಗೂ ಪ್ರಿಯ ಸಖಿಳು (೭-೧೦-೪); ಇತ್ಯಾದಿ ವಿಶೇಷಣಗಳು ಗಮನಾರ್ಹವಾದವಾಗಿವೆ. ಇಂತಹ ಉತ್ತಮಳೂ, ಲೋಕೋಪಕಾರಿಣಿಯೂ ಆದ ಅದಿತಿಯನ್ನು ಸ್ತುತಿಸುತ್ತಾ,

" ಪ್ರಾತಃಕಾಲದಲ್ಲಿಯೂ, ಮಧ್ಯಾಹ್ನದಲ್ಲಿಯೂ, ಸಾಯಂಕಾಲದಲ್ಲಿಯೂ ಸಹ ನಾನು ಅದಿತಿಯನ್ನು ಅನುಸ್ಯೂತವಾಗಿ ಪ್ರಾರ್ಥಿಸಿ ಕರೆಯುತ್ತೇನೆ " ಎಂದು ಋಷಿಯು ಪ್ರಶಂಸಿಸಿ ಪ್ರಾರ್ಥಿಸುತ್ತಾನೆ. (೫-೬೯-೩) ೧-೧೮೫-೩ ನೇ ಮಂತ್ರದಲ್ಲಿ ಆದೇ ಅದಿತಿಯ ಶುದ್ಧವಾದುದೂ, ಕ್ಷಯರಹಿತವಾದುದೂ, ದಿವ್ಯವಾದುದೂ ಅತ್ಯಂತ ಪೂಜ್ಯವಾದುದೂ ಆದ ಧನದಾನವು ಯಾಚಿತವಾಗಿದೆ. ೧-೧೬೬-೧೨ ರಲ್ಲಿ ಮರುತ್ತುಗಳನ್ನು ಪ್ರಶಂಸಿಸುವಾಗ, ಅವರಿಂದ ದತ್ತವಾಗತಕ್ಕ ಅನುಗ್ರಹವು ಅದಿತಿಗಳ ದಾನಕ್ಕೆ ಸಮನಾಗಿದೆಯೆಂದು ಅದಿತಿಯ ಪ್ರಶಂಸೆಯಿದೆ. ೪-೫೫-೩ ರಲ್ಲಿ ಪಸ್ತ್ಯವೆಂಬುದು ಅದಿತಿಯ ವಿಶೇಷಗುಣವನ್ನು ಸೂಚಿಸುವ ವಿಶೇಷಣವಾಗಿದೆ. ಸಕಲರಿಗೂ ಆಶ್ರಯದಾತಳಾದ ಗೃಹದೇವತೆಯೆಂಬುದು ಇದರಿಂದ ತಿಳಿಯುತ್ತದೆ. ವಾಜಸನೇಯಸಂಹಿತೆಯಲ್ಲಿ ಅದಿತಿಯ ಮಹದ್ಗುಣಗಳನ್ನು ಈ ರೀತಿ ಸ್ತುತಿಸಿದೆ—

ಮಹೀಮೂ ಷು ಮಾತರಂ ಸುವ್ರತಾನಾಂ...........ಅದಿತಿಂ ಸುಪ್ರಣೀತಿಂ ।

(ತೈ. ಸಂ. ೧-೫-೧೧-೫ ಮತ್ತು ವಾ. ಸಂ. ೨೧-೫)

ಭಕ್ತರಿಗೆ ಆಶ್ರಯದಾತಳಾದ ಮಾತೆಯ ಸ್ವರೂಪಳೂ, ಯಜ್ಞಕ್ಕೆ ನೇತ್ರಿಯೂ, ಅತ್ಯತಿಶಯವಾದ ಶಕ್ತಿಯುಳ್ಳವಳೂ ಜರಾರಹಿತಳೂ, ಅತ್ಯಂತ ವಿಸ್ತೃತವಾಗಿ ವ್ಯಾಪಿಸಿಇರುವವಳೂ, ರಕ್ಷಕಳೂ, ಕುಶಲತೆಯಿಂದ ಎಲ್ಲರಿಗೂ ಮಾರ್ಗವನ್ನು ತೋರಿಸಿ ಎಲ್ಲರನ್ನೂ ಸತ್ಪಥದಲ್ಲಿ ಕೊಂಡೊಯ್ಯುವವಳೂ ಆದ ಅದಿತಿಯನ್ನು ನಾವು ಪ್ರಾರ್ಥಿಸಿ ಕರೆಯೋಣ ಎಂದು ಅವಳ ಮಹತ್ವವನ್ನು ವರ್ಣಿಸಿದೆ.

## 2. ಅದಿತಿಯ ಮೂಲರೂಪದ ವಿಷಯದಲ್ಲಿ Roth ಮತ್ತು Max-Muller ಎಂಬುವರು ತಿಳಿಸಿರುವ ಅಭಿಪ್ರಾಯಗಳು :—

ಅದಿತಿಯೆಂಬುದು, ನಿಯಮಿತವಾದ ಸೀಮಾಪ್ರದೇಶಗಳುಳ್ಳ ಪೃಥ್ವಿಗಿಂತಲೂ ಅಧಿಕವಾದ ಮಹತ್ವವನ್ನು ಹೊಂದಿರುವುದೂ, ಮಾನಾತೀತವಾದ ವಿಸ್ತೃತಿಯನ್ನು ಹೊಂದಿರುವುದೂ ಆದ ಅಂತರಿಕ್ಷದ ಅನಂತತ್ವವನ್ನು ವರ್ಣಿಸಲು ಅನಂತ ಎಂಬರ್ಥವನ್ನು ಕೊಡುವ ಪರ್ಯಾಯಪದವಾಗಿದೆಯೆಂದು Roth ಎಂಬ ಪಂಡಿತನ ಅಭಿಪ್ರಾಯ

ವಾಗಿರುತ್ತೆ. ಇದೇ ಪಂಡಿತನು ನಿರುಕ್ತವಾಕ್ಯವನ್ನು ವಿವರಿಸುವಾಗಲೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಅದಿತಿ ಎಂಬ ಪದಕ್ಕೆ ಅಲಂಘ್ಯ, ಅನತಿಕ್ರಮಣೀಯ, ಅಕ್ಷಯ, ಪ್ರಮಾಣಾತೀತ ಎಂಬರ್ಥವು ಸಹಜವಾಗಿದೆ. "ಅನಂತತ್ವ" ವನ್ನು ಪ್ರತಿಬಿಂಬಿಸುವ ದೇವತಾವಿಶೇಷಳಾಗಿದ್ದಾಳೆ. ಈ ರೂಪದಲ್ಲಿಯೇ ಇವಳು ಪೂಜಿತಳಾಗಿದ್ದಾಳೆ. ಅಲೌಕಿಕವಾದ ದಿವ್ಯತೇಜಸ್ಸು ಯಾವರೀತಿ ಅಪಾರ್ಥಿವವೂ, ನಿತ್ಯವೂ ಆದ ತತ್ತ್ವವೆಂದು ಪರಿಗಣಿತವಾಗಿರುವುದೋ ಅದರಂತೆಯೇ ತೇಜೋರೂಪರಾದ ವರುಣ, ಮಿತ್ರ, ಆರ್ಯಮಾ, ಭಗ ಇತ್ಯಾದಿ ಆದಿತ್ಯರೂ ಸಹ ಅದಿತಿರೂಪವಾದ ಈ ನಿತ್ಯತತ್ತ್ವದ ಪುತ್ರರೆಂದೇ ಪರಿಗಣಿತರಾಗಿದ್ದಾರೆ. "ಮಾನಾತೀತವಾದುದೂ, ಲೌಕಿಕಗೋಚರಕ್ಕೆ ಅತೀತವಾದುದೂ ಆದ ನಿತ್ಯತತ್ತ್ವವನ್ನು ಪ್ರತಿಬಿಂಬಿಸುವುದರಿಂದಲೇ ವೈದಿಕಸಾಹಿತ್ಯದಲ್ಲಿ ಈ ದೇವತೆಯ ನಿರ್ದಿಷ್ಟವಾದ ರೂಪಾದಿಗಳು ವರ್ಣಿತವಾಗಿ ಇರಲು ಸಾಧ್ಯವಾಗಿಲ್ಲ. ಆದಿತ್ಯರನ್ನು ಧಾರಣಮಾಡತಕ್ಕದ್ದೂ, ಆದಿತ್ಯರಿಂದಲೇ ಧರಿಸಲ್ಪಡತಕ್ಕದ್ದೂ, ಆದ ಈ ನಿತ್ಯತತ್ವವು ಆದಿತ್ಯರಿಗೆಲ್ಲಾ ಆಶ್ರಯರೂಪವಾಗಿದೆ. ಇದೇ ದಿವ್ಯಜ್ಯೋತಿಯು ಅವರೆಲ್ಲರ ಸಾರಭೂತವೂ ಆಗಿದೆ" ಎಂದು ಇದೇ ಪಂಡಿತನು ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ.

(Journal of the German Oriental Society Vol. 6. p. 68)

"'ಅನಂತ' ಎಂಬ ತತ್ವವನ್ನು ಪ್ರತಿಬಿಂಬಿಸುವ ಅದಿತಿ ದೇವತೆಯು ಋಷಿಗಳಿಂದ ದೃಷ್ಟವಾಗಿರುವ ದೇವತೆಗಳಲ್ಲೆಲ್ಲಾ ಅತ್ಯಂತ ಪ್ರಾಚೀನಳು. ಆದರೆ, ಕೇವಲ ಮಾನಸಿಕವಾದ ಭಾವಕಲ್ಪನೆಯಲ್ಲೇ ಅಮೂರ್ತರೂಪದಲ್ಲಿ ಚಿಂತಿತಳಾಗಿರತಕ್ಕ ತತ್ತ್ವವಾಗಿರದೇ, ಮೂರ್ತರೂಪದ ವಿಶ್ವತ್ವವನ್ನು ಒಳಗೊಂಡ ದೇವತೆಯಾಗಿದ್ದಾಳೆ. ಮಾನುಷಪ್ರತ್ಯಕ್ಷಕ್ಕೆ ಗೋಚರಳಾಗತಕ್ಕವಳೂ, ಅನಂತವಾದ ವಿಸ್ತೃತಿಯುಳ್ಳವಳೂ, ಪೃಥ್ವಿಗಿಂತಲೂ ಮೀರಿದವಳೂ, ಅಂತರಿಕ್ಷಾದಿ ಲೋಕಗಳಿಗೂ ಅತೀತಳೂ ಆಗಿದ್ದಾಳೆ ಈ ಅನಂತತ್ವವನ್ನು ಪ್ರತಿಬಿಂಬಿಸುವುದರಿಂದಲೇ ಅದಿತಿಯು ಅನೇಕ ವಿಧವಾದ ವಿಶೇಷಣಗಳಿಂದ ವರ್ಣಿತಳಾಗಿದ್ದಾಳೆ".

(Translation of the Rig-veda. I-230)

**3. ಅದಿತಿಯು ಆದಿತ್ಯರ ಮಾತೆ ಎಂದು ವರ್ಣಿಸಿರುವ ಪ್ರಕರಣಗಳು :—**

ಕೆಳಗೆ ಉದಾಹೃತವಾಗಿರುವ ವಾಕ್ಯಗಳಿಂದ ಅದಿತಿಯು, ವರುಣಾದಿ ದೇವತೆಗಳಿಗೆ ಮಾತೃವೆಂಬುದು ತಿಳಿಯುತ್ತದೆ. ಋಕ್ಸಂಹಿತಾವಾಕ್ಯಗಳೇ ಅಲ್ಲದೇ ಇತರ ಶ್ರುತಿಗಳೂ ಈ ಅಂಶವನ್ನು ತಿಳಿಸುತ್ತವೆ.

"ಸಂಪತ್ತುಗಳಿಗೆಲ್ಲಾ ಪ್ರಭುಗಳಾದ ಮಿತ್ರಾವರುಣರು ತಮ್ಮ ದಿವ್ಯಶಕ್ತಿಯನ್ನು ಪ್ರಕಾಶಪಡಿಸಲೆಂದು, ಜಗನ್ಮಾತೆಯೂ, ಮಹತ್ಸ್ವರೂಪವುಳ್ಳವಳೂ, ಪೂಜ್ಯಳೂ ಆದ ಅದಿತಿಯು ಮಿತ್ರಾವರುಣರನ್ನು ಹಡೆದಳು"

(೮-೨೫-೩)

"ಸಂಪದ್ಯುಕ್ತನಾದ ಮಿತ್ರನಿಗೂ, ಅರ್ಯಮನಿಗೂ, ಪವಿತ್ರಾತ್ಮನಾದ ವರುಣನಿಗೂ ಮಾತೆಯಾದ ಅದಿತಿಯು ನಮಗೆ ರಕ್ಷಣೆಯನ್ನು ನೀಡಲಿ.

(cf. ೧೦-೩೬-೩; ೧೦-೧೩೨-೬ ; ಅ. ವೇ. ೫-೧-೯) (೮-೪೭-೯)

೨-೨೭-೭ರಲ್ಲಿ 'ರಾಜಪುತ್ರಾ' ಎಂದರೆ ಜಗತ್ಪ್ರಭುಗಳಾದ ವರುಣಾದ್ಯಾದಿತ್ಯರೇ ಪುತ್ರಳಾಗಿ ಉಳ್ಳವಳು ಎಂದೂ; ೩-೪-೧೧ರಲ್ಲು "ಸುಪುತ್ರಾ" ಉತ್ತಮವಾದ ಪುತ್ರರುಳ್ಳವಳು ಎಂದೂ: ೮-೬೭-೧೧ರಲ್ಲು ಉಗ್ರಪುತ್ರಾ ಅತಿ

ಪ್ರಬಲವಾದ ಶಕ್ತಿಯುತರಾದ ಪುತ್ರರುಳ್ಳವಳು ಎಂದೂ ; ಅಥರ್ವವೇದದ ೩-೮-೨ ಮತ್ತು ೧೧-೧-೧೧ನೇ ಮಂತ್ರಗಳಲ್ಲಿ ಶೂರಪುತ್ರಾ ಎಂದೂ ನಿರ್ದಿಷ್ಟಳಾಗಿದ್ದಾಳೆ. ಅ. ವೇ. ೮-೯-೨೧ನೇ ಮಂತ್ರದಲ್ಲಿ " ಅಷ್ಟಯೋನೀರದಿತಿರಷ್ಟಪುತ್ರಾ " ಅದಿತಿಯು ಅಷ್ಟಯೋನಿಯುಳ್ಳವಳು ಮತ್ತು ಅಷ್ಟ ಪುತ್ರರುಳ್ಳವಳು ಎಂದು ಸ್ತುತಳಾಗಿದ್ದಾಳೆ. ಇದೇ ಅಥರ್ವವೇದದ ೮-೯೦-೧೫ ನೇ ಮಂತ್ರದಲ್ಲಿ ಆದಿತ್ಯರಿಗೂ, ಅದಿತಿಗೂ ಇರುವ ಸಂಬಂಧವನ್ನು ಕೊಂಚ ವ್ಯತ್ಯಸ್ತವಾಗಿ ತಿಳಿಸಿದೆ.

" ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ..................ಅದಿತಿಂ ವಧಿಷ್ಟ "
ಅದಿಯು ವಸುಗಳಿಗೆ ದುಹಿತೆಯೂ, ರುದ್ರರಿಗೆ ಮಾತೆಯೂ, ಆದಿತ್ಯರಿಗೆ ಸಹೋದರಿಯೂ ಆಗಿದ್ದಾಳೆಂದು ವರ್ಣಿಸಿದೆ. ಸಾಮವೇದದಲ್ಲಿ ಅದಿತಿಯ ಭ್ರಾತೃಗಳೂ, ಪುತ್ರರೂ ಸಹ ಪ್ರತ್ಯೇಕವಾಗಿ ಕೆಳಗೆ ಉದಾಹೃತವಾಗಿರುವ ವಾಕ್ಯದಲ್ಲಿ ತಿಳಿಸಿರುವಂತೆ ನಿರ್ದಿಷ್ಟರಾಗಿದ್ದಾರೆ.

" ತ್ವಷ್ಟಾ ನೋ ದೈವ್ಯಂ ವಚಃ...............ತ್ರಾಮಣಂ ವಚಃ "

(ಸಾ. ವೇ. ೧-೨೯೯)

ತ್ವಷ್ಟೃವೂ, ಪರ್ಜನ್ಯನೂ, ಬ್ರಹ್ಮಣಸ್ಪತಿಯೂ ನಮಗೆ ಆಶೀರ್ವಚನಗಳನ್ನು ಪಠಿಸಲಿ. ಅದಿತಿಯೂ ಸಹ ಅವಳ ಪುತ್ರರೊಡನೆಯೂ ಭಾತೃಗಳೊಡನೆಯೂ (ಪುತ್ರೈರ್ಭ್ರಾತೃಭಿಃ) ನಮಗೆ ರಕ್ಷಣಾವಾಕ್ಯಗಳನ್ನು ಪಠಿಸಲಿ.

**4. ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯಭಾವವಿದೆಯೆ ?**

೧೦-೬೩-೨ ನೇ ಋಕ್ಕಿನಲ್ಲಿ, ಉದಕ ಮತ್ತು ಪೃಥ್ವಿಗಳೊಡನೆ ಅದಿತಿಯೂ ದೇವಯೋನಿಯೆಂದು ವರ್ಣಿತಳಾಗಿದ್ದಾಳೆ. ಆ ಮಂತ್ರದ ಅರ್ಥವೇನೆಂದರೆ, " ಎಲೈ ದೇವತೆಗಳೇ, ನಿಮ್ಮ ನಾಮಗಳೆಲ್ಲವೂ ಪವಿತ್ರವಾದುವು ಮತ್ತು ಪೂಜ್ಯವಾದುವು. ಅದಿತಿಯ ಗರ್ಭದಲ್ಲಿ ಉತ್ಪನ್ನರಾದವರೂ, ಪೃಥ್ವಿಯ ಗರ್ಭದಲ್ಲಿ ಉತ್ಪನ್ನರಾದವರೂ ಮತ್ತು ಅಬ್ಜರೂ ಆದ ನೀವು ನಮ್ಮ ಪ್ರಾರ್ಥನೆಯನ್ನು ಕೇಳಿರಿ " ಎಂದಿದೆ.

[ಈ ವಿಭಾಗವು ದೇವತೆಗಳಲ್ಲಿ ದ್ಯುಲೋಕಸ್ಥರು, ಅಂತರಿಕ್ಷಸ್ಥರು ಮತ್ತು ಪೃಥಿವೀಸ್ಥರು ಎಂಬ ಮೂರು ವಿಭಾಗಾತ್ಮಕವಾಗಿರುತ್ತದೆ. (ಈ ವಿಭಾಗಕ್ರಮವನ್ನು ನಾವು ಹಿಂದೆ ೧-೧೩೯-೧೧ ನೇ ಮಂತ್ರವನ್ನು ಉದ್ಧರಿಸಿದಾಗ ವಿಮರ್ಶಿಸಿದೇವೆ). ಅಂತರಿಕ್ಷಸ್ಥರು ಎಂಬುದಕ್ಕೆ ಬದಲಾಗಿ ಉದಕದಿಂದ ಉತ್ಪನ್ನರಾದವರು ಎಂದು ಹೇಳಿರುವುದು ಒಂದು ವಿಶೇಷ. ಆದರೆ, ಈ ಸನ್ನಿವೇಶದಲ್ಲಿ ಮಾತ್ರವಲ್ಲದೇ, ೧೦-೪೯-೨ ರಲ್ಲೂ ಸಹ ಇದೇ ಪ್ರಯೋಗವಿರುತ್ತದೆ. " ದ್ಯುಲೋಕೋತ್ಪನ್ನರೂ, ಅಂತರಿಕ್ಷೋತ್ಪನ್ನರೂ ಮತ್ತು ಪೃಥಿವ್ಯುತ್ಪನ್ನರೂ ಆದ ಸಕಲ ದೇವತೆಗಳೂ ಸಹ ನನ್ನನ್ನೇ ಇಂದ್ರನೆಂದು ಪೂಜಿಸುತ್ತಾರೆ" ಎಂದು ಈ ವಿಭಾಗವಿದೆ (ಪ್ರಕೃತವಾದ ಈ ಎರಡು ಉದಾಹರಣೆಗಳಲ್ಲಿಯೂ ಸಹ ಅಪ್ ಎಂಬ ಶಬ್ದಕ್ಕೆ ಅಂತರಿಕ್ಷವೆಂದೇ ಅರ್ಥವನ್ನು ಹೇಳಬಹುದು). ಇದರಂತೆಯೇ, ೧೦-೬೫ ೯; ೨-೩೮-೧೧; ೧೦-೪೫-೧ ; ಮತ್ತು ೭-೩೫-೧೧ ಈ ಋಕ್ಕುಗಳಲ್ಲಿಯೂ ಇದೇ ವಿಭಾಗಗಳೂ ನಿಷ್ಕೃಷ್ಟವಾಗಿವೆ. ಆದರೆ, ೬-೫೦-೧೧ ಮತ್ತು ೭-೩೫-೧೪ ನೇ ಮಂತ್ರಗಳಲ್ಲಿ ದಿವ್ಯಾಃ, ಪಾರ್ಥಿವಾಸಃ, ಗೋಜಾತಾಃ, ಅಪ್ಯಾಃ ಎಂಬ ನಾಲ್ಕು ವಿಭಾಗಗಳಾಗಿರುತ್ತವೆ.]

೧೦-೬೩-೨ ರಂತೆಯೇ, ೧೦-೬೩-೩ ನೆಯ ಋಕ್ಕಿನಲ್ಲಿಯೂ ಈ ಅಂಶವನ್ನು ಗಮನಿಸಬಹುದು. "ಯಾವ ಆದಿತ್ಯರಿಗೆ ಮಾತೆಯಾದ ಪೃಥ್ವಿಯು ಮಾಧುರ್ಯೋಪೇತವಾದ ಕ್ಷೀರವನ್ನೂ, ಅದಿತಿರೂಪಳಾದ ದ್ಯುಲೋಕಾಧಿ

ದೇವತೆಯು ಅನ್ಮೃತವನ್ನೂ ಕೊಡುವರೋ ಅಂತಹ ವೃಷ್ಟಿಪ್ರದರೂ ಸತ್ಕರ್ಮಕಾರಕರೂ ಆದ ಆದಿತ್ಯರಿಗೆ ಸ್ತುತಿಗಳನ್ನರ್ಪಿಸಿರಿ '' ಎಂದಿರುವಾಗ ಅದಿತಿಃ ಎಂಬ ಪದವು ದ್ಯೌಃ ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲದೇ, ೫-೫೯-೮ನೇ ಋಕ್ಕಿನಲ್ಲಿಯೂ ಸಹ " ಮಿಮಾತು ದ್ಯೌರದಿತಿರ್ವೀತಯೇ '' ಎಂದು ಪ್ರಯೋಗವಿದೆ. ಇಲ್ಲಿ ಅದಿತಿ ಶಬ್ದಕ್ಕೆ ಸಾಯಣರೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ. ದ್ಯೌಃ ಅಂತರಿಕ್ಷಂ ; ಕೀದೃಶೀ। ಅದಿತಿಃ ಅದೀನಾ। ದ್ಯೌಃ ಎಂದರೆ ಅಂತರಿಕ್ಷ ಮತ್ತು ಅದೀನಳಾದ ಅಂತರಿಕ್ಷವೆಂದು ಒಂದರ್ಥವನ್ನೂ, ಎರಡನೆಯದಾಗಿ, ಅದಿತಿಃ-ಭೂಮಿಶ್ಚ ಎಂದು ಅದಿತಿ ಶಬ್ದಕ್ಕೆ ಭೂಮಿ ಎಂಬ ಇನ್ನೊಂದರ್ಥವನ್ನೂ ಹೇಳಿದ್ದಾರೆ. ಇಂತಹ ಸಂದರ್ಭಗಳು ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯವನ್ನು ತೋರಿಸುತ್ತವೆ. ಆದರೆ,

" ದೇವಾँ ಆದಿತ್ಯाँ ಅದಿತಿಂ ಹವಾಮಹೇ ಯೇ ಪಾರ್ಥಿವಾಸೋ ದಿವ್ಯಾಸೋ ಅಪ್ಸು॒ಯೇ ''
(೧೦-೬೫-೯)

ಎಂಬ ಈ ಮಂತ್ರದಲ್ಲಿ ಆದಿತ್ಯರು, ಅವರ ಮಾತೆಯಾದ ಅದಿತಿ ಇವರಲ್ಲದೇ ಪೃಥಿವ್ಯುತ್ಪನ್ನರೂ, ದ್ಯುಲೋಕೋತ್ಪನ್ನರೂ ಆದ ದೇವತೆಗಳು ಎಂದು ಬೇರೆ ಬೇರೆ ಹೇಳಿದೆ. ಅದಿತಿ ಮತ್ತು ದ್ಯುಲೋಕ ಇವೆರಡೂ ಭಿನ್ನವೆಂದು ಈ ಸಂದರ್ಭದಲ್ಲಿ ತಿಳಿಸಿದೆ.

### 5. ಅದಿತಿಯು ಪೃಥ್ವಿಗಿಂತಲೂ ಬೇರೆಯಾದ ದೇವತೆ ಎಂಬುದಕ್ಕೆ ಆಧಾರಗಳು.

ಮೇಲೆ ಉದ್ಧರಿಸಿರುವ ಕೆಲವು ವಾಕ್ಯಗಳಲ್ಲಿ ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯವನ್ನು ಹೇಳಿದ್ದರೂ ಸಹ, ಸಂಹಿತೆಯ ಉಳಿದ ಭಾಗಗಳಲ್ಲೂ ಸಹ ಇದೇ ತಾದಾತ್ಮ್ಯಸಂಬಂಧವನ್ನು ತೋರಿಸಿದೆಯೆಂದು ಹೇಳಲಾಗುವುದಿಲ್ಲ. ಒಂದೊಂದು ಸಲ ಪೃಥ್ವಿಯೂ, ಅದಿತಿಯೂ ಒಂದೇ ಎಂದು ತೋರಿಸುವ ಸನ್ನಿವೇಶಗಳೂ ಇವೆ. ಆದರೆ ಇದಕ್ಕೆ ವ್ಯತ್ಯಸ್ತವಾದ ವರ್ಣನೆಗಳೂ ಇರುತ್ತವೆ. ನಿರುಕ್ತಪಾಠಗಳಂತೆ ಒಂದು ಸಲ ಪೃಥಿವಿಗೂ ಇನ್ನೊಂದು ಸಲ ದ್ಯಾವಾಪೃಥಿವಿಗಳಿಗೂ ಪರ್ಯಾಯಪದವಾಗಿರುತ್ತದೆಂದು ಮೇಲೆ ತಿಳಿಸಿದೆ. " ಉತ್ತಮವಾದ ಕರ್ಮವನ್ನಾಚರಿಸುವ ಪುತ್ರರೊಡಗೂಡಿ ಅದಿತಿರೂಪಳಾದ ಪೃಥ್ವಿಯು ಅಗ್ನಿಯ ಅನುಗ್ರಹದಿಂದ ಸ್ಥಿತಳಾಗಿದ್ದಾಳೆ '' ಇತ್ಯಾದಿಯಾಗಿ (೧-೭೨-೯) ಒಂದೆರಡು ಸನ್ನಿವೇಶಗಳಲ್ಲಿ ಅದಿತಿ ಶಬ್ದವು ಪೃಥ್ವಿಗೆ ವಿಶೇಷಣವಾಗಿರುತ್ತದೆ. (ಅ. ವೇ. ೧೩-೧-೩೮) ಆದರೆ, ಇತರ ಅನೇಕ ಸಂದರ್ಭಗಳಲ್ಲಿ ಪೃಥ್ವಿಗಿಂತಲೂ ಭಿನ್ನಳಾದ ದೇವತೆಯೆಂಬುದು ನಿಷ್ಕೃಷ್ಟವಾಗಿ ತಿಳಿಯುತ್ತದೆ. ಉದಾಹರಣೆಗೆ

" ದ್ಯಾವಾಪೃಥಿವಿಗಳೂ, ಅಪ್ಪುಗಳೂ, ಸನಕ್ಷತ್ರನಾದ ಸೂರ್ಯನೂ ನಮ್ಮ ಪ್ರಾರ್ಥನೆಯನ್ನು ಕೇಳಲಿ '' ಎಂದು ೩-೫೪-೧೯ ನೇ ಮಂತ್ರದಲ್ಲಿ ಪ್ರಾರ್ಥಿಸಿ ಪುನಃ ಅದಕ್ಕೆ ಮುಂದಿನ ಎಂದರೆ, ೩-೫೪-೨೦ ನೇ ಋಕ್ಕಿನಲ್ಲಿ, " ಆದಿತ್ಯರೊಡಗೂಡಿದ ಅದಿತಿಯು ನಮ್ಮ ಪ್ರಾರ್ಥನೆಯನ್ನು ಕೇಳಲಿ '' ಎಂದು ಪ್ರಾರ್ಥಿಸಿದೆ. ಆದುದರಿಂದ ಅದಿತಿಯು ಪೃಥಿವಿಗಿಂತಲೂ ಭಿನ್ನಳು ಎಂಬ ವಿಷಯದಲ್ಲಿ ಸಂಶಯವಿಲ್ಲ. ಇನ್ನೂ ಕೆಲವು ಉದಾಹರಣೆಗಳನ್ನು ತೆಗೆದುಕೊಂಡರೆ,

" ಇಂದ್ರನನ್ನೂ, ಅಗ್ನಿಯನ್ನೂ, ಮಿತ್ರನನ್ನೂ, ವರುಣನನ್ನೂ, ಅದಿತಿಯನ್ನೂ, ಅಂತರಿಕ್ಷವನ್ನೂ, ಪೃಥಿವಿಯನ್ನೂ, ದ್ಯುಲೋಕವನ್ನೂ, ಮರುತ್ತುಗಳನ್ನೂ, ಪರ್ವತಗಳನ್ನೂ, ಅಪ್ಪುಗಳನ್ನೂ ನಾನು ಪ್ರಾರ್ಥಿಸಿ ಕರೆಯುತ್ತೇನೆ '' (೫-೪೬-೩)

" ಪಿತೃರೂಪನಾದ ದ್ಯುಲೋಕವೇ, ಉಪಕಾರಕಳಾದ ಪೃಥ್ವಿಯೇ, ಭ್ರಾತೃರೂಪನಾದ ಅಗ್ನಿಯೇ, ವಸುಗಳೇ, ನಮಗೆ ಸುಖದಾಯಕರಾಗಿರಿ. ಎಲೈ ಆದಿತ್ಯರೇ, ಅದಿತಿದೇವಿಯೇ, ನಮಗೆ ಪೂರ್ಣವಾದ ರಕ್ಷಣೆಯನ್ನು ನೀಡಿರಿ" (೬-೫೧-೫)

" ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ, ದ್ಯುಲೋಕವೂ ನಮಗೆ ಸಂತೋಷಕಾರಕವಾಗಲಿ" (೯-೯೭-೫೮)

" ಪ್ರಾಜ್ಞರೂ, ವಿವೇಕಿಗಳೂ ಆದ ದ್ಯಾವಾಪೃಥಿವಿಗಳು ನಮ್ಮನ್ನು ರಕ್ಷಿಸಲಿ. ಮಿತ್ರಾವರುಣರ ಮಾತೆಯಾದ ಅದಿತಿಯೂ ನಮ್ಮನ್ನು ಆಪತ್ತುಗಳಿಂದ ರಕ್ಷಿಸಲಿ" . (೧೦-೩೬-೨, ೩)

" ದ್ಯಾವಾಪೃಥಿವಿಗಳೂ, ಯಮನೂ, ಅದಿತಿಯೂ, ತ್ವಷ್ಟೃವೂ...............ವಿಷ್ಣುವೂ ನಮ್ಮ ಪೂಜೆಗೆ ಅರ್ಹರಾಗಿರುತ್ತಾರೆ" (೧೦-೯೨-೧೧)

" ಅತ್ಯುತ್ತಮವಾದ ರಕ್ಷಣೆಯನ್ನು ನೀಡತಕ್ಕ ಪೃಥ್ವಿಯನ್ನೂ, ಪಾಪರಹಿತವಾದ ದ್ಯುಲೋಕವನ್ನೂ, ಮಾರ್ಗದರ್ಶಕಳಾದ ಅದಿತಿಯನ್ನೂ.........ನಾವು ಆಶ್ರಯಿಸೋಣ" (೧೦-೬೩-೧೦)

ಇತ್ಯಾದಿ ವಾಕ್ಯಗಳಲ್ಲಿ ಪೃಥ್ವಿಗೂ ಅದಿತಿಗೂ ಇರತಕ್ಕ ಭಿನ್ನತೆಯು ಸ್ಪಷ್ಟವಾಗಿರುತ್ತದೆ. ಇದೇ ಅಭಿಪ್ರಾಯ ವನ್ನು ಸಮರ್ಥಿಸುವಂತೆ ವಾಜಸನೇಯ ಸಂಹಿತೆಯಲ್ಲಿಯೂ ಸಹ ಈ ರೀತಿ ಪ್ರಾರ್ಥನೆಯಿರುತ್ತದೆ:—" ಪೃಥಿವೀ ಚ ಮೇऽದಿತಿಶ್ಚ ಮೇ "....ಪೃಥ್ವಿಯೂ, ಅದಿತಿಯೂ, ದಿತಿಯೂ....ನನ್ನನ್ನು ತೃಪ್ತಿಗೊಳಿಸಲಿ [ವಾ. ಸಂ. ೧೮-೨೨] ಎಂದಿದೆ. ಅಥರ್ವವೇದದಲ್ಲಿಯೂ ಸಹ; ಭೂಮಿರ್ಮಾತಾ ಅದಿತಿರ್ನೋ ಜನಿತ್ರಂ........" ಮಾತೃರೂಪಳಾದ ಪೃಥ್ವಿಯೂ, ಉತ್ಪತ್ತಿಹೇತುವಾದ ಅದಿತಿಯೂ ನಮ್ಮನ್ನು ರಕ್ಷಿಸಲಿ ಎಂದಿದೆ (ಅ. ವೇ. ೬-೧೨೦-೨).

ಆದರೆ ಕೆಲವು ಬ್ರಾಹ್ಮಣವಾಕ್ಯಗಳಲ್ಲಿ ಅದಿತಿಗೂ, ಪೃಥಿವಿಗೂ ನಿಷ್ಕೃಷ್ಟವಾದ ತಾದಾತ್ಮ್ಯವನ್ನೇ ಹೇಳಿದೆ. ಉದಾಹರಣೆಗೆ :—

" ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ಪ್ರತಿಷ್ಠಾ " (ಶ. ಬ್ರಾ. ೨-೨-೧-೧೯)

ಈ ಪೃಥಿವಿಯೇ ಅದಿತಿಯು ; ಇವಳೇ ಜಗತ್ತಿನ ಧಾರಕಳು.

" ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ದೇವಾನಾಂ ಪತ್ನೀ " (ಶ. ಬ್ರಾ. ೫-೩-೧-೪)

ಈ ಪೃಥ್ವಿಯೇ ಅದಿತಿಯು. ಅವಳೇ ಪೂಜ್ಯಳಾದ ದೇವಪತ್ನಿಯು. ಇತ್ಯಾದಿಯಾಗಿರತಕ್ಕ ಬ್ರಾಹ್ಮಣವಾಕ್ಯಗಳೂ ಇರುವುದರಿಂದ ಅದಿತಿ ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಆಯಾ ಸಂದರ್ಭೋಚಿತವಾಗಿ ಮಾತ್ರ ಹೇಳಬೇಕು.

ಅದಿತಿಯು ಅಂತರಿಕ್ಷಸ್ಥವಾದ ದೇವತೆಗಳಿಗೆಲ್ಲಾ ಮುಖ್ಯಳು ಎಂದು ಯಾಸ್ಕರು ಸೂಚಿಸಿರುವುದನ್ನು ಹಿಂದೆ ತಿಳಿಸಿದೆ. ಆದರೆ ಅದೇ ಯಾಸ್ಕರು ಅದಿತಿಪುತ್ರರಾದ ಆದಿತ್ಯರನ್ನು ದ್ಯುಲೋಕಸ್ಥರಾದ ದೇವತೆಗಳೊಡನೆ ಸೇರಿಸಿ ಅವರ ಮಾತೆಯಾದ ಅದಿತಿಯನ್ನು ಮಾತ್ರ ಅಂತರಿಕ್ಷಸ್ಥರಾದ ದೇವತೆಗಳೊಡನೆ ಸೇರಿಸದಿರುವುದು ಅಷ್ಟು ಸಮಂಜಸ ವಾಗಿ ಕಾಣುವುದಿಲ್ಲ. ಆದರೆ, ಯಾಸ್ಕರು ನಿಷ್ಕೃಷ್ಟವಾದ ವರ್ಗೀಕರಣದಲ್ಲಿ ಪ್ರಯತ್ನಿಸಿದ್ದಾರೆಂದು ಹೇಳಲಾಗುವುದಿಲ್ಲ.

**6. ಅದಿತಿ ಮತ್ತು ದಿತಿ:—**

" ಎಲೈ ಮಿತ್ರಾವರುಣರೇ, ಉಷಃಕಾಲದಲ್ಲಿ ನಿಮ್ಮ ಸುವರ್ಣನಿರ್ಮಿತವಾದ ರಥವನ್ನು ಹತ್ತಿ ಅದಿತಿಯನ್ನೂ ದಿತಿಯನ್ನೂ ವೀಕ್ಷಿಸಿರಿ " (ಋ. ಸಂ. ೫-೬೨-೮)

ಎಂಬ ಅರ್ಥವನ್ನು ಕೊಡುವ 'ಹಿರಣ್ಯರೂಪಂ' ಎಂಬ ಮಂತ್ರದಲ್ಲಿ ಅದಿತಿಯು ದಿತಿಯೊಂದಿಗೆ ನಿರ್ದಿಷ್ಟಳಾಗಿದ್ದಾಳೆ. ಅದಿತಿ—ದಿತಿ ಈ ಎರಡು ಪದಗಳೂ ಸಹ ಒಂದಕ್ಕೊಂದಕ್ಕೆ ವ್ಯತ್ಯಾಸವನ್ನು ತೋರಿಸುವ ಅರ್ಥದಾಯಕವಾಗಿರುತ್ತದೆ. ಅಥವಾ ಒಂದರ ನ್ಯೂನತೆಯನ್ನು ಇನ್ನೊಂದು ಪೂರ್ಣಗೊಳಿಸುವುದಾಗಿರುತ್ತದೆ. ಈ ರೀತಿ ಒಂದರ್ಥದಲ್ಲಿ ಪರಸ್ಪರ ವಿರೋಧಸೂಚಕವೂ, ಇನ್ನೊಂದರ್ಥದಲ್ಲಿ ಪರಸ್ಪರ ಪರಿಪೂರಕವೂ ಆದ ಈ ಎರಡು ದೇವತೆಗಳ ಸಂಬಂಧವನ್ನೂ ಮತ್ತು ಭಿನ್ನತೆಯನ್ನೂ ಮೇಲಿನ ಮಂತ್ರವು ಸೂಚಿಸುತ್ತದೆ

[ಇದೇ ಪದಗಳು ವಾಜಸನೇಯಸಂಹಿತೆಯಲ್ಲಿಯೂ ಸಹ ಪ್ರಯುಕ್ತವಾಗಿವೆ [೧೦-೧೬]. ಇದಕ್ಕೆ ಭಾಷ್ಯಕಾರರು ಆಧಿದೈವಾರ್ಥದಲ್ಲಿ ತಾತ್ಪರ್ಯವನ್ನು ಹೇಳಿದ್ದಾರೆ. ಅದಿತಿ ಶಬ್ದಕ್ಕೆ ದಾರಿದ್ರ್ಯರಹಿತನೆಂದೂ (ಅದೀನ) ಮತ್ತು ದಿತಿ ಶಬ್ದಕ್ಕೆ ದರಿದ್ರನೆಂದೂ (ದೀನ) ಅರ್ಥಮಾಡಿದ್ದಾರೆ. ಎಂದರೆ ವಿಹಿತಾನುಷ್ಠಾತನಾದವನು ಅದಿತಿಯು ; ನಾಸ್ತಿಕ ವರ್ತನೆಯುಳ್ಳವನು ದಿತಿಯು. ಈ ರೀತಿಯ ವ್ಯತ್ಯಾಸವನ್ನು ತೋರಿಸಿದೆ]

ಸಾಯಣರು ಋ. ಸಂ. ೫-೬೨-೮ನೇ ಮಂತ್ರದ ಭಾಷ್ಯದಲ್ಲಿ ಅದಿತಿಯೆಂದರೆ ಅಖಂಡನೀಯವಾದ ಭೂಮಿಯೆಂದೂ, ದಿತಿಯೆಂದರೆ ಖಂಡನೀಯವಾದ ಎಂದರೆ ವೈಯಕ್ತಿಕವಾದ ಪ್ರಜಾದಿಗಳುಳ್ಳ ಭೂಮಿಯೆಂದೂ ಅರ್ಥಮಾಡಿದ್ದಾರೆ. Roth ಎಂಬ ಜರ್ಮನ್ ಪಂಡಿತನು ಅದಿತಿಶಬ್ದಕ್ಕೆ ನಿತ್ಯವೆಂದೂ, ದಿತಿ ಶಬ್ದಕ್ಕೆ ಅನಿತ್ಯವೆಂದೂ ಅರ್ಥಮಾಡಿದಾನೆ.

(Journal of German Oriental Society. vol. VI p. 71)

ಒಟ್ಟನಲ್ಲಿ ಎಲ್ಲಾ ಸನ್ನಿವೇಶಗಳನ್ನೂ ಪರಿಶೀಲಿಸಿದರೆ, ಅದಿತಿಯು ಅಂತರಿಕ್ಷವನ್ನೂ, ದಿತಿಯು ಪೃಥ್ವಿಯನ್ನೂ ಪ್ರತಿಬಿಂಬಿಸುವ ದೇವತೆಗಳೆನ್ನಬಹುದೆಂದು ತೋರುತ್ತದೆ. ಪ್ರಕೃತಿಯ ಎಲ್ಲಾ ಅವಸ್ಥೆಗಳನ್ನೂ ಒಳಗೊಂಡಿರುವ ಪರಿಪೂರ್ಣಾವಸ್ಥೆಯನ್ನು ಈ ಎರಡು ತತ್ತ್ವಗಳೂ ಸೇರಿ ಪ್ರತಿಬಿಂಬಿಸುವುವು ಎಂದೂ ಹೇಳಬಹುದು.

ಋ. ಸಂ. ೪-೨-೧೧ ನೇ ಮಂತ್ರದಲ್ಲಿ ಪ್ರಯುಕ್ತವಾಗಿರುವ ದಿತಿಶಬ್ದಕ್ಕೆ ಸಾಯಣರು ಉದಾರಿಯಾದ ದಾನಿಯೆಂದೂ, ಅದಿತಿ ಶಬ್ದಕ್ಕೆ ದಾನಮಾಡದಿರುವ ಲೋಭಿಯೆಂದೂ ಅರ್ಥಮಾಡಿದ್ದಾರೆ. ದಿತಿಂ—ದಾತಾರಂ ; ಅದಿತಿಂ—ಅದಾತುಃ ಪಂಚಮ್ಯರ್ಥೇ ದ್ವಿತೀಯಾ । ಎಂದು ವಿವರಿಸಿದೆ.

ಅದಿತಿಯಿಲ್ಲದೇ, ಕೇವಲ ದಿತಿಪ್ರಯೋಗವಿರುವ ಸಂದರ್ಭಗಳೂ ಕೆಲವಿವೆ. ಉದಾಹರಣೆಗೆ—

"ಅಗ್ನಿಯೇ, ಪೂಜ್ಯರಾದ ಸವಿತೃ ಮತ್ತು ಭಗದೇವತೆಗಳೇ, ನಮಗೆ ಪ್ರಖ್ಯಾತಿಯನ್ನೂ ಸಂತತಿಯನ್ನೂ ಅನುಗ್ರಹಿಸಿರಿ. ದಿತಿಯೂ ಸಹ ನಮ್ಮ ಅಪೇಕ್ಷಿತವಾದ ವಸ್ತುಗಳನ್ನು ಅನುಗ್ರಹಿಸಿ ಕೊಡುತ್ತಾಳೆ" (೭-೧೫-೧೨)

ಎಂಬರ್ಥವನ್ನು ಕೊಡುವ 'ತ್ವಮಗ್ನೇ' ಎಂಬ ಮಂತ್ರದಲ್ಲಿ ದಿತಿ ಶಬ್ದಕ್ಕೆ ಸಾಯಣರು ದೇವಿಯೆಂಬ ಅರ್ಥವನ್ನು ಮಾತ್ರ ಹೇಳಿದ್ದಾರೆ. ಇಲ್ಲಿ ದಿತಿಯು ಅದಿತಿಯೊಡನೆ ಸೇರಿಲ್ಲ. ಈ ಸಂದರ್ಭದಲ್ಲಿ ಆಂಗ್ಲ ಅಥವಾ ಜರ್ಮನ್

ಪಂಡಿತರು ದಿತಿಶಬ್ದಕ್ಕೆ ತಮ್ಮದೇ ಆದ ಅರ್ಥವನ್ನು ತಮ್ಮ ಕಲ್ಪನೆಗನುಸಾರವಾಗಿ ಸೇರಿಸಿದ್ದಾರೆ. ಉದಾಹರಣೆಗೆ Roth ಎಂಬುವನು "ದಿತಿಯೆಂದರೆ ಔದಾರ್ಯವನ್ನಾಗಲಿ ಅಥವಾ ಸಂಪದ್ವೃದ್ಧಿಯನ್ನಾಗಲಿ ಪ್ರತಿಬಿಂಬಿಸುವ ದೇವತಾ ವಿಶೇಷ"ವೆಂದು ಹೇಳಿದ್ದಾನೆ. Max Muller ಎಂಬುವನು "ಈ ಸಂದರ್ಭದಲ್ಲಿ ಅದಿತಿ ಪದವೇ ದಿತಿಯಾಗಿ ಪಾಠಭೇದದಿಂದ ಪರಿವರ್ತಿತವಾಗಿದೆ"ಯೆಂದೂ ತಿಳಿಸಿದ್ದಾನೆ. ಅ. ವೇ. ೧೫-೬-೭; ೧೫-೧೮-೪; ವಾ. ಸಂ. ೧೮-೨೨. ಈ ಮಂತ್ರಗಳಲ್ಲಿ ದಿತಿ ಮತ್ತು ಅದಿತಿಯರು ಪ್ರತ್ಯೇಕ ದೇವತೆಗಳೆಂದು ನಿಷ್ಕೃಷ್ಟವಾಗಿ ತಿಳಿಸಿದೆ. ಅ. ವೇ. ೭-೭-೧ರಲ್ಲಿ ದಿತಿ ಪುತ್ರರಾರು ಮತ್ತು ಅದಿತಿ ಪುತ್ರರಾರು ಎಂಬುದನ್ನು ನಿರ್ದೇಶಿಸಿದೆ. ಈ ದಿತಿಪುತ್ರರೇ ಮುಂದೆ ಪುರಾಣಾದಿಗಳಲ್ಲಿ ದೈತ್ಯರೆಂದೂ, ದೇವತೆಗಳ ಶತ್ರುಗಳೆಂದೂ ಪರಿಗಣಿತರಾಗಿದ್ದಾರೆ.

**7. ವಿಶ್ವಪ್ರಕೃತಿಯನ್ನು ಪ್ರತಿಬಿಂಬಿಸುವ ದೇವತಾತತ್ತ್ವವೇ ಅದಿತಿಯಾಗಿರಲು ಸಾಧ್ಯ.**

ವಿಶ್ವವ್ಯಾಪಕವಾದ ಪ್ರಕೃತಿಯನ್ನೇ ಅದಿತಿಯು ಪ್ರತಿಬಿಂಬಿಸುತ್ತಾಳೆ ಎಂದು ತಿಳಿಸುವ ಮಂತ್ರಗಳೂ ಇರುತ್ತವೆ. ದ್ಯುಲೋಕಸ್ಥವೂ, ಅಂತರಿಕ್ಷಸ್ಥವೂ ಆದ ಯಾವ ಸಕಲ ವಸ್ತುಗಳುಂಟೋ, ದೈವೀ ಮತ್ತು ಮಾನುಷ ಎಂಬ ಯಾವ ಯಾವ ಭೂತಗಳುಂಟೋ, ಭೂತ, ಭವಿಷ್ಯತ್ತು ಮತ್ತು ವರ್ತಮಾನಾದಿಗಳಿಗೆಲ್ಲಾ ಸೇರಿದ ಯಾವ ತತ್ತ್ವವಿಶೇಷವುಂಟೋ, ಅವೆಲ್ಲಕ್ಕೂ ಅದಿತಿಯೇ ಮೂಲಳು ಮತ್ತು ಅವಳೇ ಸರ್ವಾತ್ಮಳಾಗಿದ್ದಾಳೆ.

"ಅದಿತಿರ್ದ್ಯೌರದಿತಿರಂತರಿಕ್ಷಂ..............................ಅದಿತಿರ್ಜನಿತ್ವಂ"

(ಋ. ಸಂ. ೧-೮೯-೧೦)

ಅಖಂಡಳಾದ ಅದಿತಿಯು ಸಕಲ ವಿಶ್ವಕ್ಕೂ ಜನ್ಮದಾತೆಯು. ಅವಳೇ ಜಗಜ್ಜನನಿಯು, ಅವಳೇ ಜಗಜ್ಜನಕಳು. ಉತ್ಪನ್ನವಾದ ಸಕಲ ವಸ್ತುವೂ ಅವಳೇ. ಅವಳೇ ಎಲ್ಲವಕ್ಕೂ ಉತ್ಪತ್ತಿಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದರಿಂದ ಕೂಡಿದ ಐದುಜಾತಿಯ ಜನರೂ ಅವಳೇ. ದೇವಗಂಧರ್ವಾದಿಗಳೂ ಅವಳೇ. ಅದಿತಿಯೇ ಸಕಲ ದೇವತೆಗಳು. ಅವಳೇ ಪ್ರಕಾಶಮಾನವಾದ ಸ್ವರ್ಗವು. ಅವಳೇ ಅಂತರಿಕ್ಷವು. ಅವಳೇ ಸಕಲ ವಿಶ್ವವು- ಅವಳೇ ವಿಶ್ವ ನಿಯಾಮಕಳು.

ಸಾಯಣರು ಈ ವಾಕ್ಯಕ್ಕೆ ಭಾಷ್ಯವನ್ನು ಹೇಳುವಾಗ "ಇಲ್ಲಿ ಅದಿತಿಶಬ್ದಕ್ಕೆ ಪೃಥ್ವಿಯೆಂದಾಗಲಿ ಅಥವಾ ದೇವಮಾತೆಯೆಂದಾಗಲಿ ಅರ್ಥ" ಎಂದು ತಿಳಿಸಿ ಅವಳ ವಿಶ್ವವ್ಯಾಪಕತ್ವವನ್ನು ವಿವರಿಸಿದ್ದಾರೆ. **ಅದಿತಿರದೀನಾ ಅಖಂಡನೀಯಾ ವಾ ಪೃಥ್ವೀ ದೇವಮಾತಾ ವಾ । ..........ಏವಂ ಸಕಲಜಗದಾತ್ಮನಾ ಆದಿತಿಃ ಸ್ತೂಯತೇ** ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ (**ಅದಿತಿರದೀನಾ ದೇವಮಾತಾ**) ಮಹಾತ್ಮಳಾದ ದೇವಮಾತೆಯೆಂದರ್ಥಮಾಡಿದ್ದಾರೆ. (ನಿ. ೪-೨೨) ಮೇಲೆ ಉದ್ಧೃತವಾಗಿರುವ ೧-೮೯-೧೦ನೇ ಮಂತ್ರದಲ್ಲಿ ಅವಳ ಮಾಹಾತ್ಮ್ಯವೂ ವಿವಿಧವಾದ ರೂಪಪ್ರಕಾಶನವೂ ವಿವೃತವಾಗಿದೆ.

"**ಸ್ವಯಂಭು ಬ್ರಹ್ಮ ಪರಮಂ ತಪೋ ಯತ್ । ಸ ಏವ ಪುತ್ರಃ ಸ ಪಿತಾ ಸ ಮಾತಾ**" ಸ್ವಯಂಭುವಾದ ಪರಬ್ರಹ್ಮನೇ ಪರಮಪವಿತ್ರವಾದ ತಪಸ್ಸು. ಆತನೇ ಪುತ್ರನು, ಆತನೇ ಮಾತೃವು, ಪಿತೃವು ಇತ್ಯಾದಿಯಾಗಿ ಯಾವ ರೀತಿ ಬ್ರಹ್ಮನಿಗೆ ಸರ್ವಾತ್ಮತ್ವವೂ ವಿಶ್ವವ್ಯಾಪಕತ್ವವೂ ವರ್ಣಿತವಾಗಿವೆಯೋ (ತೈ. ಬ್ರಾ. ೩-೧೨-೩-೧) ಅದೇ ರೀತಿಯಲ್ಲಿ ಈ ಮಂತ್ರದಲ್ಲಿ ಅದಿತಿಯು ವರ್ಣಿತಳಾಗಿದ್ದಾಳೆ.

ಅದಿತಿತತ್ತ್ವದ ಮಾಹಾತ್ಮ್ಯವನ್ನರಿಯಲು ಇನ್ನೊಂದು ಬಹು ಮುಖ್ಯವಾದ ಸನ್ನಿವೇಶವನ್ನು ಪರಿಶೀಲಿಸಬಹುದು. ಆ ಮಂತ್ರದ ತಾತ್ಪರ್ಯವು ಈ ರೀತಿಯಲ್ಲಿದೆ—

" ದೇವತೆಗಳಲ್ಲಿ ಯಾರು ಶ್ರೇಷ್ಠರು? ಯಾವ ದೇವನನ್ನು ನೆನೆದರೆ ನನ್ನ ಈ ಕಷ್ಟವು ಪರಿಹಾರವಾಗುತ್ತದೆ? ನನ್ನ ತಂದೆಯನ್ನೂ ತಾಯಿಯನ್ನೂ ಯಾವಾಗ ನೋಡುವೆನು ? (೧-೨೪-೧)

ಐತರೇಯ ಬ್ರಾಹ್ಮಣವಲ್ಲಿ ಇದೇ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳನ್ನು ಉದ್ಧರಿಸಿ ಈ ಮಂತ್ರಗಳು ಶುನಃಶೇಫನಿಂದ ಪಠಿತವಾದವೆಂದು ತಿಳಿಸಿದೆ. ಈ ಸನ್ನಿವೇಶಕ್ಕೂ ಶುನಃಶೇಫನಿಗೂ ನಿಕಟವಾದ ಸಂಬಂಧವಿದೆಯೇ ಇಲ್ಲವೇ ಎಂಬುದರ ವಿಷಯದಲ್ಲಿ ಕೆಲವು ಪಂಡಿತರಲ್ಲಿ ಅಭಿಪ್ರಾಯಭೇದವಿದೆ. ಅದು ಇಲ್ಲಿ ಅಷ್ಟು ಮುಖ್ಯವಲ್ಲ. ಯಾರು ಈ ಮಂತ್ರವನ್ನು ಪಠಿಸಿದ್ದರೂ ಆಪತ್ತಿನಲ್ಲಿ ಸಿಕ್ಕಿರುವ ಪುರುಷನು ಆಪತ್ತಿನಿಂದ ಪಾರಾಗಬೇಕೆಂಬ ಬಯಕೆಯಿಂದ ಪಠಿಸತಕ್ಕ ಮಂತ್ರವಾಗಿದೆ.

8. ಅದಿತಿಯು ಪಾಪವನ್ನು ಕ್ಷಮಿಸಕ್ಕ ದೇವತೆ :—

Benfey ಎಂಬ ಪಂಡಿತನು ಇದೇ ಮೇಲೆ ಉದ್ಧರಿಸಿದ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳಲ್ಲಿ ಅದಿತಿ ಶಬ್ದಕ್ಕೆ ಅರ್ಥವನ್ನು ಹೇಳುವಾಗ ಈ ಪದಕ್ಕೆ ಪಾಪರಾಹಿತ್ಯವೆಂಬರ್ಥವನ್ನು ತಿಳಿಸಿದ್ದಾನೆ. (Orient and Occident I 33). ಈತನು ಹೇಳಿರುವ ತಾತ್ಪರ್ಯವು ಒಂದು ದೃಷ್ಟಿಯಿಂದ ಸಮಂಜಸವಾಗಿದೆ. ಅದಿತಿಯು ಪಾಪನಾಶಕಳು ಎಂಬುದು ಮಾತ್ರ ಪ್ರಸಿದ್ಧವಾದ ವಿಷಯವಾಗಿದೆ. ಪಾಪರಹಿತಳು ಎಂಬುದೂ ಅನಾಗಸ ಇತ್ಯಾದಿ ವಿಶೇಷಣಗಳಿಂದ ವಿವೃತವಾಗಿದೆ. ಆದುದರಿಂದಲೇ ಅವಳನ್ನು ನಿರ್ದೇಶಿಸಿದ ಪ್ರಾರ್ಥನೆಯೂ ಈ ರೀತಿಯಿರುತ್ತದೆ.

" ಎಲೈ ವರುಣನೇ, ನನ್ನ ಶಿರೋಭಾಗದಲ್ಲಿರುವುದೂ, ಅಧಃಪ್ರದೇಶದಲ್ಲಿರುವುದೂ ಆದ ಎಲ್ಲಾ ಬಂಧನಗಳನ್ನೂ ಬಿಡಿಸು. ನಾವು ಅದಿತಿಯ ವಿಷಯದಲ್ಲಿ ಪಾಪರಹಿತರಾಗಿರೋಣ " (೧-೨೪-೧೫)

ಹೀಗೆಯೇ ಅದಿತಿಯ ಅನುಗ್ರಹದಿಂದ ಲಭಿಸತಕ್ಕ ಪಾಪರಾಹಿತ್ಯವೂ ಆತ್ಮಶುದ್ಧಿಯೂ ವಿವೃತವಾಗಿರುವ ಕೆಲವು ವಾಕ್ಯಗಳನ್ನು ಕೆಳಗೆ ಉದ್ಧರಿಸಿದೆ.

" ಅದಿತಿಯು ನಮ್ಮನ್ನು ಪಾಪರಹಿತರನ್ನಾಗಿ ಮಾಡಲಿ " (೧-೧೬೨-೨೨)

" ಎಲೈ ಅದಿತಿಯೇ, ಮಿತ್ರಾವರುಣರೇ, ನಿಮ್ಮ ವಿಷಯದಲ್ಲಿ ನಾವೇನಾದರೂ ಪಾಪವನ್ನಾಚರಿಸಿದ್ದರೆ, ದಯವಿಟ್ಟು ಅದನ್ನು ಕ್ಷಮಿಸಿ ನಮ್ಮನ್ನು ಅನುಗ್ರಹಿಸಿರಿ " (೨-೨೭-೧೪)

" ಎಲೈ ಅಗ್ನಿಯೇ, ಮಾನವರಿಗೆ ಸಹಜವಾದ ಅವಿವೇಕದಿಂದ ನಾವು ಯಾವ ತಪ್ಪನ್ನು ಮಾಡಿದ್ದರೂ ಸಹ, ನಮಗೆ ಅದಿತಿಯ ಅನುಗ್ರಹವು ಲಭಿಸುವುದಕ್ಕಾಗಿ ನಮ್ಮನ್ನು ಪಾಪರಹಿತರನ್ನಾಗಿ ಮಾಡು " (೪-೧೨-೪).

" ದೇವತಾತ್ಮನಾದ ಸವಿತೃವಿನ ಸಹಾಯದಿಂದ ನಾವು ಅದಿತಿಯ ವಿಷಯದಲ್ಲಿ ಯಾವ ಪಾಪವನ್ನೂ ಆಚರಿಸದೇ ಇರುವಂತಾಗಲಿ. " (೫-೮೨-೬).

" ಅದಿತಿಯ ಸಂಕಲ್ಪಿತವಾದ ನಿಯಮವನ್ನು ನಾವು ಪೂರ್ಣವಾಗಿ ಪಾಲಿಸುತ್ತಾ ವರುಣನಲ್ಲಿ ಯಾವ ಪಾಪವನ್ನೂ ಆಚರಿಸದಿರೋಣ. ವರುಣನು ಪಾಪಿಷ್ಠರನ್ನೂ ರಕ್ಷಿಸುವ ಸ್ವಭಾವವುಳ್ಳವನು " (೮·೮೭-೭)

" ಎಲೈ ಅಗ್ನಿಯೇ, ನಾವು ಯಾವ ಪಾಪವನ್ನು ಮಾಡಿದ್ದರೂ, ನಮ್ಮಲ್ಲಿ ದಯೆಯಿಂದ ಅದನ್ನು ಕ್ಷಮಿಸು. ಅರ್ಯಮನೂ, ಅದಿತಿಯೂ ಆ ಪಾಪವನ್ನು ನಾಶಮಾಡಲಿ." (೮-೯೩-೭)

" ಮಿತ್ರನು ನನ್ನ ಪ್ರಾರ್ಥನೆಯನ್ನು ಕೇಳಲಿ. ಅದಿತಿಯೂ, ದೇವತಾತ್ಮನಾದ ಸವಿತೃವೂ ನಮ್ಮನ್ನು ವರುಣನ ಮುಂದೆ ಪಾಪರಹಿತನೆಂದು ತಿಳಿಸಲಿ " (೧೦-೧೨-೮)

ಇದಲ್ಲದೆ—

" ಅನಾಗಾಸ್ತ್ವೇ ಅದಿತಿತ್ವೇ ತುರಾಸ ಇಮಂ ಯಜ್ಞಂ ದಧತು ಶ್ರೋಷಮಾಣಾಃ ।

(ಋ. ಸಂ. ೭-೫೧-೧)

ಎಂಬ ಮಂತ್ರದಲ್ಲಿ ಅದಿತಿತ್ವ ಮತ್ತು ಅನಾಗಾಸ್ತ್ವ ಎಂಬ ಎರಡು ಪದಗಳೂ ಒಟ್ಟಿಗೆ ಪ್ರಯುಕ್ತವಾಗಿವೆ. " ಮಹಾತ್ಮರಾದ ದೇವತೆಗಳು, ನಮ್ಮ ಪ್ರಾರ್ಥನೆಯನ್ನು ಆಲಿಸಿ, ನಮ್ಮ ಯಜ್ಞಕರ್ಮಗಳನ್ನು ಪಾಪರಹಿತನನ್ನಾಗಿಯೂ, ಅಭ್ಯುದಯಕಾರಕಗಳನ್ನಾಗಿಯೂ ಮಾಡಲಿ" ಎಂಬ ಈ ಪ್ರಾರ್ಥನೆಯಿದೆ. ಆದರೆ, ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಈ ಎರಡು ಪದಗಳ ಪ್ರಯೋಗವೂ ಒಟ್ಟಿಗಿದ್ದರೂ ಸಹ ಎರಡಕ್ಕೂ ಸಮಾನಾರ್ಥವಿರಬೇಕೆಂಬ ನಿಯಮವಿಲ್ಲ. ಅದಿತಿ ಶಬ್ದಕ್ಕೆ ಬೇರೆ ವಿಧವಾದ ನಿರ್ವಚನವನ್ನು ತೋರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

" ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ।
ಸರ್ವಸ್ಯೈತಸ್ಯಾತ್ತಾ ಭವತಿ । ಸರ್ವಮಸ್ಯಾಂತಂ ಭವತಿ ಯ ಏವಮೇತದದಿತೇರದಿತಿತ್ವಂ
ವೇದ " (ಶ·ಬ್ರಾ. ೧೦-೬-೫-೫; ಬೃ. ಉ. ೧-೨-೫)

ಬ್ರಹ್ಮನು ಯಾವ ಯಾವ ಪದಾರ್ಥಗಳನ್ನು ನಿರ್ಮಿಸಿದನೋ ಅವುಗಳೆಲ್ಲವನ್ನೂ ಪುನಃ ಭಕ್ಷಿಸತೊಡಗಿದನು. ಈ ಭಕ್ಷಣಕಾರ್ಯವಿದ್ದುದರಿಂದಲೇ ಅದಿತಿ (ಮೃತ್ಯು) ನಾಮನಿರ್ದೇಶವಾಯಿತು. ಈ ತತ್ತ್ವವನ್ನರಿತವನು ತಾನೂ ಅದಿತಿ ಸ್ವರೂಪವನ್ನು ಹೊಂದುವನು ಎಂಬುದಾಗಿ ಅದಿತಿಯ ನಾಮನಿರ್ವಚನವನ್ನು ತಿಳಿಸಿ ಈ ದೇವತೆಯ ವಿಶ್ವನಿಯಾಮಕತ್ವವನ್ನೂ ತಿಳಿಸಿದೆ. ಪರಬ್ರಹ್ಮನೂ ಈ ಕಾರಣದಿಂದ ಈ ನಾಮನಿರ್ದಿಷ್ಟನಾಗಿದ್ದಾನೆ.

ಅಲ್ಲದೇ, "ವಿಶ್ವೇಷಾಮದಿತಿರ್ಯಜ್ಞಿಯಾನಾಂ"; (೪-೧-೨೦); "ಅಮೂರಃ ಕವಿರದಿತಿರ್ವಿವಸ್ವಾನ್" (೭-೯-೩) ಇತ್ಯಾದಿ ಸ್ಥಳಗಳಲ್ಲಿ ಅದಿತಿ ಶಬ್ದವು ಅಗ್ನಿಗೆ ವಿಶೇಷಣವಾಗಿದೆ. ೯-೮೧-೫ ರಲ್ಲಿ ಅರ್ಯಮನಿಗೆ ವಿಶೇಷಣವಾಗಿದೆ. ಯಾಸ್ಕರು ನಿರುಕ್ತದಲ್ಲಿ " ಅಗ್ನಿರಪ್ಯದಿತಿರುಚ್ಯತೇ " (ನಿ. ೧೧-೨೩), ಅಗ್ನಿಯೂ ಅದಿತಿ ಶಬ್ದವಾಚ್ಯನು ಎಂದು ತಿಳಿಸಿದ್ದಾರೆ. ಮತ್ತು ತಮ್ಮ ತಾದಾತ್ಮ್ಯಬೋಧಕವಾದ ವಾಕ್ಯವನ್ನು ಸಮರ್ಥಿಸಲು,

"ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವತಾತಾ"

(ಋ. ಸಂ. ೧-೯೪-೧೫)

ಎಂಬ ವಾಕ್ಯವನ್ನುದಾಹರಿಸಿ ಅಲ್ಲಿ ಅಗ್ನಿಶಬ್ದಕ್ಕೆ ವಿಶೇಷಣವಾಗಿ ಅದಿತಿಶಬ್ದದ ಪ್ರಯೋಗವಿರುವುದನ್ನು ತಿಳಿಸಿದ್ದಾರೆ. ಅಖಂಡನೀಯನಾದ ಎಂದರೆ ಪೂರ್ಣನಾದ ಅಗ್ನಿಯೆಂದರ್ಥವೆಂದು ಸಾಯಣರು ವಿವರಿಸಿದ್ದಾರೆ.

ಈ ರೀತಿ ಪಾಪನಾಶಕಳೂ, ಪಾಪಗಳನ್ನು ಕ್ಷಮಿಸುವವಳೂ ಆದ ಅದಿತಿಯ ರಕ್ಷಣೆಯನ್ನು ಬೇಡಿ ಕ್ಷಮೆಯನ್ನು ಯಾಚಿಸುವ ಅರ್ಥವನ್ನು ಕೊಡತಕ್ಕ ವಾಕ್ಯಗಳೆಲ್ಲವೂ ಸಹ ಅದಿತಿಯ ಅನಂತಶಕ್ತಿಯನ್ನು ವರ್ಣಿಸುವುದಾಗಿವೆ. ಈ ವಿಶೇಷಣಗಳೂ ಮತ್ತು ವರ್ಣನೆಗಳೂ ಅದಿತಿಯೇ ವಿಶ್ವನಿಯಮನಃಶಕ್ತಿಯುಳ್ಳವಳೆಂದು ತಿಳಿಸುತ್ತವೆ. ಈ ನಿಯಮನಗಳು ಕೇವಲ ಭೌತಿಕಶಕ್ತಿಯ ಪ್ರದರ್ಶನವಾಗಿರದೆ, ಆಧ್ಯಾತ್ಮಿಕನೀತಿನಿಯಮಗಳುಳ್ಳವು ಎಂದೂ ತಿಳಿಯುತ್ತದೆ. ಈ ಅಂಶವನ್ನು ಅದಿತಿಗೂ, ಋತಪಾಲಕನಾದ ವರುಣನಿಗೂ ಇರುವ ನಿಕಟಸಂಬಂಧವೂ ವಿಶದವಾಗಿ ತಿಳಿಸುತ್ತದೆ. ಇದರಂತೆಯೇ, ಸವಿತೃ, ಸೂರ್ಯ, ಉಷಸ್ಸು, ದ್ಯಾವಾಪೃಥಿವಿಗಳು ಇತ್ಯಾದಿ ದೇವತೆಗಳೂ ಪ್ರಾರ್ಥಿತರಾಗಿದ್ದಾರೆ. (೪-೫೪-೩; ೧೦-೩೫-೨, ೩; ೩-೫೪-೧೯ ಇತ್ಯಾದಿ).

**9. ವಿಶ್ವನಿಯಾಮಕಳಾದ ಅದಿತಿಯೂ ಸಹ ಇತರ ಶಕ್ತಿಗಳಿಂದ ನಿಯಂತ್ರಿತಳಾದವಳು ಎಂದು ವರ್ಣಿಸುವ ಕೆಲವು ಪ್ರಕರಣಗಳು:—**

ವಿಶ್ವಪ್ರಭುಗಳೆಂದೆನ್ನಿಸಿಕೊಂಡ ವರುಣಾದಿ ದೇವತೆಗಳಿಗೂ, ಮಾತೆಯೆಂದು ವರ್ಣಿತಳಾದ ಅದಿತಿಯೂ ಸಹ ಕೆಲವು ವೇಳೆ ಇತರ ಶಕ್ತಿಗಳ ನಿಯಮನಕ್ಕೆ ಅಧೀನಳಾಗಿರಬೇಕೆಂಬ ವರ್ಣನೆಗಳೂ ಕೆಲವಿವೆ. ಉದಾಹರಣೆಗೆ:—

ಅದಿತಿಯು ತನ್ನ ಪುತ್ರರಾದ ವರುಣ, ಮಿತ್ರ, ಅರ್ಯಮ ಇತ್ಯಾದಿ ದೇವತೆಗಳೊಡನೆ ಕೂಡಿಕೊಂಡು ಸವಿತೃವನ್ನು ಸ್ತುತಿಸುತ್ತಲೂ, ಸವಿತೃವಿನ ಸಹಾಯವನ್ನು ಪ್ರಾರ್ಥಿಸುತ್ತಲೂ ಇರತಕ್ಕ ವರ್ಣನೆಯು ೭-೩೮-೪ ನೇ ಮಂತ್ರದಲ್ಲಿರುವುದು. ೮-೧೨-೧೪ರಲ್ಲು ಅದಿತಿಯು ಇಂದ್ರನನ್ನು ಸ್ತುತಿಸಲು ಒಂದು ಸ್ತುತಿರೂಪವಾದ ಕೃತಿಯನ್ನು ನಿರ್ಮಿಸಿದಳು ಎಂದು ತಿಳಿಸಿದೆ. (ಅದಿತಿಃ ಸ್ತೋಮಮಿಂದ್ರಾಯ ಜೀಜನತ್)

**10. ಋಕ್ಸಂಹಿತೆಯ ೧೦ ನೇ ಮಂಡಲದ ೭೨ ನೇ ಸೂಕ್ತದಲ್ಲಿ ವರ್ಣಿತವಾಗಿರುವಂತೆ ವಿಶ್ವಸೃಷ್ಟಿಯ ಕ್ರಮ:— ಅದಿತಿ, ದಕ್ಷ, ಆದಿತ್ಯರು ಮತ್ತು ಇತರ ದೇವತೆಗಳ ಉತ್ಪತ್ತಿಸ್ವರೂಪ:—**

ಋಕ್ಸಂಹಿತೆಯಲ್ಲಿ ಹತ್ತನೇ ಮಂಡಲದ ೭೨ ನೇ ಸೂಕ್ತವು ಸಂಹಿತೆಯ ಇತರ ಸೂಕ್ತಗಳಷ್ಟು ಪ್ರಾಚೀನವಾದುದಲ್ಲ ಎಂದು ಕೆಲವು ಪಂಡಿತರ ಮತವಾಗಿದೆ. ಆದರೆ ಇದಕ್ಕೆ ಸರಿಯಾದ ಆಧಾರವನ್ನು ಕೊಡಲಾಗುವುದಿಲ್ಲ. ಆದರೆ ಈ ಸೂಕ್ತವು ಪ್ರಾಚೀನನೇ ಅಥವಾ ಅರ್ವಾಚೀನವೇ ಎಂಬ ವಿಷಯದ ವಿಮರ್ಶವು ಸದ್ಯಃ ಅಪ್ರಕೃತ, ಪ್ರಕೃತದಲ್ಲಿ ಉಪಯುಕ್ತವಾದುದು, ಈ ಸೂಕ್ತದಲ್ಲಿ ವಿವರಿಸಿರುವ ವಿಶ್ವಸೃಷ್ಟಿಯ ವರ್ಣನಾಕ್ರಮ. ಅದರ ವಿವರವು ಈ ರೀತಿಯಿದೆ.

(೧) ಪ್ರಶಂಸಾತ್ಮಕವಾದ ಈ ಸೂಕ್ತಮಂತ್ರಗಳಿಂದ ನಾವು ದೇವತೆಗಳ ಉತ್ಪತ್ತಿಕ್ರಮವನ್ನು ವರ್ಣಿಸುವೆವು. ಈ ಸ್ತುತಿರೂಪವಾದ ಮಂತ್ರಗಳ ಸಹಾಯದಿಂದ ಉತ್ತರಯುಗಕ್ಕೆ ಸೇರಿದ ನಾವು ಪೂರ್ವಯುಗದ ದೇವತೆಗಳ ಉತ್ಪತ್ತಿ ಮತ್ತು ಸ್ವರೂಪಗಳನ್ನರಿಯಲು ಸಾಧ್ಯವಾಗುವುದು.

(೨) ಕಮ್ಮಾರನು ತಿದಿಯನ್ನು ಒತ್ತಿ ಒಳಗಿರುವ ಅಂತಃಶಕ್ತಿಯನ್ನು ಹೊರಕ್ಕೆ ಬರಮಾಡುವಂತೆ, ಬ್ರಹ್ಮಣಸ್ಪತಿಯು ತಲ್ಲೀನವಾದ ಈ ದೇವತೆಗಳನ್ನು ಸೃಷ್ಟಿರೂಪದಲ್ಲಿ ಹೊರಗೆ ಆವಿರ್ಭೂತರಾಗುವಂತೆ ಮಾಡಿದನು. ದೇವತೆಗಳ ಅತ್ಯಂತ ಪ್ರಾಚೀನವಾದ ಯುಗದಲ್ಲಿ ಅಸತ್ತಿನಿಂದ ಸತ್ತು ಪ್ರಾದುರ್ಭೂತವಾಯಿತು.

(೩) ಆದಿಯಲ್ಲಿ ಅಸತ್ತಿನಿಂದ ಸತ್ತಿನ ಆವಿರ್ಭಾವವುಂಟಾಯಿತು. ಅದರಿಂದ ದಿಗ್ದೇಶಗಳ ಪ್ರಕಾಶನವಾಯಿತು. ಅನಂತರ ಉತ್ತಾನಪಾದನಿಂದ.........

(೪) ಉತ್ತಾನಪಾದನಿಂದ ಪೃಥ್ವಿಯೂ, ಪೃಥ್ವಿಯಿಂದ ದಿಗ್ದೇಶಗಳೂ ಉತ್ಪನ್ನವಾದವು. ದಕ್ಷನಿಂದ ಅದಿತಿಯೂ ಅದಿತಿಯಿಂದ ದಕ್ಷನೂ ಉತ್ಪನ್ನರಾದರು.

(೫) ಎಲೈ ದಕ್ಷನೇ, ಅದಿತಿಯು ನಿನ್ನಿಂದ ಉತ್ಪನ್ನಳಾದಳು. ಅವಳೇ ನಿನ್ನ ಪುತ್ರಿಯು. ಅನಂತರ, ಅವಳಿಂದ ಕಲ್ಯಾಣಾತ್ಮಕರೂ ಮತ್ತು ಅಮರ್ತ್ಯರೂ ಆದ ದೇವತೆಗಳು ಜನಿಸಿದರು.

(೬) ಎಲೈ ದೇವತೆಗಳೇ, ನೀವು ಯಾವಾಗ ಚಲಿಸಿದಿರೋ, ಅಂತರಿಕ್ಷದ ಉದಕಗಳನ್ನು ಯಾವಾಗ ಪ್ರಕ್ಷುಬ್ಧವಾಗುವಂತೆ ಮಾಡಿದಿರೋ, ಆ ಒಡನೆಯೇ ನರ್ತನಕಾರರ ದೇಹದಿಂದ ಹೊರಕ್ಕೆ ಹೊರಡುವಂತೆ ಅವರ ದೇಹದಿಂದ ರೇಣುಗಳು ಹೊರಕ್ಕೆ ಬಂದವು.

(೭) ಎಲೈ ದೇವತೆಗಳೇ, ಶ್ರಮಸಹಿಷ್ಣುಗಳಾದ ಮಾನವರಂತೆ ಯಾವಾಗ ನೀವು ವಿಶ್ವವನ್ನು ವ್ಯಾಪಿಸಿ ಅಲಂಕರಿಸಿ ರಚಿಸಿದಿರೋ, ಆಗಲೇ ನೀವು ಅಂತರಿಕ್ಷರೂಪದ ಸಮುದ್ರದಲ್ಲಿ ಅಂತರ್ಗತನಾದ ಸೂರ್ಯನನ್ನು ಹೊರಕ್ಕೆ ಬರಮಾಡಿ ಪ್ರಕಾಶಿಸುವಂತೆ ಮಾಡಿದಿರಿ.

(೮) ತನ್ನ ದೇಹೋತ್ಪನ್ನರಾದ ಅಷ್ಟಪುತ್ರರಲ್ಲಿ, ಏಳು ಜನರೊಡನೆ ಮಾತ್ರ ಅದಿತಿಯು ದೇವತೆಗಳನ್ನು ಸಮೀಪಿಸಿದಳು. ಎಂಟನೆಯವನಾದ ಮಾರ್ತಾಂಡನನ್ನು ಹಿಂದೆಯೇ ಬಿಟ್ಟಳು.

(೯) ಪೂರ್ವಯುಗಕ್ಕೆ ಸೇರಿದ ದೇವತೆಗಳನ್ನು ಅದಿತಿಯು ಸಪ್ತಪುತ್ರರೊಂದಿಗೆ ಹೋಗಿ ಸೇರಿದಳು. ಎಂಟನೆಯವನಾದ ಮಾರ್ತಾಂಡನನ್ನು ಪುನಃ ಪಡೆದಳು. ಅವನ ಉತ್ಪತ್ತಿಗಾಗಿಯೂ ಮತ್ತು ಮರಣಕ್ಕಾಗಿಯೂ ಅವನಿಗೆ ಜನ್ಮವನ್ನು ಕೊಟ್ಟಳು.

ಇಲ್ಲಿ ೭ನೇ ಋಕ್ಕಿನಲ್ಲಿ ಪ್ರಯೋಗಿಸಿರುವ ಯತಯಃ ಎಂಬ ಪದದ ತಾತ್ಪರ್ಯವೇನೆಂದು ವಿಮರ್ಶಿಸುವುದು ಪ್ರಕೃತವಾಗಿದೆ. ೧೧–೭೨–೭ ನೇ ಋಕ್ಕಿನಲ್ಲಿ ಯಾವ ವಿಶ್ವರಚನೆಯ ವರ್ಣನೆಯಿದೆಯೋ ಆ ರಚನೆಗೂ, ೮–೩–೯ ಮತ್ತು ೮–೬–೧೮ ನೇ ಮಂತ್ರಗಳಲ್ಲಿ ವರ್ಣಿತರಾಗಿರುವ ಭೃಗುಗಳಿಗೂ ಕೆಲವೆಡೆಗಳಲ್ಲಿ ಸಂಬಂಧವನ್ನು ತಿಳಿಸಿದೆ. ಪ್ರಕೃತವಾದ ಮಂತ್ರದಲ್ಲಿ ಯತಯಃ ಎಂಬ ಪದವು ಆ ಭೃಗುಗಳನ್ನು ನಿರ್ದೇಶಿಸುತ್ತದೆ ಎಂಬುದಾಗಿ ಬೋಟ್ಲಿಂಕ್ ಮತ್ತು Roth ಎಂಬ ಪಂಡಿತರು ಅಭಿಪ್ರಾಯಪಡುತ್ತಾರೆ. ಋ. ಸಂ, ೭–೧೩–೧ ರಲ್ಲಿ ಇದೇ ಪದವು ಅಗ್ನಿಗೆ ವಿಶೇಷಣವಾಗಿರುತ್ತದೆ. (ವೈಶ್ವಾನರಾಯ ಯತಯೇ ಮತೀನಾಂ) ೮–೬–೧೮ ರಲ್ಲಿ "ಯೇ ಇಂದ್ರ ಯತಯಸ್ತ್ವಾ ಭೃಗವೋ ಯೇ ಚ........" ಎಂಬಲ್ಲಿ ಯತಯಃ ಎಂಬುದಕ್ಕೆ ಒಂದು ಗುಂಪಿನ ಯಜಮಾನ ಸಂತತಿಯವರು ಎಂದಾದರೂ ಅರ್ಥಮಾಡಬಹುದು.

ಋಕ್ಸಂಹಿತೆಯಲ್ಲಿ ಅಂತರ್ಗತವಾಗದಿರತಕ್ಕ ಕೆಲವು ಸಾಮಮಂತ್ರಗಳಿವೆ. ಅವುಗಳೊಂದರಲ್ಲಿ ಯತಿ ಮತ್ತು ಭೃಗು ಈ ಎರಡು ಪದಗಳ ಪ್ರಯೋಗವೂ ಇರುತ್ತವೆ. (ಸಾ. ವೇ. ೨-೩೦೪). "ಇಂದ್ರಸ್ತು ರಾಷಾಣ್ಮಿತ್ರೋ ನ ಜಘಾನ ವೃತ್ರಂ ಯತಿರ್ನ I" ಹಿಂದೆ ಮಿತ್ರನೂ, ಯತಿಯೂ ಕೊಂದಂತೆಯೇ, ಈಗಲೂ ಇಂದ್ರನು ವೃತ್ರನನ್ನು ಕೊಂದನೆಂದೂ, "ಬಿಭೇದ ಬಲಂ ಭೃಗುರ್ನ" ಭೃಗುವು ಕೊಂದಂತೆ ಬಲನನ್ನು ಕೊಂದನೆಂದೂ ಈ ಮಂತ್ರದ ತಾತ್ಪರ್ಯವಿರುತ್ತದೆ. ಇದಲ್ಲದೇ, ಐತರೇಯಬ್ರಾಹ್ಮಣದಲ್ಲಿ (೭-೨೮) ಇಂದ್ರನು ಯತಿಗಳನ್ನು ತ್ಯಾಗಮಾಡಿ ಅವರು ತೋಳಗಳಿಗೆ ಆಹುತಿಗಳಾಗುವಂತೆ ಮಾಡಿದನು ಎಂದಿದೆ.

೮ ನೇ ಮಂತ್ರದ ತಾತ್ಪರ್ಯವು ಅಥರ್ವವೇದದ "ಅಷ್ಟಯೋನೀರದಿತಿರಷ್ಟಪುತ್ರಾ" (ಅ. ವೇ. ೮-೯-೨೧) ಎಂಬ ವಾಕ್ಯದ ತಾತ್ಪರ್ಯವನ್ನು ಕೊಡುವುದಾಗಿದೆ. ಇದೇ ಅಭಿಪ್ರಾಯವನ್ನು ತೈತ್ತಿರೀಯಾರಣ್ಯಕದಲ್ಲೂ ತಿಳಿಸುತ್ತಾ "ಅಷ್ಟಯೋನೀಮಷ್ಟಪುತ್ರಾಂ I ಅಷ್ಟಪತ್ನೀಮಿಮಾಂ ಮಹೀಂ II" (ತೈ. ಆ. ೧-೧೩-೧) ಪೃಥ್ವಿಗೆ ಎಂಟು ಜನ್ಮವೂ. ಎಂಟು ಪುತ್ರರೂ, ಎಂಟು ಪತಿಗಳೂ ಇರುವುದಾಗಿ ತಿಳಿಸಿದೆ.

೭೨ ನೇ ಸೂಕ್ತದ ೮ ಮತ್ತು ೯ ನೆಯ ಮಂತ್ರಗಳು ತೈತ್ತಿರೀಯಾರಣ್ಯಕದಲ್ಲೂ ಉದ್ಧೃತವಾಗಿವೆ. "ಪರಾ ಮಾರ್ತಾಂಡಮಾಸ್ಯತ್" ಎಂದು ಸಂಹಿತಾಪಾಠಕ್ಕೆ ಬದಲಾಗಿ, ಅಲ್ಲಿ "ಪರಾ ಮಾರ್ತಾಂಡಮಾಭರತ್" ಎಂಬ ಪಾಠಬೇಧವಿರುತ್ತದೆ. ಇದಕ್ಕೆ ಭಾಷ್ಯಕಾರರು ಅರ್ಥವನ್ನು ವಿವರಿಸುತ್ತಾ ಈ ರೀತಿ ತಿಳಿಸಿದ್ದಾರೆ. "ಮಾರ್ತಾಂಡಾಖ್ಯಂ ಅಷ್ಟಮಂ ಪುತ್ರಂ 'ಪರಾ ಭರತ್' ಪರಿ ತ್ಯಕ್ತವತೀ ಇತಿ ಯತ್ ತತ್ ಮೃತ್ಯವೇ ಮೃತ್ಯುನಿಮಿತ್ತಂ" ಮಾರ್ತಾಂಡನು ಉತ್ಪನ್ನವಾದೊಡನೆಯೇ ಅಂಡವು ಮರಣಹೊಂದಿತೆಂದು ತಾತ್ಪರ್ಯ. ಮೇಲಿನ ೮ ನೇ ಮಂತ್ರಕ್ಕೆ ವಿವರಣೆಯನ್ನೀಯುತ್ತಾ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> "ಅಷ್ಟೌ ಹ ವೈ ಪುತ್ರಾ ಅದಿತೇಃ I ಯಾಂಸ್ತ್ವೇತದ್ದೇವಾ ಆದಿತ್ಯಾ ಇತ್ಯಾಚಕ್ಷತೇ ಸಪ್ತ ಹೈವ ತೇSವಿಕೃತಗ್ಂ ಹಾಷ್ಟಮಂ ಜನಯಾಂಚಕಾರ ಮಾರ್ತಾಂಡಗ್ಂ ಸಂದೇಘೋ ಹೈವಾಸ ಯಾವಾನೇವೋರ್ಧ್ವಸ್ತಾವಾಂಸ್ತಿರ್ಯಙ್ ಪುರುಷಸಮ್ಮಿತ ಇತ್ಯು ಹೈಕ ಆಹುಃ"
> (ಶ. ಬ್ರಾ. ೩-೧-೩-೩)

ಅದಿತಿಗೆ ಎಂಟು ಜನ ಪುತ್ರರು. ಆದರೆ ಅವರಲ್ಲಿ ಏಳು ದೇವತೆಗಳನ್ನು ಮಾತ್ರ ಮಾನವರು ಆದಿತ್ಯರೆಂದು ಕರೆಯುತ್ತಾರೆ. ಏತಕ್ಕೆಂದರೆ ಎಂಟನೆಯ ಮಾರ್ತಾಂಡನು ಹಸ್ತಪಾದಾದಿರಹಿತನಾಗಿ ಯಾವ ವಿಶೇಷಗುಣವೂ ಇಲ್ಲದೆ ಕೇವಲ ಮಾರ್ದವ ಗುಣದಿಂದ ಮಾತ್ರ ಯುಕ್ತನಾಗಿಯೂ, ನಿರ್ವಿಕಲ್ಪಕನಾಗಿಯೂ, ಎಷ್ಟು ಉನ್ನತವಾಗಿದ್ದನೋ ಅಷ್ಟೇ ದೀರ್ಘವಾಗಿಯು ಬೆಳೆದು ಉತ್ಪನ್ನನಾದನು. ಕೇವಲ ಮಾನವನ ಶರೀರದಷ್ಟು ಪ್ರಮಾಣವುಳ್ಳವನಾಗಿ ಮಾತ್ರವಾದನು ಎಂದು ಕೆಲವರ ಅಭಿಪ್ರಾಯ.

> 'ತ್ಯಉ ಹೈತ ಊಚುಃ I ದೇವಾ ಆದಿತ್ಯಾ ಯದಸ್ಮಾನನ್ವಜನಿಮಾ ತದಮುಯೇವ ಭೂದ್ಧಂತೇಮಂ ವಿಕರವಾಮೇತಿ ತಂ ವಿಚಕ್ರುರ್ಯಥಾಯಂ ಪುರುಷೋ ವಿಕೃತಸ್ತಸ್ಯ ಯಾನಿ ಮಾಗ್ಂಸಾನಿ ಸಂಸ್ಕೃತ್ಯ ಸನ್ನ್ಯಾಸುಸ್ತತೋ ಹಸ್ತೀ ಸಮಭವತ್ತಸ್ಮಾದಾಹುರ್ನ ಹಸ್ತಿನಂ ಪ್ರತಿಗೃಹ್ಣೀಯಾತ್ಪುರುಷಾಜಾನೋ ಹಿ ಹಸ್ತೀತಿ ಯಮು ಹ ತದ್ವಿಚಕ್ರುಃ ಸ ವಿವಸ್ವಾನಾದಿತ್ಯಸ್ತಸ್ಯೇಮಾಃ ಪ್ರಜಾಃ II
> (ಶ. ಬ್ರಾ. ೩-೧-೩-೪)

ಈ ರೀತಿಯಾದ ವಿಕಲ್ಪರಹಿತನಾದ ಮಾರ್ತಾಂಡನನ್ನು ನೋಡಿ ಆದಿತ್ಯರು ಭೀತಿಗೊಂಡರು. " ಈ ಮಾರ್ತಾಂಡನು ನಮ್ಮ ರೂಪವನ್ನು ಹೋಲದಿದ್ದರೆ ಆಗ ನಮಗೆ ಮೃತ್ಯುವು ಸನ್ನಿಹಿತವಾದಂತೆಯೇ. ಆದುದರಿಂದ ನಾವು ಇವನನ್ನು ರೂಪವನ್ನು ಹೊಂದುವಂತೆ ಮಾಡಬೇಕು " ಎಂದು ಅವನನ್ನು ಪುರುಷಾಕಾರನನ್ನಾಗಿ ಪರಿವರ್ತಿಸಿದರು. ಅವನಿಗೆ ತಮ್ಮ ರೂಪವನ್ನುಂಟುಮಾಡಲು ಅವನ ಶರೀರವನ್ನು ಕತ್ತರಿಸಿ ಸರಿಪಡಿಸಿದಾಗ ಹೊರಕ್ಕೆ ತೆಗೆದ ಮಾಂಸವನ್ನು ಎಸೆದಾಗ ಅದರಿಂದ ಗಜವು ಉತ್ಪನ್ನವಾಯಿತು. ನಾಮರೂಪಾದಿ ವಿಶೇಷಗುಣಗಳಿಂದ ಕೂಡಿದ ಈ ಹೊಸ ವ್ಯಕ್ತಿಯನ್ನು ವಿವಸ್ವಾನ್ ಎಂದು ಕರೆದರು. ಈ ವಿವಸ್ವಂತನೇ ಸಕಲ ಭೂತಗಳ ಉತ್ಪತ್ತಿಗೂ ಕಾರಣನಾದನು.

ಇದೇ ವಾಕ್ಯವು ತೈತ್ತಿರೀಯ ಸಂಹಿತೆಯಲ್ಲಿಯೂ ಉದಾಹೃತವಾಗಿ, ಅಲ್ಲಿ ಅದಿತಿಯ ಈ ಎರಡನೆಯ ಗರ್ಭವು ಅಂಡರೂಪದಲ್ಲಿ ಪರಿಣಮಿಸಿತು ಎಂದು ತಿಳಿಸಿದೆ. (ತೈ. ಸಂ. ೬-೫-೬-೧)

ಯಾಸ್ಕರು ಮೇಲಿನ ೧೦-೭೨-೪ ನೇ ಮಂತ್ರದ ತಾತ್ಪರ್ಯವನ್ನು ವಿವರಿಸುತ್ತಾ ನಿರುಕ್ತವಾಕ್ಯಗಳಲ್ಲಿ ಈ ರೀತಿ ತಿಳಿಸಿದ್ದಾರೆ.

" ಅದಿತ್ಯೋ ದಕ್ಷ ಇತ್ಯಾಹುಃ । ಆದಿತ್ಯಮಧ್ಯೇ ಚ ಸ್ತುತಃ । ಅದಿತಿಃ ದಾಕ್ಷಾಯಣೀ । ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ (೧೦-೭೨-೪) ಇತಿ। ತತ್ಕಥಂ ಉಪಪದ್ಯೇತ। ಸಮಾನಜನ್ಮಾನೌ ಸ್ಯಾತಾಂ ಇತಿ । ಅಪಿ ವಾ ದೇವಧರ್ಮೇಣ ಇತರೇತರಜನ್ಮಾನೌ ಸ್ಯಾತಾಂ ॥ ಇತರೇತರಪ್ರಕೃತೀ ॥ (ನಿ. ೧೧-೨೩)

ದಕ್ಷನು ಅದಿತಿಪುತ್ರರಲ್ಲೊಬ್ಬನೆಂದೂ, ಆದಿತ್ಯರ ಗುಂಪಿಗೆ ಸೇರಿದವನೆಂದೂ ಸ್ತುತನೂ ಪ್ರಖ್ಯಾತನೂ ಆಗಿದ್ದಾನೆ. ಆದರೆ, " ದಕ್ಷನಿಂದ ಅದಿತಿಯು ಉತ್ಪನ್ನಳಾದಳು. ಅದಿತಿಯಿಂದ ದಕ್ಷನು ಉತ್ಪನ್ನನಾದನು " ಎಂಬ ವಾಕ್ಯವು ಅದಿತಿಯೂ ದಕ್ಷಪುತ್ರಿಯೆಂಬುದನ್ನು ತಿಳಿಸುತ್ತದೆ. ಇದು ಹೇಗೆ ಸಾಧ್ಯವಾಗಬಲ್ಲದು ? ಅವರಿಬ್ಬರಿಗೂ ಒಂದೇ ಉತ್ಪತ್ತಿಸ್ಥಾನವಿರಬಹುದು ಅಥವಾ ದೇವತೆಗಳ ಸ್ವಾಭಾವಿಕವಾದ ಶಕ್ತಿಗನುಗುಣವಾಗಿ ಒಬ್ಬರಿಂದ ಇನ್ನೊಬ್ಬರು ಉತ್ಪನ್ನವಾಗಿಯೂ ಇರಬಹುದು ಮತ್ತು ಪರಸ್ಪರ ಮಾಹಾತ್ಮ್ಯಗಳನ್ನು ಒಬ್ಬರಿಂದಿನ್ನೊಬ್ಬರು ಪಡೆದಿರಬಹುದು. ಇದೇ ರೀತಿ ಪರಸ್ಪರ ಒಬ್ಬರ ಉತ್ಪತ್ತಿಗೆ ಇನ್ನೊಬ್ಬರು ಯೋನಿಯಾದರು ಎಂಬ ವಿಷಯವನ್ನು ತಿಳಿಸುವ ಬೇರೆ ಶ್ರುತಿವಾಕ್ಯವೂ ಇರುವುದು.

" ತಸ್ಮಾದ್ವಿರಾಡಜಾಯತ ವಿರಾಜೋ ಅಧಿ ಪೂರುಷಃ " (೧೦-೯೦-೫)

ಪುರುಷನಿಂದ ವಿರಾಡುತ್ಪತ್ತಿಯು. ವಿರಾಟ್ಟನಿಂದ ಪುರುಷನು ಉತ್ಪನ್ನನಾದನು ಎಂಬ ವಿಷಯವೂ ಸಹ ಪ್ರಸಿದ್ಧವಾಗಿದೆಯಾದುದರಿಂದ ದಕ್ಷ ಮತ್ತು ಅದಿತಿಗಳ ಉತ್ಪತ್ತಿಕ್ರಮವೂ ಇದೇ ರೀತಿ ಇದ್ದಿರಬಹುದು. ದಕ್ಷ ಮತ್ತು ಅದಿತಿಗಳ ಪರಸ್ಪರ ಸಂಬಂಧವನ್ನು ನಿರೂಪಿಸತಕ್ಕ ಬೇರೆ ವಾಕ್ಯಗಳನ್ನೂ ಪರಿಶೀಲಿಸಬಹುದು. ಅಸಚ್ಚ ಸಚ್ಚ......... (೧೦-೫-೭)
ವೃಷಭಶ್ಚ ಧೇನುಃ "

೧. "ಅವ್ಯಾಕೃತವಾದುದೂ ಪಾರಮಾರ್ಥಿಕವಾದ ಸತ್ಯವುಳ್ಳದ್ದೂ ಆದ ತತ್ತ್ವವು ದಕ್ಷನ ವೀರ್ಯ ದಲ್ಲಿಯೂ ಮತ್ತು ಅದಿತಿಯ ಗರ್ಭದಲ್ಲಿಯೂ ಸ್ಥಿತವಾಗಿದ್ದು ನಂತರ ಸ್ತ್ರೀಪುಂರೂಪಕವಾದ ಎರಡು ಶಕ್ತಿಗಳನ್ನು ಒಳಗೊಂಡ ತತ್ತ್ವವಾಗಿ ಪರಿಣಮಿಸಿತು. "

೨. " ದಕ್ಷಸ್ಯ ವಾದಿತೇ ಜನ್ಮನಿ..........ವಿಪುರೂಪೇಷು ಜನ್ಮಸು "
(೧೦-೬೪-೫)

ಎಲೈ ಅದಿತಿಯೇ, ದಕ್ಷನ ಜನನವಾದೊಡನೆಯೂ ಮತ್ತು ಅವನ ಸಂಕಲ್ಪಾನುಸಾರವಾಗಿಯೂ ನೀನು ಮಿತ್ರಾವರುಣರೂಪರಾದ ಎರಡು ಪ್ರಭುಗಳನ್ನು ಪೋಷಿಸಿದೆ.

ಹೀಗೆ, ೧೦-೭೨-೪ ಮತ್ತು ೫ ನೇ ಮಂತ್ರಗಳು ದಕ್ಷನೇ ಆದಿತಿಯ ಪಿತೃ ಮತ್ತು ಪುತ್ರನೆಂದು ಒಟ್ಟಿಗೆ ಎರಡು ಸಂಬಂಧಗಳನ್ನೂ ತಿಳಿಸಿದ್ದರೂ, ೨-೨೭-೧ ಇತ್ಯಾದಿ ವಾಕ್ಯಗಳಲ್ಲಿ ದಕ್ಷನು ಅದಿತಿಪುತ್ರನೆಂದೂ, ಆದಿತ್ಯರಲ್ಲೊಬ್ಬನೆಂದೂ ಸ್ಪಷ್ಟವಾಗಿ ತಿಳಿಸುತ್ತದೆ. ಇದಲ್ಲದೇ, ಇನ್ನೂ ಕೆಲವೆಡೆಗಳಲ್ಲಿ ದೇವತೆಗಳಿಗೆ ದಕ್ಷಪಿತೃ ಎಂಬ ವಿಶೇಷಣ ವಿರುತ್ತದೆ. ಉದಾಹರಣೆಗೆ—

೧. " ಸುಜ್ಯೋತಿಷಃ ಸೂರ್ಯ ದಕ್ಷಪಿತೄನನಾಗಾಸ್ತ್ವೇ ಸುಮಹೋ ವೀಹಿ ದೇವಾನ್ "
(೬-೫೦-೨)

ಎಲೈ ಮಹಾತ್ಮನಾದ ಸೂರ್ಯನೇ, ದಕ್ಷನೇ ಪಿತೃವಾಗಿ ಉಳ್ಳ ದೇವತೆಗಳನ್ನು ಸಮೀಪಿಸು. (ಸಾಯಣರು ಇಲ್ಲಿ ಪಿತೃಶಬ್ದಕ್ಕೆ ಪಿತಾಮಹನೆಂದರ್ಥಮಾಡಿದ್ದಾರೆ. ಆದಿತಿಯು ದಕ್ಷಪುತ್ರಿಯಾದುದರಿಂದಲೂ, ದೇವತೆಗಳು ಅದಿತಿಪುತ್ರರಾದುದರಿಂದಲೂ, ದಕ್ಷನು ಈ ದೇವತೆಗಳಿಗೆ ಪಿತಾಮಹನು.)

೨. " ಯಾ ಧಾರಯಂತೆ ದೇವಾಃ ಸುದಕ್ಷಾ ದಕ್ಷಪಿತರಾ । ಅಸುರ್ಯಾಯ ಪ್ರಮಹಸಾ ॥ "
(೭-೬೬-೨)

ದಕ್ಷಪಿತೃಗಳಾದ ಮಿತ್ರಾವರುಣರು ತಮ್ಮ ದಿವ್ಯಪ್ರಭುತ್ವವನ್ನು ಸ್ಥಾಪಿಸಿದ್ದಾರೆ ಇತ್ಯಾದಿಯಾಗಿರುತ್ತದೆ. ಇದರಂತೆಯೇ ತೈತ್ತಿರೀಯಸಂಹಿತೆಯಲ್ಲಿಯೂ ಸಹ,

ಯೇ ದೇವಾ ಮನೋಜಾತಾ ಮನೋಯುಜಃ ಸುದಕ್ಷಾ ದಕ್ಷಪಿತಾರಸ್ತೇ ನಃ ಪಾಂತು ॥
(ತೈ. ಸಂ. ೧-೨-೩-೧)

ಮನೋಜಾತರೂ, ಮನೋಯುಜರೂ, ದಕ್ಷನನ್ನೇ ಪಿತೃವಾಗಿ ಉಳ್ಳವರೂ ಆದ ದೇವತೆಗಳು ನಮ್ಮನ್ನು ರಕ್ಷಿಸಲಿ.

ಮೇಲಿನ ಉದಾಹರಣೆಗಳಲ್ಲಿ ದಕ್ಷ ಪದವು ವೈಯಕ್ತಿಕವಾದ ಒಂದು ನಾಮನಿರ್ದೇಶವೆಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ೮-೨೫-೫ ರಲ್ಲಿ ಮಿತ್ರಾವರುಣರು 'ದಕ್ಷನ ಶಕ್ತಿಯುತರಾದ ಪುತ್ರರು' (ಸೂನೂ ದಕ್ಷಸ್ಯ ಸುಕ್ರತೂ) ಎಂದು ವರ್ಣಿತರಾಗಿರದೇ, 'ಶಕ್ತಿಯ ಪೌತ್ರರು' (ನಪಾತಾ ಶವಸೋ ಮಹಃ) ಎಂದೂ ಸಹ ವರ್ಣಿತರಾಗಿದ್ದಾರೆ ೬-೫೦-೨ ನೇ ಮಂತ್ರಕ್ಕೆ ಸಾಯಣರು ಅರ್ಥಮಾಡಿರುವ ಕ್ರಮವನ್ನು ಮೇಲೆ ತಿಳಿಸಿದೆ. ಮೇಲೆ ಉದಾಹೃತರಾಗಿರುವ ೭-೬೬-೨ ನೇ ಋಕ್ಕಿನಲ್ಲಿ ದಕ್ಷಪಿತಾರಾ ಎಂಬುದಕ್ಕೆ ಬಲಸ್ಯ ಪಾಲಕಾ ಶಕ್ತಿಯ ರಕ್ಷಕರು ಎಂದರ್ಥಮಾಡಿದ್ದಾರೆ. ಸಹಸಸ್ಪುತ್ರಃ, ಸಹಸಃಸೂನುಃ ಇತ್ಯಾದಿ ವಿಶೇಷಣಗಳು ಕೆಲವೆಡೆಗಳಲ್ಲಿ ಅಗ್ನಿಪರವಾಗಿಯೂ (೮-೪೯-೨; ೮-೬೦-೧೧ ಇತ್ಯಾದಿ) ಕೆಲವೆಡೆಗಳಲ್ಲಿ ಇಂದ್ರಪರವಾಗಿಯೂ (೮-೭೯-೩ ಇತ್ಯಾದಿ) ಪ್ರಯುಕ್ತವಾಗಿವೆ.

ಶತಪಥಬ್ರಾಹ್ಮಣದ ೨-೪-೪-೨ ನೇ ವಾಕ್ಯದಲ್ಲಿ ದಕ್ಷನಿಗೂ ಸೃಷ್ಟಿಕರ್ತನಾದ ಪ್ರಜಾಪತಿಗೂ ತಾದಾತ್ಮ್ಯವನ್ನು ತೋರಿಸಿದೆ. ೨-೪-೪-೬ ರಲ್ಲಿ ಪರ್ವತಪುತ್ರನಾದ ಒಂದು ವ್ಯಕ್ತಿಯ ಹೆಸರೆಂದು ತಿಳಿಸಿದೆ.

ಈ ವೈದಿಕವಾಕ್ಯಗಳ ಆಧಾರವನ್ನೇ ಅವಲಂಬಿಸಿಕೊಂಡು ಕಥೆಯನ್ನು ವಿಸ್ತರಿಸಿರುವ ವಿಷ್ಣುಪುರಾಣದಲ್ಲಿ ದಕ್ಷನ ವಿಷಯವು ಯಾವರೀತಿ ವರ್ಣಿತವಾಗಿದೆಯೆಂಬು ಪರಿಶೀಲಿಸಿದರೆ ಸದ್ಯಃ ಅಪ್ರಕೃತವಾಗಲಾರದು. ಈ ವಿಷ್ಣುಪುರಾಣದ ಪ್ರಕಟನದಲ್ಲಿ ಮೂರು ಪಾಠಪ್ರಭೇದಗಳು ಕಾಣುತ್ತವೆ. ಅವುಗಳನ್ನು ಒಂದೊಂದಾಗಿ ವಿಮರ್ಶಿಸಬಹುದು.

(೧) ಮೊದಲನೆಯ ಕ್ರಮದಲ್ಲಿ ಕಥೆಯ ವಿವರಣವು ಈರೀತಿಯಿದೆ:—ದಕ್ಷನು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನು. ಪ್ರಸೂತಿಯೆಂಬುವಳನ್ನು ವಿವಾಹಮಾಡಿಕೊಳ್ಳುತ್ತಾನೆ. ಅವಳಲ್ಲಿ ಇಪ್ಪತ್ತುನಾಲ್ಕು ಪುತ್ರಿಯರನ್ನು ಪಡೆಯುತ್ತಾನೆ. ಆದರೆ ಇವರಲ್ಲಿ ಅದಿತಿಯೂ ಒಬ್ಬಳು ಎಂಬುದನ್ನು ಸೇರಿಸಿಲ್ಲ.

(೨) ಎರಡನೆಯ ಪಾಠಕ್ರಮದಲ್ಲಿ:—ದಕ್ಷನ ಅರವತ್ತುಮಂದಿ ಪುತ್ರಿಯರಲ್ಲಿ ಅದಿತಿಯು ಒಬ್ಬಳೆಂದೂ. ಇವಳನ್ನು ದಿತಿ, ದನು ಮತ್ತು ಇನ್ನೂ ಹತ್ತುಮಂದಿಯರೊಂದಿಗೆ ಕಶ್ಯಪನಿಗೆ ವಿವಾಹಮಾಡಿಕೊಟ್ಟನೆಂದೂ, ಆಗ ಕಶ್ಯಪನಿಗೆ ಅದಿತಿಯಲ್ಲಿ ದ್ವಾದಶಾದಿತ್ಯರು ಉತ್ಪನ್ನರಾದರೆಂದೂ ತಿಳಿಸಿದೆ.

(೩) ಮೂರನೆಯ ಪ್ರವಚನದ ರೀತಿಯಲ್ಲಿ;—ಅದಿತಿಯು ದಕ್ಷನ ಪುತ್ರಿಯೆಂದೂ, ವಿವಸ್ವಂತನ(ಸೂರ್ಯನ) ಮಾತೆಯೆಂದೂ ತಿಳಿಯುತ್ತದೆ. [ಇದೇ ಅದಿತಿಯು ಕಶ್ಯಪನ ಪತ್ನಿಯೆಂದೂ, ವಾಮನಾವತಾರವನ್ನಾಶ್ರಯಿಸಿದ ವಿಷ್ಣುವಿನ ಮಾತೆಯೆಂದೂ ರಾಮಾಯಣದ ಒಂದು ಸನ್ನಿವೇಶದಲ್ಲಿ(ಇಲ್ಲಿಯೂ ಪಾಠಪ್ರಭೇದಗಳಿವೆ) ತಿಳಿಯುತ್ತದೆ.] ವಾಜಸನೇಯಸಂಹಿತೆಯಲ್ಲೂ (೨೯-೬೦) ಮತ್ತು ತೈತ್ತಿರೀಯಸಂಹಿತೆಯಲ್ಲೂ (೭-೫-೧೪-೧) ಅದಿತಿಯನ್ನು ವಿಷ್ಣುಪತ್ನಿಯೆಂದು ತಿಳಿಸಿದೆ. (ಆದಿತ್ಯೈ ವಿಷ್ಣುಪತ್ನ್ಯೈ ಚರುಃ) ತೈತ್ತಿರೀಯಸಂಹಿತೆಯಿಂದ ಉದ್ಧೃತವಾಗಿರುವ ಕೆಳಗಿನ ಮಂತ್ರದಲ್ಲೂ ಅದಿತಿಯ ಸ್ವರೂಪವರ್ಣನೆಯು ಈರೀತಿಯಿರುತ್ತದೆ.

> ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ಅಸ್ಯೇಶಾನಾ ಜಗತೋ ವಿಷ್ಣುಪತ್ನೀ । ವಿಶ್ವವ್ಯಚಾ
> ಇಷಯಂತೀ ಸುಭೂತಿಃ ಶಿವಾ ನೋ ಅಸ್ತು ಅದಿತಿರುಪಸ್ಥೇ ॥

ದ್ಯುಲೋಕಕ್ಕೆ ಅವಲಂಬನಪ್ರಾಯಳೂ, ಪೃಥ್ವಿಗೆ ಧಾರಕಳೂ, ವಿಶ್ವಕ್ಕೆಲ್ಲಾ ಒಡೆಯಳೂ, ವಿಷ್ಣುಪತ್ನಿಯೂ, ವಿಶ್ವವ್ಯಾಪಕಳೂ, ಶಕ್ತಿಯುತಳೂ ಆದ ಅದಿತಿಯು, ಅವಳ ಉತ್ಸಂಗವನ್ನೇ ಆಶ್ರಯಿಸಿರುವ ನಮಗೆ ಕಲ್ಯಾಣವನ್ನುಂಟುಮಾಡಲಿ.

ಈ ಎಲ್ಲಾ ಸನ್ನಿವೇಶಗಳಲ್ಲೂ ಸಹ ಅದಿತಿಯು ಜಗತ್ಸೃಷ್ಟಿಗೂ, ಜಗತ್ಪೋಷಣೆಗೂ ಪ್ರಧಾನಕಾರಣಳಾಗಿದ್ದಾಳೆ ಎಂಬಂಶಗಳು ವಿಶದವಾಗಿವೆ.



॥ ಸಂಹಿತಾಪಾಠಃ ॥

ಅಗ್ನಿರೀಶೇ ವಸವ್ಯಸ್ಯಾಗ್ನಿರ್ಮಹಃ ಸೌಭಗಸ್ಯ ।
ತಾನ್ಯಸ್ಮಭ್ಯಂ ರಾಸತೇ ॥ ೮ ॥

॥ ಪದಪಾಠಃ ॥

ಅಗ್ನಿಃ । ಈಶೇ । ವಸವ್ಯಸ್ಯ । ಅಗ್ನಿಃ । ಮಹಃ । ಸೌಭಗಸ್ಯ ॥
ತಾನಿ । ಅಸ್ಮಭ್ಯಂ । ರಾಸತೇ ॥ ೮ ॥

॥ ಸಾಯಣಭಾಷ್ಯಂ ॥

ಅಗ್ನಿರ್ದೇವೋ ವಸವ್ಯಸ್ಯ ಧನಸಮೂಹಸ್ಯೇಶೇ । ಈಷ್ಟೇ ದಾತುಂ । ತಥಾಗ್ನಿರ್ಮಹೋ ಮಹತಃ ಸೌಭಗಸ್ಯ ಸುಭಗತ್ವಸ್ಯಾಪೀಶೇ । ಅತಸ್ತಾನಿ ಧನಾನಿ ಸೌಭಾಗ್ಯಂ ಚಾಸ್ಮಭ್ಯಂ ರಾಸತೇ । ದದಾತು ॥

॥ ಪ್ರತಿಪದಾರ್ಥ ॥

ಅಗ್ನಿಃ—ದೇವತಾತ್ಮನಾದ ಅಗ್ನಿಯು । ವಸವ್ಯಸ್ಯ—ಧನಸಮೂಹಕ್ಕೆ । ಈಶೇ—ಒಡೆಯನಾಗಿದ್ದಾನೆ । ಅಗ್ನಿಃ—ಅಗ್ನಿಯು । ಮಹಃ—ಮಹತ್ತಾದ । ಸೌಭಗಸ್ಯ—ಸೌಭಾಗ್ಯಕ್ಕೂ (ಪ್ರಭುವಾಗಿದ್ದಾನೆ) । ತಾನಿ—ಅವುಗಳನ್ನೆಲ್ಲಾ । ಅಸ್ಮಭ್ಯಂ—ನಮಗೆ । ರಾಸತೇ—ಕೊಡಲಿ.

॥ ಭಾವಾರ್ಥ ॥

ದೇವತಾತ್ಮನಾದ ಅಗ್ನಿಯು ಧನಸಮೂಹಕ್ಕೆ ಒಡೆಯನಾಗಿದ್ದಾನೆ. ಅಗ್ನಿಯು ಮಹತ್ತಾದ ಸೌಭಾಗ್ಯಕ್ಕೂ ಪ್ರಭುವಾಗಿದ್ದಾನೆ. ಅಗ್ನಿಯು ಅವುಗಳನ್ನೆಲ್ಲಾ ನಮಗೆ ಒದಗಿಸಲಿ.

English Translation.

Agni is lord over treasure: Agni (is lord) over great good fortune: may he bestow them upon us.



॥ ಸಂಹಿತಾಪಾಠಃ ॥

ಉಷೋ ಮಘೋನ್ಯಾ ವಹ ಸೂನೃತೇ ವಾರ್ಯಾ ಪುರು ।
ಅಸ್ಮಭ್ಯಂ ವಾಜಿನೀವತಿ ॥ ೯ ॥

॥ ಪದಪಾಠಃ ॥

ಉಷಃ । ಮಘೋನಿ । ಆ । ವಹ । ಸೂನೃತೇ । ವಾರ್ಯಾ । ಪುರು ।

ಅಸ್ಮಭ್ಯಂ । ವಾಜಿನೀಽವತಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಉಷೋ ಹೇ ಮಘೋನಿ ಧನವತಿ ಹೇ ಸೂನೃತೇ ಪ್ರಿಯೆಸತ್ಯರೂಪವಾಗಭಿಮಾನಿನಿ ಹೇ ವಾಜಿನೀವತ್ಯನ್ನವತಿ ದೇವಿ ಅಸ್ಮಭ್ಯಂ ವಾರ್ಯಾ ವರಣೀಯಾನಿ ಪುರು ಬಹೂನಿ ಧನಾನ್ಯಾ ವಹ ಪ್ರಾಪಯ ॥

॥ ಪ್ರತಿಪದಾರ್ಥ ॥

ಮಘೋನಿ—ಧನವತಿಯೂ । ಸೂನೃತೇ—ಸತ್ಯವಾಕ್ಕಿನಲ್ಲಿ ಪ್ರೀತಿಯುಳ್ಳವಳೂ । ವಾಜಿನೀವತಿ । ಅನ್ನವಂತಳೂ ಆದ । ಉಷಃ—ಎಲೈ ಉಷೋದೇವಿಯೇ । ಅಸ್ಮಭ್ಯಂ—ನಮಗೆ । ವಾರ್ಯಾ—ಅಪೇಕ್ಷಿತಗಳಾದವೂ । ಪುರು—ಅಧಿಕವಾದವೂ ಆದ ಧನಗಳನ್ನು । ಆ ವಹ—ತಂದೊದಗಿಸು.

॥ ಭಾವಾರ್ಥ ॥

ಧನವತಿಯೂ, ಸತ್ಯವಾಕ್ಕಿನಲ್ಲಿ ಪ್ರೀತಿಯುಳ್ಳವಳೂ, ಅನ್ನವಂತಳೂ ಆದ ಉಷೋದೇವಿಯೇ, ನಮಗೆ ಅಪೇಕ್ಷಿತಗಳಾದವೂ, ಅಧಿಕವಾದವೂ ಆದ ಧನಗಳನ್ನು ತಂದೊದಗಿಸು.

## English Translation.

Opulent Ushas, truth-speaking, food-abounding, bestow upon us many good things.

॥ ಸಂಹಿತಾಪಾಠಃ ॥

ತತ್ಸು ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ ।

ಇಂದ್ರೋ ನೋ ರಾಧಸಾ ಗಮತ್ ॥ ೧೦ ॥

॥ ಪದಪಾಠಃ ॥

ತತ್ । ಸು । ನಃ । ಸವಿತಾ । ಭಗಃ । ವರುಣಃ । ಮಿತ್ರಃ । ಅರ್ಯಮಾ ।

ಇಂದ್ರಃ । ನಃ । ರಾಧಸಾ । ಆ । ಗಮತ್ ॥ ೧೦ ॥

॥ ಸಾಯಣಭಾಷ್ಯಂ ॥

ಯೇನ ರಾಧಸಾ ಧನೇನ ಸಹ ಸವಿತಾ ಭಗೋ ವರುಣೋ ಮಿತ್ರೋಽರ್ಯಮೇಂದ್ರಃ ಪ್ರತ್ಯೇಕಮಾಗಮತ್ । ಆಗಚ್ಛತಿ ಯಜ್ಞಂ। ತದ್ರಾಧೋ ಧನಂ ತೇ ದೇವಾ ನೋಽಸ್ಮಭ್ಯಂ ಸು ಸುಷ್ಠು ಪ್ರಯಚ್ಛಂತ್ವಿತಿ ಶೇಷಃ ॥

॥ ಪ್ರತಿಪದಾರ್ಥ ॥

ಸವಿತಾ—ಸವಿತೃವೂ । ಭಗಃ—ಭಗನೂ । ವರುಣಃ—ವರುಣನೂ । ಮಿತ್ರಃ—ಮಿತ್ರನೂ । ಅರ್ಯಮಾ—ಅರ್ಯಮನೂ । ಇಂದ್ರಃ—ಇಂದ್ರನೂ । ರಾಧಸಾ—ಧನಗಳೊಂದಿಗೆ । ನಃ—ನಮ್ಮ ಈ ಯಜ್ಞಕ್ಕೆ । ಆ ಗಮತ್—ದಯಮಾಡಲಿ । ತತ್—ಆಯಾ ದೇವತೆಯ ಸಂಬಂಧಿಯಾದ ಧನವನ್ನು । ನಃ—ನಮಗೆ । ಸು—ಅತಿಶಯವಾಗಿ ಕೊಡಲಿ.

॥ ಭಾವಾರ್ಥ ॥

ಸವಿತೃವೂ, ಭಗನೂ, ವರುಣನೂ, ಮಿತ್ರನೂ, ಅರ್ಯಮನೂ ಮತ್ತು ಇಂದ್ರನೂ ಸಹ ತಮ್ಮ ಧನಗಳೊಂದಿಗೆ ನಮ್ಮ ಯಜ್ಞಕ್ಕೆ ದಯಮಾಡಲಿ. ಮತ್ತು ಆಯಾ ದೇವತೆಯು ತತ್ಸಂಬಂಧಿಯಾದ ಧನವನ್ನು ನಮಗೆ ಕೊಡಲಿ.

## English Translation.

May Savitri, Bhaga, Varuna, Mitra, Aryaman, Indra, come to us with the wealth (that each bestows).

# ಐವತ್ತಾರನೆಯ ಸೂಕ್ತವು

## ಪೀಠಿಕೆ.

ದ್ಯಾವಾಪೃಥಿವಿಗಳು—ಅತಿಪ್ರಾಚೀನರೂ, ದೇವತೆಗಳಿಗೆಲ್ಲಾ ಮಾತಾಪಿತೃಗಳೆಂದು ಪ್ರಶಂಸಿತರಾಗಿರುವವರೂ ಆದ ದ್ಯಾವಾಪೃಥಿವಿಗಳ ಸ್ವರೂಪ ಮತ್ತು ಪ್ರಭಾವಗಳನ್ನು ಪರಿಶೀಲಿಸುವುದು ಉಚಿತವಾಗಿರುತ್ತದೆ. ಆದುದರಿಂದ ಈ ಭಾಗದಲ್ಲಿ ಅವರ ಮಹಿಮಾತಿಶಯಗಳನ್ನು ವರ್ಣಿಸುವ ವಾಕ್ಯಗಳನ್ನುದ್ಧರಿಸಿ ವಿವರಿಸಲಾಗುತ್ತದೆ.

ದ್ಯಾವಾಪೃಥಿವಿಗಳು ಸಾಧಾರಣವಾಗಿ ಇತರ ದೇವತೆಗಳೊಂದಿಗೆ ಆಹೂತರೂ, ಪ್ರಾರ್ಥಿತರೂ, ಪೂಜಿತರೂ ಆಗಿ ಇತರ ದೇವತೆಗಳನ್ನುದ್ದೇಶಿಸಿದ ಅನೇಕ ಸೂಕ್ತಗಳಲ್ಲಿ ಅಂತರ್ಗತವಾದ ಮಂತ್ರಗಳಿಂದ ಪ್ರಶಂಸಿಸಲ್ಪಟ್ಟಿದ್ದಾರೆ. ಆದರೂ ಸಹ, ಇವರ ವೈಯಕ್ತಿಕ ಗುಣಗಳನ್ನು ಪ್ರಶಂಸಿಸುವುದಕ್ಕಾಗಿಯೇ ಕೆಲವು ಸೂಕ್ತಗಳು ನಿರ್ಮಿತವಾಗಿವೆ. (೧–೧೫೯; ೧–೧೬೦; ೧–೧೮೫; ೪–೫೬; ೬–೭೦; ೭–೫೩). ಉದಾಹರಣೆಗಾಗಿ ಇವರನ್ನು ಪ್ರಶಂಸಿಸತಕ್ಕ ಕೆಲವು ಮಂತ್ರಗಳ ಅರ್ಥಗಳನ್ನು ಇಲ್ಲಿ ವಿವರಿಸಿದೆ.

"ಯಜ್ಞವೃದ್ಧಿಗೆ ಕಾರಣರೂ, ಮಹತ್ಸ್ವರೂಪವುಳ್ಳವರೂ, ಯಜ್ಞಗಳಲ್ಲಿ ಪ್ರಶಂಸಿತರಾಗುವವರೂ ಆದ ದ್ಯಾವಾಪೃಥಿವಿಗಳನ್ನು ಹವಿರಾದ್ಯರ್ಪಣೆಗಳಿಗಾಗಿ ಸ್ತುತಿಸಿ ಪ್ರಾರ್ಥಿಸುತ್ತೇನೆ. ದೇವಮಾತೆಗಳಾದ ದ್ಯಾವಾಪೃಥಿವಿಗಳು ಯಜಮಾನರಿಂದ ನೆರವೇರಿಸಲ್ಪಟ್ಟ ಶ್ರೇಷ್ಠವಾದ ಕರ್ಮಗಳಿಂದ ಕೂಡಿದವರಾಗಿ ತಮ್ಮ ಅನುಗ್ರಹಾತ್ಮಕವಾದ ಬುದ್ಧಿಯಿಂದ ಯಜಮಾನರ ಇಷ್ಟಾರ್ಥಗಳನ್ನು ನೆರವೇರಿಸುತ್ತಾರೆ." (೧-೧೫೯-೧)

"ಯಾವಾಗಲೂ ಕೆಡಕನ್ನು ಮಾಡದಿರುವುದೂ, ಸ್ವಾಯತ್ತವಾದ ಬಲವುಳ್ಳದ್ದೂ ಆದುದರಿಂದಲೇ ಮಹತ್ತಾದದ್ದೂ ಮತ್ತು ಅನುಗ್ರಹಾತ್ಮಕವಾದದ್ದೂ ಆದ ದ್ಯುಲೋಕಾಧಿದೇವತೆಯ ಮನಸ್ಸನ್ನೂ ಮತ್ತು ಅದೇ ಗುಣಗಳುಳ್ಳ ಪೃಥ್ವಿಯ ಮನಸ್ಸನ್ನೂ ಪ್ರಾರ್ಥನಾಪೂರ್ವಕವಾದ ಸ್ತುತಿಗಳಿಂದ ಪೂಜಿಸಿ ತೃಪ್ತಿಪಡಿಸುತ್ತೇನೆ. ಜಗತ್ತಿಗೆಲ್ಲಾ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು ಶ್ರೇಷ್ಠವಾದ ತಮ್ಮ ಸಾಮರ್ಥ್ಯದಿಂದ ಯಜಮಾನರೂಪರಾದ ಪ್ರಜೆಗಳ ಇಷ್ಟಾರ್ಥಗಳನ್ನು ಅತ್ಯಧಿಕವಾದ ವಿಸ್ತೃತಿಯುಳ್ಳದ್ದನ್ನಾಗಿಯೂ, ಶಾಶ್ವತವಾದುದನ್ನಾಗಿಯೂ ತಮ್ಮ ರಕ್ಷಣಾತ್ಮಕವಾದ ಸಹಾಯಗಳಿಂದ ಮಾಡುತ್ತಾರೆ." (೧-೧೫೯-೨)

ಅತ್ಯಂತ ವಿಸ್ತಾರವಾಗಿ ಹರಡಿರುವುವೂ, ಆದ್ದರಿಂದಲೇ ಮಹತ್ತಾದವೂ, ಒಂದಕ್ಕೊಂದಕ್ಕೆ ಅಂಟಿಕೊಳ್ಳದಿರುವುವೂ ಆದ ದ್ಯಾವಾಪೃಥಿವಿಗಳು ಸಕಲ ಲೋಕಗಳನ್ನೂ ಸುರಕ್ಷಿತವಾಗಿ ಕಾಪಾಡುತ್ತಾರೆ. ದೃಢವಾದ ಸಂಕಲ್ಪವುಳ್ಳ ದ್ಯಾವಾಪೃಥಿವಿಗಳು ಸಕಲ ಪ್ರಾಣಿಗಳ ಯೋಗಕ್ಷೇಮಕ್ಕಾಗಿಯೇ ಇರುವಂತಿದ್ದಾರೆ. ಪಿತೃಸ್ಥಾನದಲ್ಲಿರುವ ಅಂತರಿಕ್ಷವು ತನ್ನ ಪ್ರಶಸ್ತವಾದ ಪ್ರಭೆಯನ್ನು ಸುತ್ತಲೂ ಹರಡಿ ಸರ್ವತ್ರ ವ್ಯಾಪಿಸಿದೆ. (೧-೧೬೦-೨)

"ಪ್ರಸಿದ್ಧರಾದವರೂ, ಮಹತ್ತಾದವರೂ ಆದ ಎಲೈ ದ್ಯಾವಾಪೃಥಿವಿಗಳೇ, ನಮ್ಮಿಂದ ಸ್ತುತರಾದ ನೀವು ನಮಗೆ ಪ್ರಭೂತವಾದ ಅನ್ನವನ್ನೂ ಬಲವನ್ನೂ ಕೊಡಿರಿ. ಅದರಿಂದ ನಾವು ಪ್ರತಿದಿನವೂ ನಮ್ಮ ಸಂತತಿಯನ್ನು ಬೆಳೆಸುವಂತೆ ಅನುಗ್ರಹಿಸಿ. ನಮಗೆ ಸ್ತುತ್ಯರ್ಹವಾದ ವೀರ್ಯವನ್ನು ವೃದ್ಧಿಪಡಿಸಿ." (೧-೧೬೮-೫)

ದ್ಯಾವಾಪೃಥಿವಿಗಳನ್ನು ಪ್ರಶಂಸಿತಕ್ಕ ಸಮಸ್ತ ಸೂಕ್ತಗಳಲ್ಲೂ ಸಹ ಅವರ ವಿಶೇಷಗುಣಗಳನ್ನು ತೋರಿಸುವ ಅನೇಕ ವಿಶೇಷಣಗಳು ಅವರ ಮಹತ್ವವನ್ನು ಕೊಂಡಾಡುತ್ತವೆ. ಅವರ ಅಸಾಧಾರಣವಾದ ವಿಸ್ತೃತಿ (ಉರುವ್ಯಚಸಾ), ಗಭೀರತೆ (ಗಭೀರೇ), ಫಲೋತ್ಪತ್ತಿ ಸಾಮರ್ಥ್ಯ (ಭೂರಿರೇತಸಾ), ಸ್ಥೈರ್ಯ (ಅಚರೇ), ಇತ್ಯಾದಿಯಾದ ಭೌತಿಕವಾದ ಮಹದ್ಗುಣಗಳನ್ನು ವರ್ಣಿಸುವ ವಿಶೇಷಣಗಳಲ್ಲದೇ (೧-೧೬೦-೨); ೧-೧೮೫-೭; ೪-೫೬-೩; ೬-೭೦-೧; ೬-೭೦-೨), ಸತ್ಯಪಾಲಕರು, ಸತ್ಯವನ್ನು ವೃದ್ಧಿಮಾಡತಕ್ಕವರು (ಋತಾವರೀ, ಋತಾವೃಧಾ) ಉತ್ತಮವಾದ ಜ್ಞಾನವುಳ್ಳವರು, (ಪ್ರಚೇತಸಾ), ಜಗದುಪಕಾರಕರು (ಅದ್ರುಹಾ) ಇತ್ಯಾದಿ ವಿಶೇಷಣಗಳೂ ಹೇರಳವಾಗಿರುತ್ತವೆ. (೧-೧೫೯-೧; ೧-೧೬೦-೧; ೪-೫೬-೨; ೬-೭೦-೬; ೧೦-೩೬-೨).

1. ದ್ಯಾವಾಪೃಥಿವಿಗಳು ವಿಶ್ವಕ್ಕೆಲ್ಲಾ ಪಿತೃಗಳು (ಮಾತಾಪಿತೃಗಳು) ಎಂದು ವರ್ಣಿಸಿರುವ ಶ್ರುತಿ ವಾಕ್ಯಗಳು.

ದ್ಯಾವಾಪೃಥಿವಿಗಳಿಬ್ಬರೂ ಒಟ್ಟಿಗೆ ವಿಶ್ವಪಿತೃಗಳೆಂದೂ (ಪಿತರಾ;—೧-೧೫೯-೨; ೩-೩-೧೧; ೭-೫೩-೨; ೧೦-೬೫-೮), ಮಾತೃಗಳೆಂದೂ (ಮಾತರಾ;—೧-೧೫೫-೩; ೯-೮೫-೧೨; ೧೦-೧-೭; ೧೦-೩೫-೩; ೧೦-೬೪-೧೪) ಮತ್ತು ಜನಕರೆಂದೂ (ಜನಿತ್ರೀ;—೧೦-೧೧೦-೯) ವರ್ಣಿತರಾಗಿದ್ದಾರೆ. ಕೆಲವೆಡೆ

ಗಳಲ್ಲಿ ದ್ಯುಲೋಕವು ಪಿತೃವೆಂದೂ, ಪೃಥ್ವಿಯು ಮಾತೃವೆಂದೂ ನಿರ್ದೇಶಿಸಲ್ಪಟ್ಟಿವೆ. (೧-೮೯-೪ ; ೧-೯೦-೭ ; ೧-೧೫೯-೨ ; ೧-೧೬೦-೨ ; ೧-೧೮೫-೧೧ ; ೪-೧-೧೦ ; ೫-೪೨-೧೬ ; ೫-೪೩-೨ ; ೫-೪೩-೧೫ ; ೬-೫೧-೫ ; ೬-೭೦-೬ ; ೬-೭೨-೨ ; ೮-೯೨-೨ ; ೧೦-೫೪-೩ ; ೧೦-೮೮-೧೫ ; ವಾ. ಸಂ. ೧೯-೪೭ ಅ. ವೇ. ೨-೨೮-೪ ; ೩-೨೩-೬ ೬-೪-೩ ; ೬-೧೨೦-೨ ; ೮-೭-೨ ; ೧೨-೧-೧೦ ಅಥರ್ವವೇದದಲ್ಲಿ ಇನ್ನೊಂದುಕಡೆ ಕೊಂಚ ವ್ಯತ್ಯಸ್ತವಾದ ವರ್ಣನವು ಕಂಡುಬರುತ್ತದೆ.

ಮಾತಾ ಭೂಮಿಃ ಪುತ್ರೋಽಹಂ ಪೃಥಿವ್ಯಾಃ । ಪರ್ಜನ್ಯಃ ಪಿತಾ ಸ ಉ ನಃ ಪಿಪರ್ತು ॥
(ಅ. ವೇ. ೧೨-೧-೧೨)

ಪೃಥ್ವಿಯು ನಮ್ಮ ಮಾತೆಯು. ನಾನು ಪೃಥ್ವಿಯ ಪುತ್ರನು. ಪರ್ಜನ್ಯನು ನಮ್ಮ ಪಿತೃವು. ಅದೇ ಪರ್ಜನ್ಯನು ನಮ್ಮನ್ನು ಪೂರ್ಣವಾಗಿ ಪೋಷಿಸಲಿ ಎಂದು ಸ್ತುತಿಸಿ ಪ್ರಾರ್ಥಿಸಿದೆ. ಅಥರ್ವವೇದದಿಂದ ಉದ್ಧೃತವಾಗಿರುವ ಇದೇ ಭಾಗದ ೪೨ ನೆಯ ಮಂತ್ರದಲ್ಲಿ ಈ ರೀತಿಯ ಪ್ರಶಂಸೆಯಿದೆ.

" ಭೂಮ್ಯೈ ಪರ್ಜನ್ಯಪತ್ನ್ಯೈ ನಮೋಽಸ್ತು ವರ್ಷಮೇದಸೇ "

ವೃಷ್ಟಿಯಿಂದ ತನ್ನ ಸಂಪತ್ತನ್ನು ಬೆಳಸಿಕೊಳ್ಳುವವಳೂ, ಪರ್ಜನ್ಯಶಕ್ತಿಯೂ ಆದ ಪೃಥಿವಿಗೆ ನಮಸ್ಕಾರವು ಎಂಬ ಈ ಸ್ತುತಿಯಲ್ಲಿ, ದ್ಯುಲೋಕದ ಸ್ಥಾನದಲ್ಲಿ ಪರ್ಜನ್ಯನು ಪೃಥಿವಿಯ ಪತಿಯೆಂದು ವರ್ಣಿತನಾಗಿದ್ದಾನೆ. " ಜಾಯಾ ಭೂಮಿಃ ಪತಿರ್ವ್ಯೋಮ ಮಿಥುನಂ ತಾ " ಭೂಮಿಯೇ ಪತ್ನಿಯು, ಅಂತರಿಕ್ಷವೇ ಪತಿಯು ಎಂಬ ವರ್ಣನವು ತೈತ್ತಿರೀಯಾರಣ್ಯಕದಲ್ಲಿ ಉಕ್ತವಾಗಿದೆ.

ಐತರೇಯ ಬ್ರಾಹ್ಮಣದಲ್ಲಿ ದ್ಯಾವಾಪೃಥಿವಿಗಳ ದಾಂಪತ್ಯಸಂಬಂಧವು ಕೆಳಗೆ ವಿವಸಿರುವ ವಾಕ್ಯಗಳಿಂದ ಈ ರೀತಿ ವರ್ಣಿತವಾಗಿದೆ.

" ಇಮೌ ವೈ ಲೋಕೌ ಸಹ ಆಸ್ತಾಂ । ತೌ ವ್ಯೈತಾಂ । ನ ಅವರ್ಷತ್ ನ ಸಮುತಪತ್...........
ನ ದ್ಯಾವಾ ಅಂತರಿಕ್ಷತ್ ನ ಅಂತರಿಕ್ಷಾದ್ಭೂಮಿಃ "
(ಐ. ಬ್ರಾ. ೪-೨೭)

ದ್ಯಾವಾಪೃಥಿವಿಗಳೆರಡೂ ಒಂದು ಕಾಲದಲ್ಲಿ ಐಕ್ಯವಾಗಿದ್ದವು. ನಂತರ ಒಂದಕ್ಕೊಂದು ಬೇರೆಯಾದವು. ಬೇರೆ ಯಾದೊಡನೆಯೇ ವೃಷ್ಟಿಪತನವಾಗಲಿ ಸೂರ್ಯಪ್ರಕಾಶವಾಗಲಿ ಸಂಭವಿಸಲಿಲ್ಲ. ದೇವಮಾನವಾದಿ ಪಂಚಜನವೂ ಸಹ ಒಬ್ಬರಿಗೊಬ್ಬರು ಶಾಂತಿಪಾಲನವನ್ನು ಮಾಡಲು ಸಾಧ್ಯವಾಗಲಿಲ್ಲ. ಆಗ ದೇವತೆಗಳು ಈ ಎರಡು ಲೋಕ ಗಳನ್ನೂ ಒಟ್ಟುಗೂಡಿಸಲು ಪ್ರಯತ್ನಿಸಿದರು. ಅವರ ಪ್ರಯತ್ನವು ಸಫಲವಾಗಿ ಪುನಃ ದ್ಯಾವಾಪೃಥಿವಿಗಳು ಒಂದು ಗೂಡಿದವು. ಎರಡಕ್ಕೂ ವಿಧ್ಯುಕ್ತವಾದ ವಿವಾಹವು ನಡೆಯಿತು " ಎಂದು ಈ ಪ್ರಕರಣದ ಕೊನೆಯಲ್ಲಿ "ದ್ಯುಲೋಕವು ಪೃಥ್ವಿಯನ್ನು ಸಮೀಪಿಸಿತು. ಆಗ ದ್ಯಾವಾಪೃಥಿವಿಗಳೆಂಬ ಐಕ್ಯಸೂಚಕವಾದ ಹೆಸರು ಪ್ರಸಿದ್ಧವಾಯಿತು. ಅಂತರಿಕ್ಷ ದಿಂದ ದ್ಯುಲೋಕವಾಗಲಿ ಅಥವಾ ಪೃಥಿವಿಯಾಗಲಿ ಉತ್ಪನ್ನವಾಗಲಿಲ್ಲ.

ದ್ಯಾವಾಪೃಥಿವಿಗಳು ಕೇವಲ ಮಾನವರಿಗೆ ಮಾತ್ರ ಮಾತಾಪಿತೃಗಳಲ್ಲ ದೇವಪುತ್ರೇ ಎಂದು ಅನೇಕ ಶ್ರುತಿವಾಕ್ಯಗಳಲ್ಲಿ ನಿರ್ದಿಷ್ಟರಾಗಿರುವುದರಿಂದ ಅವರು ದೇವತೆಗಳಿಗೂ ಮಾತಾಪಿತೃಗಳೆಂದು ಪ್ರಸಿದ್ಧವಾದ ವಿಷಯ

ವಾಗಿದೆ. ಈ ವಿಶೇಷಣವು ಅನೇಕಕಡೆಗಳಲ್ಲಿ ಅವರ ದೇವಪಿತೃತ್ವವನ್ನು ಸ್ಥಿರಪಡಿಸುತ್ತದೆ. (ಉದಾಹರಣೆಗೆ :— ೧-೧೦೬-೩ ; ೧-೧೫೯-೧ ; ೧-೧೮೫-೪ ; ೪-೫೬-೨ ; ೬-೧೭-೭ ; ೭-೫೩-೧ ; ೧೦-೧೧-೯) ೭-೯೭-೮ರಲ್ಲಿ ಜನಿತ್ರಿಗಳಾದ ದ್ಯಾವಾಪೃಥಿವಿಗಳು (ರೋದಸೀ) ಬೃಹಸ್ಪತಿಯನ್ನು ಪೋಷಿಸಿದರು ಎಂದು ವರ್ಣಿತವಾಗಿದೆ. ೩-೫೩-೭ ಮತ್ತು ೪-೨-೧೫ನೇ ಮಂತ್ರಗಳಲ್ಲಿ ಅಂಗಿರಸ್ಸುಗಳು **ದಿವಸ್ಪುತ್ರರೆಂದು** ನಿರ್ದಿಷ್ಟರಾಗಿದ್ದಾರೆ. ೧೦-೨.೭ರಲ್ಲಿ ಇದೇ ದ್ಯಾವಾಪೃಥಿವಿಗಳು ತ್ವಷ್ಟೃವಿನೊಂದಿಗೂ ಮತ್ತು ಅಪ್ಪುಗಳೊಂದಿಗೂ ಸೇರಿ ಅಗ್ನಿಯನ್ನು ಉತ್ಪನ್ನವಾಗುವಂತೆ ಮಾಡಿದರು ಎಂದು ಸ್ತುತರಾಗಿದ್ದಾರೆ. ಇದಲ್ಲದೆ, ಅನೇಕ ಪ್ರಕರಣಗಳಲ್ಲಿ ಅವರು ಭುವನಗಳನ್ನೆಲ್ಲಾ ನಿರ್ಮಿಸಿದರೆಂದೂ, ಸಕಲಭೂತಗಳನ್ನೂ ಧರಿಸಿ ಪೋಷಿಸುವರೆಂದೂ ಪ್ರಶಂಸಿತರಾಗಿದ್ದಾರೆ. (೧-೧೫೦-೨ ; ೧-೧೬೦-೨ ; ೧-೧೮೫-೧) [೬-೫೦-೭ನೇ ಮಂತ್ರದಲ್ಲಿ ಮಾತ್ರ ಸಕಲ ಚರಾಚರಾತ್ಮಕವಾದ ಪ್ರಪಂಚಕ್ಕೂ ಅಪ್ಪೇ (ಉದಕ) ಮೂಲವೆಂದು ಖಚಿತವಾಗಿ ತಿಳಿಸಿದೆ].

೧೦-೬೩-೨ ನೇ ಮಂತ್ರದಲ್ಲಿ ದೇವತೆಗಳ ಉತ್ಪತ್ತಿಕ್ರಮವನ್ನು ಮೂರುಭಾಗವಾಗಿ ವಿಂಗಡಿಸಿ ಕೆಲವರು ಅಂತರಿಕ್ಷಸ್ಥಾನವಾದ ಅಪ್ಪುಗಳಿಂದ ಉತ್ಪನ್ನರಾದರೆಂದೂ, ಇನ್ನು ಕೆಲವರು ಪೃಥ್ವಿಯಿಂದ ಉತ್ಪನ್ನರಾದರೆಂದೂ ತಿಳಿಸಿದೆ. ಇದರ ವಿವರಣೆಯನ್ನು ಮುಂದಿನ ಪ್ರಕರಣದಲ್ಲಿ ತಿಳಿಸಲಾಗುತ್ತದೆ.

## 2. ದ್ಯಾವಾಪೃಥಿವಿಗಳ ಉತ್ಪತ್ತಿಕ್ರಮವನ್ನು ವಿವರಿಸುವ ಪ್ರಕರಣಗಳು :—

ದೇವಮಾನವಾದಿ ಸಕಲ ಭೂತಗಳಿಗೂ ಜನಿತ್ರಿಗಳಾದ ದ್ಯಾವಾಪೃಥಿವಿಗಳೇ ಬೇರೆ ಮೂಲದಿಂದ ಉತ್ಪನ್ನವಾದವಾಗಿವೆ ಎಂದು ವರ್ಣಿತವಾಗಿರುವ ಪ್ರಕರಣಗಳೂ ಅನೇಕವಾಗಿವೆ. "ಈ ದ್ಯಾವಾಪೃಥಿವಿಗಳನ್ನು ನಿರ್ಮಿಸಿದ ದೇವನು, ದೇವಶಿಲ್ಪಿಗಳಲ್ಲೆಲ್ಲಾ ಅತ್ಯಂತ ನಿಪುಣನಾಗಿರಬೇಕು" ಇತ್ಯಾದಿಯಾಗಿ ೧-೧೬೦-೪ ; ೪-೫೬-೩ ನೇ ಮಂತ್ರಗಳಲ್ಲಿ ಪ್ರಶಂಸಿಸಿದೆ.

ಇಂತಹ ಮಾಹಾತ್ಮ್ಯದಿಂದ ಕೂಡಿದ ದ್ಯಾವಾಪೃಥಿವಿಗಳನ್ನು ನಿರ್ಮಿಸಿದವನು ಕುಶಲಕರ್ಮಿಯೇ ಸರಿ ಎಂದು ವರ್ಣಿತವಾಗಿರುವ ಸಂದರ್ಭಗಳನ್ನು ಪ್ರಶಂಸಾವಾಕ್ಯಗಳೆಂದೇ ಹೇಳಿದರೂ ಹೇಳಬಹುದು **ಪೂರ್ವಂ ಪುತ್ರಮಾಹಾತ್ಮ್ಯೇನ ಏತೇ ಪ್ರಶಸ್ಯ** " ಎಂಬ ಸಾಯಣರ ವಾಕ್ಯವೂ ಈ ತಾತ್ಪರ್ಯವನ್ನೇ ಸೂಚಿಸುತ್ತದೆ. (೧-೧೬೦-೪ ಸಾ. ಭಾ.) ಆದರೂ ಸಹ, ಜಗಜ್ಜನನಿಯರಾದ ದ್ಯಾವಾಪೃಥಿವಿಗಳಿಗೂ ಮೂಲವಾದ ಇನ್ನೊಂದು ಪರವಸ್ತುವಿನ ವಿಷಯದಲ್ಲಿ ಋಷಿಯ ಶ್ರದ್ಧೆಯು ಇದರಿಂದ ವ್ಯಕ್ತವಾಗುತ್ತದೆ ೬-೩೦-೫ ಮತ್ತು ೮-೩೬-೪ ನೇ ಮಂತ್ರಗಳು ಇಂದ್ರನೇ ದ್ಯಾವಾಪೃಥಿವಿಗಳ ನಿರ್ಮಾಪಕನೆಂದು ತಿಳಿಸುತ್ತವೆ. (**ಜನಿತಾ ದಿವೋ ಜನಿತಾ ಪೃಥಿವ್ಯಾಃ**) "**ಇಂದ್ರೋ ಯಾಂ ಚಕ್ರೇ** ..........." ಇಂದ್ರನು ಯಾವ ಪೃಥ್ವಿಯನ್ನು ತನ್ನ ಸಖಿಭೂತಳನ್ನಾಗಿ ಮಾಡಿ ನಿರ್ಮಿಸಿದನೋ ಆ ಪೃಥ್ವಿಯು ಅವಳ ಪುತ್ರಳಾದ ನನಗೆ ಕ್ಷೀರವನ್ನೊದಗಿಸಲಿ ಎಂದು ಅಥರ್ವವೇದದ ವಾಕ್ಯವಿದೆ. (ಅ. ವೇ. ೧೨-೧-೧೦). ಇಂದ್ರನು ದ್ಯಾವಾಪೃಥಿವಿಗಳ ನಿರ್ಮಾಪಕನು ಎಂದು ವರ್ಣಿತವಾಗಿರುವ ವಾಕ್ಯಗಳಲ್ಲಿ ಕೆಲವನ್ನು ಇಲ್ಲಿ ಉದಹರಿಸಬಹುದು.

" ಇಂದ್ರನು ತನ್ನ ನಿರ್ಮಾಣಕೌಶಲದಿಂದ ದ್ಯಾವಾಪೃಥಿವಿಗಳನ್ನು ಆಕರ್ಷಕವಾಗಿರುವಂತೆ ನಿರ್ಮಿಸಿದ್ದಾನೆ "
(೧೦-೨೯-೬)

"ಎಲೈ ಇಂದ್ರನೇ, ನೀನು ನಿನ್ನ ಸ್ವಶರೀರದಿಂದಲೇ, ಜಗತ್ತಿಗೆ ಮಾತಾಪಿತೃಗಳಾದ ದ್ಯಾವಾಪೃಥಿವಿಗಳನ್ನು ನಿರ್ಮಿಸಿದೆ" (೧೦-೫೪-೪)

"ಇಂದ್ರನು ಪೃಥ್ವಿಯನ್ನೂ, ದ್ಯುಲೋಕವನ್ನೂ, ಅಂತರಿಕ್ಷವನ್ನೂ ಆಯಾ ಲೋಕನಿವಾಸಿಗಳಿಗೆ ವಿಭಾಗಿಸಿ ಕೊಟ್ಟನು" (೩-೫೪-೪)

"ಇಂದ್ರನು ಪೃಥ್ವಿಯನ್ನೂ, ದ್ಯುಲೋಕವನ್ನೂ, ಅಂತರಿಕ್ಷವನ್ನೂ ಸಹ ತನ್ನ ಸ್ವಶಕ್ತಿಯಿಂದಲೇ ಧರಿಸಿದ್ದಾನೆ". (೩-೩೨-೮ ; ೩-೪೪-೩ ; ೬-೧೭-೭ ; ೧೦-೫೫-೧)

"ಎಲೈ ಇಂದ್ರನೇ, ನೀನು ಈ ದ್ಯಾವಾಪೃಥಿವಿಗಳನ್ನು ನಿನ್ನ ಮುಷ್ಟಿಯಿಂದ ಹಿಡಿದು ನಿಲ್ಲಿಸಿರುವೆ" (೩-೩೦-೫)

"ಇಂದ್ರನು ತನ್ನ ಮಹಿಮೆಯಿಂದ ಈ ದ್ಯಾವಾಪೃಥಿವಿಗಳನ್ನು ತನ್ನಿಷ್ಟ ಬಂದಂತೆ ಸಂಕೋಚಗೊಳಿಸುತ್ತಾನೆ. ಮತ್ತು ವಿಕಾಸಗೊಳಿಸುತ್ತಾನೆ" (೮-೬-೫)

"ದ್ಯಾವಾಪೃಥಿವಿಗಳೆರಡೂ ಇಂದ್ರನ ಅರ್ಧಕ್ಕೆ ಸಮ. ಇಂದ್ರನು ಅವುಗಳನ್ನು ಮೀರಿದ್ದಾನೆ" (೬-೩೦-೧)

"ರಥದ ಚಕ್ರವು ಅಶ್ವಗಳನ್ನು ಹಿಂಬಾಲಿಸುವಂತೆ ದ್ಯಾವಾಪೃಥಿವಿಗಳು ಇಂದ್ರನನ್ನೇ ಹಿಂಬಾಲಿಸುತ್ತವೆ" (೮-೬-೩೮)

"ಇಂದ್ರನಿಗೆ ದ್ಯಾವಾಪೃಥಿವಿಗಳೆರಡೂ ತಲೆಬಾಗುತ್ತವೆ" (೧-೧೩೧-೧)

"ದ್ಯಾವಾಪೃಥಿವಿಗಳು ಇಂದ್ರನಿಗೆ ಹೆದರಿ ಅವನ ಮುಂದೆ ನಡಗುತ್ತನೆ" (೫-೧೭-೨), (೪-೨೨-೩ ; ೬-೧೭-೯ ; ೮-೮೬-೧೪)

"ಇಂದ್ರನ ಮಹತ್ವವನ್ನು ನೋಡಿ ದ್ಯಾವಾಪೃಥಿವಿಗಳು ಕ್ಷುಭಿತವಾಗುತ್ತವೆ" (೭-೨೩-೩)

"ಅವನ ಪ್ರಭುತ್ವಕ್ಕೆ ಮಣಿದು ಅವನ ಅಧೀನದಲ್ಲಿರುತ್ತವೆ" (೧೦-೮೯-೧೦)

"ಅವನ ಶಕ್ತಿಗೆ ತಲೆಬಾಗಿ ತಮ್ಮ ಗೌರವವನ್ನು ಸೂಚಿಸುತ್ತವೆ" (೮-೮೨-೧೨)

ಇದೇ ದ್ಯಾವಾಪೃಥಿವಿಗಳು, ಸೋಮಾದಿ ಇತರ ದೇವತೆಗಳಿಂದಲೂ ನಿರ್ಮಿತವಾದವು ಎಂಬ ವಿವರಣೆಯೂ ಅನೇಕ ಕಡೆಗಳಲ್ಲಿರುತ್ತವೆ. ಉದಾಹರಣೆಗೆ :—

"ಸೋಮ ಮತ್ತು ಪೂಷದೇವತೆಗಳು ದ್ಯಾವಾಪೃಥಿವಿಗಳನ್ನು ಉತ್ಪನ್ನಮಾಡಿದರು" (೨-೪೦-೧)

"ಸೋಮನು ರೋದಸಿಗಳನ್ನು ಜನಿಸುವಂತೆ ಮಾಡಿದನು" (೯-೯೮-೯ ; ೯-೯೦-೧ ; ೯-೯೬-೫)

"ಧಾತೃವು ಸೂರ್ಯಚಂದ್ರಮಸ್ಸುಗಳನ್ನು ನಿರ್ಮಿಸಿದಂತೆಯೇ, ದ್ಯುಲೋಕವನ್ನೂ, ಪೃಥ್ವಿಯನ್ನೂ ನಿರ್ಮಿಸಿದನು" (೧೦-೧೯೦-೩)

"ಹಿರಣ್ಯಗರ್ಭನು ದ್ಯುಲೋಕವನ್ನೂ, ಪೃಥಿವಿಯನ್ನೂ ಉತ್ಪನ್ನವಾಗುವಂತೆ ಮಾಡಿದನು" (೧೦-೧೨೧-೯)

" ತಾವೇ ಜಗತ್ಪತಿಗಳಾದರೂ ಸಹ ದ್ಯಾವಾಪೃಥಿವಿಗಳು ತಮ್ಮ ರೂಪ ಮತ್ತು ವೈವಿಧ್ಯಗಳನ್ನು ತ್ವಷ್ಟೃ ವಿನಿಂದ ಪಡೆದರು " (೧೦-೧೧೦-೯)

" ಪರಮಪುರುಷನ ಶಿರಸ್ಸಿನಿಂದ ದ್ಯುಲೋಕವೂ, ಪಾದಗಳಿಂದ ಪೃಥಿವಿಯೂ ಆವಿರ್ಭೂತವಾದವು" (೧೦-೯೦-೧೪)

" ಮಿತ್ರನೂ, ಸವಿತೃವೂ ಈ ದ್ಯಾವಾಪೃಥಿವಿಗಳಿಗೆ ಧಾರಕರಾಗಿದ್ದಾರೆ" (೩-೫೯-೧ ; ೪-೫೩-೨ ; ೧೦-೧೪೯-೧)

" ಈ ದ್ಯಾವಾಪೃಥಿವಿಗಳು ವರುಣ, ಇಂದ್ರ ಸೋಮ, ಮತ್ತು ಹಿರಣ್ಯಗರ್ಭ ಇವರ ಧಾರಣೆಯಲ್ಲಿದ್ದಾರೆ" (೬-೭೦-೧- ; ೭-೮೬-೧ ; ೮-೪೨-೧ ; ೬-೭೨-೨ ; ೯-೮೭-೨ ; ೧೦-೧೨೧-೫)

ಇತ್ಯಾದ್ಯನೇಕ ವಾಕ್ಯಗಳು ದ್ಯಾವಾಪೃಥಿವಿಗಳ ಉತ್ಪತ್ತಿಕ್ರಮವನ್ನು ಮತ್ತು ಇಂದ್ರಾದಿದೇವತೆಗಳಿಗೆ ಅಧೀನವಾಗಿರುವುದನ್ನೂ ತಿಳಿಸುತ್ತವೆ.

### 3. ದ್ಯಾವಾಪೃಥಿವಿಗಳ ಉತ್ಪತ್ತಿ ವಿಷಯದಲ್ಲಿ ಕೆಲವು ಕಲ್ಪನೆಗಳು :—

ಅನೇಕ ಸಂದರ್ಭಗಳಲ್ಲಿ ಸೂಕ್ತದ್ರಷ್ಟೃವಾದ ಋಷಿಯು ದ್ಯಾವಾಪೃಥಿವಿಗಳ ಉತ್ಪತ್ತಿ ಮತ್ತು ಸ್ವರೂಪಗಳನ್ನು ವರ್ಣಿಸುವಾಗ ತನ್ನ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾನೆ.

" ಈ ದ್ಯಾವಾಪೃಥಿವಿಗಳಲ್ಲಿ ಪೂರ್ವಭಾವಿಯಾದುದಾವುದು ? ಅನಂತರ ಉತ್ಪನ್ನವಾದುದು ಯಾವುದು ? ಅವುಗಳ ಉತ್ಪತ್ತಿಕ್ರಮವಾವುದು ? ಎಲೈ ಋಷಿಗಳೇ, ನಿಮ್ಮಲ್ಲಿ ಈ ವಿಷಯವು ಯಾರಿಗೆ ತಿಳಿದಿದೆ?" ಎಂದು ಪ್ರಶ್ನಿಸಿದೆ (೧-೧೮೫-೧).

" ಇಯಂ ಪೃಥ್ವೀ ಭೂತಸ್ಯ ಪ್ರಥಮಜಾ " ಉತ್ಪನ್ನವಾದ ವಸ್ತುಗಳಲ್ಲೆಲ್ಲಾ ಈ ಪೃಥ್ವಿಯೇ ಪ್ರಥಮೋತ್ಪನ್ನವಾದುದು ಎಂದು ಶತಪಥಬ್ರಾಹ್ಮಣದ ವಾಕ್ಯವನ್ನು ಗಮನಿಸಬಹುದು (ಶ. ಬ್ರಾ. ೧೪-೧-೨-೧೦).

" ಅಪ್ಪುಗಳಿಗೆ ದ್ಯಾವಾಪೃಥಿವಿಗಳ ಮೂಲಸ್ಥಾನವು ತಿಳಿದಿದೆ " (೭-೩೪-೨) ಎಂದು ಒಂದು ಸಂದರ್ಭದಲ್ಲಿ ಹೇಳಿದ್ದರೆ, ಇನ್ನೊಂದು ಸನ್ನಿವೇಶದಲ್ಲಿ ಬೇರೆ ಋಷಿಯು " ಅಹೋರಾತ್ರಗಳೂ, ಉಷಸ್ಸುಗಳೂ ಉದಯ ಮತ್ತು ಅಸ್ತಮಯಗಳನ್ನು ಹೊಂದಿ ಉತ್ಪತ್ತಿವಿನಾಶಗಳಿಗೆ ಪಾತ್ರವಾಗಿರುವಾಗ ಕ್ಷಯರಹಿತವೂ ಸ್ಥಿರವೂ ಆದ ಸ್ವರೂಪವುಳ್ಳ ಈ ದ್ಯಾವಾಪೃಥಿವಿಗಳನ್ನು ಯಾವ ವನದ ಮತ್ತು ಯಾವ ವೃಕ್ಷದ ಅವಯವಗಳಿಂದ ನಿರ್ಮಿಸಿದೆ"ಯೆಂದು ಪ್ರಶ್ನಿಸಿದ್ದಾನೆ (೧೦-೩೧-೭).

ಇದೇ ಪ್ರಶ್ನೆಯು ೧೦-೮೧-೪ ನೇ ಮಂತ್ರದಲ್ಲೂ ಪುನಃ ಪಠಿತವಾಗಿದೆ. ಇದಕ್ಕೆ ಉತ್ತರದಲ್ಲಿ ಇದೇ ಸೂಕ್ತದ ಎಂದರೆ ೧೦-೮೧ ನೇ ಸೂಕ್ತದ ೨ ಮತ್ತು ೩ ನೇ ಮಂತ್ರಗಳಲ್ಲಿ ಈ ರೀತಿ ತಿಳಿಸಿದೆ.

" ಈ ದ್ಯಾವಾಪೃಥಿವಿಗಳನ್ನು ವಿಶ್ವಕರ್ಮನು ನಿರ್ಮಿಸಿದನೆಂಬುದು ಸರಿ. ಆದರೆ, ವಿಶ್ವಚಕ್ಷುವಾದ ವಿಶ್ವಕರ್ಮನು ಯಾವ ಆಧಾರದಮೇಲೆ ಮತ್ತು ಯಾವ ಅವಲಂಬನವನ್ನು ಆಶ್ರಯಿಸಿ ಈ ಪೃಥ್ವಿಯನ್ನು ನಿರ್ಮಿಸಿದನು ಮತ್ತು ದ್ಯುಲೋಕವನ್ನು ಪ್ರಸರಿಸುವಂತೆ ಮಾಡಿದನು ? "

" ವಿಶ್ವವನ್ನೆಲ್ಲಾ ನೋಡಲು ಶಕ್ತಿಯುಳ್ಳ ಕಣ್ಣುಳ್ಳವನೂ, ವಿಶ್ವತೋಮುಖನೂ, ವಿಶ್ವಕ್ಕೆಲ್ಲಾ ಪ್ರಸರಿಸಿದ ಬಾಹುವುಳ್ಳವನೂ ಮತ್ತು ವಿಶ್ವಪಾಲಕನೂ ಆದ ಈ ದೇವನು ತಾನೊಬ್ಬನೇ ಈ ದ್ಯಾವಾಪೃಥಿವಿಗಳನ್ನು ನಿರ್ಮಿಸುವಾಗ ತನ್ನ ಬಾಹುಗಳನ್ನೂ ಪಕ್ಷಗಳನ್ನೂ ಬೀಸಿ ಹರಡುತ್ತಾನೆ." ಇದೇ ಪ್ರಶ್ನೆಗೆ ತೈತ್ತಿರೀಯಬ್ರಾಹ್ಮಣದಲ್ಲಿರುವ ಉತ್ತರವು ಈ ರೀತಿಯಿದೆ.

"ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್...." ಈ ದ್ಯಾವಾಪೃಥಿವಿಗಳನ್ನು ನಿರ್ಮಿಸಲು ಮುಖ್ಯಸಾಧನವಾವುದೆಂದರೆ, ಬ್ರಹ್ಮವೇ ಆ ವನವು, ಬ್ರಹ್ಮವೇ ಆ ವೃಕ್ಷವು ಅವುಗಳಿಂದಲೇ ದ್ಯಾವಾಪೃಥಿವಿಗಳ ನಿರ್ಮಾಣವಾಗಿದೆ.
(ತೈ. ಬ್ರಾ. ೨-೮-೯-೬).

ಋ. ಸಂ. ೧೦-೭೨ ನೇ ಸೂಕ್ತದಲ್ಲಿ ದ್ಯಾವಾಪೃಥಿವಿಗಳ ಉತ್ಪತ್ತಿಕ್ರಮವನ್ನು ಬೇರೆ ರೀತಿಯಲ್ಲಿ ವರ್ಣಿಸಿದೆ. ಅವನ್ನು ಮುಂದಿನ ಭಾಗದಲ್ಲಿ ವಿವರಿಸಲಾಗುವುದು. ಆದರೆ, ೧೦-೧೨೯-೧ ನೇ ಮಂತ್ರದಲ್ಲಿ ವಿಶ್ವಸೃಷ್ಟಿಯ ಸ್ವರೂಪವನ್ನು ವರ್ಣಿಸುತ್ತಾ, ಈರೀತಿ ತಿಳಿಸಿದೆ.

" ಸೃಷ್ಟಿಯ ಆದಿಯಲ್ಲಿ ಸತ್ತಾಗಲಿ, ಅಸತ್ತಾಗಲಿ ಇರಲಿಲ್ಲ. ಅಂತರಿಕ್ಷವಾಗಲಿ, ದ್ಯುಲೋಕವಾಗಲಿ, ಯಾವುದೂ ಇರಲಿಲ್ಲ." ಇದೇ ಭಾವವನ್ನೇ ತೈತ್ತಿರೀಯಬ್ರಾಹ್ಮಣದಲ್ಲೂ ವಿವರಿಸುತ್ತಾ ; " ಇದಂ ವೈ ಅಗ್ರೇ ನೈವ ಕಿಂಚನಾಸೀತ್ । ನ ದ್ಯೌರಾಸೀತ್ । ನ ಪೃಥಿವೀ ।............ಸ್ಯಾಂ ಇತಿ " ಆರಂಭದಲ್ಲಿ ದ್ಯುಲೋಕವಾಗಲಿ, ಪೃಥ್ವಿಯಾಗಲಿ ಇರಲಿಲ್ಲ, ಅಂತರಿಕ್ಷವೂ ಇರಲಿಲ್ಲ. ಅಭಾವವೇ ವ್ಯಾಪ್ತವಾಗಿದ್ದು, 'ನಾನು ಭಾವರೂಪದಲ್ಲಿ ಪರಿಣಮಿಸಬೇಕು' ಎಂದು ಇಚ್ಛಿಸಿತು ಎಂದಿದೆ (ತೈ. ಬ್ರಾ. ೨-೨-೯-೧).

॥ ಸಾಯಣಭಾಷ್ಯಂ ॥

ಮಹೀ ದ್ಯಾವಾಪೃಥಿವೀ ಇತಿ ಸಪ್ತರ್ಚಮೇಕಾದಶಂ ಸೂಕ್ತಂ ವಾಮದೇವಸ್ಯಾರ್ಷಂ ದ್ಯಾವಾಪೃಥಿವ್ಯಂ । ಪೂರ್ವತ್ರ ತ್ರಿಗಾಯತ್ರ್ಯಂತಂ ತ್ವಿತ್ಯುಕ್ತತ್ವಾತ್ಪಂಚಮ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ ಶಿಷ್ಟಾಸ್ತ್ರಿಷ್ಟುಭಃ । ಮಹೀ ಸಪ್ತ ದ್ಯಾವಾಪೃಥಿವೀಯಮಿತ್ಯನುಕ್ರಮಣಿಕಾ ॥ ವ್ಯೂಢೇ ದಶರಾತ್ರೇ ಪಂಚಮೇಽಹನಿ ವೈಶ್ವದೇವಶಸ್ತ್ರ ಆದಿತಶ್ಚತುರ್ಋಚಂ ದ್ಯಾವ್ಯಾಪೃಥಿವ್ಯನಿವಿದ್ಧಾನೀಯಂ । ತಥಾ ಚ ಸೂತ್ರಿತಂ । ಮಹೀ ದ್ಯಾವಾಪೃಥಿವೀ ಇತಿ ಚತಸ್ರ ಋಭುರ್ವಿಭ್ವಾ । ಆ. ೮-೮ । ಇತಿ ॥

ಅನುವಾದವು—ಮಹೀ ದ್ಯಾವಾಪೃಥಿವೀ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇವರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ದ್ಯಾವಾಪೃಥಿವಿಗಳು ದೇವತೆಯು. ಹಿಂದೆ ತ್ರಿಗಾಯತ್ರ್ಯಂತಂ ತು ಎಂದು ಹೇಳಿರುವುದರಿಂದ ಈ ಸೂಕ್ತದ ಐದನೇ ಋಕ್ಕಿನಿಂದ ಮೂರು ಋಕ್ಕುಗಳು ಗಾಯತ್ರೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಮಹೀ ಸಪ್ತ ದ್ಯಾವಾಪೃಥಿವೀಯಂ ಎಂದು ಹೇಳಿರುವುದು. ವ್ಯೂಢವೆಂಬ ದಶರಾತ್ರಯಾಗದಲ್ಲಿ ಐದನೆಯ ದಿವಸ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾಗ ಈ ಸೂಕ್ತದ ಮೊದಲನೆಯ ನಾಲ್ಕು ಋಕ್ಕುಗಳು ದ್ಯಾವಾಪೃಥಿವೀ ಸಂಬಂಧವಾದ ನಿವಿದ್ಧಾನೀಯಸೂಕ್ತಕ್ಕಾಗಿ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—ಮಹೀ ದ್ಯಾವಾಪೃಥಿವೀ ಇತಿ ಚತಸ್ರ ಋಭುರ್ವಿಭ್ವಾ ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು.

## ಸೂಕ್ತ—೫೬

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೬ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ವಾಮದೇವಃ ॥

॥ ದೇವತಾ—ದ್ಯಾವಾಪೃಥಿವ್ಯೌ ॥

॥ ಛಂದಃ—೧-೪, ತ್ರಿಷ್ಟುಪ್ । ೫-೭, ಗಾಯತ್ರೀ ॥

॥ ಸಂಹಿತಾಪಾಠಃ ॥

ಮಹೀ ದ್ಯಾವಾಪೃಥಿವೀ ಇಹ ಜ್ಯೇಷ್ಠೇ ರುಚಾ ಭವತಾಂ ಶುಚಯದ್ಭಿರರ್ಕೈಃ ।

ಯತ್ಸೀಂ ವರಿಷ್ಠೇ ಬೃಹತೀ ವಿಮಿನ್ವನ್ರುವದ್ಧೋಕ್ಷಾ ಪಪ್ರಥಾನೇಭಿರೇವೈಃ ॥

॥ ಪದಪಾಠಃ ॥

ಮಹೀ ಇತಿ । ದ್ಯಾವಾಪೃಥಿವೀ ಇತಿ । ಇಹ । ಜ್ಯೇಷ್ಠೇ ಇತಿ । ರುಚಾ । ಭವತಾಂ । ಶುಚಯತ್ಽಭಿಃ । ಅರ್ಕೈಃ ।

ಯತ್ । ಸೀಂ । ವರಿಷ್ಠೇ ಇತಿ । ಬೃಹತೀ ಇತಿ । ವಿಽಮಿನ್ವನ್ । ರುವತ್ । ಹ । ಉಕ್ಷಾ । ಪಪ್ರಥಾನೇಭಿಃ । ಏವೈಃ ॥ ೧ ॥

॥ ಸಾಯಣಭಾಷ್ಯಂ ॥

ಇಹ ಯಜ್ಞೇ ಮಹೀ ಮಹತ್ಯೌ ಜ್ಯೇಷ್ಠೇ ಪ್ರಶಸ್ಯೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ರುಚಾ ದೀಪ್ತ್ಯಾ ಯುಕ್ತೇ ಶುಚಯದ್ಭಿರ್ದೀಪಯದ್ಭಿರರ್ಕೈರ್ಮಂತ್ರೈಃ ಸೋಮಾದಿಹವಿರ್ಭಿರ್ವಾ ಯುಕ್ತೇ ಭವತಾಂ । ಯತ್ ಯಸ್ಮಾತ್ ಸೀಂ ಸರ್ವತೋ ವರಿಷ್ಠೇ ಉರುತರೇ ಬೃಹತೀ ಮಹತ್ಯೌ ದ್ಯಾವಾಪೃಥಿವ್ಯೌ ವಿಮಿನ್ವನ್ ಪರಿಛಿಂದನ್ ಸ್ಥಾಪಯನ್ ಉಕ್ಷಾ ಸೇಕ್ತಾ ಪರ್ಜನ್ಯಃ ಪಪ್ರಥಾನೇಭಿಃ ಪ್ರಥಮಾನೈರೇವೈರ್ಗಮನಶೀಲೈರ್ಮರುದ್ಭಿರ್ಮೇಘೈರ್ವಾ ಸಹ ರುವತ್ । ರೌತಿ । ಶಬ್ದಂ ಕರೋತಿ । ಹೇತಿ ಪೂರಣಃ । ತಸ್ಮಾದ್ರುಚಾ ಭವತಾಮಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಯತ್—ಯಾವ ಕಾರಣದಿಂದ । ಸೀಂ—ಸರ್ವತ್ರ. । ವರಿಷ್ಠೇ—ವಿಸ್ತೃತವಾದವೂ । ಬೃಹತೀ—ಮಹತ್ತಾದವೂ ಆದ ದ್ಯಾವಾಪೃಥಿವಿಗಳನ್ನು । ವಿಮಿನ್ವನ್—ಪ್ರತ್ಯೇಕಮಾಡಿ ಸ್ಥಾಪಿಸುತ್ತಾ । ಉಕ್ಷಾ—

ವೃಷ್ಟಿಸೇಚಕನಾದ ಪರ್ಜನ್ಯನು । ಪಪ್ರಥಾನೇಭಿಃ—ಪ್ರಖ್ಯಾತರಾದ । ಏವೈಃ—ಮರುತ್ತುಗಳೊಡಗೂಡಿ (ಅಥವಾ ಮೇಘಗಳೊಡಗೂಡಿ) । ರುವತ್—ಶಬ್ದಮಾಡುತ್ತಾನೆಯೋ (ಆದುದರಿಂದ) । ಮಹೀ—ಮಹತ್ಸ್ವರೂಪವುಳ್ಳವರೂ । ಜ್ಯೇಷ್ಠೇ—ಪ್ರಶಸ್ಯರೂ ಆದ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳು । ರುಚಾ—ಕಾಂತಿಯುಕ್ತರಾಗಿಯೂ । ಶುಚಯದ್ಭಿಃ—ಪ್ರಕಾಶಮಾನಗಳಾದ । ಅರ್ಕೈಃ—ಮಂತ್ರಗಳಿಂದ ಸ್ತುತರಾಗಿಯೂ । ಇಹ—ಈ ಯಜ್ಞದಲ್ಲಿ । ಭವತಾಂ—ಆಸೀನರಾಗಿರಲಿ.

॥ ಭಾವಾರ್ಥ ॥

ಯಾವ ಉಪಕಾರಬುದ್ಧಿಯಿಂದ ವೃಷ್ಟಿಸೇಚಕನಾದ ಪರ್ಜನ್ಯನು ಸರ್ವತ್ರ ವಿಸ್ತೃತವಾದವೂ, ಮಹತ್ತಾದವೂ ಆದ ದ್ಯಾವಾಪೃಥಿವಿಗಳನ್ನು ಪ್ರತ್ಯೇಕಮಾಡಿ ಸ್ಥಾಪಿಸುತ್ತಾ ಪ್ರಖ್ಯಾತರಾದ ಮರುತ್ತುಗಳೊಡನೆಯೂ, ಮೇಘಗಳೊಡನೆಯೂ ಕೂಡಿಕೊಂಡು (ವೃಷ್ಟ್ಯರ್ಥರಾಗಿ) ಶಬ್ದಮಾಡುವನೋ, ಅದೇ ಕಾರಣದಿಂದ ಮಹತ್ಸ್ವರೂಪವುಳ್ಳವರೂ, ಪ್ರಶಸ್ಯರೂ ಆದ ದ್ಯಾವಾಪೃಥಿವಿಗಳು ಕಾಂತಿಯುಕ್ತರಾಗಿಯೂ, ಪ್ರಕಾಶಮಾನಗಳಾದ ಮಂತ್ರಗಳಿಂದ ಸ್ತುತರಾಗಿಯೂ ಈ ಯಜ್ಞದಲ್ಲಿ ಆಸೀನರಾಗಿರಲಿ.

English Translation.

Vast and most excellent Heaven and Earth, be present with splendour at this (sacrifice, attracted) by sanctifying hymns; since that the showerer sounds everywhere with (his) heralds. the rapid (winds), passing through the two spacious and mighty (regions).

॥ ಸಂಹಿತಾಪಾಠಃ ॥

ದೇವೀ ದೇವೇಭಿರ್ಯಜತೇ ಯಜತ್ರೈರಮಿನತೀ ತಸ್ಥತುರುಕ್ಷಮಾಣೇ ।

ಋತಾವರೀ ಅದ್ರುಹಾ ದೇವಪುತ್ರೇ ಯಜ್ಞಸ್ಯ ನೇತ್ರೀ ಶುಚಯದ್ಭಿರರ್ಕೈಃ ॥

॥ ಪದಪಾಠಃ ॥

ದೇವೀ ಇತಿ । ದೇವೇಭಿಃ । ಯಜತೇ ಇತಿ । ಯಜತ್ರೈಃ । ಅಮಿನತೀ ಇತಿ । ತಸ್ಥತುಃ । ಉಕ್ಷಮಾಣೇ ಇತಿ ।

ಋತವರೀ ಇತ್ಯೃತಽವರೀ । ಅದ್ರುಹಾ । ದೇವಪುತ್ರೇ ಇತಿ ದೇವಽಪುತ್ರೇ । ಯಜ್ಞಸ್ಯ । ನೇತ್ರೀ ಇತಿ । ಶುಚಯತ್ಽಭಿಃ । ಅರ್ಕೈಃ ॥ ೨ ॥

॥ ಸಾಯಣಭಾಷ್ಯಂ ॥

ದೇವೀ ದೇವ್ಯೌ ಯಜತೇ ಯಷ್ಟವ್ಯೇ ಅಮಿನತೀ ಪ್ರಜಾ ಅಹಿಂಸತ್ಯಾವುಕ್ಷಮಾಣೇ ಸಿಂಚತ್ಯಾವೃತಾವರೀ ಋತವತ್ಯಾವದ್ರುಹಾದ್ರೋಗ್ಧ್ರ್ಯೌ ದ್ರೋಹಮಕುರ್ವತ್ಯೌ ದೇವಪುತ್ರೇ ದೇವೋತ್ಪಾದಿಕ್ಯೌ ಯಜ್ಞಸ್ಯ ನೇತ್ರೀ ನಿರ್ವಾಹಯಿತ್ರ್ಯೌ ದ್ಯಾವಾಪೃಥಿವ್ಯೌ ದೇವೇಭಿರ್ದೇವೈರ್ಯಜತ್ರೈರ್ಯಷ್ಟವ್ಯೈಃ ಸಹಿತೇ ಶುಚಯದ್ಭಿಃ ಶೋಚಯದ್ಭಿರರ್ಕೈರ್ಮಂತ್ರೈರ್ಹವಿರ್ಭಿರ್ವಾ ಯುಕ್ತೇ ತಸ್ಥತುಃ । ತಿಷ್ಠತಃ । ಸ್ಯಾತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವೀ—ದೇವತಾತ್ಮರೂ । ಯಜತೇ—ಯಜ್ಞಾರ್ಹರೂ । ಅಮಿನತೀ—(ಕೃಪಾವಿಷ್ಟರಾಗಿ) ಹಿಂಸಿಸದಿರುವವರೂ । ಉಕ್ಷಮಾಣೇ—ಇಷ್ಟಾರ್ಥಗಳನ್ನು ಸುರಿಸುವವರೂ । ಋತಾವರೀ—ಸತ್ಯಾತ್ಮರೂ । ಅದ್ರುಹಾ—ದ್ರೋಹ ಬುದ್ಧಿಯಿಲ್ಲದವರೂ । ದೇವಪುತ್ರೇ—ದೇವತೆಗಳೇ ಪುತ್ರರಾಗಿ ಉಳ್ಳವರೂ । ಯಜ್ಞಸ್ಯ—ಯಜ್ಞಕ್ಕೆ । ನೇತ್ರೀ—ನಿರ್ವಾಹಕರೂ ಆದ ದ್ಯಾವಾಪೃಥಿವಿಗಳು । ಯಜತ್ರೈಃ—ಯಜ್ಞಾರ್ಹರಾದ । ದೇವೇಭಿಃ—ದೇವತೆಗಳೊಡಗೂಡಿಯೂ । ಶುಚಯದ್ಭಿಃ—ಪ್ರಕಾಶಮಾನಗಳಾದ । ಅರ್ಕೈಃ—ಮಂತ್ರಗಳಿಂದ ಸ್ತುತರಾಗಿಯೂ । ತಸ್ಥತುಃ—ಈ ಯಜ್ಞಪ್ರದೇಶದಲ್ಲಿರಲಿ.

॥ ಭಾವಾರ್ಥ ॥

ದೇವತಾತ್ಮರೂ, ಯಜ್ಞಾರ್ಹರೂ, ಲೋಕದ ಪ್ರಜೆಗಳ ಮೇಲೆ ಕೃಪಾವಿಷ್ಟರಾಗಿ ಯಾರನ್ನೂ ಹಿಂಸಿಸದಿರುವವರೂ, ಇಷ್ಟಾರ್ಥಗಳನ್ನು ಸುರಿಸುವವರೂ, ಸತ್ಯಾತ್ಮರೂ, ದ್ರೋಹಬುದ್ಧಿಯಿಲ್ಲದಿರುವವರೂ, ದೇವತೆಗಳೇ ಪುತ್ರರಾಗಿ ಉಳ್ಳವರೂ, ಯಜ್ಞನಿರ್ವಾಹಕರೂ ಆದ ದ್ಯಾವಾಪೃಥಿವಿಗಳು ಯಜ್ಞಾರ್ಹರಾದ ದೇವತೆಗಳೊಡಗೂಡಿಯೂ ಪ್ರಕಾಶಮಾನಗಳಾದ ಮಂತ್ರಗಳಿಂದ ಸ್ತುತರಾಗಿಯೂ ಈ ಯಜ್ಞಪ್ರದೇಶದಲ್ಲಿರಲಿ.

English Translation.

May the divine, adorable, benevolent, fertilizing, truthful, unoppressive Heaven and Earth, the leaders of sacrifice, whose sons are the gods, be present with the adorable gods, (attracted) by sanctifying hymns.

॥ ಸಂಹಿತಾಪಾಠಃ ॥

ಸ ಇತ್ಸ್ವಪಾ ಭುವನೇಷ್ವಾಸ ಯ ಇಮೇ ದ್ಯಾವಾಪೃಥಿವೀ ಜಜಾನ ।

ಉರ್ವೀ ಗಭೀರೇ ರಜಸೀ ಸುಮೇಕೇ ಅವಂಶೇ ಧೀರಃ ಶಚ್ಯಾ ಸಮೈರತ್ ॥೩॥

॥ ಪದಪಾಠಃ ॥

ಸಃ । ಇತ್ । ಸುಽಅಪಾಃ । ಭುವನೇಷು । ಆಸ । ಯಃ । ಇಮೇ ಇತಿ । ದ್ಯಾವಾಪೃಥಿವೀ ಇತಿ । ಜಜಾನ ।

ಉರ್ವೀ ಇತಿ । ಗಭೀರೇ ಇತಿ । ರಜಸೀ ಇತಿ । ಸುಮೇಕೇ ಇತಿ ಸುಽಮೇಕೇ । ಅವಂಶೇ । ಧೀರಃ । ಶಚ್ಯಾ । ಸಂ । ಐರತ್ ॥ ೩ ॥

॥ ಸಾಯಣಭಾಷ್ಯಂ ॥

ಸ ಇತ್ಸ ಏವ ಸ್ವಪಾಃ ಶೋಭನಕರ್ಮಾ ಸನ್ ಭುವನೇಷ್ವಾಸ । ಆಸ್ತೇ । ಯ ಇಮೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಜಜಾನ ಉತ್ಪಾದಿತವಾನ್ । ಯಶ್ಚ ಪ್ರಜಾಪತಿರುರ್ವೀ ಉರ್ವ್ಯೌ ವಿಸ್ತೀರ್ಣೇ ಗಭೀರೇ ಅವಿಚಲೇ ಸುಮೇಕೇ ಶೋಭನರೂಪೇ ಅವಂಶೇ ಉತ್ಪತ್ತಿರಹಿತೇ ಅನಾಧಾರೇ ವಾಂತರಿಕ್ಷೇ ಧೀರೋ ಧೀಮಾನ್ ಶಚ್ಯಾ ಕುಶಲಕರ್ಮಣಾ ಸಮೈರತ್ । ಸಮ್ಯಕ್ ಪ್ರೇರಿತವಾನ್ । ಸ ಏವ ಸ್ವಪಾ ಇತಿ ॥

॥ ಪ್ರತಿಪದಾರ್ಥ ॥

ಧೀರಃ—ಸ್ಥಿರಮತಿಯುಳ್ಳ । ಯಃ—ಯಾವ ಪ್ರಜಾಪ್ರತಿಯು । ಇಮೇ ದ್ಯಾವಾಪೃಥಿವೀ—ಈ ದ್ಯಾವಾಪೃಥಿವಿಗಳನ್ನು । ಜಜಾನ—ಉತ್ಪನ್ನಮಾಡಿದನೊ (ಮತ್ತು) । ಉರ್ವೀ—ವಿಸ್ತೃತವಾದವೂ । ಗಭೀರೇ—ಅಗಾಧವಾದವೂ । ಸುಮೇಕೇ — ಸುಂದರವಾದ ರೂಪವುಳ್ಳವೂ । ಅವಂಶೇ — ಆಧಾರರಹಿತವಾದುವೂ ಆದ ಅದೇ ದ್ಯಾವಾಪೃಥಿವಿಗಳನ್ನು । ಶಚ್ಯಾ—ತನ್ನ ಕುಶಲಕರ್ಮದಿಂದ । ಸಮೈರತ್—(ಅವುಗಳ ವೈಯಕ್ತಿಕ ಕರ್ಮಗಳಿಗಾಗಿ) ಪ್ರೇರಿಸಿದನೋ । ಸ ಇತ್—ಅದೇ ಪ್ರಜಾಪತಿಯು । ಸ್ವಪಾಃ—ಉತ್ತಮವಾದ ಕರ್ಮವುಳ್ಳವನಾಗಿ । ಭುವನೇಷು—ಲೋಕಗಳಲ್ಲಿ । ಆಸ—ಸುಸ್ಥಿತನಾಗಿದ್ದಾನೆ.

॥ ಭಾವಾರ್ಥ ॥

ಸ್ಥಿರಮತಿಯುಳ್ಳ ಯಾವ ಪ್ರಜಾಪತಿಯು ಈ ದ್ಯಾವಾಪೃಥಿವಿಗಳನ್ನು ಉತ್ಪನ್ನಮಾಡಿದನೋ, ಮತ್ತು ವಿಸ್ತೃತವಾದವೂ, ಅಗಾಧವಾದವೂ ಸುಂದರವಾದ ರೂಪವುಳ್ಳವೂ, ಆಧಾರರಹಿತವೂ ಆದ ಅದೇ ದ್ಯಾವಾಪೃಥಿವಿಗಳನ್ನು ತನ್ನ ಕುಶಲಕರ್ಮದಿಂದ ಅವುಗಳ ವೈಯಕ್ತಿಕ ಕರ್ಮಗಳಿಗಾಗಿ ಪ್ರೇರಿಸಿದನೋ, ಅದೇ ಪ್ರಜಾಪತಿಯು ಉತ್ತಮವಾದ ಕರ್ಮವುಳ್ಳವನಾಗಿ ಲೋಕದಲ್ಲಿ ಸುಸ್ಥಿತನಾಗಿದ್ದಾನೆ.

## English Translation.

Verily he was the doer of a good work in the regions, who generated these two, Heaven and Earth, and firm of purpose, gave an impulse by his deed to the two vast, immoveable, beautiful, unsupported worlds.

॥ ಸಂಹಿತಾಪಾಠಃ ॥

ನೂ ರೋದಸೀ ಬೃಹದ್ಭಿರ್ನೋ ವರೂಥೈಃ ಪತ್ನೀವದ್ಭಿರಿಷಯಂತೀ ಸಜೋಷಾಃ ।

ಉರೂಚೀ ವಿಶ್ವೇ ಯಜತೇ ನಿ ಪಾತಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೪॥

॥ ಪದಪಾಠಃ ॥

ನು । ರೋದಸೀ ಇತಿ । ಬೃಹತ್ಽಭಿಃ । ನಃ । ವರೂಥೈಃ । ಪತ್ನೀವತ್ಽಭಿಃ । ಇಷಯಂತೀ ಇತಿ । ಸ್ಽಜೋಷಾಃ ।

ಉರೂಚೀ ಇತಿ । ವಿಶ್ವೇ ಇತಿ । ಯಜತೇ ಇತಿ । ನಿ । ಪಾತಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥

॥ ಸಾಯಣಭಾಷ್ಯಂ ॥

ಹೇ ರೋದಸೀ ದ್ಯಾವಾಪೃಥಿವ್ಯೌ ನು ಕ್ಷಿಪ್ರಂ ಪತ್ನೀವದ್ಭಿಃ ಪತ್ನೀಸಹಿತೈರ್ಬೃಹದ್ಭಿರ್ಮಹದ್ಭಿರ್ವರೂಥೈರ್ಗೃಹೈರ್ಧನೈರ್ವಾ ಸಹೇಷಯಂತೀ ಅಸ್ಮಾಕಮನ್ನಮಿಚ್ಛಂತ್ಯೌ ಸಜೋಷಾಃ ಪರಸ್ಪರಂ ಸಂಗತೇ ಉರೂಚೀ ಉರ್ವಂಚನೇ ವಿಶ್ವೇ ವ್ಯಾಪ್ತೇ ಯಜತೇ ಯಷ್ಟವ್ಯೇ ಸತ್ಯೌ ನೋಽಸ್ಮಾನ್ ನಿ ಪಾತಂ । ನಿತರಾಂ ರಕ್ಷತಂ । ಧಿಯೇತ್ಯಾದಿ ಗತಂ ॥

॥ ಪ್ರತಿಪದಾರ್ಥ ॥

ಸಜೋಷಾಃ—ಪರಸ್ಪರವಾಗಿ ಒಟ್ಟಿಗಿರುವುವೂ । ಉರುಚೀ—ವಿಸ್ತೃತವಾದವೂ । ವಿಶ್ವೇ—ವಿಶ್ವ ವ್ಯಾಪಕವಾದವೂ । ಯಜತೇ—ಯಜ್ಞಾರ್ಹವಾದವೂ ಆದ । ರೋದಸೀ—ದ್ಯಾವಾಪೃಥಿವಿಗಳು । ನು—ಕ್ಷಿಪ್ರವಾಗಿ । ನಃ—ನಮಗೆ । ಪತ್ನೀವದ್ಭಿಃ—ಪತ್ನಿಯರೊಡಗೂಡಿದುದೂ । ಬೃಹದ್ಭಿಃ—ಮಹತ್ತಾದುದೂ । ವರೂಥೈಃ—ಗೃಹಾದಿ ಧನಗಳಿಂದ ಕೂಡಿದುದೂ ಆದ । ಇಷಯಂತೀ—ಅನ್ನವನ್ನು ಆಶಂಸಿಸಿ ದಾನಮಾಡುವವರಾಗಿ । ನಿ ಪಾತಂ—(ನಮ್ಮನ್ನು) ಪೂರ್ಣವಾಗಿ ರಕ್ಷಿಸಲಿ । (ವಯಂ—ನಾವು) । ಧಿಯಾ—ನಮ್ಮ ಸತ್ಕರ್ಮಗಳಿಂದ । ರಥ್ಯಃ—ರಥವುಳ್ಳವರಾಗಿಯೂ । ಸದಾಸಾಃ—ಸೇವಕರಿಂದ ಕೂಡಿದವರಾಗಿಯೂ । ಸ್ಯಾಮ—ಇರುವಂತಾಗಲಿ.

॥ ಭಾವಾರ್ಥ ॥

ಪರಸ್ಪರ ಒಟ್ಟಿಗೆ ಸೇರಿಕೊಂಡರುವುವೂ, ವಿಸ್ತೃತವಾದವೂ, ವಿಶ್ವವ್ಯಾಪಕವಾದವೂ, ಯಜ್ಞಾರ್ಹವಾದವೂ ಆದ ದ್ಯಾವಾಪೃಥಿವಿಗಳು ನಮಗೆ ಪತ್ನಿಯರೊಡಗೂಡಿದುದೂ, ಮಹತ್ತಾದುದೂ, ಗೃಹಾದಿ ಧನಗಳಿಂದ ಕೂಡಿದುದೂ

ಆದ ಅನ್ನವನ್ನು ಆಶಂಸಿಸಿ ರಕ್ಷಿಸಲಿ. ನಾವೂ ಸಹ ನಮ್ಮ ಸತ್ಕರ್ಮಗಳ ಫಲವಾಗಿ ಉತ್ತಮವಾದ ರಥವುಳ್ಳವರಾಗಿಯೂ, ಸೇವಕರಿಂದ ಕೂಡಿದವರಾಗಿಯೂ ಇರುವಂತಾಗಲಿ.

## English Translation.

May Heaven and Earth, vast, universal, adorable, united in satisfaction, and disposed to give us food, protect us with our spacious dwellings, inhabited by our wives, and may we for our (pious) acts be possessed of chariots and slaves.



॥ ಸಂಹಿತಾಪಾಠಃ ॥

ಪ್ರ ವಾಂ ಮಹಿ ದ್ಯವೀ ಅಭ್ಯುಪಸ್ತುತಿಂ ಭರಾಮಹೇ ।
ಶುಚೀ ಉಪ ಪ್ರಶಸ್ತಯೇ ॥ ೫ ॥

॥ ಪದಪಾಠಃ ॥

ಪ್ರ । ವಾಂ । ಮಹಿ । ದ್ಯವೀ ಇತಿ । ಅಭಿ । ಉಪಸ್ತುತಿಂ । ಭರಾಮಹೇ ।
ಶುಚೀ ಇತಿ । ಉಪ । ಪ್ರಶಸ್ತಯೇ ॥ ೫ ॥

॥ ಸಾಯಣಭಾಷ್ಯಂ ॥

ಪ್ರ ವಾಮಿತ್ಯಾದಿಗಾಯತ್ರಸ್ತೃಚೋ ವ್ಯೂಢೇ ದಶರಾತ್ರೇ ವೈಶ್ವದೇವಶಸ್ತ್ರೇ ದ್ಯಾವಾಪೃಥಿವ್ಯನಿವಿದ್ಧಾನೀಯತ್ವೇನ ಪ್ರಕ್ಷೇಪ್ಯಃ । ತಥಾ ಚ ಸೂತ್ರಿತಂ । ಪ್ರ ವಾಂ ಮಹಿ ದ್ಯವೀ ಇತಿ ತೃಚಾ । ಆ. ೮-೧೧ । ಇತಿ ॥

ಹೇ ದ್ಯಾವಾಪೃಥಿವ್ಯೌ ದ್ಯವೀ ದ್ಯೋತಮಾನೇ ವಾಂ ಯುವಾಭ್ಯಾಮುಪಸ್ತುತಿಂ ಸ್ತೋತ್ರಂ ಮಹಿ ಮಹತ್ಪ್ರಭೂತಮಭಿ ಪ್ರ ಭರಾಮಹೇ । ಪ್ರಕರ್ಷೇಣ ಸಂಪಾದಯಾಮಃ । ಶುಚೀ ಶುದ್ಧೇ ಯುವಾಂ ಪ್ರಶಸ್ತಯೇ ಪ್ರಶಂಸಿತುಮು ಪ । ಉಪಸರ್ಗಶ್ರುತೇರುಚಿತಕ್ರಿಯಾಧ್ಯಾಹಾರಃ । ಉಪ ಗಚ್ಛಾಮ ಇತಿ ಶೇಷಃ ॥

॥ ಪ್ರತಿಪದಾರ್ಥ ॥

ದ್ಯವೀ—ಪ್ರಕಾಶಮಾನರಾದ ಎಲೈ ದ್ಯಾವಾಪೃಥವಿಗಳೇ । ವಾಂ—ನಿಮ್ಮನ್ನುದ್ದೇಶಿಸಿ । ಉಪಸ್ತುತಿಂ—ಸ್ತೋತ್ರವನ್ನು । ಮಹಿ—ಪ್ರಭೂತವಾಗಿಯೂ । ಅಭಿ ಪ್ರಭರಾಮಹೇ—ಅತಿಶಯವಾಗಿಯೂ ನಿರ್ಮಿಸುವೆವು । ಶುಚೀ—ಪವಿತ್ರರಾದ ನಿಮ್ಮನ್ನು । ಪ್ರಶಸ್ತಯೇ—ಸ್ತುತಿಸುವುದಕ್ಕಾಗಿ । ಉಪ (ಗಚ್ಛಾಮ)—ಸಮೀಪಿಸುವೆವು.

॥ ಭಾವಾರ್ಥ ॥

ಪ್ರಕಾಶಮಾನರಾದ ಎಲೈ ದ್ಯಾವಾಪೃಥಿವಿಗಳೇ, ನಿಮ್ಮನ್ನುದ್ದೇಶಿಸಿ ಪ್ರಭೂತವಾದುದೂ ಅತಿಶಯವಾದುದೂ ಆದ ಸ್ತುತಿಯನ್ನು ನಿರ್ಮಿಸುತ್ತೇವೆ. ಮತ್ತು ಪವಿತ್ರರಾದ ನಿಮ್ಮನ್ನು ಸ್ತುತಿಸಲು ನಿಮ್ಮನ್ನು ಸಮೀಪಿಸುತ್ತೇವೆ.

English Translation.

We offer earnest praise to you both, resplendent (Heaven and Earth); we approach you who are pure, to offer adoration.

॥ ವಿಶೇಷವಿಷಯಗಳು ॥

ಪ್ರ ವಾಂ ಎಂದು ಮೊದಲಾಗುವ ಗಾಯತ್ರೀಛಂದಸ್ಸಿನ ಮುಂದಿನ ಮೂರು ಋಕ್ಕುಗಳನ್ನು ವ್ಯೂಳ್ಹವೆಂಬ ದಶರಾತ್ರಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ದ್ಯಾವಾಪೃಥಿವೀಸಂಬಂಧವಾದ ನಿವಿದ್ಧಾನೀಯ ಸೂಕ್ತಕ್ಕಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಪ್ರವಾಂ ಮಹಿ ದ್ಯವೀ ಇತಿ ತೃಚಾ ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.



॥ ಸಂಹಿತಾಪಾಠಃ ॥

ಪುನಾನೇ ತನ್ವಾ ಮಿಥಃ ಸ್ವೇನ ದಕ್ಷೇಣ ರಾಜಥಃ ।

ಊಹ್ಯಾಥೇ ಸನಾದೃತಂ ॥ ೬ ॥

॥ ಪದಪಾಠಃ ॥

ಪುನಾನೇ ಇತಿ । ತನ್ವಾ । ಮಿಥಃ । ಸ್ವೇನ । ದಕ್ಷೇಣ । ರಾಜಥಃ ।

ಊಹ್ಯಾಥೇ ಇತಿ । ಸನಾತ್ । ಋತಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ದೇವ್ಯೌ ತನ್ವಾ ಸ್ವಕೀಯಯಾ ಮೂರ್ತ್ಯಾ ಸ್ವೇನ ದಕ್ಷೇಣ ಬಲೇನ ಚ ಮಿಥಃ ಪ್ರತ್ಯೇಕಂ ಪುನಾನೇ ಶೋಧಯಂತ್ಯೌ ಯಜ್ಞಂ ಯಜಮಾನಂ ವಾ ಯುವಾಂ ರಾಜಥಃ । ಯದ್ವಾ । ತನ್ವಾ ಸ್ವಸ್ವಶರೀರೈಕದೇಶೇನ ಮಿಥಃ ಪರಸ್ಪರಂ ಪುನಾನೇ ಶೋಧಯಂತ್ಯೌ । ದ್ಯೌಃ ಸ್ವೀಯೇನಾಸಾರೇಣ ಭುವಂ ಸಾ ಚ ಸ್ವಕೀಯೇನ ಕಾರ್ಶ್ಯೇನ ಚಂದ್ರಮಸಿ ಸ್ಥಿತೇನ ದಿವಮಿತಿ ವಿವೇಕಃ । ಸನಾತ್ಸದಾಕಾಲಭುವಂ ಯಜ್ಞಮೂಹ್ಯಾಥೇ । ವಹಥಃ ॥

॥ ಪ್ರತಿಪದಾರ್ಥ ॥

(ಎಲೈ ದ್ಯಾವಾಪೃಥಿವಿಗಳೇ) । ತನ್ವಾ—ನಿಮ್ಮ ಸ್ವರೂಪಮಾತ್ರದಿಂದಲೂ । ಸ್ವೇನ—ನಿಮ್ಮದೇ ಆದ । ದಕ್ಷೇಣ—ಬಲದಿಂದಲೂ । ಮಿಥಃ—ಪರಸ್ಪರವಾಗಿ । ಪುನಾನೇ—ಶುದ್ಧಿಕಾರಕರಾಗಿ । ರಾಜಥಃ—ನೀವು ಪ್ರಕಾಶಿಸುತ್ತಿದ್ದೀರಿ । ಸನಾತ್—ಸರ್ವಕಾಲದಲ್ಲಿಯೂ । ಋತಂ—ಯಜ್ಞವನ್ನು । ಊಹ್ಯಾಥೇ—ವಹಿಸುತ್ತಿದ್ದೀರಿ.

॥ ಭಾವಾರ್ಥ ॥

ಎಲೈ ದ್ಯಾವಾಪೃಥಿವಿಗಳೇ, ನಿಮ್ಮ ಸ್ವರೂಪದಿಂದಲೂ, ನಿಮ್ಮ ಸ್ವಬಲದಿಂದಲೂ, ನೀವು ಪರಸ್ಪರ ಶುದ್ಧಿಕಾರಕರಾಗಿ ಪ್ರಕಾಶಿಸುತ್ತಿದ್ದೀರಿ. ಮತ್ತು ಸರ್ವಕಾಲದಲ್ಲಿಯೂ ಯಜ್ಞವನ್ನು ವಹಿಸುತ್ತೀರಿ.

English Translation.

Mutually sanctifying (each other) of your own substance, you shine by your own power, and ever bear away the offering.



॥ ಸಂಹಿತಾಪಾಠಃ ॥

ಮಹೀ ಮಿತ್ರಸ್ಯ ಸಾಧಥಸ್ತರಂತೀ ಪಿಪ್ರತೀ ಋತಂ ।
ಪರಿ ಯಜ್ಞಂ ನಿ ಷೇದಥುಃ ॥ ೭ ॥

॥ ಪದಪಾಠಃ ॥

ಮಹೀ ಇತಿ । ಮಿತ್ರಸ್ಯ । ಸಾಧಥಃ । ತರಂತೀ ಇತಿ । ಪಿಪ್ರತೀ ಇತಿ । ಋತಂ ।
ಪರಿ । ಯಜ್ಞಂ । ನಿ । ಸೇದಥುಃ ॥ ೭ ॥

॥ ಸಾಯಣಭಾಷ್ಯಂ ॥

ಮಹೀ ಮಹತ್ಯೌ ದ್ಯಾವಾಪೃಥಿವ್ಯೌ ಮಿತ್ರಸ್ಯ ಮಿತ್ರಭೂತಸ್ಯ ಸ್ತೋತುರಭಿಮತಂ ಸಾಧಥಃ । ಋತಮನ್ನಂ ತರಂತೀ ತಾರಯಂತ್ಯೌ ಪಿಪ್ರತೀ ಪೂರಯಂತ್ಯೌ ಯಜ್ಞಂ ಪರಿ ಪರಿತೋ ನಿ ಷೇದಥುಃ । ಆಶ್ರಯೇತಃ ॥

॥ ಪ್ರತಿಪದಾರ್ಥ ॥

ಮಹೀ—ಮಹತ್ಸ್ವರೂಪವುಳ್ಳ ದ್ಯಾವಾಪೃಥಿವಿಗಳೇ । ಮಿತ್ರಸ್ಯ—ನಿಮಗೆ ಮಿತ್ರಭೂತನಾದ ಯಜಮಾನನ (ಇಷ್ಟಾರ್ಥವನ್ನು) । ಸಾಧಥಃ—ಸಾಧಿಸಿಕೊಡುತ್ತೀರಿ । ಋತಂ—ಅನ್ನವನ್ನು । ತರಂತೀ—ಹಂಚುತ್ತಲೂ

ಪಿಪ್ರತೀ—(ಯಜಮಾನನಲ್ಲಿ) ತುಂಬುತ್ತಲೂ । ಯಜ್ಞಂ ಪರಿ—ಯಜ್ಞದ ಸುತ್ತಲೂ । ನಿಷೇದಥುಃ— ಆಸೀನರಾಗಿದ್ದೀರಿ.

॥ ಭಾವಾರ್ಥ ॥

ಮಹತ್ಸ್ವರೂಪವುಳ್ಳ ಎಲೈ ದ್ಯಾವಾಪೃಥಿವಿಗಳೇ, ನಿಮಗೆ ಮಿತ್ರಭೂತನಾದ ಯಜಮಾನನ ಇಷ್ಟಾರ್ಥಗಳನ್ನು ನೀವು ಸಾಧಿಸಿಕೊಡುತ್ತೀರಿ. ಮತ್ತು ಅವನಿಗೆ ಅನ್ನವನ್ನು ಹಂಚಿ ಅವನಲ್ಲಿ ಅನ್ನವನ್ನು ತುಂಬುತ್ತಾ ಯಜ್ಞದ ಸುತ್ತಲೂ ಆಸೀನರಾಗಿದ್ದೀರಿ.

## English Translation.

Mighty (Heaven and Earth), you fulfil the desires of your friend: distributing food and giving sustenance, you have sat down at the sacrifice.

# ಐವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಕ್ಷೇತ್ರಸ್ಯ ಪತಿನೇತ್ಯಷ್ಟರ್ಚಂ ದ್ವಾದಶಂ ಸೂಕ್ತಂ ವಾಮದೇವಸ್ಯಾರ್ಷಂ । ಆದ್ಯಾಚತುರ್ಥೀ- ಷಷ್ಠೀಸಪ್ತಮ್ಯೋಽನುಷ್ಟುಭಃ ಪಂಚಮೀ ಪುರಉಷ್ಣಿಕ್ । ಆದ್ಯಶ್ಚೇತ್ಪುರಉಷ್ಣಿಗಿತಿ ಹಿ ತಲ್ಲಕ್ಷಣಂ । ಶಿಷ್ಟಾಸ್ತಿಸ್ರಸ್ತ್ರಿಷ್ಟುಭಃ। ಆದ್ಯಾಸ್ತಿಸ್ರಃ ಕ್ಷೇತ್ರಪತಿದೇವತಾಕಾಶ್ಚತುರ್ಥೀ ಶುನಾಖ್ಯದೇವತಾಕಾ ಪಂಚಮ್ಯ- ಷ್ಟಮ್ಯೌ ಶುನಾಸೀರದೇವತಾಕೇ। ಷಷ್ಠೀಸಪ್ತಮ್ಯೌ ಸೀತಾದೇವತಾಕೇ । ತಥಾ ಚಾನುಕ್ರಮಣಿಕಾ । ಕ್ಷೇತ್ರಸ್ಯಾಷ್ಟೌ ತಿಸ್ರಃ ಕ್ಷೈತ್ರಪತ್ಯಾಃ ಶುನಾಯೈಕಾ ಪರಾ ಪುರಉಷ್ಣಿಕ್ ಸಾಂತ್ಯಾ ಚ ಶುನಾಸೀರಾಭ್ಯಾ- ಮುಪಾಂತ್ಯೇ ಸೀತಾಯೈ ತೇ ಅನುಷ್ಟುಭಾವಾದ್ಯಾ ಚ ಚತುರ್ಥೀ ಚೇತಿ ॥ ಕ್ಷೇತ್ರಸ್ಯ ಕರ್ಷಣೇಽನೇನ ಸೂಕ್ತೇನ ಪ್ರತ್ಯೃಚಂ ಜುಹುಯಾಜ್ಜಪೇದ್ವಾ । ತಥಾ ಚ ಸೂತ್ರಿತಂ । ಕ್ಷೇತ್ರಸ್ಯ ಪತಿನಾ ವಯಮಿತಿ ಪ್ರತ್ಯೃಚಂ ಜುಹುಯಾಜ್ಜಪೇದ್ವಾ। ಆ- ಗೃ. ೨. ೧೦। ಇತಿ ॥ ಅಪ್ತೋರ್ಯಾಮೇ ಹೋತುರತಿರಿಕ್ತೋಕ್ಥೇ ಆಶ್ವಿನಶಸ್ತ್ರಾದೂರ್ಧ್ವಂ ಚತ್ವಾರ್ಯತಿರಿಕ್ತೋಕ್ಥಾನಿ । ತತ್ರಾದ್ಯಾ ಪರಿಧಾನೀಯಾ । ಸೂತ್ರಿತಂ ಚ । ಕ್ಷೇತ್ರಸ್ಯ ಪತಿನಾ ವಯಮಿತಿ ಪರಿಧಾನೀಯಾ । ಆ. ೯-೧೧ । ಇತಿ ॥

ಅನುವಾದವು— ಕ್ಷೇತ್ರಸ್ಯ ಪತಿನಾ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೆಡನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಈ ಸೂಕ್ತದ ಮೊದಲನೆಯ, ನಾಲ್ಕನೆಯ, ಆರನೆಯ ಮತ್ತು ಏಳನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು ; ಐದನೆಯ ಋಕ್ಕು ಪುರಉಷ್ಣಿಕ್ ಎಂಬ ಛಂದಸ್ಸಿನದು. ಆದ್ಯಶ್ಚೇತ್ಪುರಉಷ್ಣಿಕ್ ಎಂದು ಈ ಛಂದಸ್ಸಿನ ಲಕ್ಷಣವು. ಎಂದರೆ ಉಷ್ಣಿಕ್ ಛಂದಸ್ಸಿಗೆ ಮೂರು ಪಾದಗಳಿದ್ದು ಮೊದಲು ಎರಡು ಪಾದಗಳಿಗೆ ಎಂಟೆಂಟು ಅಕ್ಷರಗಳೂ ಮೂರನೆಯ ಪಾದಕ್ಕೆ ಹನ್ನೆರಡು ಅಕ್ಷರಗಳೂ ಇದ್ದರೆ ಉಷ್ಣಿಕ್ ಛಂದಸ್ಸೆನಿಸುವುದು. ಈ ಹನ್ನೆರಡಕ್ಷರದ ಪಾದವು ಮೊದಲನೇ ಪಾದವಾಗಿದ್ದಲ್ಲಿ ಅದಕ್ಕೆ

ಪುರಉಷ್ಣಿಕ್ ಎಂದು ಹೆಸರು. ಹನ್ನೆರಡಕ್ಷರದ ಪಾದವು ಮಧ್ಯದಲ್ಲಿದ್ದಲ್ಲಿ ಅದಕ್ಕೆ ಕಕುಪ್ ಎಂದು ಹೆಸರು ಎಂದು ಮೂರು ವಿಧವಾದ ಉಷ್ಣಿಕ್ ಛಂದಸ್ಸುಗಳ ಲಕ್ಷಣವಿರುವುದು. ಈ ಸೂಕ್ತದ ಉಳಿದ ಋಕ್ಕುಗಳು ಎಂದರೆ ೨, ೩, ೮ನೇ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳು ಕ್ಷೇತ್ರಪತಿ ದೇವತಾಕವು ; ನಾಲ್ಕನೆಯ ಋಕ್ಕು ಶುನಾಖ್ಯದೇವತಾಕವು ; ಐದು ಮತ್ತು ಎಂಟನೆಯ ಋಕ್ಕುಗಳು ಶುನಾಸೀರಾ ಎಂಬ ದೇವತಾಕವು ; ಆರು ಮತ್ತು ಏಳನೆಯ ಋಕ್ಕುಗಳು ಸೀತಾದೇವತಾಕವು. ಅನುಕ್ರಮಣಿಕೆಯಲ್ಲಿ—ಕ್ಷೇತ್ರಸ್ಯಾಷ್ಟೌ ತಿಸ್ರಃ ಕ್ಷೈತ್ರಪತ್ಯಾಃ ಶುನಾಯ್ಯೈಕಾ ಪರಾ ಪುರಉಷ್ಣಿಕ್ ಸಾಂತ್ಯಾ ಚ ಶುನಾಸೀರಾಭ್ಯಾಮುಪಾಂತ್ಯೇ ಸೀತಾಯೈ ತೇ ಅನುಷ್ಟುಭಾವಾದ್ಯಾ ಚ ಚತುರ್ಥೀ ಚ ಎಂದು ಹೇಳಿರುವುದು. ಭೂಮಿಯನ್ನು ಉಳುವಾಗ ಈ ಸೂಕ್ತದ ಪ್ರತಿ ಋಕ್ಕನ್ನೂ ಜಪಮಾಡಿ ಹೋಮಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—ಕ್ಷೇತ್ರಸ್ಯ ಪತಿನಾ ವಯಮಿತಿ ಪ್ರತ್ಯೃಚಂ ಜುಹುಯಾಜ್ಜಪೇದ್ವಾ ಎಂಬ ಸೂತ್ರದಿಂದ (ಆ. ಗೃ. ೨-೧೦-೪) ವಿವೃತವಾಗಿರುವುದು. ಮತ್ತು ಅಪ್ತೋರ್ಯಾಮವೆಂಬ ಯಾಗದಲ್ಲಿ ಹೋತೃವು ಆಶ್ವಿನಶಸ್ತ್ರಮಂತ್ರಪಠನಾನಂತರ ಪಠಿಸುವ ನಾಲ್ಕು ಅತಿರಿಕ್ತೋಕ್ಥ್ಯವೆಂಬ ಮಂತ್ರಗಳಲ್ಲಿ ಈ ಸೂಕ್ತದ ಮೊದಲನೆಯ ಋಕ್ಕಾದ ಕ್ಷೇತ್ರಸ್ಯ ಪತಿನಾ ವಯಂ ಎಂಬ ಋಕ್ಕನ್ನು ಪರಿಧಾನೀಯಾ ಮಂತ್ರವನ್ನಾಗಿ (ಕೊನೆಯ ಮಂತ್ರವನ್ನಾಗಿ) ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಕ್ಷೇತ್ರಸ್ಯ ಪತಿನಾ ವಯಮಿತಿ ಪರಿಧಾನೀಯಾ ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

## ಸೂಕ್ತ—೫೭

ಮಂಡಲ—೪ ॥ ಅನುವಾಕ—೫ ॥ ಸೂಕ್ತ—೫೭ ॥
ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
॥ ಋಷಿಃ—ವಾಮದೇವಃ ॥
॥ ದೇವತಾ—೧-೩, ಕ್ಷೇತ್ರಪತಿಃ । ೪. ಶುನಃ । ೫, ೮. ಶುನಾಸೀರೌ । ೬, ೭. ಸೀತಾ ।
॥ ಛಂದಃ—೧, ೪, ೬, ೭ ಅನುಷ್ಟುಪ್ । ೨, ೩, ೮. ತ್ರಿಷ್ಟುಪ್ । ೫. ಪುರಉಷ್ಣಿಕ್ ॥

॥ ಸಂಹಿತಾಪಾಠಃ ॥

ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।
ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥ ೧ ॥

॥ ಪದಪಾಠಃ ॥

ಕ್ಷೇತ್ರಸ್ಯ । ಪತಿನಾ । ವಯಂ । ಹಿತೇನಽಇವ । ಜಯಾಮಸಿ ।
ಗಾಂ । ಅಶ್ವಂ । ಪೋಷಯಿತ್ನು । ಆ । ಸಃ । ನಃ । ಮೃಳಾತಿ । ಈದೃಶೇ ॥ ೧ ॥

|| ಸಾಯಣಭಾಷ್ಯಂ ||

ವಯಂ ಯಜಮಾನಾಃ ಕ್ಷೇತ್ರಸ್ಯ ಪತಿನಾ ದೇವೇನ || ರುದ್ರಂ ಕ್ಷೇತ್ರಪತಿಂ ಪ್ರಾಹುಃ ಕೇಚಿದ-ಗ್ನಿಮಥಾಪರೇ | ಸ್ವತಂತ್ರ ಏವ ವಾ ಕಶ್ಚಿತ್ಕ್ಷೇತ್ರಸ್ಯ ಪತಿರುಚ್ಯತೇ || ಹಿತೇನೇವ | ಇವಶಬ್ದ ಏವಾರ್ಥೇ| ಸರ್ವಪ್ರಾಣಿಹಿತೇನೈವ ತೇನ | ಅಥವಾ ಮಿತ್ರೇಣೇವ | ಯಥಾ ಸಖ್ಯುಃ ಸಾಹಾಯ್ಯೇ ಸನ್ ಸ್ವಕಾರ್ಯಂ ಸಾಧಯತಿ ತದ್ವತ್ | ಜಯಾಮಸಿ | ಜಯಾಮಃ ಕ್ಷೇತ್ರಂ | ಸ ದೇವೋ ಗಾಮಶ್ವಂ ಚ ಪೋಷಯಿತ್ನು. ಪೋಷಯಿತೃ ಗವಾಶ್ವಲಕ್ಷಣಂ ಧನಮಾ ಹರತ್ವಿತಿ ಶೇಷಃ | ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾ-ಹಾರಃ| ಸ ಏವ ದೇವೋ ನೋಽಸ್ಮಾನೀದೃಶ ಉಕ್ತಲಕ್ಷಣೇ ಧನೇ ದಾತವ್ಯೇ ಸತಿ ಮೃಳಾತಿ| ಸುಖಯತಿ| ಕ್ಷೇತ್ರಸ್ಯ ಪತಿನೇತ್ಯಾದಿನಿರುಕ್ತಂ | ೧೦-೧೫ | ಜಾನೀಯಾತ್ ||

|| ಪ್ರತಿಪದಾರ್ಥ ||

ವಯಂ—ಯಜ್ಞಕರ್ತರಾದ ನಾವು | ಹಿತೇನೇವ—(ನಮಗೆ) ಮಿತ್ರಭೂತನಂತಿರುವ | ಕ್ಷೇತ್ರಸ್ಯ ಪತಿನಾ—ಕ್ಷೇತ್ರಪತಿದೇವನ ಸಹಾಯದಿಂದ | ಜಯಾಮಸಿ—ಜಯವನ್ನು ಪಡೆಯುತ್ತೇವೆ | ಸಃ—ಆದೇ ದೇವನು | ಪೋಷಯಿತ್ನು—ಪುಷ್ಟಿಕಾರಕವಾದ | ಗಾಂ—ಗೋವುಗಳನ್ನು | ಅಶ್ವಂ—ಅಶ್ವವನ್ನೂ | ನಃ—ನಮಗೆ | ಆ (ಹರತು)—ತಂದೊದಗಿಸಲಿ | ಈದೃಶೇ—ಈ ವಿಧವಾದ ದಾನಗಳಿಂದ | ಮೃಳಾತಿ—(ನಮ್ಮನ್ನು) ಸುಖಪಡಿಸುತ್ತಾನೆ.

|| ಭಾವಾರ್ಥ ||

ಯಜ್ಞಕರ್ತರಾದ ನಾವು ನಮಗೆ ಮಿತ್ರಭೂತನಂತಿರುವ ಕ್ಷೇತ್ರಪತಿದೇವನ ಸಹಾಯದಿಂದ ಜಯವನ್ನು ಪಡೆಯುತ್ತೇವೆ. ಆದೇ ದೇವನು ನಮಗೆ ಪುಷ್ಟಿಕಾರಕವಾದ ಗೋವುಗಳನ್ನೂ, ಅಶ್ವಗಳನ್ನೂ ತಂದೊದಗಿಸಲಿ. ಈ ವಿಧವಾದ ದಾನಗಳಿಂದ ಅವನು ನಮ್ಮನ್ನು ಸುಖಪಡಿಸುತ್ತಾನೆ.

## English Translation.

With the master of the field, our friend, we triumph : may he bestow upon us cattle, horses, nourishment, for by such (gifts) he maks us happy.

|| ವಿಶೇಷವಿಷಯಗಳು ||

ಪ್ರಕೃತವಾದ ಸೂಕ್ತದಲ್ಲಿ ಕ್ಷೇತ್ರಪತಿ, ಶುನ, ಶುನಾಸೀರ, ಸೀತಾ ಎಂಬ ನಾಲ್ಕು ದೇವತಾಕವಾದ ಪ್ರಶಂಸೆಯಿರುತ್ತದೆ. ಈ ಸೂಕ್ತದಲ್ಲಿ ಒಟ್ಟು ೮ ಋಕ್ಕುಗಳಿವೆ. ಮೊದಲನೆಯ ಮೂರೂ ಕ್ಷೇತ್ರಪತಿಯನ್ನುದ್ದೇಶಿಸಿದವು. ನಾಲ್ಕನೆಯದು ಶುನ ದೇವತಾಕವಾದುದು. ಐದು ಮತ್ತು ಎಂಟನೆಯವು ಶುನಾಸೀರ ದೇವತಾಕವು. ಆರು ಮತ್ತು ಏಳನೆಯವು, ಸೀತಾ ದೇವತಾಕವು.

ಇವುಗಳಲ್ಲಿ ಮೊದಲನೆಯ ಮಂತ್ರವು ಕ್ಷೇತ್ರಸ್ಯ ಪತಿನಾ ವಯಂ ಎಂಬ ಆನುಪೂರ್ವಿಯೊಡನೆ ಪ್ರಾರಂಭವಾಗುತ್ತದೆ. ಈ ಮಂತ್ರಕ್ಕೆ ಭಾಷ್ಯವನ್ನು ಪ್ರಾರಂಭಿಸುವಾಗ ಸಾಯಣರು ಕ್ಷೇತ್ರಸ್ಯ ಪತಿನಾ ಎಂಬ ಶಬ್ದಗಳಿಗೆ

ಅರ್ಥವೇನು ? ಕ್ಷೇತ್ರಪತಿಯು ಯಾರು ? ಎಂಬ ವಿಷಯವನ್ನು ವಿವರಿಸಲು ಪ್ರಯತ್ನಿಸಿ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದಕ್ಕಾಗದೆ "ರುದ್ರಂ ಕ್ಷೇತ್ರಪತಿಂ ಪ್ರಾಹುಃ ಕೇಚಿದಗ್ನಿಮಥಾಪರೇ । ಸ್ವತಂತ್ರ ಏವ ವಾ ಕಶ್ಚಿತ್ಕ್ಷೇತ್ರಸ್ಯ ಪತಿರುಚ್ಯತೇ" ಕೆಲವರು ಕ್ಷೇತ್ರಪತಿಯೆಂದರೆ ರುದ್ರನೆಂದರ್ಥಮಾಡುತ್ತಾರೆ. ಇನ್ನು ಕೆಲವರು ಅಗ್ನಿಯೆಂದೇ ಅರ್ಥಮಾಡುತ್ತಾರೆ. ಅಥವಾ ಕ್ಷೇತ್ರಪತಿಯೆಂಬ ಸ್ವತಂತ್ರವಾದ ದೇವತೆಯನ್ನೇ ನಿರ್ದೇಶಿಸುವ ಪದವಿದು ಎಂದು ಹೇಳುವ ಮತವೂ ಇರುತ್ತದೆ. ಎಂಬುದಾಗಿ ಮತಾಂತರಗಳನ್ನು ತಿಳಿಸಿದ್ದಾರೆ. ಅಲ್ಲದೇ, 'ಕ್ಷೇತ್ರಸ್ಯ ಪತಿನಾ' ನಿರುಕ್ತವಾಕ್ಯವನ್ನುದಾಹರಿಸಿ ಅದರಲ್ಲಿ ಈ ಪದದ ವಿವರಣೆಯಿರುತ್ತದೆಂದು ಸೂಚಿಸಿದ್ದಾರೆ. ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುತ್ತಾ ಈ ರೀತಿ ತಿಳಿಸಿದ್ದಾರೆ.

> ಕ್ಷೇತ್ರಸ್ಯ ಪತಿಃ । ಕ್ಷೇತ್ರಂ ಕ್ಷಿಯತೇಃ ನಿವಾಸಕರ್ಮಣಃ । ತಸ್ಯ ಪಾತಾ ವಾ ಪಾಲಯಿತಾ ವಾ ।
> ತಸ್ಯೈಷಾ ಭವತಿ । (ನಿ. ೧೦-೧೫)

ಕ್ಷೇತ್ರಶಬ್ದಕ್ಕೆ ವಾಸಸ್ಥಾನವೆಂದರ್ಥ. ಅದರ ಪಾಲಕನಾದುದರಿಂದ ಕ್ಷೇತ್ರಪತಿಯೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ಈ ಶಬ್ದದ ನಿರ್ವಚನವನ್ನು ತಿಳಿಸಿ ಪ್ರಕೃತವಾದ ಮಂತ್ರವನ್ನೇ ಉದಾಹರಿಸಿದ್ದಾರೆ.

> ಕ್ಷೇತ್ರಸ್ಯ ಪತಿನಾ—ಕ್ಷೇತ್ರಪತಿ ಎಂಬ ದೇವತೆಯು ಯಾರು ಎಂಬ ವಿಷಯದಲ್ಲಿ ಭಾಷ್ಯಕಾರರು—
> ರುದ್ರಂ ಕ್ಷೇತ್ರಪತಿಂ ಪ್ರಾಹುಃ ಕೇಚಿದಗ್ನಿಮಥಾಪರೇ ।
> ಸ್ವತಂತ್ರ ಏವ ವಾ ಕಶ್ಚಿತ್ ಕ್ಷೇತ್ರಸ್ಯ ಪತಿರುಚ್ಯತೇ ॥

ಎಂದು ಹೇಳಿರುವರು. ಎಂದರೆ ಕೆಲವರು ರುದ್ರನನ್ನೇ ಕ್ಷೇತ್ರಪತಿಯೆಂದು ಹೇಳುವರು. ಕೆಲವರು ಅಗ್ನಿಯೆಂದೂ, ಮತ್ತೆ ಕೆಲವರು ಕ್ಷೇತ್ರಪತಿ ಎಂಬ ದೇವತೆಯು ಸ್ವತಂತ್ರವಾದ ಪ್ರತ್ಯೇಕದೇವತೆಯೆಂದೂ ಹೇಳುವರು. ಉದಾಹರಣೆಗೆ ಯಾಸ್ಕರು ಈ ಋಕ್ಕಿಗೇ ನಿರ್ವಚನವನ್ನು ಹೇಳಿರುವರು—

> ಕ್ಷೇತ್ರಸ್ಯ ಪತಿಃ । ಕ್ಷೇತ್ರಂ ಕ್ಷೀಯತೇರ್ನಿವಾಸಕರ್ಮಣಸ್ತಸ್ಯ ಪಾತಾ ವಾ ಪಾಲಯಿತಾ ವಾ ।
> (ನಿ. ೧೦-೧೪)

ಕ್ಷಿ (ಕ್ಷಯ್) ವಾಸಮಾಡು ಎಂಬ ಧಾತುವಿನಿಂದ ನಿಷ್ಪನ್ನವಾದ ಕ್ಷೇತ್ರಶಬ್ದಕ್ಕೆ ನಿವಾಸಸ್ಥಾನವೆಂದರ್ಥವು. ಆ ನಿವಾಸಸ್ಥಾನಕ್ಕೆ ಸ್ವಾಮಿ ಅಥವಾ ಅದನ್ನು ರಕ್ಷಿಸುವವನಿಗೆ ಕ್ಷೇತ್ರಪತಿ ಎಂದು ಹೆಸರು.

> ತಸ್ಯೈಷಾ ಭವತಿ ।
> ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।
> ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥
> (ಋ. ಸಂ. ೪-೫೭-೧)

> ಕ್ಷೇತ್ರಸ್ಯ ಪತಿನಾ ವಯಂ ಸುಹಿತೇನೇವ ಜಯಾಮೋ ಗಾಮಶ್ವಂ ಪುಷ್ಟಂ ಪೋಷಯಿತೃ ಚಾಹರೇತಿ । ಸ ನೋ ಮೃಳಾತೀದೃಶೇ । ಬಲೇನ ವಾ ಧನೇನ ವಾ । ಮೃಳತಿರ್ದಾನಕರ್ಮಾ ಪೂಜಾಕರ್ಮಾ ವಾ ।
>
> (ನಿ. ೧೪-೧೫)

ನಮಗೆ ಪ್ರಿಯಪಾತ್ರನಾದ ಸ್ನೇಹಿತನಿಂದ ಪಡೆಯುವಂತೆ ಕ್ಷೇತ್ರಪತಿಯಿಂದ ನಾವು ಧನಾದಿಗಳನ್ನು ಪಡೆಯುವೆವು. ಎಲೈ ಪೋಷಕನಾದ ಕ್ಷೇತ್ರಪತಿಯೇ, ಪುಷ್ಟಿಯುತವಾದ ಗೋವನ್ನೂ, ಅಶ್ವವನ್ನೂ ನಮಗೆ ತಂದುಕೊಡು. ಅವನು ನಮಗೆ ಬಲವನ್ನೂ, ಧನವನ್ನೂ ಕೊಟ್ಟು ಈ ವಿಧವಾಗಿ ಸುಖವನ್ನುಂಟುಮಾಡುವನು. ಮೃಳತಿಧಾತುವಿಗೆ ದಾನ ಮಾಡುವುದು ಅಥವಾ ಪೂಜೆಮಾಡುವುದು ಎಂದರ್ಥವಿರುವುದು. ಈಗ ಇನ್ನೊಂದು ಉದಾಹರಣೆಯನ್ನು ಕೊಡುವರು—

ತಸ್ಯೈಷಾಪರಾ ಭವತಿ ।
ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।
ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥

(ಋ. ಸಂ. ೪-೫೭-೨)

ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋಽಸ್ಮಾಸು ಧುಕ್ಷ್ವೇತಿ ಮಧುಶ್ಚುತಂ ಘೃತಮಿವೋದಕಂ ಸುಪೂತಮೃತಸ್ಯ ನಃ ಪಾತಾರೋ ವಾ ಪಾಲಯಿತಾರೋ ವಾ ಮೃಳಯಂತು ಮೃಳಯತಿರುಪದಯಾಕರ್ಮಾ ಪೂಜಾಕರ್ಮಾ ವಾ ॥

(ನಿ. ೧೦-೧೬)

ಎಲೈ ನಿವಾಸಸ್ಥಾನಗಳಿಗೆ ಅಧಿಪತಿಯಾದ ಕ್ಷೇತ್ರಪತಿಯೇ, ಹಸುವು ನಮಗೆ ಹಾಲನ್ನು ಕರೆದು ಒದಗಿಸಿಕೊಡುವಂತೆ ಜೇನುತುಪ್ಪದಂತೆ ಮಧುರವಾಗಿರುವುದೂ, ಘೃತದಂತೆ ಶುದ್ಧವಾಗಿರುವುದೂ ಆದ ಶ್ರೇಷ್ಠವಾದ ಉದಕವನ್ನು ನಮಗೆ ಒದಗಿಸಿಕೊಡು. ನೀನು ಉದಕಕ್ಕೆ ಪಾಲಕನು. ಇಲ್ಲಿ ಉಪಯೋಗಿಸಿರುವ ಮೃಳಯತಿ ಧಾತುವಿಗೆ ರಕ್ಷಿಸು ಅಥವಾ ಪೂಜಿಸು ಎಂಬರ್ಥವಿರುವುದು.

ತದ್ಯತ್ಸಮಾನ್ಯಾಮೃಚಿ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯೇಕಂ ಮಧುಮಂತಂ ಮಧುಶ್ಚುತಮಿತಿ ಯಥಾ । ಯದೇವ ಸಮಾನೇ ಪಾದೇ ಸಮಾನಾಭಿವ್ಯಾಹಾರಂ ಭವತಿ ತಜ್ಜಾಮಿ ಭವತೀತ್ಯಪರಂ-ಹಿರಣ್ಯರೂಪಃ ಸ ಹಿರಣ್ಯಸಂದೃಕ್ ಇತಿ ಯಥಾ । ಯಥಾ ಕಥಾ ಚ ವಿಶೇಷೋಽಜಾಮಿ ಭವತೀತ್ಯಪರಂ-ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ಇತಿ ಯಥಾ ॥　　(ನಿ. ೧೦-೧೬)

ಮೇಲಿನ ಉದಾಹರಣೆಯಲ್ಲಿ ಋಕ್ಕಿನ ಪೂರ್ವಾರ್ಧದಲ್ಲಿ ಮಧುಮಂತಂ ಎಂಬ ಶಬ್ದವಿರುವುದು. ಉತ್ತರಾರ್ಧದಲ್ಲಿ ಮಧುಶ್ಚುತಂ ಎಂಬ ಶಬ್ದವಿರುವುದು. ಈ ರೀತಿ ಸಮಾನಾರ್ಥವುಳ್ಳ (ಒಂದೇ ಅರ್ಥವುಳ್ಳ) ಎರಡುಶಬ್ದಗಳುಳ್ಳ ಋಕ್ಕಿಗೆ ಅಥವಾ ಮಂತ್ರಕ್ಕೆ ಜಾಮಿ (ಸಂಬಂಧ) ಎಂದು ಹೆಸರು ಎಂದು ಕೆಲವರು ಹೇಳುವರು. ಮತ್ತೆ ಕೆಲವರು ಒಂದೇ ಪಾದದಲ್ಲಿ ಒಂದೇ ಅರ್ಥವುಳ್ಳ ಎರಡು ಶಬ್ದಗಳಿದ್ದರೆ ಅದು ಜಾಮಿಯೆಂದು ಹೇಳುವರು. ಹಿರಣ್ಯರೂಪಃ ಸ ಹಿರಣ್ಯಸಂದೃಕ್ ಎಂಬ ಪಾದದಲ್ಲಿರುವಂತೆ. ಮತ್ತೆ ಕೆಲವರು ಒಂದು ಋಕ್ಕಿನಲ್ಲಿ ಅಥವಾ ಒಂದು ಪಾದದಲ್ಲಿ ಸಮಾನಾರ್ಥವಿರುವ (ಒಂದೇ ಅರ್ಥವಿರುವ) ಬೇರೆಬೇರೆ ಶಬ್ದಗಳಿದ್ದರೂ ಅಥವಾ ಒಂದೇ ವಿಧವಾದ ಶಬ್ದಗಳ ಪುನರಾವರ್ತಿ ಇದ್ದರೂ ಅದು ಜಾಮಿಯಾಗುವುದಿಲ್ಲ. ಎಂದರೆ ಸಮಾನಾರ್ಥವನ್ನು ಸೂಚಿಸುವುದಿಲ್ಲ. ಹೇಗೆಂದರೆ—

ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ಎಂಬ ಋಕ್ಕಿನಲ್ಲಿರುವಂತೆ. ಇಲ್ಲಿ ಸಮಾನಾರ್ಥಶಬ್ದಗಳ ಪುನರಾವರ್ತಿ ಇದ್ದರೂ ಈ ಪುನರಾವರ್ತಿಯು (ಅಭ್ಯಾಸವು) ವಾಕ್ಯದ ಅಭಿಪ್ರಾಯವನ್ನು ಒತ್ತಿ ಹೇಳುವುದಕ್ಕಾಗಿ ಪ್ರಯುಕ್ತವಾಗಿರುವುದು ಎಂದು ಮತ್ತೆ ಕೆಲವರ ಮತವು.

'ಕ್ಷೇತ್ರಸ್ಯಪತಿ' ಎಂಬ ದೇವತೆಯೂ ವಾಸ್ತೋಷ್ಪತಿಯ ಜಾತಿಗೆ ಸೇರಿದುದು. ಈ ದೇವತೆ ಭೂರಕ್ಷಕ. ೪-೫೭ ನೆಯ ಸೂಕ್ತದ ಮೊದಲನೆಯ ಮೂರು ಮಂತ್ರಗಳಲ್ಲಿ ಈತನಿಂದ, ಗೋವುಗಳು, ಅಶ್ವಗಳು ಮತ್ತು ಭೂಮ್ಯಾಕಾಶಗಳು, ವೃಕ್ಷಗಳು, ನೀರು ಇವುಗಳಲ್ಲಿ ಮಾಧುರ್ಯ ಮೊದಲಾದುವುಗಳು ಅಪೇಕ್ಷಿತವಾಗಿವೆ. ವಿಶ್ವೇ ದೇವತಾಕವಾದ ಸೂಕ್ತವೊಂದರಲ್ಲಿ (೭-೩೫-೧೦) ಸವಿತೃ, ಉಷೋದೇವಿಯರು, ಪರ್ಜನ್ಯ, ಇವರೊಡನೆ ಈತನೂ ಸಮೃದ್ಧಿದಾಯಕನಾಗಬೇಕೆಂದು ಪ್ರಾರ್ಥಿತನಾಗಿದಾನೆ ೧೦-೬೬-೧೩ ರಲ್ಲಿ ಆರಾಧಕರು ಈತನನ್ನು ತಮ್ಮ ನೆರೆಯಲ್ಲಿರಬೇಕೆಂದು ಆಶಿಸಿದ್ದಾರೆ. ಭೂಮಿಯನ್ನು ಉಳುವುದಕ್ಕೆ ಪ್ರಾರಂಭಿಸುವಾಗ ಈ ದೇವತೆಯನ್ನು ಪೂಜಿಸಬೇಕು ಅಥವಾ ದೇವತೆಯನ್ನುದ್ದೇಶಿಸಿ ಹೋಮಮಾಡಬೇಕೆಂದು ಹೇಳಿದೆ. (ಆ. ಗೃ. ಸೂ. ೨-೧೦-೪; ಶಾಂ. ಗೃ. ಸೂ. ೪-೧೩-೫) ವ್ಯವಸಾಯ ಸಂಬಂಧವಾದ ದೇವತೆಗಳನ್ನು ಸ್ತುತಿಸುವ ಸೂಕ್ತವೊಂದರಲ್ಲಿ (೪-೫೭-೬) ಸೀತಾ (ನೇಗಿಲುಗೆರೆ) ಎಂಬ ದೇವತೆಯಿಂದ ಉತ್ತಮವಾದ ಬೆಳೆಯು ಪ್ರಾರ್ಥಿತವಾಗಿದೆ. ಪಾರಸ್ಕರ ಗೃಹ್ಯಸೂತ್ರದಲ್ಲಿ (ಪಾ. ಗೃ. ಸೂ. ೨-೧೭-೯) ಇದೇ ಸೀತೆಯು ಇಂದ್ರನ ಪತ್ನಿಯೆಂದೂ ಮತ್ತು ಅವಳಿಗೆ ತಂದೆಯ ಹೆಸರಿನ ಆಧಾರದ ಮೇಲೆ ಸಾವಿತ್ರೀ ಎಂದು ಹೆಸರೆಂದೂ (ತೈ. ಬ್ರಾ. ೨-೩-೧೦-೧) ಹೇಳಿದೆ. ಇದೇ ಪಾರಸ್ಕರ ಗೃಹ್ಯಸೂತ್ರದಲ್ಲಿ ಉರ್ವರಾ (ವ್ಯವಸಾಯಕ್ಕೆ ಅನುಕೂಲವಾಗಿರುವ ಜಮೀನು) ಎಂಬೊಂದು ದೇವತೆ ಉಕ್ತವಾಗಿದೆ.

ನಿರುಕ್ತಕಾರರ ನಿರ್ವಚನದಂತೆ ಕ್ಷೇತ್ರಪತಿಯು ಗೃಹಪತಿಯೂ ಆಗಬಹುದಾದುದರಿಂದ ಅಗ್ನಿಯೆಂದೂ ಅರ್ಥವಾಗಬಹುದು. ಆದರೆ ಕ್ಷೇತ್ರಶಬ್ದದ ಪ್ರಯೋಗವು ಕೃಷಿಸಂಬಂಧವಾಗಿಯೇ ಪ್ರಕೃತವಾದ ಮಂತ್ರದಲ್ಲಿರುವುದರಿಂದ ಕ್ಷೇತ್ರಪತಿಶಬ್ದವು ಪ್ರತ್ಯೇಕವಾದ ದೇವತೆಯೆಂದೇ ಅರ್ಥಮಾಡುವುದು ಉಚಿತವಾಗಿರುತ್ತದೆ. ಕೆಲವೆಡೆಗಳಲ್ಲಿ ಸಾಯಣರ ಭಾಷ್ಯವೂ ಈ ಅರ್ಥವನ್ನೇ ಸಮರ್ಥಿಸುತ್ತದೆ. ಉದಾಹರಣೆಗೆ,

ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ ।
ಕ್ಷೇತ್ರಸ್ಯ ಪತಿಂ ಪ್ರತಿವೇಶಮೀಮಹೇ ವಿಶ್ವಾನ್ದೇವಾ ಅಮೃತಾ ಅಪ್ರಯುಚ್ಛತಃ ॥

(ಋ. ಸಂ. ೧೦-೬೬-೧೩)

ದೇವತಾತ್ಮರೂ, ಹೋತೃರೂಪರೂ ಆದ ಅಗ್ನ್ಯಾದಿತ್ಯರನ್ನೂ, ಯಜ್ಞಮಾರ್ಗವನ್ನೂ ಸಹ ನಾನು ಅನುಸರಿಸುತ್ತೇನೆ. ಕ್ಷೇತ್ರಪತಿಯನ್ನೂ, ಪ್ರಮಾದರಹಿತರಾದ ಇತರ ಎಲ್ಲಾ ದೇವತೆಗಳನ್ನೂ ನಾನು ಧನಾರ್ಥವಾಗಿ ಪೂಜಿಸುತ್ತೇನೆ. ಎಂಬರ್ಥವುಳ್ಳ ಈ ಮಂತ್ರದಲ್ಲಿ ಕ್ಷೇತ್ರಸ್ಯ ಪತಿಂ ಎಂಬುದಕ್ಕೆ ಸಾಯಣರು ಏತನ್ನಾಮಾನಂ ಎಂದು ವಿವರಿಸಿ ಇದು ಪ್ರತ್ಯೇಕವಾದ ದೇವತೆಯ ಹೆಸರೆಂದೇ ತಿಳಿಯಬೇಕು ಎಂದು ಹೇಳಿದ್ದಾರೆ. ಇದರಂತೆಯೇ,

ಶಂ ನೋ ದೇವಃ ಸವಿತಾ ತ್ರಾಯಮಾಣಃ ಶಂ ನೋ ಭವಂತೂಷಸೋ ವಿಭಾತೀಃ ।
ಶಂ ನಃ ಪರ್ಜನ್ಯೋ ಭವತು ಪ್ರಜಾಭ್ಯಃ ಶಂ ನಃ ಕ್ಷೇತ್ರಸ್ಯ ಪತಿರಸ್ತು ಶಂಭುಃ ॥

(ಋ. ಸಂ. ೭-೩೫-೧೦)

ಎಂಬ ಮಂತ್ರದಲ್ಲಿಯೂ ಕ್ಷೇತ್ರಪತಿ ಶಬ್ದಕ್ಕೆ ಇದೇ ಅರ್ಥವನ್ನು ಹೇಳಬೇಕು. ಈ ಮಂತ್ರದ ಹಿಂದಿನ ಮಂತ್ರದಲ್ಲಿ ಅಗ್ನಿ, ಇಂದ್ರ, ಸೂರ್ಯ ಇತ್ಯಾದಿ ಇತರ ದೇವತೆಗಳ ನಾಮನಿರ್ದೇಶವು ಸ್ಪಷ್ಟವಾಗಿರುವುದರಿಂದ ಇದು ಬೇರೆ (ಪ್ರತ್ಯೇಕ) ದೇವತೆಯ ನಾಮವನ್ನು ತಿಳಿಸುವುದಾಗಿದೆಯೆಂದು ಹೇಳಬಹುದು.

ಬೃಹದ್ದೇವತಾಕಾರರು ಇದೇ ಕ್ಷೇತ್ರಪತಿಯು ಇಂದ್ರನ ವಿಭೂತಿವಿಶೇಷವೆಂದು ಒಂದು ಕಡೆಯೂ, ಅಗ್ನಿಯ ವಿಭೂತಿವಿಶೇಷನೆಂದು ಇನ್ನೊಂದು ಕಡೆಯೂ ತಿಳಿಸಿದ್ದಾರೆ.

ಇಂದ್ರಾಶ್ರಯಸ್ತು ಪರ್ಜನ್ಯೋ ರುದ್ರೋ ವಾಯುರ್ಬೃಹಸ್ಪತಿಃ ।
ವರುಣಃ ಕಶ್ಚ ಮೃತ್ಯುಶ್ಚ ದೇವಶ್ಚ ಬ್ರಹ್ಮಣಸ್ಪತಿಃ ॥
ಮನುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ।

(ಬೃ. ದೇ. ೧–೧೨೨, ೧೨೩)

ಪರ್ಜನ್ಯ, ರುದ್ರ, ವಾಯು, ಬೃಹಸ್ಪತಿ. ವರುಣ, ಕ, ಮೃತ್ಯು, ಬ್ರಹ್ಮಣಸ್ಪತಿ, ಮನ್ಯು, ವಿಶ್ವಕರ್ಮಾ, ಮಿತ್ರ, ಕ್ಷೇತ್ರಪತಿ, ಯಮ, ತಾರ್ಕ್ಷ್ಯ ಇತ್ಯಾದಿ ಸಕಲದೇವತೆಗಳೂ ಇಂದ್ರಾಂತರ್ಗತರು ಎಂದು ಒಂದು ಕಡೆ ಹೇಳಿದೆ. ಅಲ್ಲದೆ.

ಅನ್ನಂ ಕ್ಷಿತಿಭ್ಯೋ ವಿದಧತ್ ಯದ್ವೃತುಷ್ವನಿಶಕ್ಕ್ಷಿತೌ ।
ತೇನೈನಮಾಹ ಕ್ಷೇತ್ರಸ್ಯ ವಾಮದೇವಃ ಸ್ತುವನ್ಪತಿಂ ॥

(ಬೃ. ದೇ. ೨–೪೧)

ಋತುಕಾಲಗಳಿಗನುಗುಣವಾಗಿ ಇದೇ ಅಗ್ನಿಯು ಪೃಥ್ವಿಯಲ್ಲಿ (ಕ್ಷಿತೌ) ಅಂತರ್ಗತನಾಗಿ, ಪೃಥ್ವಿಯ ಸಕಲ ಪ್ರದೇಶಗಳಿಗೂ ಅನ್ನವನ್ನು ಹಂಚುವವನಾದುದರಿಂದ ವಾಮದೇವಋಷಿಯು ಇವನನ್ನು ಕ್ಷೇತ್ರಪತಿಯೆಂದು ಪ್ರಶಂಸಿಸಿದನು ಎಂದು ತಿಳಿಸಿದೆ. ಈ ವಿವರಣವು "ಕೇಚಿದಗ್ನಿಮಥಾಪರೇ" ಎಂದು ಸಾಯಣರು ತಿಳಿಸಿರುವ ಅರ್ಥಕ್ಕೆ ಹೊಂದಿಕೊಳ್ಳುತ್ತದೆ.

ಶುನ, ಸೀರ, ಲಾಂಗಲ, ಫಾಲ, ಸೀತಾ ಇತ್ಯಾದಿ ಪದಗಳ ಪ್ರಯೋಗಗಳು ಕೃಷಿಯ ಸ್ವರೂಪವನ್ನೇ ಪೂರ್ಣವಾಗಿ ವರ್ಣಿಸುವುದರಿಂದ ಪ್ರಕೃತದಲ್ಲಿ ಕ್ಷೇತ್ರಪತಿಯೆಂಬುದಕ್ಕೆ ಕೃಷಿಗೆ ಉಪಯುಕ್ತವಾದ ಕ್ಷೇತ್ರಗಳಿಗೆ ಪಾಲಕನಾದ ದೇವತಾವಿಶೇಷನೆಂದೇ ಅರ್ಥಮಾಡುವುದು ಉಚಿತವಾಗಿರುತ್ತದೆ. ಶುನ, ಸೀರ ಎಂಬ ಪದಗಳಿಗೂ ಸಹ ನೇಗಿಲು, ಗುಳ ಇತ್ಯಾದಿಯಾಗಿ ಕೃಷಿಸಾಧನಗಳೆಂದೇ ಅರ್ಥಮಾಡಿದರೂ ತಪ್ಪಾಗಲಾರದು. ಆದರೆ, ಶುನ, ಸೀರ ಎಂಬ ಪದಗಳ ಪ್ರತ್ಯೇಕವಾದ ಪ್ರಯೋಗವೂ, ಶುನಾಸೀರಾ ಎಂಬ ದ್ವಂದ್ವ ರೂಪದ ಪ್ರಯೋಗವೂ ವಿಶೇಷವಾಗಿರುವುದರಿಂದ ಆಯಾ ಸಂದರ್ಭಗಳಿಗನುಗುಣವಾಗಿ ಈ ಪದಗಳ ನಿಷ್ಕೃಷ್ಟವಾದ ತಾತ್ಪರ್ಯವೇನೆಂಬುದನ್ನು ಪರಿಶೀಲಿಸಬೇಕು.



॥ ಸಂಹಿತಾಪಾಠಃ ॥

ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।
ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥

॥ ಪದಪಾಠಃ ॥

ಕ್ಷೇತ್ರಸ್ಯ । ಪತೇ । ಮಧುऽಮಂತಂ । ಊರ್ಮಿಂ । ಧೇನುಃऽಇವ । ಪಯಃ । ಅಸ್ಮಾಸು । ಧುಕ್ಷ್ವ ।
ಮಧುऽಶ್ಚುತಂ । ಘೃತಂऽಇವ । ಸುऽಪೂತಂ । ಋತಸ್ಯ । ನಃ । ಪತಯಃ । ಮೃಳಯಂತು ॥ ೨ ॥

॥ ಸಾಯಣಭಾಷ್ಯಂ ॥

ಅಪ್ತೋರ್ಯಾಮೇ ಮೈತ್ರಾವರುಣಸ್ಯಾತಿರಿಕ್ತೋಕ್ಥೇ ಪರಿಧಾನೀಯಾ । ಸೂತ್ರಿತಂ ಚ । ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಮಿತಿ ಪರಿಧಾನೀಯಾ । ಆ. ೯-೧೧ । ಇತಿ ॥

ಹೇ ಕ್ಷೇತ್ರಸ್ಯ ಪತೇ ತ್ವಂ ಮಧುಮಂತಂ ಮಾಧುರ್ಯೋಪೇತಮೂರ್ಮಿಂ ಪ್ರವೃದ್ಧಮುದಕಂ ಧೇನುಃ ಪಯ ಇವ ಸಾ ಯಥಾ ದುಗ್ಧೇ ತಥಾಸ್ಮಾಸು ಧುಕ್ಷ್ವ । ಮಧುಶ್ಚುತಂ ಮಧುಸ್ರಾವಿ ಸುಪೂತಂ ಘೃತಮಿವೇತ್ಯುಪಮಾ । ತಾದೃಶಮುದಕಮಿತ್ಯರ್ಥಃ । ಋತಸ್ಯ ಯಜ್ಞಸ್ಯೋದಕಸ್ಯ ವಾ ಪತಯಃ ಸ್ವಾಮಿನೋ ನೋऽಸ್ಮಾನ್ ಮೃಳಯಂತು । ಸುಖಯಂತು । ಯದ್ವಾ । ಋತಸ್ಯೈತತ್ಕರ್ಮಣಿ ಷಷ್ಠೀ । ಋತಂ ಮೃಳಯಂತು । ಪ್ರಯಚ್ಛಂತು । ಮೃಳತಿರತ್ರ ದಾನಕರ್ಮಾ ॥

॥ ಪ್ರತಿಪದಾರ್ಥ ॥

ಕ್ಷೇತ್ರಸ್ಯ ಪತೇ—ಎಲೈ ಕ್ಷೇತ್ರಪತಿದೇವನೇ । ಧೇನುಃ—ಧೇನುವು । ಪಯಃ ಇವ—ಕ್ಷೀರವನ್ನು ಕರೆಯುವಂತೆ । ಮಧುಶ್ಚುತಂ—ಮಧುವಿನ ಬಿಂದುಗಳಂತೆ ರುಚಿಕರವಾಗಿರುವುದೂ । ಘೃತಮಿವ—ಘೃತದಂತೆ । ಸುಪೂತಂ—ಪವಿತ್ರವಾಗಿರುವುದೂ । ಮಧುಮಂತಂ—ಮಾಧುರ್ಯೋಪೇತವಾದುದೂ । ಊರ್ಮಿಂ—ಪ್ರವೃದ್ಧವಾದುದೂ ಆದ ಉದಕವನ್ನು । ಅಸ್ಮಾಸು—ನಮಗಾಗಿ । ಧುಕ್ಷ್ವ—ಕರೆದು ಸುರಿಸು । ಋತಸ್ಯ—ಉದಕಕ್ಕೆ । ಪತಯಃ—ಒಡೆಯರಾದ ದೇವತೆಗಳು । ನಃ—ನಮ್ಮನ್ನು । ಮೃಳಯಂತು—ಸುಖಪಡಿಸಲಿ.

। ಭಾವಾರ್ಥ ।

ಎಲೈ ಕ್ಷೇತ್ರಪತಿದೇವನೇ, ಕ್ಷೀರವನ್ನು ಧೇನುವು ಕರೆಯುವಂತೆ ಮಧುವಿನ ಬಿಂದುಗಳಂತೆ ರುಚಿಕರವಾದುದೂ, ಘೃತದಂತೆ ಪವಿತ್ರವಾಗಿರುವುದೂ, ಮಾಧುರ್ಯೋಪೇತವಾದುದೂ, ಪ್ರವೃದ್ಧವಾದುದೂ ಆದ ಉದಕವನ್ನು ನಮಗಾಗಿ ಕರೆದು ಸುರಿಸು. ಉದಕಪತಿಗಳಾದ ದೇವತೆಗಳು ನಮ್ಮನ್ನು ಸುಖಪಡಿಸಲಿ

## English Translation.

Lord of the field, bestow upon us sweet abundant, (water), as the milch cow (yields her) milk, dropping like honey, bland as butter : may the lords of the water make us happy.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಬರೆದಿರುವ ನಿರ್ವಚನವನ್ನು ಒಂದನೇ ಋಕ್ಕಿನ ವಿಶೇಷವಿಷಯಗಳಲ್ಲಿಯೇ ವಿವರಿಸಲಾಗಿದೆ. ಅಪ್ತೋರ್ಯಾಮವೆಂಬ ಯಾಗದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಅತಿರಿಕ್ತೋಕ್ಥ್ಯ ಮಂತ್ರಗಳನ್ನು ಪಠಿಸುವಾಗ ಈ ಋಕ್ಕನ್ನು ಪರಿಧಾನೀಯ (ಕೊನೆಯ) ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಮಿತಿ ಪರಿಧಾನೀಯಾ ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.



॥ ಸಂಹಿತಾಪಾಠಃ ॥

ಮಧುಮತೀರೋಷಧೀರ್ದ್ಯಾವ ಆಪೋ ಮಧುಮನ್ನೋ ಭವತ್ವಂತರಿಕ್ಷಂ ।
ಕ್ಷೇತ್ರಸ್ಯ ಪತಿರ್ಮಧುಮಾನ್ನೋ ಅಸ್ತ್ವರಿಷ್ಯಂತೋ ಅನ್ವೇನಂ ಚರೇಮ ॥೩॥

॥ ಪದಪಾಠಃ ॥

ಮಧುಽಮತೀಃ । ಓಷಧೀಃ । ದ್ಯಾವಃ । ಆಪಃ । ಮಧುಽಮತ್ । ನಃ । ಭವತು । ಅಂತರಿಕ್ಷಂ ।
ಕ್ಷೇತ್ರಸ್ಯ । ಪತಿಃ । ಮಧುಽಮಾನ್ । ನಃ । ಅಸ್ತು । ಅರಿಷ್ಯಂತಃ । ಅನು । ಏನಂ । ಚರೇಮ ॥ ೩ ॥

॥ ಸಾಯಣಭಾಷ್ಯಂ ॥

ಬ್ರಾಹ್ಮಣಾಚ್ಛಂಸಿನೋಽತಿರಿಕ್ತೋಕ್ಥ್ಯೇ ಪರಿಧಾನೀಯೈಷಾ । ಮಧುಮತೀರೋಷಧೀರ್ದ್ಯಾವ ಆಪ ಇತಿ ಪರಿಧಾನೀಯಾ । ಆ. ೯-೧೧ । ಇತಿ ಸೂತ್ರಿತತ್ವಾತ್ ॥

ಓಷಧೀರೋಷಧ್ಯೋ ವ್ರೀಹಿಪ್ರಿಯಂಗ್ವಾದಯೋ ನೋಽಸ್ಮಭ್ಯಂ ಮಧುಮತೀರ್ಮಧುಮತ್ಯೋ ಭವಂತು । ತಥಾ ದ್ಯಾವಃ । ತಿಸ್ರೋ ದಿವ ಇತ್ಯುಕ್ತತ್ವಾದ್ಬಹುವಚನಂ ಯುಕ್ತಂ । ತಥಾಪೋಽಂತರಿಕ್ಷಂ ಚ ನೋ ಮಧುಮದ್ಭವತು । ಕಿಂಚ ಕ್ಷೇತ್ರಸ್ಯ ಪತಿರಪಿ ಮಧುಮಾನ್ನೋಽಸ್ತು । ಅರಿಷ್ಯಂತೋಽನ್ಯೈರಹಿಂಸ್ಯಂತೋ ವಯಮೇನಂ ಕ್ಷೇತ್ರಪತಿಮನು ಅನುಸೃತ್ಯ ಚರೇಮ । ಸಂಚರೇಮ ಸುಖೇನ ॥

॥ ಪ್ರತಿಪದಾರ್ಥ ॥

ಓಷಧೀಃ—ವ್ರೀಹ್ಯಾದ್ಯೋಷಧಿಗಳು | ನಃ—ನಮಗೆ | ಮಧುಮತೀಃ—ಮಾಧುರ್ಯೋಪೇತವಾಗಿ | ಭವತು—ಆಗಿರಲಿ | ದ್ಯಾವಃ—ದ್ಯುಲೋಕಗಳೂ | ಆಪಃ—ಉದಕಗಳೂ | ಅಂತರಿಕ್ಷಂ—ಅಂತರಿಕ್ಷವೂ | ಮಧುಮತ್—ಮಾಧುರ್ಯೋಪೇತವಾದ ಸತ್ವವುಳ್ಳವಾಗಿ (ಆಗಿರಲಿ) | ಕ್ಷೇತ್ರಸ್ಯ ಪತಿಃ—ಕ್ಷೇತ್ರಪತಿದೇವನೂ ಸಹ | ನಃ—ನಮಗೆ | ಮಧುಮಾನ್—ಹಿತಕಾರಕನಾಗಿ | ಅಸ್ತು—ಆಗಿರಲಿ | ಅರಿಷ್ಯಂತಃ—ಶತ್ರುಗಳಿಂದ ಅಹಿಂಸಿತರಾದ ನಾವು | ಏನಂ ಅನು—ಈ ಕ್ಷೇತ್ರಪತಿಯ ಆಜ್ಞಾನುಸಾರವಾಗಿ | ಚರೇಮ—ವ್ಯವಹರಿಸೋಣ.

॥ ಭಾವಾರ್ಥ ॥

ವ್ರೀಹಾದ್ಯೋಷಧಿಗಳು ನಮಗೆ ಮಧುರ್ಯೋಪೇತವಾಗಿರಲಿ. ದ್ಯುಲೋಕಗಳೂ, ಉದಕಗಳೂ, ಅಂತರಿಕ್ಷವೂ ನಮ್ಮ ವಿಷಯದಲ್ಲಿ ಮಾಧುರ್ಯೋಪೇತವಾದ ಸತ್ವವುಳ್ಳವರಾಗಿರಲಿ. ಕ್ಷೇತ್ರಪತಿದೇವನೂ ಸಹ ನಮಗೆ ಹಿತಕಾರಕನಾಗಿ ಆಗಿರಲಿ. ಶತ್ರುಗಳಿಂದ ಅಹಿಂಸಿತರಾದ ನಾವು ಈ ಕ್ಷೇತ್ರಪತಿಯ ಆಜ್ಞಾನುಸಾರವಾಗಿ ವ್ಯವಹರಿಸೋಣ.

## English Translation.

May the herbs (of the field) be sweet for us ; may the heavens, the waters, the firmament, be kind to us ; may the lord of the field be gracious to us : let us, undeterrcd (by foes), have recourse to him.

॥ ವಿಶೇಷವಿಷಯಗಳು ॥

ಮೇಲೆ ಹೇಳಿದ ಅಪ್ತೋರ್ಯಾಮಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯು ಪಠಿಸಬೇಕಾದ ಅತಿರಿಕ್ತೋಕ್ಥ್ಯಮಂತ್ರಗಳಲ್ಲಿ ಈ ಋಕ್ಕನ್ನು ಪರಿಧಾನೀಯ (ಕೊನೆಯ) ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಮಧುಮತೀರೋಷಧೀರ್ದ್ಯಾವ ಆಪ ಇತಿ ಪರಿಧಾನೀಯಾ ಎಂಬ ಸೂತ್ರದಿಂದ (೬.೯-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಶುನಂ ವಾಹಾಃ ಶುನಂ ನರಃ ಶುನಂ ಕೃಷತು ಲಾಂಗಲಂ |
ಶುನಂ ವರತ್ರಾ ಬಧ್ಯಂತಾಂ ಶುನಮಷ್ಟ್ರಾಮುದಿಂಗಯ || ೪ ||

॥ ಪದಪಾಠಃ ॥

ಶುನಂ | ವಾಹಾಃ | ಶುನಂ | ನರಃ | ಶುನಂ | ಕೃಷತು | ಲಾಂಗಲಂ |
ಶುನಂ | ವರತ್ರಾಃ | ಬಧ್ಯಂತಾಂ | ಶುನಂ | ಅಷ್ಟ್ರಾಂ | ಉತ್ | ಇಂಗಯ || ೪ ||

॥ ಸಾಯಣಭಾಷ್ಯಂ ॥

ವಾಹಾ ಬಲೀವರ್ದಾಃ ಶುನಂ । ಸುಖನಾಮೈತತ್ । ಸುಖಂ ಯಥಾ ಭವತಿ ತಥಾ ವಹಂತ್ವಿತಿ ಶೇಷಃ । ತಥಾ ನರೋ ನೇತಾರೋ ಮನುಷ್ಯಾಃ ಕರ್ಷಕಾಃ ಶುನಂ ಕುರ್ವಂತು । ತಥಾ ಲಾಂಗಲಮಪಿ ಶುನಂ ಕೃಷತು । ವರತ್ರಾ ವರಣೇನ ತ್ರಾಯಮಾಣಾಃ ಪ್ರಗ್ರಹಾಃ ಶುನಂ ಬಧ್ಯಂತಾಂ । ಅಷ್ಟ್ರಾಂ ಪ್ರತೋದಂ ಶುನಮುದಿಂಗಯ । ಪ್ರೇರಯ । ಶುನಾಖ್ಯೋ ವಾಯ್ವಿಂದ್ರಯೋರನ್ಯತಮಃ ಸುಖಕೃದ್ದೇವಃ । ತದನುಗ್ರಹಾದೇತತ್ಸರ್ವಂ ಭವತ್ವಿತಿ । ತಸ್ಯ ಶ್ರುತಿಸಾಮಾನ್ಯೇನ ಸ್ತುತಿಃ ॥

॥ ಪ್ರತಿಪದಾರ್ಥ ॥

ವಾಹಾಃ—ಭಾರಗಳನ್ನು ವಹಿಸುವ ವೃಷಭಗಳು । ಶುನಂ—ಸುಖವಾಗಿ (ಭಾರಗಳನ್ನು ವಹಿಸಲಿ) । ನರಃ—ಕೃಷಿಕಾರರಾದ ಮಾನವರು । ಶುನಂ—ಸುಖವಾಗಿ (ತಮ್ಮ ಕಾರ್ಯಗಳನ್ನು ಮಾಡಲಿ) । ಲಾಂಗಲಂ—ಉಳುವ ಸಾಧನವಾದ ನೇಗಿಲು । ಶುನಂ—ಸುಖವಾಗಿ । ಕೃಷತು—ಉಳುವಂತಾಗಲಿ । ವರತ್ರಾಃ—ಕಡಿವಾಣಗಳು (ಅಥವಾ ಮೂಗುದಾರಗಳು) । ಶುನಂ—ಸುಖವಾಗಿ । ಬಧ್ಯಂತಾಂ—ವೃಷಭಾದಿಗಳನ್ನು ಹಿಡಿದಿರಲಿ । ಅಷ್ಟ್ರಾಂ—ಭಾರವನ್ನು । ಶುನಂ—ಸುಖವಾಗಿರುವಂತೆ । ಉದಿಂಗಯ—ಹೊರಿಸು.

॥ ಭಾವಾರ್ಥ ॥

ಭಾರವನ್ನು ವಹಿಸುವ ವೃಷಭಾದಿಗಳು ಭಾರಗಳನ್ನು ಸುಖವಾಗಿ ವಹಿಸಲಿ. ಕೃಷಿಕಾರರಾದ ಮಾನವರು ತಮ್ಮ ಕಾರ್ಯಗಳನ್ನು ಸುಖವಾಗಿ ಮಾಡಲಿ. ಉಳುವ ಸಾಧನವಾದ ನೇಗಿಲು ಸುಖವಾಗಿ ಉಳುವಂತಾಗಲಿ. ಕಡಿವಾಣಗಳು ಅಥವಾ ಮೂಗುದಾರಗಳು ವೃಷಭಾದಿಗಳನ್ನು ಸುಖವಾಗಿ ಹಿಡಿದಿರಲಿ. ವೃಷಭಾದಿಗಳಿಗೆ ಭಾರವನ್ನು ಸುಲಭವಾಗಿ ಹೊರುವಂತೆ ಹೊರಿಸು.

## English Translation.

May the oxen (draw) happily, the men (labour) happily; the plough furrow happily; may the traces bind happily: wield the goad happily.

॥ ವಿಶೇಷವಿಷಯಗಳು ॥

ಶುನಾಸೀರೀಯಸವನದಲ್ಲಿ ಶುನಾಸೀರದೇವತಾಕವಾದ ಹವಿಸ್ಸಿನ ಹೋಮದಲ್ಲಿ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ ಈ ಸೂಕ್ತದ ಕೊನೆಯ ಋಕ್ಕಾದ ಶುನಂ ನಃ ಫಾಲಾ ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಶುನಾಸೀರಾವಿಮಾಂ ವಾಚಂ ಜುಷೇಥಾಂ ಶುನಂ ನಃ ಫಾಲಾಃ ಎಂಬ ಸೂತ್ರದಿಂದ (ಆ. ೨-೨೦) ವಿವೃತವಾಗಿರುವುದು.

ಶುನ ಮತ್ತು ಶುನಾಸೀರದೇವತೆಗಳು— ೪-೫೭-೪ ನೇ ಮಂತ್ರವು ಶುನದೇವತಾಕವಾದುದು. ಶುನ ಶಬ್ದಕ್ಕೆ ಸಾಯಣರು ಅರ್ಥವನ್ನು ಹೇಳುತ್ತಾ, "ಶುನಾಖ್ಯೋ ವಾಯ್ವಿಂದ್ರಯೋರನ್ಯತಮಃ ಸುಖಕೃದ್ದೇವಃ । ತದನುಗ್ರಹಾದೇತತ್ಸರ್ವಂ ಭವತ್ವಿತಿ ತಸ್ಯ ಶ್ರುತಿಸಾಮಾನ್ಯೇನ ಸ್ತುತಿಃ ॥" ವಾಯು ಅಥವಾ

ಇಂದ್ರ ಈ ಇಬ್ಬರಲ್ಲಿ ಒಬ್ಬರಿಗೆ ಶುನವೆಂಬ ಹೆಸರು ಅನ್ವರ್ಥವಾಗುತ್ತದೆ. ಅವರ ಅನುಗ್ರಹವಿದ್ದರೆ ಸಕಲವೂ ಸುಖಮಯವಾಗುವುದರಿಂದ ಅವರಿಬ್ಬರಲ್ಲಿ ಒಬ್ಬರಿಗೆ ಶುನನಾಮನಿರ್ದೇಶವು ಸಾರ್ಥಕವಾಗುತ್ತದೆ ಎಂದು ವಿವರಿಸಿದ್ದಾರೆ.

ಪುನಃ ೫ ನೇ ಮಂತ್ರದಲ್ಲಿ ಶುನಾಸೀರ ಶಬ್ದವನ್ನು ವಿವರಿಸುವಾಗ ಈ ರೀತಿ ತಿಳಿಸಿದ್ದಾರೆ. **'ದ್ಯುದೇವಃ ಶುನದೇವತಾ' ಇತಿ ಶೌನಕಃ। ಅತಃ ಶುನಃ ಇಂದ್ರಃ, 'ಶುನೋ ವಾಯುಃ ಶು ಏತ್ಯಂತರಿಕ್ಷೇ ಸೀರ ಆದಿತ್ಯಃ ಸರಣಾತ್'** (ನಿ. ೯-೪೦) ದ್ಯುಲೋಕಸ್ಥನಾದ ಶುನದೇವತೆಯೇ ಇಂದ್ರನು, ಎಂದು ಶೌನಕರ ಅಭಿಪ್ರಾಯವನ್ನು ತಿಳಿಸಿ, ನಂತರ, ಅಂತರಿಕ್ಷಸಂಚಾರಿಯಾದ್ದರಿಂದ ಶುನ ದೇವತೆಯು ವಾಯುವೆಂದೂ, ಭ್ರಮಣಾತ್ಮಕನಾದುದರಿಂದ ಆದಿತ್ಯನಿಗೆ ಸೀರನೆಂಬ ನಾಮವು ಪ್ರಸಿದ್ಧವಾಗಿದೆಯೆಂದೂ ವಿವರಿಸಿರುವ ನಿರುಕ್ತವಾಕ್ಯವನ್ನುದಾಹರಿಸಿದ್ದಾರೆ. ಮತ್ತು ೮ ನೇ ಮಂತ್ರದಲ್ಲಿ ಪುನಃ **ಶುನಾಸೀರಾ—ಇಂದ್ರವಾಯೂ; ವಾಯ್ವಾದಿತ್ಯೌ ವಾ** ಶುನಾಸೀರರೆಂದರೆ ಇಂದ್ರ ಮತ್ತು ವಾಯುವಾಗಬಹುದು ಅಥವಾ ವಾಯು ಮತ್ತು ಆದಿತ್ಯರಾಗಬಹುದು ಎಂದು ವಿವರಿಸಿದ್ದಾರೆ.

ಸಾಧಾರಣವಾಗಿ ನಿರುಕ್ತಮತವನ್ನೇ ಅನುಸರಿಸತಕ್ಕ ಬೃಹದ್ದೇವತಾಕಾರರು ಶುನಾಸೀರಶಬ್ದದ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದರಲ್ಲಿ ಮಾತ್ರ ಕೊಂಚ ವ್ಯತ್ಯಸ್ತವಾದ ಅಭಿಪ್ರಾಯವನ್ನು ಸೂಚಿಸಿ, ಇತರ ಮಹರ್ಷಿಗಳ ಮತವನ್ನೂ ಉದಾಹರಿಸಿ ಯಾಸ್ಕರಿಗೂ ತಮಗೂ ಇರುವ ವ್ಯತ್ಯಾಸವನ್ನೂ ತಿಳಿಸಿದ್ದಾರೆ.

**"ವಾಯುಃ ಶುನಃ ಸೂರ್ಯ ಏವಾತ್ರ ಸೀರಃ ಶುನಾಸೀರೌ ವಾಯುಸೂರ್ಯೌ ವದಂತಿ ।**
**ಶುನಾಸೀರಂ ಯಾಸ್ಕ ಇಂದ್ರಂ ತು ಮೇನೇ ಸೂರ್ಯೇಂದ್ರೌ ತೌ ಮನ್ಯತೇ ಶಾಕಪೂಣಿಃ ॥"**
(ಬೃಹದ್ದೇವತಾ ೫-೮)

ಶುನ, ಸೀರ ಎಂಬುವು ವಾಯು ಮತ್ತು ಸೂರ್ಯನಾಮನಿರ್ದೇಶಕಗಳಾದವು ಎಂದು ಹಿಂದಿನ ಋಷಿಗಳು ಹೇಳಿರುವುದರಿಂದ ಇಲ್ಲಿ ಶುನ ಶಬ್ದಕ್ಕೆ ವಾಯುವೆಂದರ್ಥ. ಎಂದರೆ, ವಾಯುಪರ್ಯಾಯನಾಮವಾಗಿದೆ. ಶಾಕಪೂಣಿಯ ಮತದಲ್ಲಿ ಶುನ ಶಬ್ದವು ಸೂರ್ಯನನ್ನೂ, ಸೀರ ಶಬ್ದವು ಇಂದ್ರನನ್ನೂ ನಿರ್ದೇಶಿಸುವುವು. ಆದರೆ, ಯಾಸ್ಕರು ಮಾತ್ರ ಶುನಾಸೀರ ಶಬ್ದಕ್ಕೆ ಇಂದ್ರನೆಂದೇ ಅರ್ಥಮಾಡಿದ್ದಾರೆ.

[ಬೃಹದ್ದೇವತಾಕಾರರು ನಿರುಕ್ತಕಾರರ ಮತವನ್ನು ತಿಳಿಸುವುದರಲ್ಲಿ ಒಂದು ವಿಶೇಷಾಂಶವನ್ನು ಗಮನಿಸಬೇಕು. **"ವಾಯುಃ ಶುನಃ ಸೂರ್ಯ ಏವಾತ್ರ ಸೀರಃ ಶುನಾಸೀರೌ ವಾಯುಸೂರ್ಯೌ ವದಂತಿ"** ಎಂದು ಹೇಳಿರುವ ತಮ್ಮ ಮತವು ಯಾಸ್ಕರು ನಿರುಕ್ತದಲ್ಲಿ (ನಿ. ೯-೪೦) ಹೇಳಿರುವ ಅಭಿಪ್ರಾಯದಂತೆಯೇ ಇದೆ. ಆದರೆ, ಶುನಾಸೀರ ಶಬ್ದಕ್ಕೆ ಇಂದ್ರನೆಂದೇ ಯಾಸ್ಕರು ಅರ್ಥಮಾಡಿದ್ದಾರೆಂದು ತಿಳಿಸಿದ್ದಾರೆ. ಪ್ರಾಯಶಃ ಇವರ ಅಭಿಪ್ರಾಯವೇನೋ ಹೇಳಲಾಗುವುದಿಲ್ಲ. ಯಾಸ್ಕರು ಶಾಕಪೂಣಿಯ ಮತವನ್ನು ಉದಾಹರಿಸಿಲ್ಲ.]

**ಶುನಾಸೀರೌ ಪಂಚಮ್ಯಾಂ ತು ಸ್ತುತೌ ತೌ ದ್ವೇ ತು ಸೀತಾಯೈ ಷಷ್ಠೀ ಸಪ್ತಮೀ ಚ ।**
**ಶುನಂ ನಃ ಫಾಲಾಃ ಕೃಷಿಂ ಸ್ತೌತಿ ಪಾದಃ ಶುನಂ ಕೀನಾಶಾಃ ಕೃಷಿಜೀವಾನ್ಮನುಷ್ಯಾನ್ ॥**
(ಬೃ ದೇ. ೫-೯)

ಶುನ, ಸೀರ ಈ ಇಬ್ಬರು ದೇವತೆಗಳೂ ಋಕ್ಸಂಹಿತೆಯ ೫ ಮತ್ತು ೮ ನೇ ಋಕ್ಕುಗಳಲ್ಲಿ ಪ್ರಶಂಸಿತರಾಗಿದ್ದಾರೆ. ಆರು ಮತ್ತು ಏಳನೆಯವು ಸೀತಾ ನಾಮಕವಾದ ದೇವತೆಯನ್ನುದ್ದೇಶಿಸಿದುದಾಗಿದೆ. ' ಶುನಂ ನಃ ಫಾಲಾಃ ' ಎಂಬ

ಪಾದವು ಕೃಷಿಯನ್ನು ಪ್ರಶಂಸಿಸುತ್ತದೆ. (Praises Agriculture), ಕೃಷಿಯಿಂದ ಜೀವನವನ್ನು ನಡೆಸುವವರ ಕಲ್ಯಾಣಾಶಂಸೆಯು ಮುಂದಿನ ಭಾಗದಲ್ಲಿ ಉಕ್ತವಾಗಿದೆ.

ಯಾವ ಶುನ ಮತ್ತು ಸೀರ ದೇವತೆಗಳು ಇಂದ್ರ ಮತ್ತು ವಾಯುವೆಂದಾಗಲಿ, ಅಥವಾ ವಾಯು ಆದಿತ್ಯ ರೆಂದಾಗಲಿ ಮೇಲೆ ಹೇಳಿದೆಯೋ ಅದೇ ದೇವತೆಗಳು ಅಗ್ನಿಯಲ್ಲಿ ಅಂತರ್ಗತರಾಗಿರತಕ್ಕವರು ಎಂದೂ ಸಹ ಹಿಂದೆ ವರ್ಣಿತರಾಗಿದ್ದಾರೆ. ಉದಾಹರಣೆಗೆ—

ಯೌ ಚ ದೇವೌ ಶುನಾಸೀರೌ ತೌ ಚಾಗ್ನೀ ಚೈತದಾಶ್ರಯೌ ।

ಶುನ ಮತ್ತು ಸೀರಾ ಈ ಇಬ್ಬರೂ ಅಗ್ನಿಯ ರೂಪಗಳೇ ಆಗಿ ಅಗ್ನಿಯಲ್ಲೇ ಅಂತರ್ಗತರಾಗಿದ್ದಾರೆ ಎಂದು ಬೃಹದ್ದೇವತೆಯಲ್ಲಿ ತಿಳಿಸಿದೆ. ಈ ರೀತಿಯಲ್ಲಿ ಈ ದೇವತೆಗಳ ರೂಪನಿಷ್ಕರ್ಷೆಯಿಲ್ಲದಿರುವುದರಿಂದ Max Muller ಎಂಬ ಪಂಡಿತನು ಈ ಸನ್ನಿವೇಶದಲ್ಲಿ ಈ ರೀತಿ ತಿಳಿಸಿದ್ದಾನೆ —

In Rig-Veda VII· 70-1, a horse is called ಶುನಪೃಷ್ಠೋ ಅಶ್ವಃ, meaninge evidently a horse having a plump back. But there are compounds in which ಶುನ would seem to have the meaning of a dog. In 8-46-28, ಶುನ-ಇಷಿತಂ most likely means carried by dogs and in ಶುನಾಸೀರೌ we have a name of a couple of deities, the former of which is said to be ಶುನ, the latter, ಸೀರ- Yaska recognises in this ಶುನ a name of Vayu. in ಸೀರ a name of the Sun. Another anthority, ಶೌನಕ declares ಶುನ to be a name of Indra, ಸೀರ, a name of the Wind. Asvalayana (ಶ್ರೌ. ಸೂ. ೨-೨೦) declares that ಶುನಾಸೀರೌ may be meant for ವಾಯು or for ಇಂದ್ರ and ಸೂರ್ಯ together. This shows, at all events, that the meaning of the two names was doubtful, even among early native theologians"

[Science of Language. II. p. 525]

ಋ. ಸಂ. ೭-೭೦-೧ರಲ್ಲಿ ಶುನಪೃಷ್ಠಃ ಅಶ್ವಃ ಎಂಬಲ್ಲಿ ಶುನ ಶಬ್ದಕ್ಕೆ ಪುಷ್ಟವಾದ ಎಂದರ್ಥ. ಶುನ ಶಬ್ದಕ್ಕೆ ಶ್ವಾ ಎಂಬರ್ಥವಿರುವ ಪ್ರಯೋಗವೂ ಉಂಟು. ಋ. ಸಂ. ೮-೪೬-೨೮ರಲ್ಲಿ ಶುನ ಇಷಿತಂ ಎಂಬ ಪದಗಳಿಗೆ ಬಹುಶಃ ಶ್ವಾನದಿಂದ ಅಪಹರಿಸಲ್ಪಟ್ಟದು ಎಂದೇ ಅರ್ಥವಿರಬೇಕು. (ಅಶ್ವೇಷಿತಂ, ರಜೇಷಿತಂ, ಶುನೇಷಿತಂ ; ಅಶ್ವ, ಗರ್ದಭ, ಶ್ವಾ ಎಂಬರ್ಥವು. ಇಲ್ಲಿ ಶುನ ಶಬ್ದಕ್ಕೆ ಸಾಯಣರು ಅರ್ಥವನ್ನು ಹೇಳಿಲ್ಲ. ಆದರೂ ಸಂದರ್ಭವು ಮೇಲಿನ ಅರ್ಥವನ್ನೇ ಸೂಚಿಸುತ್ತದೆ). ಶುನಾಸೀರಾ ಎಂಬಲ್ಲಿ ಯಾಸ್ಕರು ಒಂದು ವಿಧವಾಗಿಯೂ, ಶೌನಕರು ಇನ್ನೊಂದು ವಿಧವಾಗಿಯೂ ಅರ್ಥಮಾಡುತ್ತಾರೆ. (ಹೇಗೆಂಬುದನ್ನು ಮೇಲೆ ತಿಳಿಸಿದೆ) ಆಶ್ವಲಾಯನರು (ಶ್ರೌ. ಸೂ. ೨ ೨೦) ಶುನಾಸೀರಾ ಎಂಬುದಕ್ಕೆ ವಾಯುವೆಂದಾಗಲಿ, ಇಂದ್ರನೆಂದಾಗಲಿ, ಇಂದ್ರಾಸೂರ್ಯ ಎಂಬ ಇಬ್ಬರನ್ನೂ ಸೇರಿಸಿಯಾಗಲಿ ನಿರ್ದಿಷ್ಟವಾಗಬಹುದೆಂದು ವೈಕಲ್ಪಿಕವಾದ ಅರ್ಥಗಳನ್ನು ಹೇಳಿದ್ದಾರೆ. ಈ ಸನ್ನಿವೇಶಗಳಿಂದ,

ಪ್ರಾಚೀನರೂ, ವೈದಿಕ ಸಂಪ್ರದಾಯವನ್ನನುಸರಿಸುತ್ತಿದ್ದವರೂ ಆದ ದೊಡ್ಡ ಪಂಡಿತರುಗಳಿಗೂ ಈ ಪದಗಳ ನಿಷ್ಕೃಷ್ಟವಾದ ಅರ್ಥವು ತಿಳಿದಿರಲಿಲ್ಲವೆಂದು ಹೇಳಬಹುದು ಎಂದು ತನ್ನ ಗ್ರಂಥದಲ್ಲಿ ತಿಳಿಸಿದ್ದಾನೆ.

[ಸ್ತ್ರೀಲಿಂಗವಾಚಕವಾದ ಸೀರಾ ಶಬ್ದವು ೧-೧೭೪-೯; ೪-೧೯-೮; ೧೦-೪೯-೯; ೧೨-೯೭-೭; ೧೦-೧೦೧-೩, ೪ ಈ ಮಂತ್ರಗಳಲ್ಲಿ ಪ್ರಯುಕ್ತವಾಗಿದೆ. ಅಲ್ಲೆಲ್ಲಾ ನದಿಗಳೆಂದೇ ಹೆಸರು. ಕೆಲವೆಡೆಗಳಲ್ಲಿ ಏಕವಚನಾಂತವಾಗಿಯೂ, ಇನ್ನು ಕೆಲವೆಡೆ ಬಹುವಚನಾಂತವಾಗಿಯೂ ಪ್ರಯೋಗಿಸಲ್ಪಟ್ಟಿದೆ. ಪುಲ್ಲಿಂಗದಲ್ಲಿ ಪ್ರಯೋಗಿಸಲ್ಪಟ್ಟಾಗ ಕೃಷಿಸಾಧನವೆಂದರ್ಥವಾಗುತ್ತದೆ. (ನೇಗಿಲು) ಇದನ್ನು ಸಂದರ್ಭಾನುಸಾರವಾಗಿ ವಿವರಿಸಲಾಗುತ್ತದೆ]

ತೈತ್ತಿರೀಯಸಂಹಿತೆಯಲ್ಲಿ ಶುನಾಸೀರೀಯವಾದ ಹವಿಸ್ಸನ್ನು ಅರ್ಪಿಸುವ ಕಾಲದಲ್ಲಿ "ಇಂದ್ರಾಯ ಶುನಾಸೀರಾಯ" ಎಂಬ ಮಂತ್ರದಲ್ಲಿ ಇಂದ್ರನು ಬೇರೆ ಎಂಬುದು ನಿಷ್ಕೃಷ್ಟರಾಗಿ ತಿಳಿಸಲ್ಪಟ್ಟಿದೆ. ಇದೇ ಸನ್ನಿವೇಶಕ್ಕೆ ಭಾಷ್ಯಕಾರರು ಅರ್ಥವನ್ನು ವಿವರಿಸುವಾಗ ಈ ರೀತಿ ತಿಳಿಸಿದ್ದಾರೆ.

ಶುನೋ ವಾಯುಃ ಸೀರ ಆದಿತ್ಯಃ । ತದ್ವಾನಿಂದ್ರ ಇಹೋಚ್ಯತೇ ಅಭೇದಾತ್ಮತ್ವಾತ್ । ಮತ್ವರ್ಥೀಯೋ ವಾ ಅತ್ರ ಲುಪ್ಯತೇ ॥(ತೈ. ಸಂ. ಭಾ. ೧-೮-೭-೧)

ಇಂದ್ರಾಯ ಶುನಾಸೀರಾಯ ಎಂಬುದಕ್ಕೆ ಶುನಾಸೀರರೊಡಗೂಡಿದ ಇಂದ್ರನನ್ನು ಉದ್ದೇಶಿಸಿ ಎಂದರ್ಥ. ಶುನಾಸೀರಾಯ ಎಂದರೆ ಶುನಾಸೀರವತೇ (ಇಂದ್ರಾಯ) ಎಂಬಲ್ಲಿ ಮತ್ವರ್ಥೀಯವಾದ ಪ್ರತ್ಯಯವು ಲುಪ್ತವಾಗಿದೆಯೆಂದು ವಿವರಿಸಿ ವಾಯ್ವಾದಿತ್ಯರೊಡಗೂಡಿದ ಇಂದ್ರನಿಗೆ ಎಂದು ತಾತ್ಪರ್ಯವೆಂದು ತಿಳಿಸಿದೆ. ಆದುದರಿಂದ ಇಂದ್ರನು ಶುನಾಸೀರರಿಗಿಂತಲೂ ಭಿನ್ನನು ಎಂದು ಸ್ಪಷ್ಟವಾಯಿತು. Keith ಎಂಬುವನು ಇದೇ ಭಾಗವನ್ನು ಪರಿವರ್ತಿಸುವ ಕಾಲದಲ್ಲಿ ಶುನಾಸೀರ ಎಂಬಲ್ಲಿ ಶುನ ಶಬ್ದಕ್ಕೆ ಗುಳವೆಂದೂ, ಸೀರ ಶಬ್ದಕ್ಕೆ ನೇಗಿಲು ಎಂದೂ ಅರ್ಥವೂ ಸಹ ಸಾಧ್ಯವಿರಬಹುದೆಂದು ತಿಳಿಸಿದ್ದಾನೆ. (ಇದರ ವಿವರಣೆಯನ್ನು Vedic Mythology ಎಂಬ ಗ್ರಂಥದಲ್ಲಿ Macdonell ಎಂಬ ಪಂಡಿತನು ಸೂಕ್ಷ್ಮವಾಗಿ ತಿಳಿಸಿದ್ದಾನೆ. ಅದರ ಸಾರಾಂಶವೂ ಸಹ ಮೇಲಿನ ವಿವರಣೆಗಳಂತೆಯೇ ಇರುತ್ತದೆ.)

ಶುನಾಸೀರ ಶಬ್ದಕ್ಕೆ ಯಾವ ಅರ್ಥವಿದ್ದರೂ ಶುನಾಸೀರೀಯ ಹವಿರ್ಧಾನವು ಅತ್ಯಂತ ಪ್ರಸಿದ್ಧವಾದುದು ಮತ್ತು ಅದರ ಪ್ರಶಂಸೆಯನ್ನು ಅನೇಕ ಕಡೆಗಳಲ್ಲಿ ಹೇಳಿದೆ. ಶತಪಥಬ್ರಾಹ್ಮಣದಲ್ಲಿ ಇದೇ ಶುನಾಸೀರಿಯ ಹವಿರ್ಧಾನದ ಮಹತ್ವವನ್ನು ತಿಳಿಸಿ ಶುನ ಮತ್ತು ಸೀರ ಎಂಬ ಪದಗಳಿಗೆ ಅಲ್ಲಿಯ ವೈಶಿಷ್ಟ್ಯವನ್ನು ತಿಳಿಸುವ ಬೇರೆ ಅರ್ಥವನ್ನೂ ಹೇಳಿದೆ.

ಅಥ ಯಸ್ಮಾಚ್ಛುನಾಸೀರ್ಯೇಣ ಯಜೇತ । ಯೊ ವೈ ದೇವಾನಾಗ್ಂ ಶ್ರೀರಾಸೀತ್ಸಾಕಮೇಧೈರೀಜಾನಾನಾಂ ವಿಜಿಗ್ಯಾನಾನಾಂ ತಚ್ಛುನಮಥ ಯಃ ಸಂವತ್ಸರಸ್ಯ ಪ್ರಜಿತಸ್ಯ ರಸ ಆಸೀತ್ತತ್ಸೀರಗ್ಂ ಸಾ ಯೊ ಚೈವ ದೇವಾನಾಗ್ಂ ಶ್ರೀರಾಸೀತ್ಸಾಕಮೇಧೈರೀಜಾನಾನಾಂ ವಿಜಿಗ್ಯಾನಾನಾಂ ಯ ಉ ಚ ಸಂವತ್ಸರಸ್ಯ ಪ್ರಜಿತಸ್ಯ ರಸ ಆಸೀತ್ತಮೇವೈತದುಭಯಂ ಪರಿಗೃಹ್ಯಾತ್ಮನ್ಕುರುತೇ ತಸ್ಮಾಚ್ಛುನಾಸೀರ್ಯೇಣ ಯಜತೇ ॥

(ಶ. ಬ್ರಾ. ೨-೬-೩-೨)

[ಶುನಾಸೀರೀಯವು ಚಾತುರ್ಮಾಸ್ಯಾಂಗವು. ಈ ಚಾತುರ್ಮಾಸ್ಯಯಜ್ಞವನ್ನಾಚರಿಸತಕ್ಕವನು ಪರಿಪೂರ್ಣತೆಯನ್ನು ಪಡೆಯುತ್ತಾನೆ ಇತ್ಯಾದಿಯಾಗಿ ಪ್ರಶಂಸಿಸಿ ನಂತರ ತದಂಗವಾದ ಶುನಾಸೀರೀಯ ವಿವರಣೆ ಮತ್ತು ಪ್ರಶಂಸೆಯಿರುತ್ತದೆ.]

ಈ ಶುನಾಸೀರೀಯ ಹವಿರ್ಧಾನದ ನಿಮಿತ್ತವೇನು? ಇದರ ಆವಶ್ಯಕತೆಯೇನು? ಎಂದು ಪ್ರಶ್ನಿಸಿದರೆ ಅದಕ್ಕೆ ಸಮಾಧಾನವೇ ಈ ಶುನಾಸೀರೀಯದ ವಿವರಣೆ. ಸಾಕಮೇಧ ಯಾಗದ ನಿರ್ವಹಣದಿಂದ ದೇವತೆಗಳು ಯಾವ ಅಭ್ಯುದಯವನ್ನು ಪಡೆದರೋ ಮತ್ತು ಯಾವ ಜಯಶ್ರೀಯನ್ನು ಹೊಂದಿದರೋ ಆ ಅಭ್ಯುದಯ ಮತ್ತು ಜಯರೂಪವಾದುದೇ ಈ ಶುನವು. ಚಾತುರ್ಮಾಸ್ಯಾತ್ಮಕವಾದ ಯಾಗದಿಂದ ಯಾವ ಸಾಂವತ್ಸರಿಕವಾದ ಪರಿಪೂರ್ಣತೆಯುಂಟೋ, ಯಾವ ಪರಿಪೂರ್ಣತೆಯ ವಿಷಯವನ್ನು ಮೇಲೆ ತಿಳಿಸಿದೆಯೋ ಆ ಪರಿಪೂರ್ಣತೆಯ ರಸವೇ ಸೀರವು. ಯಾವ ಯಜಮಾನನು ಈ ಶುನಾಸೀರೀಯಾತ್ಮಕವಾದ ಕರ್ಮವನ್ನಾಚರಿಸುವನೋ ಅವನಿಗೆ ದೇವತೆಗಳಿಂದ ಲಬ್ಧವಾದ ಅಭ್ಯುದಯವೂ, ಅವರಿಂದಲೇ ಹೊಂದಲ್ಪಟ್ಟ ಸಾಂವತ್ಸರಿಕವಾದ ಪರಿಪೂರ್ಣತೆಯೂ ಲಭಿಸುತ್ತದೆ. ಅದೇ ಶುನಾಸೀರೀಯದ ಆವಶ್ಯಕತೆಯು.

ಈ ಕರ್ಮದ ಕ್ರಮವೇನೆಂದರೆ:—

> ತಸ್ಯಾವೃತ್ । ನೋಪಕಿರಂತ್ಯುತ್ತರವೇದಿಂ ನ ಗೃಹ್ಣಂತಿ ಪೃಷದಾಜ್ಯಂ ನ ಮಂಥಂತ್ಯಗ್ನಿಂ ಪಂಚ ಪ್ರಯಾಜಾ ಭವಂತಿ ತ್ರಯೋಽನುಯಾಜಾ ಏಕಗ್ಂ ಸಮಿಷ್ಟಯಜುಃ ॥
>
> (ಶ. ಬ್ರಾ. ೨-೬-೩-೩)

ಇದರ ನಿರ್ಮಾಣಕ್ರಮವು ಕೊಂಚ ವ್ಯತ್ಯಸ್ತವಾಗುತ್ತದೆ. ಇದರಲ್ಲಿ ಉತ್ತರವೇದಿಯ ನಿರ್ಮಾಣವಿಲ್ಲ. ಪೃಷದಾಜ್ಯದ ಆವಶ್ಯಕತೆಯಿಲ್ಲ ಅಗ್ನಿಮಥನವಿಲ್ಲ. ಐದು ಪ್ರಯಾಜಗಳೂ, ಮೂರುಅನೂಯಾಜಗಳೂ ಒಂದು ಸಮಿಷ್ಟಯಜುವೂ ವಿಹಿತವಾಗಿದೆ.

> ಅಥೈತಾನ್ಯೇವ ಪಂಚ ಹವೀಗ್ಂಷಿ ಭವಂತಿ । ಏತೈರ್ವೈ ಹವಿರ್ಭಿಃ ಪ್ರಜಾಪತಿಃ ಪ್ರಜಾ ಅಸೃಜತೈತ್ತೈರುಭಯತೋ ವರುಣಪಾಶಾತ್ಪ್ರಜಾಃ ಪ್ರಾಮುಂಚದೇತೈರ್ವೈ ದೇವಾ ವೃತ್ರಮಘ್ನನ್ನೇತೈರ್ವೇವ ವ್ಯಜಯಂತ ಯೇಯಮೇಷಾಂ ವಿಜಿತಿಸ್ತಾಂ ತಥೋ ಏವೈಷ ಏತೈರ್ಯಾಚೈವ ದೇವಾನಾಗ್ಂ ಶ್ರೀರಾಸೀತ್ಸಾಕಮೇಧೈರೀಜಾನಾನಾಂ ವಿಜಿಗ್ಯಾನಾನಾಂ ಯ ಉ ಚ ಸಂವತ್ಸರಸ್ಯ ಪ್ರಜಿತಸ್ಯ ರಸ ಆಸೀತ್ತಮೇವೈತದುಭಯಂ ಪರಿಗೃಹ್ಯಾತ್ಮನ್ ಕುರುತೇ ತಸ್ಮಾದ್ವಾ ಏತಾನಿ ಪಂಚ ಹವೀಗ್ಂಷಿ ಭವತಿ ॥
>
> (೨-೬-೩-೪)

ಶುನಾಸೀರೀಯ ಸಂಬಂಧವಾಗಿ ಮೇಲೆ ತಿಳಿಸಿದಂತೆ ಪಂಚ ಹವಿಸ್ಸುಗಳು ಇರುತ್ತವೆ. ಈ ಹವಿಸ್ಸುಗಳ ಪ್ರಭಾವದಿಂದಲೇ ಪ್ರಜಾಪತಿಯು ಪ್ರಜೆಗಳನ್ನೆಲ್ಲಾ ಸೃಷ್ಟಿಸಿದನು. ಇವುಗಳ ಸಹಾಯದಿಂದಲೇ ವರುಣಪಾಶದಿಂದ ಎರಡು ಕಡೆಗಳಲ್ಲೂ ಬಂಧಿತವಾಗಿದ್ದ ಪ್ರಜೆಗಳನ್ನೆಲ್ಲಾ ಬಿಡಿಸಿದನು. ಇವುಗಳ ಸಹಾಯದಿಂದಲೇ ದೇವತೆಗಳೂ ಸಹ ವೃತ್ರಾಸುರನ ಮೇಲೆ ಹೋರಾಡಿ ಜಯವನ್ನು ಗಳಿಸಿ ಸಂಪತ್ತನ್ನೂ ಹೊಂದಿದರು. ಆದುದರಿಂದ ಅದೇ ಜಯವೂ,

ಸಾಕಮೇಧದಿಂದ ದೇವತೆಗಳಿಗೆ ಲಭಿಸಿದ ಅದೇ ಸಂಪತ್ತೂ ಲಭಿಸಬೇಕೆಂದು ಯಾವ ಯಜಮಾನನು ಆಶಿಸುವನೋ ಅವನು ಇವುಗಳ ಸಹಾಯದಿಂದ ಅವೆಲ್ಲವನ್ನೂ ಹೊಂದುವನು. ಆ ನಿಮಿತ್ತವಾಗಿಯೇ, ಪಂಚ ಹವಿಸ್ಸುಗಳೂ ಯಥಾವಿಧಿಯಾಗಿ ಅರ್ಪಿತವಾಗಬೇಕು.

ಅಥ ಶುನಾಸೀರ್ಯೋ ದ್ವಾದಶಕಪಾಲಃ ಪುರೋಡಾಶೋ ಭವತಿ । ಸ ಬಂಧುಃ ಶುನಾಸೀರ್ಯಸ್ಯ ಯಂ ಪೂರ್ವಮವೋಚಾಮ ॥ (ಶ. ಬ್ರಾ. ೨-೬-೩-೫)

ಅನಂತರ ದ್ವಾದಶಕಪಾಲಾತ್ಮಕವಾದ ಶುನಾಸೀರೀಯ ಪುರೋಡಾಶದ ಅರ್ಪಣೆಯು. ಈ ಪುರೋಡಾಶದ ಅರ್ಪಣೆಯ ಫಲವು ಮೇಲೆ ವಿವೃತವಾದಂತಿರುತ್ತದೆ.

ಅಥ ವಾಯವ್ಯಂ ಪಯೋ ಭವತಿ । ಪಯೋ ಹ ವೈ ಪ್ರಜಾ ಜಾತಾ ಅಭಿಸಂಜಾನತೇ ವಿಜಿಗ್ಯಾನಂ ಮಾ ಪ್ರಜಾಃ ಶ್ರಿಯೈ ಯಶಸೇಽನ್ನಾದ್ಯಾಯಾಭಿಸಂಜಾನಾಂತಾ ಇತಿ ತಸ್ಮಾತ್ಪಯೋ ಭವತಿ ॥ (ಶ. ಬ್ರಾ. ೨-೬-೩-೬)

ಅನಂತರ ವಾಯುವನ್ನುದ್ದೇಶಿಸಿ ಪಯಸ್ಸನ್ನರ್ಪಿಸತಕ್ಕದ್ದು. ಪ್ರಜೆಗಳು ಉತ್ಪನ್ನವಾದೊಡನೆಯೇ, ಅವರಿಗೆ ಪಯಸ್ಸೇ ಆಹಾರವು. "ನಾನು ಈ ಹವಿರಾದಿಗಳನ್ನು ಅರ್ಪಿಸುವುದರಿಂದ ಜಯವನ್ನೂ ಅಭ್ಯುದಯವನ್ನೂ ಪಡೆದಿರುವುದರಿಂದ ಸಕಲ ಪ್ರಜೆಗಳೂ ನನ್ನಲ್ಲಿ ಅನುರಾಗವುಳ್ಳವರಾಗಿ ನನ್ನನ್ನೇ ಅನುಸರಿಸಲಿ" ಎಂದು ಇದನ್ನು ಅರ್ಪಿಸುವ ಯಜಮಾನನು ಶ್ರದ್ಧೆಯಿಂದ ಪಯಸ್ಸನ್ನು ಅರ್ಪಿಸುತ್ತಾನೆ.

ಅಥ ಸೌರ್ಯ ಏಕಕಪಾಲಃ ಪುರೋಡಾಶೋ ಭವತಿ । ಏಷ ವೈ ಸೂರ್ಯೋ ಯ ಏಷ ತಪತ್ಯೇಷ ವಾ ಇದಗ್ಂ ಸರ್ವಮಭಿಗೋಪಾಯತಿ ಸಾಧುನಾ ತ್ವದಸಾಧುನಾ ತ್ವದೇಷ ಇದಗ್ಂ ಸರ್ವಂ ವಿದಧಾತಿ ಸಾಧೌ ತ್ವದಸಾಧೌ ತ್ವದೇಷ ಮಾ ವಿಜಿಗ್ಯಾನಂ ಪ್ರೀತಃ ಸಾಧುನಾ ತ್ವದಭಿಗೋಪಾಯತ್ಸಾಧೌ ತ್ವದ್ವಿದಧದಿತಿ ತಸ್ಮಾತ್ಸೌರ್ಯ ಏಕಕಪಾಲಃ ಪುರೋಡಾಶೋ ಭವತಿ ॥ (ಶ. ಬ್ರಾ ೨-೬-೩-೮)

ಅನಂತರ ಸೂರ್ಯೋದ್ದಿಷ್ಟವಾದುದೂ, ಏಕಕಪಾಲಾತ್ಮಕವಾದುದೂ ಆದ ಪುರೋಡಾಶದ ಅರ್ಪಣೆಯು. ಅಂತರಿಕ್ಷದಲ್ಲಿ ಪ್ರಕಾಶಿಸುವ ಸೂರ್ಯನೇ ಲೋಕದ ಪ್ರಭುವು. ಒಂದುಸಲ ಸದ್ರಾಜನ ಮೂಲಕವೂ, ಇನ್ನೊಂದು ಅಸಾಧುರಾಜನ ಮೂಲಕವೂ ಈ ಲೋಕವನ್ನು ಆ ಸೂರ್ಯನೇ ರಕ್ಷಿಸುತ್ತಾನೆ. ಸಕಲ ಭೂತಗಳಿಗೂ ಅವುಗಳ ಯೋಗ್ಯತೆಗೆ ತಕ್ಕಂತೆ ಸ್ಥಾನಗಳನ್ನು ಕಲ್ಪಿಸುತ್ತಾನೆ. ಈ ಹವಿಸ್ಸನ್ನು ಅರ್ಪಿಸತಕ್ಕವನು "ನನಗೆ ಈ ಸೂರ್ಯನ ಅನುಗ್ರಹದಿಂದ ಸಕಲ ಜಯವೂ ಸಂಪತ್ತೂ ಉಂಟಾಗಲಿ" ಎಂದು ಪ್ರಾರ್ಥಿಸುತ್ತಾನೆ. ಆದುದರಿಂದಲೇ ಈ ಪುರೋಡಾಶದ ಅರ್ಪಣವು ವಿಹಿತವಾಗಿದೆ.

ಸ ಯತ್ರೈವ ಸಾಕಮೇಧೈರ್ಯಜತೇ । ತಚ್ಛುನಾಸೀರ್ಯೇಣ ಯಜೇತ । ಯದ್ವೈ ತ್ರಿಃ ಸಂವತ್ಸರಸ್ಯ ಯಜತೇ ತೇನೈವ ಸಂವತ್ಸರಮಾಪ್ನೋತಿ ತಸ್ಮಾದ್ಯದೈವ ಕದಾ ಚೈತೇನ ಯಜೇತ ॥ (ಶ. ಬ್ರಾ. ೨-೬-೩-೧೦)

ಸಾಕಮೇಧರೂಪವಾದ ಹವಿಸ್ಸನ್ನರ್ಪಿಸುವ ಕಾಲದಲ್ಲೇ ಶುನಾಸೀರೀಯವಾದ ಹವಿಸ್ಸನ್ನೂ ಅರ್ಪಿಸಬಹುದು. ಋತ್ವಾತ್ಮಕವಾದ ಯಾಗವನ್ನು ಸಂವತ್ಸರದಲ್ಲಿ ಮೂರು ಸಲ ಅರ್ಪಿಸುವುದರಿಂದ ಸಂವತ್ಸರದಂತೆ ಪರಿಪೂರ್ಣತೆಯನ್ನು ಹೊಂದುವುದರಿಂದ ಶುನಾಸೀರೀಯವನ್ನು ಯಾವಕಾಲದಲ್ಲಾದರೂ ಅರ್ಪಿಸಬಹುದು.

ಇತ್ಯಾದಿಯಾಗಿ ಇದರ ಪ್ರಭಾವವನ್ನು ವರ್ಣಿಸಿ, ನಂತರ ಈ ಕರ್ಮದ ವಿವರಣೆಯನ್ನು ಮುಂದೆ ತಿಳಿಸಿದೆ.



॥ ಸಂಹಿತಾಪಾಠಃ ॥

ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ದಿವಿ ಚಕ್ರಥುಃ ಪಯಃ ।

ತೇನೇಮಾಮುಪ ಸಿಂಚತಂ ॥ ೫ ॥

॥ ಪದಪಾಠಃ ॥

ಶುನಾಸೀರೌ । ಇಮಾಂ । ವಾಚಂ । ಜುಷೇಥಾಂ । ಯತ್ । ದಿವಿ । ಚಕ್ರಥುಃ । ಪಯಃ ।

ತೇನ । ಇಮಾಂ । ಉಪ । ಸಿಂಚತಂ । ೫ ॥

॥ ಸಾಯಣಭಾಷ್ಯಂ ॥

ಶುನಾಸೀರೀಯೇ ಪರ್ವಣಿ ಶುನಾಸೀರದೇವತಾಕಸ್ಯ ಹವಿಷೋಽನುವಾಕ್ಯೈಷಾಂತ್ಯಾ ಋಕ್ ಯಾಜ್ಯಾ । ಸೂತ್ರಿತಂ ಚ । ಶುನಾಸೀರಾವಿಮಾಂ ವಾಚಂ ಜುಷೇಥಾಂ ಶುನಂ ನಃ ಫಾಲಾಃ । ಆ ೨-೨೦ । ಇತಿ ॥

ದ್ಯುದೇವಃ ಶುನದೇವತೇತಿ ಶೌನಕಃ । ಅತಃ ಶುನ ಇಂದ್ರಃ ಸೀರೋ ವಾಯುಃ । ಶುನೋ ವಾಯುಃ ಶು ಏತ್ಯಂತರಿಕ್ಷೇ ಸೀರ ಆದಿತ್ಯಃ ಸರಣಾತ್ । ನಿ. ೯-೪೦ । ಇತಿ ಯಾಸ್ಕಃ । ಹೇ ಶುನಾಸೀರೌ ತೌ ಯುವಾಮಿಮಾಂ ವಕ್ಷ್ಯಮಾಣಾಂ ಮದೀಯಾಂ ವಾಚಂ ಜುಷೇಥಾಂ । ಯತ್ಪಯೋ ದಿವಿ ಚಕ್ರಥುಃ ತೇನೇಮಾಂ ಭೂಮಿಮುಪ ಸಿಂಚತಂ ॥

॥ ಪ್ರತಿಪದಾರ್ಥ ॥

ಶುನಾಸೀರೌ—ಎಲೈ ಶುನಾಸೀರದೇವತೆಗಳೇ । ಇಮಾಂ—ಈಗ ನಾನು ಪಠಿಸುತ್ತಿರುವ । ವಾಚಂ—ಸ್ತುತಿರೂಪವಾದ ವಾಕ್ಯನ್ನು । ಜುಷೇಥಾಂ—ಸೇವಿಸಿರಿ । ದಿವಿ—ದ್ಯುಲೋಕದಲ್ಲಿ । ಯತ್ ಪಯಃ—ಯಾವ ಉದಕವನ್ನು । ಚಕ್ರಥುಃ—ನಿರ್ಮಿಸಿದಿರೋ । ತೇನ—ಆದರಿಂದಲೇ । ಇಮಾಂ—ಈ ಪೃಥ್ವಿಯನ್ನು । ಉಪ ಸಿಂಚತಂ—ತೋಯುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಶುನಾಸೀರದೇವತೆಗಳೇ, ಈಗ ನಾನು ಪಠಿಸುತ್ತಿರುವ ಸ್ತುತಿರೂಪವಾದ ವಾಕ್ಯನ್ನು ಸೇವಿಸಿರಿ. ದ್ಯುಲೋಕದಲ್ಲಿ ಯಾವ ಉದಕವನ್ನು ನಿರ್ಮಿಸಿದಿರೋ ಆದರಿಂದಲೇ ಈ ಪೃಥ್ವಿಯನ್ನೂ ತೋಯುವಂತೆ ಮಾಡಿರಿ.

## English Translation.

Suna and Sira be pleased by this our praise, and consequently sprinkle this (earth) with the water which you have created in heaven.



॥ ಸಂಹಿತಾಪಾಠಃ ॥

ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ ।

ಯಥಾ ನಃ ಸುಭಗಾಸಸಿ ಯಥಾ ನಃ ಸುಫಲಾಸಸಿ ॥ ೬ ॥

॥ ಪದಪಾಠಃ ॥

ಅರ್ವಾಚೀ । ಸುಽಭಗೇ । ಭವ । ಸೀತೇ । ವಂದಾಮಹೇ । ತ್ವಾ ।

ಯಥಾ । ನಃ । ಸುಽಭಗಾ । ಅಸಸಿ । ಯಥಾ । ನಃ । ಸುಽಫಲಾ । ಅಸಸಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸುಭಗೇ ಸೀತೇ ತ್ವಮರ್ವಾಚ್ಯರ್ವಾಗಂಚನಾ ಭವ । ತ್ವಾ ತ್ವಾಂ ವಂದಾಮಹೇ । ಸ್ತುವೀಮಹಿ । ಯಥಾ ನಃ ಸುಭಗಾಸಸಿ । ಶೋಭನಧನಾ ಭವಸಿ । ಯಥಾ ನಃ ಸುಫಲಾಸಸಿ ತಥಾ ವಂದಾಮಹೇ ॥

॥ ಪ್ರತಿಪದಾರ್ಥ ॥

ಸುಭಗೇ—ಮಂಗಳಾತ್ಮಳಾದ । ಸೀತೇ—ಎಲೈ ಸೀತೆಯೇ । ಅರ್ವಾಚೀ—ನಮಗಭಿಮುಖಳಾಗಿ । ಭವ—ಇರು । ಯಥಾ—ಯಾವ ರೀತಿಯಲ್ಲಿ । ನಃ—ನಮ್ಮ ವಿಷಯದಲ್ಲಿ । ಸುಭಗಾಸಸಿ—ಶೋಭನಾತ್ಮಕವಾದ ಧನವುಳ್ಳವಳಾಗುತ್ತೀಯೆ । ಯಥಾ—ಯಾವ ರೀತಿಯಲ್ಲಿ । ನಃ—ನಮಗೆ । ಸುಫಲಾಸಸಿ—ಉತ್ತಮವಾದ ಫಲಗಳುಳ್ಳವಳಾಗುವೆಯೋ (ಆ ರೀತಿಯಲ್ಲಿ) । ತ್ವಾ—ನಿನ್ನನ್ನು । ವಂದಾಮಹೇ—ಪೂಜಿಸುತ್ತೇವೆ.

॥ ಭಾವಾರ್ಥ ॥

ಮಂಗಳಾತ್ಮಳಾದ ಎಲೈ ಸೀತೆಯೇ, ನೀನು ನಮಗಭಿಮುಖಳಾಗಿರು. ಯಾವ ರೀತಿ ನಮಗೆ ಶೋಭನಾತ್ಮಕವಾದ ಧನದಾತಳಾಗುತ್ತೀಯೋ, ಯಾವ ರೀತಿ ನಮಗೆ ಉತ್ತಮವಾದ ಫಲದಾತಳಾಗುವೆಯೋ ಅದೇ ರೀತಿಯಲ್ಲಿ ನಾವು ನಿನ್ನನ್ನು ಪೂಜಿಸುತ್ತೇವೆ.

## English Translation.

Auspicious Sita, be present, we glorify you: that you may be propitious to us, that you may yield us abundant fruit.

॥ ವಿಶೇಷವಿಷಯಗಳು ॥

ಸೀತಾ—ಈ ಸೂಕ್ತದ ೬, ೭, ೮ ನೇ ಋಕ್ಕುಗಳಿಗೆ ಸೀತಾ ಎಂಬುದು ದೇವತೆಯು. ಶುನಾಸೀರ ಎಂಬ ಪದಗಳಿಗೆ:ಯಥೋಚಿತವಾಗಿ ನೇಗಿಲು ಮತ್ತು ಗುಳ ಎಂದರ್ಥಮಾಡಿದರೆ, ಸೀತಾ ಶಬ್ದಕ್ಕೆ ನೇಗಿಲಿನಿಂದ ಉತ್ತ ಮಾರ್ಗ ಎಂದರ್ಥಮಾಡಬಹುದು. (ಸೀತಾ ಲಾಂಗಲಪದ್ಧತಿಃ)

ಸೀತಾ ಪದವು ನಿಘಂಟುವಿನಲ್ಲಾಗಲಿ, ನಿರುಕ್ತದಲ್ಲಾಗಲಿ ವಿವೃತವಾಗಿಲ್ಲ. ಬೃಹದ್ದೇವತಾಕಾರರು ಸೀತೆಯು ಪ್ರತ್ಯೇಕವಾದ ದೇವತಾವಿಶೇಷವೆಂದು ನಿರ್ದೇಶಿಸಿ ಇಂದ್ರಲೋಕಾಂತರ್ಗತವಾದ ಸ್ತ್ರೀದೇವತೆಗಳಲ್ಲೊಬ್ಬಳೆಂದು ತಿಳಿಸಿದ್ದಾರೆ.

ಪೃಥಿವ್ಯನುಮತಿರ್ಧೇನುಃ ಸೀತಾ ಲಾಕ್ಷಾ ತಥೈವ ಗೌಃ ।
ಗೌರೀ ಚ ರೋದಸೀ ಚೈವ ಇಂದ್ರಾಣ್ಯಾಶ್ಚೈಷ ವೈ ಪತಿಃ ॥

(ಬೃ. ದೇ. ೧-೧೨೫)

ಪೃಥ್ವೀ, ಅನುಮತೀ, ಧೇನು, ಸೀತಾ, ಲಾಕ್ಷಾ, ಗೌಃ, ಗೌರೀ, ರೋದಸೀ ಇವರೆಲ್ಲರೂ ಇಂದ್ರಲೋಕಾಂತರ್ಗತವಾದ ದೇವತೆಗಳು. ಸಾಯಣರು ೪-೫೭-೬ನೇ ಮಂತ್ರದಲ್ಲಿ ಸೀತೇ ಎಂಬ ಪದಕ್ಕೆ ಎಲೈ ದೇವಿಯೇ, ಎಂದರ್ಥಮಾಡಿ ಅನಂತರ ೭ನೇ ಮಂತ್ರದ ಸೀತಾಂ ಎಂಬ ಪದಕ್ಕೆ ಸೀತಾಧಾರಕಾಷ್ಠಂ ಎಂದರ್ಥಮಾಡಿದ್ದಾರೆ. ಪ್ರಕೃತದಲ್ಲಿ ದೇವತಾವಿಶೇಷವೆಂದು ಹೇಳಬಹುದು. ಅಂದರೆ, ಕೃಷಿಗೆ ಸಂಬಂಧಪಟ್ಟ ದೇವತೆಯೆಂದೇ ಅರ್ಥ. ತೈತ್ತಿರೀಯ ಸಂಹಿತೆಯಲ್ಲಿ ಈ ಅರ್ಥದಲ್ಲಿಯೇ ಈ ದೇವತೆಯು ಉದ್ದಿಷ್ಟವಾಗಿ ಸ್ತುತಳಾಗಿದ್ದಾಳೆ.

ಕೃಷಿಗೂ ತತ್ಫಲವಾದ ಸಂಪತ್ಸುಖಗಳಿಗೂ ಅಧಿದೇವತೆಗಳಾದ ಕ್ಷೇತ್ರಪತ್ಯಾದಿ ದೇವತೆಗಳ ಪ್ರಶಂಸೆಗಳೂ, ಅವರಿಂದ ಯಾಚಿಸಿದ ಪ್ರಾರ್ಥನೆಗಳೂ ಈ ಸೂಕ್ತದಲ್ಲಿ ವರ್ಣಿತವಾಗಿವೆ.

ಕ್ಷೇತ್ರಗಳಿಗೆಲ್ಲಾ ಒಡೆಯನಾದ ಕ್ಷೇತ್ರಪತಿಯಲ್ಲಿ ಪಶು, ಅಶ್ವ ಮುಂತಾದ ಸಂಪತ್ತುಗಳನ್ನು ಬೇಡಿದೆ. ಪೃಥಿವೀ, ಅಂತರಿಕ್ಷ ಮತ್ತು ಓಷಧಿಗಳು ಇವುಗಳನ್ನೆಲ್ಲಾ ವ್ಯಾಪಿಸುವ ಮಧುವನ್ನು ಪ್ರಾರ್ಥಿಸಿದೆ. ಇದಲ್ಲದೇ ಬೇರೆ ಕಡೆಯಲ್ಲಿ (೭-೩೫-೧೦) ಸವಿತೃ, ಉಷಸ್ಸು ಮತ್ತು ಪರ್ಜನ್ಯ ಮುಂತಾದ ದೇವತೆಗಳೊಡನೆ ಸ್ತುತನಾಗಿದ್ದಾನೆ. ಯಜಮಾನರು ಈ ದೇವತೆಯನ್ನು ಯಾವಾಗಲೂ ಸಮೀಪದಲ್ಲಿ ಹೊಂದಿರಲು ಆಶಿಸುತ್ತಾರೆ ಎಂಬ ಇಚ್ಛೆಯು ಪ್ರಕಟಿತ ವಾಗಿದೆ ಈ ದೇವತೆಯ ಪೂರ್ಣಸ್ವರೂಪವು ಗೃಹ್ಯಸೂತ್ರಾದಿಗಳಲ್ಲಿ ಪೂರ್ಣವಾಗಿ ವಿವೃತವಾಗಿದೆ. (ಆ. ಗೃ. ಸೂ. ೨-೧೦-೪; ಬೋ. ಗೃ. ಸೂ. ೨-೧೦) ಭೂಮಿಯು ಕೃಷಿಗೆ ಸಿದ್ಧವಾಗಿ ಬೀಜಾದಿಗಳನ್ನು ನೆಡುವ ಕಾಲದಲ್ಲಿ ಈ ದೇವತೆಗೆ ಅರ್ಪಿತವಾಗತಕ್ಕ ಹವಿರಾದಿಗಳನ್ನು ನಿಸ್ಪೃಷ್ಟವಾಗಿ ತಿಳಿಸಿದೆ.

ಇದರಂತೆಯೇ ಸೀತೆಯನ್ನು ಪ್ರಶಂಸಿಸಿ ಇದೇ ವಿಧವಾದ ಫಲವನ್ನು ಪ್ರಾರ್ಥಿಸಿದೆ. ಈ ದೇವತೆಯ ಸ್ವರೂಪ ವನ್ನು ಪಾರಸ್ಕರಗೃಹ್ಯಸೂತ್ರದಲ್ಲಿ ವಿಶದವಾಗಿ ವರ್ಣಿಸಿದೆ. ಋ. ಸಂ. ೮-೨೧-೩ ನೇ ಮಂತ್ರದಲ್ಲಿ ಇಂದ್ರನನ್ನು ಉರ್ವರಾಪತೇ ಎಂದು ಸಂಬೋಧಿಸಿರುವ ಆಧಾರದ ಮೇಲೆ ಗೃಹ್ಯಸೂತ್ರಗಳಲ್ಲೂ ಸಹ ಸೀತೆಯನ್ನು ಇಂದ್ರಪತ್ನಿ ಯೆಂದು ನಿರ್ದೇಶಿಸಿದೆ. ಗೋಭಿಲಗೃಹ್ಯಸೂತ್ರದಲ್ಲಿ ಈ ದೇವಿಯ ನಾಲ್ಕು ವಿಭೂತಿವಿಶೇಷಗಳು ವರ್ಣಿತವಾಗಿವೆ. (೪-೪-೨೭). ಸೀತಾ, ಆಶಾ, ಅರಡಾ, ಅನಘಾ ಎಂಬಿವೇ ಈ ನಾಲ್ಕು ರೂಪಗಳು. ಈ ದೇವತೆಗಳ ಪೂಜಾ

ಕಾಲಗಳೂ ನಾಲ್ಕು ಯಜ್ಞಕಾಲಗಳಿಗೆ ಸಂಬಂಧಪಟ್ಟವು. ಭೂಮಿಯನ್ನು ಉಳುವಾಗ, ಬೀಜವನ್ನು ಬಿತ್ತುವಾಗ, ಫಲವನ್ನು ಕೊಯ್ಯುವಾಗ ಮತ್ತು ಕಣಜಕ್ಕೆ ತುಂಬುವಾಗ ಯಾವ ಕರ್ಮಗಳುಂಟೋ ಆಯಾ ಕರ್ಮಕಾಲಕ್ಕೆ ಇವರೇ ಆರಾಧ್ಯದೇವತೆಗಳು. ಇನ್ನೊಂದು ಸೂತ್ರದಲ್ಲಿ (ಪಾರಸ್ಕರಗೃಹ್ಯಸೂತ್ರ. ೨-೧೭-೧೩) ಇವರಲ್ಲದೇ, ಯಜಾ ಶಮಾ, ಭೂತಿ ಎಂಬ ದೇವತೆಗಳ ಹೆಸರುಗಳೂ ಸಂಕೀರ್ತಿತವಾಗಿವೆ. ಇವರುಗಳೆಲ್ಲಾ ಅನೇಕ ವಿಶೇಷಣಗಳಿಂದ ವರ್ಣಿತರಾಗಿದ್ದಾರೆ. ಈ ನಾಮುಗಳಲ್ಲೆಲ್ಲಾ ಸೀತೆಯೇ ಅತ್ಯಂತ ತೇಜಸ್ವಿನಿಯೂ ಸ್ಫೂರ್ತಿದಾಯಕಳೂ ಆದ ದೇವತೆಯಾಗಿದ್ದಾಳೆ. ಈ ಸೀತೆಯೇ ತೈತ್ತಿರೀಯ ಬ್ರಾಹ್ಮಣದಲ್ಲಿ ಸಾವಿತ್ರಿಯೆಂದೂ ನಿರ್ದಿಷ್ಟಳಾಗಿದ್ದಾಳೆ ಪ್ರಾಯಃ ಈ ದೇವತಾವಿಶೇಷದ ಮಹಿಮೆಯೇ ರಾಮಾಯಣದಲ್ಲೂ ಪ್ರಸಿದ್ಧವೂ ಪವಿತ್ರವೂ ಆದ ಸೀತಾದೇವಿಯ ರೂಪದಿಂದ ಪ್ರಶಂಸಿತವಾಗಿರಬಹುದು.

ತೈತ್ತಿರೀಯ ಬ್ರಾಹ್ಮಣದಲ್ಲಿ ಸೀತಾವಿಷಯದಲ್ಲಿ ಉಕ್ತವಾಗಿರುವ ಕಥಾಸನ್ನಿವೇಶ—

ಪ್ರಜಾಪತಿಸ್ಸೋಮುಗ್ಂ ರಾಜಾನಮಸೃಜತ । ತಂ ತ್ರಯೋ ವೇದಾ ಅನ್ವಸೃಜ್ಯಂತ । ತಾನ್ ಹಸ್ತೇಽಕುರುತ । ಅಥ ಹ ಸೀತಾ ಸಾವಿತ್ರೀ । ಸೋಮುಗ್ಂ ರಾಜಾನಂ ಚಕಮೇ । ಶ್ರದ್ಧಾಮು ಸ ಚಕಮೇ । ಸಾ ಹ ಪಿತರಂ ಪ್ರಜಾಪತಿಮುಪಸಸಾರ । ತಗ್ಂಹೋವಾಚ । ನಮಸ್ತೇ ಅಸ್ತು ಭಗವಃ । ಉಪ ತ್ವಾಯಾನಿ ॥

(ತೈ. ಬ್ರಾ. ೨-೩-೧೦-೧)

ಪ್ರಜಾಪತಿಯು ಸೋಮರಾಜನನ್ನು ಸೃಷ್ಟಿಸಿದನು. ಅನಂತರ ಮೂರು ವೇದಗಳೂ ಸೃಷ್ಟವಾದವು. ಅವನು ಅವುಗಳನ್ನು ಕೈಯಿನಲ್ಲಿ ಹಿಡಿದುಕೊಂಡನು. ಅನಂತರ ಸವಿತೃವಿನ ದುಹಿತೆಯಾದ ಸೀತೆಯು ಸೋಮನನ್ನು ಪಡೆಯಬೇಕೆಂದಿಚ್ಛಿಸಿದಳು. ಆದರೆ ಸೋಮನು ಶ್ರದ್ಧೆಯನ್ನಿಚ್ಛಿಸಿದನು. ಆಗ ಅವಳು ತಂದೆಯನ್ನು ಸಮೀಪಿಸಿ ನಮಸ್ಕರಿಸಿ ತಾನು ಇಚ್ಛಿಸಿದ ವರನನ್ನು ತಾನು ಪಡೆಯಲಾರದುದರಿಂದ ತಂದೆಯ ಸಮೀಪದಲ್ಲಿಯೇ ಇರುವೆನೆಂದು ಹೇಳಿಕೊಂಡು ದುಃಖಿಸಿದಳು.

ಪ್ರ ತ್ವಾ ಪದ್ಯೇ । ಸೋಮುಂ ವೈ ರಾಜಾನಂ ಕಾಮಯೇ । ಶ್ರದ್ಧಾಮು ಸ ಕಾಮಯತ ಇತಿ । ತಸ್ಯಾ ಉ ಹ ಸ್ಥಾಗರಮಲಂಕಾರಂ ಕಲ್ಪಯಿತ್ವಾ ।............ಪತ್ನಿಭಿಕ್ಷ ಮುಖೇಽಲಂಕೃತ್ಯ ॥

(ತೈ. ಬ್ರಾ. ೨-೩-೧೦-೨)

"ನಾನು ಸೋಮನನ್ನು ವರಿಸಬೇಕೆಂದಿಚ್ಛಿಸಿದೆನು. ಆದರೆ ಅವನು ಶ್ರದ್ಧೆಯನ್ನು ಅಪೇಕ್ಷಿಸಿದ್ದಾನೆ. ನನ್ನನ್ನು ತಿರಸ್ಕರಿಸಿದ್ದಾನೆ" ಎಂದು ಹೇಳಿಕೊಳ್ಳಲು ಪ್ರಜಾಪತಿಯು ಅವಳಿಗೆ ಸಕಲವಾದ ಅಲಂಕಾರಗಳನ್ನು ಮಾಡಿ ಪುನಃ ಸೋಮನಲ್ಲಿಗೆ ಕಳುಹಿಸಿದನು. ಆ ಕಾಲದಲ್ಲಿ,

ಆಽಸ್ಯಾರ್ಥಂ ವವ್ರಾಜ । ತಾಗ್ಂಹೋದೀಕ್ಷ್ಯೋವಾಚ । ಉಪ ಮ್ಯಾವರ್ತಸ್ವೇತಿ । ತಗ್ಂಹೋವಾಚ । ಭೋಗಂ ತು ಮ ಆ ಚಕ್ಷ್ವ । ಏತನ್ಮ ಆಚಕ್ಷ್ವ । ಯತ್ತೇ ಸಾಣಾವಿತಿ । ತಸ್ಯಾ ಉ ಹ ತ್ರೀನ್‌ವೇದಾನ್ಪ್ರದದಾ । ತಸ್ಮಾದು ಹ ಸ್ತ್ರಿಯೋ ಭೋಗಮೇವ ಹಾರಯಂತೇ ॥

(ತೈ. ಬ್ರಾ. ೨-೩-೧೦-೩)

ಪತಿಯ ವಶೀಕರಣ ಸಾಮರ್ಥ್ಯೋಪೇತವಾದ ಅಲಂಕಾರಗಳಿಂದ ಕೂಡಿದ ಸೀತೆಯು ಬರುತ್ತಾ ಅರ್ಧದಾರಿಯಲ್ಲೇ ನಿಂತುಕೊಂಡಳು. ಈ ವಶೀಕರಣಸಾಧನದ ಪ್ರಭಾವದಿಂದ ಸೋಮನು ಹಿಂದಿನಂತೆ ತಿರಸ್ಕರಿಸದೇ, ಉತ್ಸುಕತೆಯಿಂದ ಅವಳನ್ನು ನೋಡಿ ಅರ್ಧದಾರಿಯಲ್ಲೇ ನಿಲ್ಲದೇ ಸಮೀಪಕ್ಕೆ ಬರಬೇಕೆಂದನು ಆಗ ಅವಳು ಸಂತುಷ್ಟಳಾಗಿ ತನ್ನ ಇಷ್ಟಾರ್ಥವನ್ನು ತಿಳಿಸಿದಳು. ಆಗ ಸೋಮನು ತೃಪ್ತನಾಗಿ ತನ್ನಲ್ಲಿದ್ದ ಮೂರು ವೇದಗಳನ್ನು ಅವಳಿಗೆ ಒಪ್ಪಿಸಿದನು. ಇಷ್ಟಾರ್ಥವನ್ನು ಗಳಿಸಲು ಸ್ತ್ರೀಯರು ಮಾಡತಕ್ಕ ಉಪಾಯವೇ ಈ ರೀತಿಯದು. ಇತ್ಯಾದಿಯಾಗಿ ಸೀತೆಯ ಸ್ವರೂಪವು ವರ್ಣಿತವಾಗಿದೆ. ಪೃಥ್ವಿಗೆ ಸಾಕ್ಷಾತ್ಸಂಬಂಧವನ್ನು ಹೊಂದಿದ ಈ ಸೀತೆಯು ವೈದಿಕವಾಕ್ಯಗಳಲ್ಲೆಲ್ಲಾ ಸ್ತುತಳಾಗಿದ್ದಾಳೆ.

॥ ಸಂಹಿತಾಪಾಠಃ ॥

ಇಂದ್ರಃ ಸೀತಾಂ ನಿ ಗೃಹ್ಣಾತು ತಾಂ ಪೂಷಾನು ಯಚ್ಛತು ।
ಸಾ ನಃ ಪಯಸ್ವತೀ ದುಹಾಮುತ್ತರಾಮುತ್ತರಾಂ ಸಮಾಂ ॥ ೭ ॥

॥ ಪದಪಾಠಃ ॥

ಇಂದ್ರಃ । ಸೀತಾಂ । ನಿ । ಗೃಹ್ಣಾತು । ತಾಂ । ಪೂಷಾ । ಅನು । ಯಚ್ಛತು ।
ಸಾ । ನಃ । ಪಯಸ್ವತೀ । ದುಹಾಂ । ಉತ್ತರಾಂಽಉತ್ತರಾಂ । ಸಮಾಂ ॥ ೭ ॥

॥ ಸಾಯಣಭಾಷ್ಯಂ ॥

ಇಂದ್ರೋ ದೇವಃ ಸೀತಾಂ ಸೀತಾಧಾರಕಾಷ್ಠಾಂ ನಿ ಗೃಹ್ಣಾತು । ತಾಂ ಸೀತಾಂ ಪೂಷಾ ದೇವೋಽನು ಯಚ್ಛತು । ನಿಯಮಯತ್ । ಸಾ ದ್ಯೌಃ ಪಯಸ್ವತ್ಯುದಕವತೀ ದುಹಾಂ । ದುಹ್ಯಾತ್ । ಕದೇತಿ ತದುಚ್ಯತೇ । ಉತ್ತರಾಮುತ್ತರಾಂ ಸಮಾಮುತ್ತರಮುತ್ತರಂ ಸಂವತ್ಸರಂ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರದೇವನು । ಸೀತಾಂ—ಸೀತೆಯನ್ನು (ಉಳುವ ಸಾಧನ) । ನಿ ಗೃಹ್ಣಾತು—ಹಿಡಿದುಕೊಳ್ಳಲಿ । ತಾಂ—ಅದೇ ಸೀತೆಯನ್ನು । ಪೂಷಾ—ಪೂಷಾದೇವನು । ಅನು ಯಚ್ಛತು—ನಿಯಮಿಸಲಿ । ಸಾ—ಆ ದೇವತೆಯು । ಪಯಸ್ವತೀ—ಉದಕಯುಕ್ತಳಾಗಿ । ಉತ್ತರಾಮುತ್ತರಾಂ ಸಮಾಂ—ಪ್ರತಿಯೊಂದು ಸಂವತ್ಸರವೂ ಸಹ । ನಃ—ನಮಗಾಗಿ । ದುಹಾಂ—ವೃಷ್ಟಿಯನ್ನು ಕರೆಯಲಿ.

॥ ಭಾವಾರ್ಥ ॥

ಇಂದ್ರದೇವನು ಸೀತೆಯನ್ನು ಹಿಡಿದುಕೊಳ್ಳಲಿ. ಅದೇ ಸೀತೆಯನ್ನು ಪೂಷದೇವನು ನಿಯಮಿಸಲಿ. ಆ ದೇವತೆಯು ಉದಕಯುಕ್ತಳಾಗಿ ಪ್ರತಿಯೊಂದು ಸಂವತ್ಸರವೂ ಸಹ ನಮಗಾಗಿ ವೃಷ್ಟಿಯನ್ನು ಕರೆಯಲಿ.

## English Translation.

May Indra take hold of Sita : may Pushan guide her ; may she, well stored with water, yield it as milk, year after year.



॥ ಸಂಹಿತಾಪಾಠಃ ॥

ಶುನಂ ನಃ ಫಾಲಾ ವಿ ಕೃಷಂತು ಭೂಮಿಂ ಶುನಂ ಕೀನಾಶಾ ಅಭಿ ಯಂತು ವಾಹೈಃ ।
ಶುನಂ ಪರ್ಜನ್ಯೋ ಮಧುನಾ ಪಯೋಭಿಃ ಶುನಾಸೀರಾ ಶುನಮಸ್ಮಾಸು ಧತ್ತಂ ॥ ೮ ॥

॥ ಪದಪಾಠಃ ॥

ಶುನಂ । ನಃ । ಫಾಲಾಃ । ವಿ । ಕೃಷಂತು । ಭೂಮಿಂ । ಶುನಂ । ಕೀನಾಶಾಃ । ಅಭಿ । ಯಂತು । ವಾಹೈಃ।
ಶುನಂ । ಪರ್ಜನ್ಯಃ । ಮಧುನಾ । ಪಯಃ೽ಭಿಃ । ಶುನಾಸೀರಾ । ಶುನಂ । ಅಸ್ಮಾಸು । ಧತ್ತಂ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಯಾ ಅಷ್ಟಮ್ಯಾ ವಿನಿಯೋಗಃ ಶುನಾಸೀರಾವಿಮಾಮಿತ್ಯತ್ರೋಕ್ತಃ ॥

ನೋ ಭೂಮಿಂ ಫಾಲಾ ಭೂಮಿವಿದಾರಕಕಾಷ್ಠಾಃ ಶುನಂ ವಿ ಕೃಷಂತು । ಶುನಂ ಯಥಾ ಭವತಿ ತಥಾ। ಕೀನಾಶಾ ಬಲೀವರ್ದರಕ್ಷಕಾ ವಾಹೈರ್ಬಲೀವರ್ದೈರಭಿ ಯಂತು । ಅಭಿಗಚ್ಛಂತು । ಶುನಂ ಯಥಾ ಭವತಿ ತಥಾ । ಪರ್ಜನ್ಯೋ ಮಧುನಾ ಮಧುರೈಃ ಪಯೋಭಿರುದಕೈಃ ಸಿಂಚತು । ಹೇ ಶುನಾಸೀರಾ ಇಂದ್ರವಾಯೂ ವಾಯ್ವಾದಿತ್ಯೌ ವಾ ಶುನಂ ಸುಖಮಸ್ಮಾಸು ಧತ್ತಂ । ಧಾರಯತಂ ॥

॥ ಪ್ರತಿಪದಾರ್ಥ ॥

ನಃ—ನಮ್ಮ । ಭೂಮಿಂ—ಕ್ಷೇತ್ರವನ್ನು । ಫಾಲಾಃ—ನೇಗಿಲೇ ಮುಂತಾದ ಉಳುವ ಸಾಧನಗಳು । ಶುನಂ—ಸುಖವಾಗಿ । ವಿ ಕೃಷಂತು—ಉಳಲಿ । ಕೀನಾಶಾಃ—ರೈತರು । ವಾಹೈಃ—ವೃಷಭಗಳೊಡನೆ । ಶುನಂ—ಸುಖವಾಗಿ । ಅಭಿ ಯಂತು—ತಮ್ಮ ಕಾರ್ಯಗಳಿಗೆ ಹೋಗಲಿ । ಪರ್ಜನ್ಯಃ—ಪರ್ಜನ್ಯನು । ಶುನಂ—ಸುಖಕಾರಕವಾಗುವಂತೆ । ಮಧುನಾ—ಮಧುರವಾದ। ಪಯೋಭಿಃ—ಉದಕಗಳಿಂದ (ವರ್ಷಿಸಲಿ) ಶುನಾಸೀರಾ—ಎಲೈ ಶುನಾಸೀರ ದೇವತೆಗಳೇ । ಅಸ್ಮಾಸು—ನಮ್ಮಲ್ಲಿ । ಶುನಂ—ಸುಖವನ್ನು । ಧತ್ತಂ—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ನೇಗಿಲೇ ಮುಂತಾದ ಉಳುವ ಸಾಧನಗಳು ಸುಖವಾಗಿ ಉಳಲಿ. ರೈತರು ವೃಷಭಗಳೊಡನೆ ಸುಖವಾಗಿ ತಮ್ಮ ಕಾರ್ಯಗಳಿಗೆ ಹೋಗಲಿ. ಪರ್ಜನ್ಯನು ಮಧುರವಾದ ಉದಕಗಳಿಂದ ಸುಖಕಾರಕವಾಗಿರುವಂತೆ ವರ್ಷಿಸಲಿ. ಎಲೈ ಶುನಾಸೀರದೇವತೆಗಳೇ, ನಮಗೆ ಸುಖವನ್ನುಂಟುಮಾಡಿರಿ.

## English Translation.

May the ploughshares break up our land happily ; may the ploughman go happily with the oxen ; may Parjanya (water the earth) with sweet showers happily : grant Shuna and Shira, prosperity to us.

॥ ವಿಶೇಷವಿಷಯಗಳು ॥

ಈ ಋಕ್ಕಿನ ವಿನಿಯೋಗವನ್ನು ಈ ಸೂಕ್ತದ ನಾಲ್ಕನೆಯ ಋಕ್ಕಿನ ವಿಶೇಷವಿಷಯಗಳಲ್ಲಿಯೇ ಹೇಳಲಾಗಿದೆ.



# ಐವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಸಮುದ್ರಾದೂರ್ಮಿರಿತ್ಯೇಕಾದಶರ್ಚಂ ತ್ರಯೋದಶಂ ಸೂಕ್ತಂ । ಅಂತ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ಅಗ್ನಿಸೂರ್ಯಾಬ್ಗೋಘೃತಾನಾಮನ್ಯತಮೋ ದೇವತಾ । ವಾಮದೇವ ಋಷಿಃ । ಅತ್ರಾನುಕ್ರಮಣಿಕಾ । ಸಮುದ್ರಾದೂರ್ಮಿರೇಕಾದಶಾಗ್ನೇಯಂ ಜಗತ್ಯಂತಂ ಸೌರ್ಯಂ ವಾಪಂ ವಾ ಗವ್ಯಂ ವಾ ಘೃತಸ್ತುತಿರ್ವೇತಿ ॥ ವಿಷುವತೀದಂ ಸೂಕ್ತಮಾಜ್ಯಂ । ತಥಾ ಚ ಸೂತ್ರಂ । ಸಮುದ್ರಾದೂರ್ಮಿರಿತ್ಯಾಜ್ಯಂ ತ್ಯಂ ಸುಮೇಷಂ । ಆ. ೮-೬ । ಇತಿ ॥ ವ್ಯೂಢೇ ದಶರಾತ್ರೇ ಸಪ್ತಮೇಽಹನೀದಮೇವ ಸೂಕ್ತಮಾಜ್ಯಂ । ಸೂತ್ರಿತಂ ಚ । ಅಥ ಛಂದೋಮಾಃ ಸಮುದ್ರಾದೂರ್ಮಿರಿತ್ಯಾಜ್ಯಂ । ಆ. ೮-೯ । ಇತಿ ॥

ಅನುವಾದವು—ಸಮುದ್ರಾದೂರ್ಮಿಃ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಅಗ್ನಿಃ ಸೂರ್ಯ; ಆಪಃ ಗೌಃ ಘೃತ ಮೊದಲಾದವರು ದೇವತೆಗಳು; ಸೂಕ್ತದ ಕೊನೆಯ ಋಕ್ಕು ಜಗತೀಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಸಮುದ್ರಾದೂರ್ಮಿರೇಕಾದಶಾಗ್ನೇಯಂ ಜಗತ್ಯಂತಂ ಸೌರ್ಯಂ ವಾಪಂ ವಾ ಗವ್ಯಂ ವಾ ಘೃತಸ್ತುತಿರ್ವಾ ಎಂದು ಹೇಳಿರುವುದು. ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳಲ್ಲಿ ವಿಷುವತಿ ಎಂಬ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಸಮುದ್ರಾದೂರ್ಮಿರಿತ್ಯಾಜ್ಯಂ ತ್ಯಂ ಸುಮೇಷಂ ಎಂಬ ಸೂತ್ರದಿಂದಲೂ (ಆ. ೮-೬) ವ್ಯೂಢವೆಂಬ ದಶರಾತ್ರಯಾಗದಲ್ಲಿ ಏಳನೆಯ ದಿವಸ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳಿಗಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಥ ಛಂದೋಮಾಃಸಮುದ್ರಾದೂರ್ಮಿರಿತ್ಯಾಜ್ಯಂ ಎಂಬ ಸೂತ್ರದಿಂದಲೂ (ಆ. ೮-೯) ವಿವೃತವಾಗಿರುವುದು.

## ಸೂಕ್ತ—೫೮

ಮಂಡಲ—೪ || ಅನುವಾಕ—೫ || ಸೂಕ್ತ—೫೮ ||
ಅಷ್ಟಕ—೩ || ಅಧ್ಯಾಯ—೮ || ವರ್ಗ—೧೦, ೧೧ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ||
|| ಋಷಿಃ—ವಾಮದೇವಃ ||
|| ದೇವತಾ—ಅಗ್ನಿಃ ಸೂರ್ಯೋ ವಾಪೋ ವಾ ಗಾವೋ ವಾ ಘೃತಂ ವಾ ||
|| ಛಂದಃ—೧-೧೦, ತ್ರಿಷ್ಟುಪ್ | ೧೧. ಜಗತೀ ||

|| ಸಂಹಿತಾಪಾಠಃ ||

ಸಮುದ್ರಾದೂರ್ಮಿರ್ಮಧುಮಾಁ ಉದಾರದುಪಾಂಶುನಾ ಸಮಮೃತತ್ವ-
ಮಾನಟ್ |
ಘೃತಸ್ಯ ನಾಮ ಗುಹ್ಯಂ ಯದಸ್ತಿ ಜಿಹ್ವಾ ದೇವಾನಾಮಮೃತಸ್ಯ ನಾಭಿಃ ||೧||

|| ಪದಪಾಠಃ ||

ಸಮುದ್ರಾತ್ | ಊರ್ಮಿಃ | ಮಧುಽಮಾನ್ | ಉತ್ | ಆರತ್ | ಉಪ | ಅಂಶುನಾ | ಸಂ | ಅಮೃತಽ-
ತ್ವಂ | ಆನಟ್ |
ಘೃತಸ್ಯ | ನಾಮ | ಗುಹ್ಯಂ | ಯತ್ | ಅಸ್ತಿ | ಜಿಹ್ವಾ | ದೇವಾನಾಂ | ಅಮೃತಸ್ಯ | ನಾಭಿಃ || ೧ ||

|| ಸಾಯಣಭಾಷ್ಯಂ ||

ಸಂಮೋದಂತೇಽಸ್ಮಿನ್ಯಜಮಾನಾ ಇತಿ ವಾ ಸಮುದ್ರೋಽಗ್ನಿಃ ಪಾರ್ಥಿವಃ ಅಥವಾ ಸಮುದ್ದ್ರವಂತ್ಯಾಪೋಽಸ್ಮಾದಿತಿ ವ್ಯುತ್ಪತ್ತ್ಯಾ ವೈದ್ಯುತೋಽಗ್ನಿಃ | ತಸ್ಮಾದೂರ್ಮಿರೂರ್ಮಿವದುಪರ್ಯುಪರ್ಯುದ್ಭೂತೋ ಮಧುಮಾನ್ಮಾಧುರ್ಯೋಪೇತಫಲಸಮೂಹ ಉದಾರತ್ | ಉದ್ಗಚ್ಛತಿ | ಅಥವಾ ವೈದ್ಯುತಾದೂರ್ಮ್ಯುತ್ಪಾದಕೋ ರಸ ಉದಾರತ್ | ಉದ್ಭೂತಃ | ಅಥವಾ ಸಮುದ್ರಾತ್ಸಮುದ್ದ್ರವಣಸಾಧನಾದಾದಿತ್ಯಾದೂರ್ಮೀ ರಸ ಉದಕಲಕ್ಷಣ ಉದಾರತ್ | ಆದಿತ್ಯಾಜ್ಜಾಯತೇ ವೃಷ್ಟಿರಿತಿ ಶ್ರುತೇಃ | ಯದ್ವಾ | ಸಮುದ್ರಾದುಕ್ತವ್ಯುತ್ಪತ್ತೇರಂತರಿಕ್ಷಾದೂರ್ಮಿರುದಕಮುದಾರತ್ | ಅಥವಾ ಸಮುದ್ರಾದುಕ್ತಲಕ್ಷಣಾದ್ಗವಾಮೂಧಸಃ ಸಕಾಶಾದೂರ್ಮಿರುಜ್ಜ್ವಲಃ ಕ್ಷೀರರಸಃ | ಏತದ್ಘೃತಪಕ್ಷೇಽಪಿ ಸಮಾನಂ | ಯದ್ಯಪಿ ಘೃತಂ ಕ್ಷೀರಾಜ್ಜಾಯತೇ ತಥಾಪಿ ತಸ್ಯೋಧಸ ಉತ್ಪತ್ತೇರೇವಮುಪಚರ್ಯತೇ | ಶಿಷ್ಟಂ ವಾಕ್ಯಮಗ್ನ್ಯಾದಿಪಂಚಸು ಪಕ್ಷೇಷ್ವಪಿ ಸಮಾನಂ | ಅಂಶುನಾ ದೀಪ್ತ್ಯಂಶೇನ ವಾಮೃತತ್ವಂ ಮೋಕ್ಷಮುಪಸಮಾನಟ್ | ಉಪೇತಿ ಪೂರಣಃ | ಪ್ರಾಪ್ನೋತಿ ನರಃ | ಘೃತಸ್ಯ ದೀಪ್ತಸ್ಯ ಕ್ಷೀರದ್ರವ್ಯರೂಪಸ್ಯ ವಾ ಗುಹ್ಯಂ ನಾಮ ಗೋಪನೀಯಂ ನಮನಸಾಧನಂ ಯದಸ್ತಿ ತದ್ಬ್ರವೀಮಿ | ತದ್ದೇವಾನಾಂ ಜಿಹ್ವಾಸ್ವಾದಕಜಿಹ್ವಾಸ್ಥಾನೀಯಂ ಭವತಿ | ತದೇವಾಮೃತಸ್ಯ ನಾಭಿರ್ಬಂಧಕಂ ಭವತಿ | ತದುಭಯಂ ಘೃತಸ್ಯ ನಾಮೇತ್ಯರ್ಥಃ | ಏವಂ ಸರ್ವಮಂತ್ರೇಷು ತತ್ತತ್ಪಕ್ಷಾನುಸಾರೇಣ ಯೋಜ್ಯಂ ||

‖ ಪ್ರತಿಪದಾರ್ಥ ‖

ಸಮುದ್ರಾತ್—ಅಂತರಿಕ್ಷಾಗ್ನಿಯಿಂದ | ಊರ್ಮಿಃ—ಅಲೆಗಳಂತೆ ಒಂದಾದಮೇಲೊಂದು | ಮಧುಮಾನ್—ಮಾಧುರ್ಯೋಪೇತವಾದ ಫಲಸಮೂಹಗಳು | ಉದಾರತ್—ಉದ್ಭವಿಸುತ್ತವೆ | ಅಂಶುನಾ—ಆದಿತ್ಯಕಿರಣದಿಂದ | ಅಮೃತತ್ವಂ—ಮರಣರಾಹಿತ್ಯವನ್ನು | ಸಮಾನಟ್—(ಮಾನವನು) ಪಡೆಯುತ್ತಾನೆ| ಘೃತಸ್ಯ—ಪ್ರಕಾಶಮಾನವಾದ ಘೃತತತ್ತ್ವಕ್ಕೆ | ಗುಹ್ಯಂ—ರಹಸ್ಯವಾದ | ಯತ್ ನಾಮ – ಯಾವ ಹೆಸರು | ಅಸ್ತಿ—ಇದೆಯೋ (ಅದು) | ದೇವಾನಾಂ—ದೇವತೆಗಳ | ಜಿಹ್ವಾ—ಜಿಹ್ವಾರೂಪವಾಗಿಯೂ | ಅಮೃತಸ್ಯ—ಅಮೃತಕ್ಕೆ | ನಾಭಿಃ—ನಾಭಿರೂಪವಾಗಿಯೂ ಇದೆ.

‖ ಭಾವಾರ್ಥ ‖

ಅಂತರಿಕ್ಷಾಗ್ನಿಯಿಂದ ಮಾಧುರ್ಯೋಪೇತವಾದ ಫಲಸಮೂಹಗಳು (ಉದಕಗಳು) ಅಲೆಗಳಂತೆ ಒಂದಾದಮೇಲೊಂದು ಉದ್ಭವಿಸುತ್ತವೆ. ಮಾನವನು ಆದಿತ್ಯಕಿರಣದಿಂದ ಮರಣರಾಹಿತ್ಯವನ್ನು ಪಡೆಯುತ್ತಾನೆ. ಪ್ರಕಾಶಮಾನವಾದ ಘೃತತತ್ತ್ವಕ್ಕೆ ಯಾವ ರಹಸ್ಯವಾದ ಹೆಸರಿದೆಯೋ ಅದೇ ದೇವತೆಗಳ ಜಿಹ್ವಾರೂಪವಾಗಿಯೂ, ಅಮೃತಕ್ಕೆ ನಾಭಿರೂಪವಾಗಿಯೂ ಇದೆ.

## English Translation.

The sweet water swells up from the firmament: by the (solar) ray (man) obtains immortality: that which is the secret name of clarified butter is the tongue of the gods, thc nevel of ambrosia.

‖ ವಿಶೇಷವಿಷಯಗಳು ‖

(1) ಸಮುದ್ರಾತ್ ಊರ್ಮಿಃ ಮಧುಮಾನ್ ಉದಾರತ್—ಸಂಮೋದಂತೇಽಸ್ಮಿನ್ಯಜಮಾನಾ ಇತಿ ವಾ ಸಮುದ್ರೋಽಗ್ನಿಃ ಪಾರ್ಥಿವಃ | ಈ ಯಜ್ಞಾಗ್ನಿಯ ವಿಷಯದಲ್ಲಿ ಯಜ್ಞಮಾಡುವ ಯಜಮಾನರು ಸಂತೋಷಪಡುತ್ತಾರಾದ್ದರಿಂದ ಸಮುದ್ರ ಎಂದರೆ ಪಾರ್ಥಿವಾಗ್ನಿಯು.

(೨) ಅಥವಾ ಸಮುದ್ದ್ರವಂತ್ಯಾಪೋಽಸ್ಮಾದಿತಿ ವ್ಯುತ್ಪತ್ತ್ಯಾ ವೈದ್ಯುತೋಽಗ್ನಿಃ| ಸಮುದ್ರವೆಂದರೆ ಅಂತರಿಕ್ಷವು (ನಿ. ೨-೧೦) ಅಂತರಿಕ್ಷದಲ್ಲಿ ಇರುವ ಈ ಅಗ್ನಿಯಿಂದ (ಮಿಂಚು) ಉದಕಗಳು ವೃಷ್ಟಿರೂಪದಲ್ಲಿ ಸುರಿಯುವುದರಿಂದ ಸಮುದ್ರವೆಂದರೆ ವೈದ್ಯುತಾಗ್ನಿ (ಮಿಂಚು) ಎಂದೂ ಹೆಸರು. ಇಂತಹ ವೈದ್ಯುತಾಗ್ನಿಯಿಂದ (ಊರ್ಮಿಃ ಅಲೆಗಳಂತೆ, ಒಂದರಮೇಲೊಂದರಂತೆ) ಮಾಧುರ್ಯೋಪೇತವಾದ ಫಲಸಮೂಹ ಅಥವಾ ಉದಕಗಳು ಉದ್ಭವಿಸುತ್ತವೆ. ಇಲ್ಲಿ ಪಾರ್ಥಿವಾಗ್ನಿಯಿಂದ ಯಜ್ಞಮಾಡುವ ಯಜಮಾನನಿಗೆ ಅಭೀಷ್ಟಫಲಗಳು ಅಲೆಗಳಂತೆ ಎಂದರೆ ಒಂದಾಗುತ್ತಲೊಂದು ಉಂಟಾಗುತ್ತವೆ ಎಂದರ್ಥವು; ವೈದ್ಯುತಾಗ್ನಿ ಪಕ್ಷದಲ್ಲಿ ಮಧುರವಾದ ವೃಷ್ಟ್ಯುದಕಗಳು ಅಲೆಅಲೆಯಾಗಿ ಎಂದರೆ ಧಾರಾಕಾರವಾಗಿ ಸುರಿಯುತ್ತವೆ ಎಂದಭಿಪ್ರಾಯವು.

(೩) ಅಥವಾ ಸಮುದ್ರಾತ್ ಸಮುದ್ದ್ರವಣಸಾಧನಾತ್ ಆದಿತ್ಯಾದೂರ್ಮಿರ್ರಸ ಉದಕಲಕ್ಷಣ ಉದಾರತ್ | ಆದಿತ್ಯಾಜ್ಜಾಯತೇ ವೃಷ್ಟಿರಿತಿ ಶ್ರುತೇಃ | ಅಥವಾ ರಸವನ್ನು ಆಕರ್ಷಿಸುವ ಅಥವಾ ಹೀರುವ

ಸ್ವಭಾವವುಳ್ಳ ಆದಿತ್ಯನಿಗೂ ಸಮುದ್ರವೆಂದು ಹೆಸರು. ಇಲ್ಲಿ ರಸವೆಂದರೆ ಉದಕ ಅಥವಾ ದ್ರವರೂಪದಲ್ಲಿರುವ ಯಾವ ವಸ್ತುವಾದರೂ ಆಗಬಹುದು. ಜಲಾಶಯಗಳಿಂದ ಉದಕವನ್ನು ರಶ್ಮಿಗಳ ಮೂಲಕ ಆಕರ್ಷಿಸುವುದರಿಂದ ಆದಿತ್ಯನಿಗೆ ಸಮುದ್ರವೆಂದೂ ಹೆಸರು. ಇಂತಹ ಆದಿತ್ಯನಿಂದ ಉದಕರೂಪವಾದ ವೃಷ್ಟಿಯು ಉಂಟಾಯಿತು.

(೪) ಯದ್ವಾ ಸಮುದ್ರಾದುಕ್ತವ್ಯುತ್ಪತ್ತೇಃ ಅಂತರಿಕ್ಷಾದೂರ್ಮಿರುದಕಮುದಾರತ್ ಅಥವಾ ಸಮುದ್ರಶಬ್ದಕ್ಕೆ ಅಂತರಿಕ್ಷವೆಂದು ಹೆಸರಿರುವುದರಿಂದ ಉದಕವು (ವೃಷ್ಟಿರೂಪದಲ್ಲಿ) ಸುರಿಯಿತು ಎಂದೂ ಅರ್ಥವನ್ನೂ ಹೇಳಬಹುದು.

(೫) ಅಥವಾ ಸಮುದ್ರಾದುಕ್ತಲಕ್ಷಣಾತ್ ಗವಾಮೂಧಸಃ ಸಕಾಶಾತ್ ಊರ್ಮಿರುಜ್ಜ್ವಲಃ ಕ್ಷೀರರಸಃ । ಅಥವಾ ಸಮುದ್ರಶಬ್ದದ ನಿರ್ವಚನದಂತೆ ಸಮುದ್ರಾತ್ ಎಂದರೆ ಗೋವಿನ ಕೆಚ್ಚಲಿನಿಂದ ಎಂದೂ ಅರ್ಥವಾಗಬಹುದು. ಗೋವಿನ ಕೆಚ್ಚಲಿನಿಂದ ಪ್ರಕಾಶಮಾನವಾದ ಎಂದರೆ ಉತ್ಕೃಷ್ಟವಾದ ಕ್ಷೀರರಸವು ಹೊರಡುವುದು ಎಂದೂ ಅರ್ಥವಾಗಬಹುದು. ಮತ್ತು ಹಾಲಿನಿಂದ ಘೃತವು (ತುಪ್ಪ) ಉತ್ಪತ್ತಿಯಾಗುವುದರಿಂದ ಹಸುವಿನ ಕೆಚ್ಚಲಿನಿಂದ ಘೃತವೂ ಉತ್ಪನ್ನವಾಗುತ್ತದೆ ಎಂದು ಹೇಳಬಹುದು. ಮುಖ್ಯಸಾರಾಂಶವೇನೆಂದರೆ ಈ ಸೂಕ್ತದಲ್ಲಿ ಪ್ರತಿಪಾದಿತರಾಗಿರುವ ದೇವತೆಗಳು ಅಗ್ನಿ, ಸೂರ್ಯ, ಆಪಃ, ಗಾವಃ (ಗವ್ಯಂ), ಘೃತ ಎಂದು ಐದು ಮಂದಿಗಳಲ್ಲಿ ಯಾರಾದರೂ ಆಗಬಹುದು. ಎಂದರೆ ಈ ಸೂಕ್ತದಲ್ಲಿರುವ ವಿಷಯಗಳನ್ನು ಈ ಐದು ಮಂದಿ ದೇವತೆಗಳಲ್ಲಿ ಯಾರ ಪರವಾಗಿಬೇಕಾದರೂ ಅನ್ವಯಿಸಿ ಅರ್ಥಮಾಡಬಹುದು. ಆದ್ದರಿಂದ ಮೇಲೆ ಐದು ವಿಧವಾದ ಅರ್ಥಗಳನ್ನು ವಿವರಿಸಲಾಗಿದೆ. ಮುಂದಿನ ವಾಕ್ಯಗಳಿಗೆ ಅಥವಾ ಋಕ್ಕುಗಳಿಗೆ ಎಲ್ಲರಿಗೂ ಹೊಂದಬಹುದಾದ ಸಮಾನಾರ್ಥವಿರುವುದರಿಂದ ಮುಖ್ಯಾರ್ಥವನ್ನು ಮಾತ್ರ ವಿವರಿಸಿದರೆ ಸಾಕಾಗಿರುತ್ತೆ.

ಈ ಋಕ್ಕಿನ ಮೊದಲನೆಯ ವಾಕ್ಯಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಸಮುದ್ರಾದೂರ್ಮಿರ್ಮಧುಮಾँ ಉದಾರತ್ । ಇತ್ಯಾದಿತ್ಯಮುಕ್ತಂ ಮನ್ಯಂತೇ । ಸಮುದ್ರಾದ್ಧ್ಯೇಷೋಽದ್ಭ್ಯ ಉದೇತಿ ಚ ಬ್ರಾಹ್ಮಣಂ ॥

(ನಿ. ೭-೧೮)

ಸಮುದ್ರಾದೂರ್ಮಿಃ ಎಂಬ ಈ ಋಕ್ಕಿನಲ್ಲಿರುವ ಸಮುದ್ರಶಬ್ದಕ್ಕೆ ಆದಿತ್ಯನೆಂದು ಕೆಲವರ ಅಭಿಮತವಿದೆ. ಆದಿತ್ಯನು ಪೂರ್ವಸಮುದ್ರದಿಂದ ಉದಯಿಸುತ್ತಾನೆ (ಏಳುತ್ತಾನೆ) ಎಂಬ ಬ್ರಾಹ್ಮಣವಾಕ್ಯವನ್ನು ಈ ವಿಷಯ ಸಮರ್ಥನೆಗಾಗಿ ಹೇಳುವರು. ಇದಲ್ಲದೆ ಅಗ್ನಿಪರ್ಯಾಯವಾಗಿ ಅರ್ಥಮಾಡುವುದಾದರೆ ಆ ವಿಷಯದಲ್ಲಿಯೂ ಒಂದು ಬ್ರಾಹ್ಮಣ ವಾಕ್ಯವಿದೆ—

ಅಥಾಪಿ ಬ್ರಾಹ್ಮಣಂ ಭವತಿ । ಅಗ್ನಿಃ ಸರ್ವಾ ದೇವತಾ ಇತಿ ।
ತಸ್ಯೋತ್ತರಾ ಭೂಯಸೇ ನಿರ್ವಚನಾಯ ।
ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥

(ಋ. ಸಂ. ೧-೧೬೪-೪೬)

ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತೀಂದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂ ಚ ಗುರುತ್ಮಂತಂ ದಿವ್ಯೋ ದಿವಿಜೋ ಗುರುತ್ಮಾನ್ ಗರಣವಾನ್ ಗುರ್ವಾತ್ಮಾ ಮಹಾತ್ಮೇತಿ ವಾ। ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿಃ। ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ

(ನಿ. ೭-೧೮)

ಅಗ್ನಿಯೇ ಸರ್ವದೇವತೆಗಳ ರೂಪದಿಂದ ಇದಾನೆ ಎಂದು ಮೇಲಿನ ಶ್ರುತಿವಾಕ್ಯದ ಅರ್ಥವು. ಇಂದ್ರಂ ಮಿತ್ರಂ ಎಂಬ ಋಕ್ಕಿನಲ್ಲಿ ಅಗ್ನಿಯನ್ನು ಇಂದ್ರ, ಮಿತ್ರ ವರುಣ ಸುಪರ್ಣ, ಗರುತ್ಮಂತ, ಯಮ, ಮಾತರಿಶ್ವಾ ಎಂಬ ದೇವತೆಗಳೆಂದು ಮೇಧಾವಿಗಳಾದ ಪುರುಷರು ಹೇಳುವರು ಎಂಬರ್ಥವಿದೆ. ಆದರೆ ಇಲ್ಲಿ ಅಗ್ನಿಯೇ ಈ ದೇವತೆಗಳು, ಈ ದೇವತೆಗಳೇ ಅಗ್ನಿಯು, ಇವರಲ್ಲಿ ಯಾರಿಗೂ ಭೇದವಿಲ್ಲ, ಅಗ್ನಿಗೂ ಈ ದೇವತೆಗಳಿಗೂ ತಾದಾತ್ಮ್ಯವನ್ನು ಹೇಳಿದೆ ಎಂದು ಭಾವಿಸಬಾರದು. ಅಗ್ನಿಃ ಸರ್ವಾಃ ದೇವತಾಃ ಎಂದರೆ ಸರ್ವದೇವತೆಗಳಲ್ಲಿರುವ ಗುಣಗಳೂ ಅಗ್ನಿಯಲ್ಲಿರುವವು. ಆದುದರಿಂದ ಅಗ್ನಿಯು ಸರ್ವದೇವತಾಸ್ವರೂಪನು ಎಂಬರ್ಥದಲ್ಲಿ ಈ ವಾಕ್ಯದ ಪ್ರಯೋಗವಿರುವುದು. ಅಗ್ನಿಯಲ್ಲಿ ಒಂದು ವೈಶಿಷ್ಟ್ಯವಿದೆ. ಅದು ಇತರ ದೇವತೆಗಳಲಿಲ್ಲ. ಯಾವ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿರುವುದೋ ಆ ಸೂಕ್ತವು ಅಗ್ನಿದೇವತಾಕವು. ಎಂದರೆ ಅಗ್ನಿಯನ್ನು ಸ್ತುತಿವಾಕ್ಯಗಳಿಂದ ಸ್ತುತಿಸುವುದೂ ಅಲ್ಲದೆ ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುವರು. ಆದ್ದರಿಂದ ಹೋಮನಿಷ್ಪಾದಕನಾದವನೇ ಅಗ್ನಿಯು. ಈ ಗುಣವೈಶಿಷ್ಟ್ಯವು ಇತರ ದೇವತೆಗಳಲಿಲ್ಲ. ಇದಲ್ಲದೆ ಅಗ್ನಿಯು ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ, ಅಂತರಿಕ್ಷದಲ್ಲಿ ವೈದ್ಯುತಾಗ್ನಿ (ಮಿಂಚು) ರೂಪದಿಂದಲೂ, ಭೂಮಿಯಲ್ಲಿ ಪಾರ್ಥಿವಾಗ್ನಿರೂಪದಿಂದಲೂ ಇರುವನೆಂದು ಹೇಳುವುದು ರೂಢಿಯಷ್ಟೆ. ಸ್ವರ್ಗದಲ್ಲಿರುವ ಆದಿತ್ಯನನ್ನೂ ಅಂತರಿಕ್ಷದಲ್ಲಿರುವ ವೈದ್ಯುತಾಗ್ನಿಯನ್ನೂ ಕೇವಲ ಹೆಸರಿಗೆ ಮಾತ್ರ ಅಗ್ನಿಯೆಂದು ವ್ಯವಹರಿಸುವರು. ಪಾರ್ಥಿವಾಗ್ನಿಯೇ ನಿಜವಾದ ಅಗ್ನಿಯು ಎಂದರೆ ಅಗ್ನಿಯ ಮುಖ್ಯ (ನೈಜ) ಸ್ವರೂಪವು ಎಂದು ತಿಳಿಯಬೇಕು ಎಂದು ಅರ್ಥವಿವರಣೆಮಾಡಿರುವರು.



। ಸಂಹಿತಾಪಾಠಃ ।

ವಯಂ ನಾಮ ಪ್ರ ಬ್ರವಾಮಾ ಘೃತಸ್ಯಾಸ್ಮಿನ್ಯಜ್ಞೇ ಧಾರಯಾಮಾ ನಮೋಭಿಃ ।

ಉಪ ಬ್ರಹ್ಮಾ ಶೃಣವಚ್ಛಸ್ಯಮಾನಂ ಚತುಃಶೃಂಗೋಽವಮೀದ್ಗೌರ ಏತತ್ ॥

॥ ಪದಪಾಠಃ ॥

ವಯಂ । ನಾಮ । ಪ್ರ । ಬ್ರವಾಮ । ಘೃತಸ್ಯ । ಅಸ್ಮಿನ್ । ಯಜ್ಞೇ । ಧಾರಯಾಮ । ನಮಃಽಭಿಃ ।
ಉಪ । ಬ್ರಹ್ಮಾ । ಶೃಣವತ್ । ಶಸ್ಯಮಾನಂ । ಚತುಃಽಶೃಂಗಃ । ಅವಮೀತ್ । ಗೌರಃ । ಏತತ್ ॥ ೨ ॥

॥ ಸಾಯಣಭಾಷ್ಯಂ ॥

ವಯಂ ಯಜಮಾನಾ ಘೃತಸ್ಯ ನಾಮ ಪ್ರ ಬ್ರವಾಮ । ಸ್ತುಮಃ । ಅಸ್ಮಿನ್ಯಜ್ಞೇ ನಮೋಭಿರ್ನಮಸ್ಕಾರೈರ್ಹವಿರ್ಭಿರ್ವಾ ಧಾರಯಾಮ ಚ । ಬ್ರಹ್ಮಾ ಪರಿವೃಢೋ ದೇವಃ ಶಸ್ಯಮಾನಂ ಸ್ತೂಯಮಾನಮಿದಮುಪ ಶೃಣುವತ್। ಶೃಣುಯಾತ್। ಚತುಃಶೃಂಗಃ । ಚತ್ವಾರಿ ಶೃಂಗಾಣಿ ದೇವಚತುಷ್ಟಯರೂಪಾಣಿ ಯಸ್ಯ ಸಃ । ಆದಿತ್ಯಾಗ್ನಿಪಕ್ಷ ಏವಂ । ಇತರೇಷ್ವಪಿ ಯೋಸ್ಮೋಕ್ತವ್ಯುತ್ಪತ್ತ್ಯಾ ಶೃಂಗಶಬ್ದೋ ವ್ಯಾಖ್ಯೇಯಃ । ಗೌರೋಽರುಣವರ್ಣಸ್ತಾದೃಶೋ ದೇವ ಏತತ್ಕರ್ಮ ಜಗದ್ವಾವಮೀತ್ । ಉದ್ಗಿರತಿ । ನಿರ್ವಹತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವಯಂ—ಯಜಮಾನರಾದ ನಾವು । ಘೃತಸ್ಯ—ಘೃತದ । ನಾಮ—ನಾಮಧೇಯವನ್ನು । ಪ್ರಬ್ರವಾಮ—ಸ್ತುತಿಸುತ್ತೇವೆ । ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ । ನಮೋಭಿಃ—ನಮಸ್ಕಾರಗಳೊಡನೆ । ಧಾರಯಾಮ—ಅದನ್ನು ಅರ್ಪಿಸುತ್ತೇವೆ । ಚತುಃಶೃಂಗಃ—ನಾಲ್ಕು ಶೃಂಗಗಳುಳ್ಳ (ನಾಲ್ಕು ವೇದಗಳನ್ನು ತಿಳಿದಿರುವ) । ಬ್ರಹ್ಮಾ—ಬ್ರಹ್ಮದೇವನು । ಶಸ್ಯಮಾನಂ—ಪಠಿತವಾಗುತ್ತಿರುವ ಈ ಸ್ತೋತ್ರವನ್ನು । ಉಪ ಶೃಣವತ್—ಆಲಿಸಿ ಕೇಳಲಿ । ಗೌರಃ—ಅರುಣವರ್ಣಾತ್ಮಕನಾದ ದೇವನು । ಏತತ್—ಈ ಕರ್ಮವನ್ನು । ಅವಮೀತ್—ನಿರ್ವಹಿಸುತ್ತಾನೆ.

॥ ಭಾವಾರ್ಥ ॥

ಯಜ್ಞಕರ್ತರಾದ ನಾವು ಘೃತದ ಪವಿತ್ರವಾದ ನಾಮಧೇಯವನ್ನು ಸ್ತುತಿಸುತ್ತೇವೆ. ಮತ್ತು ಅದನ್ನು ಈ ಯಜ್ಞದಲ್ಲಿ ನಮಸ್ಕಾರಗಳೊಡನೆ ಅರ್ಪಿಸುತ್ತೇವೆ. ನಾಲ್ಕು ಶೃಂಗಗಳುಳ್ಳ (ನಾಲ್ಕು ವೇದಗಳನ್ನು ತಿಳಿದಿರುವ) ಬ್ರಹ್ಮದೇವನು ಪಠಿತವಾಗುತ್ತಿರುವ ಈ ಸ್ತುತಿಯನ್ನು ಆಲಿಸಿ ಕೇಳಲಿ. ಅರುಣವರ್ಣಾತ್ಮಕನಾದ ದೇವನು ಈ ಕರ್ಮವನ್ನು ನಿರ್ವಹಿಸುತ್ತಾನೆ.

## English Translation.

We celebrate the name of Ghrita at this sacrifice, we offer it with adoration: may the four-horned Brahma listen to its being glorified: the fair-complexined deity perfects this rite.

॥ ವಿಶೇಷವಿಷಯಗಳು ॥

ಚತುಃಶೃಂಗಃ ಬ್ರಹ್ಮಾ—ಇಲ್ಲಿ ಚತುಃಶೃಂಗವೆಂದರೆ ನಾಲ್ಕು ವೇದಗಳು. ಬ್ರಹ್ಮವೆಂದರೆ ಋತ್ವಿಜನು. ನಾಲ್ಕು ವೇದಗಳನ್ನು ಚೆನ್ನಾಗಿ ತಿಳಿದಿರುವ ಬ್ರಹ್ಮನೆಂಬ ಋತ್ವಿಜನು ಎಂದರ್ಥವು. ಯಜ್ಞದಲ್ಲಿ ಮಂತ್ರ

ಕ್ರಿಯಾದಿಗಳು ಲೋಪವಿಲ್ಲದಂತೆ ಸಾಂಗವಾಗಿ ನಡೆಯುವುದಕ್ಕಾಗಿಯೂ, ಪ್ರಮಾದವಶದಿಂದ ಲೋಪದೋಷಗಳು ಸಂಭವಿಸಿದರೆ ಅವುಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಪರಿಹರಿಸಿ ಯಜ್ಞವನ್ನು ವಿಧ್ಯುಕ್ತವಾಗಿ ಸಮಾಪ್ತಿಯಾಗುವಂತೆ ನೋಡಿಕೊಳ್ಳುವುದೇ ಈ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವು.



॥ ಸಂಹಿತಾಪಾಠಃ ॥

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ।
ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾ ಆ ವಿವೇಶ ॥ ೩ ॥

॥ ಪದಪಾಠಃ ॥

ಚತ್ವಾರಿ । ಶೃಂಗಾ । ತ್ರಯಃ । ಅಸ್ಯ । ಪಾದಾಃ । ದ್ವೇ ಇತಿ । ಶೀರ್ಷೇ ಇತಿ । ಸಪ್ತ । ಹಸ್ತಾಸಃ । ಅಸ್ಯ ।
ತ್ರಿಧಾ । ಬದ್ಧಃ । ವೃಷಭಃ । ರೋರವೀತಿ । ಮಹಃ । ದೇವಃ । ಮರ್ತ್ಯಾನ್ । ಆ । ವಿವೇಶ ॥ ೩ ॥

॥ ಸಾಯಣಭಾಷ್ಯಂ ॥

ಯದ್ಯಪಿ ಸೂಕ್ತಸ್ಯಾಗ್ನಿಸೂರ್ಯಾದಿಪಂಚದೇವತಾಕತ್ವಾತ್ಪಂಚಧಾಯಂ ಮಂತ್ರೋ ವ್ಯಾಖ್ಯೇಯಸ್ತಥಾಪಿ ನಿರುಕ್ತಾದ್ಯುಕ್ತನೀತ್ಯಾ ಯಜ್ಞಾತ್ಮಕಾಗ್ನೇಃ ಸೂರ್ಯಸ್ಯ ಚ ಪ್ರಕಾಶಕತ್ವೇನ ತತ್ಪರತಯಾ ವ್ಯಾಖ್ಯಾಯತೇ। ಅಸ್ಯ ಯಜ್ಞಾತ್ಮಕಸ್ಯಾಗ್ನೇಶ್ಚತ್ವಾರಿ ಶೃಂಗಾ ಚತ್ವಾರೋ ವೇದಾಃ ಶೃಂಗಸ್ಥಾನೀಯಾಃ। ಯದ್ಯಪ್ಯಾಪಸ್ತಂಬೇನ ಯಜ್ಞಂ ವ್ಯಾಖ್ಯಾಸ್ಯಾಮಃ ಸ ತ್ರಿಭಿರ್ವೇದೈರ್ವಿಧೀಯತೇ। ಪರಿಭಾ. ೧-೩। ಇತ್ಯುಕ್ತಂ ತಥಾಪ್ಯಾಥರ್ವಣಸ್ಯೇತರಾನಪೇಕ್ಷಯೈವೈಕಾಗ್ನಿಸಾಧ್ಯಾನಾಂ ಕೃತ್ಸ್ನಕರ್ಮಣಾಮಭಿಧಾಯಕತ್ವಾತ್ತದಪೇಕ್ಷಯಾ ಚತ್ವಾರಿ ಶೃಂಗೇತ್ಯುಕ್ತಂ। ತ್ರಯೋ ಅಸ್ಯ ಪಾದಾಃ ಸವನಾನಿ ತ್ರೀಣ್ಯಸ್ಯ ಪಾದಾಃ। ದ್ವೇ ಶೀರ್ಷೇ ಬ್ರಹ್ಮೌದನಂ ಪ್ರವರ್ಗ್ಯಶ್ಚ। ಇಷ್ಟಿಸೋಮಪ್ರವೃತ್ತಿಸಾಧನತ್ವಾತ್ಪಾದಾ ಇತ್ಯುಚ್ಯಂತೇ। ದ್ವೇ ಶೀರ್ಷೇ ಬ್ರಹ್ಮೌದನಂ ಪ್ರವರ್ಗ್ಯಶ್ಚ। ಇಷ್ಟಿಸೋಮಪ್ರಾಧಾನ್ಯೇನೇದಮುಕ್ತಂ। ಸಪ್ತ ಹಸ್ತಾಸಃ ಸಪ್ತ ಛಂದಾಂಸಿ। ಹಸ್ತಾ ಅನುಷ್ಠಾನಸ್ಯ ಮುಖ್ಯಸಾಧನಂ। ಛಂದಾಂಸ್ಯಪಿ ದೇವತಾಪ್ರೀಣನಸ್ಯ ಮುಖ್ಯಸಾಧನಮಿತಿ ಹಸ್ತವ್ಯವಹಾರಃ। ತ್ರಿಧಾ ಬದ್ಧೋ ಮಂತ್ರಕಲ್ಪಬ್ರಾಹ್ಮಣೈಸ್ತ್ರಿಪ್ರಕಾರಂ ಬದ್ಧಃ। ಬಂಧನಮಸ್ಯ ತನ್ನಿಷ್ಪಾದ್ಯತ್ವಂ। ವೃಷಭಃ ಫಲಾನಾಂ ವರ್ಷಿತಾ ರೋರವೀತಿ। ಭೃಶಂ ಶಬ್ದಾಯತೇ। ಋಗ್ಯಜುಃಸಾಮೋಕ್ಥೈಃ ಶಸ್ತ್ರಯಾಗಸ್ತುತಿರೂಪೈರ್ಹೋತ್ರಾದ್ಯುಕ್ತೈಃ। ಏವಂ ಮಹೋ ದೇವೋ ಮರ್ತ್ಯಾನಾ ವಿವೇಶ। ಮರ್ತ್ಯೈರ್ಯಜಮಾನೈಸ್ತ್ವಾದಿತೈರ್ಧ್ವನಿಭಿರಸೌ ರೌತಿ। ಏವಂ ಮಹೋ ದೇವೋ ಮರ್ತ್ಯಾನಾ ವಿವೇಶ। ಮರ್ತ್ಯೈರ್ಯಜಮಾನೈರ್ನಿಷ್ಪಾದ್ಯತ್ವಾತ್ಪ್ರವೇಶ ಉಪಚರ್ಯತೇ॥ ಅತ್ರ ಯಾಸ್ಕಶ್ಚತ್ವಾರಿ ಶೃಂಗೇತಿ ವೇದಾ ವಾ ಏತ ಉಕ್ತಾಃ।

ನಿ. ೧೩-೭। ಇತ್ಯಾದಿನಾ ನಿರವೋಚತ್। ತದತ್ರಾನುಸಂಧೇಯಂ॥ ಅಥ ಸೂರ್ಯಪಕ್ಷೇ ವ್ಯಾಖ್ಯಾಯತೇ। ಅಸ್ಯಾದಿತ್ಯಸ್ಯ ಚತ್ವಾರಿ ಶೃಂಗಾಣಿ ಚತುಸ್ರೋ ದಿಶಃ। ಏತಾಃ ಶ್ರಯಣಾರ್ಥತ್ವಾಚ್ಛೃಂಗಾಣೀತ್ಯುಪಚರ್ಯಂತೇ। ತ್ರಯೋ ಅಸ್ಯ ಪಾದಾಃ। ತ್ರಯೋ ವೇದಾಃ ಪಾದಸ್ಥಾನೀಯಾ ಭವಂತಿ ಗಮನಸಾಧನತ್ವಾತ್। ತಥಾ ಹ್ಯೃಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೆ ಇತ್ಯುಪಕ್ರಮ್ಯ ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ। ತೈ. ಬ್ರಾ. ೩-೧೨-೯-೧। ಇತಿ ಹಿ ವೇದತ್ರಯೇಣ ಗತಿರಾಮ್ನಾತಾ। ದ್ವೇ ಶೀರ್ಷೇ। ಅಹಶ್ಚ ರಾತ್ರಿಶ್ಚೇತಿ ದ್ವೇ ಶಿರಸೀ। ಸಪ್ತ ಹಸ್ತಾಸೋ ಅಸ್ಯ। ಸಪ್ತ ರಶ್ಮಯಃ ಷಡ್ವಿಲಕ್ಷಣಾ ಋತವ ಏಕಃ ಸಾಧಾರಣ ಇತಿ ವಾ ಸಪ್ತ ಹಸ್ತಾ ಭವಂತಿ। ತ್ರಿಧಾ ಬದ್ಧಸ್ತ್ರಿಷು ಸ್ಥಾನೇಷು ಕ್ಷಿತ್ಯಾದಿಷ್ವಗ್ನ್ಯಾದ್ಯಾತ್ಮಕತ್ವೇನ ಸಂಬದ್ಧಃ। ಗ್ರೀಷ್ಮವರ್ಷಾಹೇಮಂತಾಖ್ಯೈಸ್ತ್ರಿಭಿಸ್ತ್ರೇಧಾ ಬದ್ಧೋ ವಾ। ವೃಷಭೋ ವರ್ಷಿತಾ ರೋರವೀತಿ। ಶಬ್ದಂ ಕರೋತಿ ವೃಷ್ಟ್ಯಾದಿದ್ವಾರಾ। ಸ ಮಹೋ ಮಹಾನ್ ದೇವೋ ಮರ್ತ್ಯಾನಾ ವಿವೇಶ ತನ್ನಿಯಂತೃತಯಾ। ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ। ಋಗ್ವೇ. ೧-೧೧೫-೧। ಇತಿ ಹಿ ಶ್ರುತಂ॥ ಏವಂ ಶ್ವಬಾದಿಪಕ್ಷೇಽಪಿ ಯೋಜ್ಯಂ। ಶಾಬ್ದಿಕಾಸ್ತು ಶಬ್ದಬ್ರಹ್ಮಪರತಯಾ ಚತ್ವಾರಿ ಶೃಂಗೇತಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚೇತ್ಯಾದಿನಾ ವ್ಯಾಚಕ್ಷತೇ। ಅಪರೇ ಕ್ವಪರಥಾ। ತತ್ಸರ್ವಮತ್ರ ದ್ರಷ್ಟವ್ಯಂ॥

॥ ಪ್ರತಿಪದಾರ್ಥ ॥

ಅಸ್ಯ—ಯಜ್ಞಾತ್ಮನಾದ ಈ ಅಗ್ನಿಗೆ। ಚತ್ವಾರಿ ಶೃಂಗಾಃ—(ವೇದರೂಪಗಳಾದ) ನಾಲ್ಕು ಶೃಂಗಗಳಿವೆ। ತ್ರಯಃ ಪಾದಾಃ—(ಸವನತ್ರಯರೂಪವಾದ) ಮೂರು ಪಾದಗಳಿವೆ। ದ್ವೇ ಶೀರ್ಷೇ—(ಬ್ರಹ್ಮೌದನ ಮತ್ತು ಪ್ರವರ್ಗ್ಯರೂಪವಾದ) ಎರಡು ಶೀರ್ಷಗಳಿವೆ (ತಲೆಗಳು)। ಅಸ್ಯ—ಈ ದೇವನಿಗೆ। ಸಪ್ತ ಹಸ್ತಾಸಃ—(ಸಪ್ತಚ್ಛಂದೋರೂಪಗಳಾದ) ಏಳು ಹಸ್ತಗಳಿವೆ। ತ್ರಿಧಾ ಬದ್ಧಃ—(ಮಂತ್ರ, ಬ್ರಾಹ್ಮಣ, ಕಲ್ಪ ಎಂಬ) ಮೂರು ಪ್ರಕಾರಗಳಿಂದ ಬದ್ಧನಾದವನೂ। ವೃಷಭಃ—ಕಾಮವರ್ಷಕನೂ ಆದ ಈ ದೇವನು। ರೋರವೀತಿ—ಅಧಿಕವಾಗಿ ಶಬ್ದವನ್ನು ಮಾಡುತ್ತಾನೆ। ಮಹೋ ದೇವಃ—ಮಹಾತ್ಮನಾದ ಈ ದೇವನು। ಮರ್ತ್ಯಾನ್—ಮಾನವರನ್ನೆಲ್ಲಾ। ಆವಿವೇಶ—ವ್ಯಾಪಿಸಿದ್ದಾನೆ.

॥ ಭಾವಾರ್ಥ ॥

ಯಜ್ಞಾತ್ಮನಾದ ಈ ಅಗ್ನಿಗೆ ವೇದರೂಪಗಳಾದ ನಾಲ್ಕು ಶೃಂಗ (ಕೊಂಬು) ಗಳೂ, ಸವನತ್ರಯರೂಪವಾದ ಮೂರು ಪಾದಗಳೂ, ಬ್ರಹ್ಮೌದನ ಮತ್ತು ಪ್ರವರ್ಗ್ಯರೂಪಗಳಾದ ಎರಡು ಶೀರ್ಷಗಳೂ ಮತ್ತು ಸಪ್ತಚ್ಛಂದೋರೂಪಗಳಾದ ಏಳು ಹಸ್ತಗಳೂ ಇವೆ. ಮಂತ್ರ, ಬ್ರಾಹ್ಮಣ ಮತ್ತು ಕಲ್ಪ ಎಂಬ ಮೂರು ಪ್ರಕಾರಗಳಿಂದ ಬದ್ಧನಾದವನೂ, ಕಾಮವರ್ಷಕನೂ ಆದ ಈ ದೇವನು ಅಧಿಕವಾಗಿ ಶಬ್ದವನ್ನು ಮಾಡುತ್ತಾನೆ. ಮಹಾತ್ಮನಾದ ಈ ದೇವನು ಮಾನವರನ್ನೆಲ್ಲಾ ವ್ಯಾಪಿಸಿದ್ದಾನೆ.

## English Translation.

Four are his horns ; three are his feet ; his heads are two, his hands are seven : the triple-bound showerer (of benefits) roars aloud : the mighty deity has entered amongst men.

|| ವಿಶೇಷವಿಷಯಗಳು ||

ಈ ಋಕ್ಕಿಗೆ ಭಾಷ್ಯಕಾರರು ವ್ಯಾಖ್ಯಾನ ಮಾಡುವಾಗ ಯಾಸ್ಕರು ಹೇಳಿರುವ ನಿರ್ವಚನವನ್ನೇ ಅನುಸರಿಸಿ ಅರ್ಥಮಾಡಿರುವರು. ಈ ಸೂಕ್ತದ ಋಕ್ಕುಗಳಿಗೆಲ್ಲಾ ಹಿಂದೆ ಹೇಳಿದಂತೆ ಅಗ್ನಿ, ಸೂರ್ಯ ಮೊದಲಾದ ಐದು ದೇವತೆಗಳ ಪರವಾಗಿಯೂ ವ್ಯಾಖ್ಯಾನ ಮಾಡಬೇಕಾದುದು ಯುಕ್ತವಾಗಿದ್ದರೂ ನಿರುಕ್ತಕಾರರ ಮತದಂತೆ ಯಜ್ಞಾತ್ಮಕನಾದ ಅಗ್ನಿ ಮತ್ತು ಸೂರ್ಯನ ಪರವಾಗಿ ಎರಡು ವಿಧವಾಗಿ ಮಾತ್ರ ಅರ್ಥವಿವರಣೆ ಮಾಡುವೆವು. ಇತರ ದೇವತಾಪರವಾದ ಅರ್ಥವನ್ನು ಪಾಠಕರೇ ಊಹಿಸಿಕೊಳ್ಳಬಹುದು ಎಂದು ಹೇಳಿ ಮೊದಲು ಯಜ್ಞಾತ್ಮಕನಾದ ಅಗ್ನಿಯ ಪರವಾಗಿಯೂ, ಅನಂತರ ಸೂರ್ಯನ ಪರವಾಗಿಯೂ ಅರ್ಥವಿವರಣೆ ಮಾಡಿದಾರೆ. ಯಜ್ಞಾಗ್ನಿ ಪರವಾದ ಅರ್ಥವನ್ನು ನಾವು ಈ ಋಕ್ಕಿನ ಪ್ರತಿಪದಾರ್ಥ ಭಾಗದಲ್ಲಿ ವಿವರಿಸಿರುವುದಲ್ಲದೆ, ನಿರುಕ್ತವಚನವೂ ಅದೇ ರೀತಿ ಇರುವುದರಿಂದ ಮೊದಲು ಈ ಋಕ್ಕಿನ ನಿರ್ವಚನದ ಅರ್ಥವನ್ನು ವಿವರಿಸಿ ಅನಂತರ ಸೂರ್ಯಪರವಾದ ಅರ್ಥವನ್ನು ವಿವರಿಸುವೆವು.

> ಚತ್ವಾರಿ ಶೃಂಗೇತಿ ವೇದಾ ವಾ ಏತ ಉಕ್ತಾಃ । ತ್ರಯೋ ಅಸ್ಯ ಪಾದಾ ಇತಿ ಸವನಾನಿ ತ್ರೀಣಿ । ದ್ವೇ ಶೀರ್ಷೇ ಪ್ರಾಯಣೀಯೋದಯನೀಯೇ । ಸಪ್ತ ಹಸ್ತಾಸಃ ಸಪ್ತ ಛಂದಾಂಸಿ । ತ್ರಿಧಾ ಬದ್ಧಸ್ತ್ರೇಧಾ ಬದ್ಧೋ ಮಂತ್ರಬ್ರಾಹ್ಮಣಕಲ್ಪೈಃ । ವೃಷಭೋ ರೋರವೀತಿ ರೋರವಣಮಸ್ಯ ಸವನಕ್ರಮೇಣ ಋಗ್ಭಿರ್ಯಜುರ್ಭಿಃ ಸಾಮಭಿರ್ಯದೇನಮೃಗ್ಭಿಃ ಶಂಸಂತಿ ಯಜುರ್ಭಿರ್ಯಜಂತಿ ಸಾಮಭಿಃ ಸ್ತುವಂತಿ ಮಹೋ ದೇವ ಇತ್ಯೇಷ ಹಿ ಮಹಾನ್ ದೇವೋ ಯದ್ಯಜ್ಞೋ ಮರ್ತ್ಯಾನ್ ಆವಿವೇಶೇತ್ಯೇಷ ಹಿ ಮನುಷ್ಯಾನಾವಿಶತಿ ಯಜನಾಯ ॥
>
> (ನಿ. ೧೩–೭)

ಈ ನಿರ್ವಚನದ ವಿವರಣೆಯನ್ನು ಭಾಷ್ಯಕಾರರ ಅರ್ಥದೊಂದಿಗೆ ಸೇರಿಸಿ ವಿವರಿಸುತ್ತೇವೆ.

ಚತ್ವಾರಿ ಶೃಂಗಾಃ । ಈ ಯಜ್ಞಾತ್ಮಕನಾದ ಅಗ್ನಿಗೆ ನಾಲ್ಕು ಕೊಂಬುಗಳಿರುವವು. ಇಲ್ಲಿ ಕೊಂಬುಗಳೆಂದರೆ ವೇದಗಳು. ನಾಲ್ಕು ಕೊಂಬುಗಳೆಂದರೆ—ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಲ್ಕು ವೇದಗಳೇ ನಾಲ್ಕು ಕೊಂಬುಗಳು.

ತ್ರಯೋ ಅಸ್ಯ ಪಾದಾಃ । ಯಜ್ಞಾಂಗಗಳಾದ ಎಂದರೆ ಯಜ್ಞದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನೆರವೇರಿಸಲ್ಪಡುವ ಪ್ರಾತಃಸ್ಸವನ, ಮಾಧ್ಯಂದಿನಸವನ, ತೃತೀಯಸವನವೆಂಬ ಮೂರು ಸವನ ಕರ್ಮಗಳು. ಸವನವೆಂದರೆ ದೇವತೆಗಳಿಗೆ ಸೋಮವನ್ನು ಅರ್ಪಿಸುವುದಕ್ಕಾಗಿಯೂ, ಋತ್ವಿಜರುಗಳು ಸೋಮಪಾನ ಮಾಡುವುದಕ್ಕಾಗಿಯೂ ಯಜ್ಞದಲ್ಲಿ ಸೋಮಲತೆಗಳನ್ನು (ಬಳ್ಳಿಗಳನ್ನು) ತಂದು ಅವುಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆದು ಶೋಧಿಸಿ ಕಲಶಗಳಲ್ಲಿ ತುಂಬಿ ಮಂತ್ರಾದಿಗಳಿಂದ ಸಂಸ್ಕರಿಸುವರು. ಅನಂತರ ಆಯಾ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿ ಅನಂತರ ಪಾನವನ್ನು ಮಾಡುವರು. ಇದಕ್ಕೆ ಸವನ (ರಸವನ್ನು ಹಿಂಡಿ ತೆಗೆಯುವ) ಕರ್ಮವೆಂದು ಹೆಸರು. ಈ ಕರ್ಮವು ಯಜ್ಞದ ಸುತ್ಯಾದಿನದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ನಡೆಯುವುದು. ಈ ಕರ್ಮಗಳು ಯಜ್ಞಕ್ಕೆ ಮುಖ್ಯ ಸಾಧನವಾದ್ದರಿಂದ ಇಲ್ಲಿ ಈ ಕರ್ಮಗಳನ್ನು ಯಜ್ಞದ (ಅಥವಾ ಯಜ್ಞಾಗ್ನಿಯ) ಮೂರು ಪಾದಗಳೆಂದು ವರ್ಣಿಸಿದೆ.

ದ್ವೇ ಶೀರ್ಷೇ—ಬ್ರಹ್ಮೌದನ ಮತ್ತು ಪ್ರವರ್ಗ್ಯ ಎಂಬ ಎರಡು ಕರ್ಮಗಳು. ಯಾಸ್ಕರು—ಪ್ರಾಯಣೀಯ ಮತ್ತು ಉದಯನೀಯ ಎಂಬ ಎರಡು ಕರ್ಮಗಳೆಂದು ವಿವರಿಸಿದ್ದಾರೆ. ಎಂದರೆ ಯಜ್ಞದಲ್ಲಿ ಪ್ರಾಯಣೀಯೇಷ್ಟಿ ಎಂಬ ಕರ್ಮವನ್ನು ಪ್ರಾರಂಭದಲ್ಲಿಯೂ, ಉದಯನೀಯೇಷ್ಟಿಯನ್ನು ಕೊನೆಯಲ್ಲಿಯೂ ನೆರವೇರಿಸುವರು. ಈ ಎರಡು ಕರ್ಮಗಳನ್ನು ಇಲ್ಲಿ ಯಜ್ಞದ ಎರಡು ಶಿರಸ್ಸುಗಳೆಂದು ಹೇಳಿದೆ.

ಸಪ್ತ ಹಸ್ತಾಸೋ ಅಸ್ಯ—ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿಃ ಎಂಬ ಏಳು ವಿಧವಾದ ಛಂದಸ್ಸುಗಳೇ ಏಳು ಹಸ್ತಗಳು. ಯಜ್ಞದಲ್ಲಿ ಪ್ರಾತರನುವಾಕ ಮತ್ತು ಶಸ್ತ್ರಮಂತ್ರ ಪಠನಮಾಡುವಾಗ ಆಯಾ ದೇವತೆಗಳನ್ನುದ್ದೇಶಿಸಿ ಪಠಿಸುವ ಮಂತ್ರಗಳಲ್ಲಿ ಈ ಏಳು ವಿಧವಾದ ಛಂದಸ್ಸಿನ ಋಕ್ಕುಗಳಿಂದ ಕೂಡಿದ ಮಂತ್ರಗಳನ್ನೇ ಪಠಿಸಬೇಕೆಂಬ ನಿಯಮುವಿದೆ. ಇಲ್ಲಿ ಆ ಏಳು ಛಂದಸ್ಸುಗಳೇ ಯಜ್ಞಾಗ್ನಿಯ ಏಳು ಹಸ್ತಗಳೆಂದು ವರ್ಣಿಸಿದೆ.

ತ್ರಿಧಾ ಬದ್ಧಃ— ಯಜ್ಞಕರ್ಮವು ಮಂತ್ರ, ಬ್ರಾಹ್ಮಣ, ಕಲ್ಪ ಎಂಬ ಮೂರುವಿಧವಾದ ಗ್ರಂಥಗಳಲ್ಲಿ ಹೇಳಿರುವ ನಿಯಮಗಳಿಗೆ ಒಳಪಟ್ಟು ನಡೆಯುವುದರಿಂದ ಈ ಯಜ್ಞವು ಮೂರುವಿಧ ನಿಯಮಗಳಿಗೆ ಬದ್ಧವಾಗಿರುವುದೆಂದು ಇಲ್ಲಿ ಹೇಳಿದೆ. ಮಂತ್ರವೆಂದರೆ, ಯಜ್ಞದ ಆಯಾ ಕರ್ಮದಲ್ಲಿ ಸಂದರ್ಭಾನುಸಾರವಾಗಿ ಹೋತೃ ಮೊದಲಾದ ಋತ್ವಿಜರಿಂದ ಪಠಿಸುವ ವೇದಮಂತ್ರಗಳು. ಮಂತ್ರದಲ್ಲಿ ಸೂಚಿತವಾಗಿರುವ ಅರ್ಥವು ಆಯಾ ಕರ್ಮವನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದ ಪ್ರತಿ ಕರ್ಮದಲ್ಲಿಯೂ ಆ ಅರ್ಥವನ್ನು ಸೂಚಿಸುವ ಮಂತ್ರವನ್ನೇ ಪಠಿಸಬೇಕು ಎಂಬ ನಿಯಮವಿದೆ. (ಇದಕ್ಕೆ ರೂಪಸಮೃದ್ಧಿ ಎಂದು ಐತರೇಯ ಬ್ರಾಹ್ಮಣದಲ್ಲಿ ವಿವರಣೆ ಇದೆ). ಬ್ರಾಹ್ಮಣವೆಂದರೆ, ಇಂತಹ ಕರ್ಮವನ್ನು ಈ ವಿಧವಾಗಿ ಇಂತಹ ಕಾಲದಲ್ಲಿ ಮಾಡಬೇಕು, ಈರೀತಿ ಮಾಡುವುದಕ್ಕೆ ಇಂತಹ ಕಾರಣವಿದೆ, ಈ ವಿಷಯದಲ್ಲಿ ಇಂತಹ ಪೂರ್ವೇತಿಹಾಸವಿದೆ. ಆದ್ದರಿಂದ ಕರ್ಮವನ್ನು ಈ ರೀತಿಯಾಗಿಯೇ ಮಾಡಬೇಕು ಎಂಬ ವಿಧಿಗಳೂ ವಿವರಣೆಗಳೂ ಇರುವವು. ಕಲ್ಪವೆಂದರೆ, ಶ್ರೌತಸೂತ್ರ ಮೊದಲಾದ ಸೂತ್ರಗಳು. ಯಜ್ಞದಲ್ಲಿ ಯಾವ ಯಾವ ಕಾಲದಲ್ಲಿ ಯಾವ ಮಂತ್ರಗಳನ್ನು ಹೇಳಬೇಕು, ಕರ್ಮಗಳನ್ನು ಹೇಗೆ ಮಾಡಬೇಕು ಮೊದಲಾದ ವಿಷಯಗಳನ್ನು ಆಶ್ವಲಾಯನ, ಆಪಸ್ತಂಬ ಮೊದಲಾದ ಮಹರ್ಷಿಗಳು ಶ್ರೌತಾದಿ ಸೂತ್ರಗಳಲ್ಲಿ ಚೆನ್ನಾಗಿ ವಿವರಿಸಿರುವರು. ಯಜ್ಞಾದಿಗಳನ್ನು ಅದರಂತೆಯೇ ನಡೆಸಬೇಕು. ಆದುದರಿಂದ ಯಜ್ಞಕರ್ಮವು ಮಂತ್ರ, ಬ್ರಾಹ್ಮಣ, ಕಲ್ಪ ಎಂಬ ಮೂರುವಿಧ ನಿಯಮಗ್ರಂಥಗಳ ಸೂತ್ರಾದಿಗಳಿಗೆ ಒಳಪಟ್ಟಿರುವುದೆಂದು ಇಲ್ಲಿ ವಿವರಿಸಿದೆ.

ವೃಷಭೋ ರೋರವೀತಿ—ವೃಷಭ ಶಬ್ದಕ್ಕೆ ಫಲಾನಾಂ ವರ್ಷಿತಾ ಅಭೀಷ್ಟಫಲಗಳನ್ನು ಸುರಿಸುವವನು ಎಂದರ್ಥವು. ಯಜ್ಞಮಾಡುವ ಯಜಮಾನನಿಗೆ ಯಜ್ಞವು ಅಭೀಷ್ಟ ಫಲಗಳನ್ನು ಯಥೇಚ್ಛವಾಗಿ ಒದಗಿಸಿಕೊಡುವುದು. ಇಂತಹ ಯಜ್ಞವು ಶಬ್ದದಿಂದ ಎಂದರೆ ಮಂತ್ರಧ್ವನಿಗಳಿಂದ ಸಹಿತವಾಗಿದೆ. ಎಂದರೆ, ಯಜ್ಞದಲ್ಲಿ ಋತ್ವಿಜರು ವೇದಮಂತ್ರಗಳನ್ನು ಉಚ್ಚಧ್ವನಿಯಿಂದ ಪಠಿಸುತ್ತಾರೆ ಎಂದಭಿಪ್ರಾಯವು. ಮೂರು ಸವನಕಾಲಗಳಲ್ಲಿಯೂ ಹೋತ್ರಾದಿ ಋತ್ವಿಕ್ಕುಗಳು ಮೂರು ವೇದಗಳನ್ನು ಪಠಿಸುತ್ತಾರೆ. ಹೋತೃವರ್ಗದ ಋತ್ವಿಕ್ಕುಗಳು ಋಗ್ವೇದದ ಮಂತ್ರಗಳಿಂದ ದೇವತೆಗಳನ್ನು ಸ್ತೋತ್ರಮಾಡುತ್ತಾರೆ. ಅಧ್ವರ್ಯುವರ್ಗದ ಋತ್ವಿಕ್ಕುಗಳು ಯಜುರ್ವೇದದ ಮಂತ್ರಗಳಿಂದ ಯಜ್ಞದಲ್ಲಿ ನಾನಾ ಕಾರ್ಯಕಲಾಪಗಳನ್ನು ನೆರವೇರಿಸುತ್ತಾರೆ. ಉದ್ಗಾತೃವರ್ಗದ ಋತ್ವಿಕ್ಕುಗಳು ದೇವತೆಗಳ ಪ್ರೀತ್ಯರ್ಥವಾಗಿ ಶ್ರಾವ್ಯವಾದ ಸಾಮಮಂತ್ರಗಳಿಂದ ಗಾನಮಾಡುತ್ತಾರೆ. ಈ ರೀತಿ ಮೂರು ವೇದಗಳ ಮಂತ್ರ

ಪತನದಿಂದ ಯಜ್ಞವು ಮಧುರಧ್ವನಿಯುಕ್ತವಾಗಿರುವುದು. ಆದ್ದರಿಂದ ಯಜ್ಞವನ್ನು **ವೃಷಭೋ ರೋರವೀತಿ** ಎಂಬ ವಾಕ್ಯದಿಂದ ವರ್ಣಿಸಲಾಗಿದೆ.

**ಮಹೋ ದೇವಃ ಮರ್ತ್ಯಾನ್ ಆವಿವೇಶ**—ಮಹಾದೇವತೆಯಾದ ಯಜ್ಞವು ಯಜ್ಞಮಾಡುವ ಯಜಮಾನರಾದ ಋತ್ವಿಗ್ಜರನ್ನು ಪ್ರವೇಶಿಸಿತು ಎಂದರೆ ವ್ಯಾಪಿಸಿತು. ಎಂದರೆ ಮನುಷ್ಯ ಯಜಮಾನರು ಯಜ್ಞಾದಿಗಳನ್ನು ಋತ್ವಿಗ್ಜನ ಸಹಿತರಾಗಿ ಆಚರಿಸುವುದರಿಂದ ಯಜ್ಞವು ಮನುಷ್ಯರನ್ನು ಪ್ರವೇಶಿಸಿತು ಎಂದು ಪ್ರಕಾರಾಂತರವಾಗಿ ವರ್ಣಿಸಿದೆ. ಇದು ಯಜ್ಞಾಗ್ನಿಪರವಾದ ಅರ್ಥವಿವರಣೆಯು. ಇನ್ನು ಸೂರ್ಯನ (ಆದಿತ್ಯನ) ಪರವಾದ ವಿವರಣೆಯನ್ನು ಹೇಳುತ್ತೇವೆ—

**ಸೂರ್ಯನ ಪರವಾದ ಅರ್ಥವಿವರಣೆ**

**ಚತ್ವಾರಿ ಶೃಂಗಾಣಿ—ಚತಸ್ರೋ ದಿಶಃ** । ನಾಲ್ಕು ದಿಕ್ಕುಗಳೇ ನಾಲ್ಕು ಕೊಂಬುಗಳು. ಈ ನಾಲ್ಕು ದಿಕ್ಕುಗಳೂ ನಾಲ್ಕು ವೇದಗಳೆಂದೂ ಶ್ರುತಿ ವಾಕ್ಯವಿದೆ—

**ಋಚಾಂ ಪ್ರಾಚೀ ಮಹತೀ ದಿಗುಚ್ಯತೇ । ದಕ್ಷಿಣಾಮಾಹುರ್ಯಜುಷಾಮಪಾರಾಂ । ಅಥರ್ವಣಾ-ಮಂಗಿರಸಾಂ ಪ್ರತೀಚೀ । ಸಾಮ್ನಾಮುದೀಚೀ ಮಹತೀ ದಿಗುಚ್ಯತೇ ॥**

(ತೈ. ಬ್ರಾ. ೩-೧೨-೯-೧)

ಎಂದರೆ ಋಗ್ವೇದಕ್ಕೆ ಪೂರ್ವದಿಕ್ಕೆಂದೂ, ಯಜುರ್ವೇದಕ್ಕೆ ದಕ್ಷಿಣದಿಕ್ಕೆಂದೂ, ಅಥರ್ವವೇದಕ್ಕೆ ಪಶ್ಚಿಮದಿಕ್ಕೆಂದೂ, ಸಾಮವೇದಕ್ಕೆ ಉತ್ತರದಿಕ್ಕೆಂದೂ ಹೆಸರು.

**ತ್ರಯೋ ಅಸ್ಯ ಪಾದಾಃ—ತ್ರಯೋ ವೇದಾಃ ಪಾದಸ್ಥಾನೀಯಾ ಭವಂತಿ ಗಮನಸಾಧನತ್ವಾತ್ । ತಥಾ ಹಿ—ಋಗ್ಭಿಃ ಪೂರ್ವಾಹ್ಣೇ ದಿವಿ ದೇವಾ ಈಯತೇ ಇತ್ಯುಪಕ್ರಮ್ಯ ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ** (ತೈ. ಬ್ರಾ. ೩-೧೨-೯-೧) **ಇತಿ ಹಿ ವೇದತ್ರಯೇಣ ಗತಿರಾಮ್ನಾತಾ** । ಸೂರ್ಯನಿಗೆ ಋಗ್ಯಜಸ್ಸಾಮಗಳೆಂಬ ಮೂರು ವೇದಗಳೇ ಮೂರು ಪಾದಗಳಂತಿರುವವು. ಎಂದರೆ ಸೂರ್ಯನ ಗತಿಯು ಮೂರು ವೇದಗಳಿಂದ ಸಾಗುತ್ತಿರುವುದು ಎಂದಭಿಪ್ರಾಯವು. ಈ ವಿಷಯದಲ್ಲಿ—

**ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ । ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ । ಸಾಮವೇದೇನಾಸ್ತಮಯೇ ಮಹೀಯತೇ । ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ ॥**

(ತೈ. ಬ್ರಾ. ೩-೧೨-೯-೧)

ಎಂಬ ಶ್ರುತಿವಾಕ್ಯವಿದೆ. ಎಂದರೆ ಸೂರ್ಯನು ಋಗ್ವೇದಮಂತ್ರಗಳ ಪ್ರಭಾವದಿಂದ ಪೂರ್ವಾಹ್ಣದಲ್ಲಿ ಅಥವಾ ಪ್ರಾತಃಕಾಲದಲ್ಲಿ ಉದಯಿಸಿ (ಪೂರ್ವದಿಕ್ಕಿನಲ್ಲಿ) ಬೆಳಗುವನು; ಯಜುರ್ವೇದದ ಮಂತ್ರಗಳ ಪ್ರಭಾವದಿಂದ ಮಧ್ಯಾಹ್ನ ಕಾಲದಲ್ಲಿ ಅಂತರಿಕ್ಷದ ಮಧ್ಯಭಾಗದಲ್ಲಿ (ನೆತ್ತಿಯ ಮೇಲೆ) ಇರುವನು. ಸಾಮವೇದಮಂತ್ರ ಪ್ರಭಾವದಿಂದ ಸಾಯಂಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿ ಅಸ್ತಮಯನಾಗುವನು. ಈ ರೀತಿ ಸೂರ್ಯನು ಮೂರು ವೇದಗಳ ಮಂತ್ರಪ್ರಭಾವದಿಂದ ಸಂಚಾರಸಾಮರ್ಥ್ಯವುಳ್ಳವನಾಗುತ್ತಾನೆ ಎಂದಭಿಪ್ರಾಯವು. ಆದುದರಿಂದಲೇ ಸಂಚಾರಸಾಧನವಾದ ಈ ಮೂರು ವೇದಗಳೇ ಆದಿತ್ಯನಿಗೆ ಪಾದಸ್ಥಾನೀಯಗಳಾಗಿರುವುವು ಎಂದು ಹೇಳಿದೆ.

**ದ್ವೇ ಶೀರ್ಷೇ—ಅಹಶ್ಚ ರಾತ್ರಿಶ್ಚೇತಿ ದ್ವೇ ಶಿರಸೀ ।** ಹಗಲು ಮತ್ತು ರಾತ್ರಿ ಎಂಬ ಎರಡು ಕಾಲಗಳೇ ಸೂರ್ಯನಿಗೆ ಎರಡು ಶಿರಸ್ಸುಗಳು.

**ಸಪ್ತ ಹಸ್ತಾಸೋ ಅಸ್ಯ ಸಪ್ತರಶ್ಮಯಃ ಷಡ್ವಿಲಕ್ಷಣಾ ಋತವಃ ಏಕಃ ಸಾಧಾರಣ ಇತಿ ವಾ ಸಪ್ತ ಹಸ್ತಾ ಭವಂತಿ ।** ಏಳು ವಿಧವಾದ ರಶ್ಮಿಗಳೇ ಸೂರ್ಯನ ಏಳು ಹಸ್ತಗಳು. ಅಥವಾ ಬಿಸಿಲು, ಚಳಿ ಮೊದಲಾದ ವಿವಿಧಗುಣಗಳಿಂದ ಕೂಡಿದ ಆರು ಋತುಗಳೂ ಎಲ್ಲಕ್ಕೂ ಸಾಮಾನ್ಯವಾದ ಒಂದು ಋತುವೂ ಸೇರಿ ಏಳು ಹಸ್ತಗಳಾಗ ಬಹುದು. ಅಥವಾ ಸೂರ್ಯನ ಏಳು ಕುದುರೆಗಳೇ ಏಳು ಹಸ್ತಗಳೆಂದು ಬೇಕಾದರೂ ಹೇಳಬಹುದು.

**ತ್ರಿಧಾ ಬದ್ಧಸ್ತ್ರಿಷು ಸ್ಥಾನೇಷು ಕ್ಷಿತ್ಯಾದಿಷು ಅಗ್ನ್ಯಾದ್ಯಾತ್ಮಕತ್ವೇನ ಸಂಬಂಧಃ । ಗ್ರೀಷ್ಮವರ್ಷಾ ಹೇಮಂತಾಖ್ಯೈಸ್ತ್ರಿಭಿಸ್ತ್ರೇಧಾ ಬದ್ಧೋ ವಾ ॥** ಭೂಮಿ, ಅಂತರಿಕ್ಷ, ಸ್ವರ್ಗ ಎಂಬ ಮೂರು ಸ್ಥಾನಗಳಲ್ಲಿ ಇರುವವನಾದ್ದರಿಂದ ಸೂರ್ಯನು ಮೂರು ವಿಧವಾದ ಸಂಬಂಧವುಳ್ಳವನು. ಅಥವಾ ಗ್ರೀಷ್ಮಋತು, ವರ್ಷಋತು, ಹೇಮಂತಋತು ಎಂಬ ಮೂರು ಮುಖ್ಯವಾದ ಋತುಧರ್ಮಗಳಿಗೆ ಕಾರಣನಾದ್ದರಿಂದ ಸೂರ್ಯನಿಗೆ ಮೂರುವಿಧವಾದ ಸಂಬಂಧವಿರುವುದು.

**ವೃಷಭೋ ವರ್ಷಿತಾ ರೋರವೀತಿ ಶಬ್ದಂ ಕರೋತಿ ವೃಷ್ಟ್ಯಾದಿದ್ವಾರಾ**—ಸೂರ್ಯನು ತನ್ನ ರಶ್ಮಿ ಗಳ ಮೂಲಕ ಜಲಾಶಯಗಳ ರಸಾದಿಗಳನ್ನು ಆಕರ್ಷಿಸಿ (ಹೀರಿ) ಅವು ಮೇಘರೂಪದಲ್ಲಿ ವೃಷ್ಟಿಯನ್ನು ಸುರಿಸುವಂತೆ ಮಾಡುವವನಾದ್ದರಿಂದ ವೃಷಭ ಎಂದರೆ ವೃಷ್ಟಿಯನ್ನು ಸುರಿಸುವವನು ಎಂದು ಹೇಳಲ್ಪಡುವನು. ಮತ್ತು ವೃಷ್ಟಿಕಾಲ ದಲ್ಲಿ ಸಿಡಿಲು ಗುಡುಗು ಮೊದಲಾದ ಶಬ್ದಗಳಿರುವುದರಿಂದ ಶಬ್ದವನ್ನು ಮಾಡುತ್ತಿರುವನು (ಶಬ್ದಗಳಿಗೆ ಕಾರಣಭೂತನು) ಎಂದೂ ಹೇಳಲ್ಪಡುವನು.

**ಮಹೋ ದೇವೋ ಮರ್ತ್ಯಾನ್ ಆ ವಿವೇಶ—ಸ ಮಹಾನ್ ದೇವೋ ಮರ್ತ್ಯಾನಾಂ ನಿಯಂತೃತಯಾ ತಾನ್ ಪ್ರವಿಶತಿ । ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ (ಋ. ಸಂ. ೧-೧೧೫.೧) ಇತಿ ಹಿ ಶ್ರುತಂ॥** ಇಂತಹ ಮಹಾಮಹಿಮನಾದ ಸೂರ್ಯನು ಸರ್ವಪ್ರಾಣಿಗಳ ಶರೀರದಲ್ಲಿಯೂ ಅಂತರಾತ್ಮನಾಗಿ, ಅವರನ್ನು ಪ್ರೇರಿಸು ವುದಕ್ಕಾಗಿ ಪ್ರವೇಶಿಸುವನು. ಸೂರ್ಯನಿಂದಲೇ ಸಕಲಪ್ರಾಣಿಗಳೂ ಜೀವಿಸುವುವು. ಸೂರ್ಯನೇ ಸಕಲ ಚರಾಚರಾ ತ್ಮಕವಾದ ಪ್ರಾಣಿವರ್ಗಕ್ಕೆ ಪ್ರೇರಕನಾಗಿ ಅವುಗಳಲ್ಲಿ ಅಂತರಾತ್ಮಭಾವದಿಂದ ನೆಲಸಿರುವನು ಎಂಬ ವಿಷಯವನ್ನು **ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಎಂಬ ಶ್ರುತಿವಾಕ್ಯವು ಸಮರ್ಥಿಸುವುದು.

ಈ ರೀತಿ ಸೂರ್ಯಪರವಾದ ಅರ್ಥವಿವರಣೆ ಇರುವುದು. ಅಪಃ ಮೊದಲಾದ ಇತರ ದೇವತೆಗಳ ಪರ ವಾಗಿಯೂ ಇದೇ ರೀತಿ ಅರ್ಥವನ್ನು ಊಹಿಸಿಕೊಳ್ಳಬೇಕು. ಶಬ್ದಶಾಸ್ತ್ರವಿಶಾರದರು (ವೈಯಾಕರಣರು) ಚತ್ವಾರಿ ಶೃಂಗಾ ಎಂಬ ಪದಗಳಿಗೆ ಶಬ್ದಬ್ರಹ್ಮಪರವಾಗಿ ನಾಮ, ಆಖ್ಯಾತ, ಉಪಸರ್ಗ, ನಿಪಾತ ಎಂಬ ನಾಲ್ಕು ವಿಧ ಶಬ್ದ ಗಳೆಂದು ಅಭಿಪ್ರಾಯಪಡುವರು. ಇತರರು ಬೇರೆ ವಿಧವಾಗಿ ಹೇಳುವರು. ಆದುದರಿಂದ ಆಯಾ ಸಂದರ್ಭಕ್ಕನು ಸಾರವಾಗಿ ಅರ್ಥಮಾಡಬೇಕು.

ಋ. ಸಂ. ಭಾಗ. ೧ ಪೇಜು 40 ರಲ್ಲಿ ಸಾಯಣಭಾಷ್ಯ ಭೂಮಿಕೆಯನ್ನು ವಿವರಿಸುವಾಗ ಭಾಷ್ಯಕಾರರು ಈ ಋಕ್ಕಿಗೆ ಸ್ವಲ್ಪ ವ್ಯತ್ಯಸ್ತವಾಗಿ ಅರ್ಥವನ್ನು ವಿವರಿಸಿರುವರು. ಅದನ್ನು ಅಲ್ಲಿ ನೋಡಿ ತಿಳಿಯಬಹುದು.

॥ ಸಂಹಿತಾಪಾಠಃ ॥

ತ್ರಿಧಾ ಹಿತಂ ಪಣಿಭಿರ್ಗುಹ್ಯಮಾನಂ ಗವಿ ದೇವಾಸೋ ಘೃತಮನ್ವವಿಂದನ್।
ಇಂದ್ರ ಏಕಂ ಸೂರ್ಯ ಏಕಂ ಜಜಾನ ವೇನಾದೇಕಂ ಸ್ವಧಯಾ ನಿಷ್ಟ-
ತಕ್ಷುಃ ॥ ೪ ॥

॥ ಪದಪಾಠಃ ॥

ತ್ರಿಧಾ । ಹಿತಂ । ಪಣಿಽಭಿಃ । ಗುಹ್ಯಮಾನಂ । ಗವಿ । ದೇವಾಸಃ । ಘೃತಂ । ಅನು । ಅವಿಂದನ್ ।
ಇಂದ್ರಃ । ಏಕಂ । ಸೂರ್ಯಃ । ಏಕಂ । ಜಜಾನ । ವೇನಾತ್ । ಏಕಂ । ಸ್ವಧಯಾ । ನಿಃ । ತತಕ್ಷುಃ ॥೪॥

॥ ಸಾಯಣಭಾಷ್ಯಂ ॥

ಪಣಿಭಿರಸುರೈರ್ಗವಿ ಗೋಷು ತ್ರಿಧಾ ಕ್ಷೀರದಧ್ಯಾಜ್ಯಭೇದೇನ ತ್ರಿಪ್ರಕಾರಂ ಹಿತಂ ನಿಹಿತಂ ಗುಹ್ಯಮಾನಂ ಗೋಪಿತಂ ಘೃತಂ ದೀಪ್ತಂ ರಸರೂಪಂ ವಾ ದ್ರವ್ಯಂ ದೇವಾಸೋ ದೇವಾ ಅನ್ವವಿಂದನ್। ಅಲಭಂತ। ತತ್ರೇಂದ್ರ ಏಕಂ ಕ್ಷೀರಂ ಜಜಾನ। ಉದಪಾದಯತ್। ಸೂರ್ಯ ಏಕಂ ಜಜಾನ। ವೇನಾತ್ಕಾಂತಿಮತೋಽಗ್ನೇರ್ಗಮನವತೋ ವಾಯೋರ್ವೈಕಂ ಘೃತಂ ಸ್ವಧಯಾನ್ನೇನ ನಿಮಿತ್ತೇನ ದ್ರವ್ಯೇಣ ವಾ ಸಾಧನೇನ ನಿಷ್ಟತಕ್ಷುಃ। ನಿರಪಾದಯನ್ ದೇವಾಃ॥

॥ ಪ್ರತಿಪದಾರ್ಥ ॥

ಪಣಿಭಿಃ—ಅಸುರರಿಂದ। ಗವಿ—ಗೋವುಗಳಲ್ಲಿ। ತ್ರಿಧಾ—(ಕ್ಷೀರ, ದಧಿ, ಆಜ್ಯ, ಎಂಬ) ಮೂರು ಪ್ರಕಾರವಾಗಿ। ಹಿತಂ—ಇಡಲ್ಪಟ್ಟುದೂ। ಗುಹ್ಯಮಾನಂ—ರಹಸ್ಯವಾದುದೂ ಆದ। ಘೃತಂ—ಘೃತವನ್ನು। ದೇವಾಸಃ—ದೇವತೆಗಳು। ಅನ್ವವಿಂದನ್—ಪಡೆದರು (ಅವುಗಳಲ್ಲಿ)। ಇಂದ್ರಃ—ಇಂದ್ರನು। ಏಕಂ—ಒಂದು ತತ್ತ್ವವನ್ನು। ಜಜಾನ—ಉತ್ಪನ್ನಮಾಡಿದನು। ಸೂರ್ಯಃ—ಸೂರ್ಯನು। ಏಕಂ—ಇನ್ನೊಂದು ತತ್ತ್ವವನ್ನು (ಉತ್ಪನ್ನಮಾಡಿದನು)। ವೇನಾತ್—ಕಾಂತಿಯುತನಾದ ಅಗ್ನಿಯಿಂದ। ಏಕಂ—ಮೂರನೆಯ ತತ್ತ್ವವನ್ನು। ಸ್ವಧಯಾ—ಸ್ವಧಾನಿಮಿತ್ತವಾಗಿ। ನಿಷ್ಟತಕ್ಷುಃ—ದೇವತೆಗಳು ಉತ್ಪನ್ನಮಾಡಿದರು.

॥ ಭಾವಾರ್ಥ ॥

ಅಸುರರಿಂದ ಗೋವುಗಳಲ್ಲಿ ಕ್ಷೀರ, ದಧಿ, ಆಜ್ಯ ಎಂಬ ಮೂರು ಪ್ರಕಾರವಾಗಿ ಇಡಲ್ಪಟ್ಟುದೂ, ರಹಸ್ಯವಾದುದೂ ಆದ ಘೃತವನ್ನು ದೇವತೆಗಳು ಪಡೆದರು. ಇವುಗಳಲ್ಲಿ ಇಂದ್ರನು ಒಂದನ್ನೂ ಸೂರ್ಯನು ಇನ್ನೊಂದು ತತ್ತ್ವವನ್ನೂ ಉತ್ಪನ್ನಮಾಡಿದರು. ದೇವತೆಗಳು ಕಾಂತಿಯುತನಾದ ಅಗ್ನಿಯಿಂದ ಮೂರನೆಯ ತತ್ತ್ವವನ್ನು ಸ್ವಧಾನಿಮಿತ್ತವಾಗಿ ಉತ್ಪನ್ನಮಾಡಿದರು.

## English Translation.

The gods discovered the Ghee concealed by the panis, placed three-fold in the cow : Indra generated one (portion), Surya another, the (other gods) fabricated one from the resplendent (Agni), for the sake of the oblation.



॥ ಸಂಹಿತಾಪಾಠಃ ॥

ಏತಾ ಅರ್ಷಂತಿ ಹೃದ್ಯಾತ್ಸಮುದ್ರಾಚ್ಛತವ್ರಜಾ ರಿಪುಣಾ ನಾವಚಕ್ಷೇ ।
ಘೃತಸ್ಯ ಧಾರಾ ಅಭಿ ಚಾಕಶೀಮಿ ಹಿರಣ್ಯಯೋ ವೇತಸೋ ಮಧ್ಯ ಆಸಾಂ॥

॥ ಪದಪಾಠಃ ॥

ಏತಾಃ । ಅರ್ಷಂತಿ । ಹೃದ್ಯಾತ್ । ಸಮುದ್ರಾತ್ । ಶತಽವ್ರಜಾಃ । ರಿಪುಣಾ । ನ । ಅವಽಚಕ್ಷೇ ।
ಘೃತಸ್ಯ । ಧಾರಾಃ । ಅಭಿ । ಚಾಕಶೀಮಿ । ಹಿರಣ್ಯಯಃ । ವೇತಸಃ । ಮಧ್ಯೇ । ಆಸಾಂ ॥ ೫ ॥

॥ ಸಾಯಣಭಾಷ್ಯಂ ॥

ಏತಾ ಆಪೋ ಘೃತಧಾರಾ ವಾರ್ಷಂತಿ। ಅಧಃ ಪತಂತಿ। ಶತವ್ರಜಾ ಅಪರಿಮಿತಗತಯಃ ಸತ್ಯೋ ಹೃದ್ಯಾದ್ಧೃದಯಂಗಮಾತ್ಸಮುದ್ರಾದಂತರಿಕ್ಷಾದ್ರಿಪುಣಾ ಜಲನೋಕಪ್ರತಿಬಂಧಕಾರಿಣಾ ಶತ್ರುಣಾ ವೃತ್ರೇಣ ನಾವಚಕ್ಷೇ ನ ಅವದರ್ಶನಾಯ ಯಥಾದೃಷ್ಟಂ ಭವತಿ ತಥಾರ್ಷಂತಿ । ತಾ ಘೃತಸ್ಯ ಧಾರಾ ಅಭಿ ಚಾಕಶೀಮಿ । ಅಭಿಪಶ್ಯಾಮಿ । ಕುತ್ರೇತಿ ತದುಚ್ಯತೇ । ಹಿರಣ್ಯಯೋ ಹಿರಣ್ಮಯೋ ವೇತಸೋಽಪ್ಸಂಭವೋಽಗ್ನಿರ್ವೈದ್ಯುತ ಆಸಾಮಪಾಂ ಮಧ್ಯೇ ವರ್ತತ ಇತಿ ಶೇಷಃ। ಅತ್ರ ಘೃತಸ್ಯ ಧಾರಾ ಅಭಿ ಚಾಕಶೀಮಿತ್ಯನೇನ ಚರಮಪಾದೇನ ಹೋಮಾಧಾರೋಽಗ್ನಿರ್ವೈದ್ಯುತೋಽಗ್ನಿರಾದಿತ್ಯೋ ವೋಕ್ತಃ ॥

॥ ಪ್ರತಿಪದಾರ್ಥ ॥

ಹೃದಾತ್—ಹೃದಯಂಗಮವಾದ । ಸಮುದ್ರಾತ್—ಅಂತರಿಕ್ಷದಿಂದ । ಏತಾಃ--ಈ ಉದಕಗಳು । ಶತವ್ರಜಾಃ—ನೂರಾರು ಗತಿಗಳುಳ್ಳವಾಗಿ । ಅರ್ಷಂತಿ—ಪ್ರವಹಿಸುತ್ತವೆ (ಆದರೆ) । ರಿಪುಣಾ—ಪ್ರತಿಬಂಧಕನಾದ ವೃತ್ರನಿಂದ । ನ ಅವಚಕ್ಷೇ—ನೋಡಲ್ಪಡುವುದಿಲ್ಲ । ಘೃತಸ್ಯ—ಈ ಉದಕದ । ಧಾರಾಃ—ಪ್ರವಾಹಗಳನ್ನು । ಅಭಿ ಚಾಕಶೀಮಿ—ಸುತ್ತಲೂ ನೋಡುತ್ತೇನೆ । ಆಸಾಂ—ಈ ಉಧಕಪ್ರವಾಹಗಳ । ಮಧ್ಯೇ—ಮಧ್ಯದಲ್ಲಿ । ಹಿರಣ್ಯಯಃ—ಹಿರಣ್ಯರೂಪನಾದ । ವೇತಸಃ—ವೈದುತ್ಯಾಗ್ನಿಯು (ಸ್ಥಿತನಾಗಿದ್ದಾನೆ).

॥ ಭಾವಾರ್ಥ ॥

ಹೃದಯಂಗಮವಾದ ಅಂತರಿಕ್ಷದಿಂದ ಉದಕಗಳು ನೂರಾರು ಗತಿಗಳುಳ್ಳವಾಗಿ ಪ್ರವಹಿಸುತ್ತವೆ. ಆದರೆ ಅವು ಪ್ರವಾಹಪ್ರತಿಬಂಧಕವಾದ ವೃತ್ರನಿಂದ ನೋಡಲ್ಪಡುವುದಿಲ್ಲ. ನಾನು ಈ ಉದಕಗಳನ್ನು ಸುತ್ತಲೂ ನೋಡುತ್ತೇನೆ. ಈ ಉದಕಪ್ರವಾಹಗಳ ಮಧ್ಯದಲ್ಲಿ ಹಿರಣ್ಯರೂಪನಾದ ವೈದ್ಯುತಾಗ್ನಿಯು ಸ್ಥಿತನಾಗಿದ್ದಾನೆ

## English Translation.

These hundred-channelled showers fall from the heart-delighting firmament, unobserved by the hostile (cloud) : I look upon these showers of Ghi, (and behold) the golden Vetasa in the midst of them.



॥ ಸಂಹಿತಾಪಾಠಃ ॥

ಸಮ್ಯಕ್ಸ್ರವಂತಿ ಸರಿತೋ ನ ಧೇನಾ ಅಂತರ್ಹೃದಾ ಮನಸಾ ಪೂಯಮಾನಾಃ ।
ಏತೇ ಅರ್ಷಂತ್ಯೂರ್ಮಯೋ ಘೃತಸ್ಯ ಮೃಗಾಇವ ಕ್ಷಿಪಣೋರೀಷಮಾಣಾಃ ॥ ೬ ॥

॥ ಪದಪಾಠಃ ॥

ಸಮ್ಯಕ್ । ಸ್ರವಂತಿ । ಸರಿತಃ । ನ । ಧೇನಾಃ । ಅಂತಃ । ಹೃದಾ । ಮನಸಾ । ಪೂಯಮಾನಾಃ ।
ಏತೇ । ಅರ್ಷಂತಿ । ಊರ್ಮಯಃ । ಘೃತಸ್ಯ । ಮೃಗಾಃಇವ । ಕ್ಷಿಪಣೋಃ । ಈಷಮಾಣಾಃ ॥ ೬ ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇರುಪರಿ ಸಮ್ಯಕ್ ಸ್ರವಂತಿ । ಕ್ಷರಂತಿ । ಘೃತಸ್ಯ ಧಾರಾಃ । ಕಿಮಿವ । ಸರಿತೋ ನ ಧೇನಾಃ ಪ್ರೀಣಯಿತ್ರ್ಯೋ ನದ್ಯ ಇವ । ಅಂತರ್ಹೃದಾ ಮನಸಾ ಹೃದಯಮಧ್ಯಗತೇನ ಚಿತ್ತೇನ । ಧ್ಯಾನಾತ್ಮಕೇನೇತ್ಯರ್ಥಃ । ತೇನ ಪೂಯಮಾನಾಃ ಶುದ್ಧೀಕೃತಾಃ । ತದೇವೋಚ್ಯತೇ । ಏತೇ ಭಾವನಾಸಚಿವೇನೇತಿ ಯಾವತ್ । ತೇನ ಪೂಯಮಾನಾಃ ಶುದ್ಧೀಕೃತಾಃ । ತದೇವೋಚ್ಯತೇ । ಏತೇ ಘೃತಸ್ಯೋರ್ಮಯೋ ರಸಾ ಅರ್ಷಂತಿ । ಗಚ್ಛಂತಿ । ಜುಹ್ವಾಃ ಸಕಾಶಾದಗ್ನೇರುಪರಿ ಪತಂತಿ । ಕಿಮಿವ । ಕ್ಷಿಪಣೋಃ ಕ್ಷೇಪಕಾದ್ವ್ಯಾಧಾದೀಷಮಾಣಾಃ ಪಲಾಯಮಾನಾ ಮೃಗಾ ಇವ । ತೇ ಯಥಾ ಕಕ್ಷಂ ಪ್ರವಿಶಂತಿ ತದ್ವತ್ । ಅನೇನ ಶೈಘ್ರ್ಯಮುಕ್ತಂ ಭವತಿ ॥

॥ ಪ್ರತಿಪದಾರ್ಥ ॥

ಘೃತಸ್ಯ—ಘೃತದ | ಏತೇ ಊರ್ಮಯಃ—ಅಲೆಗಳಂತಿರುವ ಈ ಧಾರೆಗಳು | ಅಂತರ್ಹೃದಾ—ಹೃದಯಾಂತರ್ಗತವಾದ (ಭಕ್ತಿಪೂರ್ವಕವಾದ) | ಮನಸಾ—ಮನಸ್ಸಿನಿಂದ | ಪೂಯಮಾನಾಃ— ಪವಿತ್ರಿತವಾಗಿ ಮಾಡಲ್ಪಟ್ಟು | ಧೇನಾಃ—ತೃಪ್ತಿಕಾರಕಗಳಾದ | ಸರಿತಃ ನ—ಪ್ರವಾಹಗಳಂತೆ | ಸಮ್ಯಕ್—ಪೂರ್ಣವಾಗಿ | ಸ್ರವಂತಿ—ಪ್ರವಹಿಸುತ್ತವೆ | ಕ್ಷಿಪಣೋಃ—ಬೇಟೆಗಾರನಿಂದ | ಈಷಮಾಣಾಃ—ತಪ್ಪಿಸಿಕೊಂಡು ಓಡುತ್ತಿರುವ | ಮೃಗಾ ಇವ—ಮೃಗಗಳಂತೆ (ಮೃಗಗಳು ವೇಗದಿಂದ ಪೊದೆಯಲ್ಲಿ ಪ್ರವೇಶಿಸುವಂತೆ) | ಅರ್ಷಂತಿ—(ಅಗ್ನಿಯಲ್ಲಿ) ಪ್ರವೇಶಿಸುತ್ತವೆ.

॥ ಭಾವಾರ್ಥ ॥

ಅಲೆಗಳಂತಿರುವ ಈ ಘೃತದ ಧಾರೆಗಳು ಹೃದಯಾಂತರ್ಗತವಾದ ಎಂದರೆ ಭಕ್ತಿಪೂರ್ವಕವಾದ ಮನಸ್ಸಿನಿಂದ ಪವಿತ್ರಿತವಾಗಿ ಮಾಡಲ್ಪಟ್ಟು ತೃಪ್ತಿಕಾರಕಗಳಾದ ಪ್ರವಾಹಗಳಂತೆ ಪೂರ್ಣವಾಗಿ ಪ್ರವಹಿಸುತ್ತವೆ. ಬೇಟೆಗಾರನಿಂದ ತಪ್ಪಿಸಿಕೊಂಡು ಓಡುತ್ತಿರುವ ಮೃಗಗಳು ವೇಗದಿಂದ ಪೊದೆಯಲ್ಲಿ ಪ್ರವೇಶಿಸುವಂತೆ ಇವು ಅಗ್ನಿಯಲ್ಲಿ ಪ್ರವೇಶಿಸುತ್ತವೆ.

## English Translation.

They flow uninterruptedly like pleasing rivers, purified by the mind that is seated in the heart: these streams of Ghi descend (upon the fire), like deer flying from the hunter.

॥ ಸಂಹಿತಾಪಾಠಃ ॥

ಸಿಂಧೋರಿವ ಪ್ರಾಧ್ವನೇ ಶೂಘನಾಸೋ ವಾತಪ್ರಮಿಯಃ ಪತಯಂತಿ ಯಹ್ವಾಃ |
ಘೃತಸ್ಯ ಧಾರಾ ಅರುಷೋ ನ ವಾಜೀ ಕಾಷ್ಠಾ ಭಿಂದನ್ನೂರ್ಮಿಭಿಃ ಪಿನ್ವಮಾನಃ ॥ ೭ ॥

॥ ಪದಪಾಠಃ ॥

ಸಿಂಧೋಃऽಇವ | ಪ್ರಅಧ್ವನೇ | ಶೂಘನಾಸಃ | ವಾತಃಪ್ರಮಿಯಃ | ಪತಯಂತಿ | ಯಹ್ವಾಃ ||
ಘೃತಸ್ಯ | ಧಾರಾಃ | ಅರುಷಃ | ನ | ವಾಜೀ | ಕಾಷ್ಠಾಃ | ಭಿಂದನ್ | ಊರ್ಮಿಭಿಃ | ಪಿನ್ವಮಾನಃ || ೭ ||

॥ ಸಾಯಣಭಾಷ್ಯಂ ॥

ಸಿಂಧೋಃ ಸ್ಯಂದಮಾನಾಯಾ ನದ್ಯಾಃ ಸಕಾಶಾದಿವೋದಕಾನೀವ ಪ್ರಾಧ್ವನೇ ಪ್ರವಣವತಿ ದೇಶೇ ಶೂಘನಾಸ ಆಶುಗಂತ್ರ್ಯಃ। ಆಶು ಇತಿ ಚ ಶು ಇತಿ ಚ ಕ್ಷಿಪ್ರನಾಮನೀ ಭವತ ಇತಿ ನಿರುಕ್ತಂ। ೬-೧। ವಾತಪ್ರಮಿಯೋ ವಾಯುವತ್ಪ್ರಕೃಷ್ಟವೇಗಾ ಯಹ್ವಾ ಮಹತ್ಯೋ ಘೃತಸ್ಯ ಧಾರಾಃ ಪತಯಂತಿ। ಗಚ್ಛಂತ್ಯಗ್ನೇರುಪರಿ। ಘೃತಮುದಕಮಿತಿ ಪಕ್ಷೇ ಸಿಂಧೋರಿವೇತ್ಯತ್ರೇವಶಬ್ದೋಽನರ್ಥಕಃ। ಸ್ಯಂದನ-ಸಾಧನಾದಂತರಿಕ್ಷಾದುಕ್ತಲಕ್ಷಣಾ ಘೃತಧಾರಾ ಉದಕಧಾರಾಃ ಪತಯಂತಿ। ಗಚ್ಛಂತಿ ಭೂಮೌ। ಕಿಂಚ ಘೃತಸಂಸ್ತ್ಯಾಯಃ ಕಾಷ್ಠಾ ಮರ್ಯಾದಾಭೂತಾನ್ಪರಿಧೀನ್ಭಿಂದನ್ನೂರ್ಮಿಭೀ ರಸೈಃ ಪಿನ್ವಮಾನೋ ವರ್ಧಮಾನೋ ಭವತಿ। ಉದಕಮಿತಿ ಪಕ್ಷೇ ಕಾಷ್ಠಾಃ ಕ್ರಾಂತ್ವಾ ಸ್ಥಿತಾ ದಿಶೋ ಭಿಂದನ್ನೂರ್ಮಿಭಿಸ್ತರಂಗೈಃ ಪಿನ್ವಮಾನೋ ಭವತಿ। ತತ್ರ ದೃಷ್ಟಾಂತಃ। ಅರುಷೋ ನ ವಾಜೀ ಆರೋಚಮಾನೋ ಗರ್ವೇಣ ಗಮನ-ಶೀಲೋಽಶ್ವ ಇವ। ಸ ಯಥಾ ಭಿಂದನ್ಪಿನ್ವಮಾನಶ್ಚ ಭವತಿ ತದ್ವತ್ ॥

॥ ಪ್ರತಿಪದಾರ್ಥ ॥

ಪ್ರಾಧ್ವನೇ—ಪರ್ವತದ ಕಣಿವೆ ಪ್ರದೇಶದಲ್ಲಿ। ಶೂಘನಾಸಃ—ವೇಗವಾಗಿ ಹರಿಯುವ। ಸಿಂಧೋಃ ಇವ—ನದಿಯ ಪ್ರವಾಹದಂತೆ। ಯಹ್ವಾಃ—ಪ್ರಭೂತವಾದ ಪ್ರಮಾಣವುಳ್ಳವೂ। ವಾತಪ್ರಮಿಯಃ—ವಾಯುವಿನಂತೆ ವೇಗವುಳ್ಳವೂ ಆದ। ಘೃತಸ್ಯ ಧಾರಾಃ—ಘೃತದ ಧಾರೆಗಳು। ಅರುಷಃ—ವೇಗಗಾಮಿಯಾದ। ವಾಜೀ ನ—ಅಶ್ವದಂತೆ। ಕಾಷ್ಠಾಃ—ಕಾಷ್ಠಗಳನ್ನು (ಪರಿಧಿಗಳನ್ನು)। ಭಿಂದನ್—ಭೇದಿಸುತ್ತಲೂ। ಊರ್ಮಿಭಿಃ—ಅಲೆಗಳ ರೂಪದ ರಸಗಳಿಂದ। ಪಿನ್ವಮಾನಃ—ವೃದ್ಧಿಯನ್ನು ಹೊಂದುತ್ತಲೂ। ಪತಯಂತಿ—ಅಗ್ನಿಯನ್ನು ಪ್ರವೇಶಿಸುತ್ತವೆ.

॥ ಭಾವಾರ್ಥ ॥

ಪರ್ವತದ ಕಣಿವೆಪ್ರದೇಶದಲ್ಲಿ ಕೆಳಭಾಗಕ್ಕೆ ವೇಗವಾಗಿ ಹರಿಯುವ ನದಿಯ ಪ್ರವಾಹದಂತೆ ಪ್ರಭೂತವಾದ ಪ್ರಮಾಣವುಳ್ಳವೂ, ವಾಯುವಿನಂತೆ ವೇಗವುಳ್ಳದ್ದೂ ಆದ ಘೃತದ ಧಾರೆಗಳು ವೇಗಗಾಮಿಯಾದ ಅಶ್ವದಂತೆ ಪರಿಧಿಗಳನ್ನು ಭೇದಿಸುತ್ತಲೂ ಅಲೆಗಳ ರೂಪದ ರಸಗಳಿಂದ ವೃದ್ಧಿಯನ್ನು ಹೊಂದುತ್ತಲೂ ಅಗ್ನಿಯನ್ನು ಪ್ರವೇಶಿಸುತ್ತವೆ.

## English Translation.

The streams of Ghi fall copious, swift as the wind, and rapid as the waters of a river down a declivity, breaking through the confining banks, and hurrying on with their waves, like a high-spirited steed.



॥ ಸಂಹಿತಾಪಾಠಃ ॥

ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಂ ।

ಘೃತಸ್ಯ ಧಾರಾಃ ಸಮಿಧೋ ನಸಂತ ತಾ ಜುಷಾಣೋ ಹರ್ಯತಿ ಜಾತವೇದಾಃ ॥ ೮ ॥

॥ ಪದಪಾಠಃ ॥

ಅಭಿ । ಪ್ರವಂತ । ಸಮನಾऽಇವ । ಯೋಷಾಃ । ಕಲ್ಯಾಣ್ಯಃ । ಸ್ಮಯಮಾನಾಸಃ । ಅಗ್ನಿಂ ।

ಘೃತಸ್ಯ । ಧಾರಾಃ । ಸಂऽಇಧಃ । ನಸಂತ । ತಾಃ । ಜುಷಾಣಃ । ಹರ್ಯತಿ । ಜಾತऽವೇದಾಃ ॥ ೮ ॥

॥ ಸಾಯಣಭಾಷ್ಯಂ ॥

ಘೃತಸ್ಯ ಧಾರಾ ಅಮುಮಗ್ನಿಂ ಸಮನೇವ ಸಮಾನಮನಸ್ಕಾ ಯೋಷಾ ಯೋಷಿತಃ ಪತಿಮಿವಾಭಿ ಪ್ರವಂತ । ಅಭಿನಮಯಂತಿ । ನಿಮಗ್ನಂ ಕುರ್ವಂತಿ । ಕೀದೃಶ್ಯಸ್ತಾಃ । ಕಲ್ಯಾಣ್ಯೋ ಭದ್ರರೂಪಾಃ ಸ್ಮಯಮಾನಾಸೋ ಹಸಂತ್ಯಃ । ಕಿಂಚ ತಾಃ ಸಮಿಧಃ ಸಮ್ಯಗ್ದೀಪಯಿತ್ರ್ಯಃ ಸತ್ಯೋ ನಸಂತ । ವ್ಯಾಪ್ನುವಂತಿ । ತಾ ಏವ ಧಾರಾ ಜುಷಾಣಃ ಪ್ರೀಯಮಾಣಃ ಸೇವಮಾನೋ ವಾಯಂ ಜಾತವೇದಾ ಹರ್ಯತಿ । ಕಾಮಯತೇ । ಘೃತಶಬ್ದಸ್ಯೋದಕಮಿತಿ ಪಕ್ಷೇಽಗ್ನಿಜಾತವೇದಃಶಬ್ದಾಭ್ಯಾಂ ವೈದ್ಯುತೋಽಗ್ನಿರಾದಿತ್ಯೋ ವಾ ಗೃಹ್ಯತೇ । ತಂ ದೇವಮುದಕಧಾರಾ ಅಭಿ ಪ್ರವಂತ ನಸಂತ ಚ । ಸ ತಾಶ್ಚ ಹರ್ಯತಿ ॥

॥ ಪ್ರತಿಪದಾರ್ಥ ॥

ಕಲ್ಯಾಣ್ಯಃ—ಮಂಗಳಸ್ವರೂಪವುಳ್ಳವರೂ । ಸ್ಮಯಮಾನಾಸಃ—ಹಸನ್ಮುಖಿಗಳೂ । ಸಮನಾಃ—ಅನುರೂಪವಾದ ಮನಸ್ಸುಳ್ಳವರೂ ಆದ । ಯೋಷಾ ಇವ—ಪತ್ನಿಯರು ಪತಿಯರನ್ನು ಸೇರಿಕೊಳ್ಳುವಂತೆ । ಘೃತಸ್ಯ ಧಾರಾಃ—ಘೃತದ ಧಾರೆಗಳು । ಅಗ್ನಿಂ—ಅಗ್ನಿಯನ್ನು । ಅಭಿ ಪ್ರವಂತ—ಆಲಿಸುವಂತೆ ಸೇರಿಕೊಳ್ಳುತ್ತವೆ । ಸಮಿಧಃ—(ಅಗ್ನಿಯನ್ನು) ಪ್ರಜ್ವಲಿಸುವಂತೆ ಮಾಡುತ್ತಾ । ನಸಂತ—ವ್ಯಾಪಿಸುತ್ತವೆ । ಜಾತವೇದಾಃ—ಜಾತವೇದೋರೂಪನಾದ ಅಗ್ನಿಯು । ತಾಃ—ಆ ಧಾರೆಗಳನ್ನು । ಜುಷಾಣಃ—ಸೇವಿಸುತ್ತಾ । ಹರ್ಯತಿ—ಸ್ವೀಕರಿಸುತ್ತಾನೆ.

॥ ಭಾವಾರ್ಥ ॥

ಮಂಗಳಸ್ವರೂಪವುಳ್ಳವರೂ, ಹಸನ್ಮುಖಿಗಳೂ, ಅನುರೂಪವಾದ ಮನಸ್ಸುಳ್ಳವರೂ ಆದ ಪತ್ನಿಯರು ತಮ್ಮ ಪತಿಗಳನ್ನು ಆಲಂಗಿಸುವಂತೆ ಘೃತದ ಧಾರೆಗಳು ಅಗ್ನಿಯನ್ನು ಆಲಂಗಿಸುವಂತೆ ಸೇರಿಕೊಳ್ಳುತ್ತವೆ. ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾ ವ್ಯಾಪಿಸುತ್ತವೆ. ಜಾತವೇದೋರೂಪನಾದ ಅಗ್ನಿಯು ಆ ಧಾರೆಗಳನ್ನು ಸೇವಿಸುತ್ತಾ ಅವನ್ನು ಸ್ವೀಕರಿಸುತ್ತಾನೆ.

## English Translation.

The streams of Ghi incline to Agni as devoted wives, auspicious and smiling, to a husband: they feed (the flame) like fuel, and Jatavedas, propitiated, accepts them.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಅಭಿನಮಂತೆ ಸಮನಸ ಇವ ಯೋಷಾಃ । ಸಮನಂ ಸಮನನಾದ್ವಾ ಸಂಮಾನನಾದ್ವಾ । ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಮಿತ್ಯೌಪಮಿಕಂ । ಘೃತಸ್ಯ ಧಾರಾ ಉದಕಸ್ಯ ಧಾರಾಃ ಸಮಿಧೋ ನಸಂತ । ನಸತಿರಾಪ್ನೋತಿಕರ್ಮಾ ವಾ ನಮತಿಕರ್ಮಾ ವಾ । ತಾ ಜುಷಾಣೋ ಹರ್ಯತಿ ಜಾತವೇದಾಃ । ಹರ್ಯತಿಃ ಪ್ರೇಪ್ಸಾಕರ್ಮಾ ವಿಹಯತೀತಿ ॥

(ನಿ. ೭-೧೭)

ಒಬ್ಬ ಪುರುಷನಿಗೆ ಅನೇಕ ಪತ್ನಿಯರಿದ್ದರೆ ಅವರೆಲ್ಲರೂ ತಮ್ಮ ಒಬ್ಬನೇ ಆದ ಪತಿಯಲ್ಲಿ ಸಮನಾದ ಮನಸ್ಸನ್ನು (ಪ್ರೀತಿಯನ್ನು) ವ್ಯಕ್ತಪಡಿಸುವರು. ಸಮನಂ ಎಂಬ ಶಬ್ದಕ್ಕೆ ಒಂದೇ ವಿಧವಾದ ಮನಸ್ಸುಳ್ಳವರು. ಏಕೆಂದರೆ ಎಲ್ಲರೂ ಒಂದೆಡೆಯಲ್ಲಿ ವಾಸಿಸುತ್ತಾ (ಉಚ್ಛ್ವಾಸನಿಃಶ್ವಾಸಗಳ ಮೂಲಕ) ಒಂದೇ ಸ್ಥಳದಲ್ಲಿರುವ ವಾಯುವನ್ನು ಸೇವಿಸುತ್ತಾ ಇರುವರೆಂದೂ ಅಥವಾ ಎಲ್ಲರೂ ಒಂದೇ ವಿಧವಾಗಿ (ಒಬ್ಬನೇ ಆದ ತಮ್ಮ ಪತಿಯ ವಿಷಯದಲ್ಲಿ) ಆಲೋಚಿಸುತ್ತಾ ಇರುವರೆಂದೂ ಅರ್ಥವಾಗುವುದು. ಎಂದರೆ ಒಬ್ಬನಲ್ಲಿಯೇ ನೆಟ್ಟ ಮನಸ್ಸುಳ್ಳ ಅನೇಕ ಸ್ತ್ರೀಯರು ಯಾವರೀತಿ ವರ್ತಿಸುವರೋ ಅದರಂತೆ ಕಲ್ಯಾಣ್ಯಃ ಎಂದರೆ ರೂಪಯೌವನಸಂಪನ್ನರಾದ, ಒಳ್ಳೆಯ ಗುಣಗಳುಳ್ಳ ಎಂದರ್ಥವು; ಸ್ಮಯಮಾನಾಸಃ ಎಂದರೆ ಮಂದಹಾಸಯುಕ್ತರಾದ ಎಂದರ್ಥವು. ಇಲ್ಲಿ ಅಗ್ನಿವಿಷಯದಲ್ಲಿ ಒಂದು ಉಪಮಾನವನ್ನು ಸೂಚಿಸಲಾಗಿದೆ. ಒಬ್ಬ ಪುರುಷನ ಅನೇಕ ಪತ್ನಿಯರು ತಮ್ಮ ಪತಿಯ ವಿಷಯದಲ್ಲಿ ಯಾವರೀತಿ ಒಂದೇ ಮನಸ್ಸುಳ್ಳವರಾಗಿರುವರೋ ಮತ್ತು ರೂಪಯೌವನಸಂಪನ್ನರೂ, ಒಳ್ಳೆಯ ಗುಣಗಳುಳ್ಳವರೂ, ಮಂದಹಾಸ ಯುಕ್ತರೂ (ಮುಗುಳುನಗೆಯಿಂದ ಕೂಡಿದವರೂ) ಆಗಿ ಯಾವ ರೀತಿ ತಮ್ಮ ಸ್ವಾಮಿಯಾದ ಪತಿಯನ್ನು ನಮ್ರರಾಗಿ ಸಮೀಪಿಸುವರೋ ಅದರಂತೆ ಅಂತರಿಕ್ಷದಲ್ಲಿರುವ ಉದಕಧಾರೆಗಳು ವೈದ್ಯುತಾಗ್ನಿಯನ್ನು (ಅಥವಾ ಘೃತ ಎಂದರೆ ಆಜ್ಯಧಾರೆಗಳು ಹೋಮಕಾಲದಲ್ಲಿ ಪಾರ್ಥಿವಾಗ್ನಿ ಅಥವಾ ಯಜ್ಞಾಗ್ನಿಯನ್ನು) ಕೆಳಗಿಳಿದು ಬಂದು ಸಮೀಪಿಸುತ್ತವೆ. ಮತ್ತು ಆ ಅಗ್ನಿಯಲ್ಲಿ ಐಕ್ಯವಾಗುತ್ತವೆ. ನಸತಿ ಧಾತುವಿಗೆ ಹೊಂದುವುದು ಅಥವಾ ಬಗ್ಗುವುದು ಎಂಬರ್ಥವಿರುವುದು. ಈ ಉದಕಧಾರೆ ಅಥವಾ ಘೃತಧಾರೆಯಿಂದ ಸೇವಿಸಲ್ಪಟ್ಟ ಅಗ್ನಿಯು (ಮಧ್ಯಮಸ್ಥಾನನಾದ ವೈದ್ಯುತಾಗ್ನಿ ಅಥವಾ ಪಾರ್ಥಿವಾಗ್ನಿಯೂ) ಸಂತೋಷವನ್ನು (ತೃಪ್ತಿಯನ್ನು) ಪಡೆಯುತ್ತಾನೆ. ಹರ್ಯತಿ ಧಾತುವಿಗೆ ಪುನಃಪುನಃ ಹೊಂದ ಬೇಕೆಂದು ಅಪೇಕ್ಷಿಸುವುದು ಎಂದರ್ಥವು. ಅಗ್ನಿಯು ಘೃತಧಾರೆಗಳನ್ನು ಮತ್ತೆ ಮತ್ತೆ ಬಯಸುವನೆಂದಭಿಪ್ರಾಯವು.

॥ ಸಂಹಿತಾಪಾಠಃ ॥

ಕನ್ಯಾ಼ಇವ ವಹತುಮೇತವಾ ಉ ಅಂಜ್ಯಂಜಾನಾ ಅಭಿ ಚಾಕಶೀಮಿ ।
ಯತ್ರ ಸೋಮಃ ಸೂಯತೇ ಯತ್ರ ಯಜ್ಞೋ ಘೃತಸ್ಯ ಧಾರಾ ಅಭಿ
ತತ್ಪವಂತೇ ॥ ೯ ॥

॥ ಪದಪಾಠಃ ॥

ಕನ್ಯಾಃಽಇವ । ವಹತುಂ । ಏತವೈ । ಊಂ ಇತಿ । ಅಂಜಿ । ಅಂಜಾನಾಃ । ಅಭಿ । ಚಾಕಶೀಮಿ ।
ಯತ್ರ । ಸೋಮಃ । ಸೂಯತೇ । ಯತ್ರ । ಯಜ್ಞಃ । ಘೃತಸ್ಯ । ಧಾರಾಃ । ಅಭಿ । ತತ್ । ಪವಂತೇ ॥

॥ ಸಾಯಣಭಾಷ್ಯಂ ॥

ಕನ್ಯಾ ಇವಾನೂಢಾ ಬಾಲಿಕಾ ಇವ । ತಾ ಯಥಾ ವಹತುಮುದ್ವಾಹಂ ಪ್ರಾಪ್ತುಮೇತವಾ ಉ ಏತುಂ ಪತಿಂ ಗಂತುಮಂಜ್ಯಂಜಕಮಾಭರಣಂ ತೇಜೋ ವಾಂಜಾನಾ ವ್ಯಂಜಯಂತ್ಯಃ । ಏವಂಕುರ್ವತ್ಯಃ ಕನ್ಯಾ ಇವ ಸ್ವಭರ್ತೃಭೂತಮಾಧ್ವರಂ ವೈದ್ಯುತಂ ವಾಗ್ನಿಮಾದಿತ್ಯಂ ವಾ ವಹತುಮೇಷುಮಂಜಿ ವ್ಯಂಜಕಂ ತದೀಯಂ ರೂಪಮಂಜಾನಾ ವ್ಯಂಜಯಂತೀರ್ಘೃತಸ್ಯ ಧಾರಾ ಅಭಿ ಚಾಕಶೀಮಿ । ಅಭಿಪಶ್ಯಾಮಿ । ಘೃತೇನೋದಕೇನ ಚ ಭೌಮಸ್ಯ ವೈದ್ಯುತಸ್ಯ ಚಾಗ್ನೇಃ ಪ್ರಜ್ವಲನಂ ಪ್ರಸಿದ್ಧಂ । ಕಿಂಚ ತಾ ಧಾರಾಃ ಸೋಮಃ ಸೂಯತೇ ಯತ್ರ ಯತ್ರ ಚೇತರೋ ಯಜ್ಞಸ್ತಾಯತೇ ತತ್ತಂ ಯಜ್ಞಮಭಿಲಕ್ಷ್ಯ ಪವಂತೇ । ಗಚ್ಛಂತಿ ಖಲು ॥

॥ ಪ್ರತಿಪದಾರ್ಥ ॥

ವಹತುಂ—ವಿವಾಹಾರ್ಥವಾಗಿ । ಏತವೈ—ಹೊರಡಲು । ಅಂಜಿ—ಅಂಜನ ಮತ್ತು ಆಭರಣಾದಿಗಳಿಂದ । ಅಂಜಾನಾಃ—ಅಲಂಕೃತರಾಗಿರುವ । ಕನ್ಯಾ ಇವ—ಕನ್ಯೆಯರಂತೆ ಆಕರ್ಷಕವಾಗಿರುವ । ಘೃತಸ್ಯ ಧಾರಾಃ—ಘೃತದ ಧಾರೆಗಳು । ಯತ್ರ—ಎಲ್ಲಿ । ಸೋಮಃ—ಸೋಮವು । ಸೂಯತೇ—ಹಿಂಡಲ್ಪಡುವುದೋ । ಯತ್ರ—ಎಲ್ಲಿ । ಯಜ್ಞಃ—ಯಜ್ಞವು ನೆರವೇರುವುದೋ । ತತ್—ಆ ಯಜ್ಞಾಗ್ನಿಯನ್ನು । ಅಭಿ ಪವಂತೇ—ಹೋಗಿ ಸೇರುತ್ತವೆ । ಅಭಿ ಚಾಕಶೀಮಿ—(ಇಂತಹ ಧಾರೆಗಳನ್ನು) ಧ್ಯಾನಿಸುತ್ತೇನೆ.

॥ ಭಾವಾರ್ಥ ॥

ವಿವಾಹಾರ್ಥವಾಗಿ ಹೊರಡಲು ಅಂಜನ ಮತ್ತು ಆಭರಣಾದಿಗಳಿಂದ ಅಲಂಕೃತರಾಗಿರುವ ಕನ್ಯೆಯರಂತೆ ಆಕರ್ಷಕವಾಗಿರುವ ಘೃತದ ಧಾರೆಗಳು, ಎಲ್ಲಿ ಸೋಮವು ಹಿಂಡಲ್ಪಡುವುದೋ, ಎಲ್ಲಿ ಯಜ್ಞವು ನೆರವೇರುವುದೋ ಅಂತಹ ಯಜ್ಞಾಗ್ನಿಯನ್ನು ಹೋಗಿ ಸೇರುತ್ತವೆ. ಇಂತಹ ಧಾರೆಗಳನ್ನು ನಾನು ಧ್ಯಾನಿಸುತ್ತೇನೆ.

## English Translation.

I contemplate these streams of Ghi as they flow from where the soma is effused, where the sacrifice (is solemnized), as maidens decorating themselves with unguents to go to the bridegroom.

॥ ಸಂಹಿತಾಪಾಠಃ ॥

ಅಭ್ಯರ್ಷತ ಸುಷ್ಟುತಿಂ ಗವ್ಯಮಾಜಿಮಸ್ಮಾಸು ಭದ್ರಾ ದ್ರವಿಣಾನಿ ಧತ್ತ ।
ಇಮಂ ಯಜ್ಞಂ ನಯತ ದೇವತಾ ನೋ ಘೃತಸ್ಯ ಧಾರಾ ಮಧುಮತ್ಪವಂತೇ॥

॥ ಪದಪಾಠಃ ॥

ಅಭಿ । ಅರ್ಷತ । ಸುಽಸ್ತುತಿಂ । ಗವ್ಯಂ । ಆಜಿಂ । ಅಸ್ಮಾಸು । ಭದ್ರಾ । ದ್ರವಿಣಾನಿ । ಧತ್ತ ।
ಇಮಂ । ಯಜ್ಞಂ । ನಯತ । ದೇವತಾ । ನಃ । ಘೃತಸ್ಯ । ಧಾರಾಃ । ಮಧುಽಮತ್ । ಪವಂತೇ ॥ ೧೦॥

॥ ಸಾಯಣಭಾಷ್ಯಂ ॥

ಹೇ ಮದೀಯಾ ಋತ್ವಿಜೋ ಗವ್ಯಂ ಗೋಸಮೂಹರೂಪಂ ಗೋಸಂಬಂಧಿನಂ ವಾಜಿಂ ಸಂಘಾತಮಭ್ಯರ್ಷತ। ಅಭಿಗಚ್ಛತ । ಅಭಿಗಮಯತ ವಾ ಸುಷ್ಟುತಿಂ ಶೋಭನಾಂ ಸ್ತುತಿಂ । ಅತ್ರ ಗೋಶಬ್ದೇನೋದಕಾನಿ ಗಾವೋ ವೋಚ್ಯಂತೇ। ತತ್ಸಂಘಾತೋಽಭಿಪ್ರೇತಃ। ಅಸ್ಮಾಸು ಯಜಮಾನೇಷು ಭದ್ರಾ ಸ್ತುತ್ಯಾನಿ ದ್ರವಿಣಾನಿ ಧತ್ತ। ಧಾರಯತ। ಸ್ತುತ್ಯಾ ಖಲು ಫಲಂ ಲಪ್ಸ್ಯತೇ। ಕಿಂಚ ನೋಽಸ್ಮ-ದೀಯಮಿಮಂ ಯಜ್ಞಂ ದೇವತಾ ಅತ್ರ ಯಷ್ಟವ್ಯಾನ್ದೇವಾನ್ನಯತ। ಪ್ರಾಪಯತ। ಘೃತಸ್ಯ ಧಾರಾ ಮಧುಮದ್ಯಥಾ ತಥಾ ಪವಂತೇ। ಗಚ್ಛಂತಿ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) ಗವ್ಯಂ—ಗೋವುಗಳ । ಆಜಿಂ—ಸಮೂಹಕ್ಕೆ (ಕಾರಣವಾದ) । ಸುಷ್ಟುತಿಂ—ಶ್ರೇಷ್ಠವಾದ ಸ್ತುತಿಯನ್ನು । ಅಭ್ಯರ್ಷತ—ಪಠಿಸಿರಿ । ಅಸ್ಮಾಸು—ನಮ್ಮಲ್ಲಿ । ಭದ್ರಾ—ಪ್ರಶಸ್ತ್ಯವಾದ । ದ್ರವಿಣಾನಿ—ಧನಗಳನ್ನು । ಧತ್ತ—ತಂದೊದಗಿಸಿರಿ । ನಃ—ನಮ್ಮ । ಇಮಂ ಯಜ್ಞಂ—ಈ ಯಜ್ಞವನ್ನು । ದೇವತಾ—ಪೂಜ್ಯರಾದ ದೇವತೆಗಳಲ್ಲಿಗೆ । ನಯತ—ಸೇರಿಸಿರಿ । ಘೃತಸ್ಯ—ಘೃತದ । ಧಾರಾಃ—ಪ್ರವಾಹಗಳು । ಮಧುಮತ್—ಮಧುರ್ಯೋಪೇತವಾಗಿ । ಪವಂತೇ—(ಅಗ್ನಿಯನ್ನು) ಪ್ರವೇಶಿಸುತ್ತವೆ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ನಮಗೆ ಗೋಸಂಘಾತಕ್ಕೆ ಕಾರಣವಾದ ಸ್ತುತಿಯನ್ನು ಪಠಿಸಿರಿ. ನಮಗೆ ಪ್ರಶಸ್ಯವಾದ ಧನಗಳನ್ನು ತಂದೊದಗಿಸಿರಿ. ನಮ್ಮ ಈ ಯಜ್ಞವನ್ನು ಪೂಜ್ಯರಾದ ದೇವತೆಗಳಲ್ಲಿಗೆ ಸೇರಿಸಿರಿ. ಘೃತದ ಪ್ರವಾಹಗಳು ಮಾಧುರ್ಯೋಪೇತವಾಗಿ ಅಗ್ನಿಯನ್ನು ಪ್ರವೇಶಿಸುತ್ತವೆ.

## English Translation.

(Priests) address the pious praise, (the source) of herds of cattle: bestow upon us auspicious riches: convey this our sacrifice to the gods, (whereat) the streams of Ghi with sweetness descend.



॥ ಸಂಹಿತಾಪಾಠಃ ॥

ಧಾಮಂತೇ ವಿಶ್ವಂ ಭುವನಮಧಿ ಶ್ರಿತಮಂತಃ ಸಮುದ್ರೇ ಹೃದ್ಯಂತ-
ರಾಯುಷಿ ।
ಅಪಾಮನೀಕೇ ಸಮಿಥೇ ಯ ಆಭೃತಸ್ತಮಶ್ಯಾಮ ಮಧುಮಂತಂ ತ
ಊರ್ಮಿಂ ॥ ೧೧ ॥

॥ ಪದಪಾಠಃ ॥

ಧಾಮನ್ । ತೇ । ವಿಶ್ವಂ । ಭುವನಂ । ಅಧಿ । ಶ್ರಿತಂ । ಅಂತರಿತಿ । ಸಮುದ್ರೇ । ಹೃದಿ । ಅಂತಃ । ಆಯುಷಿ ।
ಅಪಾಂ । ಅನೀಕೇ । ಸಂಽಇಥೇ । ಯಃ । ಆಽಭೃತಃ । ತಂ । ಅಶ್ಯಾಮ । ಮಧುಽಮಂತಂ । ತೇ ।
ಊರ್ಮಿಂ ॥ ೧೧ ॥

॥ ಸಾಯಣಭಾಷ್ಯಂ ॥

ಧಾಮಂತ ಇತ್ಯೇಷೋತ್ತರಸೂಕ್ತಸ್ಯಾದ್ಯಾ ಚಾಧ್ಯಾಯೋತ್ಸರ್ಜನೋಪಾಕರಣಯೋರ್ವಿನಿಯುಕ್ತೇ । ಧಾಮನ್ತೇ ವಿಶ್ವಮಿತಿ ಪ್ರತೀಕಮುಕ್ತ್ವಾ ತದಂತೇ ದ್ವ್ಯೃಚಾಃ । ಆ. ಗೃ. ೩-೫ । ಇತಿ ಸೂತ್ರಿತತ್ವಾತ್ ॥

ತೇ ತ್ವದೀಯೇ ಧಾಮನ್ಧಾಮನಿ ತೇಜಃಸ್ಥಾನೇ ವಿಶ್ವಂ ಭುವನಮಧಿ ಶ್ರಿತಂ । ಅಂತಃ ಸಮುದ್ರೇ ವಡವಾಗ್ನಿತ್ವೇನ ಹೃದ್ಯಂತಃ ಸರ್ವಪ್ರಾಣಿನಾಂ ಹೃದಯೇ ವೈಶ್ವಾನರತ್ವೇನಾಯುಷ್ಯನ್ನೇ ಸರ್ವಪ್ರಾಣ್ಯಾಹಾರತ್ವೇನ । ಯದ್ವಾ । ಆಯುಷೀತ್ಯೇತದ್ಧೃದ್ವಿಶೇಷಣಂ । ಜಠರಾಗ್ನಿನಾ ಖಲ್ವಾಯುರ್ಧಾರ್ಯತೇ ।

ಅಪಾಮನೀಕೆ ಉದಕಸಂಸ್ತ್ಯಾಯೇ ವೈದ್ಯುತಾಗ್ನಿತ್ವೇನ ಸಮಿಥೇ ಸಂಗ್ರಾಮೇ ಚ ಶೌರ್ಯಾಗ್ನಿರೂಪೇಣ। ಏವಂ ಸರ್ವೇಷು ಸ್ಥಾನೇಷು ವರ್ತಮಾನಂ ಧಾಮ । ತಸ್ಮಿನ್ಧಾಮನಿ ಯ ಊರ್ಮಿರ್ಘೃತರೂಪ ಉದಕರೂಪೋ ವಾ ರಸ ಆಭೃತಃ ಸ್ಥಾಪಿತಃ ತೇ ತ್ವದೀಯಂ ತಂ ರಸಂ ಮಧುಮಂತಂ ಮಾಧುರ್ಯೋಪೇತಮಶ್ಯಾಮ । ವ್ಯಾಪ್ನುಯಾಮ ॥

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ) । ಅಂತಃ ಸಮುದ್ರೇ—ಸಮುದ್ರಮಧ್ಯದಲ್ಲಿ ಬಡಬಾಗ್ನಿರೂಪದಲ್ಲಿದ್ದರೂ । ಹೃದ್ಯಂತಃ—ಹೃದಯಾಂತರಾಳದಲ್ಲಿ ವೈಶ್ವಾನರ ರೂಪದಲ್ಲಿದ್ದರೂ । ಆಯುಷಿ—ಅನ್ನರೂಪದಲ್ಲಿ ಸಕಲರಿಗೂ ಆಯುಸ್ಸಿನಂತಿದ್ದರೂ । ಅಪಾಮನೀಕೇ—ಉದಕದಲ್ಲಿ ವೈದ್ಯುತಾಗ್ನಿರೂಪದಲ್ಲಿದ್ದರೂ । ಸಮಿಥೇ—ಯುದ್ಧ ರಂಗದಲ್ಲಿ ವೀರ್ಯಾಗ್ನಿರೂಪದಲ್ಲಿದ್ದರೂ । ತೇ—ನಿನ್ನ । ಧಾಮನ್—ತೇಜೋರೂಪವಾದ ಸ್ಥಾನದಲ್ಲಿ । ವಿಶ್ವಂ ಭುವನಂ—ಸಕಲ ಭುವನವೂ । ಅಧಿ ಶ್ರಿತಂ—ಆಶ್ರಯವನ್ನು ಪಡೆಯುತ್ತದೆ । ತೇ—ನಿನ್ನ । ಯಃ—ಯಾವ ಘೃತರೂಪವಾದ ರಸವು । ಆಭೃತಃ—ನಿನ್ನಲ್ಲಿ ಸ್ಥಾಪಿತವಾಗಿದೆಯೋ । ತಂ—ಅಂತಹುದೂ । ಮಧುಮಂತಂ—ಮಾಧುರ್ಯೋಪೇತವಾದುದೂ ಆದ । ಊರ್ಮಿಂ—ರಸವನ್ನು । ಅಶ್ಯಾಮ—ನಾವೂ ಹೊಂದುವಂತಾಗಲಿ.

। ಭಾವಾರ್ಥ ।

ಎಲೈ ಅಗ್ನಿಯೇ, ನೀನು ಸಮುದ್ರಮಧ್ಯದಲ್ಲಿ ಬಡಬಾಗ್ನಿರೂಪದಲ್ಲಿರಲಿ, ಹೃದಯಾಂತರಾಳದಲ್ಲಿ ವೈಶ್ವಾನರ ರೂಪದಲ್ಲಿರಲಿ, ಅನ್ನರೂಪದಲ್ಲಿ ಸಕಲರಿಗೂ ಜಠರಾಗ್ನಿರೂಪದಲ್ಲಿರಲಿ, ಉದಕದಲ್ಲಿ ವೈದ್ಯುತಾಗ್ನಿರೂಪದಲ್ಲಿರಲಿ, ನಿನ್ನ ತೇಜೋರೂಪವಾದ ಸ್ಥಾನದಲ್ಲಿ ಸಕಲಭುವನವೂ ಆಶ್ರಯವನ್ನು ಪಡೆಯುತ್ತದೆ. ನಿನ್ನ ಯಾವ ಘೃತರೂಪವಾದ ರಸವು ನಿನ್ನಲ್ಲಿ ಸ್ಥಾಪಿತವಾಗಿದೆಯೋ, ಅಂತಹುದೂ, ಮಾಧುರ್ಯೋಪೇತವಾದುದೂ ಆದ ರಸವನ್ನು ನಾವೂ ಹೊಂದುವಂತಾಗಲಿ.

## English Translation.

The whole world, (Agni), finds an asylum in your effulgence, whether it be in the ocean, in the heart (of man), in the life (of living beings), in the assemblage of the waters, or in warfare: may we attain that sweet-flavoured wave which is established in your (essence).

। ವಿಶೇಷವಿಷಯಗಳು ।

ಧಾಮಂತೇ ಎಂಬ ಈ ಋಕ್ಕನ್ನೂ ಮುಂದಿನ ಸೂಕ್ತದ ಮೊದಲನೆಯ ಋಕ್ಕಾದ ಅಬೋಧ್ಯಗ್ನಿಃ ಎಂಬ ಋಕ್ಕನ್ನೂ ಅಧ್ಯಾಯೋತ್ಸರ್ಜನ ಮತ್ತು ಉಪಾಕರಣ ಹೋಮಗಳಲ್ಲಿ ಪ್ರತಿಮಂಡಲದ ಆದ್ಯಂತ ಋಕ್ಕುಗಳನ್ನು ಪ್ರಧಾನಾಹುತಿಯಾಗಿ ಉಪಯೋಗಿಸುವಾಗ ಪಠಿಸಿ ಹೋಮ ಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ—ಧಾಮಂತೇ ಇತಿ ಪ್ರತೀಕಮುಕ್ತ್ವಾ ತದಂತೇ ದೃ್ಚಃ ಎಂಬ ಸೂತ್ರದಿಂದ (ಆ. ಗೃ. ೩-೫-೭) ವಿವೃತವಾಗಿರುವುದು.

ತೇ ಧಾಮನ್ ವಿಶ್ವಂ ಭುವನಂ ಅಧಿ ಶ್ರಿತಂ—ತ್ವದೀಯೇ ಧಾಮನಿ ತೇಜಃಸ್ಥಾನೇ ವಿಶ್ವಂ ಭುವನ_ಅಧಿ ಶ್ರಿತಂ । ಎಲೈ ಅಗ್ನಿಯೇ, ನಿನ್ನ ಸ್ವಕೀಯವಾದ ಮತ್ತು ತೇಜೋವಿಶಿಷ್ಟವಾದ ಸ್ಥಾನದಲ್ಲಿ ಸಕಲ

ವಿಶ್ವವೂ ಎಂದರೆ ಪ್ರಪಂಚಗಳೆಲ್ಲವೂ ಸ್ಥಾಪಿತವಾಗಿವೆ. ಎಂದರೆ, ನೀನು ನಿನ್ನ ಅಸಾಧಾರಣವಾದ ತೇಜಸ್ಸಿನಿಂದ ಸಮಸ್ತ ವಿಶ್ವವನ್ನೂ ವ್ಯಾಪಿಸಿರುವೆ ಎಂದಭಿಪ್ರಾಯವು.

**ಸಮುದ್ರೇ ಹೃದಿ ಅಂತಃ ಆಯುಷಿ**—ಸಮಸ್ತ ವಿಶ್ವವನ್ನೂ ಅಗ್ನಿಯು ವ್ಯಾಪಿಸಿರುವನೆಂದು ಹಿಂದಿನ ವಾಕ್ಯದಲ್ಲಿ ಹೇಳಲಾಗಿವೆಯಷ್ಟೆ. ಅದು ಹೇಗೆ ಎಂಬುದನ್ನು ಇಲ್ಲಿ ವಿಶದವಾಗಿ ವಿವರಿಸುವರು. **ಸಮುದ್ರೇ ವಡವಾಗ್ನಿತ್ವೇನ । ಹೃದ್ಯಂತಃ ಸರ್ವಪ್ರಾಣಿನಾಂ ಹೃದಯೇ ವೈಶ್ವಾನರತ್ವೇನ । ಆಯುಷಿ ಅನ್ನೇ ಸರ್ವಪ್ರಾಣ್ಯಾಹಾರತ್ವೇನ ಯದ್ವಾ ಆಯುಷೀತ್ಯೇತತ್ ಹೃದ್ವಿಶೇಷಣಂ ಜಠರಾಗ್ನಿನಾ ಖಲ್ವಾಯುಃ ಧಾರ್ಯತೇ । ಅಪಾಮನೀಕೇ ಉದಕಸಂಸ್ತ್ಯಾಯೇ ವೈದ್ಯುತಾಗ್ನಿತ್ವೇನ । ಸಮಿಥೇ ಸಂಗ್ರಾಮೇ ಶೌರ್ಯಾಗ್ನಿತ್ವರೂಪೇಣ ।** ಈ ಅಗ್ನಿಯು ನಾನಾ ರೂಪಗಳಿಂದ ನಾನಾ ಪ್ರದೇಶಗಳಲ್ಲಿ ವ್ಯಾಪಿಸಿರುವನು. ಸಮುದ್ರದಲ್ಲಿ ವಡವಾಗ್ನಿರೂಪದಿಂದಿರುವನು; ಪ್ರಾಣಿಗಳ ಹೃದಯದಲ್ಲಿ ವೈಶ್ವಾನರಾಗ್ನಿರೂಪದಿಂದಿರುವನು. ಅಥವಾ ಪ್ರಾಣಿಗಳ ಜಠರದಲ್ಲಿ ಅವುಗಳ ಆಹಾರಾದಿಗಳನ್ನು ಪಚನಮಾಡುತ್ತಾ ಜಾಠರಾಗ್ನಿರೂಪದಿಂದ ಇದ್ದು ಪ್ರಾಣಿಗಳ ಆಯುರ್ವೃದ್ಧಿಗೆ ಕಾರಣನಾಗಿರುವನು. ಮತ್ತು ಉದಕಗಳ ಸಮೂಹದಲ್ಲಿ (ಮೇಘಗಳಲ್ಲಿ) ವೈದ್ಯುತಾಗ್ನಿ (ಮಿಂಚು) ರೂಪದಿಂದ ಇರುವನು; ಯುದ್ಧಾದಿಗಳಲ್ಲಿ ಶೌರ್ಯಾಗ್ನಿರೂಪದಿಂದ ಇರುವನು. ಈ ರೀತಿ ಸರ್ವಸ್ಥಳಗಳಲ್ಲಿಯೂ ಅಗ್ನಿಯು ತನ್ನ ವಿಧವಿಧವಾದ ತೇಜಸ್ಸಿನಿಂದ ಎಲ್ಲವನ್ನೂ ವ್ಯಾಪಿಸಿರುವನು ಎಂದಭಿಪ್ರಾಯವು.

**ಯ ಆಭೃತಸ್ತಮಶ್ಯಾಮ ಮಧುಮಂತಂ ತೇ ಊರ್ಮಿಂ**—**ತಸ್ಮಿನ್ ಧಾಮನಿ ಯಃ ಊರ್ಮಿರ್ಘೃತರೂಪ ಉದಕರೂಪೋ ವಾ ರಸಃ ಸ್ಥಾಪಿತಃ ತ್ವದೀಯಂ ತಂ ರಸಂ ಮಾಧುರ್ಯೋಪೇತಂ ವ್ಯಾಪ್ನುಯಾಮ ।** ಎಲೈ ಅಗ್ನಿಯೇ, ಸರ್ವಸ್ಥಳಗಳಲ್ಲಿಯೂ ವ್ಯಾಪಿಸಿರುವ ನಿನ್ನ ತೇಜೋರಾಶಿಯಲ್ಲಿ ಘೃತರೂಪವಾದ ಅಥವಾ ಉದಕರೂಪವಾದ ಯಾವ ರಸವು ಸ್ಥಾಪಿತವಾಗುವುದೋ ಅಂತಹ ಮಾಧುರ್ಯೋಪೇತವಾದ ರಸವನ್ನು (ಘೃತ ಅಥವಾ ಉದಕ) ನಾವು ಪಡೆಯುವಂತಾಗಲಿ. ಇಲ್ಲಿ ರಸವು ಘೃತ ಅಥವಾ ಉದಕರೂಪವೆಂದು ಎರಡುವಿಧಗಳೆಂದು ತಿಳಿಸಿದೆ. ಪಾರ್ಥಿವಾಗ್ನಿ ಅಥವಾ ಯಜ್ಞಾಗ್ನಿಯಲ್ಲಿ ಸ್ಥಾಪಿತವಾಗುವ (ಸೇರುವ) ರಸವನ್ನು ಘೃತವೆಂದೂ, ವೈದ್ಯುತಾಗ್ನಿಯಲ್ಲಿ ಸ್ಥಾಪಿತವಾಗುವ ರಸವನ್ನು ಉದಕವೆಂದೂ ತಿಳಿಯಬೇಕು.

**ಇತ್ಥಂ ಶ್ರೀಬುಕ್ಕಭೂಪಾಲಸಾಮ್ರಾಜ್ಯೈಕಧುರಂಧರಃ ।**
**ವಿದ್ಯಾತೀರ್ಥಗುರೋರ್ದೃಷ್ಟ್ಯಾ ಪ್ರಾಪ್ತಸಾರ್ವಜ್ಞ್ಯವೈಭವಃ ॥**
**ಶ್ರೀಮತ್ಸಾಯಣಮಂತ್ರೀಶಃ ಸಕಲಾಗಮತತ್ತ್ವವಿತ್ ।**
**ದಾಶತಯ್ಯಾಂ ಮಾಧವೀಯೇ ವೇದಾರ್ಥಸ್ಯ ಪ್ರಕಾಶನೇ ॥**
**ಚತುರ್ಥಂ ಮಂಡಲಂ ಸಮ್ಯಕ್ ವಾಮದೇವೇನ ವೀಕ್ಷಿತಂ ।**
**ಅಷ್ಟೋತ್ತರೈಸ್ತು ಪಂಚಾಶತ್ಸೂಕ್ತೈಃ ಪಂಚ ಶತೈರಪಿ ॥**
**ಏಕೋನಯಾ ನವತ್ಯಾ ಚ ಯುಕ್ತೈರ್ಮಂತ್ರೈಶ್ಚ ಸಂಮಿತಂ ।**
**ವ್ಯಾಕಾರ್ಷೀತ್ಸುಖಬೋಧಾರ್ಥಂ ಪಶ್ಯತೈತದ್ವಿಮತ್ಸರಾಃ ॥**

**॥ ಇತಿ ಚತುರ್ಥಂ ಮಂಡಲಂ ಸಮಾಪ್ತಂ ॥**



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಚತುರ್ಥಂ ಮಂಡಲಂ ಸಮಾಪ್ತಂ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ
ನಾಲ್ಕನೆಯ ಮಂಡಲವು ಸಮಾಪ್ತಮಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ॥ ಅಥ ಪಂಚಮಂ ಮಂಡಲಂ ॥

## ಐದನೆಯ ಮಂಡಲವು.

### ಪೀಠಿಕೆ

### ಮಂಡಲದ್ರಷ್ಟೃವಾದ ಅತ್ರಿಋಷಿಯ ಪರಿಚಯ.

ಋಗ್ವೇದದ ಐದನೆಯ ಮಂಡಲಕ್ಕೆ ಅತ್ರಿಋಷಿಯು ದ್ರಷ್ಟೃವು ಎಂದು ನಿರ್ದಿಷ್ಟವಾಗಿದ್ದರೂ ಈ ಮಂಡಲದ ಸೂಕ್ತಗಳಿಗೆ ಇತರ ಋಷಿಗಳೂ ದ್ರಷ್ಟೃಗಳಾಗಿದಾರೆ. ಇವರೆಲ್ಲರೂ ಅತ್ರಿವಂಶದವರೇ ಎಂದು ಹೇಳಲು ಸಾಧ್ಯವಿರುವುದಿಲ್ಲ. ಸಾಯಣರು ಪಂಚಮಮಂಡಲೇಽನುಕ್ತಗೋತ್ರಮಾತ್ರೇಯಂ ವಿದ್ಯಾದಿತಿ ಪರಿಭಾಷಿತತ್ವಾದಾತ್ರೇಯೌ ಬುಧಗವಿಷ್ಠಿರಾವೃಷೀ—ಎಂದು ಹೇಳಿರುವಂತೆ ಐದನೆಯ ಮಂಡಲದಲ್ಲಿ ಸೂಕ್ತದ್ರಷ್ಟೃಗಳಾದ ಕೆಲವು ಋಷಿಗಳಿಗೆ ಇಂತಹ ಗೋತ್ರರವರೆಂದು ಹೇಳಿಲ್ಲವಾದರೆ ಅವರನ್ನು ಅತ್ರಿಗೋತ್ರೋದ್ಭವರೆಂದೇ ಪರಿಗಣಿಸಬೇಕು. ಈ ದೃಷ್ಟಿಯಿಂದ ಈ ಮಂಡಲದ ಮೊದಲನೆಯ ಸೂಕ್ತಕ್ಕೆ ದ್ರಷ್ಟೃಗಳಾದ ಬುಧ ಮತ್ತು ಗವಿಷ್ಠಿರ ಎಂಬ ಇಬ್ಬರು ಋಷಿಗಳೂ ಆತ್ರೇಯ ವಂಶೋತ್ಪನ್ನರೇ ಆಗಿರುವರೆಂದು ತಿಳಿಯಬೇಕು ಎಂದು ಹೇಳಿರುವರು. ಆದುದರಿಂದ ಈ ಮಂಡಲದ ಋಷಿಗಳೆಲ್ಲಾ

ಒಂದಲ್ಲ ಒಂದುವಿಧದಲ್ಲಿ ಅತ್ರಿಋಷಿಯ ವಂಶಕ್ಕೆ ಸಂಬಂಧಪಟ್ಟವರೇ ಆಗಿರಬೇಕು. ಇದಲ್ಲದೆ ಈ ಮಂಡಲದ ಋಷಿಗಳಲ್ಲಿ ಅನೇಕರು ಇತರ ಮಂಡಲಗಳ ಅನೇಕ ಸೂಕ್ತಗಳಿಗೂ ದ್ರಷ್ಟೃಗಳಾಗಿದ್ದಾರೆ. ಕೆಳಗಿನ ಪಟ್ಟಿಯನ್ನು ಪರಿಶೀಲಿಸುವುದರಿಂದ ಈ ವಿಷಯವು ಚೆನ್ನಾಗಿ ವ್ಯಕ್ತಪಡುವುದು. ಮಂಡಲದ್ರಷ್ಟೃವೂ ಮುಖ್ಯಋಷಿಯೂ ಆದ ಅತ್ರಿಃ ಅಥವಾ ಅತ್ರಿಃ ಭೌಮಃ ಎಂಬ ಋಷಿಯು ಈ ಕೆಳಗೆ ಹೇಳಿರುವ ೧೩೧ ಮಂತ್ರಗಳಿಗೆ ದ್ರಷ್ಟೃವಾಗಿರುವನು.

| ಋಷಿಯ ಹೆಸರು | ಮಂಡಲ | ಸೂಕ್ತ | ಸೂಕ್ತದಲ್ಲಿರುವ ಋಕ್ಸಂಖ್ಯೆ | ಒಟ್ಟು ಮಂತ್ರಗಳು |
|---|---|---|---|---|
| ಅತ್ರಿಃ ಅಥವಾ ಅತ್ರಿರ್ಭೌಮಃ | ೫ | ೨೭ | ೬ | ೬ |
| ,, | ,, | ೩೭ | ೫ | ೫ |
| ,, | ,, | ೩೮ | ೯ | ೯ |
| ,, | ,, | ೩೯ | ೫ | ೫ |
| ,, | ,, | ೪೦ | ೫ | ೫ |
| ,, | ,, | ೪೧ | ೨೦ | ೨೦ |
| ,, | ,, | ೪೨ | ೧೮ | ೧೮ |
| ,, | ,, | ೪೩ | ೧೭ | ೧೭ |
| ,, | ,, | ೭೬ | ೫ | ೫ |
| ,, | ,, | ೭೭ | ೫ | ೫ |
| ,, | ,, | ೮೩ | ೧೦ | ೧೦ |
| ,, | ,, | ೮೪ | ೩ | ೩ |
| ,, | ,, | ೮೫ | ೮ | ೮ |
| ,, | ,, | ೮೬ | ೬ | ೬ |
| ,, | ೯ | ೬೭ | ೩೨ | ೩ (೧೦-೧೨) |
| ,, | ,, | ೮೬ | ೪೮ | ೫ (೪೧-೪೫) |
| ,, | ೧೦ | ೧೩೭ | ೭ | ೧ (೪) |
| ಒಟ್ಟು | ೩ | ೧೬ | — | ೧೩೧ |

ಐದನೆಯ ಮಂಡಲದಲ್ಲಿರುವ ಇತರ (ಅತ್ರಿಯನ್ನು ಬಿಟ್ಟು) ಋಷಿಗಳು ಮತ್ತು ಅವರಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳ ವಿವರಣೆ—

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಒಟ್ಟು ಋಕ್ಸಂಖ್ಯೆ |
|---|---|---|---|---|
| 1. | ಬುಧಃ (ಆತ್ರೇಯಃ) | ೫ | ೧ | ೧೨ |
| 2. | ಗವಿಷ್ಠಿರಃ (ಆತ್ರೇಯಃ) | ,, | ,, | ,, (ಒಟ್ಟು ೧೨) |
| 3. | ಕುಮಾರಃ (ಆತ್ರೇಯಃ) | ೫ | ೨ | ೧೨ |
| 4. | ವೃಶಃ (ಜಾನಃ) | ,, | ,, | ,, (ಒಟ್ಟು ೧೨) |
| 5. | ವಸುಶ್ರುತಃ (ಆತ್ರೇಯಃ) | ೫ | ೩ | ೧೨ |
| | | ,, | ೪ | ೧೧ |
| | | ,, | ೫ | ೧೧ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಒಟ್ಟು ಋಕ್ಸಂಖ್ಯೆ |
|---|---|---|---|---|
| | ವಸುಶ್ರುತಃ (ಆತ್ರೇಯಃ) | ,, | ೬ | ೧೦ (ಒಟ್ಟು ೪೪) |
| 6. | ಇಷಃ (ಆತ್ರೇಯಃ) | ೫ | ೭ | ೧೦ |
| | | ,, | ೮ | ೭ (೧೭) |
| 7. | ಗಯಃ (ಆತ್ರೇಯಃ) | ೫ | ೯ | ೭ |
| | | ,, | ೧೦ | ೭ (೧೪) |
| 8. | ಸುತಂಭರಃ (ಆತ್ರೇಯಃ) | ೫ | ೧೧ | ೬ |
| | | ,, | ೧೨ | ೬ |
| | | ,, | ೧೩ | ೬ |
| | | ,, | ೧೪ | ೬ (೨೪) |
| 9. | ಧರುಣಃ (ಆಂಗಿರಸಃ) | ೫ | ೧೫ | ೫ |
| 10. | ಪೂರುಃ (ಆತ್ರೇಯಃ) | ೫ | ೧೬ | ೫ |
| | | ,, | ೧೭ | ೫ (೧೦) |
| 11. | ದ್ವಿತಃ ಮೃಕ್ತವಾಹಾಃ (ಆತ್ರೇಯಃ) | ೫ | ೧೮ | ೫ |
| 12. | ವವ್ರಿಃ (ಆತ್ರೇಯಃ) | ೫ | ೧೯ | ೫ |
| 13. | ಪ್ರಯಸ್ವಂತಃ (ಆತ್ರೇಯಾಃ) | ೫ | ೨೦ | ೪ |
| 14. | ಸಸಃ (ಆತ್ರೇಯಃ) | ೫ | ೨೧ | ೪ |
| 15. | ವಿಶ್ವಸಾಮಾ (ಆತ್ರೇಯಃ) | ೫ | ೨೨ | ೪ |
| 16. | ದ್ಯುಮ್ನಃ ವಿಚರ್ಷಣಿಃ (ಆತ್ರೇಯಃ) | ೫ | ೨೩ | ೪ |
| 17. | ಬಂಧುಃ (ಗೌಪಾಯನಃ) | ೫ | ೨೪ | ೪ |
| 18. | ಶ್ರುತಬಂಧುಃ ,, | ೧೦ | ೫೭ | ೬ |
| 19. | ವಿಪ್ರಬಂಧುಃ ,, | ೧೦ | ೫೮ | ೧೨ |
| | | ೧೦ | ೫೯ | ೧೦ |
| | | ೧೦ | ೬೦ | ೧೨ (೪೪) |
| 20. | ಸುಬಂಧುಃ (ಗೌಪಾಯನಃ ಲೌಪಾಯನೋ ವಾ) | ೫ | ೨೪ | ೪ |
| 21. | ವಸೂಯವಃ (ಆತ್ರೇಯಾಃ) | ೫ | ೨೫ | ೯ |
| | | ೫ | ೨೬ | ೯ (೧೮) |
| 22. | ತ್ರ್ಯರುಣಃ ತ್ರೈವೃಷ್ಣಃ (ಭಾರತಃ ರಾಜಾ) | ೫ | ೨೭ | ೬ |
| | | ೯ | ೧೧೦ | ೧೨ (೧೮) |
| 23. | ತ್ರಸದಸ್ಯುಃ ಪೌರುಕುತ್ಸಃ (ಭಾರತಃ ರಾಜಾ) | ೫ | ೨೭ | ೬ |
| | | ೪ | ೪೨ | ೧೦ |
| | | ೯ | ೧೧೦ | ೧೨ (೨೮) |
| | | ೫ | ೨೭ | ೬ |
| 24. | ಅಶ್ವಮೇಧಃ (ಭಾರತಃ ರಾಜಾ) | ೫ | ೨೮ | ೬ |
| 25. | ವಿಶ್ವವಾರಾ (ಆತ್ರೇಯೀ) | ೫ | ೨೯ | ೧೫ |
| 26. | ಗೌರಿವೀತಿಃ (ಶಾಕ್ತ್ಯಃ) | ೯ | ೧೦೮ | ೨ |
| | | ೧೦ | ೭೩ | ೧೧ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಒಟ್ಟು ಋಕ್ಸಂಖ್ಯೆ | |
|---|---|---|---|---|---|
| | ಗೌರಿವೀತಿಃ (ಶಾಕ್ತ್ಯಃ) | ೧೦ | ೭೪ | ೬ | (೩೪) |
| 27. | ಬಭ್ರುಃ (ಆತ್ರೇಯಃ) | ೫ | ೩೦ | ೧೫ | |
| 28. | ಅವಸ್ಯುಃ (ಆತ್ರೇಯಃ) | ೫ | ೩೧ | ೧೩ | |
| | | ,, | ೭೫ | ೯ | (೨೨) |
| 29. | ಗಾತುಃ (ಆತ್ರೇಯಃ) | ೫ | ೩೨ | ೧೨ | |
| 30. | ಸಂವರಣಃ (ಪ್ರಾಜಾಪತ್ಯಃ) | ೫ | ೩೩ | ೧೦ | |
| | | ,, | ೩೪ | ೯ | (೧೯) |
| 31. | ಪ್ರಭೂವಸುಃ (ಆಂಗಿರಸಃ) | ೫ | ೩೫ | ೮ | |
| | | ,, | ೩೬ | ೬ | |
| | | ೯ | ೩೫ | ೬ | |
| | | ,, | ೩೬ | ೬ | (೨೬) |
| 32. | ಅವತ್ಸಾರಃ (ಕಾಶ್ಯಪಃ) | ೫ | ೪೪ | ೧೫ | |
| | | ೯ | ೫೩ | ೪ | |
| | | ,, | ೫೪ | ೪ | |
| | | ,, | ೫೫ | ೪ | |
| | | ,, | ೫೬ | ೪ | |
| | | ,, | ೫೭ | ೪ | |
| | | ,, | ೫೮ | ೪ | |
| | | ,, | ೫೯ | ೪ | |
| | | ,, | ೬೦ | ೪ | (೪೭) |
| 33. | ಸದಾಪೃಣಃ (ಆತ್ರೇಯಃ) | ೫ | ೪೪ | ೧ | ( ? ) |
| | | ,, | ೪೫ | ೧೧ | (೧೨) |
| 34. | ಪ್ರತಿಕ್ಷತ್ರಃ (ಆತ್ರೇಯಃ) | ೫ | ೪೬ | ೮ | |
| 35. | ಪ್ರತಿರಥಃ (ಆತ್ರೇಯಃ) | ೫ | ೪೭ | ೭ | |
| 36. | ಪ್ರತಿಭಾನುಃ (ಆತ್ರೇಯಃ) | ೫ | ೪೮ | ೫ | |
| 37. | ಪ್ರತಿಪ್ರಭಃ (ಆತ್ರೇಯಃ) | ೫ | ೪೯ | ೫ | |
| 38. | ಸ್ವಸ್ತಿ (ಆತ್ರೇಯಃ) | ೫ | ೫೦ | ೫ | |
| | | ,, | ೫೧ | ೧೫ | (೨೦) |
| 39. | ಶ್ಯಾವಾಶ್ವಃ (ಆತ್ರೇಯಃ) | ೫ | ೫೨ | ೧೭ | |
| | | ,, | ೫೩ | ೧೬ | |
| | | ,, | ೫೪ | ೧೫ | |
| | | ,, | ೫೫ | ೧೦ | |
| | | ,, | ೫೬ | ೯ | |
| | | ,, | ೫೭ | ೮ | |
| | | ,, | ೫೮ | ೮ | |
| | | ,, | ೫೯ | ೮ | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಒಟ್ಟು ಋಕ್ಸಂಖ್ಯೆ | |
|---|---|---|---|---|---|
| | ಶ್ಯಾವಾಶ್ವಃ (ಆತ್ರೇಯಃ) | ,, | ೬೦ | ೮ | |
| | | ,, | ೬೧ | ೧೯ | |
| | | ,, | ೮೧ | ೫ | |
| | | ,, | ೮೨ | ೯ | |
| | | ೮ | ೩೫ | ೨೪ | |
| | | ,, | ೩೬ | ೭ | |
| | | ,, | ೩೭ | ೭ | |
| | | ,, | ೩೮ | ೧೦ | |
| | | ೯ | ೩೨ | ೬ | (೧೮೬) |
| 40. | ಶ್ರುತವಿತ್ (ಆತ್ರೇಯಃ) | ೫ | ೪೪ | ೧ | |
| | | ,, | ೬೨ | ೯ | (೯) |
| 41. | ಅರ್ಚನಾನಾ (ಆತ್ರೇಯಃ) | ೫ | ೬೩ | ೭ | |
| | | ,, | ೬೪ | ೭ | |
| | | ೮ | ೪೨ | ೬ | (೨೦) |
| 42. | ರಾತಹವ್ಯಃ (ಆತ್ರೇಯಃ) | ೫ | ೬೫ | ೬ | |
| | | ,, | ೬೬ | ೬ | (೧೨) |
| 43. | ಯಜತಃ (ಆತ್ರೇಯಃ) | ೫ | ೪೪ | ೩ | ( ? ) |
| | | ,, | ೬೭ | ೫ | |
| | | ,, | ೬೮ | ೫ | (೧೦) |
| 44. | ಉರುಚಕ್ರಿಃ (ಆತ್ರೇಯಃ) | ೫ | ೬೯ | ೪ | |
| | | ,, | ೭೦ | ೪ | (೮) |
| 45. | ಬಾಹುವೃಕ್ತಃ (ಆತ್ರೇಯಃ) | ೫ | ೪೪ | ೧ | ( ? ) |
| | | ,, | ೭೧ | ೩ | |
| | | ,, | ೭೨ | ೩ | (೬) |
| 46. | ಪೌರಃ (ಆತ್ರೇಯಃ) | ೫ | ೭೩ | ೧೦ | |
| | | ,, | ೭೪ | ೧೦ | (೨೦) |
| 47. | ಸಪ್ತವಧ್ರಿಃ (ಆತ್ರೇಯಃ) | ೫ | ೭೮ | ೯ | |
| | | ೮ | ೭೩ | ೧೮ | (೨೭) |
| 48. | ಸತ್ಯಶ್ರವಾಃ (ಆತ್ರೇಯಃ) | ೫ | ೭೯ | ೧೦ | |
| | | ,, | ೮೦ | ೬ | (೧೬) |
| 49. | ಏವಯಾಮರುತ್ (ಆತ್ರೇಯಃ) | ೫ | ೮೭ | ೯ | |

ಮಂಡಲದ್ರಷ್ಟೃವಾದ ಅತ್ರಿಋಷಿಯೂ ಸೇರಿ ಈ ಮಂಡಲದಲ್ಲಿ ೫೦ ಋಷಿಗಳಿರುವರು ಈ ಮಂಡಲದಲ್ಲಿ ೬ ಅನುವಾಕಗಳೂ ೮೭ ಸೂಕ್ತಗಳೂ, ಒಟ್ಟು ೭೨೭ ಋಕ್ಕುಗಳೂ ಇರುವವು.



# ಮಂಡಲದ್ರಷ್ಟೃವಾದ ಅತ್ರಿಋಷಿಯ ಪರಿಚಯ

ಸ ಇದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂಚ ಸ ಯದಿದಂ ಸರ್ವಂ ಪಾಪ್ಮನೋಽ-
ತ್ರಾಯತ ಯದಿದಂ ಕಿಂಚ ತಸ್ಮಾದತ್ರಯಃ (ಐ. ಆ. ೨-೨-೧)

ಐತರೇಯಾರಣ್ಯಕದಲ್ಲಿ ವರ್ಣಿತವಾಗಿರುವಂತೆ, ಋಕ್ಸಂಹಿತೆಯ ಸೂಕ್ತದ್ರಷ್ಟೃಗಳಾದ ಶತರ್ಚಿಗಳು, ಗೃತ್ಸಮದ ಇತ್ಯಾದಿ ಋಷಿಗಳೆಲ್ಲರೂ ಸಹ ಆದಿತ್ಯರೂಪವಾದ ಪ್ರಾಣತತ್ತ್ವದ ವಿಭೂತಿವಿಶೇಷಗಳೆಂದು ಪ್ರಸಿದ್ಧರಾಗಿದ್ದಾರೆ. ಅವರಲ್ಲಿ ಅತ್ರಿಯು ಸಕಲ ಪಾಪಗಳಿಂದಲೂ ಪುರುಷನನ್ನು ರಕ್ಷಿಸುವವನಾದುದರಿಂದ ಈ ಹೆಸರಿನಿಂದ ಪ್ರಸಿದ್ಧನಾದನು ಎಂದು ಅತ್ರಿಶಬ್ದದ ನಿರ್ವಚನವೂ ಈ ಮಹರ್ಷಿಯ ಪ್ರಶಂಸೆಯೂ ಇರುತ್ತದೆ. ಆದರೆ ಈ ನಿರ್ವಚನದಲ್ಲೂ ಮತ್ತು ಪ್ರಶಂಸೆಯಲ್ಲಿಯೂ ಸಹ ಅತ್ರಿಯು ಒಂದು ಆಧ್ಯಾತ್ಮಿಕವಾದ ತತ್ತ್ವವಿಶೇಷವೇ ಅಥವಾ ಮಾನವರೂಪದ ಪುರುಷ ವ್ಯಕ್ತಿಯೇ ಎಂಬ ಸಂಶಯಕ್ಕೆ ಅವಕಾಶವಿರುತ್ತದೆ. ಆದರೆ, ಪ್ರಕೃತವಲ್ಲಿ, ಜಗತ್ಪ್ರಸಿದ್ಧರಾದ ಸಪ್ತರ್ಷಿಗಳಲ್ಲಿ ಅತ್ರಿಯು ಒಬ್ಬನೆಂದೂ ಋಕ್ಸಂಹಿತೆಯ ಐದನೆಯ ಮಂಡಲದ ಕರ್ತೃತ್ವವು ಅವನಿಗೂ ಮತ್ತು ಅವನ ವಂಶೋತ್ಪನ್ನರಾದ ಋಷಿಗಳಿಗೂ ಸೇರಿದುದೆಂದು ನಾವು ನಿಷ್ಕರ್ಷಿಸಬಹುದಾಗಿದೆ. ಪ್ರಕೃತದಲ್ಲಿ ಐತಿಕಹಾಸವಾಗಿ ಪ್ರಸಿದ್ಧನಾದ ಅತ್ರಿ ಮಹರ್ಷಿಯ ಮಹತ್ತ್ವವೇನು ? ಅವನ ಅಲೌಕಿಕವಾದ ಶಕ್ತಿಯ ವೈಶಿಷ್ಟ್ಯವೇನು ಎಂಬುದನ್ನು ಪರಿಶೀಲಿಸಿ, ಅನಂತರ, ಆಧ್ಯಾತ್ಮಿಕತತ್ತ್ವವನ್ನು ಪ್ರತಿಬಿಂಬಿಸತಕ್ಕ ಅತ್ರಿಯ ದಿವ್ಯಸ್ವರೂಪವು ಎಲ್ಲೆಲ್ಲಿ ಯಾವ ಯಾವ ರೀತಿ ವರ್ಣಿತ ವಾಗಿದೆ ಎಂಬುದನ್ನು ತಿಳಿಯಬಹುದು. ಅತ್ರಿಯು ಪ್ರಜಾಪತಿಯ ಪುತ್ರನೆಂದು ಅನೇಕಕಡೆಗಳಲ್ಲಿ ತಿಳಿಸಿದೆ. ಇವನ ಉತ್ಪತ್ತಿಕ್ರಮವನ್ನು ಬೃಹದ್ದೇವತೆಯ ವಾಕ್ಯಗಳು ಈ ರೀತಿ ವಿವರಿಸುತ್ತವೆ.

ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।
ಆಹರತ್ಸಹಿತಃ ಸಾಧ್ಯೈರ್ವಿಶ್ವೇದೇವೈಃ ಸಹೇತಿ ಚ ।

ಪ್ರಜಾಪತಿಯು ಪುತ್ರಸಂತಾನವನ್ನು ಹೊಂದಬೇಕೆಂದಿಚ್ಛಿಸಿದನು. ಅದಕ್ಕಾಗಿ ಮೂರು ಸಂವತ್ಸರಗಳ ಪರ್ಯಂತ ನೆರವೇರಿಸಲ್ಪಡತಕ್ಕ ಸತ್ರಯಾಗವನ್ನು ಆಚರಿಸಿದನು. ಈ ಯಜ್ಞಕಾಲದಲ್ಲಿ ತನ್ನ ಸಹಾಯಕ್ಕಾಗಿ ಸಾಧ್ಯರನ್ನೂ ಮತ್ತು ವಿಶ್ವೇದೇವತೆಗಳನ್ನೂ ಹೊಂದಿದ್ದನು ಎಂಬ ವಿಷಯವು ಪ್ರಸಿದ್ಧವಾಗಿದೆ.

ತತ್ರ ವಾಗ್ದೀಕ್ಷಣೀಯಾಯಾಮಾಜಗಾಮ ಶರೀರಿಣೀ ।
ತಾಂ ದೃಷ್ಟ್ವಾ ಯುಗಪತ್ತತ್ರ ಕಸ್ಯಾಥ ವರುಣಸ್ಯ ಚ ॥

ಪ್ರಜಾಪತಿಯು ವಿಶ್ವೇದೇವತೆಗಳೊಡನೆಯೂ ಸಾಧ್ಯರೊಡನೆಯೂ ಸೇರಿಕೊಂಡು ನೆರವೇರಿಸುತ್ತಿದ್ದ ಈ ದಕ್ಷಯಾಗಕ್ಕೆ ವಾಗ್ದೇವಿಯು ಮಾನುಷಶರೀರವನ್ನು ಹೊಂದಿ ಬಂದಳು. ಅವಳ ದಿವ್ಯಸೌಂದರ್ಯವನ್ನು ನೋಡಿದೊಡನೆಯೇ ಪ್ರಜಾಪತಿಗೂ ಮತ್ತು ವರುಣನಿಗೂ ಮನೋವೈಕಲ್ಯವುಂಟಾಯಿತು. ಮತ್ತು ಅವರ ಕಾಮವು ಉಲ್ಬಣವಾಯಿತು.

ಶುಕ್ರಂ ಚಸ್ಕಂದ ತದ್ವಾಯುರಗ್ನೌ ಪ್ರಾಸ್ಯದ್ಯದೃಚ್ಛಯಾ ।
ತತೋಽರ್ಚಿಭ್ಯೋ ಭೃಗುರ್ಜಜ್ಞೇ ಅಂಗಾರೇಷ್ವಂಗಿರಾ ಋಷಿಃ ॥

ಪ್ರಜಾಪತಿಗೂ ವರುಣನಿಗೂ ಕಾಮವಿಕಾರವುಂಟಾದುದರಿಂದ ಅವರ ರೇತಸ್ಸು ಸ್ಖಲಿತವಾಗಿ ಪತಿತವಾಯಿತು. ವಾಯುವು ಅದನ್ನು ಹಿಡಿದು ತನ್ನ ಇಷ್ಟಬಂದಂತೆ ಅಗ್ನಿಯಲ್ಲಿ ಚದುರಿಸಿದನು. ಆಗ ಆ ರೇತಸ್ಸು ಅಗ್ನಿಯಲ್ಲಿ ಪ್ರವೇಶಿಸಿ ದೊಡನೆಯೇ, ಅಗ್ನಿಜ್ವಾಲೆಯಿಂದ ಭೃಗುವೂ, ಅಂಗಾರದಿಂದ (ಕೆಂಡದಿಂದ) ಅಂಗಿರಾಋಷಿಗಳೂ ಉತ್ಪನ್ನರಾದರು.

ಪ್ರಜಾಪತಿಂ ಸುತಾ ದೃಷ್ಟ್ವಾ ದೃಷ್ಟ್ವಾ ವಾಗಭ್ಯಭಾಷತ ।
ಆಭ್ಯಾಮೃಷಿಸ್ತೃತೀಯೋಽಪಿ ಭವೇದತ್ರೈವ ಮೇ ಸುತಃ ॥

ಅಗ್ನಿಯಲ್ಲಿ ಪ್ರಕ್ಷಿಪ್ತವಾದ ರೇತಸ್ಸಿನಿಂದ ಭೃಗುವೂ, ಅಂಗಿರಸ್ಸೂ ಉತ್ಪನ್ನವಾದಾಗ ಅವರನ್ನು ವಾಗ್ದೇವಿಯು ವೀಕ್ಷಿಸಿದಳು. ವಾಗ್ದೇವಿಯನ್ನು ಪ್ರಜಾಪತಿಯು ನೋಡಿದನು. ಆಗ ವಾಗ್ದೇವಿಯು ಪ್ರಜಾಪತಿಯನ್ನು ಕುರಿತು ಭೃಗು, ವರುಣ ಈ ಇಬ್ಬರು ಪುತ್ರರಿಗಿಂತಲೂ ಮೂರನೆಯ ಪುತ್ರನನ್ನು ಹೊಂದಬೇಕೆಂಬ ಇಚ್ಛೆಯು ತನಗಿದೆಯೆಂದೂ ಅದನ್ನು ಪ್ರಜಾಪತಿಯು ನೆರವೇರಿಸಿ ಕೊಡಬೇಕೆಂದೂ ಕೇಳಿಕೊಂಡಳು.

ಪ್ರಜಾಪತಿಸ್ತಥೇತ್ಯುಕ್ತಃ ಪ್ರತ್ಯಭಾಷತ ಭಾರತೀಂ ।
ಋಷಿರತ್ರಿಸ್ತತೋ ಜಜ್ಞೇ ಸೂರ್ಯಾನಲಸಮದ್ಯುತಿಃ ॥
(ಬೃ. ದೇ. ೫, ೯೭—೧೦೧)

ವಾಗ್ದೇವಿಯಿಂದ ತೃತೀಯಪುತ್ರಾರ್ಥವಾಗಿ ಈ ರೀತಿ ಪ್ರಾರ್ಥಿತನಾದಾಗ ಪ್ರಜಾಪತಿಯು ಆಗಬಹುದೆಂದೊಪ್ಪಿ ಕೊಂಡನು. ಪುನಃ ಅವನ ಪ್ರಯತ್ನದಿಂದ ಅತ್ರಿಋಷಿಯು ಉತ್ಪನ್ನನಾದನು. ಈ ಅತ್ರಿಮಹರ್ಷಿಯು ತನ್ನ ದಿವ್ಯಗುಣಗಳಿಂದ ಕೂಡಿದ್ದುದರಿಂದ ಇವನ ತೇಜಸ್ಸು ಸೂರ್ಯನ ಪ್ರಭೆಗೂ ಅಗ್ನಿಯ ಪ್ರಭೆಗೂ ಸಮಾನವಾದುದಾಗಿದ್ದಿತು, ಎಂದು ಅತ್ರಿಋಷಿಯ ಉತ್ಪತ್ತಿಕ್ರಮವನ್ನೂ ಅವನ ಮಾಹಾತ್ಮ್ಯವನ್ನೂ ತಿಳಿಸಿದೆ. ಈ ವಿವರಣವು ವೈದಿಕ ವಾಕ್ಯಗಳಲ್ಲಿ ವರ್ಣಿತವಾಗಿರುವ ವಿಷಯವನ್ನೇ ಅನುಸರಿಸಿದೆ. ಉದಾಹರಣೆಗೆ, ಶತಪಥಬ್ರಾಹ್ಮಣದಲ್ಲಿ ಇದೇ ಅಂಶವು ವರ್ಣಿತವಾಗಿದೆ. ಆದರೆ ವಿವರಣೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ.

ತದ್ಧೈತದ್ದೇವಾಃ । ರೇತಶ್ಚರ್ಮನ್ವಾ ಯಸ್ಮಿನ್ವಾ ಬಭ್ರುಸ್ತದ್ಧಸ್ಮ ಪೃಚ್ಛಂತ್ಯತ್ರೇವ ತ್ಯಾದಿತಿ ತತೋಽತ್ರಿಃ ಸಂಬಭೂವ ತಸ್ಮಾದಪ್ಯಾತ್ರೇಯ್ಯಾ ಯೋಷಿತೈನಸ್ವ್ಯೇತಸ್ಯೈ ಹಿ ಯೋಷಾಯೈ ವಾಚೋ ದೇವತಾಯಾ ಏತೇ ಸಂಭೂತಾಃ ॥
(ಶ. ಬ್ರಾ. ೧-೪-೫-೧೩)

ವಾಕ್ಕಿಗೂ ಮನಸ್ಸಿಗೂ ತಮ್ಮತಮ್ಮ ವೈಯಕ್ತಿಕವಾದ ವೈಶಿಷ್ಟ್ಯದ ವಿಷಯದಲ್ಲಿ ವಿವಾದವುಂಟಾದಾಗ ಪ್ರಜಾಪತಿಯು ಮನಸ್ಸಿನ ಪರವಾಗಿ ತನ್ನ ತೀರ್ಮಾನವನ್ನು ಕೊಟ್ಟನು. ವಾಕ್ಕಿಗೆ ಅಸಮಾಧಾನವಾಯಿತು ಎಂದು ಹೇಳಿರುವ ಈ ಕಥೆಯಲ್ಲಿ ವಾಕ್ಕಿಗೂ ಪ್ರಜಾಪತಿಗೂ ಅನುರಾಗವುಂಟಾಯಿತು ಎಂದು ಹೇಳುವಂತಿಲ್ಲ. ತದ್ಪುತ್ಪನ್ನವಾದ ಆ ರೇತಸ್ಸಿನಿಂದ ಭೃಗುವಿನ ಮತ್ತು ಅಂಗಿರಸ್ಸಿನ ಉತ್ಪತ್ತಿಯನ್ನು ಆ ಸಂದರ್ಭದಲ್ಲಿ ತಿಳಿಸಿಲ್ಲ. ಆದರೂ ಅತ್ರಿಯು ಪ್ರಜಾಪತಿ ಪುತ್ರನೆಂದು ಮಾತ್ರ ತಿಳಿಸಿದೆ. ವಾಗ್ದೇವಿಯ ಪುತ್ರನೆಂದೂ ಸೂಚಿತವಾಗಿದೆ. ಅತ್ರಿಶಬ್ದದ ರೂಪನಿಷ್ಪತ್ತಿಯೂ ಉಕ್ತವಾಗಿದೆ. ದಿವ್ಯತೇಜಸ್ಸಿನಿಂದ ಸಂಭೂತನೆಂಬುದು ಮಾತ್ರ ವ್ಯಕ್ತವಾಗುತ್ತದೆ. ಈ ದಿವ್ಯತೇಜಸ್ಸಿನ ಮಹಿಮೆಯೂ ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿದೆ. ಉದಾಹರಣೆಗೆ—

ಆತ್ರೇಯಾಯ ಹಿರಣ್ಯಂ ದದಾತಿ ಯತ್ರ ವಾ ಅದಃ ಪ್ರಾತರನುವಾಕಮನ್ವಾಹುಸ್ತದ್ಧ ಸ್ಮೈತತ್ಪುರಾ ಶಂಗ್‌ಸಂತ್ಯತ್ರಿರ್ವಾ ಋಷೀಣಾಗ್‌ಂ ಹೋತಾಸಾಧ್ಯೈತತ್ಸದೋಽಸುರತಮ-ಸಮಭಿಪುಪ್ರುವೇ ತೇ ಋಷಯೋಽತ್ರಿಮಬ್ರುವನ್ನೇಹಿ ಪ್ರತ್ಯಙ್‌ದಂ ತಮೋಽಪಜಹೇತಿ

ಸ ಏತತ್ತಮೋಽಪಾಹನ್ನಯಂ ವೈ ಜ್ಯೋತಿರ್ಯ ಇದಂ ತಮೋಽಪಾಬಧೀದಿತಿ ತಸ್ಮಾ ಏತಜ್ಜ್ಯೋತಿರ್ಹಿರಣ್ಯಂ ದಕ್ಷಿಣಾಮನಯಜ್ಜ್ಯೋತಿರ್ಹಿ ಹಿರಣ್ಯಂ ತದ್ವೈ ಸ ತತ್ತೇಜಸಾ ವೀರ್ಯೇಣರ್ಷಿಸ್ತಮೋಽಪಜಘಾನಾಥ್ಯೈಷ ಏತೇನೈವ್ಯೈತಜ್ಜ್ಯೋತಿಷಾ ತಮೋಽಪಹಂತಿ ತಸ್ಮಾದಾತ್ರೇಯಾಯ ಹಿರಣ್ಯಂ ದಧಾತಿ ॥

(ಶ. ಬ್ರಾ. ೪-೩-೪-೨೧)

ಯಜ್ಞವೇದಿಯ ಮುಂಭಾಗದಲ್ಲಿ ಋತ್ವಿಕ್ಕುಗಳು ಒಂದುಸಲ ಪ್ರಾತರನುವಾಕವನ್ನು ಪಠಿಸುತ್ತಿದ್ದರು. ಆ ಕಾಲದಲ್ಲಿ ಆ ಋತ್ವಿಕ್ಕುಗಳಲ್ಲಿ ಅತ್ರಿಋಷಿಯು ಹೋತೃವಾಗಿದ್ದನು. ಆ ಕಾಲದಲ್ಲಿ ಅಸುರರ ಶಕ್ತಿರೂಪವಾದ ಕಗ್ಗತ್ತಲೆಯು ಬಂದು ಸದಸ್ಸನ್ನೆಲ್ಲಾ ಆವರಿಸಿತು. ಆಗ ಋಷಿಗಳೆಲ್ಲರೂ ಸಹ ಅತ್ರಿಯನ್ನು ಕುರಿತು "ದಯವಿಟ್ಟು ಇಲ್ಲಿ ಬಾ, ಈ ಕಗ್ಗತ್ತಲೆಯನ್ನು ನಾಶಪಡಿಸು" ಎಂದು ಪ್ರಾರ್ಥಿಸಿಕೊಂಡರು. ಅವನು ಒಡನೆಯೇ ಆ ಅಂಧಕಾರವನ್ನು ನಾಶ ಪಡಿಸಿದನು. ಆಗ ಋಷಿಗಳೆಲ್ಲರೂ ವಿಸ್ಮಿತರಾಗಿ, "ಇವನೇ ಜ್ಯೋತೀರೂಪನು" ಎಂದು ತಿಳಿದು ಅವನಿಗೆ ಹಿರಣ್ಯ ವನ್ನು ತಂದುಕೊಟ್ಟರು. ಹಿರಣ್ಯವೇ ಜ್ಯೋತಿಯು. ಆ ಜ್ಯೋತಿಯ ಸಹಾಯದಿಂದ ಅತ್ರಿಯು ಅಸುರರಿಗೆ ಸಂಬಂಧಿಸಿದ ಕಗ್ಗತ್ತಲೆಯನ್ನು ನಾಶಮಾಡಿದನು. ಆದುದರಿಂದ ಪ್ರಕೃತದಲ್ಲೂ ಸಹ ಅದೇ ಜ್ಯೋತಿಯಿಂದ ಕತ್ತಲನ್ನು ನಾಶಮಾಡುವನು. ಅದರ ಪ್ರತಿಫಲವಾಗಿ ಅತ್ರಿಗೋತ್ರೋತ್ಪನ್ನರಾದ ಋಷಿಗಳಿಗೆ ಸುವರ್ಣದಾನವನ್ನು ಮಾಡಿರಿ ಎಂದು ಅತ್ರಿಯ ಪ್ರಶಂಸೆಯಿದೆ. ಇದೇ ದಿವ್ಯತೇಜಸ್ಸನ್ನು ಬೃಹದ್ದೇವತೆಯಲ್ಲೂ ಸಹ,

ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ।

(ಬೃ ದೇ. ೫-೬೫)

ಆ ತಂದೆಮಕ್ಕಳಿಬ್ಬರೂ ದೇದೀಪ್ಯಮಾನವಾದ ಪ್ರಭೆಯುಳ್ಳವನೂ ಮಹರ್ಷಿಯೂ ಆದ ಅತ್ರಿಗೆ ನಮಸ್ಕರಿಸಿದರು ಎಂದು ಅತ್ರಿಯ ತೇಜೋಮಯವಾದ ಸ್ವರೂಪವನ್ನು ಪ್ರಶಂಸಿದೆ. ಮೇಲೆ ಉದಾಹೃತವಾದ ಬೃಹದ್ದೇವತಾವಾಕ್ಯದಲ್ಲಿ "ಸೂರ್ಯಾನಲಸಮದ್ಯುತಿಃ" ಎಂಬ ವಿಶೇಷಣವು ಅತ್ರಿಯ ದಿವ್ಯಸ್ವರೂಪವನ್ನು ವಿವರಿಸುತ್ತದೆ. ಈ ಋಷಿಯು ತನ್ನ ಜ್ಯೋತಿಯಿಂದ ಕೇವಲ ಮಾನವವ್ಯಕ್ತಿಗಳಿಗೆ ಪ್ರತಿಬಂಧಕವಾಗಿರುವ ಕತ್ತಲನ್ನು ಮಾತ್ರ ನಾಶಮಾಡದೆ, ದಿವ್ಯ ಲೋಕದಲ್ಲಿ ತೇಜಸ್ಸಿಗೇ ಆಧಾರವಾಗಿರುವ ಸೂರ್ಯನಿಗೂ ಸಹ ಸಹಾಯಮಾಡಿದನೆಂಬುದು ಗಮನಾರ್ಹವಾದ ವಿಷಯ ಮತ್ತು ಇವನ ಅತ್ಯಧಿಕವಾದ ಮಾಹಾತ್ಮ್ಯವನ್ನು ತಿಳಿಸುತ್ತದೆ. ಆದರೆ ಈ ಸನ್ನಿವೇಶಗಳಲ್ಲಿ ಇನ್ನೊಂದು ಸಂಶಯಕ್ಕೆ ಅವಕಾಶವಿರುತ್ತದೆ. ತಾನು ಕತ್ತಲಲ್ಲಿ ಬಿದ್ದಿದ್ದಾಗ,

ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋಮ್ಯಾವಂತಮತ್ರಯೇ ।

(ಋ. ಸಂ. ೧-೧೧೨-೭)

ಯುದ್ವಾಂ ದಂಸೋಭಿರಶ್ವಿನಾತ್ರಿರ್ನರಾವವರ್ತತಿ ।

(ಋ. ಸಂ. ೫-೭೩-೭)

ಯುವಮ್ಮೃಬೀಸಮುತ ತಪ್ತಮತ್ರಯ ಓಮನ್ವಂತಂ ಚಕ್ರಥುಃ ಸಪ್ತವಧ್ರಯೇ ॥

(ಋ. ಸಂ. ೧೦-೩೯-೯)

ಇತ್ಯಾದಿ ಸ್ಥಳಗಳಲ್ಲೆಲ್ಲಾ ಕಗ್ಗತ್ತಲೆಯಲ್ಲಿ ಬಿದ್ದಿದ್ದ ಅತ್ರಿಯನ್ನು ಅಶ್ವಿನೀದೇವತೆಗಳು ರಕ್ಷಿಸಿದ ವಿಷಯವು ತಿಳಿಸಲ್ಪಟ್ಟಿದೆ. ಆ ಕಥೆಯ ವಿವರಣೆಯೇನೆಂದರೆ, ಅಸುರರು ಒಂದು ಸಲ ಅತ್ರಿಯನ್ನು ಅಗ್ನಿಕೂಟದಲ್ಲಿ ತಳ್ಳಿಬಿಟ್ಟರು, ಅವನು ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಿದನು. ಅವರು ಬಂದು ವೃಷ್ಟ್ಯುದಕದಿಂದ ಅಗ್ನಿಶಮನವನ್ನು ಮಾಡಿ ಅವನನ್ನು ಮೇಲಕ್ಕೆತ್ತಿದರು. ಅನಂತರ ಅವನಿಗೆ ಅಸುರರನ್ನು ನಿರೋಧಿಸುವ ಶಕ್ತಿಯು ಬಂದಿತು ಎಂದಿದೆ. ಈ ರೀತಿ ತನ್ನ ರಕ್ಷಣೆಗೇ ಅತ್ರಿಯು ಇತರ ದೇವತಾಸಹಾಯವನ್ನಪೇಕ್ಷಿಸಿದ ಸಂದರ್ಭವಿದ್ದಾಗ ಅವನು ತನ್ನ ನೈಜಶಕ್ತಿಯಿಂದ ಅಸುರಾದಿಗಳನ್ನು ನಾಶಮಾಡಿ ದೇವತೆಗಳಿಗೂ ಇತರ ಋಷಿಗಳಿಗೂ ಸಹಾಯಮಾಡಿದನು ಎಂದು ಹೇಳುವುದು ಪರಸ್ಪರ ವಿರುದ್ಧವಲ್ಲವೇ ಎಂಬ ಒಂದು ಪ್ರಶ್ನೆಯು ಸಹಜವಾಗಿರುತ್ತದೆ. ಆದರೆ ಇದಕ್ಕೆ ಸಮಾಧಾನವನ್ನು ಹೇಳುವುದು ಕಷ್ಟವಲ್ಲ. ಮೇಲೆ ಉದಾಹೃತವಾಗಿರುವ ೧. ೧೧೨. ೭ನೇ ಮಂತ್ರದಲ್ಲಿ ತಪ್ತಂ ಘರ್ಮಂ ಓಮ್ಯಾವಂತಂ । ಎಂಬ ವಾಕ್ಯಕ್ಕೆ ಸಾಯಣರು ಯಾಸ್ಕಮತವನ್ನುದ್ಧರಿಸಿ "ಯಾಸ್ಕಪಕ್ಷೇ ತು ಅತ್ರಯೇ ಹವಿಷಾಮತ್ರೇಽಗ್ನಯೇ ಹವಿರುತ್ಪತ್ತ್ಯರ್ಥಂ ಸೂರ್ಯಕಿರಣಸಂತಪ್ತಂ ಘರ್ಮಂ ನೈದಾಘಂ ಅಹಃ ಓಮ್ಯಾವಂತಂ ತೃಪ್ತಿಹೇತು-ವೃಷ್ಟ್ಯುದಕೋಪೇತಂ ಕೃತವಂತೌ ಇತಿ ಯೋಜ್ಯಂ" ಎಂದರೆ, ಯಾಸ್ಕರ ಮತದಲ್ಲಿ ಅತ್ರಿ ಶಬ್ದಕ್ಕೆ ಹವಿಸ್ಸನ್ನು ಭಕ್ಷಿಸತಕ್ಕ ಅಗ್ನಿಯೆಂದರ್ಥ. ಇಂತಹ ಅಗ್ನಿಗೆ ಸೂರ್ಯಕಿರಣಸಂತಪ್ತವಾದುದೂ, ಬೇಸಿಗೆಯ ಕಾಲಕ್ಕೆ ಸಂಬಂಧಿಸಿದುದೂ ಆದ ಅಹಸ್ಸನ್ನು ತೃಪ್ತಿಕರವಾದ ವೃಷ್ಟ್ಯುದಕದಿಂದ ಕೂಡಿದುದನ್ನಾಗಿ ಮಾಡಿದರು ಎಂದು ತಾತ್ಪರ್ಯ. ಅಗ್ನಿಗೂ, ಅತ್ರಿಗೂ ಇರುವ ತಾದಾತ್ಮ್ಯವನ್ನು ತಿಳಿಸುವ ವಿಶೇಷಣಗಳೂ ಸಹ ಈ ವಿಧವಾದ ಅರ್ಥಕ್ಕೆ ಸಹಾಯ ಮಾಡುತ್ತವೆ. ಉದಾಹರಣೆಗೆ—

ಋಷಿಂ ನರಾವಂಹಸಃ ಪಾಂಚಜನ್ಯಮೃಬೀಸಾದತ್ರಿಂ ಮುಂಚಥೋ ಗಣೇನ ।

(ಋ. ಸಂ. ೧-೧೧೭-೩)

ಎಂಬಲ್ಲಿ ಪಾಂಚಜನ್ಯ ಶಬ್ದವು ಅತ್ರಿಗೆ ವಿಶೇಷಣವಾಗಿದೆ. ಮತ್ತು.

ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ । ತಮೀಮಹೇ ಮಹಾಗಯಂ ॥

(ಋ. ಸಂ. ೯-೬೬-೨೦)

ಇತ್ಯಾದಿ ಸ್ಥಳಗಳಲ್ಲಿ ಇದೇ ಪಾಂಚಜನ್ಯಪದವು ಋಷಿಯಾದ ಅಗ್ನಿಗೆ ವಿಶೇಷಣವಾಗಿದೆ. ಎರಡೆಡೆಗಳಲ್ಲೂ ಸಹ ಈ ವಿಶೇಷಣಪದಕ್ಕೆ ಒಂದೇ ವಿಧವಾದ ನಿರ್ವಚನವನ್ನೂ ವಿವರಣೆಯನ್ನೂ ಹೇಳಿದೆ. ಇಂತಹ ಸಂದರ್ಭಗಳಲ್ಲಿ ಅಗ್ನಿಗೂ ಅತ್ರಿಗೂ ಅಭೇದಸೂಚಕವಾದ ವಿಶೇಷಣಗಳಿದ್ದು, ಕೇವಲ ಇಂತಹ ಸಾಧಾರಣ ಧರ್ಮಬೋಧಕವಾದ ವಿಶೇಷಣಗಳೇ ಅಲ್ಲದೇ, ಇನ್ನೂ ಅನೇಕ ಅಂಶಗಳಲ್ಲೂ ಅಗ್ನಿಗೂ ಅತ್ರಿಗೂ ತಾದಾತ್ಮ್ಯಬೋಧಕವಾದ ವರ್ಣನೆಗಳ ಆಧಾರದಮೇಲೆ ಅರ್ಥವನ್ನು ಕಲ್ಪಿಸುವುದು ಒಂದು ವಿಧ, ಇದಲ್ಲದೇ,

ಅಗ್ನಿರತ್ರಿಂ ಘರ್ಮ ಉರುಷ್ಯದಂತರಗ್ನಿರ್ನೃಮೇಧಂ ಪ್ರಜಯಾಸೃಜತ್ಸಂ ॥

(ಋ. ಸಂ. ೧೦-೮೦-೩)

ಇತ್ಯಾದಿ ಸಂದರ್ಭಗಳಲ್ಲಿ ಋಬೀಸದಲ್ಲಿ ಸ್ಥಿತನಾಗಿ ಸಂಕಟಪಡುತ್ತಿದ್ದ ಅತ್ರಿಯನ್ನು ಅಗ್ನಿಯು ರಕ್ಷಿಸಿದನು ಇತ್ಯಾದಿ ವರ್ಣನೆಗಳಿರುವ ಸ್ಥಳಗಳಲ್ಲಿ ಇಬ್ಬರಿಗೂ ಭೇದವು ಸೂಚಿತವಾಗಿದೆ. ಇಂತಹ ಸಂದರ್ಭಗಳೂ ಸಹ ಸಂಶಯಕ್ಕೆ ಅವಕಾಶವನ್ನುಂಟುಮಾಡುತ್ತವೆ. ಆದರೆ, ಇನ್ನೂ ಮುಂದೆ ಪರಿಶೀಲಿಸಿದರೆ, ಈ ಸಂಶಯವೂ ಪರಿಹಾರಗೊಳ್ಳುತ್ತದೆ.

ಐದನೆಯ ಮಂಡಲದ ನಲವತ್ತನೆಯ ಸೂಕ್ತವು ಅತ್ರಿಯ ದಿವ್ಯಸ್ವರೂಪವನ್ನು ವರ್ಣಿಸುವುದರಿಂದ ಪ್ರಕೃತದಲ್ಲಿ ಆ ಸೂಕ್ತದ ತಾತ್ಪರ್ಯವನ್ನು ತಿಳಿಯುವುದು ಅತ್ಯವಶ್ಯವಾಗಿರುತ್ತದೆ. ಇಂದ್ರ ಮತ್ತು ಸೂರ್ಯರು ಈ ಸೂಕ್ತದಲ್ಲಿ ಪ್ರಶಂಸಿತವಾಗಿರುವ ಮುಖ್ಯದೇವತೆಗಳು. ಇವರ ಜತೆಯಲ್ಲಿ ಅತ್ರಿಯೂ ದೇವತಾದೃಷ್ಟಿಯಿಂದಲೇ ಪರಿಗಣಿತನಾಗಿ ಇಂದ್ರಾದಿಗಳಂತೆಯೇ ಸ್ತುತನಾಗಿದ್ದಾನೆ. ಅತ್ರಿಋಷಿಯ ಮಹಿಮೆಯನ್ನು ತೋರಿಸುವ ಈ ಸೂಕ್ತದ ಮುಖ್ಯಾಂಶವೇನೆಂದು ಅರಿಯಬೇಕು.

ಸ್ವರ್ಭಾನೋರಧ ಯದಿಂದ್ರ ಮಾಯಾ ಅವೋ ದಿವೋ ವರ್ತಮಾನಾ ಅವಾಹನ್ ।
ಗೂಳ್ಹಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ॥
(ಋ. ಸಂ. ೫-೪೦-೬)

ಅತ್ರಿಃ ಸೂರ್ಯಸ್ಯ ದಿವಿ ಚಕ್ಷುರಾಧಾತ್ಸ್ವರ್ಭಾನೋರಪ ಮಾಯಾ ಅಘುಕ್ಷತ್ ।
(೫-೪೦-೮)

ಇತ್ಯಾದಿ ಋಕ್ಕುಗಳಲ್ಲಿ ಅತ್ರಿಯ ಅಲೌಕಿಕವಾದ ಶಕ್ತಿಯು ವರ್ಣಿತವಾಗಿದೆ. ಸ್ವರ್ಭಾನುವು ಸೂರ್ಯನನ್ನಾಕ್ರಮಿಸಿ ಕತ್ತಲೆಯನ್ನುಂಟುಮಾಡಿದಾಗ ಅತ್ರಿಋಷಿಯು ಕತ್ತಲನ್ನು ನಾಶಮಾಡಿ ಸೂರ್ಯನನ್ನು ಪ್ರಕಾಶಿಸುವಂತೆ ಮಾಡಿದನು ಎಂದಿವೆ. ಈ ಮಹತ್ಕಾರ್ಯವು ಅತ್ರಿಗಳಿಗಲ್ಲದೆ ಇನ್ನಾರಿಗೂ ಸಾಧ್ಯವಾಗಲಿಲ್ಲ ಎಂಬುದು " ಅತ್ರಯಸ್ತಮನ್ವವಿಂದನ್ನಹ್ಯನ್ಯೇ ಅಶಕ್ನುವನ್ " (೫-೪೦-೯) ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿದೆ. ಈ ಸಂದರ್ಭದಲ್ಲಿ ಸ್ವರ್ಭಾನು ಶಬ್ದಕ್ಕೆ ಅರ್ಥವೇನು ಮತ್ತು ಅಸುರಾತ್ಮಕನಾದ ಸ್ವರ್ಭಾನುವು ಸೂರ್ಯನನ್ನು ಮರೆಮಾಡಿದುದು ಎಂಬುದರ ಅರ್ಥವೇನು ಎಂಬ ವಿಷಯಸನ್ನು ನಿಷ್ಕೃಷ್ಟವಾಗಿ ಆಯಾ ಮಂತ್ರದ ವಿಶೇಷ ವಿಷಯಗಳಲ್ಲಿ ತಿಳಿಸಲಾಗುವುದು. ಪ್ರಕೃತದಲ್ಲಿ ಅತ್ರಿ ಮಹರ್ಷಿಯ ಮಹತ್ವವನ್ನು ವರ್ಣಿಸುವುದರಿಂದ ಈ ಸಂದರ್ಭವನ್ನು ಉದಾಹರಿಸಿದೆ. ಇದೇ ಅಂಶವನ್ನು ಕೌಶೀತಕಿಬ್ರಾಹ್ಮಣದಲ್ಲೂ ಸಹ ಉದಾಹರಿಸಿ ಅತ್ರಿ ಸ್ತುತಿಯನ್ನು ಮಾಡಿದೆ. ಅಲ್ಲಿ ಈ ಸನ್ನಿವೇಶವು ಕಥಾರೂಪದಲ್ಲಿ ಉಕ್ತವಾಗಿದೆ.

"ಸ್ವರ್ಭಾನುವೆಂಬ ಅಸುರನು ಸೂರ್ಯನನ್ನು ಕತ್ತಲಿನಿಂದ ಆಚ್ಛಾದಿಸಿದನು. ಅತ್ರಿಗಳು ಈ ಕತ್ತಲೆಯನ್ನು ನಾಶಮಾಡಲಿಚ್ಛಿಸಿದರು. ಅವರು ಸಪ್ತದಶಸ್ತೋಮದ ಸಹಾಯದಿಂದ ವಿಷುವತ್ತಿಗೆ ಪೂರ್ವಭಾವಿಯಾಗಿ ತ್ರ್ಯಹೀನಾತ್ಮಕವಾದ ಯಾಗವನ್ನಾಚರಿಸಿದರು. ಆಗ ಮುಂಭಾಗದಲ್ಲಿರುವ ಕತ್ತಲನ್ನು ನಾಶಮಾಡಲು ಸಾಧ್ಯವಾಯಿತು. ಆಗ ಆ ಕತ್ತಲೆಯು ಆದಿತ್ಯನ ಹಿಂಭಾಗವನ್ನಾವರಿಸಿತು. ಆಗಲೂ ಅದೇ ಯಾಗವನ್ನು ವಿಷುವದೂರ್ಧ್ವದಲ್ಲಿ ಆಚರಿಸಿದರು. ಆಗ ಹಿಂಭಾಗದ ಕತ್ತಲು ನಾಶವಾಯಿತು. ಆದುದರಿಂದ ಯಾರು ತ್ರ್ಯಹೀನಾತ್ಮಕವಾದ ಯಾಗವನ್ನು ಸಪ್ತದಶ ಸ್ತೋಮದ ಸಹಾಯದಿಂದ ವಿಷುವತ್ತಿನ ಎರಡು ಪಾರ್ಶ್ವಗಳಲ್ಲೂ ನೆರವೇರಿಸುವರೋ ಅವರು ಎರಡು ಲೋಕಗಳಲ್ಲಿರುವ ಕತ್ತಲನ್ನೂ ನಾಶಮಾಡುವರು. ಅದೇ ಸ್ವರಸಾಮವೆಂದೂ ಪ್ರಸಿದ್ಧವಾಗಿದೆ. ಇದರ ಸಹಾಯದಿಂದಲೇ ಅತ್ರಿಗಳು ಆದಿತ್ಯನನ್ನು ಕತ್ತಲಿನಿಂದ ಪಾರುಮಾಡಲು ಶಕ್ತರಾದರು. ಅತ್ರಿಗಳ ಈ ಮಾಹಾತ್ಮ್ಯವನ್ನೇ "ಯಂ ವೈ ಸೂರ್ಯಂ ಸ್ವರ್ಭಾನುಃ" (ಋ. ಸಂ. ೫-೪೦-೯) ಎಂದ ಮಂತ್ರದಲ್ಲಿ ಪ್ರಶಂಸಿಸಿದೆ" ಎಂದು ಕೌಷೀತಕಿಬ್ರಾಹ್ಮಣದಲ್ಲಿ ಅತ್ರಿಗಳ ಪ್ರಶಂಸೆಯಿರುತ್ತದೆ. (ಕೌ. ಬ್ರಾ. ೨೪-೩ ; ೪).

ಅತ್ರಿಗೆ ಈ ಮಹಿಮೆಯು ಪ್ರಾಪ್ತವಾಗಲು ಸಾಧನವಾವುದು ಯಾವ ಕರ್ಮದಿಂದ ಈ ಸಿದ್ಧಿಯು ಲಭಿಸಿತು. ಎಂಬುದನ್ನು ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ತಿಳಿಸಿದೆ.

ಅತ್ರಿರದದಾದೌರ್ವಾಯ ಪ್ರಜಾಂ ಪುತ್ರಕಾಮಾಯ ಸ ರಿರಿಚಾನೋಽಮನ್ಯತ ನಿರ್ವೀರ್ಯಶ್ಶಿಥಿಲೋ ಯಾತಯಾಮಾ ಸ ಏತಂ ಚತುರಾತ್ರಮಪಶ್ಯತ್ತಮಾಹರತ್ತೇನಾಯಜತ ತತೋ ವೈ ತಸ್ಯ ಚತ್ವಾರೋ ವೀರಾ ಆಜಾಯಂತ ಸುಹೋತಾ ಸೂದ್ಗಾತಾ ಸ್ವಧ್ವರ್ಯುಸ್ಸುಸಭೇಯೋ ಯ ಏವಂ ವಿದ್ವಾಗ್‌ಂಶ್ಚತುರಾತ್ರೇಣ ಯಜತ ಆಸ್ಯ ಚತ್ವಾರೋ ವೀರಾ ಜಾಯಂತೇ........ ॥

(ತೈ. ಸಂ. ೭-೧-೮-೧)

ಔರ್ವ (ಊರ್ವಪುತ್ರ) ನಿಗೆ ಸಂತಾನೇಚ್ಛೆಯುಂಟಾಯಿತು. ಆದರೆ ಅವನು ನಿರ್ವೀರ್ಯನಾಗಿಯೂ, ಶಿಥಿಲಪ್ರಾಯನಾಗಿಯೂ, ಜರಾಪೀಡಿತನಾಗಿಯೂ ಇದ್ದನು. ಆಗ ಅತ್ರಿಯು ಚತುರಾತ್ರಾತ್ಮಕವಾದ ಯಾಗವನ್ನು ಧ್ಯಾನಿಸಿ, ಅದರ ತತ್ತ್ವವನ್ನರ್ಥಮಾಡಿಕೊಂಡು ಅದನ್ನಾಚರಿಸಿದನು. ಅದರ ಫಲವಾಗಿ ಔರ್ವನಿಗೆ ನಾಲ್ಕು ಪುತ್ರರು ಜನಿಸಿದರು. ಅವರಲ್ಲಿ ಒಬ್ಬನು ಉತ್ತಮವಾದ ಹೋತೃವಾಗಿಯೂ, ಇನ್ನೊಬ್ಬನು ಶ್ರೇಷ್ಠವಾದ ಉದ್ಗಾತೃವಾಗಿಯೂ, ಮೂರನೆಯವನು ಪ್ರಶಸ್ಯವಾದ ಅಧ್ವರ್ಯುವಾಗಿಯೂ, ನಾಲ್ಕನೆಯವನು ಪ್ರಜ್ಞಾಕುಶಲನಾಗಿ ಶ್ಲಾಘ್ಯನಾದ ಸದಸ್ಯನಾಗಿಯೂ ಆದರು. ಅತ್ರಿಯಂತೆ ಅವನನ್ನೇ ಅನುಸರಿಸಿ, ಯಾರು ಈ ಯಾಗವನ್ನು ಆಚರಿಸುವರೋ. ಅವರಿಗೆ ಈ ಸಂಪತ್ತು ಲಭಿಸುವುದು.

ಯ ಉದ್ಯಂತಸ್ತೋಮಾಶ್ಶ್ರೇಸ್ಸಾತ್ರಿಗ್‌ಂ ಶ್ರದ್ಧಾದೇವಂ ಯಜಮಾನಂ ಚತ್ವಾರಿ ವೀರ್ಯಾಣಿ ನೋಪಾನಮನ್ತೇಜ ಇಂದ್ರಿಯಂ ಬ್ರಹ್ಮವರ್ಚಸಮನ್ನಾದ್ಯಗ್‌ಂ ಸ ಏತಾಗ್‌ಂಶ್ಚತುರಶ್ಚತುಸ್ತೋಮಾನ್ತ್ಸೋಮಾನಪಶ್ಯತ್ತಾನಾಹರತ್ತೈರಯಜತ ತೇಜ ಏವ ಪ್ರಥಮೇನಾವಾರುಂಧೇಂದ್ರಿಯಂ ದ್ವಿತೀಯೇನ ಬ್ರಹ್ಮವರ್ಚಸಂ ತೃತೀಯೇನಾನ್ನಾದ್ಯಂ ಚತುರ್ಥೇನ ಯ ಏವಂ ವಿದ್ವಾಗ್‌ಂಶ್ಚತುರಶ್ಚತುಸ್ತೋಮಾನ್ತ್ಸೋಮಾನಾಹರತಿ ತೈರ್ಯಜತೇ ತೇಜ ಏವ ಪ್ರಥಮೇನಾವರುಂಧ ಇಂದ್ರಿಯಂ ದ್ವಿತೀಯೇನ ಬ್ರಹ್ಮವರ್ಚಸಂ ತೃತೀಯೇನಾನ್ನಾದ್ಯಂ ಚತುರ್ಥೇನ ಯಾಮೇವಾತ್ರಿರ್ಋದ್ಧಿಮಾರ್ಧ್ನೋತ್ತಾಮೇವ ಯಜಮಾನ ಋಧ್ನೋತಿ ॥

(ತೈ. ಸಂ. ೭-೧-೮-೨)

ಸ್ತೋಮಗಳು ವೃದ್ಧಿಯನ್ನು ಹೊಂದುತ್ತಿದ್ದರೆ ಅವು ಪುರುಷನ ಅಭ್ಯುದಯಕ್ಕೆ ಕಾರಣಗಳಾಗುತ್ತವೆ. ಆದರೆ, ಇವುಗಳ ಸಹಾಯವಿಲ್ಲದೇ, ಅತ್ರಿಯು ಕೇವಲ ಶ್ರದ್ಧಾದೇವನನ್ನೇ ಪೂಜಿಸುತ್ತಿದ್ದುದರಿಂದ, ಅವನು ತೇಜಸ್ಸನ್ನಾಗಲಿ, ವೀರ್ಯವನ್ನಾಗಲಿ, ಬ್ರಹ್ಮವರ್ಚಸ್ಸನ್ನಾಗಲಿ, ಅನ್ನಸಂಪತ್ತನ್ನಾಗಲಿ ಪಡೆಯಲಾಗಲಿಲ್ಲ. ಅನಂತರ ಅವನು ಚತುಸ್ತೋಮಾತ್ಮಕವಾದ ಸೋಮಾಹುತಿಗಳ ಸ್ವರೂಪವನ್ನು ಅರ್ಥಮಾಡಿಕೊಂಡು, ಈ ಸ್ತೋಮಗಳ ಸಹಾಯದಿಂದ ಯಜ್ಞಕರ್ಮವನ್ನಾಚರಿಸಿದನು. ಆಗ ಅವನಿಗೆ ಮೊದಲನೆಯ ಸ್ತೋಮದಿಂದ ತೇಜಸ್ಸೂ, ಎರಡನೆಯದರಿಂದ ಇಂದ್ರಿಯವೀರ್ಯವೂ, ಮೂರನೆಯದರಿಂದ ಬ್ರಹ್ಮವರ್ಚಸ್ಸೂ, ಮತ್ತು ನಾಲ್ಕನೆಯವರಿಂದ ಅನ್ನಸಂಪತ್ತೂ ಲಭಿಸಿದವು. ಯಾವನು ಈ ರೀತಿ ಚತುಸ್ತೋಮಾತ್ಮಕವಾದ ಸೋಮಾಹುತಿಯನ್ನರ್ಪಿಸುವನೋ ಅವನಿಗೆ ಈ ನಾಲ್ಕು ಸಿದ್ಧಿಗಳೂ ಲಭಿಸುವುವು ಎಂದು ಅತ್ರಿಯ ಮಹತ್ವವನ್ನು ಪ್ರಶಂಸಿಸಿದೆ.

ಇಂತಹ ಮಹತ್ತ್ವವುಳ್ಳ ಅತ್ರಿಯು ಸೂರ್ಯನನ್ನು ಕತ್ತಲಿನಿಂದ ಬಿಡಿಸಿದನು ಎಂಬುದಕ್ಕೂ ಶ್ರುತಿವಾಕ್ಯಗಳ ಆಧಾರದ ಮೇಲೆ ಈ ರೀತಿ ಅರ್ಥಮಾಡಿದರೆ ತಪ್ಪಾಗಲಾರದು. ಅತ್ರಿಯೇ ಅಗ್ನಿರೂಪನಾಗಿ ಅಥವಾ ಅತ್ರಿರೂಪನಾದ ಅಗ್ನಿಯೇ ಸೂರ್ಯನನ್ನು ತಮಸ್ಸಿನಿಂದ ಬಿಡುಗಡೆ ಮಾಡಿದನು ಎಂದು ಹೇಳುವುದಕ್ಕೆ ಅವಕಾಶವಿದೆ. ರಾತ್ರಿಯ ತಮಸ್ಸಿನಿಂದ ಆವೃತನಾದ ಸೂರ್ಯನನ್ನು ಪ್ರಾತಃಕಾಲದ ಅಗ್ನಿಯು ತನ್ನ ಪ್ರಾರ್ಥನೆಯಿಂದ ಬಿಡಿಸಿ ಸೂರ್ಯನನ್ನು ಪ್ರಕಾಶಿಸುವಂತೆ ಮಾಡಿದನು ಎಂದೂ ತಾತ್ಪರ್ಯವನ್ನು ಹೇಳಬಹುದು. ಆದರೆ, ಅಗ್ನಿಗೆ ಅತ್ರಿ ಯೆಂಬ ಪರ್ಯಾಯ ನಾಮವು ಹೇಗೆ ಸಾಧ್ಯ ಎಂದರೆ, ಅತ್ರಿಶಬ್ದದ ನಿರ್ವಚನವು ಅಗ್ನಿಯೇ ಅತ್ರಿಸ್ವರೂಪನೆಂಬುದನ್ನು ನಿಷ್ಕೃಷ್ಟವಾಗಿ ತಿಳಿಸುತ್ತದೆ.

" ಅತ್ರಿರ್ಹ ವೈ ನಾಮೈತದ್ಯದತ್ರಿರಿತಿ ; ಸರ್ವಸ್ಯಾತ್ತಾ ಭವತಿ ।
(ಬೃ. ಉ. ೨-೨-೪)

ಸರ್ವವನ್ನೂ ಭಕ್ಷಿಸುವುದರಿಂದ ಅತ್ರಿಶಬ್ದವು ಸರ್ವಭಕ್ಷಕನಿಗೆ ವಿಶೇಷಣಪದವಾಗಿರುತ್ತದೆಯೆಂದು ಅತ್ರಿಶಬ್ದದ ನಿರ್ವಚನವಿದೆ. ಆದರೆ, ಪ್ರಕೃತವಾದ ಈ ವಾಕ್ಯದಲ್ಲಿರುವ ಅತ್ರಿಶಬ್ದದ ನಿರ್ವಚನಕ್ಕೂ ಅಗ್ನಿಗೂ ಏನು ಸಂಬಂಧ ವೆಂದರೆ, ಇದು ಅಗ್ನಿಯ ಸ್ವರೂಪವಲ್ಲದೇ ಬೇರೆಯಲ್ಲ.

ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾಁ ಆ ವಿವೇಶ ।
(ಋ. ಸಂ. ೧೦-೧೬-೬)

ಯುವಾನಂ ವಿಶ್ಪತಿಂ ಕವಿಂ ವಿಶ್ವಾದಂ ಪುರುವೇಪಸಂ । ಅಗ್ನಿಂ ಶುಂಭಾಮಿ ಮನ್ಮಭಿಃ ।
(ಋ. ಸಂ. ೮-೪೪-೨೬)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯನ್ನು ವಿಶ್ವಾದನೆಂದು ವರ್ಣಿಸಿದೆ. ಸರ್ವವನ್ನೂ ಭಕ್ಷಿಸುವವನೆಂದರ್ಥ. ಈ ಗುಣ ವಿರುವುದರಿಂದಲೇ ಅವನು ಅತ್ರಿಶಬ್ದದಿಂದ ನಿರ್ದಿಷ್ಟನಾಗಬಹುದು.

" ವಾಗೇವಾತ್ರಿಃ ; ವಾಚಾ ಹ್ಯನ್ನಮದ್ಯತೇ " (ಬೃ. ಉ. ೨. ೨-೪) ವಾಕ್ಕೇ ಅತ್ರಿಯು, ವಾಕ್ಕಿನಿಂದಲೇ ಅನ್ನವು ಭಕ್ಷಿಸಲ್ಪಡುತ್ತದೆ ಎಂದು ವಾಕ್ಕಿಗೂ, ಅತ್ರಿಗೂ ತಾದಾತ್ಮ್ಯಸಂಬಂಧವನ್ನು ಹೇಳುವಂತೆ, ಸೋಽಗ್ನಿಃ ಕಸ್ಮಿನ್ಪ್ರತಿಷ್ಠಿತ ಇತಿ। ವಾಚೀತಿ ॥ (ಬೃ. ಉ. ೩-೯-೨೪) ಅಗ್ನಿಗೂ, ವಾಕ್ಕಿಗೂ ಇರುವ ತಾದಾತ್ಮ್ಯಸಂಬಂಧವನ್ನು ತಿಳಿಸಿದೆ. ಇಂತಹ ವಿಶ್ವಾದನೇ ಅತ್ರಿರೂಪನಾದ ಅಗ್ನಿಯು. ಅತ್ರಿಶಬ್ದಕ್ಕೆ ಈ ಅರ್ಥವನ್ನು ಹೇಳಿದರೆ, ಆಗ ಮಹರ್ಷಿಂ ದೀಪ್ತತೇಜಸಂ, ಸೂರ್ಯಾನಲಸಮದ್ಯುತಿಃ ಇತ್ಯಾದಿ ವಿಶೇಷಣಗಳ ಸಾರ್ಥಕ್ಯವು ಹೊಂದಿಕೊಳ್ಳುತ್ತದೆ. ಅಲೌಕಿಕ ವಾದ ದಿವ್ಯಸ್ವರೂಪವುಳ್ಳದ್ದರಿಂದಲೇ ನಿರುಕ್ತಕಾರರೂ ಸಹ ಅತ್ರಿಶಬ್ದಕ್ಕೆ ಅತ್ರಿಃ ನ ತ್ರಯಃ । (ನಿ. ೩-೧೭) ನ ವಿದ್ಯಂತೇ ತ್ರೀಣಿ ಯಸ್ಯ ಸಃ । ದುಃಖತ್ರಯವು ಇಲ್ಲದಿರುವ ಮಹದ್ವ್ಯಕ್ತಿಯೆಂಬರ್ಥ ಮಾಡಿದ್ದಾರೆ. ಋಕ್ಸಂಹಿತೆ ಯಲ್ಲಿಯೂ ಅಗ್ನಿಯು ಅತ್ರಿಶಬ್ದನಿಂದ ನಿರ್ದಿಷ್ಟನಾಗಿದ್ದಾನೆ.

ಅತ್ರಿಮನುಸ್ವಾರಾಜ್ಯಮಗ್ನಿಮುಕ್ಥಾನಿ ವಾವೃಧುಃ । ವಿಶ್ವಾ ಅಧಿ ಶ್ರಿಯೋ ದಧೇ ॥
(ಋ. ಸಂ. ೨-೮-೫)

ಅತ್ರಿರೂಪನಾದ ಅಗ್ನಿಯನ್ನುದ್ದೇಶಿಸಿ ಸ್ತೋತ್ರಗಳನ್ನರ್ಪಿಸುತ್ತಾರೆ ಇತ್ಯಾದಿಯಾಗಿ ಪ್ರಶಂಸಿಸಿದೆ.

ಈ ಎಲ್ಲಾ ಶ್ರುತಿವಾಕ್ಯಗಳೂ ಸಹ ಮೇಲೆ ವಿವರಿಸಿರುವ ಅತ್ರಿಯ ಉತ್ಪತ್ತಿಯ ವರ್ಣನೆಗೆ ನಿಷ್ಕೃಷ್ಟವಾದ ಅರ್ಥವನ್ನು ಹೊಂದಿಸುತ್ತವೆ. ವಾಕ್ಕಿನೊಂದಿಗೆ ಸಂಬಂಧವನ್ನು ಹೊಂದಿದ ಪ್ರಜಾಪತಿಯ ರೇತಸ್ಸು ಅಗ್ನಿಯಲ್ಲಿ ಪ್ರಕ್ಷಿಪ್ತವಾಗಿ ಆ ಅಗ್ನಿಯಿಂದ ಅತ್ರಿಯು ಉತ್ಪನ್ನನಾದನು ಎಂಬ ಕಥೆಯಲ್ಲಿ, ವಾಕ್ಕು, ಅಗ್ನಿ ಮತ್ತು ಅತ್ರಿ ಈ ಮೂರು ಸ್ವರೂಪಗಳ ಸಂಬಂಧವು ವ್ಯಕ್ತವಾಗುತ್ತದೆ. ಮೇಲೆ ಉದಾಹೃತವಾಗಿರುವ ೧೦-೩೯-೯ ನೇ ಮಂತ್ರದಲ್ಲಿ ಅತ್ರಿಗೂ, ಸಪ್ತವಧ್ರಿಗೂ ತಾದಾತ್ಮ್ಯವನ್ನು ತೋರಿಸಿದೆ. ಈ ಅಂಶವನ್ನು ಮುಂದೆ ಸಪ್ತವಧ್ರಿಯ ವಿಷಯವಾಗಿ ವಿವರಿಸುವಾಗ ತಿಳಿಸಲಾಗುತ್ತದೆ.

ಈ ರೀತಿ ಉತ್ಪನ್ನನಾದ ಅತ್ರಿಯು ಐತಿಹಾಸಿಕವಾಗಿಯೂ ಪ್ರಸಿದ್ಧಿಯನ್ನು ಪಡೆದು ಸೂಕ್ತದ್ರಷ್ಟೃವೆಂದು ಪ್ರಖ್ಯಾತನಾಗಿದ್ದಾನೆ. ಅತ್ರಿಕೃತವಾದ ಸೂಕ್ತಗಳನ್ನು ಪ್ರಶಂಸಿಸುತ್ತಾ ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ.

ಅನಸ್ವಂತೇತಿ ಸೂಕ್ತೇಽಸ್ಮಿನ್ ಆಗ್ನೇಯೇಽತ್ರಿರ್ಋಷಿಸ್ಸ್ತುಯಂ ।
ದಾನತುಷ್ಟಃ ಶಶಂಸೈತಾನ್ ರಾಜರ್ಷೀನಿತಿ ಕೇಚನ ॥
(ಬೃ. ದೇ. ೫-೨೯)

'ಅನಸ್ವಂತಾ' ಎಂಬ ಮಂತ್ರದಿಂದ ಪ್ರಾರಂಭವಾಗುವ ಸೂಕ್ತವು (ಋ. ಸಂ. ೫-೨೭) ಅಗ್ನಿಪ್ರಶಂಸಾತ್ಮಕವಾದುದು. ಈ ಸೂಕ್ತದಲ್ಲಿ ತ್ರ್ಯರುಣ, ತ್ರಸದಸ್ಯು ಮತ್ತು ಅಶ್ವಮೇಧ ಎಂಬ ಮೂವರು ರಾಜರ್ಷಿಗಳ ಗುಣಕಥನವಿದೆ. ಈ ರಾಜರ್ಷಿಗಳಿಗೆ ಅಭ್ಯುದಯವನ್ನುಂಟುಮಾಡಬೇಕೆಂದು ಅತ್ರಿಯು ಅಗ್ನಿಯನ್ನು ಪ್ರಾರ್ಥಿಸುತ್ತಾನೆ. ಆದರೆ, ಇಲ್ಲಿ, ಈ ಸೂಕ್ತದ್ರಷ್ಟೃವಾದ ಋಷಿ ಯಾರು ಎಂಬ ವಿಷಯದಲ್ಲಿ ಸಂಶಯವುಂಟಾಗಿದೆ. ತ್ರ್ಯರುಣ, ತ್ರಸದಸ್ಯು, ಅಶ್ವಮೇಧ ಇವರು ಮೂವರೂ ಋಷಿಗಳು ಎಂಬುದು ಒಂದು ಮತ. ಅತ್ರಿಯು ಆ ರಾಜರ್ಷಿಗಳಿಂದ ದತ್ತವಾದ ದಾನವನ್ನು ಪ್ರಶಂಸಿಸುತ್ತಾ, ಅವರನ್ನು ಅಗ್ನಿಯ ಮುಂದೆ ಪ್ರಶಂಸಿಸುತ್ತಾನೆಂದು ಇನ್ನೊಂದು ಮತ. ಈ ಎರಡರಲ್ಲಿ ಎರಡನೇ ಮತವೇ ಸಾಧುವೆಂದು ಕಾಣುತ್ತದೆ. ಈ ವಾಕ್ಯಗಳೆಲ್ಲವೂ ಪ್ರಥಮಪುರುಷದಲ್ಲಿ ಆ ರಾಜರ್ಷಿಗಳನ್ನು ನಿರ್ದೇಶಿಸಿದೆ, "ಯೋ ಮೇ ಶತಾ ಚ ವಿಂಶತಿಂ ಚ ಗೋನಾಂ" ನನಗೆ ಸಹಸ್ರಸಂಖ್ಯಾಕವೂ, ಶತಸಂಖ್ಯಾಕವೂ ಆದ ಗೋವುಗಳನ್ನು ದಾನಮಾಡಿದ ತ್ರ್ಯರುಣ ಇತ್ಯಾದಿಗಳಿಗೆ ಸುಖವನ್ನುಂಟುಮಾಡು ಎಂದು ಪ್ರಾರ್ಥಿಸಿರುವುದರಿಂದ ಅತ್ರಿಕೃತವಾದ ಸೂಕ್ತವೇ ಇದು ಎಂದು ಹೇಳುವ ಮತವೇ ಸಾಧುವಾಗಿರುತ್ತದೆ. ಈ ಮತವನ್ನನುಮೋದಿಸುವ ಅರ್ಥವನ್ನು ಮುಂದಿನ ವಾಕ್ಯಗಳೂ ತಿಳಿಸುತ್ತವೆ.

ಆಶೀರಥ್ಯೇಷಣಾಚ್ಚೈಭ್ಯೋ ಅಗ್ನಿಂ ಪ್ರತಿ ಚ ದೃಶ್ಯತೇ ।
ಅಯುತಂ ಚ ಗವಾಂ ತ್ರೀಣಿ ಶತಾನ್ಯಥ ಚ ವಿಂಶತಿಂ ॥
ಸೌವರ್ಣಂ ಶಕಟಂ ಗೋಭ್ಯಾಂ ತ್ರ್ಯರುಣೋಽದಾನ್ನೃಪೋಽತ್ರಯೇ ।
ಅಶ್ವಮೇಧಃ ಶತಂ ಚೋಕ್ಷ್ಣಾಂ ತ್ರಸದಸ್ಯುರ್ಧನಂ ಬಹು ॥
(ಬೃಹದ್ದೇವತಾ ೫-೩೦-೩೧)

ಪ್ರಕೃತವಾದ ಮಂತ್ರಗಳಲ್ಲಿರುವ ಪ್ರಾರ್ಥನೆಗಳನ್ನು ಪರಿಶೀಲಿಸಿದರೆ, ಆ ರಾಜರ್ಷಿಗಳಿಂದ ಪ್ರಾರ್ಥಿತನಾದ ಅತ್ರಿಯು ಅವರ ಪರವಾಗಿ ಅಗ್ನಿಯನ್ನು ಪೂಜಿಸಿ ಅವರಿಗೆ ಅಭ್ಯುದಯವನ್ನುಂಟುಮಾಡಬೇಕೆಂದು ಅವರಿಗೋಸ್ಕರ ಪ್ರಾರ್ಥಿಸುವಂತೆ ತಿಳಿಯುವುದು. ತ್ರ್ಯರುಣನು ಅತ್ರಿಗೆ ಹತ್ತುಸಾವಿರದ ಮುನ್ನೂರಿಪ್ಪತ್ತು ಗೋವುಗಳನ್ನೂ, ಮತ್ತು

ವೃಷಭಗಳಿಂದ ಕೂಡಿದುದೂ, ಹಿರಣ್ಯಪೂರಿತವಾದುದೂ ಆದ ಶಕಟವನ್ನು ಕೊಟ್ಟನು. ಅಶ್ವಮೇಧನು ನೂರು ವೃಷಭಗಳನ್ನೂ, ತ್ರಸದಸ್ಯುವು ಪ್ರಭೂತವಾದ ಧನವನ್ನೂ ಕೊಟ್ಟನು ಎಂದಿರುವುದರಿಂದ ಮೇಲಿನ ಅರ್ಥವು ಹೊಂದಿಕೊಳ್ಳುತ್ತವೆ. ಇದಲ್ಲದೇ,

ರಾಜ್ಞಃ ಪ್ರತಿ ಚ ತತ್ಸೂಕ್ತಂ ಬಭಾಷ ಇತಿ ಕೇಚನ ।
ಆತ್ಮಾ ಹಿ ನಾತ್ಮನೇ ದದ್ಯಾತ್ ಅಗ್ರಹೀನ್ನೃಪತೇರ್ಋಷಿಃ ॥

(ಬೃ. ದೇ. ೫-೩೨)

ಇನ್ನು ಕೆಲವರ ಮತದಂತೆ, ಈ ಮಂತ್ರಗಳನ್ನು ಆ ರಾಜರ್ಷಿಗಳ ಪ್ರಶಂಸೆಗಾಗಿ ನಿರ್ಮಿಸಿದನೆಂದು ವಿವರಿಸಿದೆ. ತನಗೆ ತಾನೇ ಧನಗಳನ್ನು ಯಾರೂ ಕೊಟ್ಟುಕೊಳ್ಳುವುದಿಲ್ಲ. ಆ ರಾಜರ್ಷಿಗಳು ಅತ್ರಿಗೆ ದಾನಮಾಡಿದರು. ಅದರ ಪ್ರತಿಯಾಗಿ ಇವನು ಅವರನ್ನು ಪ್ರಶಂಸಿಸಿದನು ಎಂದಿದೆ. ಈ ಅಭಿಪ್ರಾಯವೂ ಮೇಲಿನ ಅಭಿಪ್ರಾಯವನ್ನೇ ಅನುಸರಿಸುತ್ತದೆ. ಒಂದುವೇಳೆ ತ್ರ್ಯರುಣ, ತ್ರಸದಸ್ಯು, ಅಶ್ವಮೇಧ ಇವರೂ ಸಹ ತಾವು ರಾಜರ್ಷಿಗಳಾಗಿದ್ದರೂ ಸೂಕ್ತದ್ರಷ್ಟರೂ ಆದರು ಎಂದು ಹೇಳಬಹುದಾದರೆ, ಅವರ ವಿಷಯವನ್ನು ತಿಳಿಯುವುದು ಅವಶ್ಯವಾಗಿರುತ್ತದೆ. ಈ ವಿಷಯವನ್ನು ೫-೨೭ ನೇ ಸೂಕ್ತದ ಪೀಠಿಕೆಯಲ್ಲಿ ವಿಮರ್ಶಿಸುವುದು ಉಚಿತವಾಗಿರುತ್ತದೆ.

## ಮೊದಲನೆಯ ಸೂಕ್ತವು

ಈ ಸೂಕ್ತದ್ರಷ್ಟೃಗಳಾದ ಬುಧ, ಗವಿಷ್ಠಿರ ಎಂಬ ಇಬ್ಬರು ಋಷಿಗಳ ಸೂಕ್ಷ್ಮಪರಿಚಯ

ಅಬೋಧಿ ದ್ವಾದಶ ಬುಧಗವಿಷ್ಠಿರಾ । ಐದನೆಯ ಮಂಡಲದಲ್ಲಿ ಪ್ರಥಮ ಸೂಕ್ತವು ಅಬೋಧ್ಯಗ್ನಿಃ ಎಂಬ ಮಂತ್ರದಿಂದ ಪ್ರಾರಂಭವಾಗಿ ಈ ಸೂಕ್ತದಲ್ಲಿ ಒಟ್ಟು ಹನ್ನೆರಡು ಋಕ್ಕುಗಳಿವೆ. ಇವುಗಳಿಗೆ ಬುಧ-ಗವಿಷ್ಠಿರರು ಎಂಬ ಅತ್ರಿವಂಶೋತ್ಪನ್ನರಾದ ಋಷಿಗಳು ಕರ್ತೃಗಳು ಎಂದು ಅನುಕ್ರಮಣಿಕಾವಾಕ್ಯವಿದೆ. ಬುಧನೆಂಬ ಋಷಿಯಾಗಲಿ ಗವಿಷ್ಠಿರನೆಂಬ ಋಷಿಯಾಗಲಿ ಅಷ್ಟು ಪ್ರಸಿದ್ಧರಲ್ಲ. ಆದರೆ, ಗವಿಷ್ಠಿರನ ವಿಷಯವು ಋಕ್ಸಂಹಿಯಲ್ಲಿಯೇ ಒಂದೆರಡು ಕಡೆಗಳಲ್ಲಿ ನಿರ್ದಿಷ್ಟವಾಗಿದೆ.

ಅವೋಚಾಮ ಕವಯೇ ಮೇಧ್ಯಾಯ ವಚೋ ವಂದಾರು ವೃಷಭಾಯ ವೃಷ್ಣೇ ।
ಗವಿಷ್ಠಿರೋ ನಮಸಾ ಸ್ತೋಮಮಗ್ನೌ ದಿವೀವ ರುಕ್ಮಮುರುವ್ಯಞ್ಚಮಶ್ರೇತ್ ॥

(ಋ. ಸಂ. ೫-೧-೧೨)

ಮೇಧಾವಿಯೂ, ಪೂಜಾರ್ಹನೂ, ತರುಣನೂ ಆದ ಅಗ್ನಿಯನ್ನು ಉದ್ದೇಶಿಸಿ ವಂದನ ಶೀಲವಾದ ಸ್ತುತಿಯನ್ನು ಪಠಿಸೋಣ. ಗವಿಷ್ಠಿರನಾಮಕನಾದ ಋಷಿಯು ನಮಸ್ಕಾರಪೂರ್ವಕವಾವ ಸ್ತುತಿಯನ್ನು ಪಠಿಸುತ್ತಾನೆ ಎಂದು ಋಷಿಯು ತನ್ನ ಕೃತಿಯನ್ನು ತಾನೇ ಅರ್ಪಿಸುತ್ತಾ ತನ್ನ ನಾಮವನ್ನೂ ಜೊತೆಯಲ್ಲಿಯೇ ನಿರ್ದೇಶಿಸಿ ತನ್ನ ಭಕ್ತಿಯನ್ನು ಪ್ರಕಟಿಸಿದ್ದಾನೆ. ಇದಲ್ಲದೇ,

ಅಗ್ನಿರತ್ರಿಂ ಭರದ್ವಾಜಂ ಗವಿಷ್ಠಿರಂ ಪ್ರಾವನ್ನಃ ಕಣ್ವಂ ತ್ರಸದಸ್ಯುಮಾಹವೇ ।
ಅಗ್ನಿಂ ವಸಿಷ್ಠೋ ಹವತೇ ಪುರೋಹಿತೋ ಮೃಳೀಕಾಯ ಪುರೋಹಿತಃ ॥

(ಋ. ಸಂ. ೧೦-೧೫೦-೫)

ಎಂಬ ಈ ಮಂತ್ರವು ವಸಿಷ್ಠಪುತ್ರನಾದ ಮೃಳೀಕನಿಂದ ನಿರ್ಮಿತವಾದುದು. ಈ ಮಂತ್ರದಲ್ಲಿ ವಸಿಷ್ಠನು ಅಗ್ನಿಯನ್ನು ಪ್ರಾರ್ಥಿಸುವ ಬಗೆಯನ್ನು ಮೃಳೀಕನು ತಿಳಿಸುತ್ತಾನೆ. ಪೂಜ್ಯನಾದ ಅಗ್ನಿಯು ಅತ್ರಿಯನ್ನೂ, ಭರದ್ವಾಜನನ್ನೂ, ಗವಿಷ್ಠಿರನನ್ನೂ, ಕಣ್ವನನ್ನೂ, ತ್ರಸದಸ್ಯುವನ್ನೂ ಸಂಗ್ರಾಮದಲ್ಲಿ ರಕ್ಷಿಸಲಿ ಎಂದು ಪ್ರಾರ್ಥಿಸಿದೆ. ಈ ರೀತಿ ವಸಿಷ್ಠಾದಿ ಋಷಿಗಳಿಗೂ, ಗವಿಷ್ಠಿರನಿಗೆ ಇರುವ ಸಂಬಂಧವು ಈ ಮಂತ್ರದಿಂದ ಸೂಚಿತವಾಗಿದೆ. ಇದನ್ನು ಬಿಟ್ಟರೆ, ಅಥರ್ವವೇದದಲ್ಲಿ ಒಂದು ಸನ್ನಿವೇಶದಲ್ಲಿ ಮಾತ್ರ (೪-೨೯-೫) ಇವನ ಹೆಸರು ಪ್ರಶಂಸಿತವಾಗಿದೆ. ಇಷ್ಟು ಆಧಾರವನ್ನು ಬಿಟ್ಟರೆ ಇವನ ವಿಷಯವನ್ನು ತಿಳಿಸುವ ಪ್ರಕರಣವಿನ್ನಾವುದೂ ಸದ್ಯಃ ಉಪಲಬ್ಧವಾಗಿಲ್ಲ.

## ಅಗ್ನಿಃ

ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ದೇವತೆಗಳಲ್ಲಿ ಅಗ್ನಿಯೇ ಅತ್ಯಂತ ಪ್ರಧಾನ ದೇವತೆ. ಇಂದ್ರನ ಸ್ತುತಿವಾಕ್ಯಗಳನ್ನು ಬಿಟ್ಟರೆ, ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಯನ್ನು ಪ್ರಶಂಸಿಸಿ ವರ್ಣಿಸುವ ಸೂಕ್ತಗಳೇ ಅತ್ಯಧಿಕವಾಗಿ ರುತ್ತವೆ. ೮, ೯ ನೆಯ ಮಂಡಲಗಳನ್ನು ಬಿಟ್ಟರೆ ಉಳಿದ ಎಲ್ಲಾ ಮಂಡಲಗಳೂ ಅಗ್ನಿದೇವತಾಕವಾದ ಸೂಕ್ತದಿಂದಲೇ ಪ್ರಾರಂಭವಾಗುವವು. ಆದುದರಿಂದ ಅಗ್ನಿದೇವತೆಯ ವಿಷಯವಾಗಿ ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ.

### ೧. ಅಗ್ನಿಯ ಕರ್ಮಗಳು

ಮಾನವನ ವ್ಯವಹಾರಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಯಜ್ಞಕರ್ಮಗಳೊಂದಿಗೆ ಸಾಕ್ಷಾತ್ಸಂಬಂಧವನ್ನು ಹೊಂದಿರುವುದರಿಂದಲೇ ಅಗ್ನಿಗೆ ಅತ್ಯಂತ ಪ್ರಧಾನವಾದುದೂ, ಪೂಜ್ಯವಾದುದೂ ಆದ ಸ್ಥಾನವಿರುತ್ತದೆ. ಅಗ್ನಿಯ ಪ್ರಧಾನಗುಣವು ಅವನ ಅಮರ್ತ್ಯತ್ವ. (೧-೪೪-೬ ; ೧-೫೮-೧ ; ೨-೧೦-೧, ೨ ; ೩-೨-೧ ; ೩-೩-೧ ; ೩-೧೧-೨ ; ೩-೨೭-೫ ; ೩-೨೭-೭ ; ೬-೯-೪ ; ೭-೪-೪ ; ೮-೬೦-೧೧ ; ೧೦-೭೯-೧).

ಸ್ವಾಭಾವಿಕವಾಗಿ ಮರಣಧರ್ಮರಹಿತನಾದರೂ ಸಹ, ಅಗ್ನಿಯು ಮಾನವರಿಗೆಲ್ಲಾ ಅನುಕೂಲವಾಗಲೆಂದು ಮರ್ತ್ಯರಾದ ಮಾನವರ ಅನುಗ್ರಹಕ್ಕಾಗಿ ಅವರ ಅತಿಥಿಯಾಗಿ ಅವರೊಂದಿಗೆ ಪೃಥ್ವೀಸ್ಥನಾಗಿರುತ್ತಾನೆ. ( ೧-೪೪-೪ ; ೧-೫೮-೬ ; ೨-೪-೧ ; ೩-೨-೨ ; ೪-೧-೨೦ ; ೫-೧-೮ ; ೫-೮-೨ ; ೫-೮-೧ ; ೬-೨-೭ ; ೬-೫-೧ ; ೬-೧೫-೪ ; ೮-೮-೪ ; ೮-೭೩-೧ ; ೧೦-೧-೫ ; ೧೦-೯೧-೨ ; ೧೦-೯೨-೧).

ಅಮರ್ತ್ಯನೂ, ಮಾನವರಿಗೆ ಅನುಗ್ರಹಾತ್ಮಕನೂ ಆದ ಅಗ್ನಿಯು ಯಜಮಾನನ ಯಜ್ಞಗೃಹದಲ್ಲಿ ಶಾಶ್ವತ ನಾದ ಋತ್ವಿಕ್ಕಾಗಿರುತ್ತಾನೆ. ಪುರೋಹಿತ, ಋತ್ವಿಕ್, ಹೋತೃ, ಬ್ರಹ್ಮ ಇತ್ಯಾದಿ ವಿಶೇಷಣಗಳಿಂದ ವರ್ಣಿತ ನಾಗಿದ್ದಾನೆ. ಉಷೋದೇವಿಯೊಡನೆ ಪ್ರಬುದ್ಧನಾಗುವವನೆಂದು ಕೆಲವು ವಾಕ್ಯಗಳಲ್ಲಿಯೂ, ಉಷಸ್ಸಿಗಿಂತಲೂ ಪೂರ್ವಭಾವಿಯಾಗಿಯೇ ಆವಿರ್ಭೂತನಾಗುವನೆಂದು ಇನ್ನು ಕೆಲವು ವಾಕ್ಯಗಳಲ್ಲಿಯೂ ಸ್ತುತಿಸಿದೆ. ೧-೧-೧ ; ೧-೧೨-೧ ; ೧-೧೩-೧, ೪ ; ೧-೨೬-೭ ; ೧-೩೬-೩, ೫ ; ೧-೪೪-೭ ; ೧-೪೪-೧೨ ; ೧-೪೫-೭ ; ೧-೫೮-೧, ೬ ; ೧-೬೦-೪ ; ೧-೬೮-೪, ೭ ; ೧-೭೬-೨, ೪ ; ೧-೧೨೭-೧ ; ೧-೧೪೧-೧೨ ; ೧-೧೪೯-೪, ೫ ; ೨-೫-೧ ; ೨-೬-೬ ; ೨-೯-೧ ; ೩-೭-೯ ; ೩-೧೦-೨, ೭ ; ೩-೧೧-೧ ;

೩-೧೪-೧ ; ೩-೨೯-೧ ; ೪-೧-೮ ; ೫-೧೧-೨ ; ೫-೨೬-೭ ; ೬-೧೫-೧, ೪, ೧೬ ; ೬-೨೬-೧ ; ೭-೭-೫ ; ೭-೨೦-೫ ; ೭-೨೧-೧ ; ೭-೧೬-೫, ೧೨ ; ೮-೪೪-೬ ; ೮-೪೯-೧ ; ೯-೬೬-೨೦ ; ೧೦-೧-೬ ; ೧೦-೯೨-೨).

ದೇವಮಾನವಾದಿಗಳಿಂದೆಲ್ಲಾ ಪ್ರಾರ್ಥಿತನೂ, ನಿಯಮಿತನೂ ಆಗಿ ಸಕಲ ಯಜ್ಞಕರ್ಮಗಳನ್ನೂ ತನ್ನಲ್ಲೇ ಲೀನಮಾಡಿಕೊಳ್ಳುತ್ತಾನೆ. ತಾನೇ ನಿಜವಾದ ಕರ್ಮಕರ್ತನಾಗಿ, ಯಜಮಾನರು, ಅಧ್ವರ್ಯು, ಹೋತೃ, ಪೋತೃ ಇತ್ಯಾದಿ ಬೇರೆ ಬೇರೆ ಋತ್ವಿಕ್ಕುಗಳಿಗೆ ನಿಯಮಿಸತಕ್ಕ ಸಕಲವಾದ ಯಜ್ಞಕರ್ಮಗಳನ್ನು ತಾನೊಬ್ಬನೇ ನಿರ್ವಹಿಸಲು ಸಮರ್ಥನಾಗುತ್ತಾನೆ.

(೧-೯೪-೬; ೨-೧-೨; ೨-೫-೨; ೪-೯-೩, ೪; ೧೦-೨-೧). ಈ ನಿರ್ವಹಣಶಕ್ತಿಯಿರುವುದರಿಂದಲೇ, ಯಜಮಾನರಿಂದ ಈ ರೀತಿ ಪ್ರಾರ್ಥಿತನಾಗಿದ್ದಾನೆ. "ಎಲೈ ಅಗ್ನಿಯೇ; ನೀನು ಹೋತೃಗಳಲ್ಲೆಲ್ಲಾ ಅತ್ಯುತ್ತಮನಾದ ಹೋತೃವಾಗಿದ್ದೀಯೆ. ನೀನು ನಿತ್ಯತರುಣನು. ದೇವತಾತ್ಮರಾದ ಇತರ ಋತ್ವಿಕ್ಕುಗಳೊಡನೆ ಸೇರಿ, ಋತುಕಾಲಾನುಗುಣವಾದ ಕರ್ಮಗಳನ್ನಾಚರಿಸುತ್ತಾ ಯಜ್ಞಕಾಮರಾದ ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸು" ಇದೇ ವಿಧವಾಗಿ ಅಗ್ನಿಯ ಮಹದ್ಗುಣಗಳನ್ನು ವರ್ಣಿಸುವ ಇನ್ನೂ ಕೆಲವು ವಾಕ್ಯಗಳನ್ನು ವಿವರಿಸಿ ಕೆಳಗೆ ಉದಾಹರಿಸಲಾಗುತ್ತದೆ.

"ಅಗ್ನಿಯು ಮೇಧಾವಿಯಾದ ಕವಿಯು, ಕವಿಗಳಲ್ಲೆಲ್ಲಾ ದಿವ್ಯರೂಪನು. (ಅಸುರೋ ವಿಪಶ್ಚಿತಾಂ)" (೩-೩-೪)

"ಇಂತಹ ವಿಪಶ್ಚಿತ್ತಾದ ಅಗ್ನಿಯು ಎಲ್ಲಾ ವಿಧವಾದ ಪೂಜಾಕರ್ಮಗಳನ್ನೂ ಅರಿತಿದ್ದಾನೆ. ಉತ್ತಮನಾದ ನೇತೃವು. ಸುಲಭವಾಗಿ ಸಿದ್ಧಿಯನ್ನು ತರತಕ್ಕವನು. ಸಕಲ ಕರ್ಮಗಳಿಗೂ ರಕ್ಷಕನು. ಭಕ್ತರಿಗೆ ಸುಲಭವಲ್ಲದ ಕರ್ಮಗಳಲ್ಲಿ ಸಹಾಯಮಾಡಿ ಕರ್ಮವನ್ನು ಸಾಂಗಗೊಳಿಸತಕ್ಕವನು."

"ಎಲೈ ಅಗ್ನಿಯೇ, ಯಾವ ಯಜ್ಞವನ್ನು ನೀನು ಸುತ್ತುವರಿದು ನೆರವೇರುವಂತೆ ಮಾಡುತ್ತೀಯೋ ಅದು ಖಂಡಿತ ದೇವತೆಗಳಲ್ಲಿ ಹೋಗಿ ಸೇರುತ್ತದೆ." (೧-೧-೪)

"ಎಲೈ ಅಗ್ನಿಯೇ, ನೀನು ಅಂಗಿರಾಋಷಿಗಳಲ್ಲಿ ಪ್ರಥಮನು. ದೇವತೆಗಳಿಗೆಲ್ಲಾ ಕಲ್ಯಾಣಕಾರಕನಾದ ಸಖನು." (೧-೩೧-೧)

"ಎಲೈ ಅಗ್ನಿಯೇ, ನೀನೇ ಯಜ್ಞಕರ್ಮನಿರ್ವಹಣಕ್ಕೆಲ್ಲಾ ಪ್ರಧಾನವಾದ ಸಾಧನವು" (೩-೩-೩)

"ಎಲೈ ಅತ್ಯುತ್ತಮನಾದ ಋಷಿಯೇ, ನೀನು ಪ್ರಜ್ವಲಿತನಾಗಿದ್ದೀಯೆ. ಯಜ್ಞವನ್ನು ರಕ್ಷಿಸು" (೩-೨೧-೩)

"ಯಜ್ಞಸಾಧನನಾದವನೂ, ಋಷಿರೂಪನೂ ಆದ ಅಗ್ನಿಯು ಯಜ್ಞವನ್ನು ವೃದ್ಧಿಗೊಳಿಸುತ್ತಾ ಮುಂಭಾಗದಲ್ಲಿ ನೇತೃರೂಪನಾಗಿದ್ದಾನೆ. (೩-೨೭-೨, ೭)

"ಪ್ರಾಜ್ಞರಲ್ಲದವರ ನಡುವೆ ಇದ್ದು ಅವನೊಬ್ಬನೇ ಪ್ರಾಜ್ಞನಾದ ಕವಿಯು. ಅತ್ಯುತ್ತಮವಾದ ಜ್ಞಾನವುಳ್ಳವನು." (೭-೪-೪)

" ಎಲೈ ದೇವತೆಗಳೇ, ವಿಧಿವಿಹಿತವಾದ ಕರ್ಮಾಚರಣೆಯಲ್ಲಿ ನಾವು ಯಾವ ಲೋಪದೋಷಗಳನ್ನು ಮಾಡಿದರೂ ಸಹ, ಋತುಕಾಲನಿಯಮಗಳನ್ನರಿತವನೂ, ದೇವತೆಗಳಿಗೆ ಯಾವ ರೀತಿ ತೃಪ್ತಿಯನ್ನುಂಟುಮಾಡಬೇಕೆಂಬ ತಿಳಿವಳಿಕೆಯುಳ್ಳವನೂ ಆದ ಅಗ್ನಿಯು ನಮ್ಮ ಲೋಪದೋಷಗಳನ್ನೆಲ್ಲಾ ತಿದ್ದಿ ಸರಿಪಡಿಸುತ್ತಾನೆ." (೧೦-೨-೪)

" ಯಜ್ಞನಿರ್ವಹಣಕ್ಕೆ ಉಪಯುಕ್ತವಾದ ಅನೇಕ ವಿಷಯಗಳು ಮಂದಮತಿಗಳಾದ ನಮ್ಮ ತಿಳಿವಳಿಕೆಗೆ ಬಂದಿರುವುದೇ ಇಲ್ಲ. ಆದರೂ ಸಹ ಅಗ್ನಿಯು ಸರ್ವಜ್ಞನಾದುದರಿಂದಲೂ, ಪೂಜ್ಯನಾದ ಋತ್ವಿಕ್ಕಾದುದರಿಂದಲೂ, ಈ ಮರ್ಮಗಳನ್ನೆಲ್ಲಾ ಅರಿತು, ಎಲ್ಲವನ್ನೂ ಸರಿಪಡಿಸಿ, ದೇವತೆಗಳನ್ನು ಸಕಾಲದಲ್ಲಿ ಪೂಜಿಸಿ ಅವರವರಿಗೆ ಉಪಯುಕ್ತವಾದ ಹವಿರಾದಿಗಳನ್ನರ್ಪಿಸಿ ಎಲ್ಲರಿಗೂ ತೃಪ್ತಿಯನ್ನುಂಟುಮಾಡುತ್ತಾನೆ."

(೧೦-೨-೫)

" ಯಮಾನರಾದ ಮಾನವರ ದೃಷ್ಟಿಗಳು ಸೂರ್ಯನ ಕಡೆ ಯಾವ ರೀತಿ ತಿರುಗುತ್ತವೆಯೋ, ಅದೇ ರೀತಿ ಅಗ್ನ್ಯಭಿಮುಖವಾಗಿಯೂ ತಿರುಗುತ್ತವೆ" (೧೦-೯೧-೩)

" ಅಗ್ನಿಯೇ ಸಕಲ ಯಜಮಾನರಿಗೂ ಪಿತೃವು, ಅವನೇ ಪ್ರಭುವು. ಈಶ್ವರನು ಯಜ್ಞಕ್ಕೆ ಬಾಹ್ಯಾವಿರ್ಭಾವವನ್ನು ಹೊಂದಿದ ಧ್ವಜರೂಪನು. ಸಕಲ ವೈದಿಕಕರ್ಮಗಳಿಗೂ ಅಧ್ಯಕ್ಷನು." (ಕೇತುಂ ಯಜ್ಞಾನಾಂ ; ಪಿತಾ ಯಜ್ಞಾನಾಂ ; ಸಮ್ರಾಜಂ ;) ೩-೩-೩-೪; ೩-೧೦-೪; ೩-೧೧-೨; ೪-೩-೧; ೬-೨-೩; ೮-೪೩-೨೪; ೧೧-೧-೫; ೧೦-೬-೩;

" ಶೀಘ್ರಸಂಚಾರಿಯಾದ ಅಗ್ನಿಯು (ರಘುಪತ್ವಃ) ದೇವತೆಗಳಿಂದ ಪ್ರಾರ್ಥಿತನಾಗಿ, ಪೃಥಿವಿಯಿಂದ ಅಂತರಿಕ್ಷಕ್ಕೂ, ಅಂತರಿಕ್ಷದಿಂದ ಪೃಥಿವಿಗೂ ಸಂಚರಿಸುತ್ತಾ, ದೇವದೂತನೂ, ಮಾನವನಾದ ಯಜಮಾನದೂತನೂ ಆಗಿ, ದೇವಮಾನವಾದಿಗಳ ನಿತ್ಯಸಂಬಧವನ್ನು ಬೆಳೆಸುತ್ತಾನೆ. ಮಾನವರಿಂದ ಅರ್ಪಿತವಾದ ದಿವ್ಯವಾದ ಸ್ತುತಿಗಳನ್ನೂ ಹವಿರಾದಿಗಳನ್ನೂ ದೇವತೆಗಳಿಗೆ ಒಪ್ಪಿಸುತ್ತಾನೆ- ಅಪೇಕ್ಷಿತವಾದ ಕಾಲಗಳಲ್ಲೆಲ್ಲಾ ದೇವತೆಗಳನ್ನು ಸ್ವರ್ಗದಿಂದ ಪೃಥ್ವಿಯ ಯಜ್ಞಭೂಮಿಗೆ ಕರೆದುಕೊಂಡು ಬರುತ್ತಾನೆ." (೧೦-೧೦೦-೧೧; ೧೦-೧೫೦-೪)

ಅಗ್ನಿಯ ದೇವದೂತತ್ವವೂ, ಮಾನವದೂತತ್ವವೂ ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ವರ್ಣಿತವಾಗಿದೆ.

" ಅಗ್ನಿರ್ದೇವಾನಾಂ ದೂತ ಆಸೀದುಶನಾ ಕಾವ್ಯೋಽಸುರಾಣಾಂ"

(ತೈ. ಸಂ. ೩-೫-೮-೫)

ಅಗ್ನಿಯು ದೇವದೂತನಾಗಿಯೂ, ಕಾವ್ಯ ಉಶನಸ್ಸು ಅಸುರದೂತನಾಗಿಯೂ ಇದ್ದರು. ಇದೇ ದೂತತ್ವದಿಂದ ದೇವಮಾನವಾದಿಗಳ ಸಂಬಂಧವು ಯಾವ ರೀತಿ ಬೆಳೆಯಲು ಅವಕಾಶವಾಯಿತೆಂದು ತೈತ್ತಿರೀಯಬ್ರಾಹ್ಮಣದಲ್ಲಿ ಅಗ್ನಿಯ ಈ ಕಾರ್ಯವನ್ನು ಈ ರೀತಿ ಪ್ರಶಸಿಸಿದೆ.

" ಆ ತಂತುಮಗ್ನಿರ್ದಿವ್ಯಂ ತತಾನ । ತ್ವಂ ನಸ್ತಂತುರುತ ಸೇತುರಗ್ನೇ । ತ್ವಂ ಪಂಥಾ ಭವಸಿ ದೇವಯಾನ್ಯೈಃ । ತ್ವಯಾ ಅಗ್ನೇ ಪೃಷ್ಠತು ವಯಮಾರುಹೇಮ । ಅಥ ದೇವೈಃ ಸಧಮಾದಂ ಮದೇಮ"

[ತೈ. ಬ್ರಾ. ೨-೪-೧-೬)

ಎಲೈ ಅಗ್ನಿಯೇ, ದೇವಮಾನವಾದಿಗಳಿರುವ ಸಂಬಂಧರೂಪವಾದ ತಂತುವನ್ನು ನೀನು ವಿಸ್ತರಿಸಿರುವೆ. ನೀನೇ ನಮಗೆ ತಂತುಪ್ರಾಯನು. ಸ್ವರ್ಗಕ್ಕೆ ಹೋಗಲು ಮುಖ್ಯಸೇತುವೆಯು. ದೇವಲೋಕಕ್ಕೆ ಹೋಗುವ ಮುಖ್ಯ ಮಾರ್ಗವು ನೀನೇ. ನಿನ್ನ ಅನುಗ್ರಹದಿಂದ ನಿನ್ನ ಪೂಜಕರಾದ ನಾವೂ ಸಹ ಸ್ವರ್ಗವನ್ನು ಸೇರಿ ಅಲ್ಲಿರುವ ದೇವತೆಗಳು ಯಾವ ಸುಖವನ್ನನುಭವಿಸುವರೋ ಅದೇ ಸುಖವನ್ನು ಅವರೊಡನೆ ನಾವೂ ಅನುಭವಿಸುವಂತಾಗಲಿ,

ಇದೇ ವಿಧವಾಗಿ ದೇವದೂತತ್ವವೂ, ಈ ದೌತ್ಯದಿಂದ ದೇವಮಾನವಾದಿಗಳ ಸಂಬಂಧಾಭಿವೃದ್ಧಿಗೆ ಸಾಧಕತ್ವವೂ ಪ್ರಶಂಸಿತವಾಗಿರುವ, ಸನ್ನಿವೇಶಗಳು ಋಕ್ಸಂಹಿತೆಯಲ್ಲಿ ಬಹಳ ಹೇರಳವಾಗಿವೆ. 'ಅಗ್ನಿಂ ದೂತಂ ವೃಣೀಮಹೇ' ಇತ್ಯಾದಿ ವಾಕ್ಯಗಳು ಅಗ್ನಿಯ ಸಹಾಯವನ್ನು ಪ್ರಶಂಸಿಸುವುವಾಗಿವೆ. ೧-೧೨-೧, ೨, ೪, ೮ ; ೧-೩೬-೩, ೪, ೫; ೧-೪೪, ೨, ೩, ೫, ೯, ೧೨ ; ೨-೧೦-೬ ; ೩-೧೧-೨ ; ೪-೨-೩ ; ೫-೨೧-೩ ; ೭-೧೭-೬ ; ೮-೩೯-೧, ೯ ; ೧೦-೯೧-೧೧ ; ೧-೨೭-೪ ; ೧-೧೮೮-೧; ೩-೫-೨ ; ೩-೧೭-೪; ೪-೭-೮; ೬-೧೫-೮ರಿಂದ ೧೦ ; ೮-೧೯-೨೧ ; ೮-೪೪-೩; ೧೦-೧೨೨-೭; ೧-೫೮-೧; ೨-೬-೬, ೭; ೩-೬-೫; ೩-೨೧-೧-೫; ೪-೮-೨-೪; ೭-೧೧-೪; ೮-೨೩-೧೮, ೧೯; ೧೦-೪-೨; ೧-೭೪-೪, ೭; ೨-೯-೨; ೩-೯-೮; ೪-೧-೮; ೫-೮-೬; ೭-೧೬-೪; ೧೦-೪೬-೧೦ ಇತ್ಯಾದಿ.)

ಇದೇ ಅಗ್ನಿಯು ದ್ಯುಲೋಕದ ಅಂತಸ್ತತ್ತ್ವವನ್ನು ಪೂರ್ಣವಾಗಿ ಅರಿತವನಾಗಿ ಸಕಲ ದೇವತೆಗಳನ್ನೂ ಅವರವರ ಯೋಗ್ಯತಾನುಸಾರವಾದ ಯಜ್ಞಭಾಗವನ್ನು ಸ್ವೀಕರಿಸಲು ಕರೆತರಲು ಯೋಗ್ಯನಾಗಿದ್ದಾನೆ. (೪-೮-೨)

ಯಾವ ರಥಗಳಲ್ಲಿ ದೇವತೆಗಳು ಬರುವರೋ ಅಗ್ನಿಯೂ ಅದೇ ರಥದಲ್ಲಿ ಕುಳಿತು ಬರುತ್ತಾನೆ.

(೩-೪-೧೧ ; ೭-೧೧-೧)

ಅಥವಾ, ಸಮಯವನ್ನರಿತು ಅವರಿಗಿಂತಲೂ ಪೂರ್ವಭಾವಿಯಾಗಿಯೇ ಬರುತ್ತಾನೆ. (೧೦-೭೦-೨)

ಉಳಿದ ಸಕಲ ದೇವತೆಗಳಿಗೂ ಯಾವ ಪೂಜೆಯುಂಟೋ, ಯಾವ ಯಜ್ಞಭಾಗವುಂಟೋ ಅವೆಲ್ಲವೂ ಅಗ್ನಿಗೂ ಸೇರತಕ್ಕವಾಗಿವೆ ಮತ್ತು ಅರ್ಪಿತವಾಗುತ್ತವೆ. (೧-೩೬-೪ ; ೨-೨-೧)

ಯಜ್ಞಕ್ಕೆ ವರುಣನನ್ನು ಕರೆತರುತ್ತಾನೆ. ಇಂದ್ರನನ್ನು ದ್ಯುಲೋಕದಿಂದಲೂ, ಮರುತ್ತುಗಳನ್ನು ಅಂತರಿಕ್ಷದಿಂದಲೂ ಕರೆತರುತ್ತಾನೆ.

(೧೦-೭೦-೧೧)

ಯಜ್ಞದಲ್ಲಿ ಅರ್ಪಿತವಾದ ಹವಿಸ್ಸುಗಳನ್ನು ಸುಗಂಧಯುಕ್ತವಾಗುವಂತೆ ಮಾಡುತ್ತಾನೆ. (**ಹವ್ಯಾನಿ ಸುರಭೀಣಿ ಕೃತ್ವೀ**). (೧೦-೧೫-೧೨ ; ವಾ. ಸಂ. ೧೯-೬೬)

ಯಜ್ಞದಲ್ಲಿ ಅಗ್ನಿಯ ಸಹಾಯವಿಲ್ಲದಿದ್ದರೆ ದೇವತೆಗಳಿಗೆ ಯಾವ ವಿಧವಾದ ತೃಪ್ತಿಯೂ ಇರುವುದಿಲ್ಲ.

(೭-೧೧-೧)

ಆದುದರಿಂದ ಆ ದೇವತೆಗಳಿಗೆಲ್ಲಾ ಅಗ್ನಿಯೇ ಸಾಕ್ಷಾತ್ತಾಗಿ ಹವಿಸ್ಸುಗಳನ್ನು ಅರ್ಪಿಸುತ್ತಾನೆ.

(೭-೧೧-೩ ; ೮-೯೧-೧೬ ; ೧೦-೭-೬)

ಅಗ್ನಿಯ ಮೂಲಕವೇ ದೇವತೆಗಳು ಹವಿರಾದಿಗಳನ್ನು ಸ್ವೀಕರಿಸುವುದರಿಂದ, ಅನೇಕ ವೇಳೆ ಅಗ್ನಿಯು ದೇವಮಾನವಾದಿಗಳಿಂದ ನಿರ್ವಹಿಸಲ್ಪಡುವ ಯಜ್ಞದಲ್ಲಿ ಪ್ರಧಾನ ಪಾತ್ರವಹಿಸಿ ದೇವತೆಗಳ ಮುಖವೆಂದೂ, ಅವರು

ಸೋಮಾದಿಗಳನ್ನು ಪಾನಮಾಡುವ ಜಿಹ್ವೆಯೇ ಇವನೆಂದೂ ಪ್ರಶಂಸಿತನಾಗಿದ್ದಾನೆ. (ಆಸ್ಯಂ ತ್ವಾಂ ಜಿಹ್ವಾಂ) (೨-೧-೧೩ ; ೨-೧-೧೪) ಇನ್ನು ಕೆಲವೆಡೆಗಳಲ್ಲಿ ಅವನೇ ಸಕಲ ಹವಿಸ್ಸುಗಳನ್ನೂ ಭಕ್ಷಿಸಬೇಕೆಂಮೂ ಪ್ರಾರ್ಥಿತನಾಗಿದ್ದಾನೆ ಮತ್ತು ಯಜ್ಞದಲ್ಲಿ ಅರ್ಪಿತವಾದ ಸೋಮವನ್ನು ಪಾನಮಾಡುವುದಕ್ಕೆ ಸಾಕ್ಷಾತ್ತಾಗಿ ಆಹೂತನಾಗಿದ್ದಾನೆ.

(೩-೨೧-೧; ೩-೫-೧ ರಿಂದ ೬; ೧-೧೪-೧೦; ೧-೧೯-೯)

ಯಜ್ಞದಲ್ಲಿ ಪ್ರಾಧಾನ್ಯವನ್ನು ವಹಿಸಿ ದೇವತೆಗಳಿಗೆ ಸಹಾಯಮಾಡಬೇಕೆಂಡು ಅಗ್ನಿಯು ಪ್ರಾರ್ಥಿತನಾದಾಗ ಅಗ್ನಿಗೂ ಇತರ ದೇವತೆಗಳಿಗೂ ನಡೆದ ಒಂದು ಸಂಭಾಷಣೆಯು ಅಗ್ನಿಯ ಪ್ರಾಶಸ್ತ್ಯವನ್ನೂ ಅತಿಶಯವಾದ ಶಕ್ತಿಯನ್ನೂ ತಿಳಿಸುತ್ತದೆ ಆ ಸಂಭಾಷಣೆಯು ಈ ರೀತಿಯಲ್ಲಿರುತ್ತದೆ. (೧೦-೫೧)

**ದೇವತೆಗಳು :**—ಎಲೈ ಅಗ್ನಿಯೇ, ನೀನು ಮರೆಮಾಡಿಕೊಂಡು ಯಾವ ಆವರಣದೊಂದಿಗೆ ನೀರಿನಲ್ಲಿ ಅಂತರ್ಗತನಾಗಿದ್ದೀಯೋ, ಆ ಆವರಣವು ಬಹಳ ಸ್ಥೂಲವಾದುದೂ, ಪೂರ್ಣವಾಗಿ ಮುಚ್ಚತಕ್ಕದ್ದಾಗಿಯೂ ಇದೆ. ಆದರೆ, ಎಲೈ ಜಾತವೇದಸ್ಸೇ, ಒಬ್ಬ ದೇವನು ಮಾತ್ರ ನಿನ್ನ ಅನೇಕ ವಿಧವಾದ ಸ್ವರೂಪಗಳನ್ನೂ ಪೂರ್ಣವಾಗಿ ಅರಿತವನಾಗಿದ್ದಾನೆ.

**ಅಗ್ನಿ :**—ನಿಮ್ಮಲ್ಲಿ ನನ್ನ ಸ್ವರೂಪಗಳನ್ನು ಅರಿತಿರುವವನಾರು ? ನನ್ನ ರೂಪವೈವಿಧ್ಯವನ್ನೆಲ್ಲಾ ಪೂರ್ಣವಾಗಿ ಅರಿತಿರುವ ದೇವನಾರು ? ಎಲೈ ಮಿತ್ರಾವರುಣರೇ, ದೇವತೆಗಳಿಗೆ ಹವಿಸ್ಸನ್ನು ವಹಿಸಲು ಸಾಧನವಾದವೂ, ದೀಪ್ತಿಯುತವಾದವೂ ಆದ ನನ್ನ ಸ್ವರೂಪಗಳನ್ನು ನಿಮ್ಮಲ್ಲಿ ತಿಳಿದಿರುವವನೊಬ್ಬನು ಇದ್ದಪಕ್ಷದಲ್ಲಿ ಅವೆಲ್ಲವೂ ಎಲ್ಲಿ ಅಡಗಿಕೊಂಡಿವೆ ಎಂಬುದನ್ನು ತಿಳಿಸುವಿರಾ ?

**ದೇವತೆಗಳು :**—ಎಲೈ ಅಗ್ನಿಯೇ, ನಾನಾ ರೂಪಗಳನ್ನು ಧರಿಸಿ ನೀರಿನಲ್ಲಿಯೂ, ಓಷಧಿಗಳಲ್ಲಿಯೂ ಅಂತರ್ಗತನಾದ ನಿನ್ನನ್ನು ಪಡೆಯಲು ನಾವು ನಿನ್ನನ್ನು ಹುಡುಕಿದೆವು. ಆಗ ಯಮನು ಮಾತ್ರ ಪೃಥಿವ್ಯಾದಿ ಹತ್ತು ಸ್ಥಾನಗಳಲ್ಲೂ ಅಡಗಿಕೊಂಡಿರುವ ನಿನ್ನ ಮಹಜ್ಜ್ವಾಲೆಗಳನ್ನು ಕಂಡುಕೊಂಡನು.

**ಅಗ್ನಿ :**—ಎಲೈ ವರುಣನೇ, ದೇವತೆಗಳು ನನಗೆ ಎಲ್ಲಿ ಹವಿರ್ವಹನ ಕರ್ಮವನ್ನು ಪುನಃ ಎಲ್ಲಿ ವಹಿಸುವರೋ ಎಂಬ ಭಯದಿಂದ ನಾನು ಇಲ್ಲಿಗೆ ಬಂದು ಮರೆಯಾಗಿದ್ದೇನೆ. ಆದುದರಿಂದಲೇ, ನಾನು ಬೇರೆಬೇರೆ ರೂಪಗಳಿಂದ ಉದಕಾಂಗರ್ತನಾಗಿ ಮರೆಯಾಗಿದ್ದೇನೆ. ಪುನಃ ಆ ಕಾರ್ಯದ ಭಾರವನ್ನು ವಹಿಸಲು ನನಗಿಷ್ಟವಿಲ್ಲ ಎಂಬುದನ್ನು ಮಾತ್ರ ಹೇಳಬಲ್ಲೆ.

**ದೇವತೆಗಳು :**—ಎಲೈ ಅಗ್ನಿಯೇ, ಭಕ್ತನಾದ ಮನುವು ನಿನಗೆ ಪೂಜೆಯನ್ನರ್ಪಿಸಿ ಯಜ್ಞವನ್ನು ನಿರ್ವಹಿಸಬೇಕೆಂದು ಕಾದಿದ್ದಾನೆ. ನೀನು ನಿನ್ನನ್ನಲಂಕರಿಸಿಕೊಂಡು ಉದಕಾಂಗರ್ತನಾಗಿದ್ದೀಯೆ. ದೇವತೆಗಳು ಸಂಚರಿಸತಕ್ಕ ಮಾರ್ಗಗಳನ್ನು ಸುರಕ್ಷಿತಗಳನ್ನಾಗಿ ಮಾಡು ಮತ್ತು ಅರ್ಪಿತವಾದ ಹವಿಸ್ಸುಗಳನ್ನು ದೇವತೆಗಳಿಗೆ ತೆಗೆದುಕೊಂಡು ಹೋಗು.

**ಅಗ್ನಿ :**—ಎಲೈ ವರುಣನೇ, ಇದೇ ಹವಿರ್ವಹನಕರ್ತವ್ಯವನ್ನು ನನ್ನ ಹಿರಿಯ ಸಹೋದರರು ನೆರವೇರಿಸಲು ಒಪ್ಪಿಕೊಂಡರು. ಆದರೆ, ಆ ಕರ್ತವ್ಯನಿರ್ವಹಣಕಾಲದಲ್ಲಿ ಅವರು ಮೃತಿಗೊಂಡರು. ಆ ಕಾರಣದಿಂದಲೇ ನಾನು

ಬೆದರಿ ಇಲ್ಲಿಗೆ ಓಡಿಬಂದೆನು. ಧನ್ವಿಯ ಬಿಲ್ಲುಬಾಣಗಳನ್ನು ನೋಡಿದೊಡನೆಯೇ ಗೌರಮೃಗವು ಬೆದರಿ ಓಡುವಂತೆ ನಾನೂ ನಡಗುತ್ತಾ ಓಡಿಬಂದೆನು. (ಈ ಸಂದರ್ಭವನ್ನು ಹಿಂದೆ ತಿಳಿಸಿದೆ).

**ದೇವತೆಗಳು :**—ಎಲೈ ಅಗ್ನಿಯೇ, ನೀನು ಆ ಭೀತಿಯನ್ನಿಡಬೇಕಾಗಿಲ್ಲ. ನಿನಗೆ ಕ್ಷಯರಹಿತವಾದ ಆಯುಸ್ಸನ್ನು ನಾವು ಕೊಡುತ್ತೇವೆ. ಅದರ ಸಹಾಯದಿಂದ ನೀನು ಮೃತ್ಯುವನ್ನು ತಪ್ಪಿಸಿಕೊಳ್ಳುತ್ತೀಯೆ. ಶ್ರೇಷ್ಠವಾದ ಉತ್ಪನ್ನವುಳ್ಳ ಎಲೈ ಅಗ್ನಿಯೇ, ನೀನು ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿ. ದೇವತೆಗಳ ಹವಿಸ್ಸನ್ನು ವಹಿಸಿ ಅವರಿಗೆ ಹಂಚುವ ಭಾರವನ್ನು ಪುನಃ ವಹಿಸು.

**ಅಗ್ನಿ :**—ಎಲೈ ದೇವತೆಗಳೇ, ವೀರ್ಯವತ್ತಾದ ಪ್ರಯಾಜ ಮತ್ತು ಅನುಯಾಜರೂಪಗಳಾದ ಹವಿಸ್ಸುಗಳನ್ನು ನನಗಾಗಿಯೇ ಪ್ರತ್ಯೇಕವಾಗಿ ಉದ್ದೇಶಿಸಿ ಇಟ್ಟುಬಿಡಿ. ಉದಕಗಳ ಸಾರವನ್ನೂ (ಘೃತ) ಓಷಧಿಗಳ ಸಾರವನ್ನೂ ನನಗೆ ಅರ್ಪಿಸಿರಿ. ಅಗ್ನಿರೂಪನಾದ ನನ್ನ ಆಯುಸ್ಸು ದೀರ್ಘಕಾಲವಿರತಕ್ಕದ್ದಾಗಲಿ.

**ದೇವತೆಗಳು :**—ಎಲೈ ಅಗ್ನಿಯೇ, ಪ್ರಯಾಜಾನುಯಾಜರೂಪವಾದ ಹವಿಸ್ಸುಗಳನ್ನು ಪ್ರತ್ಯೇಕವಾಗಿ ನಿನ್ನನ್ನುದ್ದೇಶಿಸಿಯೇ ಇಡುತ್ತೇವೆ. ಹವಿಸ್ಸುಗಳಲ್ಲಿ ವೀರ್ಯವತ್ತಾದ ಭಾಗಗಳೆಲ್ಲವೂ ನಿನ್ನದಾಗಿಯೇ ಇರಲಿ. ಎಲೈ ಅಗ್ನಿಯೇ, ಈ ಯಜ್ಞವೂ ನಿನಗೇ ಅರ್ಪಿತವಾಗಲಿ. ನಾಲ್ಕು ದಿಕ್ಕುಗಳೂ ನಮ್ರತೆಯಿಂದ ನಿನ್ನ ಮುಂದೆ ತಲೆಬಾಗಿ ನಿನಗೆ ನಮಸ್ಕಾರಮಾಡಲಿ ಎಂಬುದಾಗಿ ೧೦-೫೧ ನೇ ಸೂಕ್ತದ ಸಂಭಾಷಣೆಯ ವಿವರಣೆಯಿರುತ್ತದೆ. ಇದಾದನಂತರವೇ ಮುಂದಿನ ಸೂಕ್ತದಲ್ಲಿ ಅಗ್ನಿಯು ತಾನೇ ಯಜ್ಞಕ್ಕೆಲ್ಲಾ ಪ್ರಭುವೆಂದು ಪ್ರಕಟಿಸಿಕೊಳ್ಳುತ್ತಾನೆ. ಅಲ್ಲದೇ, ದೇವತೆಗಳಿಗೆ ತನ್ನ ಸಹಕಾರವನ್ನು ನೀಡುವುದಾಗಿಯೂ ತಕ್ಕ ಭರವಸೆಯನ್ನು ಕೊಡುತ್ತಾನೆ. ತಾನು ಯಾವ ರೀತಿ ಅವರಿಗೆ ಸಹಾಯಮಾಡಬಹುದೆಂದೂ ತಿಳಿಸಬೇಕಾಗಿ ಕೇಳಿಕೊಳ್ಳುತ್ತಾನೆ. (೧೦-೫೨-೧, ೨)

ಈ ಸಂದರ್ಭವನ್ನು ಸ್ವಲ್ಪ ವ್ಯತ್ಯಸ್ತವಾದ ವಿವರಣೆಯಿಂದ ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ತಿಳಿಸಿದೆ—

> **ಅಗ್ನೇಸ್ತ್ರಯೋ ಜ್ಯಾಯಾಂಗ್ಸೋ ಭ್ರಾತರ ಆಸನ್ ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮಶಪದ್ಧಿಯಾ-ಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ॥**
>
> (ತೈ. ಸಂ. ೨-೬-೬-೨)

ಅಗ್ನಿಗೆ ಮೂರು ಜನ ಹಿರಿಯ ಸಹೋದರರಿದ್ದರು. ಅವರೆಲ್ಲರೂ ಸಹ ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯದಲ್ಲಿ ಶ್ರಮವಹಿಸಿ ಅದರಿಂದಲೇ ಮೃತರಾದರು. ಅಗ್ನಿಯು ಇದನ್ನು ನೋಡಿ, ತಾನು ಆ ಕಾರ್ಯಭಾರವನ್ನು ವಹಿಸಿದರೆ ತನಗೂ ಅದೇ ಗತಿಯು ಪ್ರಾಪ್ತವಾಗಬಹುದೆಂಬ ಭೀತಿಯಿಂದ ಆ ಪ್ರದೇಶದಿಂದ ಮರೆಯಾಗಿ ನೀರಿನಲ್ಲಿ ಹೋಗಿ ಅವಿತುಕೊಂಡನು. ದೇವತೆಗಳು ಆಗ ಅವನನ್ನು ಹುಡುಕುತ್ತಿದ್ದರು. ಆಗ ಒಂದು ಮತ್ಸ್ಯವು ಅವರಿಗೆ ಅಗ್ನಿಯಿರುವ ಪ್ರದೇಶವನ್ನು ತೋರಿಸಿಕೊಟ್ಟಿತು. ಅಗ್ನಿಗೆ ಇದರಿಂದ ಕೋಪವುಂಟಾಗಿ ಅವನು ಮತ್ಸ್ಯಗಳನ್ನೆಲ್ಲಾ ಒಟ್ಟಿಗೆ ಸೇರಿಸಿ "ಯಾವ ಕಾಲದಲ್ಲಿ ಮಾನವನು ನಿಮ್ಮನ್ನು ಹಿಡಿಯಲಿಚ್ಛಿಸುವನೋ, ಆ ಕಾಲಗಳಲ್ಲೆಲ್ಲಾ ನಿಮ್ಮನ್ನು ನಾಶಪಡಿಸಲಿ" ಎಂದು ಶಪಿಸಿದನು. ಆ ಶಾಪದ ಫಲವಾಗಿಯೇ ಮಾನವರು ಮತ್ಸ್ಯವನ್ನು ನಾಶಪಡಿಸುವರು.

"ಶಪ್ತೋ ಹಿ ತೇಮುನ್ನವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿ ಸ್ಕನ್ದಾತ್ತನ್ಮೇ ಭ್ರಾತೄಣಾಂ ಭಾಗಧೇಯಮಸದಿತಿ ॥ (ತೈ. ಸಂ. ೨-೬-೬-೨)

ದೇವತೆಗಳು ಆ ಮತ್ಸ್ಯದ ಸಹಾಯದಿಂದ ಅಗ್ನಿಯನ್ನು ಸಮೀಪಿಸಿ "ನಮ್ಮಲ್ಲಿಗೆ ಬಂದು ಯಜ್ಞದ ಹವಿಸ್ಸುಗಳನ್ನು ನಮಗೆ ವಹಿಸಿ ಉಪಕಾರವನ್ನು ಮಾಡು" ಎಂದು ಪ್ರಾರ್ಥಿಸಿದರು. ಆಗ ಅಗ್ನಿಯು "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡು "ನಾನು ಈ ಶ್ರಮದ ಪ್ರತಿಫಲವಾಗಿ ನಿಮ್ಮಿಂದ ಒಂದು ವರವನ್ನು ಬೇಡುತ್ತೇನೆ "ಯಜ್ಞಾಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸುವಾಗ ಯಜ್ಞಪರಿಧಿಯಿಂದ ಹೊರಕ್ಕೆ ಬೀಳುವ ಹವಿಸ್ಸಿನ ಯಾವಯಾವ ಭಾಗವಿರುತ್ತದೋ ಅವೆಲ್ಲವೂ, ನಿಮಗಾಗಿ ಮೃತರಾದ ನಮ್ಮ ಸಹೋದರರಿಗೆ ಸೇರತಕ್ಕದ್ದು" ಎಂದು ಕೇಳಿಕೊಂಡನು. ದೇವತೆಗಳು ಅದಕ್ಕೊಪ್ಪಿಕೊಂಡಮೇಲೆ ಅಗ್ನಿಯು ಹವಿರ್ವಹನಕಾರ್ಯವನ್ನು ಅಂಗೀಕರಿಸಿದನು.

ಅಗ್ನಿಯೇ ಸಕಲ ಪ್ರಜೆಗಳಿಗೂ ಪ್ರಭುವೂ, ರಕ್ಷಕನೂ ಮತ್ತು ನೇತೃವೂ ಆಗಿದ್ದಾನೆ. (ವಿಶ್ಪತಿಃ । ವಿಶಾಂ ಗೋಪಾಃ । ವಿಶಾಂ ಪುರ ಏತಾ)

(೧-೧೨-೨; ೧-೨೬-೭; ೧-೩೧-೧೧; ೧-೯೬-೪; ೨-೧-೮; ೩-೧೧-೫). ಮಾನವರಿಗೆಲ್ಲಾ ಸಾರ್ವಭೌಮನು. (ರಾಜಾ ಕೃಷ್ಟೀನಾಂ ಅಸಿ ಮಾನುಷಾಣಾಂ) (೧-೫೯-೫; ೨-೧-೮; ೩-೧೮-೧; ೫-೪-೧; ೬-೭-೧; ೮-೯-೧; ೮-೪೩-೨೪).

"ಇದೇ ಅಗ್ನಿಯು ಪ್ರತಿಯೊಂದು ಗೃಹದಲ್ಲಿಯೂ ವಾಸಮಾಡುತ್ತಿರುವುದರಿಂದ ಅವನೇ ಎಲ್ಲಾ ಮನೆಗಳಿಗೂ ಒಡೆಯನು ಮತ್ತು ಪಾಲಕನು." (ದಮೇ ದಮೇ ಕವಿರ್ಗೃಹಪತಿರ್ಯುವಾ) (೧-೧೨-೬; ೧-೩೬-೫; ೧-೬೦-೪; ೫-೮-೨; ೭-೧೫-೨).

ಪ್ರತಿಯೊಂದು ಗೃಹದಲ್ಲಿಯೂ ಈ ಅಗ್ನಿಯು ಪ್ರಭಾಯುತನಾದ ಅತಿಥಿಯಾಗಿ ಇದ್ದಾನೆ. ಪ್ರತಿಯೊಂದು ವನವೃಕ್ಷದಲ್ಲಿಯೂ ಪಕ್ಷಿಯಂತೆ ಆಶ್ರಯಿಸಿದ್ದಾನೆ. ಮಾನವರಿಗೆ ಸಖನಾಗಿದ್ದು ಯಾವನನ್ನೂ ತಿರಸ್ಕರಿಸುವುದಿಲ್ಲ. ಪ್ರಜೆಗಳಿಗೆಲ್ಲಾ ದಶಾಯಾಲಿಯಾಗಿದ್ದು ಪ್ರತಿಯೊಂದು ಸಂಸಾರದಲ್ಲಿಯೂ ಕ್ಷೇಮಕಾರಿಯಾಗಿ ವಾಸಿಸುತ್ತಿದ್ದಾನೆ. (೧೦-೯೧-೨)

ಈ ಅಗ್ನಿಯೇ ಮಾನವರಿಗೆಲ್ಲಾ ಪಿತೃವು, ಇವನೇ ಮಾತೃವು, ಭ್ರಾತೃವು. ಇವನೇ ಎಲ್ಲರಿಗೂ ಪುತ್ರನು, ಬಂಧು ಮತ್ತು ಸಖನೂ ಸಹ ಇವನೇ ಆಗಿದ್ದಾನೆ. (೧-೨೬-೩; ೧-೩೧-೧೦, ೧೪, ೧೬; ೧-೭೫-೪; ೧-೧೬೧-೧; ೨-೧-೯; ೬-೧-೫; ೫-೪-೨; ೮-೪೩-೧೬; ೮-೬೪-೧೬; ೧೦-೭-೩).

ಕೆಲವು ಯಜಮಾನರು ಅಗ್ನಿಗೂ ತಮಗೂ ವಂಶಪಾರಂಪರ್ಯವಾದ ಬಂಧುತ್ವವೂ ಸಖಿತ್ವವೂ ಇರುವುದೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. (ಸಖ್ಯಾ ಪಿತ್ರ್ಯಾಣಿ) (೧-೭೧-೧೦)

ಅಸುರರನ್ನೂ, ಯಜಮಾನರಿಗೆ ಕೇಡಕನ್ನುಂಟುಮಾಡತಕ್ಕ ಇತರ ದುಷ್ಟಶಕ್ತಿಗಳನ್ನೂ ಅಗ್ನಿಯು ದೂರಕ್ಕೆ ಓಡಿಸಿ ನಾಶಪಡಿಸುತ್ತಾನೆ. (ಅಗ್ನೀ ರಕ್ಷಾಂಸಿ ಸೇಧತಿ) (೩-೧೫-೧; ೭-೧೩-೧; ೭-೧೫-೧೦; ೮-೨೩-೧೩; ೮-೪೩-೨೬; ೧೦-೮೭-೧; ೧೦-೧೮೭-೩)

ಅಗ್ನಿಯು ಪ್ರತ್ಯಕ್ಷನಾಗಿ ಯಜ್ಞಕ್ಕೆ ತೊಂದರೆಯನ್ನುಂಟುಮಾಡತಕ್ಕ ಸಕಲ ರಾಕ್ಷಸರನ್ನೂ ಯಾತುಧಾನರನ್ನೂ ತನ್ನ ಅಯೋಮಯವಾದ ದಂತಗಳಿಂದ ಆಗಿಯುವಂತೆಯೂ, ಮತ್ತು ತನ್ನ ಅತ್ಯುಗ್ರವಾದ ಕ್ರೋಧವನ್ನು ಪ್ರಕಟಿಸಿ ಅವರನ್ನೆಲ್ಲಾ ಒಟ್ಟಿಗೆ ದಹಿಸುವಂತೆಯೂ ಪ್ರಾರ್ಥಿತನಾಗಿದ್ದಾನೆ. (೧೦-೮೭-೨, ೫, ೯, ೧೪)

## ಅಗ್ನಿಯ ಉತ್ಪತ್ತಿ ಮತ್ತು ಮೂರು ಸ್ಥಾನಗಳು.

ಅಗ್ನಿಯ ಉತ್ಪತ್ತಿಯ ವಿಷಯದಲ್ಲಿ ಋಕ್ಸಂಹಿತಾವಾಕ್ಯಗಳಲ್ಲಿ ನಾನಾವಿಧವಾದ ವರ್ಣನೆಗಳಿರುತ್ತವೆ. ಆದರೆ ಅವೆಲ್ಲವೂ ಪರಸ್ಪರ ಒಂದಕ್ಕೊಂದು ವಿರುದ್ಧವೆಂದು ಹೇಳುವಂತಿಲ್ಲ, ಕೆಲವು ಸಮಯಗಳಲ್ಲಿ ಇವನ ದಿವ್ಯಲೋಕದ ಉತ್ಪತ್ತಿಯು ವರ್ಣಿತವಾಗಿದೆ. ಇನ್ನು ಕೆಲವು ಸಂದರ್ಭಗಳಲ್ಲಿ ಮಾನವರ ಕರಣಗಳಿಂದ (ಅರಣಿ ಮೊದಲಾದ ಸಾಧನಗಳಿಂದ) ಉತ್ಪನ್ನವಾಗುವ ಅಂಶವು ವರ್ಣಿತವಾಗಿದೆ.

" ಅವ್ಯಾಕೃತನೂ, ಸ್ವರೂಪತಃ ಸದಾತ್ಮಕನೂ ಆದ ಅಗ್ನಿಯು ದಕ್ಷನ ವೀರ್ಯದಲ್ಲಿಯೂ, ಅದಿತಿಯ ಗರ್ಭದಲ್ಲಿಯೂ ಉತ್ಪನ್ನನಾಗಿ ಇದ್ದಾನೆ." (೧೦-೫-೭)

" ಈ ಅಗ್ನಿಯು ದ್ಯುಲೋಕದಿಂದ ಕರೆತರಲ್ಪಟ್ಟದ್ದಾನೆ. ಇವನನ್ನು ಮಾತರಿಶ್ವನು ಬಹುದೂರದಿಂದ ಕರೆತಂದಿದ್ದಾನೆ.''

ಆ ಅನ್ಯಂ ದಿವೋ ಮಾತರಿಶ್ವಾ ಜಭಾರ (೧-೬೦-೧; ೧-೯೩-೬; ೧-೧೪೩-೨; ೩-೫-೧೦; ೩-೯-೫; ೬-೮-೪).

ಈ ಮಾತರಿಶ್ವನಾರೆಂಬುದರಲ್ಲಿ ಸಂಶಯಕ್ಕೆ ಅವಕಾಶವಾಗಿರುತ್ತದೆ. ಅಗ್ನಿಯೇ ಮಾತರಿಶ್ವನೆಂಬುವ ಮತವೂ ಉಂಟು. ಈ ಮತದಂತೆ, ಮಾತರಿಶ್ವನ ಸ್ವರೂಪವಿವರಣೆಯಿಂದ ಅಗ್ನಿಯ ಸ್ವರೂಪವರ್ಣನವೇ ಆದಂತಾಗುವುದರಿಂದ ಪ್ರಕೃತದಲ್ಲಿ ಈ ವಿಷಯವನ್ನು ತಿಳಿಸಲಾಗುತ್ತದೆ. ಈ ಪದವು ಎಲ್ಲಾ ಕಡೆಗಳಲ್ಲಿಯೂ ವಾಯು ಪರ್ಯಾಯ ಪದವಾಗಿಯೇ ಇರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ:—

ಸ ಮಾತರಿಶ್ವಾ ಪುರುವಾರಪುಷ್ಟಿರ್ವಿದದ್ಗಾತುಂ ತನಯಾಯ ಸ್ವರ್ವಿತ್ ।
(ಋ. ಸಂ. ೧-೯೬-೪)

ಮಾತರಿಶ್ವಾ ಯದಮಿಮೀತ ಮಾತರಿ ವಾತಸ್ಯ ಸರ್ಗೋ ಅಭವತ್ಸರೀಮಣಿ ।
(ಋ. ಸಂ. ೩-೨೯-೧೧)

ಇತ್ಯಾದಿ ವಾಕ್ಯಗಳಲ್ಲಿ ಮಾತರಿಶ್ವಶಬ್ದಕ್ಕೆ ಅಗ್ನಿಯೆಂದೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಬೇಕು. ಆದರೆ, ಈ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲಾ ಅಗ್ನಿಯೆಂಬ ಅರ್ಥವನ್ನು ಹೇಳುವುದೂ ಸಾಧ್ಯವಿಲ್ಲವೆಂಬುದೂ ನಿಷ್ಕೃಷ್ಟವಾದ ವಿಷಯ.

ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।
(ಋ. ಸಂ. ೧-೬೦-೧)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಗೂ, ಮಾತರಿಶ್ವನಿಗೂ ಖಚಿತವಾದ ಭೇದವು ತಿಳಿಯುತ್ತದೆ. ಮಾತರಿಶ್ವನು ಭೃಗುವಿಗಾಗಿ ಅಗ್ನಿಯನ್ನು ತಂದನು ಎಂಬುದೂ ಸ್ಪಷ್ಟವಾಗಿದೆ. ಹೀಗೆಯೇ, ಆನ್ಯಂ ದಿವೋ ಮಾತರಿಶ್ವಾ ಜಭಾರ, ಎಂದು ಮೇಲೆ

ಉದ್ಧೃತವಾಗಿರುವ ವಾಕ್ಯವನ್ನನುಸರಿಸಿ ಹೇಳಿರುವ ವಾಕ್ಯಗಳೂ ಹೇರಳವಾಗಿವೆ. ಹೀಗೆ ಅಗ್ನಿಭಿನ್ನನಾದ ಮಾತರಿಶ್ವನ ಸ್ವರೂಪವೇನು ಎಂಬುದನ್ನು ಆ ಸಂದರ್ಭವೊದಗಿದಾಗ ವಿವರಿಸಲಾಗುವುದು. ೧-೬೦-೧ ರಲ್ಲಿ ಅಗ್ನಿಯನ್ನು ಮಾತರಿಶ್ವನು ತಂದುದಾಗಿಯೂ, ಸೋಮವನ್ನು ಶ್ಯೇನನು ತಂದುದಾಗಿಯೂ ತಿಳಿಸಿದೆ. ಋ. ಸಂ. ೭-೧೫-೪ ರಲ್ಲಿ ಅಗ್ನಿಯನ್ನೇ ಶ್ಯೇನವೆಂದು ಕರೆದಿದೆ. (ದಿವಃ ಶ್ಯೇನಾಯ)

ಇನ್ನೊಂದು ಸಂದರ್ಭದಲ್ಲಿ ಶಿಲೆಗಳ ಮಧ್ಯೇ ಅಂತರ್ಗತನಾಗಿದ್ದ ಅಗ್ನಿಯನ್ನು ಇಂದ್ರನು ಉತ್ಪನ್ನವಾಗುವಂತೆ ಮಾಡಿದನು ಎಂದು ತಿಳಿಸಿದೆ. (೨-೧೨-೩)

೧೦-೪೫-೮ ರಲ್ಲು "ದ್ಯೌರ್ಜನಯತ್ಸುರೇತಾಃ" ಈ ಅಗ್ನಿಯನ್ನು ದ್ಯೌಃ ಉತ್ಪನ್ನಮಾಡಿದನು ಎಂದಿದೆ. ಇಲ್ಲಿ ದ್ಯೌಃ ಎಂದರೆ ಪ್ರಾಣವೆಂದಾದರೂ ಆಗಬಹುದು. ಆದಿತ್ಯನೆಂದಾದರೂ ಆಗಬಹುದು. ಆದಿತ್ಯನೂ ಅಗ್ನಿಯ ಸೃಷ್ಟಿಗೆ ಕಾರಣನು ಎಂದೂ ಅರ್ಥವಾಗುತ್ತದೆ. ದ್ಯುಲೋಕದ ಪುತ್ರನೆಂದೂ ವರ್ಣಿತನಾಗಿದ್ದಾನೆ. (ದಿವಃ ಸೂನುರಸಿ ೩-೨-೨) ಆದರಂತೆಯೇ ಪೃಥಿವಿಯ ಪುತ್ರನೂ ಆಗಿದ್ದಾನೆ (೩-೨-೨ ; ೩-೨೫-೧).

"ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸು ಜನಿಮಾ ಜಜಾನ" (೧೦-೨-೭)

ಎಂಬಲ್ಲಿ ಅಗ್ನಿಯ ಉತ್ಪತ್ತಿಗೆ ಕಾರಣರಾರಾರೆಂದು ಸ್ಪಷ್ಟವಾಗಿ ತಿಳಿಸಿದೆ (೧೦-೧೪೦-೨; ೩-೩-೧).

ಉದಕದಿಂದ ಅಗ್ನಿಯು ಉತ್ಪನ್ನನಾದನು ಎಂಬ ವರ್ಣನೆಯೂ ಕೆಲವೆಡೆಗಳಲ್ಲಿವೆ. (೧೦-೨-೭; ೧೦-೯೧-೬)

ಹಿರಣ್ಯವರ್ಣಾಃ ಶುಚಯಃ..........। ಯಾ ಅಗ್ನಿಂ ಗರ್ಭಂ ದಧಿರೇ ಸುವರ್ಣಾಸ್ತಾ ನ ಆಪಃ ಶಗ್‍ಂ ಸ್ಯೋನಾ ಭವಂತು ॥ (ಅ. ವೇ. ೧-೩೩-೧)

ಯಾವ ಉದಕಗಳು ಅಗ್ನಿಯನ್ನು ತಮ್ಮ ಗರ್ಭರೂಪವಾಗಿ ಧರಿಸಿದವೋ ಆ ಅಪ್ಪುಗಳು ನಮಗೆ ಸನ್ಮಂಗಳಕಾರಕಗಳಾಗಲಿ, ಎಂಬ ಅಥರ್ವವೇದದ ವಾಕ್ಯವೂ ಈ ಅಭಿಪ್ರಾಯವನ್ನು ತಿಳಿಸುತ್ತವೆ. ಉಷಸ್ಸಿನಿಂದ ಆವಿರ್ಭೂತನಾದವನು ಎಂದು ತಿಳಿಸುವ ವಾಕ್ಯಗಳೂ ಸಹ ಇರುತ್ತದೆ. ಹಾಗೆಯೇ, ಇವನ ಉತ್ಪತ್ತಿ ಮತ್ತು ಸ್ವರೂಪ ಇವುಗಳನ್ನು ವರ್ಣಿಸುವ ಕೆಲವು ಸಂದರ್ಭಗಳನ್ನು ಉದಾಹರಿಸಲಾಗುತ್ತದೆ.

"ಪ್ರಸಿದ್ಧವಾದವೂ ಪ್ರಭಾಯುತವಾದವೂ ಆದ ಉಷಸ್ಸುಗಳು ಸೂರ್ಯನನ್ನೂ, ಅಗ್ನಿಯನ್ನೂ ಉತ್ಪನ್ನವಾಗುವಂತೆ ಮಾಡಿದವು" (೭-೭೮-೩)

"ಎಲೈ ಇಂದ್ರಾ ವಿಷ್ಣುಗಳೇ, ನೀವು ಯಜಮಾನನಿಗೋಸ್ಕರ ವಿಸ್ತೃತವಾದ ಸ್ವರ್ಗವನ್ನೂ, ಸೂರ್ಯನನ್ನೂ, ಉಷಸ್ಸನ್ನೂ, ಅಗ್ನಿಯನ್ನೂ ಉತ್ಪನ್ನವಾಗುವಂತೆ ಮಾಡಿದಿರಿ" (೭-೯೯-೪) ಕ್ರಾಂತದರ್ಶಿಯೂ, ಸಮಾಜನೂ, ಅತಿಥಿಯೂ ತಮಗೆಲ್ಲಾ ಮುಖಪ್ರಾಯನೂ ಆದ ಅಗ್ನಿಯನ್ನು ದೇವತೆಗಳು ಉತ್ಪನ್ನವಾಗುವಂತೆ ಮಾಡಿದರು. (೬-೭-೧, ೨ ; ೮-೯೧-೧೭ ; ೧೦-೪೬-೯) ಈ ಅಗ್ನ್ಯುತ್ಪತ್ತಿಯ ಪ್ರಯೋಜನವೇನು ? ಸ್ವರೂಪವೇನು ? ಎಂದರೆ, "ವೈಶ್ವಾನರರೂಪನಾದ ಎಲೈ ಅಗ್ನಿಯೇ, ದ್ಯುಲೋಕಕ್ಕೆ ಶಿರೋರೂಪನಾಗಿಯೂ, ಪೃಥಿವಿಗೆ ನಾಭಿರೂಪನಾಗಿಯೂ, ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾಗಿಯೂ ಇರುವ ನಿನ್ನನ್ನು ಆರ್ಯನಾದ ಮನುವಿಗೆ ಜ್ಯೋತಿರೂಪವಾಗಿರುವಂತೆ ದೇವತೆಗಳು ಸೃಷ್ಟಿಮಾಡಿದರು" (೧-೫೯-೨)

" ಅದೇ ಮನುವಿಗೆ ಅನುಗ್ರಹಿಸುವುದಕ್ಕಾಗಿ ದೇವತೆಗಳು ನಿನ್ನನ್ನು ದೃಢವಾಗಿ ಧರಿಸಿದ್ದಾರೆ "
(೧-೩೬-೧೦; ೨-೪-೩; ೬-೧೬-೧; ೮-೭೩-೨)

ಮೇಲೆ ಹೇಳಿದಂತೆ, ದೇವತೆಗಳಿಂದ ಉತ್ಪನ್ನನಾದುದರಿಂದ ಅಗ್ನಿಯು ದೇವತೆಗಳ ಪುತ್ರನೆಂದಾಯಿತು. ಆದರೆ, ಅದೇ ದೇವತೆಗಳಿಗೆ ಪಿತೃವೆಂದೂ ಕೆಲವೆಡೆಗಳಲ್ಲಿ ವರ್ಣಿತನಾಗಿದ್ದಾನೆ. " ದೇವತೆಗಳಿಗೆಲ್ಲಾ ಪುತ್ರನಾಗಿದ್ದರೂ ಸಹ ಅವರಿಗೂ ಇತರ ಲೋಕಗಳಿಗೂ ಪಿತೃವಾಗಿದ್ದೀಯೆ. (೧-೯೬-೧)

ಇಂತಹ ದಿವ್ಯವಾದ ಉತ್ಪತ್ತಿಯುಳ್ಳ ಅಗ್ನಿಯ ಸ್ಥಾನಗಳು ಮೂರು, ಈ ಮೂರು ಅವನ ಮೂರು ವಿಧವಾದ ಆವಿರ್ಭಾವವನ್ನು ತೋರಿಸುತ್ತವೆ. ದ್ಯುಲೋಕದಲ್ಲಿ ಆದಿತ್ಯರೂಪದಿಂದಲೂ, ಅಂತರಿಕ್ಷದಲ್ಲಿ ವಿದ್ಯುದ್ರೂಪದಿಂದಲೂ, ಮತ್ತು ಪೃಥ್ವಿಯಲ್ಲಿ ಅಗ್ನಿರೂಪದಿಂದಲೂ ಆವಿರ್ಭೂತನಾಗಿದ್ದಾನೆ. ಇದೇ ಅಂಶವನ್ನು ಸಂಹಿತಾವಾಕ್ಯಗಳಲ್ಲಿ ಈ ರೀತಿ ವರ್ಣಿಸಿದೆ. ಈ ವರ್ಣನೆಗಳಲ್ಲಿ, ಸೂರ್ಯಾಗ್ನಿಗಳು ಒಂದೇ ತತ್ತ್ವದ ಪ್ರಭೇದವಿಶೇಷಗಳೆಂದೂ ತಿಳಿಯುತ್ತದೆ.

" ಅಗ್ನಿಯು ರಾತ್ರಿಕಾಲದಲ್ಲಿ ಪೃಥ್ವಿಗೆ ಶಿರೋರೂಪನಾಗಿದ್ದಾನೆ. ಅನಂತರ ಅಹಸ್ಸಿನಲ್ಲಿ ಸೂರ್ಯರೂಪದಲ್ಲಿ ಉದಯಿಸುತ್ತಾನೆ" (೧೦-೮೮-೬)

ಇದೇ ಋಕ್ಸಂಹಿತಾ ವಾಕ್ಯದಲ್ಲಿ ಹೇಳಿರುವ ಈ ಅಭಿಪ್ರಾಯವನ್ನು ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

" ಆದಿತ್ಯೋ ವಾ ಅಸ್ತಂಯನ್ನಗ್ನಿಮನುಪ್ರವಿಶತಿ ಸೋಽಂತರ್ಧೀಯತೇ ............
ಅಗ್ನಿರ್ವಾ ಉದ್ವಾನ್ವಾಯುಮನುಪ್ರವಿಶತಿ ಸೋಽಂತರ್ಧೀಯತೇ.... ವಾಯೋರಗ್ನಿರ್ಜಾಯತೇ
ಪ್ರಾಣಾದ್ಧಿ...........ಅಗ್ನೇರ್ವಾ ಆದಿತ್ಯೋ ಜಾಯತೇ ॥

(ಐ. ಬ್ರಾ. ೪೦-೨೮)

ಅಸ್ತಮಯಕಾಲದಲ್ಲಿ ಸೂರ್ಯನು ಅಗ್ನಿಯನ್ನು ಪ್ರವೇಶಿಸಿ ಅವನಲ್ಲಿ ಅಂತರ್ಧಾನನಾಗುತ್ತಾನೆ. ಅಗ್ನಿಯು ಊರ್ಧ್ವ ಮುಖನಾಗಿ ಎದ್ದು ವಾಯುವನ್ನು ಪ್ರವೇಶಿಸಿ ಅವನಲ್ಲಿ ಅಂತರ್ಧಾನನಾಗುತ್ತಾನೆ. ಪುನಃ ಅದೇ ವಾಯುವಿನಿಂದ ಉತ್ಪನ್ನನಾಗುತ್ತಾನೆ. ಸೂರ್ಯನು ಇದೇ ಅಗ್ನಿಯಿಂದ ಉತ್ಪನ್ನನಾಗುತ್ತಾನೆ.

" ದೇವತೆಗಳು ಪ್ರಥಮತಃ ' ಇದಂ ದ್ಯಾವಾಪೃಥಿವೀ ' ಇತ್ಯಾದಿ ಸೂಕ್ತಗಳನ್ನು ನಿರ್ಮಿಸಿದರು. ಅನಂತರ ಅಗ್ನ್ಯುತ್ಪತ್ತಿಯಾಯಿತು. ಅಗ್ನಿತೃಪ್ತಿಗಾಗಿ ಹವಿಸ್ಸುಗಳನ್ನು ಕಲ್ಪಿಸಿದರು. ಈ ಅಗ್ನಿಯೇ ಅವರ ಯಜ್ಞಪಾಲಕನು. ದ್ಯಾವಾಪೃಥಿವಿಗಳೂ, ಅಪ್ಪುಗಳೂ (ಉದಕಗಳು) ಪೂರ್ಣವಾಗಿ ಅಗ್ನಿಯ ಮಹಿಮೆಯನ್ನರಿತವು. (೧೦-೮೮-೮)

" ದೇವತೆಗಳು ತಮ್ಮ ಅಲೌಕಿಕವಾದ ಶಕ್ತಿಯ ಸಹಾಯದಿಂದಲೂ ಸ್ತುತಿರೂಪವಾದ ಸಾಧನದಿಂದಲೂ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸುವ ಅಗ್ನಿಯನ್ನು ಉತ್ಪನ್ನಮಾಡಿದರು. ಅವನನ್ನು ಮೂರುವಿಧವಾದ ರೂಪಗಳನ್ನು ತಾಳುವ ಸ್ವರೂಪವನ್ನು ಕೊಟ್ಟು ನಿರ್ಮಿಸಿದರು. ಆ ಅಗ್ನಿಯು ಎಲ್ಲಾ ಓಷಧಿಗಳನ್ನು ಪಕ್ವವಾಗುವಂತೆ ಮಾಡುತ್ತಾನೆ. (೧೦-೮೮-೧೦)

" ಯಾವಾಗ ದೇವತೆಗಳು ಈ ಅಗ್ನಿಯನ್ನೂ, ಅದಿತಿಪುತ್ರನಾದ ಸೂರ್ಯನನ್ನೂ ದ್ಯುಲೋಕದಲ್ಲಿ ಧರಿಸಿದರೋ ಯಾವಾಗ ಸೂರ್ಯನೂ ವೈಶ್ವಾನರೂ ಒಟ್ಟಿಗೆ ಸೇರಿಕೊಂಡು ಆವಿರ್ಭವಿಸಿದರೋ ಆ ಒಡನೆಯೇ ದೇವತೆಗಳು ಸಕಲವಾದ ಲೋಕಗಳನ್ನೂ ಸ್ಪಷ್ಟವಾಗಿ ನೋಡಲು ಶಕ್ತರಾದರು " (೧೦-೮೮-೧೧)

ಈ ರೀತಿ ವರ್ಣಿತವಾಗಿರುವ ಈ ಮಂತ್ರಗಳ ತಾತ್ಪರ್ಯವನ್ನು ನಿರುಕ್ತಕಾರರು ಯಾವ ರೀತಿ ವಿವರಿಸಿರುವರು ಎಂಬುದನ್ನು ಪರಿಶೀಲಿಸಿದರೆ ಈ ಅಂಶಗಳು ವಿಶದವಾಗಿ ತಿಳಿಯುತ್ತವೆ. ನಿರುಕ್ತಕಾರರು ನಿರುಕ್ತದಲ್ಲಿ "ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ಸ ಏವ" (೭-೩೭), ಅನಂತರ ಪ್ರಾತಃಕಾಲದಲ್ಲಿ ಯಾವ ಸೂರ್ಯನು ಉದಯಿಸುವನೋ ಅವನೇ ಅಗ್ನಿಯು ಎಂದರೆ ಅಗ್ನಿಯೇ ಸೂರ್ಯರೂಪದಲ್ಲಿ ಉದಯಿಸುತ್ತಾನೆ ಎಂದು ಸೂರ್ಯಾಗ್ನಿಗಳ ತಾದಾತ್ಮ್ಯವನ್ನು ತೋರಿಸಿದ್ದಾರೆ ಮತ್ತು ಇದೇ ಮೇಲೆ ಉದ್ಧೃತವಾದ ೧೦-೮೮-೧೦ ನೇ ಮಂತ್ರವನ್ನು ವಿವರಿಸುತ್ತಾ,

" ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ "

(ನಿ ೭-೨೮)

ಶಾಕಪೂಣಿಯ ಮತದಲ್ಲಿ ತ್ರೇಧಾ ಎಂಬುದಕ್ಕೆ ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕಗಳೆಂದು ಇವು ಮೂರೂ ಅಗ್ನಿಯ ಸ್ಥಾನಗಳು ಎಂದೂ ತಾತ್ಪರ್ಯವೆಂದು ತಿಳಿಸಿದ್ದಾರೆ. ಅದಲ್ಲದೇ, " ಯದಸ್ಯ ದಿವಿ ತೃತೀಯಂ ತದಸಾವಾದಿತ್ಯಃ" ದ್ಯುಲೋಕದಲ್ಲಿರುವ ಅಗ್ನಿಯು ಮೂರನೆಯ ರೂಪವೇ ಈ ಆದಿತ್ಯನು ಎಂದು ಹೇಳಿರುವ ಬ್ರಾಹ್ಮಣವಾಕ್ಯವನ್ನೂ ಉದಾಹರಿಸಿದ್ದಾರೆ.

ಋ. ಸಂ. ೧೦-೮೮-೧೧ ನೇ ಮಂತ್ರದಲ್ಲಿ ವರ್ಣಿತವಾದ 'ಮಿಥುನಾ' ಎಂಬ ಪದಕ್ಕೆ ಸಾಯಣರ ವಿವರಣೆಯಂತೆ ಮೇಲೆ ಸೂರ್ಯ ಮತ್ತು ವೈಶ್ವಾನರ ಎಂದರ್ಥಮಾಡಿದೆ. ಆದರೆ ಆದಕ್ಕೆ ನಿರುಕ್ತಕಾರರು ಈ ರೀತಿಯ ವಿವರಣೆಯನ್ನು ಹೇಳಿದ್ದಾರೆ.

" ಯದಾ ಚರಿಷ್ಣೂ ಮಿಥುನೌ ಪ್ರಾದುರಭೂತಾಂ। ಸರ್ವದಾ ಸಹಚಾರಿಣಾವುಷಾಶ್ಚ ಆದಿತ್ಯಶ್ಚ " (ನಿ. ೭-೨೯)

ಮಿಥುನ ಶಬ್ದಕ್ಕೆ ಇಲ್ಲಿ ಸರ್ವದಾ ಒಟ್ಟಿಗೆ ಸಂಚರಿಸತಕ್ಕ ಉಷಸ್ಸು ಮತ್ತು ಆದಿತ್ಯನೆಂದರ್ಥಮಾಡಿದ್ದಾರೆ.

ಹೀಗೆ ದ್ಯುಲೋಕಸ್ಥನಾದ ಸೂರ್ಯನೊಡನೆ ತಾದಾತ್ಮ್ಯವನ್ನು ತೋರಿಸಿರುವುದಲ್ಲದೇ, ಅಂತರಿಕ್ಷಸ್ಥರಾದ ಇಂದ್ರ ಮತ್ತು ವಾಯುಗಳೊಡನೆಯೂ ಇದೇ ತಾದಾತ್ಮ್ಯವನ್ನು ತೋರಿಸಿ ವಿವರಿಸಿರುವ ನಿರುಕ್ತವಾಕ್ಯವನ್ನು ಹಿಂದೆ ಉದಾಹರಿಸಿ ತಿಳಿಸಿದೆ. ಈ ರೀತಿ ವಿವರಣೆಗಳನ್ನು ಕೊಟ್ಟು ಅಗ್ನಿಯು ಸೂರ್ಯಾದಿ ನಾನಾರೂಪಗಳಲ್ಲೂ ಇರತಕ್ಕವನು ಎಂದು ಹೇಳಲು ನಿರುಕ್ತಕಾರರ ಬೇರೆ ವಾಕ್ಯಗಳನ್ನೂ ಆಧಾರವಾಗಿ ತೆಗೆದುಕೊಳ್ಳಬಹುದು. ಋಕ್ಸಂಹಿತೆಯ "ಇದಂ ವಿಷ್ಣುರ್ವಿಚಕ್ರಮೇ........" (೧-೨೨-೧೭) ಎಂಬ ಮಂತ್ರದ ತಾತ್ಪರ್ಯವನ್ನು ಈ ರೀತಿ ವಿವರಿಸಿದ್ದಾರೆ. ಮತ್ತು ಶಾಕಪೂಣಿಯ ಮತವನ್ನೂ ಈ ಸಂದರ್ಭದಲ್ಲಿ ತಿಳಿಸಿದ್ದಾರೆ.

" ತ್ರಿಧಾ ನಿಧತ್ತೇ ಪದಂ ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ।

(ನಿ. ೧೨-೧೯)

ಇದು ಶಾಕಪೂಣಿಯವರ ಮತ. ಎಂದರೆ, ಮೂರು ಲೋಕಗಳನ್ನು ಮಾತ್ರ ನಿರ್ದೇಶಿಸಿದೆ. ವಿಷ್ಣುವಿನ ಪಾದವು ಈ ಮೂರು ಲೋಕಗಳನ್ನೂ ವ್ಯಾಪಿಸಿತು ಎಂಬುದಕ್ಕೂ ಅಗ್ನಿಯ ಮೂರು ಸ್ಥಾನಗಳು ಎಂಬುದಕ್ಕೂ ಏನು ಸಂಬಂಧ ಎಂಬುದನ್ನು ಮಾತ್ರ ತಿಳಿಸಿಲ್ಲ. ಈ ಅಂಶವನ್ನು ಇದೇ ಸಂದರ್ಭದಲ್ಲಿ ವಿವರಿಸುತ್ತಾ ದುರ್ಗಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಪಾರ್ಥಿವೋಽಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚಿದಸ್ತಿ ತದ್ವಿಕ್ರಮತೇ ತದಧಿತಿಷ್ಠತಿ ।
ಅಂತರಿಕ್ಷೇ ವಿದ್ಯುದಾತ್ಮನಾ ದಿವಿ ಸೂರ್ಯಾತ್ಮನಾ"

(ದುರ್ಗಾಚಾರ್ಯಕೃತವ್ಯಾಖ್ಯಾ ನಿ. ೧೨-೧೯)

ಇದೇ ವಿಷ್ಣುವು ಪಾರ್ಥಿವಾಗ್ನಿಯ ರೂಪದಲ್ಲಿ ಪೃಥಿವಿಯನ್ನು ವ್ಯಾಪಿಸುತ್ತಾನೆ. ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪದಲ್ಲೂ ದ್ಯುಲೋಕದಲ್ಲಿ ಸೂರ್ಯರೂಪದಲ್ಲೂ ಆ ಎರಡು ಲೋಕಗಳನ್ನೂ ವ್ಯಾಪಿಸುತ್ತಾನೆ, ಎಂದು ವಿವರಿಸಿದ್ದಾರೆ. ಇಂತಹ ಅಭಿಪ್ರಾಯಗಳಿಗೆ ಆಧಾರಭೂತವಾಗಿಯೂ ಇವುಗಳನ್ನು ಸಮರ್ಥಿಸುವುದಾಗಿಯೂ ಇರುವ ಈ ವಿಭಾಗಗಳನ್ನು ಋಗ್ವೇದದಲ್ಲಿಯೂ ಕಾಣಬಹುದು.

"ಅಗ್ನಿಯು ಪ್ರಥಮತಃ ದ್ಯುಲೋಕದಲ್ಲಿ ಆದಿತ್ಯಾತ್ಮನಾಗಿ ಉತ್ಪನ್ನನಾದನು. ಎರಡನೆಯದಾಗಿ ಈ ಪೃಥ್ವಿಯಲ್ಲಿ ಜಾತವೇದೋ ರೂಪನಾದ ಅಗ್ನಿಸ್ವರೂಪವನ್ನು ಹೊಂದಿದನು. ಮೂರನೆಯದಾಗಿ ಅಂತರಿಕ್ಷದಲ್ಲಿ ವಿದ್ಯುದ್ರೂಪದಿಂದ ಜನಿಸಿದನು." (ಋ. ಸಂ. ೧೦-೪೫-೧)

ಎಂದು ವಿಭಾಗಮಾಡಿರುವ ಇದೇ ಕ್ರಮವನ್ನು ಅಥರ್ವವೇದದಲ್ಲೂ ತಿಳಿಸಿದೆ.

ಅಗ್ನಿರ್ದಿವ ಆ ತಪತಿ ಅಗ್ನೇರ್ದೇವಸ್ಯ ಉರು ಅಂತರಿಕ್ಷಂ ।
ಅಗ್ನಿಂ ಮರ್ತಾಸ ಇಂಧತೇ ಹವ್ಯವಾಹಂ ಘೃತಪ್ರಿಯಂ ॥

(ಅ. ವೇ. ೧೨-೧-೨೦)

ಅಗ್ನಿಯು ದ್ಯುಲೋಕದಿಂದ ಪ್ರಜ್ವಲಿಸುತ್ತಾನೆ. ಈ ಅಗ್ನಿಗೆ ಅಂತರಿಕ್ಷವೂ ಅಧೀನವಾಗಿದೆ. ಪೃಥಿವೀಸ್ಥರಾದ ಮಾನವರು ಘೃತಪ್ರಿಯನಾದ ಈ ಅಗ್ನಿಯನ್ನು ಪೃಥಿವಿಯಲ್ಲಿ ಪ್ರಜ್ವಲಿತನಾಗುವಂತೆ ಮಾಡುತ್ತಾರೆ. "ಇದಂ ತ ಏಕಂ ಪರ ಊ ತ ಏಕಂ ತೃತೀಯೇನ ಜ್ಯೋತಿಷಾ ಸಂವಿಶಸ್ವ" (೧೦-೫೬-೧) ಎಂಬ ವಾಕ್ಯದಲ್ಲಿ ತಿಳಿಸಿದೆ. 'ಅರ್ಕಸ್ತ್ರಿಧಾತೂ ರಜಸೋ ವಿಮಾನಃ' (ಋ. ಸಂ. ೩-೨೬-೭ ; ವಾ. ಸಂ. ೧೮-೬೬) ಎಂಬಲ್ಲಿ ಪ್ರಶಂಸಿಸಿರುವ ಅಗ್ನಿಯ ಮೂರು ವಿಧವಾದ ಪ್ರಭೆಗಳೂ ಈ ವಿಭಾಗಗಳನ್ನೇ ನಿರ್ದೇಶಿಸಿದೆ. ೫-೪-೮ ನೇ ಮಂತ್ರದಲ್ಲಿ ತ್ರಿಷಧಸ್ಥ ಹವ್ಯಂ ಎಂಬ ಸನ್ನಿವೇಶವನ್ನು ವಿವರಿಸುತ್ತಾ ಸಾಯಣರು ಈ ರೀತಿ ವಿವರಿಸಿದ್ದಾರೆ. "ತ್ರಿಷು ದಿವ್ಯಾದಿಷು ಸ್ಥಾನೇಷು ಸ್ಥಿತಃ" ದ್ಯುಲೋಕಾದಿ ಮೂರು ಸ್ಥಾನಗಳನ್ನಾಕ್ರಮಿಸುವವನು ಎಂದರ್ಥ. ೮-೩೯-೮ ನೇ ಮಂತ್ರದಲ್ಲಿ ಪ್ರಯುಕ್ತವಾಗಿರುವ ತ್ರಿಪಸ್ತ್ಯ ಎಂಬ ಪದಕ್ಕೂ ಇದೇ ತಾತ್ಪರ್ಯ. ಇದನ್ನೇ ೧-೯೫-೩ ನೇ ಋಕ್ಕಿನಲ್ಲಿ "ತ್ರೀಣಿ ಜಾನಾ ಪರಿಭೂಷಂತ್ಯಸ್ಯ" ಎಂಬ ವಾಕ್ಯದಿಂದ ತಿಳಿಸಿದೆ. ಈ ಮೂರಕ್ಕೂ ವಡವಾನಲ, ಸೂರ್ಯ, ವಿದ್ಯುತ್ತು ಎಂದರ್ಥವೆಂದು ಸಾಯಣರ ಅಭಿಪ್ರಾಯ.

ಇದಲ್ಲದೇ, ದ್ವಿಜನ್ಮಾ ಎಂಬುದೂ ಸಹ ಅಗ್ನಿಗೆ ಸಾಧಾರಣವಾದ ವಿಶೇಷಣವಾಗಿದೆ. (೧-೬೦-೧; ೧-೧೪೦-೨; ೧-೧೪೯-೨, ೩) ಇಲ್ಲಿಯೂ ದ್ವಿಜನ್ಮಾ ಎಂಬ ವಿಶೇಷಣಕ್ಕೆ ಅರ್ಥಾಂತರಗಳು ಹೇಳಲ್ಪಟ್ಟಿವೆ. ಪೃಥಿವೀ ಮತ್ತು ಅಂತರಿಕ್ಷಗಳಿಂದ ಉತ್ಪನ್ನನಾದುದರಿಂದ ಈ ರೀತಿ ಸ್ತುತನಾಗಿರಬಹುದು. ಅಥವಾ ಎರಡು ಅರಣಿಗಳಿಂದ ಉತ್ಪನ್ನನಾದುದರಿಂದ ಈ ರೀತಿ ಸ್ತುತನಾಗಿರಬಹುದು. ಅಥವಾ ಮೊದಲು ಸ್ವಾಭಾವಿಕವಾದ ಜನ್ಮವಿದ್ದು ಅನಂತರ ಅರಣಿಯಿಂದ ಉತ್ಪನ್ನನಾದುದರಿಂದಲೂ ಈ ವರ್ಣನವಿರಬಹುದು. ಈ ಎಲ್ಲಾ ಅಭಿಪ್ರಾಯಗಳನ್ನೂ ಸಾಯಣರು ವ್ಯಕ್ತಪಡಿಸಿದ್ದಾರೆ. "ಎಲೈ ಅಗ್ನಿಯೇ, ನೀನು ದ್ಯುಲೋಕೋತ್ಪನ್ನನಾಗಿಯೂ, ಅಂತರಿಕ್ಷೋತ್ಪನ್ನನಾಗಿಯೂ ಇದ್ದೀಯೆ. ಅಂತಹ ನಿನ್ನನ್ನು ಸ್ತುತಿಗಳಿಂದ ಪೂಜಿಸುತ್ತೇವೆ" ಇತ್ಯಾದಿ ವಾಕ್ಯಗಳಲ್ಲಿ ಈ ಅಂಶವು ತಿಳಿಸಲ್ಪಡುತ್ತದೆ.

(೮-೪೩-೨೮)

ಅಗ್ನಿಯ ಉತ್ಪತ್ತಿಯನ್ನು ವರ್ಣಿಸುವಾಗ ಮುಖ್ಯವಾಗಿ ಅರಣಿಮಥನದಿಂದ ನಿಷ್ಪನ್ನವಾಗುವ ಸನ್ನಿವೇಶವೇ ಅಧಿಕವಾಗಿ ಪ್ರಶಂಸಿತವಾಗಿದೆ. ಅವುಗಳಲ್ಲಿ ಒಂದೆರಡು ಸನ್ನಿವೇಶಗಳನ್ನು ಇಲ್ಲಿ ಪರಿಶೀಲಿಸಬಹುದು.

"ಅರಣಿ ಮಥನಕ್ಕೆ ಬೇಕಾದ ಸಾಧನವೂ, ಅಗ್ನ್ಯುತ್ಪಾದನೆಗೆ ಬೇಕಾದ ಸಲಕರಣೆಗಳೂ ಸಿದ್ಧವಾಗಿವೆ. ಪ್ರಜೆಗಳಿಗೆ ಅಗ್ನಿಯನ್ನು ಒದಗಿಸಿ ಪಾಲಿಸತಕ್ಕ ಈ ಅರಣಿಯನ್ನು ಸಿದ್ಧಪಡಿಸು"

(೩-೨೯-೧)

"ಸ್ತ್ರೀಗರ್ಭಕೋಶದಲ್ಲಿ ಗರ್ಭವು ಸ್ಥಾಪಿತವಾಗಿರುವಂತೆ, ಈ ಅರಣಿಗಳಲ್ಲಿ ಅಗ್ನಿಯು ಸುಪ್ತನಾಗಿದ್ದಾನೆ. ಈ ಅಗ್ನಿಯು ಪ್ರತಿದಿನವೂ ಯಜಮಾನರಿಂದ ಸ್ತುತಿಸಲ್ಪಡಬೇಕು."

(೩-೨೯-೨)

"ಮಥನಕ್ರಿಯೆಯಲ್ಲಿ ಚಾತುರ್ಯವನ್ನು ಹೊಂದಿದ ನೀನು ಮೇಲಿನ ಅರಣಿಯನ್ನು ಕೆಳಗಿನ ಅರಣಿಯ ಜೊತೆಯಲ್ಲಿ ಸೇರಿಸು. ಮಥನಕ್ರಿಯೆಯಾದನಂತರ ಅಗ್ನ್ಯುತ್ಪತ್ತಿಯಾಗುತ್ತದೆ"

(೩-೨೯-೩)

ಇತ್ಯಾದಿ ವಾಕ್ಯಗಳು ಅರಣಿಮಥನವನ್ನೂ, ಅರಣಿಮಥದಿಂದ ಉತ್ಪನ್ನವಾಗತಕ್ಕ ಅಗ್ನಿಯ ಸ್ವರೂಪವನ್ನೂ ಸ್ತುತಿಸುತ್ತವೆ. ಈ ಮಥನಕ್ರಿಯೆಯಿಂದ ನಿಷ್ಪನ್ನವಾಗತಕ್ಕ ಅಗ್ನಿಯು ಯಜ್ಞಸಂರಕ್ಷಕನಾದುದರಿಂದ ಈ ಅಗ್ನಿಯು ಅತ್ಯಂತ ಪೂಜ್ಯನಾಗಿದ್ದಾನೆ. "ಅಯಮಗ್ನಿಃ ಪೃತನಾಷಾಟ್ ಸುವೀರೋ ಯೇನ ದೇವಾಸೋ ಅಸಹಂತ ದಸ್ಯೂನ್" ಈ ಅಗ್ನಿಯ ಮಹಿಮೆಯಿಂದಲೇ ದೇವತೆಗಳೆಲ್ಲರೂ ಶತ್ರುನಾಶವನ್ನುಂಟುಮಾಡಲು ಸಾಮರ್ಥ್ಯವನ್ನು ಪಡೆದರು ಎಂದಿದೆ ಈ ರೀತಿಯಾಗಿ ಯಜ್ಞಾರ್ಥವಾಗಿ ನಿರ್ಮಥಿತವಾದ ಅರಣಿಯಿಂದ ಉತ್ಪನ್ನನಾದ ಅಗ್ನಿಯ ಪ್ರಶಂಸೆಯು ಅಗ್ನಿಯ ಮಹತ್ವವನ್ನೂ ಅವನಿಂದ ಲೋಕಕ್ಕೆ ಆಗತಕ್ಕ ಉಪಕಾರವನ್ನೂ ತಿಳಿಸುತ್ತದೆ. ಈ ಪ್ರಶಂಸೆಯು ಋಕ್ಸಂಹಿತೆಯಲ್ಲೇ ಅಲ್ಲದೇ, ಬೇರೆ ಶ್ರುತಿವಾಕ್ಯಗಳಲ್ಲೂ ಹೇರಳವಾಗಿವೆ. ಉದಾಹರಣೆಗೆ—

ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ॥

(ಐ. ಬ್ರಾ. ೧-೧೬)

ಈ ಅಗ್ನಿಯಲ್ಲಿ ಅರ್ಪಿತವಾಗುವ ಆಹುತಿಯು ಸ್ವರ್ಗಸಾಧಕವಾದುದು. ಅಬ್ರಾಹ್ಮಣನಾದರೂ, ಪಾಪಿಷ್ಠನೆಂದು ಅಪಯಶಸ್ಸನ್ನು ಪಡೆದವನಾದರೂ ಶ್ರದ್ಧೆಯಿಂದ ಈ ಆಹುತಿಯನ್ನರ್ಪಿಸಿದರೆ ಅದು ದೇವತೆಗಳನ್ನು ಖಂಡಿತ ಸೇರಿಯೇ ಸೇರುತ್ತದೆ. ಪಾಪಕರ್ಮವನ್ನು ಮಾಡಿದವನ ಪಾಪದ ಸಂಸರ್ಗವು ಈ ಅಗ್ನ್ಯಾಹುತಿಗೆ ಇರುವುದಿಲ್ಲ.

ಇದೇ ಅಗ್ನಿಯ ದಿವ್ಯಸ್ವರೂಪವು ಶತಪಥಬ್ರಾಹ್ಮಣದ ವಾಕ್ಯದಲ್ಲಿ ಬೇರೊಂದು ರೀತಿಯಲ್ಲಿದೆ. ಅದರ ವಿವರಣೆಯನ್ನು ಇಲ್ಲಿ ಕೊಡಲು ಉಚಿತವಾಗಿರುತ್ತದೆ.

> "ಸ ಯತ್ರ ಅಗ್ನಿಂ ಸಸೃಜೇ ಸ ಇದಂ ಜಾತಃ ಸರ್ವಮೇವ ದಗ್ಧುಂ ದಧ್ರೇ। ಇತ್ಯೇವ ಆವಿಲ ಮೇವ। ತಾ ಯೋಸ್ತರ್ಹಿ ಪ್ರಜಾ ಆಸುಸ್ತಾ ಹ ಏವಂ ಸಂಪೇಷ್ಟುಂ ದಧ್ರೇ। ಸೋಽತಿತಿಕ್ಷ-ಮಾಣ ಪುರುಷಮೇವಾಭ್ಯೇಯಾಯ। ಸ ಹ ಉವಾಚ। ನ ವೈ ಅಹಮಿದಂ ತಿತಿಕ್ಷೇ ಹಂತ ತ್ವಾ ಪ್ರವಿಶಾನಿ। ತಂ ಮಾಜನಯಿತ್ವಾ ಬಿಭೃಹಿ। ಸ ಯಥೈವ ಮಾಂ ತ್ವಮಸ್ಮಿನ್ ಲೋಕೇ ಜನಯಿತ್ವಾ ಭರಿಷ್ಯಸಿ ಏವಮೇವಾಹಂ ತ್ವಾಂ ಅಮುಷ್ಮಿನ್ ಲೋಕೇ ಜನಯಿತ್ವಾ ಭರಿಷ್ಯಾ-ಮೀತಿ॥ (ಶ. ಬ್ರಾ. ೨-೩-೩-೧)

ಪ್ರಜಾಪತಿಯಿಂದ ಸೃಷ್ಟನಾದ ಅಗ್ನಿಯು ಸಮಸ್ತವನ್ನೂ ದಹಿಸಲಾರಂಭಿಸಿದಾಗ ಜಗತ್ತು ಭ್ರಾಂತಿಗೊಂಡಿತು. ಅದಕ್ಕೆ ಪ್ರತಿಕ್ರಿಯೆಯಾಗಿ ಆಗ ಉತ್ಪನ್ನವಾಗಿದ್ದ ಪ್ರಾಣಿಗಳೆಲ್ಲವೂ ಸೇರಿಕೊಂಡು ಅವನನ್ನು ಬಂಧಿಸಿ ಮರ್ದಿಸತೊಡಗಿದವು. ಆಗ ಅಗ್ನಿಯು ಪುರುಷನಲ್ಲಿಗೆ ಬಂದು ಅವನ ಮರೆಹೊಕ್ಕು, ಈ ಮರ್ದನವನ್ನು ನಾನು ಸಹಿಸಲಾರೆನು. ನಾನು ನಿನ್ನಲ್ಲಿ ಪ್ರವೇಶಿಸಲು ಅವಕಾಶವನ್ನು ಕೊಡು. ನೀನು ಪುನಃ ನನ್ನನ್ನು ಉತ್ಪನ್ನಮಾಡಿ ನನ್ನನ್ನು ಪೋಷಿಸು. ನೀನು ನನಗೆ ಪೃಥ್ವಿಯಲ್ಲಿ ಈ ರಕ್ಷಣೆಯನ್ನೂ ಪೋಷಣೆಯನ್ನೂ ಒದಗಿಸಿದರೆ, ನಿನಗೆ ಪರಲೋಕದಲ್ಲಿ ಅದಕ್ಕೆ ಪ್ರತಿ ಫಲವಾದ ರಕ್ಷಣೆಯನ್ನೂ ಪೋಷಣೆಯನ್ನೂ ಒದಗಿಸುತ್ತೇನೆ ಎಂದು ಭರವಸೆಯನ್ನು ಕೊಟ್ಟನು.

ಈ ರೀತಿಯಾಗಿ ಮಾನವನಿಂದ ಉತ್ಪನ್ನವಾಗಿಯೂ, ಮಾನವನಿಂದಲೇ ಪ್ರಜ್ವಲಿತನಾಗಿಯೂ, ಪೋಷಿತ ನಾಗಿಯೂ ಇರತಕ್ಕ ಅಗ್ನಿಯು ಯಜ್ಞಾಗ್ನಿಯಾಗಿ, ಯಜ್ಞಾರ್ಥವಾಗಿ ಅರಣಿರೂಪವಾದ ಸಾಧನದಿಂದ ಉತ್ಪನ್ನನಾ ಗಿರುತ್ತಾನೆ. ಈ ಅರಣಿರೂಪದ ಸಾಧನದಿಂದ ಉತ್ಪನ್ನನಾದ ಅಗ್ನಿಯನ್ನೇ ದ್ವಿಜನ್ಮಾ। ದ್ವಿಮಾತಾ ಎಂಬ ವಿಶೇಷಣಗಳಿಂದ ಸ್ತುತಿಸಿದೆ.

ದ್ವಿಜನ್ಮಾ ಇತ್ಯಾದಿ ವಿಶೇಷಣಗಳನ್ನು ಮೇಲೆ ವಿವರಿಸಿದೆ. ಇದರಂತೆಯೇ, ಭೂರಿಜನ್ಮಾ ಎಂಬ ವಿಶೇಷ ಣವೂ ಅಗ್ನಿಯ ಮಹತ್ವಪೂರಿತವಾದ ಉತ್ಪತ್ತಿಯನ್ನು ಪ್ರಶಂಸಿಸುವುದಾಗಿದೆ. ೧-೯೫-೨; ೧೦-೫-೧ ಇತ್ಯಾದಿ ವಾಕ್ಯಗಳಲ್ಲಿ ಈ ವಿಶೇಷಣವು ಅಗ್ನಿಯ ಉತ್ಪತ್ತಿಕ್ರಮವನ್ನು ವರ್ಣಿಸುತ್ತದೆ. "ದಶ ಯುವತಯಃ ಇಮಂ ಗರ್ಭಂ ಜನಯಂತ" ಇತ್ಯಾದಿ ಸ್ಥಳಗಳಲ್ಲಿ ದಶ ಯುವತಯಃ ಎಂಬುದಕ್ಕೆ ದಶಾಂಗುಲಿಗಳು ಎಂದರ್ಥ. ೩-೨೯-೩ ರಲ್ಲು ಅಗ್ನಿಯನ್ನು ಇಳಾಪುತ್ರನೆಂದು ಕರೆದಿದೆ. (ಇಲ್ಲಿ ಇಳಾ ಶಬ್ದಕ್ಕೆ ಯಾವ ಅರ್ಥವನ್ನಾದರೂ ಹೇಳಬಹುದು.)

ಯಜ್ಞಾರ್ಥಗಿ ಅಗ್ನಿಯನ್ನು ಪ್ರಥಮತಃ ಉತ್ಪನ್ನಮಾಡಿ ಪ್ರಜ್ವಲಿಸುವಂತೆ ಮಾಡಿದ ಮನು, ಆಂಗಿರಸ್ವಾನ್, ಭೃಗು, ಅಥರ್ವನ್, ದಧೀಚಿ ಇತ್ಯಾದಿ ನಾನಾ ಸಂತತಿಗಳೂ ಪ್ರಸಿದ್ಧವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಣೆಗೆ ತೆಗೆದುಕೊಳ್ಳಬಹುದು.

"ಎಲೈ ಅಗ್ನಿಯೇ, ಮಾನವರಿಗೆ ಉಪಕಾರಾರ್ಥವಾಗಿ ನಿನ್ನನ್ನು ಮನುವು ಪ್ರಥಮತಃ ಪ್ರಜ್ವಲಿಸುವಂತೆ ಮಾಡಿ ನಿನ್ನ ರೂಪವಾದ ತೇಜಸ್ಸನ್ನು ಉತ್ಪನ್ನಮಾಡಿದನು." (೧-೩೬-೧೯)

"ಮನುವು ತನ್ನ ಭಕ್ತ್ಯತಿಶಯದಿಂದ ಯಾವ ರೀತಿ ಅಗ್ನಿಯನ್ನು ಯಜ್ಞಕ್ಕೆ ಆಕರ್ಷಿಸಿದನೋ, ಅದೇ ರೀತಿ ನಾವೂ ಸಹ ಅಗ್ನಿಯನ್ನು ಆಕರ್ಷಿಸೋಣ." (೭-೨-೩)

"ಯಾವ ದೇವತಾತ್ಮನಾದ ಮನುವು ನಿನ್ನನ್ನುದ್ದೇಶಿಸಿ ಪ್ರಥಮತಃ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿ ಮೊದಲನೆಯ ಹವಿಸ್ಸನ್ನರ್ಪಿಸಿದನೋ ಅಂತಹ ಎಲೈ ಆದಿತ್ಯನೇ, ನಮಗೆ ರಕ್ಷಣೆಯನ್ನು ನೀಡು." (೧೦-೬೩-೭)

"ಎಲೈ ಅಗ್ನಿಯೇ, ಹಿಂದೆ ಸುಮಿತ್ರನೊಡಗೂಡಿದ ಮನುವು ಯಾವ ನಿನ್ನ ಜ್ವಾಲೆಯನ್ನು ಪ್ರಜ್ವಲಿತವಾಗುವಂತೆ ಮಾಡಿದನೋ, ಈಗ ಪ್ರಕಾಶಿಸುತ್ತಿರುವುದೂ ಅದೇ ಜ್ವಾಲೆಯಾಗಿದೆ." (೧೦-೬೯-೩)

"ಎಲೈ ಅಗ್ನಿಯೇ, ಹಿಂದೆಲ್ಲಾ ಯಾವ ರೀತಿ ಭೃಗುವೂ, ಮನುವೂ, ಅಂಗಿರಸ್ಸೂ ಯಾವ ರೀತಿ ನಿನ್ನನ್ನು ಪ್ರಾರ್ಥಿಸಿ ಪ್ರಜ್ವಲಿತನಾಗುವಂತೆ ಮಾಡಿದರೋ, ಈಗಲೂ ಅದೇ ರೀತಿ ನಾವು ನಿನ್ನನ್ನು ಪ್ರಾರ್ಥಿಸಿ, ನಮ್ಮ ಯಜ್ಞಶಾಲೆಯಲ್ಲಿ ಪ್ರಕಾಶಿಸಬೇಕೆಂದು ಬೇಡುತ್ತೇವೆ." (೮-೪೩-೧೩)

"ಎಲೈ ಅಗ್ನಿಯೇ, ಅಥರ್ವನು ನಿನ್ನನ್ನು ಪದ್ಮಪತ್ರದಿಂದ ಹೊರಕ್ಕೆ ಆವಿರ್ಭವಿಸುವಂತೆ ಮಾಡಿದನು." (೬-೧೬-೧೩)

"ಎಲೈ ಅಗ್ನಿಯೇ, ಅಥರ್ವಪುತ್ರನಾದ ದಧೀಚಿಯು ನಿನ್ನನ್ನು ಪ್ರಜ್ವಲಿತನಾಗುವಂತೆ ಮಾಡಿದನು." (೬-೧೬-೧೪)

"ಅಥರ್ವನಿಂದ ಉತ್ಪನ್ನನಾದ ಅಗ್ನಿಯು ಸಕಲ ಶಾಸ್ತ್ರಗಳ ಮರ್ಮವನ್ನೂ ಅರಿತಿದ್ದಾನೆ. ಅಲ್ಲದೇ, ವಿವಸ್ವಂತನಿಗೆ ದೂತನಾಗಿದ್ದಾನೆ." (೧೦-೨೧-೫)

"ಎಲೈ ಅಗ್ನಿಯೇ, ಭೃಗುಗಳು ನಿನ್ನನ್ನು ಮಾನವರ ಮಧ್ಯದಲ್ಲಿ ಸ್ಥಾಪಿಸಿದ್ದಾರೆ." (೧-೫೮-೬)

"ದಾರಿತಪ್ಪಿದ ಪ್ರಾಣಿಯಂತೆ, ಅಗ್ನಿಯನ್ನು ಕಾಣದ ಭೃಗುಗಳು ತಮ್ಮ ಪ್ರಜ್ಞಾವಿಶೇಷದಿಂದ ಕೂಡಿದ ಭಕ್ತಿಯಿಂದಲೂ, ಪೂಜಾದಿಗಳಿಂದಲೂ ಪ್ರಾರ್ಥಿಸಿ ಹುಡುಕುತ್ತಾ, ಕೊನೆಯಲ್ಲಿ ನೀರಿನಲ್ಲಿ ಅಂತರ್ಗತನಾಗಿದ್ದ ಅಗ್ನಿಯನ್ನು ಕಂಡುಹಿಡಿದರು." (೧೦-೪೬-೨)

"ಯಜ್ಞಾರ್ಹನಾದ ಅಗ್ನಿಯನ್ನು ಮಾನವರಿಗೆ ಋತ್ವಿಗ್ರೂಪದಲ್ಲಿ ಕಾವ್ಯ ಉಶನಸ್ಸು ಎಂಬುವನು ಸ್ಥಾಪಿಸಿದನು ಎಂಬ ಪ್ರಖ್ಯಾತಿಯಿದೆ." (೮-೨೩-೧೭)

ಈ ರೀತಿಯಲ್ಲಿ ಅರಣಿಯಿಂದ ಅಗ್ನಿಯು ಉತ್ಪನ್ನನಾದೊಡನೆಯೇ ಆಶ್ಚರ್ಯವನ್ನು ವ್ಯಕ್ತಪಡಿಸುವ ಸನ್ನಿವೇಶಗಳೂ ಅನೇಕವಾಗಿವೆ. ಉದಾಹರಣೆಗಾಗಿ,

"ಎಲೈ ಅಗ್ನಿಯೇ, ರಸರಹಿತವೂ, ಶುಷ್ಕವೂ, ನಿರ್ಜೀವಿಯೂ ಆದ ಅರಣಿಗಳಿಂದ ಚೈತನ್ಯಾತ್ಮಕನಾದ ನೀನು ಉತ್ಪನ್ನನಾದೊಡನೆಯೇ, ಯಜಮಾನರು ಭಕ್ತಿಯಿಂದ ನಿನ್ನನ್ನು ಪೂಜಿಸಿದರು." (೧-೬೮-೨)

ಇತ್ಯಾದಿಯಾದ ಪ್ರಶಂಸೆಯು ೩–೨೩–೨, ೩; ೭–೧–೧; ೧೦–೪೯–೧೫; ೧೦–೭–೫ ಇತ್ಯಾದಿ ನಾನಾ ಋಕ್ಕುಗಳಲ್ಲಿರುತ್ತದೆ. ಈ ಆಶ್ಚರ್ಯದ ಜೊತೆಗೆ, ನೂತನವಾಗಿ ಉತ್ಪನ್ನವಾದ ಶಿಶುವಿನ ಮೇಲೆ ತೋರಿಸುವ ಪ್ರೇಮಾತಿಶಯವೂ ಸಹ ಪ್ರಕಟಿತವಾಗಿದೆ.

" ಈ ಅಗ್ನಿಯು ಅರಣಿಗಳಿಂದ ಆಗತಾನೇ ಉತ್ಪನ್ನವಾದ ಶಿಶುವಿನಂತೆ ಜನಿಸಿದ್ದಾನೆ " (೫–೯–೩)

ಇವನು ಅರಣಿಗಳ ಪುತ್ರನೇ ಅಲ್ಲದೇ, ವನಸ್ಪತಿಗಳಿಗೆಲ್ಲಾ ಪುತ್ರರೂಪನಾಗಿದ್ದಾನೆ. (ಸೂನುಂ ವನಸ್ಪತೀನಾಂ:—೮–೨೩–೨೫). ಶಿಶುರೂಪನಾದ ಈ ಅಗ್ನಿಯು ಅಲೌಕಿಕವೂ, ಅದ್ಭುತವೂ ಆದ ಕರ್ಮಗಳನ್ನು ಮಾಡುವುದೇ ಅತ್ಯಂತ ಆಶ್ಚರ್ಯಾವಹವಾದುದೂ ಸ್ತುತ್ಯವೂ ಆದ ಕಾರ್ಯವಾಗಿದೆ.

" ಈ ಶಿಶುವು ಉತ್ಪನ್ನವಾದೊಡನೆಯೇ, ತನ್ನ ಅಲೌಕಿಕವಾದ ಪ್ರಭಾವದಿಂದ ತನ್ನ ಪಿತೃಗಳನ್ನೇ ನುಂಗುವ ಪ್ರಯತ್ನವನ್ನು ಮಾಡುತ್ತದೆ. ಈ ಅಸಾಧಾರಣವಾದ ಶಕ್ತಿಯು ಮಾನವನಾದ ಯಜಮಾನನ ಗ್ರಹಣಕ್ಕೆ ಮೀರಿದುದು. ಎಂದರೆ, ಅಗ್ನಿಯ ಶಕ್ತಿಯೆಷ್ಟೆಂದು ಮಾನವನಿಂದ ಅಳೆಯಲು ಸಾಧ್ಯವೇ ಇಲ್ಲ.'' (೧೦–೭೯–೪)

" ಅಗ್ನಿಯು ಉತ್ಪನ್ನನಾದೊಡನೆಯೇ, ನುಲುಚಿಕೊಂಡು ಓಡುವ ಸರ್ಪದಂತೆ ತೀವ್ರಗಮನವುಳ್ಳವನಾಗಿ ಮಾನವನ ಹಿಡಿತಕ್ಕೆ ಸಿಲುಕದೆ ತಪ್ಪಿಸಿಕೊಳ್ಳುತ್ತಾನೆ.'' (೧೦-೧೫-೧)

'' ಆದರೆ, ಅವನ ಆಸ್ಯಕ್ಕೆ (ಬಾಯಿಯಲ್ಲಿ) ಘೃತಾದಿಗಳನ್ನರ್ಪಿಸಿ ಅವುಗಳಿಂದ ಯಜಮಾನರು ಅವನನ್ನು ಪೋಷಿಸುತ್ತಾರೆ.'' (೩-೨೧-೧)

" ಎಲೈ ಅಗ್ನಿಯೇ, ನೀನು ದೇವಪೋತೃವಾಗಿದ್ದೀಯೆ. ನಮ್ಮಿಂದ ಅರ್ಪಿತವಾದ ಈ ಆಜ್ಯಾಹುತಿಗಳನ್ನು ಸ್ವೀಕರಿಸು.'' (೩–೨೧–೧, ೨, ೩) (೫-೧೪-೬; ೮-೩೯-೩; ೮-೪೩-೧೧, ೨೨; ೧೦-೬೯-೧; ೧೦-೧೧೮-೪; ಅ. ವೇ. ೧–೭–೨).

ಋ ಸಂ. ೩–೨೬–೭ ನೇ ಮಂತ್ರದಲ್ಲಿ ಅಗ್ನಿಯು ಘೃತವೇ ನನ್ನ ಕಣ್ಣು (ಘೃತಂ ಮೇ ಚಕ್ಷುಃ) ಎಂದು ಪ್ರಕಟಿಸುತ್ತಾನೆ.

### ಅಗ್ನಿಯ ಸ್ವಾಭಾವಿಕ ಗುಣಗಳನ್ನು ವರ್ಣಿಸುವ ವಿಶೇಷಣಗಳು.

ಅಗ್ನಿಯ ವಿಶೇಷ ಗುಣಗಳನ್ನು ವರ್ಣಿಸುವ ವಿಶೇಷಣಗಳು ಅನೇಕವಿವೆ. ಆದರೆ ಅವುಗಳಲ್ಲಿ ಬಹಳವಾಗಿ ಅಗ್ನಿಯ ಭೌತಿಕಗುಣಗಳನ್ನು ವರ್ಣಿಸುವುವೇ ಆಗಿದೆ.

ಸರ್ಪಿರಾಸುತಿಃ ; ಘೃತಾನ್ನಃ । ಘೃತವೇ ಅನ್ನವಾಗಿ ಉಳ್ಳವನು. (೨-೭-೬ ; ೭-೩-೧ ; ೧೦-೬೯-೨)

ಘೃತನಿರ್ಣಿಕ್—ಘೃತವೇ ಸ್ವರೂಪವಾಗಿ ಉಳ್ಳವನು. (೩–೧೭–೧ ; ೩-೨೭-೫ ; ೧೦-೧೨೨-೨)

ಘೃತಕೇಶಃ—ಘೃತವೇ ಕೇಶರೂಪವಾಗಿ ಉಳ್ಳವನು. (೭-೪೯-೨)

ಘೃತಪೃಷ್ಠಃ—ಘೃತವೇ ಪೃಷ್ಠಭಾಗವಾಗಿ ಉಳ್ಳವನು (೫-೪-೩; ೫-೩೭-೧; ೭-೨-೪; ೧೦-೧೨೨-೪)

ಘೃತಪ್ರತೀಕಃ—ಘೃತದಿಂದ ಮಿನುಗುಟ್ಟತಕ್ಕವನು. (೩-೧-೧೮; ೫-೧೧-೧; ೧೦-೨೧-೭)

**ಘೃತಯೋನಿಃ**—ಘೃತವೇ ಉತ್ಪತ್ತಿಸ್ಥಾನವಾಗಿ ಉಳ್ಳವನು. (೫-೮-೬ ; ೨-೩-೧೧)

**ದ್ರ್ವನ್ನಃ**—ಸಮಿದ್ರೂಪವಾದ ಕಾಷ್ಠಗಳೇ ಅನ್ನವಾಗಿ ಉಳ್ಳವನು. (೨-೭-೬)

**ಧೂಮಕೇತು**—ಧೂಮವೇ ಪ್ರಜ್ಞಾಪಕವಾದ ಸಂಜ್ಞೆಯುಳ್ಳವನು. (೧-೨೭-೧೧ ; ೧-೪೪-೩ ; ೧-೯೪-೧೦ ; ೫-೧೧-೩ ; ೮-೪೩-೪ ; ೮-೪೪-೧೦ ; ೧೦-೪-೫ ; ೧೦-೧೨-೨)

ಅಗ್ನಿಯು ಸ್ತಂಭದಂತಿರುವ ತನ್ನ ಧೂಮರೇಖೆಯನ್ನು ಅಂತರಿಕ್ಷಕ್ಕೆ ಕಳುಹುತ್ತಾನೆ. **ಮೇತೇವ ಧೂಮಂ ಸ್ತಭಾಯದುಪ ದ್ಯಾಂ)** (೪-೬-೨ ; ೭-೨-೧ ; ೭-೩-೩ ; ೭-೧೬-೩).

ಅಗ್ನಿಯ ಧೂಮವು ಕಂಪನಾತ್ಮಕವಾಗಿದೆ. ಅವನ ಜ್ವಾಲೆಯನ್ನು ಯಾರೂ ಹಿಡಿದು ತಮ್ಮ ವಶಮಾಡಿ ಕೊಳ್ಳುವಂತಿಲ್ಲ. (**ಅಗೃಭೀತಶೋಚಿಷಂ**) (೮-೨೩-೧)

ಪಶುಗಳ ಮೇಲೆಲ್ಲಾ ಪ್ರಭುತ್ವವನ್ನು ಮಾಡುವ ವೃಷಭದಂತೆ, ಅಗ್ನಿಯು ವಾಯುಪ್ರಚೋದಿತನಾಗಿ ವನಾಂತರಗಳಲ್ಲೆಲ್ಲಾ ನುಗ್ಗುತ್ತಾ ತನ್ನ ಶಕ್ತಿಯನ್ನು ಪ್ರಕಾಶಪಡಿಸುತ್ತಾನೆ. (೧-೫೮-೪, ೫ ; ೧-೬೫-೮)

ಅಗ್ನಿಯು ಅಂಧಕಾರವನ್ನು ನಾಶಪಡಿಸತಕ್ಕವನು (**ತಮೋಹಾ**) ಮತ್ತು ರಾತ್ರಿಯ ಕಗ್ಗತ್ತಲೆಯಲ್ಲೂ ನೋಡತಕ್ಕ ಶಕ್ತಿಯುಳ್ಳವನು. (೧-೧೪೦-೧ ; ೧-೯೪-೭)

ಕಗ್ಗತ್ತಲೆಯಲ್ಲಿ ಪೂರ್ಣವಾಗಿ ಆವೃತವಾಗಿದ್ದ ಪೃಥ್ವಿಯೂ, ಅಂತರಿಕ್ಷಲೋಕಗಳೂ ಅಗ್ನಿಯ ಪ್ರಕಾಶವಾದೊಡನೆಯೇ ತಾವೂ ಪ್ರಕಾಶಕ್ಕೆ ಬಂದವು. ಒಡನೆಯೇ ದೇವತೆಗಳೂ, ದ್ಯಾವಾಪೃಥಿವಿಗಳೂ, ಅಪ್ಪೂ, ಓಷಧಿಗಳೂ ಅವನ ಸಖಿತ್ವವನ್ನು ಹೊಂದಿ ತತ್ಫಲವಾದ ಸಂತೋಷವನ್ನು ಪಡೆದವು. (೧೦-೮೮-೨)

**ಚಿತ್ರಭಾನುಃ, ಚಿತ್ರಶೋಚಿಃ** ಇತ್ಯಾದಿ ವಿಶೇಷಣಗಳು ಅಗ್ನಿಯ ನಾನಾವಿಧವಾದ ತೇಜಸ್ಸಿನ ಸ್ವರೂಪವನ್ನೂ, ಜ್ವಾಲೆಯ ಮಹತ್ವವನ್ನೂ ತಿಳಿಸುತ್ತವೆ. ಅವನ ಜ್ವಾಲೆಗಳು ಅಸಾಧಾರಣವಾದ ಪ್ರಭೆಯುಳ್ಳವು.

(೧-೨೭-೬ ; ೨-೧೦-೨ ; ೫-೨೬-೨ ; ೬-೧೦-೩ ; ೭-೯-೩ ; ೭.೧೨-೧ ; ೮-೧೯-೨)

**ಶುಕ್ರಶೋಚಿಃ**—

ಇದೇ ಗುಣವನ್ನೇ, **ಊರ್ಧ್ವಶೋಚಿಃ**—ಊರ್ಧ್ವಮುಖವುಳ್ಳ ಪ್ರಭೆಯುಳ್ಳವನು, ಶುಭ್ರವಾದ ಜ್ವಾಲೆಯುಳ್ಳವನು, **ಪಾವಕಶೋಚಿಃ**—ಪವಿತ್ರವಾದ ಪ್ರಭೆಯುಳ್ಳವನು ಇತ್ಯಾದಿಯಾದ ಅನೇಕ ವಿಶೇಷಣಗಳು ವಿಶದವಾಗಿ ತಿಳಿಸುತ್ತವೆ. (೬- ೫-೨ ; ೭.೧೫-೧೦ ; ೮-೨೩-೨೦ ; ೮.೪೩-೩೧ ; ೧-೧೪೦-೧ ; ೫ ೨-೩)

ಪ್ರಭಾಯುತವಾದ ಅಗ್ನಿಯ ಜ್ವಾಲೆಗಳನ್ನು ವಿಸ್ತೃತವಾಗಿ ಹರಡಿದ ತಲೆಗೂದಲಿಗೆ ಹೋಲಿಸಿದೆ. (**ಶೋಚಿಷ್ಕೇಶಃ**) (೧-೪೫-೬ ; ೩;೧೪-೧ ; ೩-೧೭-೧; ೩-೨೭-೪ : ೫-೮-೨ ; ೫-೪೧-೧೦) ಆ ಜ್ವಾಲೆಗಳು ಹೊಂಬಣ್ಣದಿಂದ ಪ್ರಕಾಶಿಸುವುದರಿಂದ ಸುವರ್ಣನಿರ್ಮಿತವಾದುದೆಂದೂ, ಸುವರ್ಣದ ಪ್ರಭೆಯುಳ್ಳದ್ದೆಂದೂ ಅನೇಕ ವಿಧವಾಗಿ ವರ್ಣಿತವಾಗಿವೆ. (**ಹಿರಣ್ಯರೂಪಂ ಜನಿತಾ ಜಜಾನ**) (೩-೨-೧೩ : ೪-೩-೧ ; ೧೦-೨೦-೯ ; ೫-೭-೭).

ಅಗ್ನಿಯ ಜ್ವಾಲೆಗಳೇ ಅವನ ಆಯುಧಗಳು. ಜ್ವಾಲಾರೂಪವಾದ ಈ ಆಯುಧಗಳ ವರ್ಣನೆಯೂ ಅನೇಕವಿಧವಾಗಿವೆ. ಅಗ್ನಿಯು ಹರಿತವಾದ ಆಯುಧಗಳನ್ನು ಧರಿಸಿದ್ದಾನೆ. (**ತಿಗ್ಮಹೇತಿಃ; ತಿಗ್ಮಭೃಷ್ಟಿಃ**) (೪-೪-೪ ; ೪-೫-೩.)

ಹರಿತವಾದ ದಂತವುಳ್ಳವನು. (ತಿಗ್ಮಜಂಭಃ) ; ದಹನಾತ್ಮಕವಾದ ದಂತವುಳ್ಳವನು. (ತಪುರ್ಜಂಭಃ) ಪ್ರಕಾಶಮಾನವಾದ ದಂತವುಳ್ಳವನು ; ಸುವರ್ಣಾತ್ಮಕವಾದ ದಂತವುಳ್ಳವನು. ಅಯೋಮಯವಾದ ದಂತದಿಂದ ಕೂಡಿ ದಹನಾತ್ಮಕವಾದ ಕೆನ್ನೆಯನ್ನು ಹೊಂದಿದ್ದಾನೆ. (೧-೭೯-೭ ; ೧-೧೪೩-೫ ; ೪-೫-೪ ; ೪-೧೫-೫ : ೮-೧೯-೨೨ : ೧-೫೮-೫ ; ೮-೨೩-೪ ; ೫-೭-೭ : ೫-೨-೩ : ೧೦-೮೭-೨ ; ೭-೪೯-೧೩ ; ೧೦-೭೯-೧).

ಇಂತಹ ವರ್ಣನೆಗಳ ಜೊತೆಯಲ್ಲಿ, ಅವನು ಪಾದರಹಿತನು ಮತ್ತು ಶಿರೋರಹಿತನು (ಅಪಾದ್, ಅಶೀರ್ಷಾ) ಇತ್ಯಾದಿ ಗುಣಪ್ರಕಾಶವೂ ಒಂದು ವೈಶಿಷ್ಟ್ಯವನ್ನು ತೋರಿಸುತ್ತದೆ. (೪-೧-೧೧)

ಆದರೆ, ಇದಕ್ಕೆ ವಿರುದ್ಧವಾಗಿ ಇನ್ನೊಂದುಕಡೆ ಇವನು ದಹನಾತ್ಮಕವಾದ ಶಿರಸ್ಸುಳ್ಳವನು ಎಂದೂ ತಿಳಿಸಿದೆ. (ತಪುರ್ಮೂರ್ಧಾ) (೭-೩-೧)

ಅಗ್ನಿಗೆ ಮೂರು ಶಿರಸ್ಸುಗಳೂ, ಸಪ್ತರಶ್ಮಿಗಳೂ ಇವೆ (ತ್ರಿಮೂರ್ಧಾನಂ ಸಪ್ತರಶ್ಮಿಂ). ಅವನಿಗೆ ನಾಲ್ಕು ಕಣ್ಣುಗಳಿವೆ. (ಚತುರಕ್ಷಃ) ; ಅವನು ಸಹಸ್ರಚಕ್ಷುಸ್ಸುಳ್ಳವನು. (ಸಹಸ್ರಾಕ್ಷಃ) ; ಸಹಸ್ರಕೊಂಬುಗಳುಳ್ಳವನು. (ಸಹಸ್ರಶೃಂಗಃ). (೧-೧೪೬-೧ ; ೨-೫-೨ : ೧-೩೧-೧೩ : ೧-೩೯-೧೨ ; ೫-೧-೮).

ಅಗ್ನಿಯು ಸ್ವರೂಪತಃ ಸುವರ್ಣಾತ್ಮಕನು ಮತ್ತು ಪ್ರಭಾಯುತನು. ಆದರೆ, ಅವನ ಸಂಚಾರಮಾರ್ಗವು ಕೃಷ್ಣವರ್ಣವುಳ್ಳದು, ಮತ್ತು ಅವನ ರಥಚಕ್ರವೂ ಸಹ ಕೃಷ್ಣವರ್ಣಾತ್ಮಕವು. (೨-೪-೬ : ೬-೧೦-೪ ; ೭-೮-೨ ; ೮-೨೩-೧೯).

ಇವನು ವನವನ್ನೆಲ್ಲಾ ಆಕ್ರಮಿಸಿ, ಎಲ್ಲವನ್ನೂ ದಹಿಸಿ, ತನ್ನ ಜ್ವಾಲಾರೂಪದ ಜಿಹ್ವೆಯಿಂದ ಎಲ್ಲವನ್ನೂ ಕೃಷ್ಣವರ್ಣವುಳ್ಳದ್ದನ್ನಾಗಿ ಮಾಡುತ್ತಾನೆ. ಮತ್ತು ಸರ್ವಭಕ್ಷಕನೆಂದೂ ಪ್ರಖ್ಯಾತನಾಗಿದ್ದಾನೆ. (ವಿಶ್ವಾದ್) (೧-೧೪೩-೫ ; ೫-೪೧-೧೦; ೬-೬೦-೧೦ ; ೧೦-೭೯-೨; ೮-೪೪-೨೬)

ವಾಯುವಿನಿಂದಃ ಚೋದಿತನಾಗಿ ವನವನ್ನೆಲ್ಲಾ ವ್ಯಾಪಿಸಿ ಮುನ್ನುಗ್ಗುತ್ತಾ, ಪೃಥ್ವಿಯ ರೋಮರೂಪವಾದ ತೃಣಾದಿಗಳನ್ನೆಲ್ಲಾ ಛೇದಿಸಿ, ದಹಿಸಿ, ನಾಪಿತನು ಶ್ಮಶ್ರುವನ್ನು ಕತ್ತರಿಸಿ ನುಣುಪಾಗಿ ಮಾಡುವಂತೆ (೧೦-೧೪೨-೪). ಎಲ್ಲವನ್ನೂ ನುಣ್ಣಗೆ ಮಾಡುತ್ತಾನೆ. (ರೋಮಾ ಪೃಥಿವ್ಯಾಃ) (೧-೬೫-೪-)

ಪ್ರಬಲಪರಾಕ್ರಮವುಳ್ಳ ಸೇನೆಯನ್ನು ಸ್ವತಂತ್ರವಾಗಿ ಬಿಟ್ಟರೆ ಅದರ ಆರ್ಭಟದಿಂದ ಶತ್ರುಜನಗಳಿಗೆ ಭೀತಿಯನ್ನು ಹುಟ್ಟಿಸುವಂತೆ ಅಗ್ನಿಯೂ ತನ್ನ ಪ್ರಬಲಶಕ್ತಿಯಿಂದ ಎಲ್ಲರಿಗೂ ಭಯಜನಕನಾಗಿದ್ದಾನೆ (೧-೬೬-೮ ; ೧-೧೪೩-೫; ೧೦-೧೪೨-೪).

ಅವನ ಜ್ವಾಲೆಗಳು ಸಮುದ್ರದ ಅಲೆಗಳಂತೆ ಭೋರ್ಗರೆಯುತ್ತವೆ. ಮತ್ತು ಅವನು ಗುಡುಗಿನಂತೆ ಗರ್ಜಿಸುತ್ತಾನೆ. (೧-೪೪-೧೨ ; ೭-೩-೬ ; ೧೦-೪೫-೪). ಬಿರುಗಾಳಿಯಂತೆ ಶಬ್ದಮಾಡುತ್ತಲೂ, ಸಿಂಹದಂತೆ ಗರ್ಜಿಸುತ್ತಲೂ ಮುನ್ನುಗ್ಗುತ್ತಾನೆ. (ನಾನದನ್ ನ ಸಿಂಹಃ) (೩-೨-೧೧).

ಅಗ್ನಿಯು ಹೊಂಬಣ್ಣವುಳ್ಳವೂ, ವಾಯುಪ್ರಚೋದಿತವೂ ಆದ ಅಶ್ವಗಳನ್ನು ರಥಕ್ಕೆ ಕಟ್ಟಿಕೊಂಡು ಹೊರಟಾಗ ವೃಷಭದಂತೆ ಗುಟುರುಹಾಕುತ್ತಾನೆ. ತನ್ನ ಜ್ವಾಲೆಗಳೊಡನೆ ಮುನ್ನುಗ್ಗಿ ವನವನ್ನೆಲ್ಲಾ ವ್ಯಾಪಿಸುವಾಗ ತೃಣಾದಿಗಳನ್ನೆಲ್ಲಾ ದಹಿಸುತ್ತಾನೆ. ಆ ಕಾಲದಲ್ಲಿ ಕಿಡಿಗಳು ಶಬ್ದಮಾಡುತ್ತಾ ಎಲ್ಲೆಲ್ಲಾ ವ್ಯಾಪಿಸುತ್ತವೆ. ಈ ಕಿಡಿಗಳ ಶಬ್ದದಿಂದ ಆ ವನದಲ್ಲಿರುವ ಪಕ್ಷಿಗಳೆಲ್ಲವೂ ಭೀತಿಗೊಳ್ಳುತ್ತವೆ. (೧-೯೪-೧೦)

ಶಬ್ದಮಾಡುತ್ತಾ ಮುನ್ನುಗ್ಗುವ ಬಿರುಗಾಳಿಯಂತೆಯೂ, ಆರ್ಭಟಿಸುವ ಸಿಡಿಲಿನಂತೆಯೂ ಅಗ್ನಿಯು ಅಪ್ರತಿಹತವಾದುದೂ ಸರ್ವವ್ಯಾಪಕವಾದುದೂ ಆದ ಶಕ್ತಿಯನ್ನು ಹೊಂದಿದ್ದಾನೆ. (೧-೧೪೩-೫)

ಅವನು ನಾನಾವಿಧವಾದ ರೂಪಪ್ರಭೇದಗಳನ್ನು ಹೊಂದುತ್ತಾ, ಸೂರ್ಯನಂತೆ ಪ್ರಕಾಶಿಸುತ್ತಾನೆ. (೭-೩-೬)

ಅವನ ತೇಜಸ್ಸು ಸೂರ್ಯರಶ್ಮಿಗಳಂತೆಯೂ, ಉಷಸ್ಸಿನ ಕಿರಣಗಳಂತೆಯೂ ಆಕರ್ಷಕವೂ ಪ್ರಕಾಶಮಾನವೂ ಆಗಿವೆ. (೧೦-೯೧-೪)

ಅಲ್ಲದೆ, ವಿದ್ಯುದ್ರೂಪವಾದ ರಥದಲ್ಲಿಯೇ ಸಂಚಾರಮಾಡುತ್ತಾನೆ. (೩-೧೪-೧)

ಅವನ ರಥವು ಪ್ರಭಾಯುತವೂ, ಹಿರಣ್ಮಯವಾದುದೂ, ಆಕರ್ಷಕವಾದುದೂ ಆಗಿದೆ. (೧-೧೪೦-೧ ; ೧-೧೪೧-೧೨ ; ೩-೫-೩ ; ೫-೧-೧೧ ; ೧೦-೧-೫ ; ೪-೧-೮ ; ೩-೩-೯; ೪-೨-೪)

ಅವನ ರಥವನ್ನು ಎಳೆಯತಕ್ಕ ಅಶ್ವಗಳು ಇನ್ನೂ ಆಕರ್ಷಕವಾಗಿವೆ. ಅವು ಘೃತಪೃಷ್ಠವುಳ್ಳವಾಗಿಯೂ, ವಾಯುಪ್ರಚೋದಿತವಾಗಿಯೂ (ವಾತಜೂತಾಃ), ಹೊಂಬಣ್ಣವುಳ್ಳವಾಗಿಯೂ (ರೋಹಿತಾಃ), ಕ್ರಿಯಾಶಕ್ತಿಯುಳ್ಳವಾಗಿಯೂ (ಜೀರಾಶ್ವಾಃ), ನಾನಾರೂಪಗಳನ್ನು ಧರಿಸುವುಗಳಾಗಿಯೂ (ವಿಶ್ವರೂಪಾಃ), ಮನಃಸಂಕಲ್ಪದಿಂದಲೇ ರಥಕ್ಕೆ ಯೋಜಿತಗಳಾಗುವುವಾಗಿಯೂ (ಮನೋಯುಜಃ) ಆಗಿವೆ. ಇದಲ್ಲದೇ, ಇನ್ನೂ ಇತರ ಅನೇಕ ವಿಶೇಷಣಗಳಿಂದಲೂ ವರ್ಣಿತವಾಗಿವೆ. (೧-೧೪-೬ ; ೧-೪೫-೨ ; ೧-೯೪-೧೦ ; ೧-೧೪೧-೧೨ ; ೨-೪-೨ ; ೨-೧೦-೨ ; ೪-೧-೮ ; ೪-೨-೨, ೪ ; ೪-೬-೯ ; ೬-೧೬-೪೩ ; ೭-೧೬-೨ ; ೮-೪೩-೧೬ ; ೧೦-೭-೪ ; ೧೦-೭೦-೨)

ಇಂತಹ ಅಸಾಧಾರಣವಾದ ರೂಪವೂ, ಪ್ರಭಾವವೂ ಉಳ್ಳ ಅಶ್ವಗಳನ್ನು ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆತರುವುದಕ್ಕಾಗಿ ತನ್ನ ರಥಕ್ಕೆ ಯೋಜಿಸುತ್ತಾನೆ. (೧-೧೪-೧೨ ; ೩-೬-೬ ; ೮-೬೪-೧).

## ಅಗ್ನಿಯ ದಿವ್ಯಕರ್ಮಗಳು.

ಅಗ್ನಿಯ ಕರ್ಮಗಳು ಅತ್ಯಂತ ಪೂಜ್ಯವಾದವೆಂದೂ, ಪ್ರಭಾವಪೂರಿತವಾದವೆಂದೂ ಪ್ರಶಂಸಿತವಾಗಿವೆ. ಇಂದ್ರನಂತೆ ಪ್ರಭಾವಯುತನಾದ ಈ ಅಗ್ನಿಯು ದಿವ್ಯಲೋಕವಾಸಿಗಳಿಗೆಲ್ಲಾ ಪ್ರಭುವೆಂಬ ಪ್ರಶಂಸಿತನಾಗಿದ್ದಾನೆ. (ಸಮ್ರಾಜೋ ಅಸುರಸ್ಯ) (೭-೬-೧)

ಮೇಲೆ ಉದಾಹೃತವಾದ ಕೆಲವು ಸನ್ನಿವೇಶಗಳಲ್ಲಿ, ಅವನು ದ್ಯಾವಾಪೃಥಿವಿಗಳಿಂದ ಉತ್ಪನ್ನನಾದವನೆಂದು ವರ್ಣಿತವಾಗಿದ್ದರೂ, ಬೇರೆ ಕಡೆಗಳಲ್ಲಿ ಆ ದ್ಯಾವಾಪೃಥಿವಿಗಳು, ವಿಸ್ತೃತವಾಗಿ ಪ್ರಸರಿಸಲು ಅಗ್ನಿಯೇ ಕಾರಣವೆಂದೂ, ಅವನ ಶಕ್ತಿಯಿಂದಲೇ ಅವು ಸ್ಥಿರವಾಗಿ ನಿಂತಿವೆಯೆಂದೂ ತಿಳಿಸಿದೆ. ಅಲ್ಲದೇ, ಅವುಗಳ ಸೃಷ್ಟಿಗೂ ಅವನೇ

ಕಾರಣನೆಂದೂ, ಸತ್ಯಾತ್ಮಕವಾದ ಮಂತ್ರಗಳಿಂದ ಅವುಗಳನ್ನು ಧರಿಸಿ ರಕ್ಷಿಸುವನೆಂದೂ ವಿವರಿಸಿದೆ. (೩-೬-೫; ೭-೫-೪; ೬-೮-೩; ೧-೯೬-೪; ೭-೫೭-೬; ೧-೬೭-೩).

ಅಗ್ನಿಯ ಜ್ವಾಲೆಗಳು ದ್ಯಾವಾಪೃಥಿವಿಗಳನ್ನು ಬೇರೆಬೇರೆ ಮಾಡಿ ಪ್ರತ್ಯೇಕವಾಗಿರಿಸಿವೆ. ಅಂತರಿಕ್ಷದ ತೇಜೋರಾಶಿಗಳ ಸ್ಥಿತಿಗೂ, ಪಾರ್ಥಿವಪ್ರದೇಶಗಳ ರಕ್ಷಣೆಗೂ ಅಗ್ನಿಯ ಪ್ರಭಾವವೇ ಕಾರಣವಾಗಿದೆ. (೬-೮-೩; ೬-೭-೭; ೬-೯-೨).

ಅಗ್ನಿಯಿಂದ ಮಿತ್ರನು ಉತ್ಪನ್ನನಾದನು. ಕ್ಷಯರಹಿತವಾದ ತೇಜೋಮಂಡಲವುಳ್ಳ ಸೂರ್ಯನು ಅಂತರಿಕ್ಷವನ್ನು ಹತ್ತಲು ಅಗ್ನಿಯೇ ಕಾರಣನು. ಪೃಥಿವಿಯ ಮೇಲೆ ಸಂಚರಿಸುವುದೂ, ಅಂತರಿಕ್ಷದಲ್ಲಿ ಹಾರುವುದೂ, ಜಲಚರವಾಗಿರುವುದೂ, ಜಂಗಮವೂ, ಸ್ಥಾವರವೂ ಆದ ಸಕಲ ಭೂತಗಳನ್ನೂ ಅವನೇ ಸೃಷ್ಟಿಸಿದನು. ೧೦-೮-೪; ೧೦-೧೫೬-೪; ೧೦-೮೮-೪).

[ಈ ಕೊನೆಯ (೧೦-೮೮-೪) ವಾಕ್ಯಕ್ಕೆ ಕೊಂಚ ವಿವರಣೆಯನ್ನು ಹೇಳುವುದು ಅವಶ್ಯವಾಗಿರುತ್ತದೆ,

ಸ ಪತತ್ರೀತ್ವರಂ ಸ್ಥಾ ಜಗದ್ಯಚ್ಛ್ವಾತ್ರಮಗ್ನಿರಕೃಣೋಜ್ಜಾತವೇದಾಃ ।

(೧೦-೮೮-೪).

ಈ ವಾಕ್ಯವನ್ನು ನಿರುಕ್ತಕಾರರು ಉದಾಹರಿಸಿದ್ದಾರೆ. (ನಿ. ೫-೩). ದುರ್ಗಾಚಾರ್ಯರು ಈ ಸಂದರ್ಭವನ್ನು ವಿವರಿಸುತ್ತಾ; ಇಲ್ಲಿ ನಿರ್ದಿಷ್ಟವಾಗಿರುವ ಸಕಲಭೂತಗಳನ್ನೂ ಅಗ್ನಿಯು ಪ್ರಳಯಕಾಲದಲ್ಲಿ ತನ್ನಲ್ಲೇ ಲಯವನ್ನು ಹೊಂದುವಂತೆ ಮಾಡಿಕೊಳ್ಳುತ್ತಾನೆಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಇದೇ ಸೂಕ್ತದ ಮುಂದಿನ ಮಂತ್ರಗಳೂ ಈ ವಿವರಣೆಗೆ ಆಧಾರವಾಗಿರುತ್ತವೆ.

"ತಸ್ಮಿನ್ನಗ್ನೌ ಸೂಕ್ತವಾಕೇನ ದೇವಾ ಹವಿರ್ವಿಶ್ವ ಆಜುಹವುಸ್ತನೂಪಾಃ ।"

(೧೦-೮೮-೭)

ಎಂಬ ಮುಂದಿನ ಮಂತ್ರದಲ್ಲಿ, ಸಕಲ ದೇವತೆಗಳೂ ಸಹ 'ಇದಂ ದ್ಯಾವಾಪೃಥಿವೀ' ಇತ್ಯಾದಿ ಸ್ತುತಿವಾಕ್ಯಗಳೊಡನೆ ಅಗ್ನಿಯಲ್ಲಿ ಹವಿಸ್ಸನ್ನರ್ಪಿಸಿದರು ಎಂದಿದೆ. ಆದರೆ, ಆ ಹವಿಸ್ಸಿನ ಸ್ವರೂಪವೇನು ಎಂಬುದನ್ನು ಮುಂದಿನ ಮಂತ್ರದಲ್ಲಿ ತಿಳಿಸಿದೆ.

"ಯಂ ದೇವಾಸೋಽಜನಯಂತಾಗ್ನಿಂ ಯಸ್ಮಿನ್ನಾಜುಹವುರ್ಭುವನಾನಿ ವಿಶ್ವಾ ।
ಸೋ ಅರ್ಚಿಷಾ ಪೃಥಿವೀಂ ದ್ಯಾಮುತೇಮಾಮೃಜೂಯಮಾನೋ ಅತಪನ್ಮಹಿತ್ವಾ ॥"

(೧೦-೮೮-೯)

ದೇವತೆಗಳು ಯಾವ ಅಗ್ನಿಯನ್ನು ನಿರ್ಮಿಸಿದರೋ, ಯಾವ ಅಗ್ನಿಯಲ್ಲಿ ಸಕಲ ವಿಶ್ವವನ್ನೂ ಆಹುತಿರೂಪದಲ್ಲಿ ಅರ್ಪಿಸಿದರೋ, ಆ ಅಗ್ನಿಯು ತನ್ನ ದಿವ್ಯತೇಜಸ್ಸಿನಿಂದ ಸಕಲ ದ್ಯಾವಾಪೃಥಿವಿಗಳನ್ನೂ, ತದಂತರ್ಗತವಾದ ಸಮಸ್ತ ಭೂತಜಾತಗಳನ್ನೂ ತನ್ನ ಮಹತ್ವದಿಂದ ದಗ್ಧಮಾಡಿದನು, ಎಂದು ವಿವರಿಸಿದೆ.

ಆದುದರಿಂದ ದುರ್ಗಾಚಾರ್ಯರು ಹೇಳಿರುವ ವಿವರಣೆಗೆ ಈ ಮಂತ್ರಗಳು ಆಧಾರಭೂತವಾಗಿವೆ. ಆದರೆ, ನಿರುಕ್ತಕಾರರು ಮಾತ್ರ ಅಗ್ನಿರಕೃಣೋತ್ (೧೦-೮೮-೪) ಎಂಬುದಕ್ಕೆ 'ಅಗ್ನಿರಕರೋಜ್ಜಾತವೇದಾಃ' ಎಂದರ್ಥ ಮಾಡಿದ್ದಾರೆ.]

ಅಂತರಿಕ್ಷವೆಲ್ಲಾ ನಕ್ಷತ್ರರೂಪವಾದ ತೇಜೋರಾಶಿಗಳನ್ನು ಹೊಂದಿರಲು ಅಗ್ನಿಯೇ ಕಾರಣನು.
(೧-೬೮-೫)

ಇದೇ ಅಗ್ನಿಯು ಅಂತರಿಕ್ಷಕ್ಕೆ ಶಿರೋರೂಪನು ಮತ್ತು ಶಿಖರಪ್ರಾಯನು. ಪೃಥ್ವಿಯ ನಾಭಿರೂಪನು:
(೧-೫೯-೨; ೬-೭-೧; ೮-೪೪-೧೬; ೧೦-೮೮-೫).

ಸ್ತಂಭದಂತೆ ಊರ್ಧ್ವಮುಖನಾಗಿದ್ದಾನೆ. ಮತ್ತು ಅವನ ಮಹತ್ವವು ದ್ಯಾವಾಪೃಥಿವಿಗಳೆಲ್ಲದರ ಮಹತ್ವ ವನ್ನೂ ಮಿೀರಿಸುತ್ತದೆ. (೪-೫-೧; ೧-೫೯-೫; ೩-೩-೧೦)

ಈ ಅಗ್ನಿಯ ಮಹತ್ಕರ್ಮಗಳನ್ನು ನೋಡಿ ಮಾನವರೆಲ್ಲರೂ ಗಾಬರಿಗೊಳ್ಳುತ್ತಾರೆ. ಅವನ ನಿಯಮಗಳೂ, ರಚನೆಗಳೂ ಯಾರಿಂದಲೂ ಉಲ್ಲಂಘಿಸಲಾಗುವುದಿಲ್ಲ. (೨-೮-೩; ೨-೯-೧; ವಾ. ಸಂ. ೧೧-೩೬; ೬-೭-೫; ೮-೪೪-೨೫; ೮-೯೨-೩).

ದ್ಯಾವಾಪೃಥಿವಿಗಳೂ, ಭೂತಭವಿಷ್ಯದ್ವರ್ತಿಗಳಾದ ಸಕಲ ಭೂತಗಳೂ ಈ ಅಗ್ನಿಯ ಆಜ್ಞೆಯನ್ನೇ ಪಾಲಿಸುತ್ತವೆ. (೭-೫-೪; ಅ. ವೇ. ೪-೨೩-೭)

ದೇವತೆಗಳಿಗಾಗಿ ಈ ಅಗ್ನಿಯು ಸಮಸ್ತ ಸಂಪತ್ತನ್ನೂ, ಸಕಲ ಪ್ರದೇಶಗಳನ್ನೂ ಯುದ್ಧದಲ್ಲಿ ಜಯಿಸಿ ಕೊಟ್ಟನು. ಮತ್ತು ಅವರನ್ನೆಲ್ಲಾ ಆಪತ್ತಿನಿಂದ ರಕ್ಷಿಸಿದನು. (ಸಹಸ್ರಜಿತ್ ೧-೧೮೮-೧). (೧-೫೯-೫; ೭-೧೩-೨)

ಈ ಅಗ್ನಿಯು ಕತ್ತಲೆಯಲ್ಲಿ ಮರೆಸಿಕೊಂಡಾಗ ಎಲ್ಲಾ ದೇವತೆಗಳೂ ಬೆದರಿ ಇವನಿಗೆ ಪೂಜೆಯ ನ್ನರ್ಪಿಸುತ್ತಾರೆ. (೬-೯-೭)

ವರುಣ, ಮಿತ್ರ, ಮರುತ್ತುಗಳು ಮತ್ತು ಮೂರುಸಾವಿರದ ಮುನ್ನೂರ ಮುವ್ವತ್ತ ಒಂಭತ್ತುಮಂದಿ ದೇವತೆಗಳೂ ಇವನಿಗೆ ಪೂಜೆಯನ್ನರ್ಪಿಸುತ್ತಾರೆ. (೩-೯-೯; ೩-೧[illegible]-೪; ೧೦-೬೯-೯)

ಈ ಅಗ್ನಿಯ ಪ್ರಭಾವದಿಂದಲೇ ವರುಣ, ಮಿತ್ರ ಮತ್ತು ಅರ್ಯಮಾದಿಗಳು ಜಯವನ್ನು ಹೊಂದುತ್ತಾರೆ.
(೧-೧೪೧-೯)

ಇವನು ಸಕಲ ಜಗತ್ತನ್ನೂ ವೀಕ್ಷಿಸಲೂ ಮತ್ತು ಅವುಗಳ ಮರ್ಮವನ್ನು ತಿಳಿಯಲೂ ಶಕ್ತನಾಗಿದ್ದಾನೆ.
(೩-೫೫-೧೦; ೧೦-೧೫೭-೪)

ಅಂತರಿಕ್ಷದ ಸೀಮಾಪ್ರದೇಶಗಳನ್ನೂ. ದೇವಮಾನವಾದಿಗಳ ಉತ್ಪತ್ತಿಕ್ರಮಗಳನ್ನೂ ದೇವತೆಗಳ ನಿಯಮ ಗಳನ್ನೂ ಅರಿತಿದ್ದಾನೆ. (೧-೭೦-೧, ೩; ೩-೪-೧೧; ೬-೧೫-೧೩)

ಅವನು ದಿವ್ಯಸ್ವರೂಪನಾದುದರಿಂದಲೇ, ಮಾನವರ ಕರ್ಮರಹಸ್ಯಗಳನ್ನರಿತು ಅವನನ್ನುದ್ದೇಶಿಸಿ ಪಠಿಸಿದ ಸಕಲ ಸ್ತುತಿಗಳನ್ನೂ ತಿಳಿದು ಅವರಿಗೆ ಒಲಿಯುತ್ತಾನೆ. (೮-೩೯-೬; ೮-೪೩-೨೩; ೯-೭-೫; ೫-೧೨-೧; ೫-೧೫-೧; ೭-೨-೩; ೭-೬-೧).

## ಅಗ್ನಿಯು ತನ್ನ ಭಕ್ತರಲ್ಲಿಟ್ಟಿರುವ ಸಾಕ್ಷಾತ್ಸಂಬಂಧ.

ಅಗ್ನಿಯ ಉಪಾಸಕರು ಸಕಲ ವಿಧವಾದ ಅಭ್ಯುದಯವನ್ನೂ, ಸಂಪತ್ತನ್ನೂ ಪಡೆಯುತ್ತಾರೆ. ಮತ್ತು ದೀರ್ಘಾಯುಗಳಾಗಿರುತ್ತಾರೆ. ಯಶಸ್ಸಿನಿಂದ ಪ್ರಖ್ಯಾತರಾಗಿ ಪ್ರಕಾಶಿಸುತ್ತಾರೆ. (ರಾಯೊ ದ್ಯುಮ್ನೇನ ಶ್ರವಸಾ ವಿಭಾತಿ). (೬-೨-೪, ೫ ; ೬-೫-೫ ; ೬-೧೦-೩ ; ೬-೧೩-೪ ; ೬-೧೫-೧೧ ; ೭-೧-೨ ; ೮-೧೯-೫, ೬ ; ೮-೪೪-೧೫ ; ೮-೭೩-೯).

ಯಾವ ಯಜಮಾನನು ಅಶ್ವಗಳೊಡನೆಯೂ, ಸುವರ್ಣಾದಿ ಸಂಪತ್ತುಗಳಿಂದ ಕೂಡಿದ ರಥಗಳೊಡನೆಯೂ ಕೂಡಿ ಅತಿಥಿರೂಪನಾದ ಅಗ್ನಿಗೆ ಅವುಗಳೆಲ್ಲವನ್ನೂ ಅಗ್ನಿಯ ಅನುಗ್ರಹವೆಂದು ತಿಳಿದು ಅಗ್ನಿಯನ್ನು ಪೂಜಿಸುವನೋ ಅಂತಹ ಯಜಮಾನನಿಗೆ ಅಗ್ನಿಯು ಸಖನು. ಮತ್ತು ಅವನ ಆಪತ್ತುಗಳನ್ನೆಲ್ಲಾ ಪರಿಹರಿಸುತ್ತಾನೆ. (೪-೪-೧೦)

ಸಮಿಧಾದಿ ಯಜ್ಞಸಾಧನಗಳನ್ನಾರಿಸಲು ಯಾವನು ರಾತ್ರಿಹಗಲು ದುಡಿದು ಅಗ್ನಿಯ ಪೂಜೆಯನ್ನು ಮಾಡಲು ಶ್ರಮಿಸುವನೋ, ಅವನಿಗೆ ಅಗ್ನಿಯು ಸಕಲ ರಕ್ಷಣೆಗಳನ್ನೂ ಒದಗಿಸುತ್ತಾನೆ. (೪-೨-೬)

ಹವಿರಾದ್ಯನ್ನಗಳಿಂದ ಯಾವ ಯಜಮಾನನು ಅಗ್ನಿಯನ್ನು ಪೋಷಿಸಿ ಬೆಳೆಸುವನೋ ಅಂತಹ ಯಜಮಾನನನ್ನು ಅಗ್ನಿಯು ತನ್ನ ಸಹಸ್ರ ಚಕ್ಷುಸ್ಸುಗಳಿಂದಲೂ ನೋಡಿಕೊಂಡು ರಕ್ಷಿಸುವನು. (೧೦-೭೯-೫)

ಯಾವ ಭಕ್ತನು ತನ್ನ ಸೇವಾರೂಪವಾದ ಪೂಜೆಯಿಂದ ಅಗ್ನಿಯನ್ನು ಸತ್ಕರಿಸುವನೋ ಅಂತಹ ಯಜಮಾನನಿಗೆ ಸತ್ಪುತ್ರನನ್ನು ದಯಪಾಲಿಸುತ್ತಾನೆ. ಆ ಪುತ್ರನು ತನ್ನ ತಂದೆಗೆ ಯಶಸ್ಸನ್ನುಂಟುಮಾಡುತ್ತಾನೆ. (೫-೨೫-೫)

ಅಗ್ನಿಯಿಂದ ರಕ್ಷಿತನಾಗತಕ್ಕವನೂ, ಉತ್ತೇಜಿತನಾಗತಕ್ಕವನೂ ಆದ ಪುರುಷನು ಯುದ್ಧದಲ್ಲಿ ಪ್ರಭೂತವಾದ ಅನ್ನವನ್ನು ಪಡೆಯುತ್ತಾನೆ. ಮತ್ತು ಇವನಿಗೆ ಪರಾಜಯವೆಂಬುದೇ ಇರುವುದಿಲ್ಲ.

(೧-೨೭.೭ ; ಸಾ. ವೇ. ೨–೭೬೫)

ಅಗ್ನಿಯನ್ನುದ್ದೇಶಿಸಿ ಯಜ್ಞಮಾಡಿ ಅಗ್ನಿಯನ್ನು ಪೂಜಿಸುವ ಯಜಮಾನನಿಗೆ ಶತ್ರುಬಾಧೆಯೆಂಬುದೇ ಇರುವುದಿಲ್ಲ. ಅಂತಹ ಶತ್ರುವು ಎಷ್ಟು ಪ್ರಬಲನಾಗಿದ್ದರೂ ಮತ್ತು ಎಂತಹ ಮಾಯಾಶಕ್ತಿಯನ್ನು ಹೊಂದಿದ್ದರೂ ಸಹ ಈ ಯಜಮಾನನೊಂದಿಗೆ ಹೋರಾಡಿ ಸೋಲಿಸಲು ಸಾಧ್ಯವಾಗುವುದಿಲ್ಲ. (೮-೨೩-೧೫)

ಕೇವಲ ದೈಹಿಕ ಶಕ್ತಿಯನ್ನು ಮಾತ್ರವಲ್ಲದೇ, ಯಜಮಾನನಿಗೆ ಆಯುಃಶಕ್ತಿಯನ್ನೂ ಕೊಡುತ್ತಾನೆ. ಯಜಮಾನನಿಗೆ ಅಮರ್ತ್ಯತ್ವವನ್ನನುಗ್ರಹಿಸುತ್ತಾನೆ. (೧-೩೧-೭; ೭-೭-೭; ೭-೪-೬)

ದೇವತೆಗಳೆಲ್ಲರೂ ಸೇರಿ ಅಗ್ನಿಯನ್ನೇ ಅಮರ್ತ್ಯತ್ವಕ್ಕೆ ಕೇಂದ್ರನನ್ನಾಗಿ ಮಾಡಿದರು. (ಅಮೃತಸ್ಯ ನಾಭಿಃ)

(೩-೧೭-೪)

ಈ ವಿಶೇಷಗುಣಗಳಿರುವುದರಿಂದಲೇ ಅವನ ಭಕ್ತರು ಅವನನ್ನು ಸಂತುಷ್ಟವಾದ ಹೃದಯದಿಂದ ಅರಸುತ್ತಾರೆ.

(೮-೪೩-೩೧)

ಮೃತನ ದೇಹವನ್ನು ಪೂರ್ಣವಾಗಿ ದಹಿಸಿ ಮೃತನ ಆತ್ಮನನ್ನು ಸಜ್ಜನರ ಲೋಕಕ್ಕೆ ಕರೆದೊಯ್ಯಬೇಕೆಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

(೧೦-೧೬-೪)

ಇಲ್ಲಿ ಉದಾಹೃತವಾಗಿರುವ ೧೦-೧೬-೪ ನೇ ಮಂತ್ರದಲ್ಲಿ ಸಂಶಯಾಸ್ಪದವಾದ ಒಂದಂಶವಿದೆ. ಅದೇನೆಂದರೆ,

**ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಸ್ತಪತು ತಂ ತೇ ಅರ್ಚಿಃ ।**
**ಯಾಸ್ತೇ ಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಸು ಲೋಕಂ ।**

ಎಂಬ ಈ ಮಂತ್ರದಲ್ಲಿ ಅಜ ಶಬ್ದಕ್ಕೆ ಸಾಯಣರು ಜನ್ಮರಹಿತವಾದ ಪುರುಷರೂಪವೆಂದರ್ಥಮಾಡಿದ್ದಾರೆ. ಎಂದರೆ, ಆತ್ಮನೆಂದಾಯಿತು. ಈ ಆತ್ಮನನ್ನು ಪೂರ್ಣವಾಗಿ ಶುದ್ಧಿಗೊಳಿಸಿ ಸುಕೃತಿಗಳ ಲೋಕಕ್ಕೆ ಕರೆದೊಯ್ಯಿ ಎಂದು ಪ್ರಾರ್ಥಿಸಿದೆಯೆಂದು ವಿವರಿಸಿದೆ.

ಕೆಲವು ಪಂಡಿತರ ಮತದಲ್ಲಿ, ಅಜ ಶಬ್ದಕ್ಕೆ ಯಜ್ಞಪಶುವಾದ ಆಡು ಎಂದು ತಿಳಿಸಿದೆ. ಆಹುತಿಗಾಗಿ ಅರ್ಪಿತವಾದ ಅಜವು ಅಗ್ನಿಗೆ ಸೇರತಕ್ಕದ್ದು. ಅಂತಹ ಅಜವನ್ನು ಪೂರ್ಣವಾಗಿ ಪಕ್ವವಾಗುವಂತೆ ದಹಿಸಿ ಅದರ ಆತ್ಮನನ್ನು ಸುಕೃತಿಗಳ ಲೋಕಕ್ಕೆ ಕರೆದುಕೊಂಡು ಹೋಗು ಎಂದು ಪ್ರಾರ್ಥಿಸಿದೆಯೆಂದು ತಿಳಿಸಿದೆ. ಈ ವಿವರಣೆಯಲ್ಲಿ ತಾವು ಸ್ವಾತಂತ್ರ್ಯವನ್ನು ವಹಿಸಿದೆಯೆಂದೂ. ತಮ್ಮ ವಿವರಣೆಗೆ ಸಾಹಾಯಕವಾಗಿರುವ ಆಶ್ವಲಾಯನಗೃಹ್ಯ ಸೂತ್ರವನ್ನೂ (೪-೨-೪ ; ೪-೩-೨೦;) ಕಾತ್ಯಾಯನ ಶ್ರೌತಸೂತ್ರವನ್ನೂ (೨೫-೭-೩೪) ಉದಾಹರಿಸಿ ತಮ್ಮ ಅರ್ಥವನ್ನು ಸಮರ್ಥಿಸಿರುವವೆಂದೂ ತಿಳಿಸಿದ್ದಾರೆ.

ಆದರೆ ಪ್ರಕೃತವಾದ ಮಂತ್ರವನ್ನು ಇದೇ ಸೂಕ್ತದ ಬೇರೆ ಮಂತ್ರಗಳೊಡನೆ ಪರಿಶೀಲಿಸಿದರೆ, ಇಲ್ಲಿ ಅಜ ಶಬ್ದಕ್ಕೆ ಯಜ್ಞಪಶುವೆಂದು ಹೇಳಲು ಸಾಧ್ಯವಾಗಲಾರದು. ಇದರ ಹಿಂದಿನ ೧ ಮತ್ತು ೨ನೇ ಮಂತ್ರಗಳಲ್ಲಿ ಮೃತನ ದೇಹವನ್ನು ಸುಡುವಾಗ ಅವನ ದೇಹದ ವಹನಕಾಲದಲ್ಲಿ ಯಾವ ಸಂಸ್ಕೃತಿಯನ್ನುಂಟುಮಾಡಬೇಕೋ ಅದನ್ನು ಮಾಡಲು ಅಗ್ನಿಯನ್ನು ಪ್ರಾರ್ಥಿಸಿದೆ. ಮೂರನೆಯ ಮಂತ್ರಗಳಲ್ಲಿ ದೇಹದ ಪಂಚಭೂತಾತ್ಮಕವಾದ ಎಲ್ಲಾ ಭಾಗಗಳೂ ಆಯಾ ಮೂಲಭೂತಗಳೊಂದಿಗೆ ಹೋಗಿ ಸೇರಲೆಂದು ಆಶಂಸಿಸಿದೆ. (**ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ........।**). ಪ್ರಕೃತವಾದ ಎಂದರೆ, ಇಲ್ಲಿ ಉದಾಹೃತವಾದ ನಾಲ್ಕನೆಯ ಮಂತ್ರದಲ್ಲಿ ಮೃತನ ಅಜವಾದ ಆತ್ಮವು ಸುಕೃತಿಗಳ ಲೋಕವನ್ನು ಸೇರಲೆಂದು ಆಶಿಸಿದೆ. ಆದುದರಿಂದ ಇಲ್ಲಿ ಅಜ ಶಬ್ದಕ್ಕೆ ಯಜ್ಞಪಶುವೆಂದರ್ಥ ಮಾಡುವುದು ಅಷ್ಟು ಉಚಿತವಾಗಲಾರದು. ಇದೇ ಸನ್ನಿವೇಶವನ್ನು ಯಮನ ವಿಚಾರವನ್ನು ಪರಿಶೀಲಿಸುವಾಗ ಮುಂದೆ ಇನ್ನೂ ವಿಸ್ತೃತವಾಗಿ ವಿವರಿಸಲಾಗುತ್ತದೆ.

ಸಮುದ್ರದ ಮೇಲೆ ದೋಣಿಯಿಂದ ಸುರಕ್ಷಿತವಾಗಿ ಪ್ರಯಾಣಿಕರನ್ನು ಸಾಗಿಸುವಂತೆ, ತನ್ನ ಪೂಜಕರನ್ನು ಈ ಅಗ್ನಿಯು ಆಪತ್ತುಗಳ ಮೂಲಕ ಸಾಗಿಸುತ್ತಾನೆ. (೩-೨೦-೪ ; ೫-೪-೯ ; ೭-೧೨-೨)

ವೃಕ್ಷಗಳಿಂದ ಯಾವ ರೀತಿ ಶಾಖೆಗಳು ಎಲ್ಲಾ ಕಡೆಗಳಿಗೂ ಪ್ರಸರಿಸುವುವೋ, ಅದೇ ರೀತಿ ಅಗ್ನಿಯಿಂದ ಅನುಗ್ರಹಗಳು ಎಲ್ಲಾ ಯಜಮಾನರಲ್ಲೂ ಪ್ರಸರಿಸುವುದು. (೬-೧೩-೧)

ಮರಳುಗಾಡಿನಲ್ಲಿ ನೀರಿನ ಪ್ರದೇಶಗಳಿರುವಂತೆ ಕಷ್ಟಕ್ಕೆ ಸಿಕ್ಕಿದವರಿಗೆ ಉಪಕಾರಕನಾಗಿರುತ್ತಾನೆ. (೧೦-೪-೧)

ಜಗತ್ತಿನ ಸಕಲ ಸಂಪತ್ತುಗಳೂ ಅಗ್ನಿಯಲ್ಲೇ ಶೇಖರಿತವಾಗಿವೆ. (೧೮-೬-೬)

ದ್ಯಾವಾಪೃಥಿವಿಗಳಲ್ಲೂ, ಅಂತರಿಕ್ಷದಲ್ಲೂ, ಸಕಲ ಲೋಕಗಳಲ್ಲೂ, ಯಾವ ಯಾವ ನಿಧಿಗಳಿವೆಯೋ, ಅವೆಲ್ಲವನ್ನೂ ಅಗ್ನಿಯು ತನ್ನಲ್ಲೇ ಸಂಗ್ರಹಮಾಡಿಟ್ಟುಕೊಂಡು ತಾನೇ ಆ ಎಲ್ಲಾ ನಿಧಿಗಳಿಗೂ ಪ್ರಭುವಾಗಿದ್ದಾನೆ. (೭-೬-೭; ೧೦-೯೧-೩)

ಈ ವಿಧವಾಗಿ ಅಗ್ನಿಯು ಸಕಲ ಸ್ವಾಮ್ಯವನ್ನೂ ಪ್ರಭುತ್ವವನ್ನೂ ಹೊಂದಿರುವುದರಿಂದ ಎಲ್ಲಾ ವಿಧವಾದ ಸಂಪತ್ತುಗಳಿಗೂ, ಅನ್ನಕ್ಕಾಗಿಯೂ, ಆಪತ್ತುಗಳಿಂದ ರಕ್ಷಿಸುವುದಕ್ಕಾಗಿಯೂ, ದಾರಿದ್ರ್ಯ, ಪುತ್ರರಾಹಿತ್ಯ ಇತ್ಯಾದಿ ಅವಸ್ಥೆಗಳನ್ನು ತಪ್ಪಿಸುವುದಕ್ಕಾಗಿಯೂ ಸಹ ಇದೇ ಅಗ್ನಿಯನ್ನು ಎಲ್ಲರೂ ಎಲ್ಲಾ ಕಾಲಗಳಲ್ಲೂ ಸ್ತುತಿಸಿ ಪ್ರಾರ್ಥಿಸುತ್ತಾರೆ. (೧-೧೨-೮, ೯ ; ೧-೩೬-೧೨ ; ೧-೫೮-೯ ; ೨-೪-೮ ; ೨-೭-೨, ೩ ; ೨-೯-೫ ; ೩-೧-೨೧ ; ೩-೧೩-೭ ; ೩-೧೬-೫ ; ೪-೨-೨೦ ; ೪-೩-೧೪ ; ೪-೧೧-೬ ; ೫-೩-೧೧ ; ೬-೧-೧೨ ; ೬-೪-೮ ; ೬-೫-೭ ; ೬-೬-೭ ; ೬-೧, ೫, ೧೩, ೧೯).

ಈ ಅಗ್ನಿಯು, ಇಂತಹ ಪ್ರಾರ್ಥನೆಗಳ ಫಲವಾಗಿ, ಯಜಮಾನನನ್ನು ರಕ್ಷಿಸಲು ನೂರಾರು ಅಯೋನಿರ್ಮಿತವಾದ ಭಿತ್ತಿಗಳೊಡನೆ ಬರುತ್ತಾನೆ. (೬-೪೮-೮ ; ೭-೩-೯).

ಅಂತಹ ಭಿತ್ತಿಗಳೊಡಗೂಡಿ ತಾನೇ ಒಂದು ರಕ್ಷಕವಾದ ಕೋಟೆಯಂತಿರುತ್ತಾನೆ. (೭-೧೫-೧೪).

ಶುಷ್ಕವಾದ ಪೊದೆಗಳನ್ನು ಯಾವ ರೀತಿ ದಹಿಸುವನೋ ಅದರಂತೆ ಯಜಮಾನನ ಶತ್ರುಗಳನ್ನು ಕ್ಷಣಮಾತ್ರದಲ್ಲಿ ನಿಶ್ಶೇಷವಾಗಿ ದಹಿಸಿಬಿಡುತ್ತಾನೆ. (೪-೪-೪)

ವಿದ್ಯುತ್ತಿನ ಹೊಡೆತದಿಂದ ವೃಕ್ಷವು ದಗ್ಧವಾಗುವಂತೆ ಇವನು ದುಷ್ಟರನ್ನು ನಾಶಪಡಿಸುತ್ತಾನೆ. (೬-೮-೫)

ಇಂತಹ ಅಸಾಧಾರಣವಾದ ಸಾಮರ್ಥ್ಯವಿರುವುದರಿಂದಲೇ, ಯುದ್ಧರಂಗದಲ್ಲಿ ನಾಯಕನಾಗಿರುವಂತೆ ಆಹೂತನಾಗುತ್ತಾನೆ. (೮-೪೩-೨೧ : ೮-೭೩-೮).

ಯಜ್ಞಕರ್ತನು ಮಾನವರಿಗೆ ಸಹಜವಾದ ಅಜ್ಞಾನದಿಂದ ಯಾವ ವಿಧವಾದ ಅಪರಾಧವನ್ನು ಮಾಡಿದ್ದರೂ ಅಗ್ನಿಯು ಅದನ್ನು ಕ್ಷಮಿಸುವಂತೆಯೇ ಅವನು ಅದಿತಿಯ ವಿಷಯದಲ್ಲಿ ನಿರಪರಾಧಿಯಾಗಿರುವಂತೆ ಅನುಗ್ರಹಿಸಬೇಕೆಂದೂ ಪ್ರಾರ್ಥಿತನಾಗಿದ್ದಾನೆ. (೭-೯೩-೭)

ಅಪರಾಧಿಗಳ ವಿಷಯದಲ್ಲಿ ವರುಣನು ಕ್ರೋಧವನ್ನು ಪ್ರಕಟಿಸುವುದರಿಂದಲೂ, ಅಂತಹ ಕ್ರೋಧವು ಮಾನವನಿಗೆ ಕೆಡಕನ್ನುಂಟುಮಾಡುವುದರಿಂದಲೂ, ವರುಣನು ಯಜಮಾನನಮೇಲೆ ಕೋಪಮಾಡದಿರುವಂತೆ ಮಾಡಬೇಕೆಂದು ಬೇಡಲ್ಪಡುತ್ತಾನೆ. (೪-೧-೪)

ಇನ್ನು ಕೆಲವೆಡೆಗಳಲ್ಲಿ ಯಜಮಾನನು ತನಗೆ ಸಹಜವಾದ ಸೌಜನ್ಯದಿಂದ ಅಗ್ನಿಯನ್ನುದ್ದೇಶಿಸಿ ಈ ರೀತಿ ತಿಳಿಸುತ್ತಾನೆ.

“ ಎಲೈ ಅಗ್ನಿಯೇ, ನಾನೇ ನಿನ್ನ ಶಕ್ತಿಯನ್ನು ಹೊಂದಿದ್ದು ನೀನೇ ನನ್ನ ಸ್ಥಾನದಲ್ಲಿದ್ದಿದ್ದರೆ, ನಿನ್ನ ಅಪಾರವಾದ ಭಕ್ತ್ಯತಿಶಯಕ್ಕೆ ಮಣಿದು ನಿನ್ನ ಇಷ್ಟಾರ್ಥಗಳನ್ನೆಲ್ಲಾ ಪೂರೈಸುತ್ತಿದ್ದೆನು (ಅದರಂತೆ ನನ್ನ ಭಕ್ತ್ಯತಿಶಯವನ್ನು ಮೆಚ್ಚಿ ಈಗ ನೀನು ನನ್ನ ಇಷ್ಟಾರ್ಥಗಳನ್ನು ಸಾಧಿಸಿಕೊಡು ಎಂದು ತಾತ್ಪರ್ಯ). (೮-೪೪-೨೩)

" ನಾನೇ ಅಮರ್ತ್ಯನಾಗಿದ್ದು ನೀನು ಮರ್ತ್ಯನಾಗಿದ್ದಿದ್ದರೆ, ನಿನಗೆ ಎಂದಿಗೂ ದಾರಿದ್ರ್ಯದುಃಖವನ್ನನುಭವಿಸಲು ಅವಕಾಶವನ್ನು ಕೊಡುತ್ತಿರಲಿಲ್ಲ. ನನ್ನ ಭಕ್ತರು ಎಂದೆಂದಿಗೂ, ದಾರಿದ್ರ್ಯವನ್ನಾಗಲಿ, ಇತರ ವಿಧವಾದ ಖೇದವನ್ನಾಗಲಿ ಹೊಂದಲೇಕೂಡದೆಂಬುದೇ ನನ್ನ ಪೂರ್ಣವಾದ ಆಶಯ. (೮-೧೯-೨೫)

ಕೆಲವೆಡೆಗಳಲ್ಲಿ ಯಾವುದಾದರೂ ಪ್ರಸಿದ್ಧನಾದ ಋಷಿಯು ಯಜ್ಞಕ್ಕಾಗಿ ಅಗ್ನಿಯನ್ನು ಸಮಿದ್ಧನನ್ನಾಗಿ ಮಾಡಿದ್ದರೆ, ಆ ಸನ್ನಿವೇಶಗಳಲ್ಲಿ ಅದೇ ಋಷಿಯ ನಾಮದಿಂದ ಪ್ರಸಿದ್ಧನಾಗಿದ್ದಾನೆ. ಉದಾಹರಣೆಗೆ ೮-೯೨-೨ರಲ್ಲಿ ಅಗ್ನಿಯು ದೈವೋದಾಸೋಽಗ್ನಿಃ । ಎಂದು ನಿರ್ದಿಷ್ಟನಾಗಿದ್ದಾನೆ. ಎಂದರೆ, ದಿವೋದಾಸನಾಮಕನಾದ ಋಷಿಯಿಂದ ಆಹೂತನೂ, ಪೂಜಿತನೂ ಆದವನೆಂದರ್ಥ.

೮-೧೯-೩೨ರಲ್ಲು ಸಮ್ರಾಜಂ ತ್ರಾಸದಸ್ಯವಂ ಎಂದಿದೆ. ತ್ರಸದಸ್ಯುವೆಂಬ ಒಬ್ಬ ರಾಜರ್ಷಿ. ಅವನಿಂದ ಸಮಿದ್ಧನೂ, ಆಹೂತನೂ ಪೂಜಿತನೂ ಆದ ಅಗ್ನಿಯೆಂದರ್ಥ. ೧೦-೬೯-೧ರಲ್ಲಿ ಅಗ್ನೇರ್ವಧ್ರ್ಯಶ್ವಸ್ಯ ಎಂಬಲ್ಲಿಯೂ ಸಹ ಇದೇ ರೀತಿ ಅರ್ಥವನ್ನು ಹೇಳಬೇಕು. (೧-೧ -೧ರಲ್ಲು ಇಂದ್ರನು ಕೌಶಿಕಪದ ವಿಶೇಷಣದಿಂದ ವರ್ಣಿತವಾಗಿರುವುದೂ ಒಂದು ಉದಾಹರಣೆ).

ಅಗ್ನಿಯು ಇತರ ದೇವತೆಗಳೊಡನೆ ಸಾಕ್ಷಾತ್‌ಸಂಬಂಧವನ್ನಿಟ್ಟಿರುವುದರಿಂದ ಕೆಲವು ಸಂದರ್ಭಗಳಲ್ಲಿ ಆ ದೇವತೆಗಳಿಗೂ ಅಗ್ನಿಗೂ ತಾದಾತ್ಮ್ಯವನ್ನೇ ತೋರಿಸಲಾಗಿದೆ ಇಂದ್ರ, ವಿಷ್ಣು, ವರುಣ, ಮಿತ್ರ, ಅರ್ಯಮ, ಅಂಶ, ತ್ವಷ್ಟೃ, ರುದ್ರ, ಪೂಷ, ಸವಿತೃ, ಭಗ, ಇತ್ಯಾದಿ ಪುಂದೇವತೆಗಳೊಡನೆಯೂ, ಅದಿತಿ, ಹೋತ್ರಾ, ಭಾರತೀ, ಇಳಾ, ಸರಸ್ವತೀ ಇತ್ಯಾದಿ ಸ್ತ್ರೀದೇವತೆಗಳೊಡನೆಯೂ ಐಕ್ಯವನ್ನು ತೋರಿಸಿದೆ.

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
(ಋ. ಸಂ. ೨-೧-೩)

ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।
(ಋ. ಸಂ. ೨-೧-೪)

ತ್ವಮಗ್ನೇ ಅದಿತಿರ್ದೇವ ದಾಶುಷೇ ತ್ವಂ ಹೋತ್ರಾ ಭಾರತೀ ವರ್ಧಸೇ ಗಿರಾ ।
ತ್ವಮಿಳಾ ಶತಹಿಮಾಸಿ ದಕ್ಷಸೇ ತ್ವಂ ವೃತ್ರಹಾ ವಸುಪತೇ ಸರಸ್ವತೀ ॥
(ಋ. ಸಂ. ೨-೧-೧೧)

ಇತ್ಯಾದಿಯಾಗಿ ಅಗ್ನಿಯು ವರ್ಣಿತನಾಗಿದ್ದಾನೆ. ಅಲ್ಲದೇ, "ತ್ವೇ ವಿಶ್ವೇ ಸಹಸಸ್ಪುತ್ರ ದೇವಾಃ" ಶಕ್ತಿಪುತ್ರನಾದ ಎಲೈ ಅಗ್ನಿಯೇ, ನಿನ್ನಲ್ಲಿಯೇ ಸಕಲದೇವತೆಗಳೂ ಅಂತರ್ಗತರಾಗಿದ್ದಾರೆ. ಉಳಿದವರೆಲ್ಲರೂ ನಿನ್ನ ವಿಭೂತಿವಿಶೇಷಣಗಳೇ ಆಗಿದ್ದಾರೆ ಎಂದೂ ಪ್ರಶಂಸೆಯಿದೆ. (೫-೩-೧). (ಈ ವಿಷಯವನ್ನು 'ಇಂದ್ರಂ ಮಿತ್ರಂ ವರುಣಂ' ಎಂಬ ೧-೧೬೪-೪೬ ನೇ ಮಂತ್ರದಲ್ಲಿ ವಿಶೇಷವಿಷಯಗಳಲ್ಲಿ ವಿವರಿಸಿದೆ.) ಇದರಂತೆಯೇ ಅಥರ್ವವೇದದಲ್ಲೂ ಸಹ ಸ್ತುತಿಸಿದೆ.

ಸ ವರುಣಃ ಸಾಯಮಗ್ನಿರ್ಭವತಿ ಸ ಮಿತ್ರೋ ಭವತಿ ಪ್ರಾತರುದ್ಯನ್ ।
ಸ ಸವಿತಾ ಭೂತ್ವಾ ಅಂತರಿಕ್ಷೇಣ ಯಾತಿ ಸ ಇಂದ್ರೋ ಭೂತ್ವಾ ತಪತಿ ಮಧ್ಯತೋ ದಿವಂ ॥
(ಅ. ವೇ. ೧೩-೩-೧೩)

ಅಗ್ನಿಯು ಸಾಯಂಕಾಲದಲ್ಲಿ ವರುಣರೂಪವನ್ನು ತಾಳುತ್ತಾನೆ. ಪ್ರಾತಃಕಾಲದಲ್ಲಿ ಮಿತ್ರರೂಪದಲ್ಲಿ ಉದಯಿಸುತ್ತಾನೆ. ಸವಿತೃರೂಪದಲ್ಲಿ ದ್ಯುಲೋಕದಲ್ಲಿ ಸಂಚರಿಸುತ್ತಾನೆ. ಇಂದ್ರರೂಪದಲ್ಲಿ ಅಂತರಿಕ್ಷ್ಯಮಧ್ಯೇ ಪ್ರಕಾಶಿಸುತ್ತಾನೆ.

ಇದೇ ಅಗ್ನಿಯು, ಚಕ್ರನೇಮಿಯು ಚಕ್ರದ ಅರೆಗಳನ್ನು ಸುತ್ತುವರಿದಿರುವಂತೆ ಎಲ್ಲಾ ದೇವತೆಗಳನ್ನೂ ಸುತ್ತುವರಿದು ನಿಂತಿದ್ದಾನೆ. (೫-೧೩-೬; ೩-೫-೪; ೫-೩-೧; ೭-೧೨-೩; ೧೦-೮-೫).

ಅನೇಕ ಸೂಕ್ತಗಳಲ್ಲಿ ಅಗ್ನಿಯು ಇಂದ್ರನೊಡನೆ ಸಾಹಚರ್ಯವನ್ನು ಹೊಂದಿರುವಂತೆ ವರ್ಣಿತನಾಗಿದ್ದಾನೆ. (೧-೧೦೮; ೧-೧೦೯; ೩-೧೨; ೬-೫೯ ರಿಂದ ೬೦; ೭-೯೩; ೭-೯೪; ೮-೩೮; ೮-೪೦).

ಈ ಎರಡು ದೇವತೆಗಳೂ ಸಹ ಸಮಾನವಾದ ಮಾತೆಯನ್ನುಳ್ಳವರಾಗಿಯೂ ಒಂದೇ ತಂದೆಯುಳ್ಳವರೆಂದೂ, ಸಮಾನವಾದ ಮಾತಾಪಿತೃಗಳ ಅವಳೀಮಕ್ಕಳೆಂದೂ ವರ್ಣಿತರಾಗಿದ್ದಾರೆ. (೬-೫೯-೨). ವಜ್ರಿಣಾ, ವಜ್ರಾಯುಧವನ್ನು ಹಿಡಿದಿರುವವರು, ವೃತ್ರಹಣಾ, ವೃತ್ರಾಸುರನ ಹಂತಕರು ಮತ್ತು ಶತ್ರುಪಟ್ಟಣಗಳ ನಾಶಕರು ಎಂದು ವರ್ಣಿತರಾಗಿದ್ದಾರೆ. (೩-೧೨-೪, ೬; ೬-೫೯-೩; ೯.೬೨-೩; ೭-೯೩-೧, ೪; ೮-೩೮-೨).

ಇಂದ್ರಾಗ್ನಿಗಳಿಬ್ಬರೂ ಜೊತೆಯಲ್ಲಿ ಬಂದು ಸೋಮಪಾನವನ್ನು ಮಾಡಬೇಕೆಂದು ಇಬ್ಬರನ್ನೂ ಒಟ್ಟಿಗ ಕರೆದಿದೆ. (೭-೯೩-೬. ೮-೩೮-೧, ೭ ರಿಂದ ೯)

ಒಂದೆಡೆಯಲ್ಲಿ ಅವರಿಬ್ಬರನ್ನೂ 'ಅಶ್ವಿನಾ' ಅಶ್ವವುಳ್ಳವರು ಎಂದು ಇಬ್ಬರಿಗೂ ಸಾಧಾರಣವಾದ ವಿಶೇಷಣದಿಂದ ವರ್ಣಿಸಿದೆ. (೧-೧೦೯-೪)

ಯಾವ ಕರ್ಮವು ಇಂದ್ರನ ವಿಶೇಷಕರ್ಮವೆಂದು ಪ್ರಸಿದ್ಧವಾಗಿದೆಯೋ, ಅಂತಹ ವೃತ್ರವಧವೂ, ಶತ್ರುಪಟ್ಟಣಗಳ ನಾಶವೂ ಅಗ್ನಿಯ ಅಸಾಧಾರಣಕರ್ಮವೆಂದು ಪ್ರಶಂಸಿತವಾಗಿರುವ ಸನ್ನಿವೇಶಗಳೂ ಕೆಲವಿವೆ. (೧-೫೯-೬; ೧-೭೮-೪; ೬-೧೬-೧೪, ೩೯, ೪೮; ೭-೫-೩; ೭-೬-೨; ೮-೬೩-೪).

ಅಂಧಕಾರರೂಪವುಳ್ಳ ದಸ್ಯುವನ್ನು ಮನೆಯಿಂದ ಓಡಿಸಿ ಆರ್ಯನಾದ ಯಜಮಾನನಿಗೆ ಅತಿಶಯವಾದ ಜ್ಯೋತಿಯನ್ನು ಒದಗಿಸಿದನು ಎಂದು ಸ್ತುತನಾಗಿದ್ದಾನೆ. (೭-೫-೬; ೧-೫೯ ೨; ೧೦-೬೯-೬).

ಆರ್ಯಸಂತತಿಗೆ ಸೇರಿದ ಸಕಲ ಯಜಮಾನರ ಅಭ್ಯುದಯಕ್ಕೂ ಅಗ್ನಿಯೇ ಕಾರಣನು (೮-೯೨-೧).

ಆರ್ಯರ ಉದ್ಧಾರವಾಗಬೇಕಾದರೆ ಪಣಿಗಳ ನಾಶವಾಗಬೇಕು. ಆದುದರಿಂದ ಅಗ್ನಿಯು ಅನ್ಯೈದಿಕರಾದ ಪಣಿಗಳನ್ನೆಲ್ಲಾ ನಾಶಪಡಿಸುತ್ತಾನೆ. (೬-೬-೩)

ಇಂತಹ ಕಾರ್ಯಗಳು ಇಂದ್ರನ ಅಸಾಧಾರಣ ಕರ್ಮಗಳೆಂದು ಪ್ರಸಿದ್ಧವಾಗಿದ್ದರೂ ಒಂದೊಂದು ಸಲ ಅಗ್ನಿಯೂ ಇಂತಹ ಕಾರ್ಯಗಳನ್ನು ನೆರವೇರಿಸಿ ಆರ್ಯನಾದ ಯಜಮಾನನಿಗೆ ಸಹಾಯ ಮಾಡಿದನು ಎಂದು ಪ್ರಶಂಸಿದೆ. ಹೀಗೆಯೇ, ೮-೩೮-೧ ನೇ ಮಂತ್ರದಲ್ಲಿ ಇಂದ್ರ ಮತ್ತು ಅಗ್ನಿ ಈ ಎರಡು ದೇವತೆಗಳನ್ನೂ ಒಟ್ಟಿಗೆ ಯಜ್ಞಸ್ಯ ಋತ್ವಿಜಾ ಯಜ್ಞಕ್ಕೆ ಋತ್ವಿಕ್ಕುಗಳು ಎಂದು ನಿರ್ದೇಶಿಸಿದೆ. ಋತ್ವಿಗ್ರೂಪನಾಗಿರುವುದು ಅಗ್ನಿಯ ವಿಶೇಷಗುಣ. ಅದೇ ಗುಣದಿಂದಲೂ, ಕರ್ಮದಿಂದಲೂ ಇಂದ್ರನೂ ವರ್ಣಿತನಾಗಿದ್ದಾನೆ.

೧-೯೩ ರಲ್ಲಿ ಅಗ್ನಿಯು ಸೋಮನೊಂದಿಗೆ ಪೂಜಿತನಾಗಿದ್ದಾನೆ. ಹೀಗೆ ಅಗ್ನಿಯು ಪ್ರೈಯುಕ್ತಿಕವಾದುದೂ ಇತರ ದೇವತೆಗಳಲ್ಲೆಲ್ಲಾ ಅಂತರ್ಯಾಮಿಯಾಗಿದ್ದುಕೊಂಡು ಅವರೊಡನೆ ಸಾಹಚರ್ಯದಿಂದ ಪ್ರಕಟಿಸುವುದೂ ಆದ ವಿಶೇಷ ಗುಣಗಳ ವರ್ಣನೆಯು ಋಕ್ಸಂಹಿತೆಯಲ್ಲಿ ಪ್ರಶಸ್ಯವಾಗಿದೆ.



# ಮೊದಲನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಆತ್ರೇಯೇ ಪಂಚಮೇ ಮಂಡಲೇ ಷಡನುವಾಕಾಃ । ತತ್ರ ಪ್ರಥಮೇಽನುವಾಕೇ ಚತುರ್ದಶ ಸೂಕ್ತಾನಿ । ತತ್ರಾಬೋಧ್ಯಗ್ನಿರಿತಿ ದ್ವಾದಶರ್ಚಂ ಪ್ರಥಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಅಬೋಧಿ ದ್ವಾದಶ ಬುಧಗವಿಷ್ಠಿರಾವಿತಿ । ಪಂಚಮೇ ಮಂಡಲೇಽನುಕ್ತಗೋತ್ರಮಾತ್ರೇಯಂ ವಿದ್ಯಾದಿತಿ ಪರಿಭಾಷಿತತ್ವಾದಾತ್ರೇಯೌ ಬುಧಗವಿಷ್ಠಿರಾವೃಷೀ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ಮಂಡಲಾದಿಪರಿಭಾಷಯಾಗ್ನಿರ್ದೇವತಾ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೈತದಾದಿಚತ್ವಾರಿ ಸೂಕ್ತಾನಿ । ತಥಾ ಚ ಸೂತ್ರಿತಂ । ಅಬೋಧ್ಯಗ್ನಿಃ ಸಮಿಧೇತಿ ಚತ್ವಾರಿ । ಆ. ೪-೧೩ । ಇತಿ ॥ ಅಧ್ಯಾಯೋತ್ಸರ್ಜನೋಪಾಕರಣಯೋರ್ಧಾಮಂತೇ ವಿಶ್ವಮಿತಿ ದ್ವೃಚತ್ವೇನ ವಿನಿಯೋಗ ಉಕ್ತಃ ॥

ಅನುವಾದವು—ಅತ್ರಿಋಷಿದೃಷ್ಟವಾದ ಐದನೆಯ ಮಂಡಲದಲ್ಲಿ ಆರು ಅನುವಾಕಗಳಿರುವವು. ಅವುಗಳಲ್ಲಿ ಮೊದಲನೆಯ ಅನುವಾಕಕ್ಕೆ ಹದಿನಾಲ್ಕು ಸೂಕ್ತಗಳಿರುವವು. ಅವುಗಳಲ್ಲಿ ಅಬೋಧ್ಯಗ್ನಿಃ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—ಅಬೋಧಿ ದ್ವಾದಶ ಬುಧಗವಿಷ್ಠಿರೌ ಎಂದು ಹೇಳಿರುವುದು. ಐದನೆಯ ಮಂಡಲದಲ್ಲಿ ಗೋತ್ರ ಮೊದಲಾದ ವಿವರಗಳನ್ನು ಹೇಳದಿರುವ ಋಷಿಗಳನ್ನು ಅತ್ರೇಯಗೋತ್ರೋದ್ಭವರೆಂದೇ ಪರಿಗಣಿಸಬೇಕೆಂದು ಹೇಳಿರುವುದರಿಂದ ಈ ಸೂಕ್ತದ ಋಷಿಗಳಾದ ಬುಧ, ಗವಿಷ್ಠಿರ ಎಂಬುವರೂ ಅತ್ರಿಗೋತ್ರೋದ್ಭವರಾದ ಋಷಿಗಳೆಂದೇ ಹೇಳಬೇಕು. ಮಂಡಲದ ಪ್ರಾರಂಭದ ಸೂಕ್ತದಲ್ಲಿ ಸಾಮಾನ್ಯವಾಗಿರುವಂತೆ ಈ ಸೂಕ್ತಕ್ಕೂ ಅಗ್ನಿಯೇ ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರ ಮಂತ್ರಗಳಿಗಾಗಿಯೂ ಈ ಸೂಕ್ತದ ಮತ್ತು ಇದರ ಮುಂದಿನ ಮೂರೂ ಸೂಕ್ತಗಳ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತಸೂತ್ರದ—ಅಬೋಧ್ಯಗ್ನಿಃ ಸಮಿಧೇತಿ ಚತ್ವಾರಿ ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು. ಅಧ್ಯಾಯೋತ್ಸರ್ಜನ ಮತ್ತು ಉಪಾಕರಣಪ್ರಧಾನಹೋಮಗಳಲ್ಲಿ ಹಿಂದಿನ ಮಂಡಲದ ಕೊನೆಯ ಋಕ್ಕಾದ ಧಾಮಂತೇ ವಿಶ್ವಂ ಎಂಬ ಋಕ್ಕನ್ನೂ ಈ ಮಂಡಲದ ಪ್ರಥಮ ಋಕ್ಕಾದ ಅಬೋಧ್ಯಗ್ನಿಃ ಎಂಬ ಋಕ್ಕನ್ನೂ ಪ್ರಧಾನಾಹುತಿಗಳಿಗಾಗಿ ಉಪಯೋಗಿಸಬೇಕೆಂದು ಹಿಂದಿನ ಋಕ್ಕಿನ ವಿನಿಯೋಗದಲ್ಲಿಯೇ ಹೇಳಲಾಗಿದೆ.

## ಸೂಕ್ತ—೧

ಮಂಡಲ—೫ ‖ ಅನುವಾಕ—೧ ‖ ಸೂಕ್ತ—೧ ‖

ಅಷ್ಟಕ—೩ ‖ ಅಧ್ಯಾಯ—೮ ‖ ವರ್ಗ—೧೨, ೧೩ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ‖

‖ ಋಷಿಃ—ಬುಧಗವಿಷ್ಠಿರಾವಾತ್ರೇಯೌ ‖

‖ ದೇವತಾ—ಅಗ್ನಿಃ ‖

‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಅಬೋಧ್ಯಗ್ನಿಃ ಸಮಿಧಾ ಜನಾನಾಂ ಪ್ರತಿ ಧೇನುಮಿವಾಯತೀಮುಷಾಸಂ।

ಯಹ್ವಾ ಇವ ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ॥

‖ ಪದಪಾಠಃ ‖

ಅಬೋಧಿ । ಅಗ್ನಿಃ । ಸಂಽಇಧಾ । ಜನಾನಾಂ । ಪ್ರತಿ । ಧೇನುಂಽಇವ । ಆಽಯತೀಂ । ಉಷಸಂ ।

ಯಹ್ವಾಃಽಇವ । ಪ್ರ । ವಯಾಂ । ಉತ್ಽಜಿಹಾನಾಃ । ಪ್ರ । ಭಾನವಃ । ಸಿಸ್ರತೇ । ನಾಕಂ । ಅಚ್ಛ ‖ ೧ ‖

‖ ಸಾಯಣಭಾಷ್ಯಂ ‖

ಅಯಮಗ್ನಿರ್ಜನಾನಾಮಧ್ವರ್ಯ್ವಾದೀನಾಂ ಸಮಿಧಾ ಸಮಿದ್ಭಿರಬೋಧಿ। ಪ್ರಬುದ್ಧೋಽಭೂತ್। ಧೇನುಮಿವ । ಅಗ್ನಿಹೋತ್ರಾರ್ಥಧೇನುಂ ಪ್ರತಿ ಯಥಾ ಪ್ರಾತರ್ಬುಧ್ಯತೇ ತದ್ವದಾಯತೀಮಾಗಚ್ಛಂತೀ-ಮುಷಸಂ ಪ್ರತಿ। ಉಷಃಕಾಲ ಇತ್ಯರ್ಥಃ। ಅಥ ಪ್ರಬುದ್ಧಸ್ಯಾಗ್ನೇರ್ಭಾನವೋ ಜ್ವಾಲಾ ಯಹ್ವಾ ಮಹಾಂತೋ ವಯಾಂ ಶಾಖಾಂ ಪ್ರೋಜ್ಜಿಹಾನಾಃ ಪ್ರೋದ್ಗಮಯಂತೋ ವೃಕ್ಷಾ ಇವ ಪ್ರೋಜ್ಜಿಹಾನಾಃ ಸ್ವಾಧಿಷ್ಠಾನಂ ತ್ಯಜಂತೋ ನಾಕಮಂತರಿಕ್ಷಮಚ್ಛಾಭಿಮುಖ್ಯೇನ ಪ್ರ ಸಿಸ್ರತೇ। ಪ್ರಸರಂತಿ ‖

‖ ಪ್ರತಿಪದಾರ್ಥ ‖

ಅಗ್ನಿಃ—ಅಗ್ನಿಯು। ಜನಾನಾಂ—ಅಧ್ವರ್ಯುಗಳ। ಸಮಿಧಾ—ಸಮಿತ್ತುಗಳಿಂದ (ಪ್ರಜ್ವಲಿತನಾಗಿ)। ಆಯತೀಂ—ಆವಿರ್ಭವಿಸುತ್ತಿರುವ। ಉಷಸಂ ಪ್ರತಿ—ಉಷಸ್ಸಿಗೆ ಅಭಿಮುಖವಾಗಿ। ಧೇನುಮಿವ—ಪ್ರೀತಿ ಕಾರಕವಾದ ಧೇನುವಿನಂತೆ। ಅಬೋಧಿ—ಪ್ರಬುದ್ಧನಾಗಿದ್ದಾನೆ। ಭಾನವಃ—ಈ ಅಗ್ನಿಯ ಜ್ವಾಲೆಗಳು। ಯಹ್ವಾಃ—ಮಹತ್ಸ್ವರೂಪವುಳ್ಳವಾಗಿ। ವಯಾಂ—ಶಾಖೆಗಳನ್ನು। ಪ್ರ ಉಜ್ಜಿಹಾನಾ ಇವ—ನಾನಾ ಕಡೆಗಳಿಗೂ ಬೀಸಿ ಹರಡಿರುವ ವೃಕ್ಷಗಳಂತೆ। ನಾಕಂ ಅಚ್ಛ—ಅಂತರಿಕ್ಷಕ್ಕೆ ಅಭಿಮುಖವಾಗಿ। ಪ್ರ ಸಿಸ್ರತೇ—ಹರಡಿ ವ್ಯಾಪಿಸುತ್ತದೆ.

॥ ಭಾವಾರ್ಥ ॥

ಅಧ್ವರ್ಯುಗಳ ಸಮಿತ್ತುಗಳಿಂದ ಪ್ರಜ್ವಲಿತನಾದ ಅಗ್ನಿಯು ಆವಿರ್ಭವಿಸುತ್ತಿರುವ ಉಷಸ್ಸಿಗೆ ಅಭಿಮುಖವಾಗಿ ಪ್ರೀತಿಕಾರಕವಾದ ಧೇನುವಿನಂತೆ ಪ್ರಬುದ್ಧನಾಗಿದ್ದಾನೆ. ಈ ಅಗ್ನಿಯ ಜ್ವಾಲೆಗಳು ಮಹತ್ಸ್ವರೂಪವುಳ್ಳವಾಗಿ, ತನ್ನ ಶಾಖೆಗಳನ್ನು ನಾನಾ ಕಡೆಗಳಿಗೂ ಬೀಸಿ ಹರಡಿರುವ ವೃಕ್ಷಗಳಂತೆ, ಅಂತರಿಕ್ಷಕ್ಕೆ ಅಭಿಮುಖವಾಗಿ ಹರಡಿ ವ್ಯಾಪಿಸುತ್ತವೆ.

## English Translation.

Agni is awakened by the fuel (supplied by) the priests at the dawn, approaching lika a cow (to pasture): his flames rise up to the sky like stately (trees) throwing alost their branches.

॥ ವಿಶೇಷವಿಷಯಗಳು ॥

ಅಗ್ನಿಃ ಜನಾನಾಂ ಸಮಿಧಾ ಆಯತೀಂ ಉಷಸಂ ಪ್ರತಿ ಧೇನುಮಿವ ಅಬೋಧಿ—ಅಧ್ವರ್ಯ್ವಾದೀನಾಂ ಋತ್ವಿಜಾಂ ಸಮಿದ್ಭಿಃ ಉಷಃಕಾಲೇ (ಪ್ರಾತಃಕಾಲೇ) ಆಗಚ್ಛಂತೀಂ ಉಷಸಂ ಪ್ರತಿ ಯಥಾ ಅಗ್ನಿಹೋತ್ರಾರ್ಥಂ ಧೇನುಃ ಪ್ರಾತಃ ಪ್ರಬುಧ್ಯತೇ ತಥಾ ಪ್ರಬುದ್ಧೋಽಭೂತ್ । ಯಜ್ಞಮಾಡುವಾಗ ಯಜ್ಞಾರ್ಥವಾಗಿ ಹಾಲು ಬೇಕಾಗುವುದರಿಂದ ಅದನ್ನು ಕರೆಯುವುದಕ್ಕಾಗಿ ಮಲಗಿರುವ ಗೋವನ್ನು ಪ್ರಾತಃಕಾಲದಲ್ಲಿ ಹೊತ್ತಿಗೆ ಮುಂಚಿತವಾಗಿಯೇ ಎಬ್ಬಿಸಿ ಹಾಲನ್ನು ಕರೆಯುವುದು ರೂಢಿಯು. ಅದರಂತೆ ಉಷೋಭಿಮುಖವಾಗಿ ಎಂದರೆ ಉಷಃಕಾಲವಾದೊಡನೆಯೇ ಅಧ್ವರ್ಯು ಮೊದಲಾದ ಋತ್ವಿಜರು ಯಜ್ಞಾರ್ಥವಾಗಿ ಅಗ್ನಿಯನ್ನು ಸಮಿತ್ತು ಮೊದಲಾದ ಕಾಷ್ಠಗಳಿಂದ ಚೆನ್ನಾಗಿ ಉರಿಯುವಂತೆ ಮಾಡುವರು ಎಂದಭಿಪ್ರಾಯವು. ಪ್ರಾತಃಕಾಲದಲ್ಲಿ ಹಾಲು ಕರೆಯುವುದಕ್ಕಾಗಿ ಹಸುವನ್ನು ಎಚ್ಚರಗೊಳಿಸುವಂತೆ ಉಷಃಕಾಲದಲ್ಲಿಯೇ ಅಗ್ನಿಯನ್ನು ಸಮಿತ್ತುಮೊದಲಾದಕಾಷ್ಠಗಳಿಂದ ಅಧ್ವರ್ಯು ಮೊದಲಾದ ಋತ್ವಿಗ್ಜನರು ಉದ್ದೀಪನಗೊಳಿಸುವರು ಎಂದು ಅಗ್ನಿಗೆ ಧೇನುವಿನ ದೃಷ್ಟಾಂತವನ್ನು ಕೊಟ್ಟು ಅರ್ಥವಿವರಣೆ ಮಾಡಲಾಗಿದೆ.

ಯಹ್ವಾಃ ಇವ ವಯಾಂ ಪ್ರ ಉಜ್ಜಿಹಾನಾಃ ಭಾನವಃ ನಾಕಂ ಅಚ್ಛ ಸಿಸ್ರತೇ— ಅಥ ಪ್ರಬುದ್ಧಸ್ಯಾಗ್ನೇಃ ಜ್ವಾಲಾಃ ಮಹಾಂತಃ ಶಾಖಾಂ ಪ್ರೋದ್ಗಮಯಂತೋ ವೃಕ್ಷಾ ಇವ ಅಂತರಿಕ್ಷಮಾಭಿಮುಖ್ಯೇನ ಪ್ರಸರಂತಿ ॥ ಹಿಂದಿನ ವಾಕ್ಯದಲ್ಲಿ ಹೇಳಿದಂತೆ ಋತ್ವಿಕ್ಕುಗಳಿಂದ ಪ್ರಜ್ವಲಿತವಾದ ಅಗ್ನಿಯು ತನ್ನ ಪ್ರಕಾಶಮಾನವಾದ ಜ್ವಾಲೆಗಳನ್ನು, ಅಂತರಿಕ್ಷದಲ್ಲಿ ವೃಕ್ಷಗಳು ತಮ್ಮ ಕೊಂಬೆಗಳನ್ನು ಎತ್ತರವಾಗಿ ಚಾಚುವಂತೆ, ಪ್ರಸರಿಸುತ್ತದೆ ಎಂದಭಿಪ್ರಾಯವು. ಇಲ್ಲಿ ಅಗ್ನಿಯ ಜ್ವಾಲೆಗಳಿಗೂ ವೃಕ್ಷದ ಕೊಂಬೆಗಳಿಗೂ ದೃಷ್ಟಾಂತವನ್ನು ಹೇಳಿದೆ. ವೃಕ್ಷದ ಶಾಖೆಗಳು ಅಂತರಿಕ್ಷದಲ್ಲಿ ಅತ್ಯುನ್ನತಪ್ರದೇಶವನ್ನು ವ್ಯಾಪಿಸುವಂತೆ ಅಗ್ನಿಯ ಜ್ವಾಲೆಗಳು ಬಹಳ ಎತ್ತರಕ್ಕೆ ಹರಡುತ್ತವೆ ಎಂದರೆ ಅಗ್ನಿಯು ಬಹಳ ಜಾಜ್ವಲ್ಯಮಾನವಾಗಿ ಉರಿಯುತ್ತಿರುವನು ಎಂಬಭಿಪ್ರಾಯವು ಇಲ್ಲಿ ಸೂಚಿತವಾಗಿದೆ.



॥ ಸಂಹಿತಾಪಾಠಃ ॥

ಅಬೋಧಿ ಹೋತಾ ಯಜಥಾಯ ದೇವಾನೂರ್ಧ್ವೋ ಅಗ್ನಿಃ ಸುಮನಾಃ ಪ್ರಾತರಸ್ಥಾತ್ ।

ಸಮಿದ್ಧಸ್ಯ ರುಶದದರ್ಶಿ ಪಾಜೋ ಮಹಾನ್ದೇವಸ್ತಮಸೋ ನಿರಮೋಚಿ ॥೨॥

॥ ಪದಪಾಠಃ ॥

ಅಬೋಧಿ । ಹೋತಾ । ಯಜಥಾಯ । ದೇವಾನ್ । ಊರ್ಧ್ವಃ । ಅಗ್ನಿಃ । ಸುಽಮನಾಃ । ಪ್ರಾತಃ । ಅಸ್ಥಾತ್ ।

ಸಂಽಇದ್ಧಸ್ಯ । ರುಶತ್ । ಅದರ್ಶಿ । ಪಾಜಃ । ಮಹಾನ್ । ದೇವಃ । ತಮಸಃ । ನಿಃ । ಅಮೋಚಿ ॥ ೨ ॥

॥ ಸಾಯಣಭಾಷ್ಯಂ ॥

ಅಯಂ ಹೋತಾ ಹೋಮನಿಷ್ಪಾದಕೋಽಗ್ನಿರ್ದೇವಾನ್ಯಷ್ಟವ್ಯಾನ್ಯಜಥಾಯ ಯಷ್ಟುಮ-ಬೋಧಿ । ಬುಧ್ಯತೇ । ಸೋಽಗ್ನಿಃ ಪ್ರಾತಃಕಾಲೇ ಸುಮನಾಃ ಶೋಭನಮನಸ್ಕೋ ಯಜಮಾನಾನುಗ್ರಹ-ಬುದ್ಧಿಃ ಸನ್ ಊರ್ಧ್ವೋಽಸ್ಥಾತ್ । ಉತ್ತಿಷ್ಠತಿ । ಸಮಿದ್ಧಸ್ಯಾಸ್ಯ ರುಶದ್ರೋಚಮಾನಂ ಪಾಜೋ ಬಲಂ ಜ್ವಾಲಾಲಕ್ಷಣಮದರ್ಶಿ । ದೃಶ್ಯತೇ । ಅಥ ತಥಾಭೂತೋ ಮಹಾನ್ದೇವಸ್ತಮಸೋಽಂಧಕಾರಾ-ನ್ನಿರಮೋಚಿ । ನಿರ್ಮುಕ್ತೋಽಭೂತ್ ॥

॥ ಪ್ರತಿಪದಾರ್ಥ ॥

ಹೋತಾ—ಹೋಮಸಂಪಾದಕನಾದ । ಅಗ್ನಿಃ— ಅಗ್ನಿಯು । ಸುಮನಾಃ—ಶೋಭನಾತ್ಮಕವಾದ ಮನಸ್ಸುಳ್ಳವನಾಗಿ । ದೇವಾನ್—ದೇವತೆಗಳನ್ನುದ್ದೇಶಿಸಿ । ಯಜಥಾಯ—ಯಜ್ಞಮಾಡುವುದಕ್ಕೆ । ಅಬೋಧಿ-ಪ್ರಬುದ್ಧನಾಗುತ್ತಾನೆ । ಪ್ರಾತಃ—ಉಷಃಕಾಲದಲ್ಲಿ । ಊರ್ಧ್ವಃ ಅಸ್ಥಾತ್—ಮೇಲ್ಮುಖನಾಗಿ ಉದಯಿಸುತ್ತಾನೆ । ಸಮಿದ್ಧಸ್ಯ—ಪ್ರಜ್ವಲಿತನಾದ ಈ ಅಗ್ನಿಯ । ರುಶತ್—ಆಕರ್ಷಕವಾದ । ಪಾಜಃ—ಶಕ್ತಿಯು । ಅದರ್ಶಿ—ಎಲ್ಲರಿಗೂ ಗೋಚರವಾಗಿದೆ । ಮಹಾನ್— ಮಹಾತ್ಮನೂ । ದೇವಃ— ದೇವತಾತ್ಮನೂ ಆದ ಅಗ್ನಿಯು । ತಮಸಃ—ಅಂಧಕಾರದಿಂದ । ನಿರಮೋಚಿ—ಮುಕ್ತನಾಗಿ ಹೊರಕ್ಕೆ ಬಂದಿದ್ದಾನೆ.

॥ ಭಾವಾರ್ಥ ॥

ಹೋಮಸಂಪಾದನಾದ ಅಗ್ನಿಯು, ಶೋಭನಾತ್ಮಕವಾದ ಮನಸ್ಸುಳ್ಳವನಾಗಿ ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡುವುದಕ್ಕಾಗಿ ಪ್ರಬುದ್ಧನಾಗುತ್ತಾನೆ. ಉಷಃಕಾಲದಲ್ಲಿ ಮೇಲ್ಮುಖನಾಗಿ ಉದಯಿಸುತ್ತಾನೆ. ಪ್ರಜ್ವಲಿತನಾದ ಈ ಅಗ್ನಿಯ ಆಕರ್ಷಕವಾದ ಶಕ್ತಿಯು ಎಲ್ಲರಿಗೂ ಗೋಚರವಾಗಿದೆ. ಮಹಾತ್ಮನೂ ದೇವತಾತ್ಮನೂ ಆದ ಅಗ್ನಿಯು ಅಂಧಕಾರದಿಂದ ಮುಕ್ತನಾಗಿ ಹೊರಕ್ಕೆ ಬಂದಿದ್ದಾನೆ.

## English Translation.

The offerer of the oblation is awakened for the worship of the gods: favourably minded, Agni has risen up with the dawn: the radiant vigour of the kindld (fire) is manifested; the great deity has been liberated from the darkness.

॥ ವಿಶೇಷವಿಷಯಗಳು ॥

ಹೋತಾ ಅಗ್ನಿಃ ದೇವಾನ್ ಯಜಥಾಯ ಅಬೋಧಿ—ಹೋಮನಿಷ್ಪಾದಕನಾದ ಅಗ್ನಿಯು ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಿಸಿ ಪೂಜಿಸುವುದಕ್ಕಾಗಿ ಪ್ರಾತಃಕಾಲದಲ್ಲಿ ಎಚ್ಚರಗೊಳ್ಳುತ್ತಾನೆ. ಎಂದರೆ ಪ್ರಾತಃಕಾಲದಲ್ಲಿ ಯಜ್ಞಮಾಡುವುಕ್ಕಾಗಿಯೂ, ದೇವತೆಗಳನ್ನು ಆಹ್ವಾನಿಸಿ ಅವರಿಗೆ ಯಜ್ಞಾಗ್ನಿಯಲ್ಲಿ ಹವಿಸ್ಸನ್ನರ್ಪಿಸುವುದಕ್ಕಾಗಿಯೂ ಯಜ್ಞಮಾಡುವ ಯಜಮಾನರು ಅಥವಾ ಋತ್ವಿಕ್ಕುಗಳು ಅಗ್ನಿಯನ್ನು ಹೊತ್ತಿಸುತ್ತಾರೆ ಎಂದಭಿಪ್ರಾಯವು.

ಸುಮನಾಃ ಸನ್ ಊರ್ಧ್ವಃ ಅಸ್ಥಾತ್—ಸೋಽಗ್ನಿಃ ಪ್ರಾತಃಕಾಲೇ ಶೋಭನಮನಸ್ಕೋ ಯಜಮಾನಾನುಗ್ರಹಬುದ್ಧಿಃ ಸನ್ ಊರ್ಧ್ವ ಉತ್ತಿಷ್ಠತಿ। ಯಜ್ಞಕುಂಡದಲ್ಲಿ ಪ್ರತಿಷ್ಠಾಪಿತನಾದ ಅಗ್ನಿಯು ಯಜ್ಞಮಾಡುವ ಯಜಮಾನನಿಗೆ ಅನುಗ್ರಹಮಾಡಬೇಕೆಂಬ ಒಳ್ಳೆಯ ಮನಸ್ಸಿನಿಂದ ತನ್ನ ಪ್ರಕಾಶಮಾನವಾದ ಜ್ವಾಲೆಗಳನ್ನು ಮೇಲಕ್ಕೆ ಪ್ರಸರಿಸಿ ಬೆಳಗುತ್ತಾನೆ.

ಸಮಿದ್ಧಸ್ಯ ರುಶತ್ ಪಾಜಃ ಅದರ್ಶಿ—ಅಸ್ಯಾಗ್ನೇಃ ರೋಚಮಾನಂ ಬಲಂ ಜ್ವಾಲಾಲಕ್ಷಣಂ ಸರ್ವೈರ್ದೃಶ್ಯತೇ। ಪಾಜಃಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ರುಶತ್ ಪಾಜಃ ಪ್ರಕಾಶಮಾನವಾದ ಬಲವು ಎಂದರೆ ಬಹಳ ಪ್ರಕಾಶಮಾನವಾಗಿ ಉರಿಯುತ್ತಿರುವ ಅಗ್ನಿಜ್ವಾಲೆಯೆಂದಭಿಪ್ರಾಯವು. ಚೆನ್ನಾಗಿ ಹೊತ್ತಿಸಲ್ಪಟ್ಟ ತನ್ನ ಪ್ರಕಾಶಮಾನವಾದ ಜ್ವಾಲೆಗಳಿಂದ ಚೆನ್ನಾಗಿ ಉರಿಯುತ್ತಿರುವ ಅಗ್ನಿಯು ಎಲ್ಲರಿಗೂ ಗೋಚರವಾಗಿರುತ್ತದೆ.

ಮಹಾನ್ ದೇವಃ ತಮಸಃ ನಿರಮೋಚಿ—ಏವಂಭೂತಃ ಮಹಾನ್ ದೇವ ಅಂಧಕಾರಾತ್ ನಿರ್ಮುಕ್ತೋಽಭೂತ್ । ಈ ರೀತಿ ಇರುವ ಮಹಾಮಹಿಮನಾದ ಅಗ್ನಿಯು ಪ್ರಾತಃಕಾಲದ ಮಬ್ಬಿನಲ್ಲಿ ಸುತ್ತಲೂ ಆವರಿಸಿದ್ದ ಕತ್ತಲೆಯಿಂದ ಬಿಡುಗಡೆ ಹೊಂದಿ ಪ್ರಕಾಶಿಸುತ್ತಿರುವನು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ಯದೀಂ ಗಣಸ್ಯ ರಶನಾಮಜೀಗಃ ಶುಚಿರಂಕ್ತೇ ಶುಚಿಭಿರ್ಗೋಭಿರಗ್ನಿಃ ।
ಆದ್ದಕ್ಷಿಣಾ ಯುಜ್ಯತೇ ವಾಜಯಂತ್ಯುತ್ತಾನಾಮೂರ್ಧ್ವೋ ಅಧಯಜ್ಜುಹೂಭಿಃ ॥ ೩ ॥

॥ ಪದಪಾಠಃ ॥

ಯತ್ । ಈಂ । ಗಣಸ್ಯ । ರಶನಾಂ । ಅಜೀಗರಿತಿ । ಶುಚಿಃ । ಅಂಕ್ತೇ । ಶುಚಿಽಭಿಃ । ಗೋಭಿಃ । ಅಗ್ನಿಃ ।

ಆತ್ । ದಕ್ಷಿಣಾ । ಯುಜ್ಯತೇ । ವಾಜಽಯಂತೀ । ಉತ್ತಾನಾಂ । ಊರ್ಧ್ವಃ । ಅಧಯತ್ । ಜುಹೂಭಿಃ ॥

॥ ಸಾಯಣಭಾಷ್ಯಂ ॥

ಯದ್ಯದೇಮುಯೆಮಗ್ನಿರ್ಗಣಸ್ಯ ಸಂಘಾತ್ಮಕಸ್ಯ ಜಗತೋ ರಶನಾಂ ರಜ್ಜುರಿವ ವ್ಯಾಪಾರಪ್ರತಿಬಂಧಕಂ ತಮೋಽಜೀಗಃ । ಗಿರತಿ ಗೃಹ್ಣಾತಿ ವಾ । ಸಮಿದ್ಧೋ ಭವತೀತ್ಯರ್ಥಃ । ತದಾ ಶುಚಿರ್ದೀಪ್ತೋಽಗ್ನಿಃ ಶುಚಿಭಿರ್ಗೋಭಿರ್ದೀಪ್ತೈಃ ರಶ್ಮಿಭಿರಂಕ್ತೇ । ವ್ಯನಕ್ತಿ ವಿಶ್ವಂ ಜಗತ್ । ಆದನಂತರಮೇವ ದಕ್ಷಿಣಾ ಪ್ರವೃದ್ಧಾ ವಾಜಯಂತ್ಯನ್ನಮಿಚ್ಛಂತ್ಯಾಜ್ಯಧಾರಾ ಯುಜ್ಯತೇ । ಯುಕ್ತಾ ಭವತಿ । ಅಥವಾ ದಕ್ಷಿಣಾ ಪ್ರವೃದ್ಧಾಜ್ಯಧಾರಾ ಯುಜ್ಯತೇ । ತಾಂ ಚ ಧಾರಾಮುತ್ತಾನಾಮೂರ್ಧ್ವತಾನಾಮುಪರಿ ವಿಸ್ತೃತಾಮೂರ್ಧ್ವ ಉನ್ನತಃ ಸನ್ ಜುಹೂಭಿರಧಯತ್ । ಪಿಬತಿ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಈಂ—ಅಗ್ನಿಯು । ಗಣಸ್ಯ—ಸಂಘಾತರೂಪವಾದ ಜಗತ್ತಿನ । ರಶನಾಂ—ರಜ್ಜುವಿನಂತೆ ಪ್ರತಿಬಂಧಕವಾದ ತಮಸ್ಸನ್ನು । ಅಜೀಗಃ—ತನ್ನ ಸ್ವಾಧೀನದಲ್ಲಿರುವಂತೆ ಹಿಡಿದನೋ (ಆಗ) । ಶುಚಿಃ—ಪ್ರಕಾಶಮಾನನಾದ । ಅಗ್ನಿಃ—ಅಗ್ನಿಯು । ಶುಚಿಭಿಃ—ಕಾಂತಿಯುತವಾದ । ಗೋಭಿಃ—ರಶ್ಮಿಗಳಿಂದ । ಅಂಕ್ತೇ—(ವಿಶ್ವವನ್ನೆಲ್ಲಾ) ಪ್ರಕಾಶಿಸುವಂತೆ ಮಾಡುತ್ತಾನೆ । ಆತ್—ಆ ಒಡನೆಯೇ । ದಕ್ಷಿಣಾ—ಪ್ರವೃದ್ಧವಾದುದೂ । ವಾಜಯಂತೀ—ಅನ್ನವನ್ನು ಇಚ್ಛಿಸುವುದೂ ಆದ ಆಜ್ಯಧಾರೆಯು । ಯುಜ್ಯತೇ—ಅರ್ಪಿತವಾಗುತ್ತದೆ । ಉತ್ತಾನಾಂ—ತನ್ನ ಮೇಲೆ ಅರ್ಪಿತವಾದ ಈ ಆಜ್ಯಧಾರೆಯನ್ನು । ಊರ್ಧ್ವಃ—ಊರ್ಧ್ವಮುಖನಾಗಿ । ಜುಹೂಭಿಃ—ಜುಹೂ ಪಾತ್ರೆಗಳಿಂದ । ಅಧಯತ್—ಪಾನಮಾಡುತ್ತಾನೆ.

॥ ಭಾವಾರ್ಥ ॥

ಸಂಘಾತರೂಪವಾದ ಜಗತ್ತಿಗೆ ಪ್ರತಿಬಂಧಕವಾದ ತಮಸ್ಸನ್ನು ಅಗ್ನಿಯು ತನ್ನ ಸ್ವಾಧೀನದಲ್ಲಿರುವಂತೆ ಯಾವಾಗ ಹಿಡಿದನೋ ಆಗ ಪ್ರಕಾಶಮಾನನಾದ ಅಗ್ನಿಯು ಕಾಂತಿಯುತರಾದ ರಶ್ಮಿಗಳಿಂದ ವಿಶ್ವವನ್ನೆಲ್ಲಾ ಪ್ರಕಾಶಿಸುವಂತೆ ಮಾಡುತ್ತಾನೆ. ಆ ಒಡನೆಯೇ, ಪ್ರವೃದ್ಧವಾದುದೂ, ಅನ್ನವನ್ನು ಇಚ್ಛಿಸುವುದೂ ಆದ ಆಜ್ಯಧಾರೆಯು ಅರ್ಪಿತವಾಗುತ್ತದೆ. ತನ್ನ ಮೇಲೆ ಅರ್ಪಿತವಾದ ಈ ಆಜ್ಯಧಾರೆಯನ್ನು ಊರ್ಧ್ವಮುಖನಾಗಿ ಜುಹೂಪಾತ್ರೆಗಳಿಂದ ಪಾನಮಾಡುತ್ತಾನೆ.

## English Translation.

When he seized upon the (confining) girdle of the aggregated (world), then, bright-shining, he makes all manifest with brilliant rays : thereupon the precious food-desiring (oblation) is added (to the flame), and Agni soaring aloft, drinks it as it is (spread out) recumbent by the ladles.

॥ ವಿಶೇಷವಿಷಯಗಳು ॥

ಯತ್ ಈಂ ಗಣಸ್ಯ ರಶನಾಂ ಅಜೀಗಃ (ತದಾ) ಶುಚಿಃ ಅಗ್ನಿಃ ಶುಚಿಭಿಃ ಗೋಭಿಃ ಅಂಕ್ತೇ— ಯದಾ ಅಯಮಗ್ನಿಃ ಸಂಘಾತ್ಮಕಸ್ಯ ಜಗತಃ ರಜ್ಜುಮಿವ ವ್ಯಾಪಾರಪ್ರತಿಬಂಧಕಂ ತಮಃ ಗೃಹ್ಣಾತಿ ತದಾ ದೀಪ್ತೋಽಯಮಗ್ನಿಃ ದೀಪ್ತೈ ರಶ್ಮಿಭಿರ್ವಿಶ್ವಂ ಜಗತ್ ವ್ಯನಕ್ತಿ । ಈ ಜಗತ್ತನ್ನೆಲ್ಲಾ ಹಗ್ಗದಿಂದ ಕಟ್ಟಿ ಹಿಡಿದಿರುವಂತೆ ಕತ್ತಲೆಯು ಎಲ್ಲಾ ಸ್ಥಳದಲ್ಲಿಯೂ ವ್ಯಾಪಿಸಿ ಹರಡಿರುವುದು. ಇಂತಹ ಕತ್ತಲೆಯನ್ನು ಅಗ್ನಿಯು ತನ್ನ ಪ್ರಕಾಶಮಾನವಾದ ರಶ್ಮಿಗಳಿಂದ (ಬೆಳಕಿನಿಂದ ಹಗ್ಗದಿಂದ ಕಟ್ಟಿ ಹಿಡಿದು ಸ್ವಾಧೀನದಲ್ಲಿರಿಸಿಕೊಳ್ಳುವಂತೆ,) ತನ್ನ ಪ್ರಕಾಶವನ್ನು ಬೀರಿ ಎಲ್ಲಾ ಕಡೆಯಲ್ಲಿಯೂ ಬೆಳಕಾಗುವಂತೆ ಮಾಡಿರುವನು.

ಆತ್ ದಕ್ಷಿಣಾ ವಾಜಯಂತೀ ಯುಜ್ಯತೇ— ಅನಂತರಮೇವ ಪ್ರವೃದ್ಧಾ ಅನ್ನಮಿಚ್ಛಂತ್ಯಾಜ್ಯ ಧಾರಾ ಯುಕ್ತಾ ಭವತಿ । ಅಥವಾ ದಕ್ಷಿಣಾ ಪ್ರವೃದ್ಧಾಜ್ಯಧಾರಾ ಯುಜ್ಯತೇ । ಅನಂತರ ಎಂದರೆ ಅಗ್ನಿಯು ಚೆನ್ನಾಗಿ ಪ್ರಜ್ವಲಿತವಾಗಿರುವಾಗ ಅನ್ನಾದ್ಯಾಹಾರಗಳನ್ನು ಅಪೇಕ್ಷಿಸುವ ಯಜಮಾನಾದಿ ಜನರು ಅಗ್ನಿಯಲ್ಲಿ ಬಹಳ ವಾಗಿ ಆಜ್ಯವನ್ನು (ತುಪ್ಪವನ್ನು) ಹೋಮಮಾಡುವರು.

ಉತ್ತಾನಾಂ ಊರ್ಧ್ವಃ ಜುಹೂಭಿಃ ಅಧಯತ್— ತಾಂ ಚ ಧಾರಾಂ ಊರ್ಧ್ವತಾನಾಮುಪರಿ ವಿಸ್ತೃತಾಂ ಉನ್ನತಃ ಸನ್ ಜುಹೂಭಿಃ ಪಿಬತಿ । ಜುಹೂ ಎಂದರೆ ಆಜ್ಯವನ್ನು ಅಗ್ನಿಯಲ್ಲಿ ಹೋಮಮಾಡುವುದ ಕ್ಕಾಗಿ ಉಪಯೋಗಿಸುವ ಮರದ ಸೌಟುಗಳು. ಈ ರೀತಿ ಋತ್ವಿಗ್ಯಜಮಾನರು ಅಗ್ನಿಯಲ್ಲಿ ಜುಹೂ ಎಂಬ ಮರದ ಸೌಟುಗಳಿಂದ ಹೋಮಮಾಡುತ್ತಿರುವ (ಎತ್ತರದಿಂದ ಸುರಿಯುತ್ತಿರುವ) ಆಜ್ಯಧಾರೆಯನ್ನು (ಘೃತವನ್ನು) ಅಗ್ನಿಯು ತನ್ನ ಜ್ವಾಲೆಗಳನ್ನು ಮೇಲಕ್ಕೆ ಚಾಚಿ ಪಾನಮಾಡುವನು. ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿದಷ್ಟೂ ಜ್ವಾಲೆಯು ಮೇಲಕ್ಕೇಳುವುದು ಸಹಜವು. ಆ ವಿಷಯವನ್ನೇ ಇಲ್ಲಿ— ಅಗ್ನಿಯು ತನ್ನ ಜ್ವಾಲೆಗಳನ್ನು ಮೇಲಕ್ಕೆ ಪ್ರಸರಿಸಿ ಆಜ್ಯವನ್ನು ಪಾನಮಾಡುವನು ಎಂದು ಪ್ರಕಾರಾಂತರದಿಂದ ವರ್ಣಿಸಿದೆ.



॥ ಸಂಹಿತಾಪಾಠಃ ॥

ಅಗ್ನಿಮಚ್ಛಾ ದೇವಯತಾಂ ಮನಾಂಸಿ ಚಕ್ಷೂಂಷೀವ ಸೂರ್ಯೇ ಸಂ ಚರಂತಿ ।

ಯದೀಂ ಸುವಾತೇ ಉಷಸಾ ವಿರೂಪೇ ಶ್ವೇತೋ ವಾಜೀ ಜಾಯತೇ ಅಗ್ರೇ ಅಹ್ನಾಂ ॥ ೪ ॥

॥ ಪದಪಾಠಃ ॥

ಅಗ್ನಿಂ । ಅಚ್ಛ । ದೇವ್ಽಯತಾಂ । ಮನಾಂಸಿ । ಚಕ್ಷೂಂಷಿಽಇವ । ಸೂರ್ಯೇ । ಸಂ । ಚರಂತಿ । ಯತ್ । ಈಂ । ಸುವಾತೇ ಇತಿ । ಉಷಸಾ । ವಿರೂಪೇ ಇತಿ ವಿಽರೂಪೇ । ಶ್ವೇತಃ । ವಾಜೀ । ಜಾಯತೇ । ಅಗ್ರೇ । ಅಹ್ನಾಂ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿಂ ದೇವಮಚ್ಛಾಭಿಮುಖ್ಯೇನ ದೇವಯತಾಂ ದೇವಾನಾತ್ಮನ ಇಚ್ಛತಾಂ ಯಜಮಾನಾನಾಂ ಮನಾಂಸಿ ಸಂ ಚರಂತಿ । ದೇವಾ ಯಷ್ಟವ್ಯಾಸ್ತದರ್ಥಂ ಕದಾಯಂ ವರ್ಧಿಷ್ಯತೀತಿ ಧ್ಯಾಯಂತೀತ್ಯರ್ಥಃ । ಚಕ್ಷೂಂಷೀವ ಸರ್ವೇಷಾಂ ಪ್ರಾಣಿನಾಂ ಯಥಾ ಸೂರ್ಯೇ ಸಂಚರಂತಿ ತದ್ವತ್ । ಯದ್ಯದೇಮೇನಮಗ್ನಿಮುಷಸಾ ಸಹ ವಿರೂಪೇ ನಾನಾರೂಪೇ ದ್ಯಾವಾಪೃಥಿವ್ಯೌ ಸುವಾತೇ । ಜನಯತಃ । ತದಾನೀಂ ಶ್ವೇತಃ ಪ್ರಕೃಷ್ಟವರ್ಣೋಪೇತೋ ವಾಜೀ ವೇಜನವಾನಗ್ನಿರಹ್ನಾಮಗ್ರ ಉದಯಕಾಲೇ ಜಾಯತೇ । ಪ್ರವರ್ಧತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಸೂರ್ಯೇ—ಸೂರ್ಯನಲ್ಲಿ ಆಸಕ್ತವಾದ । ಚಕ್ಷೂಂಷೀವ—(ಮಾನವರ)ಚಕ್ಷುಸ್ಸುಗಳಂತೆ । ದೇವಯತಾಂ—ದೇವತೆಗಳ ಅನುಗ್ರಹವನ್ನು ಪಡೆಯಲಿಚ್ಛಿಸುವ ಯಜಮಾನರ । ಮನಾಂಸಿ—ಮನಸ್ಸುಗಳು । ಅಗ್ನಿಂ ಅಚ್ಛ—ಅಗ್ನಿಗೆ ಅಭಿಮುಖವಾಗಿ । ಸಂ ಚರಂತಿ—ಸಂಚರಿಸುತ್ತವೆ । ವಿರೂಪೇ— ನಾನಾ ರೂಪಗಳುಳ್ಳ ದ್ಯಾವಾಪೃಥಿವಿಗಳು । ಯತ್—ಯಾವಾಗ । ಈಂ— ಈ ಅಗ್ನಿಯನ್ನು । ಉಷಸಾ ಸಹ—ಉಷಸ್ಸಿನೊಡನೆ । ಸುವತೇ—ಹಡೆಯುತ್ತಾರೋ (ಆಗ) । ಶ್ವೇತಃ—ಉತ್ಕೃಷ್ಟವಾದ ವರ್ಣವಳ್ಳವನೂ । ವಾಜೀ—ವೇಗಶಾಲಿಯೂ ಆದ ಅಗ್ನಿಯು । ಅಹ್ನಾಂ ಅಗ್ರೇ—ಉದಯಕಾಲದಲ್ಲಿ । ಜಾಯತೇ—ಉತ್ಪನ್ನನಾಗುತ್ತಾನೆ.

॥ ಭಾವಾರ್ಥ ॥

ಸೂರ್ಯನಲ್ಲಿ ಆಸಕ್ತವಾದ ಮಾನವರ ಚಕ್ಷುಸ್ಸುಗಳಂತೆ ದೇವತೆಗಳ ಅನುಗ್ರಹವನ್ನು ಪಡೆಯಲಿಚ್ಛಿಸುವ ಯಜಮಾನರ ಮನಸ್ಸುಗಳು ಅಗ್ನಿಗೆ ಅಭಿಮುಖವಾಗಿ ಸಂಚರಿಸುತ್ತವೆ. ನಾನಾರೂಪವುಳ್ಳ ದ್ಯಾವಾಪೃಥಿವಿಗಳು ಈ ಅಗ್ನಿಯನ್ನು ಉಷಸ್ಸಿನೊಡನೆ ಹಡೆದೊಡನೆಯೇ, ಉತ್ಕೃಷ್ಟವಾದ ವರ್ಣವುಳ್ಳವನೂ ವೇಗಶಾಲಿಯೂ ಆದ ಅಗ್ನಿಯು ಉದಯಕಾಲದಲ್ಲಿ ಉತ್ಪನ್ನನಾಗುತ್ತಾನೆ.

## English Translation.

The minds of the devout turn to Agni, as the eyes (of men) look towards the the sun : when the multiform (heaven and earth) bring him forth along with the dawn, he is born as a white courser in the beginning of the days.

॥ ವಿಶೇಷವಿಷಯಗಳು ॥

ಸೂರ್ಯೇ ಚಕ್ಷೂಂಷೀವ ದೇವಯತಾಂ ಮನಾಂಸಿ ಅಗ್ನಿಂ ಅಚ್ಛ ಸಂ ಚರಂತಿ—ಸೂರ್ಯನನ್ನು ನೋಡ ಬಯಸುವ ಜನರು ಯಾವ ರೀತಿ ತಮ್ಮ ಕಣ್ಣುಗಳನ್ನು ಮೇಲಕ್ಕೆತ್ತಿ ನೋಡುವರೋ ಅದರಂತೆ ದೇವತೆಗಳನ್ನು ಯಜ್ಞಾಗ್ನಿಯಲ್ಲಿ ಆರಾಧಿಸಬೇಕೆಂದು ಇಚ್ಛಿಸುವ ಜನರು ಅಗ್ನಿಯ ಅಭಿಮುಖವಾಗಿ ನಿಂತು ಈ ಅಗ್ನಿಯು ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಯಾವಾಗ ಚೆನ್ನಾಗಿ ಪ್ರಜ್ವಲಿತನಾಗುವನು ಎಂಬ ಕುತೂಹಲದಿಂದ ಅಗ್ನಿಯನ್ನೇ ನೋಡುತ್ತಿರುವರು ಎಂದಭಿಪ್ರಾಯವು.

ವಿರೂಪೇ ಯತ್ ಈಂ ಉಷಸಾ ಸಹ ಸುವತೇ ಶ್ವೇತಃ ವಾಜೀ ಅಹ್ನಾಂ ಅಗ್ರೇ ಜಾಯತೇ। ನಾನಾರೂಪವುಳ್ಳ ವಸ್ತುಗಳಿಂದ ಸಹಿತರಾದ ದ್ಯಾವಾಪೃಥಿವಿಗಳು ಉಷಃಕಾಲದಲ್ಲಿ ಉಷಸ್ಸನ್ನೂ, ಅಗ್ನಿಯನ್ನೂ ಉತ್ಪನ್ನಮಾಡುವವು. ಎಂದರೆ ಉಷಃಕಾಲದಲ್ಲಿಯೇ ಅಗ್ನಿಯು ಪ್ರತಿಷ್ಠಿಸಲ್ಪಡುವನು. ಅಂತಹ ಸಮಯದಲ್ಲಿ ಎಂದರೆ ಪ್ರಾತಃಕಾಲದಲ್ಲಿ ಅಗ್ನಿಯು ಬೇಗನೆ ಕಾಷ್ಠಾದಿಗಳಲ್ಲಿ ವ್ಯಾಪಿಸಿ ಪ್ರಕಾಶಮಾನನಾಗಿ ಬೆಳಗುವನು.

। ಸಂಹಿತಾಪಾಠಃ ॥

ಜನಿಷ್ಟ ಹಿ ಜೇನ್ಯೋ ಅಗ್ರೇ ಅಹ್ನಾಂ ಹಿತೋ ಹಿತೇಷ್ವರುಷೋ ವನೇಷು ।
ದಮೇದಮೇ ಸಪ್ತ ರತ್ನಾ ದಧಾನೋಽಗ್ನಿರ್ಹೋತಾ ನಿ ಷಸಾದಾ ಯಜೀಯಾನ್ ॥ ೫ ॥

॥ ಪದಪಾಠಃ ॥

ಜನಿಷ್ಟ । ಹಿ । ಜೇನ್ಯಃ । ಅಗ್ರೇ । ಅಹ್ನಾಂ । ಹಿತಃ । ಹಿತೇಷು । ಅರುಷಃ । ವನೇಷು ।
ದಮೇಽದಮೇ । ಸಪ್ತ । ರತ್ನಾ । ದಧಾನಃ । ಅಗ್ನಿಃ । ಹೋತಾ । ನಿ । ಸಸಾದ । ಯಜೀಯಾನ್ ॥ ೫ ॥

। ಸಾಯಣಭಾಷ್ಯಂ ॥

ಅಯಮಗ್ನಿರ್ಜೇನ್ಯ ಉತ್ಪಾದನೀಯೋಽಹ್ನಾಮಗ್ರ ಉದಯಕಾಲೇ ಜನಿಷ್ಟ। ಪ್ರಾದುರಭೂತ್। ಪಶ್ಚಾತ್ ಹಿತೇಷು ವನೇಷು ವನೋತ್ಥೇಷು ಕಾಷ್ಠೇಷ್ವರುಷ ಆರೋಚಮಾನಃ ಸನ್ ಹಿತಃ। ಸ್ಥಾಪಿತಃ। ಪಶ್ಚಾದ್ದಮೇ ದಮೇ ತತ್ತದ್ಯಾಗಗೃಹೇ ಸಪ್ತ ರತ್ನಾ ರಮಣೀಯಾಃ ಸಪ್ತ ಜ್ವಾಲಾ ದಧಾನೋ ಧಾರಯಮಾಣಃ। ಅಥವಾ ಯಜಮಾನೇಭ್ಯಃ ಸಪ್ತವಿಧಾನಿ ರತ್ನಾನಿ ದಧಾನೋಽಗ್ನಿರ್ಹೋತಾ ಹೋಮನಿಷ್ಪಾದಕಃ ಸನ್ ಯಜೀಯಾನ್ಯಷ್ಟವ್ಯಃ ಸನ್ ನಿ ಷಸಾದ। ನಿಷಣ್ಣೋ ಭವತಿ ॥

। ಪ್ರತಿಪದಾರ್ಥ ॥

ಜೇನ್ಯಃ—ಉತ್ಪನ್ನನಾಗಲು ಯೋಗ್ಯನಾದ ಅಗ್ನಿಯು। ಅಹ್ನಾಂ ಅಗ್ರೇ—ಉದಯಕಾಲದಲ್ಲಿ। ಜನಿಷ್ಟ—ಉತ್ಪನ್ನನಾದನು (ಅನಂತರ)। ಹಿತೇಷು—ತನ್ನ ಪ್ರಸರಕ್ಕೆ ಅನುಕೂಲವಾದ। ವನೇಷು—

ವನಗಳಲ್ಲಿ! ಅರುಷಃ—ಪ್ರಕಾಶಮಾನನಾಗಿ | ಹಿತಃ—ಸ್ಥಾಪಿತನಾಗಿದ್ದಾನೆ (ಆಮೇಲೆ) | ದಮೇದಮೇ—ಪ್ರತಿಯೊಂದು ಯಾಗಗೃಹದಲ್ಲಿಯೂ | ಸಪ್ತರತ್ನಾ—ರಮಣೀಯವಾದ ತನ್ನ ಸಪ್ತಜ್ವಾಲೆಗಳನ್ನೂ | ದಧಾನಃ—ಧರಿಸಿಕೊಂಡು | ಅಗ್ನಿಃ—ಅಗ್ನಿಯು | ಹೋತಾ—ಹೋಮಸಂಪಾದಕನಾಗಿಯೂ | ಯಜೀಯಾನ್—ಯಜ್ಞಾರ್ಹನಾಗಿಯೂ | ನಿಷಸಾದ—ಆಸನ್ನನಾಗಿದ್ದಾನೆ (ಕುಳಿತಿದ್ದಾನೆ).

॥ ಭಾವಾರ್ಥ ॥

ಉತ್ಪನ್ನನಾಗಲು ಯೋಗ್ಯನಾದ ಅಗ್ನಿಯು ಉದಯಕಾಲದಲ್ಲಿ ಆವಿರ್ಭೂತನಾಗಿ ಪ್ರಥಮತಃ, ತನ್ನ ಪ್ರಸರಕ್ಕೆ ಹಿತಕಾರಿಯಾದ ವನಕಾಷ್ಠಾದಿಗಳಲ್ಲಿ ಸ್ಥಾಪಿತನಾಗಿದ್ದಾನೆ. ನಂತರ ಪ್ರತಿಯೊಂದು ಯಾಗಗೃಹದಲ್ಲಿಯೂ, ರಮಣೀಯವಾದ ತನ್ನ ಸಪ್ತಜ್ವಾಲೆಗಳನ್ನೂ ಧರಿಸಿಕೊಂಡು ಹೋಮಸಂಪಾದಕನಾಗಿಯೂ, ಯಜ್ಞಾರ್ಹನಾಗಿಯೂ ಆಸನ್ನನಾಗಿದ್ದಾನೆ.

English Translation.

(Agni), capable of birth, is born in the beginning of the days; radiant, he is deposited in the friendly woods, and then the adorable Agni, the offerer of the oblation, displaying seven precions (rays), is seated in every house.

॥ ವಿಶೇಷವಿಷಯಗಳು ॥

ಜೇನ್ಯಃ ಅಹ್ನಾಂ ಅಗ್ರೇ ಜನಿಷ್ಟ, ಹಿತೇಷು ವನೇಷು ಅರುಷಃ ಹಿತಃ—ಅಯಮಗ್ನಿಃ ಉತ್ಪಾದನೀಯಃ ಉದಯಕಾಲೇ ಪ್ರಾದುರಭೂತ್ | ಪಶ್ಚಾತ್ ವನೋತ್ಪನ್ನೇಷು ಕಾಷ್ಠೇಷು ಆರೋಚಮಾನಸ್ಸನ್ ಸ್ಥಾಪಿತಃ | ಈ ಅಗ್ನಿಯು ಯಜ್ಞಾರ್ಥವಾಗಿ ಪ್ರಾತಃಕಾಲದಲ್ಲಿಯೇ ಯಜ್ಞಕುಂಡದಲ್ಲಿ ಸ್ಥಾಪಿತನಾಗಿ ಚೆನ್ನಾಗಿ ಹೊತ್ತಿಕೊಳ್ಳುವುದಕ್ಕಾಗಿ ಹಾಕುವ ಕಾಷ್ಠಾದಿಗಳಲ್ಲಿ ವ್ಯಾಪಿಸಿ ಎಂದರೆ ಕಾಷ್ಠಾದಿಗಳನ್ನು ದಹಿಸುತ್ತಾ ಜಾಜ್ವಲ್ಯಮಾನನಾಗಿ ಬೆಳಗುತ್ತಿರುವನು.

ದಮೇ ದಮೇ ಸಪ್ತ ರತ್ನಾ ದಧಾನಃ ಅಗ್ನಿಃ ಹೋತಾ ಯಜೀಯಾನ್ ನಿಷಸಾದ—ಪಶ್ಚಾತ್ ತತ್ತದ್ಯಾಗಗೃಹೇ ರಮಣೀಯಾ ಸಪ್ತಜ್ವಾಲಾಃ ಧಾರಯಮಾಣಃ ಅಥವಾ ಯಜಮಾನೇಭ್ಯಃ ಸಪ್ತವಿಧಾನಿ ರತ್ನಾನಿ ದಧಾನಃ ಅಗ್ನಿಃ ಹೋಮನಿಷ್ಪಾದಕಃ ಸನ್ ಯಷ್ಟವ್ಯಃ ನಿಷಣ್ಣೋ ಭವತಿ | ಅನಂತರ ಈ ಅಗ್ನಿಯು ಪ್ರತಿಯಜ್ಞಗೃಹದಲ್ಲಿಯೂ ತನ್ನ ಸಪ್ತವಿಧವಾದ ಜ್ವಾಲೆಗಳಿಂದ ಬೆಳಗುತ್ತಿರುವನು ಅಥವಾ ಯಜ್ಞಮಾಡುವ ಯಜಮಾನರಿಗೆ ಏಳುವಿಧ ರತ್ನಗಳನ್ನು ಕೊಡುವವನಾಗಿ ಬೆಳಗುತ್ತಿರುವನು. ಈ ರೀತಿ ಹೋಮನಿಷ್ಪಾದಕನಾದ ಅಗ್ನಿಯು ಯಜ್ಞನಿರ್ವಹಣಕ್ಕಾಗಿ ಅಗ್ನಿಕುಂಡಲದಲ್ಲಿ ಕುಳಿತಿರುವನು ಎಂದರೆ ಬೆಳಗುತ್ತಿರುವನು.

ಪುರಾಣಾದಿಗಳಲ್ಲಿ ಅಗ್ನಿಯ ಏಳುವಿಧ ಜ್ವಾಲೆಗಳಿಗೆ ಕಾಳೀ, ಕರಾಳೀ ಇತ್ಯಾದಿ ಹೆಸರುಗಳಿವೆ. ಈ ಜ್ವಾಲೆಗಳನ್ನು ಅಗ್ನಿಯ ಜಿಹ್ವೆ (ನಾಲಗೆ) ಯೆಂದೂ ಹೇಳುವುದುಂಟು.



॥ ಸಂಹಿತಾಪಾಠಃ ॥

ಅಗ್ನಿರ್ಹೋತಾ ನ್ಯಸೀದದ್ಯಜೀಯಾನುಪಸ್ಥೇ ಮಾತುಃ ಸುರಭಾ ಉ ಲೋಕೇ ।
ಯುವಾ ಕವಿಃ ಪುರುನಿಃಷ್ಠ ಋತಾವಾ ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ ॥ ೬ ॥

॥ ಪದಪಾಠಃ ॥

ಅಗ್ನಿಃ । ಹೋತಾ । ನಿ । ಅಸೀದತ್ । ಯಜೀಯಾನ್ । ಉಪಸ್ಥೇ । ಮಾತುಃ । ಸುರಭೌ । ಊಂ ಇತಿ । ಲೋಕೇ ।
ಯುವಾ । ಕವಿಃ । ಪುರುನಿಃಸ್ಥಃ । ಋತ್ವಾವಾ । ಧರ್ತಾ । ಕೃಷ್ಟೀನಾಂ । ಉತ । ಮಧ್ಯೇ । ಇದ್ಧಃ ॥ ೬ ॥

॥ ಸಾಯಣಭಾಷ್ಯಂ ॥

ಜೀವತಿ ಯಜಮಾನೇ ಮೃತ ಇತಿ ಶಬ್ದೋ ಯದಿ ಸ್ಯಾತ್ತದಾನೀಂ ಸುರಭಿಮತೀಷ್ಟಿಃ ಕಾರ್ಯಾ। ತತ್ರೇಯಮನುವಾಕ್ಯಾ । ಸೂತ್ರಿತಂ ಚ । ಅಗ್ನಿರ್ಹೋತಾ ನ್ಯಸೀದದ್ಯಜೀಯಾನ್ತ್ಸಾಧ್ವೀಮಕರ್ದೇವವೀತಿಂ ನೋ ಅದ್ಯ । ಐ. ಬ್ರಾಂ. ೭-೯ । ಇತಿ ॥

ಅಯಮಗ್ನಿರ್ಹೋತಾ ಹೋಮನಿಷ್ಪಾದಕಃ ಸನ್ ಯಜೀಯಾನ್ಯಷ್ಟೃತಮಃ ಸನ್ ನ್ಯಸೀದತ್। ನಿಷಸಾದ । ಕುತ್ರೇತಿ ತದುಚ್ಯತೇ। ಮಾತುಃ ಸರ್ವಸ್ಯ ನಿರ್ಮಾತುರ್ಭೂಮ್ಯಾ ಉಪಸ್ಥ ಉತ್ಸಂಗೇ ತತ್ರಾಪಿ ಸುರಭಾವಾಜ್ಯಾದಿಸೌರಭ್ಯಯುಕ್ತೇ ಲೋಕೇ ಸರ್ವೈರ್ದ್ರಷ್ಟವ್ಯೇ ಸ್ಥಾನೇ ವೇದಿಲಕ್ಷಣೇ । ಉತಾಪಿ ಚ ಯುವಾ ನಿತ್ಯತರುಣಃ ಸರ್ವತ್ರ ಮಿಶ್ರಿತೋ ವಾ ಕವಿರ್ಮೇಧಾವೀ ಪುರುನಿಃಷ್ಠೋ ಬಹುಸ್ಥಾನ ಋತಾವಾ ಯಜ್ಞವಾನ್ಧರ್ತಾ ಸರ್ವಸ್ಯ ಧಾರಕ ಏವಂಭೂತಃ ಸನ್ ಕೃಷ್ಟೀನಾಮೃತ್ವಿಗ್ಯಜಮಾನಾನಾಂ ಮಧ್ಯ ಇದ್ಧಃ ಸಮಿದ್ಧಃ ಸನ್ ವರ್ತತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

ಅಗ್ನಿಃ—ಅಗ್ನಿಯು । ಹೋತಾ—ಹೋಮಸಂಪಾದಕನಾಗಿಯೂ । ಯಜೀಯಾನ್—ಯಜ್ಞಾರ್ಹನಾಗಿಯೂ । ಮಾತುಃ—ತನ್ನ ಜನನಿಯಾದ ಪೃಥ್ವಿಯ । ಉಪಸ್ಥೇ—ತೊಡೆಯಂತಿರುವುದೂ । ಸುರಭೌ—ಸುವಾಸನೆಯುಳ್ಳದ್ದೂ ಆದ । ಲೋಕೇ—ಯಜ್ಞವೇದಿಯಲ್ಲಿ । ನ್ಯಸೀದತ್—ಆಸನ್ನನಾಗಿದ್ದಾನೆ । ಉತ—ಮತ್ತು । ಯುವಾ—ನಿತ್ಯತರುಣನೂ । ಕವಿಃ—ಮೇಧಾವಿಯೂ । ಪುರುನಿಷ್ಠಃ—ಅನೇಕಪ್ರದೇಶಗಳಲ್ಲಿ ಸ್ಥಿತನೂ । ಋತಾವಾ—ಯಜ್ಞವಂತನೂ । ಧರ್ತಾ—ಸರ್ವಜಗದ್ಧಾರಕನೂ ಆಗಿ । ಕೃಷ್ಟೀನಾಂ—ಯಜಮಾನಾದಿಗಳ । ಮಧ್ಯೇ—ಮಧ್ಯದಲ್ಲಿ । ಇದ್ಧಃ—ಪ್ರಜ್ವಲಿತನಾಗಿದ್ದಾನೆ.

॥ ಭಾವಾರ್ಥ ॥

ಅಗ್ನಿಯು ಹೋಮಸಂಪಾದಕನಾಗಿಯೂ, ಯಜ್ಞಾರ್ಹನಾಗಿಯೂ ಇದ್ದು ತನ್ನ ಜನನಿಯಾದ ಪೃಥ್ವಿಯ ತೊಡೆಯಂತಿರುವುದೂ, ಸುವಾಸನೆಯುಳ್ಳದ್ದೂ ಆದ ಯಜ್ಞವೇದಿಯಲ್ಲಿ ಆಸನ್ನನಾಗಿದ್ದಾನೆ. ಮತ್ತು ನಿತ್ಯತರುಣನೂ, ಮೇಧಾವಿಯೂ, ಅನೇಕ ಪ್ರದೇಶಗಳಲ್ಲಿ ಸ್ಥಿತನೂ, ಯಜ್ಞವಂತನೂ, ಸರ್ವಜಗದ್ಧಾರಕನೂ ಆಗಿ ಋತ್ವಿಗ್ಯಜಮಾನಾದಿಗಳ ಮಧ್ಯದಲ್ಲಿ ಪ್ರಜ್ವಲಿತನಾಗಿದ್ದಾನೆ.

## English Translation.

The adorable Agni, the :offerer of the oblation has sat down in a fragrant place on the top of his mother (earth) : youthful, wise, many-stationed, the celebrator of sacrifice, the sustainer (of all), kindled (he abides) amongst men.

॥ ವಿಶೇಷವಿಷಯಗಳು ॥

ಯಜ್ಞಮಾಡುವ ಯಜಮಾನನು ಜೀವಿಸಿದ್ದರೂ ಮೃತನಾದನು ಎಂಬ ಸುದ್ದಿಯು ಹರಡಿದಲ್ಲಿ ಆ ದೋಷ ಪರಿಹಾರಕ್ಕಾಗಿ ಸುರಭಿಮತಿ ಎಂಬ ಇಷ್ಟಿಯನ್ನು ಮಾಡಬೇಕು. ಆಗ ಹೋಮಕಾಲದಲ್ಲಿ ಅಗ್ನಿಹೋತಾ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಅಗ್ನಿರ್ಹೋತಾ ನ್ಯಸೀದದ್ಯಜೀಯಾನ್ತ್ಸ್ವಧ್ವೀಮುಕ-ದೇರ್ವವೀತಿಂ ನೋ ಅದ್ಯ ಎಂಬ ಐತರೇಯಬ್ರಾಹ್ಮಣವಾಕ್ಯವು ನಿರ್ದೇಶಿಸುವುದು (ಐ. ಬ್ರಾ. ೭-೯)

ಹೋಮಾರ್ಥವಾಗಿ ಅಗ್ನಿಯು ಪ್ರಜ್ವಲಿತವಾಗಿದೆ. ಶುದ್ಧವೂ, ನಿರ್ಮಲವೂ, ಒಳ್ಳೆಯ ವಾಸನೆಯಿಂದ ಯುಕ್ತವಾದುದೂ ಆದ ಯಜ್ಞವೇದಿಯಲ್ಲಿ ಅಗ್ನಿಯು ಚೆನ್ನಾಗಿ ಬೆಳಗುತ್ತಾನೆ. ಈ ಅಗ್ನಿಯ ಸುತ್ತಲೂ ಋತ್ವಿಗ್ಯಜಮಾನರು ಯಜ್ಞಾರ್ಥವಾಗಿ ನೆರೆದಿದ್ದಾರೆ. ಈ ಅಗ್ನಿಯು ಏಕಕಾಲದಲ್ಲಿ ಅನೇಕಯಜ್ಞಗೃಹಗಳಲ್ಲಿ ಇರಲು ಸಮರ್ಥನು, ಯಜ್ಞಕ್ಕೆ ಮುಖ್ಯಸಾಧನಭೂತನಾದವನು, ಜಗತ್ತನ್ನು ಅಥವಾ ಯಜ್ಞವನ್ನು ರಕ್ಷಿಸತಕ್ಕವನು. ಇಂತಹ ಗುಣವಿಶಿಷ್ಟನಾದ ಅಗ್ನಿಯು ಯಜ್ಞವೇದಿಯಲ್ಲಿ ಪ್ರಜ್ವಲಿತನಾಗಿ ಬೆಳಗುತ್ತಿರುವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

---

। ಸಂಹಿತಾಪಾಠಃ ।

ಪ್ರ ಣು ತ್ಯಂ ವಿಪ್ರಮಧ್ವರೇಷು ಸಾಧುಮಗ್ನಿಂ ಹೋತಾರಮೀಳತೇ ನಮೋಭಿಃ ।
ಆ ಯಸ್ತತಾನ ರೋದಸೀ ಋತೇನ ನಿತ್ಯಂ ಮೃಜಂತಿ ವಾಜಿನಂ ಘೃತೇನ ॥

॥ ಪದಪಾಠಃ ॥

ಪ್ರ । ನು । ತ್ಯಂ । ವಿಪ್ರಂ । ಅಧ್ವರೇಷು । ಸಾಧುಂ । ಅಗ್ನಿಂ । ಹೋತಾರಂ । ಈಳತೇ । ನಮಃಽಭಿಃ ।

ಆ । ಯಃ । ತತಾನ । ರೋದಸೀ ಇತಿ । ಋತೇನ । ನಿತ್ಯಂ । ಮೃಜಂತಿ । ವಾಜಿನಂ । ಘೃತೇನ ॥ ೭ ॥

॥ ಸಾಯಣಭಾಷ್ಯಂ ॥

ತ್ಯಂ ತಮಗ್ನಿಂ ನಮೋಭಿಃ ಸ್ತುತಿಭಿರ್ನು ಕ್ಷಿಪ್ರಂ ಪ್ರೇಳತೇ । ಸ್ತುವಂತಿ । ಕೀದೃಶಂ ತಂ । ವಿಪ್ರಂ ಮೇಧಾವಿನಮಧ್ವರೇಷು ಸಾಧುಂ ಫಲಸಾಧಕಂ ಹೋತಾರಂ ಹೋಮನಿಷ್ಪಾದಕಂ । ಯೋ ದೇವೋ ರೋದಸೀ ದ್ಯಾವಾಪೃಥಿವ್ಯಾವೃತೇನೋದಕೇನಾ ತತಾನ । ವಿಸ್ತಾರಿತವಾನ್ । ಅಗ್ನೌ ಪ್ರಾಸ್ತಾಹುತೇರಾದಿತ್ಯದ್ವಾರಾ ವೃಷ್ಟ್ಯುತ್ಪಾದಕತ್ವಾತ್ । ಅಥವಾ ಋತೇನ ಸತ್ಯಭೂತೇನ ಹವಿಷಾ ದಿವಂ ತಥಾಭೂತೇನ ವೃಷ್ಟ್ಯಾದಿಫಲೇನ ಭುವಂ ಚಾ ತತಾನ । ವಾಜಿನಮನ್ನವಂತಂ ದೇವಂ ಯಜಮಾನಾ ನಿತ್ಯಂ ಘೃತೇನೋದಕೇನಾಜ್ಯೇನ ವಾ ಮೃಜಂತಿ । ಪರಿಚರಂತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಅಗ್ನಿಯು । ರೋದಸೀ—ದ್ಯಾವಾಪೃಥಿವಿಗಳನ್ನು । ಋತೇನ—ಉದಕದಿಂದ (ಅಥವಾ ಸತ್ಯಾತ್ಮಕವಾದ ಹವಿಸ್ಸಿನಿಂದ) । ಆ ತತಾನ—ವಿಸ್ತರಿಸುವಂತೆ ಮಾಡಿದನೋ । ತ್ಯಂ—ಅಂತಹವನೂ । ವಿಪ್ರಂ—ಮೇಧಾವಿಯೂ । ಅಧ್ವರೇಷು—ಯಾಗಗಳಲ್ಲಿ । ಸಾಧುಂ—ಫಲಸಾಧಕನೂ । ಹೋತಾರಂ—ಹೋಮಸಂಪಾದಕನೂ ಆದ । ಅಗ್ನಿಂ—ಅಗ್ನಿಯನ್ನು । ನಮೋಭಿಃ—ಸ್ತುತಿಗಳಿಂದ । ನು—ಕ್ಷಿಪ್ರವಾಗಿ । ಪ ಈಳತೇ—ಸ್ತುತಿಸುತ್ತಾರೆ । ವಾಜಿನಂ—ಅನ್ನವಂತನಾದ ಅಗ್ನಿಯನ್ನು । ನಿತ್ಯಂ—ಪ್ರತಿದಿನವೂ । ಘೃತೇನ—ಘೃತದಿಂದ । ಮೃಜಂತಿ—ಉಪಚರಿಸಿ ಪೂಜಿಸುತ್ತಾರೆ.

॥ ಭಾವಾರ್ಥ ॥

ಯಾವ ಅಗ್ನಿಯು ಸತ್ಯಾತ್ಮಕವಾದ ಹವಿಸ್ಸಿನಿಂದಲೂ ಮತ್ತು ವೃಷ್ಟಿಯಿಂದಲೂ ಸಹ ದ್ಯಾವಾಪೃಥಿವಿಗಳೆರಡನ್ನೂ ಸಹ ವಿಸ್ತರಿಸುವಂತೆ ಮಾಡಿದನೋ ಅಂತಹವನೂ, ಮೇಧಾವಿಯೂ, ಯಾಗಗಳಲ್ಲಿ ಫಲಸಾಧಕನೂ, ಹೋಮಸಂಪಾದಕನೂ ಆದ ಅಗ್ನಿಯನ್ನು ಸ್ತುತಿಗಳಿಂದ ಪ್ರಶಂಸಿಸುತ್ತಾರೆ. ಮತ್ತು ಅನ್ನವಂತನಾದ ಅಗ್ನಿಯನ್ನು ಪ್ರತಿದಿನವೂ ಘೃತದಿಂದ ಉಪಚರಿಸುತ್ತಾರೆ.

## English Translation.

They glorify at present with hymns that Agni, who is intelligent, the fullfiller (of desires) at sacrifices, the offerer of oblations, who has charged heaven and earth with water, and whom they always worship with clarified butter as the bestower of food.

॥ ವಿಶೇಷವಿಷಯಗಳು ॥

ಯಃ ರೋದಸೀ ಋತೇನ ಆ ತತಾನ—ಯಃ ದೇವಃ (ಅಗ್ನಿಃ) ದ್ಯಾವಾಪೃಥಿವ್ಯೌ ಉದಕೇನ ವಿಸ್ತಾರಿತವಾನ್ । ಅಗ್ನೌ ಪ್ರಾಸ್ತಾಹುತೇರಾದಿತ್ಯದ್ವಾರಾ ವೃಷ್ಟ್ಯುತ್ಪಾದಕತ್ವಾತ್ । ಅಥವಾ ಋತೇನ ಸತ್ಯಭೂತೇನ ಹವಿಷಾ ದಿವ್ಯಂ ತಥಾಭೂತೇನ ವೃಷ್ಟ್ಯಾದಿಫಲೇನ ಭುವಂ ಚ ಆ ತತಾನ । ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾಗಿ ಅರ್ಥವಿವರಣೆ ಮಾಡಿರುವರು. ಈ ಅಗ್ನಿಯು ದ್ಯಾವಾಪೃಥಿವಿಗಳನ್ನು (ಭೂಮ್ಯಂತರಿಕ್ಷಗಳನ್ನು) ಉದಕದಿಂದ ವ್ಯಾಪಿಸುವಂತೆ ಮಾಡಿದನು. ಅಂತರಿಕ್ಷವನ್ನೂ, ಭೂಮಿಯನ್ನೂ ಅಗ್ನಿಯು (ವಿದ್ಯುದಗ್ನಿಯೂ) ವೃಷ್ಟ್ಯುದಕದಿಂದ ವ್ಯಾಪಿಸುವಂತೆ ಮಾಡಿವನು ಅಥವಾ ಅಗ್ನಿಯಲ್ಲಿ ಅರ್ಪಿಸಿದ ಆಹುತಿಗಳು (ಹೋಮಗಳು) ಸ್ವರ್ಗದಲ್ಲಿರುವ ಆದಿತ್ಯನನ್ನು ಸೇರಿ ಅವನಿಗೆ ಅದರಿಂದ ತೃಪ್ತಿಯುಂಟಾಗಿ ಆದಿತ್ಯನ ಮೂಲಕ ಭೂಮ್ಯಂತರಿಕ್ಷಗಳು ವೃಷ್ಟ್ಯುದಕದಿಂದ ವ್ಯಾಪಿಸಿದವು ಎಂಬುದು ಒಂದು ವಿಧವಾದ ಅರ್ಥವು. ಅಥವಾ ಋತಶಬ್ದಕ್ಕೆ ಸತ್ಯವೆಂದು ಅರ್ಥಮಾಡಿದರೆ ಸತ್ಯಾತ್ಮಕವಾದ ಹವಿಸ್ಸಿನಿಂದ ಎಂದರೆ ಅಗ್ನಿಯಲ್ಲಿ ಹೋಮ ಮಾಡುವ ಹವಿರಾದಿಗಳಿಂದ ಸ್ವರ್ಗವನ್ನು ಎಂದರೆ ಸ್ವರ್ಗದಲ್ಲಿರುವ ದೇವತೆಗಳನ್ನು ತೃಪ್ತಿಪಡಿಸಿದಂತೆ ಆಗುವುದು. ಈ ರೀತಿ ಹವಿರರ್ಪಣೆಯಿಂದ ದೇವತೆಗಳಿಗೆ ಸಂತೋಷವುಂಟಾಗಿ ಅವರು ಭೂಮಿಗೆ ವೃಷ್ಟಿರೂಪವಾದ ಫಲವನ್ನು ಒದಗಿಸಿಕೊಡುವರು. ಆದುದರಿಂದ ಭೂಮಿಗೂ ತೃಪ್ತಿಯುಂಟಾದಂತಾಯಿತು. ಈ ರೀತಿ ಅಗ್ನಿಯು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿದನೆಂದು ಇಲ್ಲಿ ವರ್ಣಿಸಿದೆ.

॥ ಸಂಹಿತಾಪಾಠಃ ॥

ಮಾರ್ಜಾಲ್ಯೋ ಮೃಜ್ಯತೇ ಸ್ವೇ ದಮೂನಾಃ ಕವಿಪ್ರಶಸ್ತೋ ಅತಿಥಿಃ ಶಿವೋ ನಃ ।
ಸಹಸ್ರಶೃಂಗೋ ವೃಷಭಸ್ತದೋಜಾ ವಿಶ್ವಾಁ ಅಗ್ನೇ ಸಹಸಾ ಪ್ರಾಸ್ಯನ್ಯಾನ್ ॥

। ಪದಪಾಠಃ ।

ಮಾರ್ಜಾಲ್ಯಃ । ಮೃಜ್ಯತೇ । ಸ್ವೇ । ದಮೂನಾಃ । ಕವಿऽಪ್ರಶಸ್ತಃ । ಅತಿಥಿಃ । ಶಿವಃ । ನಃ ॥
ಸಹಸ್ರऽಶೃಂಗಃ । ವೃಷಭಃ । ತತ್ऽಓಜಾಃ । ವಿಶ್ವಾನ್ । ಅಗ್ನೇ । ಸಹಸಾ । ಪ್ರ । ಅಸಿ । ಅನ್ಯಾನ್ ॥ ೮ ॥

॥ ಸಾಯಣಭಾಷ್ಯಂ ॥

ಮಾರ್ಜಾಲ್ಯಃ ಸಂಮಾರ್ಜನೀಯೋऽಯಮಗ್ನಿರ್ಮೃಜ್ಯತೇ । ಪರಿಚರ್ಯತೇ । ಸ್ವೇ ಸ್ವಕೀಯೇ ಸ್ಥಾನೇ । ಕೀದೃಶೋऽಯಂ । ದಮೂನಾ ದಾನಮನಾ ದಾಂತಮನಾ ವಾ ಕವಿಪ್ರಶಸ್ತಃ ಕವಿಭಿರ್ಮೇಧಾ-

ಭಿಃ ಪ್ರಶಸ್ತಃ ಪ್ರಕರ್ಷೇಣ ಸ್ತುತ್ಯೋ ನೋಽಸ್ಮಾಕಮತಿಥಿರತಿಥಿವತ್ಪೂಜ್ಯಃ ಶಿವಃ ಸುಖಕರಶ್ಚ । ಸಹಸ್ರಶೃಂಗೋಽಪರಿಮಿತಜ್ವಾಲೋ ವೃಷಭೋ ವರ್ಷಿತಾ ಫಲಾನಾಂ ತದೋಜಾಃ । ಯತ್ಪ್ರಸಿದ್ಧಂ ಬಲಂ ತೇಜೋ ವಾಸ್ತಿ ತದೇವೌಜೋ ಯಸ್ಯ ತಾದೃಶಃ । ಸರ್ವಬಲಸ್ವರೂಪ ಇತ್ಯರ್ಥಃ । ಅಥ ಪ್ರತ್ಯಕ್ಷವಾದಃ । ಹೇ ಅಗ್ನೇ ವಿಶ್ವಾನನ್ಯಾನ್ ಸ್ವವ್ಯತಿರಿಕ್ತಾನ್ ಸರ್ವಾನ್ ಸಹಸಾ ಬಲೇನ ಪ್ರಾಸಿ । ಪ್ರೇತಿ ಪರೇತ್ಯರ್ಥೇ । ಪರಾಭವಸಿ । ವ್ಯಾಪ್ತುಂ ವಾ ಪ್ರಭವಸಿ ॥

॥ ಪ್ರತಿಪದಾರ್ಥ ॥

ದಮೂನಾಃ—ದಾನಮನಸ್ಕನೂ । ಕವಿಪ್ರಶಸ್ತಃ—ಋಷಿಗಳಿಂದ ಪ್ರಶಂಸಿತನೂ । ನಃ—ನಮಗೆ । ಅತಿಥಿಃ—ಅತಿಥಿಯಂತೆ ಪೂಜ್ಯನೂ । ಶಿವಃ—ಮಂಗಳಕರನೂ । ಸಹಸ್ರಶೃಂಗಃ—ಸಹಸ್ರಾರು ಜ್ವಾಲೆಗಳುಳ್ಳವನೂ । ವೃಷಭಃ—ಕಾಮುವರ್ಷಕನೂ । ತದೋಜಾಃ—ಪ್ರಸಿದ್ಧವಾದ ಬಲವುಳ್ಳವನೂ । ಮಾರ್ಜಾಲ್ಯಃ—ಪೂಜಾಯೋಗ್ಯನೂ ಆದ ಅಗ್ನಿಯು । ಸ್ವೇ—ತನ್ನ ಸ್ವಂತ ಯಜ್ಞಗೃಹದಲ್ಲಿ । ಮೃಜ್ಯತೇ—ಪೂಜಿಸಲ್ಪಡುತ್ತಾನೆ । ಅಗ್ನೇ—ಎಲೈ ಅಗ್ನಿಯೇ । ವಿಶ್ವಾನ್ ಅನ್ಯಾನ್—ನಿನಗಿಂತ ಬೇರೆಯಾದ ಸಮಸ್ತರನ್ನೂ । ಸಹಸಾ—(ನಿನ್ನ) ಶಕ್ತಿಯಿಂದ । ಪ್ರಾಸಿ—ಮೀರಿಸಿದ ಪ್ರಭಾವವುಳ್ಳವನಾಗಿದ್ದೀಯೆ.

॥ ಭಾವಾರ್ಥ ॥

ದಾನಮನಸ್ಕನೂ, ಋಷಿಗಳಿಂದ ಪ್ರಶಂಸಿತನೂ, ನಮಗೆಲ್ಲಾ ಅತಿಥಿಯಂತೆ ಪೂಜ್ಯನೂ, ಮಂಗಳಕರನೂ, ಸಹಸ್ರಾರು ಜ್ವಾಲೆಗಳುಳ್ಳವನೂ ಕಾಮುವರ್ಷಕನೂ, ಪ್ರಸಿದ್ಧವಾದ ಬಲವುಳ್ಳವನೂ, ಪೂಜಾಯೋಗ್ಯನೂ ಆದ ಅಗ್ನಿಯು ತನ್ನ ಸ್ವಂತಯಜ್ಞಗೃಹದಲ್ಲಿ ಪೂಜಿಸಲ್ಪಡುತ್ತಾನೆ. ಎಲೈ ಅಗ್ನಿಯೇ, ನಿನಗಿಂತ ಬೇರೆಯಾದ ಸಮಸ್ತರನ್ನೂ ನಿನ್ನ ಶಕ್ತಿಯಿಂದ ಮೀರಿಸಿದ ಪ್ರಭಾವವುಳ್ಳವನಾಗಿದ್ದೀಯೆ.

English Translation.

Entitled to worship, he is worshipped in his own (abode); humble-minded, eminent amongst sages, our auspicious guest, the thousand-rayed the showerer (of benefits), of well-known might, you, Agni, surpass all others in strength.

॥ ವಿಶೇಷವಿಷಯಗಳು ॥

ಮಾರ್ಜಾಲ್ಯಃ—ಸಂಮಾರ್ಜನೀಯೋಽಯಮಗ್ನಿಃ । ಮೃಜ್ಯತೇ ಪರಿಚರ್ಯತೇ । ಮೃಜಧಾತುವಿಗೆ ಪರಿಚರಿಸು, ಸೇವಿಸು ಎಂಬರ್ಥವಿರುವುದರಿಂದ ಆ ಧಾತುವಿನಿಂದ ನಿಷ್ಪನ್ನವಾದ ಮಾರ್ಜಾಲ್ಯಃ ಎಂಬ ಶಬ್ದಕ್ಕೆ ಪೂಜಿಸಲ್ಪಡುವ, ಸೇವಿಸಲ್ಪಡುವ ಎಂಬರ್ಥವಿದ್ದು ಅಗ್ನಿಗೆ ವಿಶೇಷಣಪದವಾಗಿದೆ.

ದಮೂನಾಃ—ಈ ಶಬ್ದಕ್ಕೆ ಯಾಸ್ಕರು—

ದಮೂನಾಃ । ದಮೂನಾ ದಮಮನಾ ವಾ, ದಾನಮನಾ ವಾ ದಾಂತಮನಾ ವಾ । ಅಪಿ ವಾ ದಮ ಇತಿ ಗೃಹನಾಮ ತನ್ಮನಾಃಸ್ಯಾತ್ । ಮನೋ ಮನೋತೇಃ ॥ (ನಿ. ೪-೪)

ಎಂದು ನಿರ್ವಚನವನ್ನು ಹೇಳಿರುವರು—ಎಂದರೆ, ದಮೂನಾಃ ಎಂಬ ಶಬ್ದಕ್ಕೆ ಕ್ರೂರಿಯಲ್ಲದವನು ಅಥವಾ ದಯವುಳ್ಳವನೆಂದೂ, ಅಥವಾ ದಾನವನ್ನು ಕೊಡಲು ಮನಸ್ಸುಳ್ಳವನಾಗಿರುವನೆಂದೂ, ಅಥವಾ ತನ್ನ ಮನಸ್ಸನ್ನು ತನ್ನ ನಿಯಮನ ಅಥವಾ ಸ್ವಾಧೀನದಲ್ಲಿಟ್ಟುಕೊಂಡಿರುವವನೆಂದೂ ಮೂರು ವಿಧವಾದ ಅರ್ಥವಿರುವುದು. ಅಥವಾ ದಮ ಎಂಬ ಶಬ್ದಕ್ಕೆ ಮನೆಯೆಂದು ಅರ್ಥವಿರುವುದರಿಂದ ದಮೂನಾಃ ಎಂದರೆ ಮನೆಯಲ್ಲಿ ವಾಸಮಾಡಲು ಆಸಕ್ತಿಯುಳ್ಳವನೆಂದೂ ಅರ್ಥವಾಗಬಹುದು. ಮನಃ ಶಬ್ದವು ಯೋಚಿಸು ಎಂಬರ್ಥವಿರುವ ಮನ್ ಧಾತುವಿನಿಂದ ನಿಷ್ಪನ್ನವಾಗಿದೆ.



॥ ಸಂಹಿತಾಪಾಠಃ ॥

ಪ್ರ ಸದ್ಯೋ ಅಗ್ನೇ ಅತ್ಯೇಷ್ಯನ್ಯಾನಾವಿರ್ಯಸ್ಮೈ ಚಾರುತಮೋ ಬಭೂಥ ॥
ಈಳೇನ್ಯೋ ವಪುಷ್ಯೋ ವಿಭಾವಾ ಪ್ರಿಯೋ ವಿಶಾಮತಿಥಿರ್ಮಾನು-
ಷೀಣಾಂ ॥ ೬ ॥

॥ ಪದಪಾಠಃ ॥

ಪ್ರ । ಸದ್ಯಃ । ಅಗ್ನೇ । ಅತಿ । ಏಷಿ । ಅನ್ಯಾನ್ । ಆವಿಃ । ಯಸ್ಮೈ । ಚಾರುऽತಮಃ । ಬಭೂಥ ।
ಈಳೇನ್ಯಃ । ವಪುಷ್ಯಃ । ವಿಭಾऽವಾ । ಪ್ರಿಯಃ । ವಿಶಾಂ । ಅತಿಥಿಃ । ಮಾನುಷೀಣಾಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಯಜ್ಞಮಾಸಾದ್ಯ ಸದ್ಯಸ್ತದಾನೀಮೇವಾನ್ಯಾನ್ ಸ್ವಸಮಾನಾನತ್ಯೇಷಿ ಅತಿಕ್ರಾಮಸಿ । ಯಸ್ಮೈ ಚಾರುತಮಃ ಸನ್ನಾವಿರ್ಬಭೂವ । ಕಿಂಚ ತ್ವಮೀಳೇನ್ಯಃ ಸ್ತುತ್ಯೋ ವಪುಷ್ಯೋ ವಪುಷ್ಕರೋ ದೀಪ್ತಿಕರೋ ವಾ ವಿಭಾವಾ ವಿಶಿಷ್ಟದೀಪ್ತಿಮಾನ್ ಪ್ರಿಯಃ ಪ್ರಿಯಭೂತೋ ವಿಶಾಂ ಸರ್ವೇಷಾಂ ಪ್ರಾಣಿನಾಂ ತಥಾತಿಥಿಃ ಪೂಜ್ಯೋ ಮಾನುಷೀಣಾಂ ಪ್ರಜಾನಾಂ ಭವಸಿ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯಸ್ಮೈ—ಯಾವ ಯಜಮಾನನಿಗಾಗಿ । ಚಾರುತಮಃ—ಆಕರ್ಷಕವಾದ ರೂಪವುಳ್ಳವನಾಗಿಯೂ । ಪ್ರ—ಅತಿಶಯವಾಗಿಯೂ । ಆವಿರ್ಬಭೂಥ—ಆವಿರ್ಭೂತನಾಗುವೆಯೋ । ಸದ್ಯಃ—ಆ ಒಡನೆಯೇ । ಅನ್ಯಾನ್—ಇತರರಲ್ಲಿಗೂ । ಅತ್ಯೇಷಿ—ದಾಟಿಹೋಗುತ್ತೀಯೆ । ಈಳೇನ್ಯಃ—ಸ್ತುತ್ಯನೂ । ವಪುಷ್ಯಃ—ಸುಂದರರೂಪವುಳ್ಳವನೂ । ವಿಭಾವಾ—ಅತಿಶಯವಾದ ಪ್ರಕಾಶವುಳ್ಳವನೂ । ಪ್ರಿಯಃ—ಪ್ರೀತಿಪಾತ್ರನೂ । ಮಾನುಷೀಣಾಂ ವಿಶಾಂ—ಸಕಲ ಮಾನವ ಪ್ರಜೆಗಳಿಗೂ । ಅತಿಥಿಃ—ಅತಿಥಿಯಂತೆ ಪೂಜ್ಯನೂ (ಆಗಿದ್ದೀಯೆ).

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಯಜಮಾನನಿಗಾಗಿ ನೀನು ಅತಿಶಯವಾದ ದೇಹದ ರೂಪವುಳ್ಳವನಾಗಿ ಆವಿರ್ಭೂತನಾಗುವೆಯೋ, ಆ ಒಡನೆಯೇ, ಇತರರಲ್ಲಿಗೂ ದಾಟಿಹೋಗುತ್ತೀಯೆ. ನೀನು ಸ್ತುತ್ಯನೂ, ಸುಂದರವಾದ ರೂಪವುಳ್ಳವನೂ, ಅತಿಶಯವಾದ ಪ್ರಕಾಶವುಳ್ಳವನೂ, ಪ್ರೀತಿಪಾತ್ರನೂ, ಸಕಲ ಮಾನವಪ್ರಜೆಗಳಿಗೂ ಪೂಜ್ಯನೂ ಆಗಿದ್ದೀಯೆ.

## English Translation.

(Too) quickly, Agni, you pass to others from him to whom you have been manifest: most bcautiful, adorable, radiant, many-shinning, the loved of people, the guest of men.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಎಲೈ ಅಗ್ನಿಯೇ, ನೀನು ಯಾವ ಯಜಮಾನನಿಗೆ ಉಪಕಾರಮಾಡಬೇಕೆಂಬ ಬುದ್ಧಿಯಿಂದ ಅವನ ಯಜ್ಞಗೃಹದಲ್ಲಿ ಆಕರ್ಷಕವಾದ ರೂಪವುಳ್ಳವನಾಗಿ ಎಂದರೆ ಅತ್ಯಂತ ಪ್ರಕಾಶಯುಕ್ತನಾಗಿ ಬೆಳಗುವಿಯೋ ಅಂತಹ ಯಜಮಾನನನ್ನು ಬಿಟ್ಟು ಇತರ ಯಜಮಾನರ ಬಳಿಗೆ ಹೋಗುವುದಿಲ್ಲ. ನಿನ್ನನ್ನು ಸರ್ವರೂ ಸ್ತುತಿಸುವರು. ನಿನ್ನ ರೂಪವು ಬಹಳ ಆಕರ್ಷಕವಾಗಿಯೂ ಕಾಂತಿಯುತವಾಗಿಯೂ ಇದೆ. ಆದ್ದರಿಂದ ನೀನು ಎಲ್ಲರಿಗೂ ಪ್ರೀತಿಪಾತ್ರನೂ ಅತಿಥಿಯಂತೆ ಪೂಜಾರ್ಹನೂ ಆಗಿರುವೆ.

ಅತಿಥಿಃ—ಯಾಸ್ಕರು ಅತಿಥಿಶಬ್ದಕ್ಕೆ ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ । ಅಯಮಪೀತರೋಽತಿಥಿರೇತಸ್ಮಾದೇವ (ನಿ. ೪-೫) ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ಹೊರಗೆ ಸಂಚರಿಸುತ್ತಿದ್ದು ಗೃಹಗಳಿಗೆ ಪೂರ್ವಸೂಚನೆಯಿಲ್ಲದೆ ಬರುವವನು ಅಥವಾ ತನ್ನ ವಂಶವಲ್ಲದ ಅಥವಾ ತನ್ನ ಮನೆಯಲ್ಲದ ಇತರರ ಮನೆಗೆ ಪೌರ್ಣಮಾಸ್ಯಾದಿತಿಥಿಗಳಲ್ಲಿ (ದಿನಗಳಲ್ಲಿ) ಕಾರ್ಯಾರ್ಥವಾಗಿ ಬರುವವನು ಎಂದು ಅತಿಥಿಶಬ್ದಕ್ಕೆ ಅರ್ಥವಿರುವುದು. ಅಥವಾ ತಿಥಿನಿಯಮವಿಲ್ಲದೆ ಯಾವ ದಿನವೆಂದರೆ ಆ ದಿನ ಪರರ ಮನೆಗೆ ಹೋಗುವವನಾದದ್ದರಿಂದ ಇವನಿಗೆ ಅತಿಥಿಯೆಂದು (ತಿಥಿನಿಯಮವಿಲ್ಲದವನು) ಎಂದೂ ಅರ್ಥವಿವರಣೆ ಮಾಡಬಹುದು.



॥ ಸಂಹಿತಾಪಾಠಃ ॥

ತುಭ್ಯಂ ಭರಂತಿ ಕ್ಷಿತಯೋ ಯವಿಷ್ಠ ಬಲಿಮಗ್ನೇ ಅಂತಿತ ಓತ ದೂರಾತ್ ।
ಆ ಭಂದಿಷ್ಠಸ್ಯ ಸುಮತಿಂ ಚಿಕಿದ್ಧಿ ಬೃಹತ್ತೇ ಅಗ್ನೇ ಮಹಿ ಶರ್ಮ ಭದ್ರಂ ॥

॥ ಪದಪಾಠಃ ॥

ತುಭ್ಯಂ । ಭರಂತಿ । ಕ್ಷಿತಯಃ । ಯವಿಷ್ಠ । ಬಲಿಂ । ಅಗ್ನೇ । ಅಂತಿತಃ । ಆ । ಉತ । ದೂರಾತ್ ।

ಆ । ಭಂದಿಷ್ಠಸ್ಯ । ಸುಽಮತಿಂ । ಚಿಕಿದ್ಧಿ । ಬೃಹತ್ । ತೇ । ಅಗ್ನೇ । ಮಹಿ । ಶರ್ಮ । ಭದ್ರಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ ಯುವತಮಾಗ್ನೇ ತುಭ್ಯಂ ಕ್ಷಿತಯೋ ಮನುಷ್ಯಾ ಭರಂತಿ । ಸಂಪಾದಯಂತಿ । ಕಿಂ । ಬಲಿಂ ಪೂಜಾಂ ಹವಿರ್ಲಕ್ಷಣಾಮಂತಿಕೋಽಂತಿಕಾದುತಾಪಿ ಚ ದೂರಾತ್ । ಆ ಇತಿ ಚಾರ್ಥೇ । ಕಿಂಚ ಭಂದಿಷ್ಠಸ್ಯಾತಿಶಯೇನ ಸ್ತೋತುಃ ಸುಮತಿಂ ಸ್ತುತಿಮಾ ಚಿಕಿದ್ಧಿ । ಅಜಾನೀಹಿ । ಹೇ ಅಗ್ನೇ ತೇ ತವ ಶರ್ಮ ಸುಖಮಸ್ಮಭ್ಯಂ ದಾತವ್ಯಂ ಬೃಹನ್ಮಹದ್ಭದ್ರಂ ಸ್ತುತ್ಯಂ ಚ ॥

॥ ಪ್ರತಿಪದಾರ್ಥ ॥

ಯವಿಷ್ಠ—ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ । ಕ್ಷಿತಯಃ—ಮಾನವರೂಪರಾದ ಯಜಮಾನರು । ತುಭ್ಯಂ—ನಿನಗಾಗಿ । ಬಲಿಂ—ಹವಿಸ್ಸಿನೊಡಗೂಡಿದ ಪೂಜೆಯನ್ನು । ಭರಂತಿ—ಸಂಪಾದಿಸುತ್ತಾರೆ । ಅಂತಿತಃ—ಸಮೀಪದಿಂದಾಗಲಿ । ಉತ—ಅಥವಾ । ದೂರಾತ್—ದೂರಪ್ರದೇಶದಿಂದಾಗಲಿ। ಭಂದಿಷ್ಠಸ್ಯ—ಅತಿಶಯವಾಗಿ ಸ್ತುತಿಸುವ ಸ್ತೋತೃವಿನ । ಸುಮತಿಂ—ಶ್ರೇಷ್ಠವಾದ ಸ್ತುತಿಯನ್ನು । ಆ ಚಿಕಿದ್ಧಿ—ಚೆನ್ನಾಗಿ ಅರಿತು (ಸ್ವೀಕರಿಸು) । ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನಿಂದ (ದತ್ತವಾಗುವ) । ಶರ್ಮ—ಸುಖವು । ಬೃಹತ್—ಪ್ರಭೂತವಾದುದೂ । ಮಹಿ—ಮಹತ್ತಾದುದೂ । ಭದ್ರಂ—ಮಂಗಳಾತ್ಮಕವೂ ಆಗಿದೆ.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಮಾನವರೂಪರಾದ ಯಜಮಾನರು ನಿನಗಾಗಿ ಹವಿಸ್ಸಿನೊಡಗೂಡಿದ ಪೂಜೆಯನ್ನು ಸಂಪಾದಿಸಿ ಅರ್ಪಿಸುತ್ತಾರೆ. ಸಮೀಪದಿಂದಾಗಲಿ ಅಥವಾ ದೂರಪ್ರದೇಶದಿಂದಾಗಲಿ, ಅತಿಶಯವಾಗಿ ಸ್ತುತಿಸುವ ಸ್ತೋತೃವಿನ ಶ್ರೇಷ್ಠವಾದ ಸ್ತುತಿಯನ್ನು ಚೆನ್ನಾಗಿ ಅರಿತು ಸ್ವೀಕರಿಸು. ಎಲೈ ಅಗ್ನಿಯೇ, ನಿನ್ನಿಂದ ನಮಗೆ ದತ್ತವಾಗುವ ಸುಖವು ಪ್ರಭೂತವಾದುದೂ, ಮಹತ್ತಾದುದೂ, ಮಂಗಳಾತ್ಮಕವೂ ಆಗಿದೆ.

English Translation.

To you, youngest (of the gods), men present oblations, whether nigh or from far: accept the praise of him who most extols you; for the felicity (which you confer), Agni, is great, vast, auspicious.

॥ ವಿಶೇಷವಿಷಯಗಳು ॥

ಕ್ಷಿತಯಃ—ಕ್ಷಿತಯಃ ಎಂಬ ಶಬ್ದವು ಮನುಷ್ಯಾಃ ನರಃ ಎಂದು ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೩) ಕ್ಷಿತಯಃ ಎಂದರೆ ಮನುಷ್ಯರು.

**ಯವಿಷ್ಠ—ಯುವತಮ** । ಅಗ್ನಿಯನ್ನು ಯವಿಷ್ಠ ಎಂಬ ಶಬ್ದದಿಂದ ಸಂಬೋಧಿಸುವುದು ಋಗ್ವೇದದಲ್ಲಿ ವಿಶೇಷರೂಢಿಯಲ್ಲಿದೆ. ಅಗ್ನಿಯು ಉರಿಯುತ್ತಿರುವಾಗ ಅದಕ್ಕೆ ಸಮಿತ್, ಕಾಷ್ಠ ಮೊದಲಾದವುಗಳನ್ನು ಹಾಕುತ್ತಿದ್ದರೆ ಯಾವಾಗಲೂ ಚೆನ್ನಾಗಿ ಉರಿಯುತ್ತಲೇ ಇರುವುದು. ಮನುಷ್ಯರು ಅಥವಾ ಪ್ರಾಣಿಗಳು ತಮ್ಮ ಮಧ್ಯವಯಸ್ಸಿನಲ್ಲಿ ಪುಷ್ಟಿಕರವಾದ ಆಹಾರಾದಿಗಳಿಂದ ವೃದ್ಧಿಗೊಂಡು ಸಂಪೂರ್ಣ ಶಕ್ತಿಸಾಮರ್ಥ್ಯಗಳಿಂದ ಸಹಿತರಾಗಿರುವಾಗ ಅವರನ್ನು ಯುವಕರು ಎಂದರೆ ತಮ್ಮ ಜೀವಮಾನದಲ್ಲಿ ಅತ್ಯಂತ ಶಕ್ತಿಸಾಮರ್ಥ್ಯಗಳನ್ನು ಹೊಂದಿರುವ ಸ್ಥಿತಿಯಲ್ಲಿರುವವರು ಎಂದು ಹೇಳಬಹುದು. ಅದರಂತೆ ಅಗ್ನಿಯಲ್ಲಿ ಕಾಷ್ಠಾದಿಗಳನ್ನು ಹಾಕುತ್ತಿರುವಾಗ ಅದು ಚೆನ್ನಾಗಿ ಉರಿಯುತ್ತಿರುವುದು. ಅದನ್ನೇ ಯುವಕರ ಸ್ಥಿತಿಗೆ ಹೋಲಿಸಿದೆ. ಮನುಷ್ಯ ಮೊದಲಾದ ಪ್ರಾಣಿಗಳ ಯೌವನವು ಕೆಲವುಕಾಲಮಾತ್ರವಿದ್ದು ಅನಂತರ ಕಡಿಮೆಯಾಗುತ್ತಾ ಬಂದು ಕೊನೆಗೆ ನಷ್ಟವಾಗುವುದು. ಆದರೆ ಅಗ್ನಿಯ ವಿಷಯದಲ್ಲಿ ಹಾಗಲ್ಲ. ಕಾಷ್ಠಾದಿಗಳನ್ನು ಹಾಕಿ ದೀಪ್ತಿಗೊಳಿಸುತ್ತಿರುವವರೆಗೂ ಎಷ್ಟುಕಾಲವಾದರೂ ಚೆನ್ನಾಗಿ ಉರಿಯುತ್ತಿರುವುದರಿಂದ ಅಗ್ನಿಯನ್ನು ಅನೇಕ ಸಂದರ್ಭಗಳಲ್ಲಿ ನಿತ್ಯತರುಣ, ಯಾವಾಗಲೂ ಯುವಕನಾಗಿರುವವನು ಎಂಬ ವಿಶೇಷಣಗಳಿಂದ ಸ್ತುತಿಸುವರು

॥ ಸಂಹಿತಾಪಾಠಃ ॥

ಆದ್ಯ ರಥಂ ಭಾನುಮೋ ಭಾನುಮಂತಮಗ್ನೇ ತಿಷ್ಠ ಯಜತೇಭಿಃ ಸಮಂತಂ ।
ವಿದ್ವಾನ್ಪಥೀನಾಮುರ್ವಂತರಿಕ್ಷಮೇಹ ದೇವಾನ್ಹವಿರದ್ಯಾಯ ವಕ್ಷಿ ॥ ೧೧ ॥

॥ ಪದಪಾಠಃ ॥

ಆ । ಅದ್ಯ । ರಥಂ । ಭಾನುಽಮಃ । ಭಾನುಽಮಂತಂ । ಅಗ್ನೇ । ತಿಷ್ಠ । ಯಜತೇಭಿಃ । ಸಂಽಅಂತಂ ।
ವಿದ್ವಾನ್ । ಪಥೀನಾಂ । ಉರು । ಅಂತರಿಕ್ಷಂ । ಆ । ಇಹ । ದೇವಾನ್ । ಹವಿಃಽಅದ್ಯಾಯ । ವಕ್ಷಿ ॥ ೧೧ ॥

। ಸಾಯಣಭಾಷ್ಯಂ ।

ಹೇ ಭಾನುಮೋ ದೀಪ್ತಿಮನ್ನಗ್ನೇ ಅದ್ಯಾಸ್ಮಿನ್ಯಾಗದಿನೇ ಭಾನುಮಂತಂ ದೀಪ್ತಿಮಂತಂ ಸಮಂತಂ ಸಮಿಾಚೀನಪ್ರಾಂತೋಪೇತಂ ರಥಂ ಯಜತೇಭಿರ್ಯಷ್ಟವ್ಯೈರ್ದೇವೈಃ ಸಹಾ ತಿಷ್ಠ। ಆರೋಹ। ವಿದ್ವಾನ್ಯಷ್ಟವ್ಯದೇವಪರಿಜ್ಞಾನವಾಂಸ್ತ್ವಂ ಪಥೀನಾಂ ದೇವಯಜನಮಾರ್ಗಾನ್ಪ್ರತಿ ॥ ದ್ವಿತೀಯಾರ್ಥೇ ಷಷ್ಠೀ ॥ ಉರ್ವಂತರಿಕ್ಷಂ ಪ್ರಭೂತೇಽಂತರಿಕ್ಷೇ ದೇವಾನ್ಯಷ್ಟವ್ಯಾನ್ಹವಿರದ್ಯಾಯ ಹವಿರ್ಭಕ್ಷಣಾಯೇಹಾ ವಕ್ಷಿ। ಆವಹಸಿ ॥

॥ ಪ್ರತಿಪದಾರ್ಥ ॥

**ಭಾನುಮಃ**—ಪ್ರಭಾವಯುತನಾದ । **ಅಗ್ನೇ**—ಎಲೈ ಅಗ್ನಿಯೇ । **ಅದ್ಯ**—ಈ ಯಾಗದ ದಿನ । **ಯಜತೇಭಿಃ** — ಯಜ್ಞಾರ್ಹರಾದ ಇತರ ದೇವತೆಗಳೊಡನೆ । **ಭಾನುಮಂತಂ** — ಕಾಂತಿಯುತವಾದುದೂ । **ಸಮಂತಂ**—ಅಲಂಕೃತವಾದ ಪ್ರಾಂತಪ್ರದೇಶವುಳ್ಳದ್ದೂ ಆದ । **ರಥಂ**—ನಿನ್ನ ರಥವನ್ನು । **ಆ ತಿಷ್ಠ**—ಹತ್ತಿ ಕುಳಿತಿಕೋ । **ವಿದ್ವಾನ್**—ಸಕಲವನ್ನೂ ತಿಳಿದ ನೀನು । **ಉರ್ವಂತರಿಕ್ಷಂ**—ಪ್ರಭೂತವಾದ ಅಂತರಿಕ್ಷದಲ್ಲಿ । **ಪಥೀನಾಂ**—ಯಜ್ಞಗಮನಮಾರ್ಗದಿಂದ । **ದೇವಾನ್**—ದೇವತೆಗಳನ್ನು । **ಹವಿರದ್ಯಾಯ**—ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ । **ಇಹ**—ಈ ಯಾಗಕ್ಕೆ । **ಆ ವಕ್ಷಿ**—ಕರೆದುಕೊಂಡು ಬಾ ।

॥ ಭಾವಾರ್ಥ ॥

ಪ್ರಭಾವಯುತನಾದ ಎಲೈ ಅಗ್ನಿಯೇ, ಈ ಯಾಗದ ದಿನ, ಯಜ್ಞಾರ್ಹರಾದ ಇತರ ದೇವತೆಗಳೊಡನೆ ಕಾಂತಿಯುತವಾದುದೂ, ಅಲಂಕೃತವಾದ ಪ್ರಾಂತಪ್ರದೇಶವುಳ್ಳದ್ದೂ ಆದ ನಿನ್ನ ರಥವನ್ನು ಹತ್ತಿ ಕುಳಿತುಕೋ, ಸರ್ವಜ್ಞನಾದ ನೀನ ಪ್ರಭೂತವಾದ ಅಂತರಿಕ್ಷದಲ್ಲಿ, ಯಜ್ಞಗಮನಮಾರ್ಗದಿಂದ ದೇವತೆಗಳನ್ನು, ಹವಿಸ್ಸನ್ನು ಸ್ವೀಕರಿಸಿ ಭಕ್ಷಿಸುವುದಕ್ಕಾಗಿ ಈ ಯಾಗಕ್ಕೆ ಕರೆದುಕೊಂಡು ಬಾ.

## English Translation

Ascend to-day, radiant Agni, your resplendent, well-conducted chariot, together with the adorable (gods): cognizant of the ways (of worship), bring hither, by the vast firmament, the gods to partake of the oblation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಜ್ಞಭೂಮಿಗೆ ಬರುವಾಗ ರಥದಲ್ಲಿ ಕುಳಿತುಕೊಂಡು ಯಜ್ಞಾರ್ಹರಾದ ದೇವತೆಗಳನ್ನು ಕರೆದುಕೊಂಡುಬರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಅಗ್ನಿಯ ರಥವು ಅತ್ಯಂತ ಪ್ರಕಾಶಮಾನವಾಗಿರುವುದೆಂದೂ ಇಂತಹ ರಥದಲ್ಲಿ ಹತ್ತಿ ಕುಳಿತುಕೊಂಡು ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು ಭಕ್ಷಿಸುವುದಕ್ಕಾಗಿ ಆಹ್ವಾನಿತರಾದ ದೇವತೆಗಳನ್ನು ಅಂತರಿಕ್ಷಮಾರ್ಗದಿಂದ ಕರೆದುಕೊಂಡುಬರಬೇಕೆಂದೂ ವರ್ಣಿಸಿದೆ.

॥ ಸಂಹಿತಾಪಾಠಃ ॥

ಅವೋಚಾಮ ಕವಯೇ ಮೇಧ್ಯಾಯ ವಚೋ ವಂದಾರು ವೃಷಭಾಯ ವೃಷ್ಣೇ ।
ಗವಿಷ್ಠಿರೋ ನಮಸಾ ಸ್ತೋಮಮಗ್ನೌ ದಿವೀವ ರುಕ್ಮಮುರುವ್ಯಂಚಮಶ್ರೇತ್ ॥ ೧೨ ॥

॥ ಪದಪಾಠಃ ॥

ಅವೋಚಾಮ । ಕವಯೇ । ಮೇಧ್ಯಾಯ । ವಚಃ । ವಂದಾರು । ವೃಷಭಾಯ । ವೃಷ್ಣೇ ।

ಗವಿಷ್ಠಿರಃ । ನಮಸಾ । ಸ್ತೋಮಂ । ಅಗ್ನೌ । ದಿವಿಽಇವ । ರುಕ್ಮಂ । ಉರುಽವ್ಯಂಚಂ । ಅಶ್ರೇತ್ ॥ ೧೨ ॥

॥ ಸಾಯಣಭಾಷ್ಯಂ ॥

ವಯಮಾತ್ರೇಯಾಃ ಕವಯೇ ಮೇಧಾವಿನೇ ಮೇಧ್ಯಾಯ ಮೇಧಾರ್ಹಾಯ ವೃಷಭಾಯ ವರ್ಷಕಾಯ ಫಲಾನಾಂ ವೃಷ್ಣೇ ಸೇಕ್ತ್ರೇ ಯೂನೇ ವಂದಾರು ವಂದನಶೀಲಂ ವಚಃ ಸ್ತೋತ್ರಮವೋಚಾಮ । ಅಥ ಋಷಿರಾತ್ಮಾನಂ ಪರೋಕ್ಷೇಣೈವ ನಿರ್ದಿಶ್ಯ ಸ್ತುತಿಮುಪಸಂಹರತಿ । ಗವಿಷ್ಠಿರೋಽಯಮೃಷಿರ್ನಮಸಾ ನಮಸ್ಕಾರೇಣ ಹವಿಷಾ ವಾ ಯುಕ್ತಂ ಸ್ತೋಮಂ ಸ್ತೋತ್ರಮಗ್ನಾವಶ್ರೇತ್ । ಶ್ರಯತಿ ಸ್ಮ । ದಿವಿ ರುಕ್ಮಂ ರೋಚಮಾನಮುರುವ್ಯಂಚಮುರುಗಮನಮಾದಿತ್ಯಮಿವ ॥

॥ ಪ್ರತಿಪದಾರ್ಥ ॥

ಕವಯೇ—ಮೇಧಾವಿಯೂ । ಮೇಧ್ಯಾಯ—ಪೂಜಾರ್ಹನೂ । ವೃಷಭಾಯ—ಕಾಮವರ್ಷಕನೂ । ವೃಷ್ಣೇ—ಯುವಕನೂ ಆದ ಅಗ್ನಿಯನ್ನುದ್ದೇಶಿಸಿ । ವಂದಾರು—ಪೂಜಾಯೋಗ್ಯವಾದ । ವಚಃ—ಸ್ತುತಿಯನ್ನು । ಅವೋಚಾಮ—ಪಠಿಸುತ್ತೇವೆ । ಗವಿಷ್ಠಿರಃ—ಗವಿಷ್ಠಿರನಾಮಕನಾದ ಈ ಋಷಿಯು । ನಮಸಾ—ನಮಸ್ಕಾರದೊಡನೆ । ಸ್ತೋಮಂ—ಸ್ತೋತ್ರವನ್ನು । ದಿವಿ—ಅಂತರಿಕ್ಷದಲ್ಲಿ । ರುಕ್ಮಂ — ಹೊಂಬಣ್ಣದಿಂದ ಪ್ರಕಾಶಿಸುವವನೂ । ಉರುವ್ಯಂಚಂ—ಆದಿತ್ಯನಂತೆ ಅಧಿಕವಾಗಿ ವ್ಯಾಪಿಸುವವನೂ ಆದ । ಅಗ್ನೌ—ಅಗ್ನಿಯಲ್ಲಿ । ಅಶ್ರೇತ್—ಅರ್ಪಿಸಿದ್ದಾನೆ.

॥ ಭಾವಾರ್ಥ ॥

ಮೇಧಾವಿಯೂ, ಪೂಜಾರ್ಹನೂ, ಕಾಮವರ್ಷಕನೂ, ಯುವಕನೂ ಆದ ಅಗ್ನಿಯನ್ನುದ್ದೇಶಿಸಿ ಪೂಜಾಯೋಗ್ಯವಾದ ಸ್ತುತಿಯನ್ನು ಪಠಿಸುತ್ತೇವೆ. ಗವಿಷ್ಠಿರನಾಮಕನಾದ ಈ ಋಷಿಯು ನಮಸ್ಕಾರ ಪೂರ್ವಕವಾದ ತನ್ನ ಸ್ತೋತ್ರವನ್ನು, ಅಂತರಿಕ್ಷದಲ್ಲಿ ಹೊಂಬಣ್ಣದಿಂದ ಪ್ರಕಾಶಿಸುವವನೂ, ಆದಿತ್ಯನಂತೆ ಅಧಿಕವಾಗಿ ವ್ಯಾಪಿಸುವವನೂ ಆದ ಅಗ್ನಿಯಲ್ಲಿ ಅರ್ಪಿಸಿದ್ದಾನೆ.

English Translation.

We have uttered aloud this encomiastic praise to the wise, holy, vigorous (Agni), the showerer (of benefits): Gavishthira offers with reverence (this) praise to Agni, like the wide-sojourning (sun), effulgent in the sky.

॥ ವಿಶೇಷವಿಷಯಗಳು ॥

ಸೂಕ್ತದ ಉಪಸಂಹಾರರೂಪವಾದ ಈ ಕೊನೆಯ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಗವಿಷ್ಠಿರನೆಂಬ ಋಷಿಯು ತನ್ನ ಹೆಸರನ್ನು ನಿರ್ದೇಶಿಸಿ ಅಗ್ನಿಯನ್ನು ತಾನು ಉತ್ತಮವಾದ ವಾಕ್ಯಗಳಿಂದ ಸ್ತುತಿಸಿ ಆದಿತ್ಯನಂತೆ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಅಗ್ನಿಯಲ್ಲಿ ನಮಸ್ಕಾರಪೂರ್ವಕವಾದ ಸ್ತೋತ್ರವನ್ನೂ, ಹವಿಸ್ಸನ್ನೂ ಅರ್ಪಿಸಿರುವೆನೆಂದು ತನ್ನ ಕರ್ತವ್ಯವನ್ನು ಪ್ರಶಂಸೆಮಾಡಿದ್ದಾನೆ. ಈ ಸೂಕ್ತಕ್ಕೆ ಬುಧ, ಗವಿಷ್ಠಿರ ಎಂಬ ಇಬ್ಬರು ಋಷಿಗಳು ದ್ರಷ್ಟೃಗಳಾಗಿದ್ದರೂ ಇಲ್ಲಿ ಗವಿಷ್ಠಿರ ಎಂಬ ಒಬ್ಬ ಋಷಿಯ ಹೆಸರು ಮಾತ್ರ ಪಠಿತವಾಗಿದೆ. ಬುಧಋಷಿಯ ಹೆಸರನ್ನು ನಿರ್ದೇಶಿಸಿರುವುದಿಲ್ಲ.

# ಎರಡನೆಯ ಸೂಕ್ತವು

## ಪೀಠಿಕೆ.

ಕುಮಾರ; ವೃಶಃ; ಜಾನಃ

ಐದನೆಯ ಮಂಡಲದಲ್ಲಿ ಎರಡನೆಯ ಸೂಕ್ತಕ್ಕೆ ಈ ಮೂವರು ಋಷಿಗಳೂ ದ್ರಷ್ಟೃಗಳೆಂದು ತಿಳಿಸಿದೆ. ಕುಮಾರನೆಂಬುದು ಅಗ್ನಿಯ ಪರ್ಯಾಯನಾಮಗಳಲ್ಲೊಂದು. ಅದೇ ಕುಮಾರಪದದಿಂದ ಈ ಸೂಕ್ತದಲ್ಲಿ ಅಗ್ನಿಯು ನಿರ್ದಿಷ್ಟವಾಗಿ ಇದ್ದಾನೆ. ಅದೇ ಋಷಿನಾಮವೂ ಆಗಿದೆಯೆಂದು ತಿಳಿಸಿದೆ. ಇದಕ್ಕೆ ಈ ಕಾರಣದಿಂದಲೇ ಕೌಮಾರ ಸೂಕ್ತವೆಂದೂ ಹೆಸರಿರಬಹುದು. ಅಗ್ನಿಗೆ ಕುಮಾರನೆಂಬ ಹೆಸರು ಹೇಗೆ ಬಂದಿತು ಎಂಬುದಕ್ಕೆ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> "ತದ್ಯಾನಿ ತಾನಿ ಭೂತಾನಿ । ಋತವಸ್ತೇಽಥ ಯಃ ಸ ಭೂತಾನಾಂ ಪತಿಃ ಸಂವತ್ಸರಃ ಸೋಽಥ ಯಾ ಸೋಷಾಃ ಪತ್ನ್ಯೌಷಸೀ ಸಾ ತಾನಿಮಾನಿ ಭೂತಾನಿ ಚ ಭೂತಾನಾಂ ಪತಿಃ ಸಂವತ್ಸರ ಉಷಸಿ ರೇತೋಽಸಿಂಚನ್ತ್ಸ ಸಂವತ್ಸರೇ ಕುಮಾರೋಽಜಾಯತ........ ॥"
>
> (ಶ. ಬ್ರಾ. ೬-೧-೩-೮)

ಈ ಭೂತಗಳೇ ಋತುಗಳು. ಭೂತಪತಿಯೇ ಸಂವತ್ಸರವು. ಉಷಸ್ಸೇ ಪತ್ನಿಯು. ಭೂತಾತ್ಮಕವಾದ ಋತುಗಳೂ, ಭೂತಪತಿಯಾದ ಸಂವತ್ಸರವೂ ಪತ್ನಿಯಾದ ಉಷಸ್ಸಿನಲ್ಲಿ ರೇತಸ್ಸನ್ನು ಸಿಂಚಿಸಿದವು. ಅದರ ಫಲವಾಗಿ ಕುಮಾರನ ಉತ್ಪತ್ತಿಯಾಯಿತು. ಈ ಕುಮಾರನು ಅಗ್ನಿಯ ಒಂಭತ್ತನೆಯ ರೂಪವು. ಇಂತಹ ಸ್ವರೂಪವುಳ್ಳ ಅಗ್ನಿಯ ಪ್ರಶಂಸೆಯಿರುವುದರಿಂದ ಈ ಸೂಕ್ತದ ದ್ರಷ್ಟೃವಿನ ಹೆಸರೂ ಕುಮಾರನೆಂದೇ ಇರುತ್ತದೆ.

ಇದಲ್ಲದೇ ವೃಶಜಾನ ಎಂಬ ಋಷಿಯೂ ಈ ಸೂಕ್ತದ ಕರ್ತೃವೆಂದೂ ಊಹಿಸಿದೆ. ವೃಶಜಾನ ಎಂಬುವನ ವಿಷಯವನ್ನು ಸೂಕ್ಷ್ಮವಾಗಿ ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ.

> ಐಕ್ಷ್ವಾಕುಸ್ತ್ರ್ಯರುಣೋ ರಾಜಾ ತ್ರೈವೃಷ್ಣೋ ರಥಮಾಸ್ಥಿತಃ ।
> ಸಂಜಗ್ರಾಹಾಶ್ವರಶ್ಮೀಂಶ್ಚ ವೃಶೋ ಜಾನಃ ಪುರೋಹಿತಃ ॥
>
> (ಬೃ. ದೇ. ೫-೧೪)

ಇಕ್ಷ್ವಾಕುವಂಶೋತ್ಪನ್ನನೂ, ತ್ರಿವೃಷ್ಣನ ಪುತ್ರನೂ ಆದ ತ್ರ್ಯರುಣನು ಒಂದುಸಲ ರಥದಲ್ಲಿ ಕುಳಿತು ಹೊರಟನು. ಆಗ ಅವನ ಗೃಹಪುರೋಹಿತನೂ, ಜನಪುತ್ರನೂ ಆದ ವೃಶನು ಅಶ್ವಗಳ ಕಡಿವಾಣಗಳನ್ನು ಹಿಡಿದು ರಥವನ್ನು ನಡೆಸುತ್ತಿದ್ದನು.

ಸ ಬ್ರಾಹ್ಮಣಕುಮಾರಸ್ಯ ರಥೋ ಗಚ್ಛಚ್ಛಿರೋಽಚ್ಛಿನತ್ ।
ಏನಸ್ವೀತ್ಯಬ್ರವೀಚ್ಛೈವ ಸ ರಾಜೈನಂ ಪುರೋಹಿತಂ ॥

(ಬೃ. ದೇ. ೫-೧೫)

ವೃಶಜಾನನು ನಡೆಸುತ್ತಿದ್ದ ಈ ರಥವು ಒಬ್ಬ ಬ್ರಾಹ್ಮಣ ಕುಮಾರನ ಮೈಮೇಲೆ ಹರಿಯಿತು. ಈ ಕಾರಣದಿಂದ ಅವನ ತಲೆಯು ಕತ್ತರಿಸಿಹೋಯಿತು. ಆಗ ತ್ರ್ಯರುಣನು ತನ್ನ ಪುರೋಹಿತನನ್ನು ಕುರಿತು "ನೀನೇ ರಥವನ್ನು ನಡೆಸುತ್ತಿದ್ದುದರಿಂದ ಈ ಹತ್ಯೆಯಿಂದುಂಟಾಗುವ ಪಾಪಕ್ಕೆ ನೀನೇ ಭಾಗಿಯು" ಎಂದು ನಿಷ್ಕೃಷ್ಟವಾಗಿ ಹೇಳಿದನು.

ಸೋಽಥರ್ವಾಂಗಿರಸಾನ್ ಮಂತ್ರಾನ್ ದೃಷ್ಟ್ವಾ ಸಂಜೀವ್ಯ ತಂ ಶಿಶುಂ ।
ಕ್ರೋಧಾತ್ಸಂತ್ಯಜ್ಯ ರಾಜಾನಮನ್ಯದೇಶಂ ಸಮಾಶ್ರಿತಃ ॥

(ಬೃ. ದೇ. ೫-೧೬)

ರಾಜನು ಈ ರೀತಿ ಕಠಿಣವಾಗಿ ಹೇಳಲು, ವೃಶನ ಮನಸ್ಸಿಗೆ ಖೇದವುಂಟಾಯಿತು. ಒಡನೆಯೇ ಅವನು ಅಥರ್ವಾಂಗಿರಸಮಂತ್ರಗಳನ್ನು ಸಾಕ್ಷಾತ್ಕರಿಸಿಕೊಂಡು ಅವುಗಳನ್ನು ಪಠಿಸಿದನು. ಆ ಮಂತ್ರಗಳ ಪ್ರಭಾವದಿಂದ ಆ ಮಗುವಿನ ಪ್ರಾಣವು ಬಂದಿತು. ಆದರೂ ಸಹ, ರಾಜನ ನಿಷ್ಠುರವಾದ ಮಾತಿಗೆ ಅಸಮಾಧಾನಗೊಂಡು ಕೋಪದಿಂದ ಆ ರಾಜನನ್ನು ತ್ಯಜಿಸಿ, ಬೇರೆ ದೇಶದ ರಾಜನನ್ನು ಆಶ್ರಯಿಸಲು ಹೊರಟುಹೋದನು.

ಹರೋಽಪ್ಯಗ್ನೇರ್ನನಾಶಾಸ್ಯ ತಸ್ಯಾಪಕ್ರಮಣಾದ್ವೃಷೇಃ ।
ಅಗ್ನೌ ಪ್ರಾಸ್ತಾನಿ ಹವ್ಯಾನಿ ನ ಹ್ಯಪಚ್ಯಂತ ಕಾನಿಚಿತ್ ॥

(೫-೧೭)

ಪುರೋಹಿತನು ಈ ರೀತಿ ಕೋಪಿಸಿಕೊಂಡು ಹೊರಟುಹೋದುದರ ಫಲವಾಗಿ ಆ ರಾಜನ ಗೃಹದಲ್ಲಿ ಅಗ್ನಿಯ ಶಾಖವೂ ನಾಶವಾಯಿತು. ಅವನು ಅರ್ಪಿಸಿದ ಆಹುತಿಗಳಲ್ಲಿ ಯಾವುದೂ ಪಕ್ವವಾಗಲಿಲ್ಲ. ಅವನ ಯಾಗಪ್ರಯತ್ನಗಳೆಲ್ಲಾ ವಿಫಲವಾದವು.

ತತಃ ಪ್ರವ್ಯಥಿತೋ ರಾಜಾ ಸೋಽಭಿಗಮ್ಯ ಪ್ರಸಾದ್ಯ ತಂ ।
ಆನೀತ್ವಾ ಸ ವೃಶಂ ಜಾನಂ ಪುನರೇವ ಪುರೋದಧೇ ॥

(೫-೧೮)

ಪುರೋಹಿತನೂ ಹೊರಟುಹೋಗಿ, ಅದರ ಫಲವಾಗಿ ಅದರ ಅಗ್ನಿಯ ಪ್ರಭಾವವೂ ಲುಪ್ತವಾದುದರಿಂದ ರಾಜನು ಬಹಳ ದುಃಖಿತನಾದನು. ಅನಂತರ ವೃಶಜಾನನಿದ್ದಲ್ಲಿಗೆ ಹೋಗಿ, ಅವನನ್ನು ಪೂಜಾದಿಗಳಿಂದ ಸತ್ಕರಿಸಿ ಅವನನ್ನು ಪುನಃ ಕರೆತಂದನು ಮತ್ತು ತಿರುಗಿಯೂ ತನ್ನ ಪುರೋಹಿತನನ್ನಾಗಿ ಮಾಡಿಕೊಂಡನು.

ಸ ಪ್ರಸನ್ನೋ ವೃಶೋऽನ್ನೈಚ್ಛದ್ಧರಮಗ್ನೇರ್ನೃಪಕ್ಷಯೇ ।
ಅವಿಂದತ ಪಿಶಾಚೀಂ ತಾಂ ಜಾಯಾಂ ತಸ್ಯ ಚ ಭೂಪತೇಃ ॥ (೫–೧೯).

ವೃಶಜಾನನು ರಾಜನ ಪಶ್ಚಾತ್ತಾಪದಿಂದಲೂ ಅವನ ಪೂಜೆಗಳಿಂದಲೂ ಸಮಾಧಾನಗೊಂಡು ಅವನ ಪೌರೋಹಿತ್ಯ ವನ್ನು ಪುನಃ ಸ್ವೀಕರಿಸಿದನು. ನಂತರ ರಾಜನ ಗೃಹದಲ್ಲಿ ಅಗ್ನಿಯನ್ನು ಸ್ಥಾಪಿಸಿ ಆ ಅಗ್ನಿಯ ಶಾಖವು ಪುನಃ ಉಂಟಾಗಲಿ ಎಂದು ಪ್ರಾರ್ಥಿಸಿದನು. ಆದರೆ, ಆ ಪ್ರಾರ್ಥನೆಯ ಫಲವಾಗಿ ರಾಜನಿಗೆ ಪೈಶಾಚೀರೂಪದ ಪತ್ನಿಯು ಲಭಿಸಿದುದನ್ನು ಕಂಡನು.

ನಿಷಣ್ಣಸ್ಸ ತಯಾ ಸಾರ್ಧಂ ಆಸಂದ್ಯಾಂ ಕಶಿಪಾವಪಿ ।
ತಾಮುಪಾಮಂತ್ರಯಾಂಚಕ್ರೇ ಕಮೇತಂ ತ್ವಮಿತಿ ತ್ವೃಚಾ ॥ (೫–೨೦)

ಆಗ ಆ ಪೈಶಾಚೀರೂಪದ ರಾಜನ ಪತ್ನಿಯೊಡನೆ ತಾನೇ ಆಸನದಲ್ಲಿ ಕುಳಿತು “ ಕಮೇತಂ ತ್ವಂ ” (ಋ. ಸಂ. ೫–೨–೨) ಎಂಬ ಮಂತ್ರವನ್ನು ಪಠಿಸಿ ಅವಳನ್ನು “ ಎಲೈ ಯುವತಿಯೇ, ನೀನು ಪೈಶಾಚೀರೂಪವನ್ನು ಧರಿಸಿ ಪೋಷಿಸುವ ಈ ಬಾಲಕನಾರು? ” ಇತ್ಯಾದಿಯಾಗಿ ಪ್ರಶ್ನಿಸಿದನು.

ಹರಃ ಕುಮಾರರೂಪೇಣ ಬ್ರುವಂಸ್ತಾಮಭ್ಯಭಾಷತ ।
ವಿಜ್ಯೋತಿಷೇತಿ ಚೋಕ್ತಾಯಾಂ ಸಹಸಾಗ್ನಿರುದಜ್ವಲತ್ ॥ (೫–೨೧)

ಅಗ್ನಿತಾಪವನ್ನು ಕುಮಾರನೆಂದು ನಿರ್ದೇಶಿಸಿ, ಆ ಪೈಶಾಚೀಸ್ತ್ರೀಯನ್ನು ಮೇಲೆ ಹೇಳಿದ ಮಂತ್ರದಿಂದ (೫–೨–೨) ಪ್ರಶ್ನಿಸಿದೊಡನೆಯೇ, ಪುನಃ “ ವಿ ಜ್ಯೋತಿಷಾ.... ” (೫–೨–೯) ಎಂಬ ಮಂತ್ರವನ್ನು ಪಠಿಸಿದನು.” ಅಗ್ನಿಯು ಮಹತ್ತಾದುದೂ, ವೈವಿಧ್ಯದಿಂದ ಕೂಡಿದುದೂ ಆದ ಜ್ವಾಲೆಗಳಿಂದ ಪ್ರಕಾಶಿಸುತ್ತಿದ್ದಾನೆ. ಅವನು ತನ್ನ ಜ್ವಾಲೆ ಗಳನ್ನು ಬಹಳ ತೀಕ್ಷ್ಣವಾಗುವಂತೆ ಮಾಡಿಕೊಳ್ಳುತ್ತಾನೆ ” ಎಂಬುದೇ ಆ ಮಂತ್ರದ ತಾತ್ಪರ್ಯ. ಈ ಮಂತ್ರವನ್ನು ಪಠಿಸಿದೊಡನೆಯೇ ಅಗ್ನಿಯ ಮಹತ್ತಾದ ಜ್ವಾಲೆಯು ಪ್ರಾದುರ್ಭೂತವಾಯಿತು.

ಸಹಮಾನಃ ಸಮಾಯಾಂತಂ ಪ್ರಕಾಶಂ ಚ ಪ್ರಕಾಶಯನ್ ।
ಪಿಶಾಚೀಮದಹತ್ತಾಂ ಸ ಯತ್ರ ಚೋಪವಿವೇಶ ಸಾ ॥ (೫–೨೨)

ಮಹತ್ತಾದ ಆ ಅಗ್ನಿಜ್ವಾಲೆಯು ತನ್ನ ಮಹತ್ಪ್ರಭೆಯಿಂದ ಪ್ರಕಾಶಿಸುತ್ತಾ, ತನ್ನನ್ನು ಸಮೀಪಿಸಿದವರನ್ನೆಲ್ಲಾ ದೂರಕ್ಕೆ ಓಡಿಸುತ್ತಾ ಕೊನೆಗೆ ಆ ಪೈಶಾಚೀರೂಪದ ಸ್ತ್ರೀಯನ್ನು ಕುಳಿತಿದ್ದ ಜಾಗದಲ್ಲಿಯೇ ದಹಿಸಿ ಭಸ್ಮವಾಗುವಂತೆ ಮಾಡಿತು. ಇದೇ ವೃಶಜಾನನ ಮಹಚ್ಛಕ್ತಿವರ್ಣನಾತ್ಮಕವಾದ ಕಥೆ. ಈ ಮಹತ್ತ್ವವನ್ನು ಪ್ರಶಂಸಿಸುವ ೫–೨–೨ ಮತ್ತು ೫–೨–೯ ನೇ ಮಂತ್ರಗಳು ಬೇರೆಕಡೆಗಳಲ್ಲಿಯೂ ಪ್ರಶಂಸಿತವಾಗಿವೆ.

ಏಷ ಏವ ಪರಾಮೃಷ್ಟೋ ಭಾಲ್ಲವಿಬ್ರಾಹ್ಮಣೇ ತ್ವೃಚಃ ।
ನಿದಾನಸಂಜ್ಞಕೇ ಗ್ರಂಥೇ ಛಂದೋಗಾನಾಮಿತಿ ಶ್ರುತಿಃ ॥ (೫–೨೩)

ಈ ಮಂತ್ರಗಳೆರಡೂ ಸಹ ಭಾಲ್ಲವೀಬ್ರಾಹ್ಮಣದಿಂದ ಉದಾಹೃತವಾಗಿವೆ. ಮತ್ತು ಛಂದೋಗರ ನಿದಾನಗ್ರಂಥದಲ್ಲಿಯೂ ಪ್ರಶಂಸಿತವಾಗಿವೆ. ಇದು ವೃಶಜಾನನ ಮಹತ್ವವನ್ನು ತಿಳಿಸುವ ಸನ್ನಿವೇಶವಾಗಿದೆ. ಮೇಲೆ ಉದಾಹೃತವಾಗಿರುವ ಈ ಕಥೆಯನ್ನೇ ಸಾಯಣರು ಋ. ಸಂ. ೫-೨-೧ ನೇ ಮಂತ್ರದ ಭಾಷ್ಯದ ಸಂದರ್ಭದಲ್ಲಿ ತಿಳಿಸಿದ್ದಾರೆ.

॥ ಸಾಯಣಭಾಷ್ಯಂ ॥

ಕುಮಾರಂ ಮಾತೇತಿ ದ್ವಾದಶರ್ಚಂ ದ್ವಿತೀಯಂ ಸೂಕ್ತಂ । ಅತ್ರೇಃ ಪುತ್ರಃ ಕುಮಾರಃ ಋಷಿರ್ಜನನಾಮ್ನಃ ಪುತ್ರೋ ವೃಶೋ ವೋಭೌ ವಾತ್ರ ಋಷೀ । ಕಮೇತಂ ತ್ವಂ ವಿ ಜ್ಯೋತಿಷೇತ್ಯನ-ಯೋಸ್ತು ವೃಶ ಏವ ನೋಭೌ ನ ಕುಮಾರಃ । ಅಂತ್ಯಾ ಷಟ್ಪಂಚಾಶದಕ್ಷರಾ ಶಕ್ವರೀ ಶಿಷ್ಟಾಸ್ತ್ರಿಷ್ಟುಭಃ । ಅಗ್ನಿರ್ದೇವತಾ । ಅತ್ರಾನುಕ್ರಮಣಿಕಾ । ಕುಮಾರಂ ಕುಮಾರೋ ವೃಶೋ ವಾ ಜಾನ ಉಭೌ ವಾ ಶಕ್ವರ್ಯಂತಂ ಕಂ ವೀತ್ಯೃಚೋಸ್ತು ವೃಶ ಏವೇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಸ್ಯಾಪಿ ಸೂಕ್ತಸ್ಯ ವಿನಿಯೋಗ ಉಕ್ತಃ ಪೂರ್ವಸೂಕ್ತೇನ ಸಹ ॥

ಅನುವಾದವು—ಕುಮಾರಂ ಮಾತಾ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಋಷಿಯ ಪುತ್ರನಾದ ಕುಮಾರಃ ಎಂಬುವನು ಋಷಿಯು; ಅಥವಾ ಜನ ಎಂಬ ಹೆಸರಿನ ಋಷಿಯ ಪುತ್ರನಾದ ವೃಶಃ ಎಂಬುವನು ಋಷಿಯು; ಅಥವಾ ಈ ಇಬ್ಬರೂ ಈ ಸೂಕ್ತಕ್ಕೆ ಋಷಿಗಳಾಗಬಹುದು. ಆದರೆ ಈ ಸೂಕ್ತದ ಕಮೇತಂ ತ್ವಂ (೨ ನೆಯ ಋಕ್ಕು) ಮತ್ತು ವಿ ಜ್ಯೋತಿಷಾ (೯ ನೇ ಋಕ್ಕು) ಎಂಬ ಈ ಎರಡು ಋಕ್ಕುಗಳಿಗೆ ಮಾತ್ರ ವೃಶಃ ಎಂಬುವನೊಬ್ಬನೇ ಋಷಿಯು. ಮೇಲೆ ಹೇಳಿದಂತೆ ಕುಮಾರನಾಗಲಿ ಅಥವಾ ಇಬ್ಬರೂ ಆಗಲಿ ಋಷಿಗಳಲ್ಲ; ಅಗ್ನಿಯು ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ಐವತ್ತಾರು ಅಕ್ಷರಗಳುಳ್ಳ ಶಕ್ವರೀ ಎಂಬ ಛಂದಸ್ಸಿನದು. ಉಳಿದ ಋಕ್ಕುಗಳೆಲ್ಲಾ ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಕುಮಾರಂ ಕುಮಾರೋ ವೃಶೋ ವಾ ಜಾನ ಉಭೌ ವಾ ಶಕ್ವರ್ಯಂತಂ ಕಂ ವೀತ್ಯೃಚೋಸ್ತು ವೃಶ ಏವ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ವಿನಿಯೋಗದಲ್ಲಿಯೇ ಹೇಳಲಾಗಿದೆ.

## ಸೂಕ್ತ—೨

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೨ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೧೪, ೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

॥ ಋಷಿಃ—೧, ೩-೪, ೧೦-೧೨. ಕುಮಾರ ಆತ್ರೇಯೋ ವೃಶೋ ವಾ ಜಾನ ಉಭೌ ವಾ,

೨, ೯. ವೃಶೋ ಜಾನಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೧೧. ತ್ರಿಷ್ಟುಪ್ । ೧೨. ಶಕ್ವರೀ ॥

॥ ಸಂಹಿತಾಪಾಠಃ ॥

ಕುಮಾರಂ ಮಾತಾ ಯುವತಿಃ ಸಮುಬ್ಧಂ ಗುಹಾ ಬಿಭರ್ತಿ ನ ದದಾತಿ
ಪಿತ್ರೇ।

ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹಿತಮರತೌ ॥ ೧ ॥

॥ ಪದಪಾಠಃ ॥

ಕುಮಾರಂ । ಮಾತಾ । ಯುವತಿಃ । ಸಂऽಉಬ್ಧಂ । ಗುಹಾ । ಬಿಭರ್ತಿ । ನ । ದದಾತಿ । ಪಿತ್ರೇ ।

ಅನೀಕಂ । ಅಸ್ಯ । ನ । ಮಿನತ್ । ಜನಾಸಃ । ಪುರಃ । ಪಶ್ಯಂತಿ । ನಿऽಹಿತಂ । ಅರತೌ ॥ ೧ ॥

॥ ಸಾಯಣಭಾಷ್ಯಂ ॥

ಶಾಟ್ಯಾಯನಬ್ರಾಹ್ಮಣೋಕ್ತ ಇತಿಹಾಸ ಇಹೋಚ್ಯತೇ। ರಾಜಾ ತ್ರೈವೃಷ್ಣ ಐಕ್ಷ್ವಾಕಸ್ತ್ರ್ಯರುಣೋಽಭವದಸ್ಯ ಚ ॥ ಪುರೋಹಿತೋ ವೃಶೋ ಜಾನ ಋಷಿರಾಸೀತ್ತದಾ ಖಲು । ಸಂಗೃಹ್ಣಂತಿ ರಥಾನ್ರಾಜ್ಞಾಂ ರಕ್ಷಣಾಯ ಪುರೋಹಿತಾಃ ॥ ತ್ರ್ಯರುಣಸ್ಯ ವೃಶೋ ರಶ್ಮಿಂ ಸಂಜಗ್ರಾಹ ಪುರೋಹಿತಃ । ಕುಮಾರೋ ವರ್ತ್ಮನಿ ಕ್ರೀಡನ್ರಥಚಕ್ರೇಣ ಘಾತಿತಃ ॥ ಛಿನ್ನಃ ಕುಮಾರಶ್ಚಕ್ರೇಣ ಮಮಾರಾಥ ಪುರೋಹಿತಃ । ತ್ವಂ ಹಂತಾಸ್ಯೇತಿ ರಾಜಾನಂ ರಾಜಾ ಚಾಪಿ ಪುರೋಹಿತಂ ॥ ತ್ವಂ ಹಂತಾಸ್ಯ ಕುಮಾರಸ್ಯ ನಾಹಮಿತ್ಯಬ್ರವೀತ್ತದಾ । ಯತಸ್ತ್ವಂ ರಥವೇಗಸ್ಯ ನಿಯಂತಾತಸ್ತ್ವಯಾ ಹತಃ ॥ ರಥಸ್ವಾಮೀ ಯತೋ ರಾಜನ್ ತಸ್ಮಾತ್ತ್ವಂ ತಸ್ಯ ಘಾತಕಃ । ಏವಂ ವಿವದಮಾನೌ ತಾವಿಕ್ಷ್ವಾಕೂನ್ಪ್ರಷ್ಟುಮಾಗತೌ ॥ ತಾ ಪಪ್ರಚ್ಛತುರಿಕ್ಷ್ವಾಕೂನ್ ಕೇನಾಸೌ ನಿಹತೋ ದ್ವಿಜಾಃ । ತೇಽಬ್ರುವನ್ರಥಯಂತಾರಂ ಹಂತಾರಂ ವೃಶಸಂಜ್ಞಕಂ ॥ ಸ ವೃಶೋ ವಾರ್ಶಸಾಮ್ನಾ ತಂ ಕುಮಾರಂ ಸಮಜೀವಯತ್ । ಏವಮಾಖ್ಯಾಯ ತತ್ರೈವ ಪುನರನ್ಯದುದೀರಿತಂ ॥ ಯತ ಇಕ್ಷ್ವಾಕವೋ ರಾಗಾದ್ಧಂತಾರಮೃಷಿಮಬ್ರುವನ್ । ತಸ್ಮಾತ್ತೇಷಾಂ ಗೃಹೇಷ್ವಗ್ನೇಸ್ತೇಜೋ ನಿರ್ಗತಮೇಷು ಚ ॥ ಗೃಹೇ ಪಾಕಾದಯೋ ನಾಸನ್ ತತ್ಕಾರಣಮಚಿಂತಯನ್। ವೃಶಂ ಕುಮಾರಹಂತಾರಂ ಯದವೋಚಾಮ ತೇನ ನಃ ॥ ಅಪಾಕ್ರಮದ್ಧರೋ ವಹ್ನೇರಾಹ್ವಯಾಮ ವೃಶಂ ವಯಂ । ಇತಿ ಸಂಚಿಂತ್ಯ ತಮೃಷಿಮಾಹ್ವಯಾಮಾಸುರಾಪರಾತ್ ॥ ಸಮಾಗತ್ಯ ತತಃ ಶೀಘ್ರಂ ತೇಷಾಮಗ್ನೇರ್ಹರೋ ಭವೇತ್ । ಇತಿ ವಾರ್ಶೇನ ಸಾಮ್ನಾಸಾವಕಾಮಯತ ಪೂರ್ವವತ್ ॥ ಏವಂ ಗಾಯನ್ ಸ ಋಷಿರ್ಬ್ರಹ್ಮಹತ್ಯಾಂ ಭಾರ್ಯಾಜಾತಾಂ ಪ್ರಸದಸ್ಯೋರ್ನೃಪಸ್ಯ । ಪಿಶಾಚವೇಷಾಂ ಹರ ಆದಾಯ ಚಾಗ್ನೇರ್ಗೃಹಾನ್ನೀತ್ವಾ ಕಶಿಪೌ ಸ್ಥಾಪಯಂತೀಂ ॥ ದೃಷ್ಟ್ವಾ ಸಮ್ಯಕ್ ತದ್ಧರಸ್ತೋಷಯಿತ್ವಾ ಸಾಮ್ನಾ ಪಶ್ಚಾದ್ಯೋಜಯಾಮಾಸ ಚಾಗ್ನಿಂ । ತತಃ ಸತೇಜಾಃ ಸಂಜಾತೋಽಭವತ್ಪಾಕಾದಿಃ ಪೂರ್ವವತ್॥ ಏವಂ ಶಾಟ್ಯಾಯನೇನೋಕ್ತಂ ಕಾಂಡಕೋಕ್ತಮಥೋಚ್ಯತೇ । ವೃಶಃ ಪುರೋಧಾ ಅಭವತ್ತ್ರ-

ಸದಸ್ಯೋರ್ವ್ಯರ್ಹೀಪತೇಃ ॥ ಸ ರಥಂ ಧಾವಯನ್ರಾಜಾ ಬ್ರಾಹ್ಮಣಸ್ಯ ಕುಮಾರಕಂ । ಚಿಚ್ಛೇದ ರಥಚಕ್ರೇಣ ಪ್ರಮಾದಾತ್ಸೋಽಬ್ರವೀದ್ವೃಶಂ ॥ ಪುರೋಹಿತೇ ವರ್ತಮಾನೇ ತ್ವಯಿ ಮಾಂ ಹಂತಿ ರಾಗತಾ । ಏಷಾ ತ್ವಯಾಪನೇತವ್ಯಾ ಋಷಿಮಿತ್ಯಬ್ರವೀನ್ನೃಪಃ ॥ ಸ ಋಷಿರ್ವಾರ್ಶಸಾಮ್ನಾ ತಂ ಕುಮಾರಮುದಜೀವಯತ್ ॥ ಮಾತಾ ಕುಮಾರಸ್ಯೋತ್ಪಾದಯಿತ್ರೀ ಯುವತಿರ್ಯೌವನೋಪೇತಾ ಕುಮಾರಂ ಪಥಿ ಸಂಚರಂತಂ ಸಮುಬ್ಧಂ ಚಕ್ರೇಣ ಹತಂ ಗುಹಾ ಗುಹಾಯಾಂ ಭಿಭರ್ತಿ । ಧಾರಯತಿ । ನ ದದಾತಿ ಪಿತ್ರೇ ತಸ್ಯ ಜನಕಾಯ । ಯದ್ವಾ । ಮಾತಾ ಸರ್ವಸ್ಯ ನಿರ್ಮಾತ್ರೀ ಪೃಥಿವೀ ಸಮುಬ್ಧಂ ಸಮ್ಯಕ್ ನಿಗೂಢಂ ಗುಹಾ ಬಿಭರ್ತಿ । ನ ದದಾತಿ ಪಿತ್ರೇ । ಅಸ್ಯ ಕುಮಾರಸ್ಯಾನೀಕಂ ರೂಪಂ ಮಿನತ್ ಹಿಂಸಿತಂ ಜನಾಸೋ ಜನಾ ನ ಪಶ್ಯಂತಿ । ಕಿಂತು ಅರತಾವರಮಣೇ ದೇಶೇ ನಿಹಿತಂ ಸ್ಥಿತಂ ಪುರಃ ಪುರೋದೇಶೇ ಪಶ್ಯಂತಿ । ಅಥವಾಯಂ ವೃಶೇನ ಪುನರುಜ್ಜೀವಿತಃ ಕುಮಾರ ಆತ್ಮಾನಮುಪರೋಕ್ಷತಯಾ ವಕ್ತಿ । ಕಥಯತಿ । ಜಾನೋ ವಾ ತಂ ಜೀವಯಿತ್ವಾ ವಕ್ತಿ । ಅಥವಾ ಸೂಕ್ತಸ್ಯಾಗ್ನೇಯತ್ವಾತ್ಕುಮಾರ ಇತ್ಯಗ್ನಿರುಚ್ಯತೇ । ತಂ ಮಾತಾರಣಿರ್ಯುವತಿರ್ಮಿಶ್ರಯಂತೀ ಸಮುಬ್ಧಂ ನಿಗೂಢಂ ಗುಹಾಯಾಂ ಬಿಭರ್ತಿ । ಪಿತ್ರ ಉತ್ಪಾದಕಾಯ ಯಜಮಾನಾಯ ನ ದದಾತಿ । ಅಸ್ಯಾಗ್ನೇರ್ಮಿನತ್ ಹಿಂಸತ್ ದಾಹಕಮನೀಕಂ ತೇಜೋ ಜನಾ ನ ಪಶ್ಯಂತಿ । ಕಿಂತು ಅರತಾವರಣ್ಯಾಂ ಹಿತಂ ಪಶ್ಯಂತಿ ॥

॥ ಪ್ರತಿಪದಾರ್ಥ ॥

ಯುವತಿಃ—ಯೌವನೋಪೇತಳಾದ । ಮಾತಾ—ತಾಯಿಯು । ಸಮುಬ್ಧಂ—ಚಕ್ರದಿಂದ ಹಿಂಸಿತನಾದ । ಕುಮಾರಂ—ಪುತ್ರನನ್ನು । ಗುಹಾ—ರಹಸ್ಯದಲ್ಲಿ । ಬಿಭರ್ತಿ—ಧರಿಸುತ್ತಾಳೆ । ಪಿತ್ರೇ—ಪುತ್ರನ ತಂದೆಗೆ । ನ ದದಾತಿ—ಒಪ್ಪಿಸುವುದಿಲ್ಲ । ಅಸ್ಯ—ಈ ಕುಮಾರನ । ಮಿನತ್—ಹಿಂಸಿತವಾದ । ಅನೀಕಂ—ರೂಪವನ್ನು । ಜನಾಸಃ—ಜನಗಳು । ನ ಪಶ್ಯಂತಿ—ನೋಡುವುದಿಲ್ಲ (ಆದರೆ) । ಪುರಃ—ತಮ್ಮ ಮುಂಭಾಗದಲ್ಲಿ । ಅರತೌ—ಕ್ಷುಬ್ಧವಾದ ಸ್ಥಿತಿಯಲ್ಲಿ । ನಿಹಿತಂ—ಇಡಲ್ಪಟ್ಟ ಪುತ್ರನನ್ನು (ಮಾತ್ರ) । ಪಶ್ಯಂತಿ—ನೋಡುತ್ತಾರೆ.

॥ ಭಾವಾರ್ಥ ॥

ಯೌವನೋಪೇತಳಾದ ತಾಯಿಯು ಚಕ್ರದಿಂದ ಹಿಂಸಿತನಾದ ಪುತ್ರನನ್ನು ರಹಸ್ಯದಲ್ಲಿ ಧರಿಸುತ್ತಾಳೆ. ಪುತ್ರನ ತಂದೆಗೆ ಒಪ್ಪಿಸುವುದಿಲ್ಲ. ಆದರೆ ತಮ್ಮ ಮುಂಭಾಗದಲ್ಲಿ ಕ್ಷುಬ್ಧವಾದ ಸ್ಥಿತಿಯಲ್ಲಿ ಇಡಲ್ಪಟ್ಟ ಪುತ್ರನನ್ನು ಮಾತ್ರ ನೋಡುತ್ತಾರೆ.

## English Translation.

The young mother cherishes her mutilated boy in secret, and gives him not up to the father : men behold not his mutilated form, but (see him) when placed before (them) in an unresting (position).

|| ವಿಶೇಷವಿಷಯಗಳು ||

ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ವಿವರಿಸಿರುವ ವಿಷಯವಾಗಿ ಭಾಷ್ಯಕಾರರು ಸಾಮವೇದದ ಶಾಟ್ಯಾಯನಬ್ರಾಹ್ಮಣದಲ್ಲಿ ಉಕ್ತವಾಗಿರುವ ಕಥಾಸಂದರ್ಭವನ್ನು ಈ ರೀತಿ ವಿರಿವಸಿದಾರೆ—

ಶಾಟ್ಯಾಯನಬ್ರಾಹ್ಮಣೋಕ್ತ ಇತಿಹಾಸ ಇಹೋಚ್ಯತೇ ।
ರಾಜಾ ತ್ರ್ಯವೃಷ್ಣ ಐಕ್ಷ್ವಾಕಃ ತ್ರ್ಯರುಣೋಽಭವದಸ್ಯ ಚ ॥
ಪುರೋಹಿತೋ ವೃಶೋ ಜಾನ ಋಷಿರಾಸೀತ್ತದಾ ಖಲು ।
ಸಂಗೃಹ್ಣಂತಿ ರಥಾನ್ ರಾಜ್ಞಾಂ ರಕ್ಷಣಾಯ ಪುರೋಹಿತಾಃ ॥
ತ್ರ್ಯರುಣಸ್ಯ ವೃಶೋ ರಶ್ಮಿಂ ಸಂಜಗ್ರಾಹ ಪುರೋಹಿತಃ ।
ಕುಮಾರೋ ವರ್ತ್ಮನಿ ಕ್ರೀಡನ್ರಥಚಕ್ರೇಣ ಘಾತಿತಃ ॥
ಭಿನ್ನಃ ಕುಮಾರಶ್ಚಕ್ರೇಣ ಮಮಾರಾಥ ಪುರೋಹಿತಃ ।
ತ್ವಂ ಹಂತಾಸ್ಯೇತಿ ರಾಜಾನಂ ರಾಜಾ ಚಾಪಿ ಪುರೋಹಿತಂ ॥
ತ್ವಂ ಹಂತಾಸ್ಯ ಕುಮಾರಸ್ಯ ನಾಽಹಮಿತ್ಯಬ್ರವೀತ್ತದಾ ।
ಯತಸ್ತ್ವಂ ರಥವೇಗಸ್ಯ ನಿಯಂತಾತಸ್ತ್ವಯಾ ಹತಃ ॥
ರಥಸ್ವಾಮೀ ಯತೋ ರಾಜನ್ ತಸ್ಮಾತ್ತ್ವಂ ತಸ್ಯ ಘಾತಕಃ ।
ಏವಂ ವಿವದಮಾನೌ ತಾವಿಕ್ಷ್ವಾಕೂನ್ಪ್ರಷ್ಟುಮಾಗತೌ ॥
ತೌ ಪಪ್ರಚ್ಛತುರಿಕ್ಷ್ವಾಕೂನ್ ಕೇನಾಸೌ ನಿಹತೋ ದ್ವಿಜಃ ।
ತೇಽಬ್ರುವನ್ರಥಯಂತಾರಂ ಹಂತಾರಂ ವೃಶಸಂಜ್ಞಕಂ ॥
ಸ ವೃಶೋ ವಾರ್ಶಸಾಮ್ನಾ ತಂ ಕುಮಾರಂ ಸಮಜೀವಯತ್ ।
ಏವಮಾಖ್ಯಾಯ ತತ್ರೈವ ಪುನರನ್ಯದುದೀರಿತಂ ॥
ಯತ ಇಕ್ಷ್ವಾಕವೋ ರಾಗಾದ್ಧಂತಾರಮೃಷಿಮಬ್ರುವನ್ ।
ತಸ್ಮಾತ್ತೇಷಾಂ ಗೃಹೇಷ್ವಗ್ನೇಸ್ತೇಜೋ ನಿರ್ಗತಮೇಷು ಚ ॥
ಗೃಹೇ ಪಾಕಾದಯೋ ನಾಸನ್ ತತ್ಕಾರಣಮಚಿಂತಯನ್ ।
ವೃಶಂ ಕುಮಾರಹಂತಾರಂ ಯದವೋಚಾಮ ತೇನ ನಃ ॥
ಅಪಾಕ್ರಮುದ್ಧರೋ ವಹ್ನೇರಾಹ್ವಯಾಮ ವೃಶಂ ವಯಂ ।
ಇತಿ ಸಂಚಿಂತ್ಯ ತಮೃಷಿಮಾಹ್ವಯಾಮಾಸುರಾದರಾತ್ ॥
ಸಮಾಗತ್ಯ ತತಃ ಶೀಘ್ರಂ ತೇಷಾಮಗ್ನೇರ್ಹರೋ ಭವೇತ್ ।
ಇತಿ ವಾರ್ಶೇನ ಸಾಮ್ನಾಸಾವಕಾಮಯತ ಪೂರ್ವವತ್ ॥

ಏವಂ ಗಾಯನ್ ಸ ಋಷಿರ್ಬ್ರಹ್ಮಹತ್ಯಾಂ
ಭಾರ್ಯಾಜಾತಾಂ ತ್ರಸದಸ್ಯೋರ್ನೃಪಸ್ಯ ।
ಪಿಶಾಚವೇಷಾಂ ಹರ ಆದಾಯ ಚಾಗ್ನೇ-
ರ್ಗೃಹಾನ್ನೀತ್ವಾ ಕಶಿಪೌ ಸ್ಥಾಪಯಂತೀಂ ॥

ದೃಷ್ಟ್ವಾ ಸಮ್ಯಕ್ ತದ್ಧರಸ್ತೋಷಯಿತ್ವಾ
ಸಾಮ್ನಾ ಪಶ್ಚಾದ್ಯೋಜಯಾಮಾಸ ಚಾಗ್ನಿಂ ।
ತತಃ ಸತೇಜಾಃ ಸಂಜಾತೋಽಭವತ್ಪಾಕಾದಿ ಪೂರ್ವವತ್ ।
ಏವಂ ಶಾಟ್ಯಾಯನೇನೋಕ್ತಂ ತಾಂಡ್ಯಕೋಕ್ತಮಥೋಚ್ಯತೇ ॥
ವೃಶಃ ಪುರೋಧಾ ಅಭವತ್ತ್ರಸದಸ್ಯೋರ್ಮಹೀಪತೇಃ ।
ಸ ರಥಂ ಧಾವಯನ್ರಾಜಾ ಬ್ರಾಹ್ಮಣಸ್ಯ ಕುಮಾರಕಂ ॥
ಚಿಚ್ಛೇದ ರಥಚಕ್ರೇಣ ಪ್ರಮಾದಾತ್ಸೋಽಬ್ರವೀದ್ವೃಶಂ ।
ಪುರೋಹಿತೇ ವರ್ತಮಾನೇ ತ್ವಯಿ ಮಾ ಹಂತಿರಾಗತಾ ॥
ಏಷಾ ತ್ವಯಾಪನೇತವ್ಯಾ ಋಷಿಮಿತ್ಯಬ್ರವೀನ್ನೃಪಃ ।
ಸ ಋಷಿರ್ವಾರ್ಶಸಾಮ್ನಾ ತಂ ಕುಮಾರಮುದಜೀವಯತ್ ॥

ಇಕ್ಷ್ವಾಕುವಂಶದಲ್ಲಿ ತ್ರಿವೃಷ್ಣಪುತ್ರನಾದ ತ್ರ್ಯರುಣನೆಂಬ ರಾಜನಿದ್ದನು. ಅವನಿಗೆ ಜನಪುತ್ರನೂ, ಮಹರ್ಷಿಯೂ ಆದ ವೃಶನೆಂಬ ಪುರೋಹಿತನಿದ್ದನು. ರಾಜನೂ, ಪುರೋಹಿತನೂ ಒಟ್ಟಿಗೆ ಹೊರಕ್ಕೆ ಹೊರಟರೆ ಆಗ ಪುರೋಹಿತನೇ ಸಾರಥಿಯಾಗಿದ್ದುಕೊಂಡು ರಥವನ್ನು ಹೊಡೆಯಬೇಕೆಂಬ ಸಂಪ್ರದಾಯವಿದ್ದಿತು. ಅದರಂತೆಯೇ ವೃಶನು ಅಶ್ವಗಳ ಲಗಾಮನ್ನು ಹಿಡಿದುಕೊಂಡು ರಥವನ್ನು ಹೊಡೆಯುತ್ತಿದ್ದನು. ಈ ಸಂದರ್ಭದಲ್ಲಿ ರಥದ ದಾರಿಯಲ್ಲಿ ಒಬ್ಬ ಬ್ರಾಹ್ಮಣನ ಹುಡುಗನು ಆಟವಾಡುತ್ತಿದ್ದನು. ಈ ರಥದ ಚಕ್ರವು ಆ ಹುಡುಗನ ಮೇಲೆ ಹರಿದುದರಿಂದ ಕೂಡಲೇ ಹುಡುಗನು ಮೃತಪಟ್ಟನು. ಆ ಮೃತಿಜನ್ಯವಾದ ಪಾಪಕ್ಕೆ ಯಾರು ಭಾಗಿಯೆಂಬುದಾಗಿ ಅವರಿಬ್ಬರಲ್ಲೇ ಒಂದು ವಿವಾದವು ಆರಂಭವಾಯಿತು. ರಥವನ್ನು ಹೊಡೆಯುತ್ತಿದ್ದುದರಿಂದ ನೀನೇ (ಪುರೋಹಿತನೇ) ಪಾಪಭಾಗಿಯೆಂದು ರಾಜನೂ, ರಥಕ್ಕೆ ಸ್ವಾಮಿಯಾದುದರಿಂದ ರಾಜನೇ ಪಾಪಭಾಗಿಯೆಂದು ಪುರೋಹಿತನೂ, ಪರಸ್ಪರ ಒಬ್ಬರ ಮೇಲೊಬ್ಬರು ದೋಷವನ್ನು ಆರೋಪಿಸತೊಡಗಿದರು. ಆಗ ಅವರಿಬ್ಬರೂ ತಮ್ಮ ವಿವಾದವನ್ನು ಇಕ್ಷ್ವಾಕುಗಳ ಪರಿಷತ್ತಿಗೆ ಒಪ್ಪಿಸಿದರು. ಅಲ್ಲಿ ಪುರೋಹಿತನವೇ ತಪ್ಪೆಂದು ತೀರ್ಮಾನಿಸಲಾಯಿತು. (ಈ ರೀತಿ ತಮ್ಮ ವಿವಾದವನ್ನು ಪರಿಷತ್ತಿಗೆ ಒಪ್ಪಿಸುವುದೂ ಮತ್ತು ಪರಿಷತ್ತು ತನ್ನ ತೀರ್ಮಾನವನ್ನು ತಿಳಿಸುವುದೂ ಸಹ ಹಿಂದೆ ಉದಾಹೃತವಾಗಿರುವ ಬೃಹದ್ದೇವತಾವಾಕ್ಯಗಳಲ್ಲಿಲ್ಲ). ರಥದ ವೇಗವನ್ನು ತಡೆಯುವುದು ಸಾರಥಿಯ ಕರ್ತವ್ಯವಾದುದರಿಂದಲೂ ಮತ್ತು ವೃಶನು ಸಾರಥಿಯಾಗಿದ್ದು ಅದನ್ನು ನಿರ್ವಹಿಸದೇ ಇದ್ದುದರಿಂದಲೂ ಅವನೇ ಪಾಪಭಾಗಿಯು ಎಂದು ಯಾವಾಗ ತೀರ್ಮಾನಿಸಲಾಯಿತೋ, ಆ ಒಡನೆಯೇ ಋಷಿಯು ವಾರ್ಶ-ಸಾಮ ಎಂಬ ಸಾಮಮಂತ್ರದ ದರ್ಶನವನ್ನು ಪಡೆದು ಆ ಮಂತ್ರವನ್ನು ಪಠಿಸಿ ಅದರ ಪ್ರಭಾವದಿಂದ ಮೃತನಾಗಿದ್ದ ಬಾಲಕನಿಗೆ ಪುನಃ ಜೀವವು ಬರುವಂತೆ ಮಾಡಿದನು. ಆದರೆ, ತನ್ನ ವಿಷಯದಲ್ಲಿ ಅನ್ಯಾಯವಾಗಿ ದೋಷಾರೋಪವನ್ನು ಮಾಡಿ ತನಗೆ ವಿರುದ್ಧವಾಗಿ ತೀರ್ಮಾನವನ್ನು ಹೇಳಿದ ಇಕ್ಷ್ವಾಕುಗಳ ಮೇಲೆ ಕ್ರುದ್ಧನಾಗಿ " ಅವರ ಗೃಹದಲ್ಲಿ ಸಮಿದ್ಧನಾಗತಕ್ಕ ಅಗ್ನಿಗೆ ವೀರ್ಯವೂ, ತೇಜಸ್ಸೂ ಲುಪ್ತವಾಗಲಿ ಎಂದು ಶಪಿಸಿದನು. ಮತ್ತು ಅವರನ್ನು ತ್ಯಜಿಸಿ ಹೊರಟುಹೋದನು. (ಆ ದೇಶದ ರಾಜನಲ್ಲಿಗೆ ಹೋಗಿ ಸೇರಿದನೆಂಬ ಬೃಹದ್ದೇವತಾವಾಕ್ಯವಿದೆ). ಆ ಶಾಪದ ಫಲವಾಗಿ ಇಕ್ಷ್ವಾಕುಗಳ ಗೃಹದಲ್ಲಿ ಸ್ಥಾಪಿತವಾದ ಅಗ್ನಿಯ ತೇಜಸ್ಸೆಲ್ಲವೂ ಲುಪ್ತವಾಯಿತು. (ಅಗ್ನೌ ಪ್ರಸ್ತಾನಿ ಹವ್ಯಾನಿ ನ ಹ್ಯಪಚ್ಯಂತ ಕಾನಿಚಿತ್ ।) ಅಗ್ನಿಯ ತೇಜಸ್ಸು ಲುಪ್ತವಾದುದ

ರಿಂದ ಆ ಅಗ್ನಿಯಲ್ಲಿ ಅರ್ಪಿತವಾದ ಹವಿರಾದಿಗಳು ಪಕ್ವವಾಗಲಿಲ್ಲ ಮತ್ತು ಅಡಿಗೆಯ ಮನೆಯಲ್ಲಿಯೂ ಅಗ್ನಿಯಿಲ್ಲವ್ಧ ರಿಂದ ಪಾಕಾದಿಗಳನ್ನು ಮಾಡಲೂ ಸಾಧ್ಯವಾಗಲಿಲ್ಲ.

ಆದ್ದರಿಂದ ಆಗ ಅವರೆಲ್ಲರೂ ಚಿಂತಾಕ್ರಾಂತರಾಗಿ ವೃಶನಿರುವ ಪ್ರದೇಶಕ್ಕೆ ಹೋಗಿ ಅವನನ್ನು ಪ್ರಾರ್ಥಿಸಿ ಹಿಂವಕ್ಕೆ ಕರೆತಂದರು. ಆಗ ಪುನಃ ಹಿಂದೆ ಪಠಿಸಿದ್ದ ವಾರ್ಶಸಾಮ ಎಂಬ ಮಂತ್ರವನ್ನೇ ಪಠಿಸಿದುದರಿಂದ ಲುಪ್ತ ವಾಗಿದ್ದ ಅಗ್ನಿಯ ತೇಜಸ್ಸು ಪುನರಾವಿರ್ಭೂತವಾಯಿತು ಎಂದಿದೆ. (ಇಲ್ಲಿಯವರೆಗೆ ಕಥೆಯ ಸಾಮಂಜಸ್ಯವು ಸನ್ನಿವೇಶಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಆದರೆ ಇದೇ ವಿಷಯವನ್ನು ಮುಂದುವರಿಸುತ್ತಾ ಕಥೆಯನ್ನು ಇನ್ನೂ ಬೆಳೆಸಿದೆ). ಹಿಂದೆ ತನಗೆ ಅಸಮಾಧಾನವಾದೊಡನೆಯೇ ಶಪಿಸಿದುದರಿಂದ, ಬ್ರಹ್ಮಹತ್ಯಾದೋಷವು ತ್ರಸದಸ್ಯುವಿನ ಪತ್ನೀರೂಪದಲ್ಲಿದ್ದು ಪಿಶಾಚೀವೇಷದಿಂದ ಅಗ್ನಿಯ ತೇಜಸ್ಸು ಅಪಹರಿಸಿತು ಮತ್ತು ತನ್ನ ಆಚ್ಛಾದನದಿಂದ (ವಸ್ತ್ರದಿಂದ ಅವನ್ನು ಮರೆಯಿಸಿತು. ವೃಶನು ಅದನ್ನು ಕಂಡುಕೊಂಡು, ಹರಸ್ಸನ್ನು (ಅಗ್ನಿಯ ತೇಜಸ್ಸು) ಅಲ್ಲಿಂದ ಬಿಡಿಸಿ ಪುನಃ ಅಗ್ನಿಯಲ್ಲಿಯೇ ಸೇರಿಸಿದನು. ಆ ಒಡನೆಯೇ ಅಗ್ನಿಯು ಪ್ರಜ್ವಲಿತನಾಗಿ, ತನ್ನಲ್ಲಿ ಅರ್ಪಿತವಾದ ಹವಿರಾದಿ ಗಳನ್ನು ಪಕ್ವಗೊಳಿಸತೊಡಗಿದನು. (ಪೈಶಾಚೀ ರೂಪದ ಬ್ರಹ್ಮಹತ್ಯಾ ದೋಷವನ್ನು ನಿರ್ದೇಶಿಸಿ ವೃಶನು ಮಂತ್ರ ವನ್ನು ಪಠಿಸಿದ್ದನ್ನು ಬೃಹದ್ದೇವತೆಯಲ್ಲಿ ತಿಳಿಸಿದೆ. ಈ ವಿಷಯವನ್ನು ಹಿಂದೆ ಉದ್ಧರಿಸಿದೆ )

ಇದುವರೆಗೂ ಹೇಳಿದ ಕಥೆಯು ಶಾಟ್ಯಾಯನ ಮಹರ್ಷಿಯು ಹೇಳಿರುವಂತೆ ವಿವರಿಸಿದೆ ಈಗ ತಾಂಡ್ಯ ಬ್ರಾಹ್ಮಣದಲ್ಲಿ ಹೇಳಿರುವ ಕಥಾಭಾಗದಲ್ಲಿರುವ ವ್ಯತ್ಯಾಸವನ್ನು ವಿವರಿಸಲಾಗುವುದು. ರಾಜನಾದ ತ್ರಸದಸ್ಯುವು ತನ್ನ ಪುರೋಹಿತನಾಗಿ ತನ್ನ ಬ್ರಹ್ಮಹತ್ಯಾದೋಷವನ್ನು ಪರಿಹಸಬೇಕೆಂದು ಪ್ರಾರ್ಥಿಸಲಾಗಿ ಅದರಂತೆ ಪುನಃ ವೃಶನೇ ಪುರೋಹಿತನಾದನು. ಮತ್ತು ವಾರ್ಶಸಾಮದ ಪ್ರಭಾವದಿಂದ, ಮೃತನಾಗಿದ್ದ ಬಾಲಕನನ್ನು ಬದುಕಿಸಿದನು. ಎಂದು ವೃಶನ ಮಹತ್ತ್ವವನ್ನು ಸ್ತುತಿಸಿದೆ. ಇದು ಕಥಾ ಸಂದರ್ಭ.

ಈ ಕಥಾರೂಪವಾದ ಪೀಠಿಕೆಯಿರುವುದರಿಂದ, ಪ್ರಕೃತವಾದ ಮಂತ್ರದಲ್ಲಿ **ಯುವತಿಃ** ಎಂಬ ಪದಕ್ಕೆ ತ್ರ್ಯರುಣನ ಪತ್ನೀರೂಪವಾದ ಪೈಶಾಚೀ ಸ್ತ್ರೀಯನ್ನು ನಿರ್ದೇಶಿಸಿದೆಯೆಂದು ಹೇಳಬೇಕು. ಆದರೆ ಈ ಅರ್ಥವನ್ನು ಹೇಳುವುದು ಹೇಗೆಂದರೆ, ಬೃಹದ್ದೇವತಾವಾಕ್ಯವೇ ಇದಕ್ಕೆ ಆಧಾರ.

**ನಿಷಣ್ಣಸ್ಸ ತಯಾ ಸಾರ್ಧಂ ಆಸಂದ್ಯಾಂ ಕಶಿಪಾವಪಿ ।**
**ತಾಮುಪಾಮಂತಯಾಂಚಕ್ರೇ ಕಮೇತಂ ತ್ವಮಿತಿ ತ್ರ್ಯೃಚಾ ॥**

(ಬೃ. ದೇ. ೫-೨೦)

ಆ ಪೈಶಾಚೀರೂಪದ ತ್ರ್ಯರುಣಪತ್ನಿಯೊಡನೆ ಒಂದೇ ಆಸನದಲ್ಲಿ ಕುಳಿತು ವೃಶನು **ಕಮೇತಂ ತ್ವಂ ಯುವತೇ ಕುಮಾರಂ** (೫-೨-೨) ಎಂಬ ಮಂತ್ರವನ್ನು ಪಠಿಸಿದನು ಎಂದಿದೆ. ಇಲ್ಲಿ (೫-೨-೨) ಸಾಯಣರು **ಯುವತೇ........ ಪೇಷೀ ಹಿಂಸಿಕಾ ಪಿಶಾಚಿಕಾ ಸತೀ ;** ಪಿಶಾಚಿ ರೂಪದ ಯುವತಿಯೇ ಎಂದರ್ಥ ಮಾಡಿರುವುದರಿಂದ, ಮೊದಲನೇ ಮಂತ್ರಕ್ಕೂ ಎಂದರೆ ಪ್ರಕೃತವಾದ ಮಂತ್ರದಲ್ಲಿಯ **ಯುವತಿ** ಶಬ್ದಕ್ಕೂ ಪೈಶಾಚೀಸ್ತ್ರೀಯೆಂದೇ ಅರ್ಥಮಾಡಿದರೆ ಅನುಚಿತವಾಗಲಾರದು. ತಾನು ಕುಮಾರ ರೂಪನಾದ (**ಅಗ್ನೇರುತ್ಪಾದ್ಯಮಾನತ್ವಾತ್ ಕುಮಾರಶಬ್ದೇನ ವ್ಯವಹಾರಃ**) ಅಗ್ನಿಯನ್ನು ಅಂತರ್ಹಿತಮಾಡಿ ಪಾಲಕನಾದ ಯಜಮಾನನಿಗೆ ಕೊಡುವುದಿಲ್ಲ ಎಂದು ಒಂದು ವಿಧವಾದ ಅರ್ಥವನ್ನು ಹೇಳಬಹುದು. ಈ ಅರ್ಥವು ಕಥಾಸಂದರ್ಭಕ್ಕೂ, ಬೃಹದ್ದೇವತೆಯಲ್ಲಿ ಹೇಳಿರುವ

ವಿವರಣೆಗೂ ಹೊಂದಿಕೊಳ್ಳುತ್ತದೆ. ಆದರೆ, ಸಾಯಣರು ಕುಮಾರಶಬ್ದಕ್ಕೆ, ರಥದ ಚಕ್ರದಿಂದ ಹತನಾದ ಕುಮಾರನೆಂದೂ, ಅವನನ್ನು ಈ ಯುವತಿಯು ಆತನ ಪಿತೃವಿಗೆ ಅರ್ಪಿಸದೇ ತನ್ನಲ್ಲಿಯೇ ಗೂಢವಾಗಿಟ್ಟಿರುವಳೆಂದೂ, ಆದುದರಿಂದ ಈ ಸ್ತುತಿಯೆಂದೂ ತಿಳಿಸಿದ್ದಾರೆ. ಈ ಅರ್ಥವು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಅಲ್ಲದೇ, ಇದಕ್ಕೆ ಹೊಂದಿಕೊಳ್ಳುವಂತೆ, ಉತ್ತರಾರ್ಧವನ್ನು ವಿವರಿಸಿಲ್ಲ. ಆದುದರಿಂದ ಇಲ್ಲಿ ಕುಮಾರ ಶಬ್ದಕ್ಕೆ ಅಗ್ನಿಯೆಂದರ್ಥ ಮಾಡುವುದೇ ಉಚಿತವಾಗಿರುತ್ತದೆ. ಸಾಯಣರ ವೈಕಲ್ಪಿಕವಾದ ಎರಡನೆಯ ವಿವರಣವು ಈ ಅರ್ಥವನ್ನು ಸಮರ್ಥಿಸುತ್ತದೆ. ಅದು ಹೇಗೆಂದರೆ,

'ಮಾತಾ ಸರ್ವಸ್ಯ ನಿರ್ಮಾತ್ರೀ ಪೃಥಿವೀ ಸಮುಬ್ಜಂ ಸಮ್ಯಕ್ ನಿಗೂಢಂ ಗುಹಾ ಬಿಭರ್ತಿ ।
ನ ದದಾತಿ ಪಿತ್ರೇ ।

ಸಕಲಕ್ಕೂ ನಿರ್ಮಾತ್ರಿಯಾದ ಪೃಥ್ವಿಯು ಉತ್ಪನ್ನನಾದ ಈ ಅಗ್ನಿಯನ್ನು ಗೂಢವಾಗಿ ಧರಿಸಿದ್ದು ಪಾಲಕನಾದ ಯಜಮಾನನಿಗೆ ಸುಲಭವಾಗಿ ಅರ್ಪಿಸುವುದಿಲ್ಲ ಎಂಬುದು ಒಂದರ್ಥ. ಅಥವಾ, ಮಾತೃ ಶಬ್ದಕ್ಕೆ ಅರಣಿಯೆಂದಿನ್ನೊಂದರ್ಥವನ್ನೂ ಹೇಳಿದ್ದಾರೆ. ಸೂಕ್ತಸ್ಯ ಆಗ್ನೇಯತ್ವಾತ್ ಕುಮಾರ ಇತ್ಯಗ್ನಿರುಚ್ಯತೇ । ಈ ಸೂಕ್ತವು ಅಗ್ನಿನಿರ್ದಿಷ್ಟವಾದುದರಿಂದ ಇಲ್ಲಿ ಕುಮಾರ ಶಬ್ದಕ್ಕೆ ಅಗ್ನಿಯೆಂದರ್ಥ. ಈ ಅಗ್ನಿಗೆ ಅರಣಿಯು ಜನನಿ. ಅರಣ್ಯಂತರ್ಗತವಾದ ಅಗ್ನಿಯ ತೇಜಸ್ಸನ್ನು ಮಾನವರು ನೋಡುವುದಿಲ್ಲ ಎಂದು ಕೊನೆಯದಾಗಿ ವಿವರಿಸಿದೆ. ಆದರೆ, ಅಗ್ನಿಗೆ ಕುಮಾರನೆಂಬ ಹೆಸರಿನ ಪ್ರಸಿದ್ಧಿಯು ಹೇಗೆ ಎಂಬುದನ್ನು ಪರಿಶೀಲಿಸಬೇಕು.

ಈ ಸೂಕ್ತದ ಪೀಠಿಕೆಯಲ್ಲಿ ಶತಪಥಬ್ರಾಹ್ಮಣವಾಕ್ಯವನ್ನುದ್ಧರಿಸಿ ಅಲ್ಲಿ ಅಗ್ನಿಯ ಉತ್ಪತ್ತಿಯನ್ನೂ, ಅಗ್ನಿಗೆ ರುದ್ರಾದಿ ಅಷ್ಟನಾಮುಗಳೊಂದಿಗೆ ಕುಮಾರನೆಂಬುದು ನವಮವಾದ ನಾಮವೆಂದೂ ವರ್ಣಿತವಾಗಿರುವುದನ್ನು ತಿಳಿಸಿದೆ. ಇದೇ ಅಗ್ನಿಯು ಋಕ್ಸಂಹಿತೆಯಲ್ಲೂ ಸಹ ಅನೇಕ ಸನ್ನಿವೇಶಗಳಲ್ಲಿ ಶಿಶುವೆಂದೂ, ಕುಮಾರನೆಂದೂ ಪ್ರಶಂಸಿತನಾಗಿದ್ದಾನೆ. ಉದಾಹರಣೆಗೆ—

ತಮಿದ್ಗಚ್ಛಂತಿ ಜುಹ್ವಸ್ತಮರ್ವತೀರ್ವಿಶ್ವಾನ್ಯೇಕಃ ಶೃಣವದ್ವಚಾಂಸಿ ಮೇ ।
ಪುರುಪ್ರೈಷಸ್ತತುರಿರ್ಯಜ್ಞಸಾಧನೋಽಚ್ಛಿದ್ರೋತಿಃ ಶಿಶುರಾದತ್ತ ಸಂ ರಭಃ ॥
(ಋ. ಸಂ. ೧-೧೪೫-೩)

ಸ ಈಂ ವೃಷಾಜನಯತ್ತಾಸು ಗರ್ಭಂ ಸ ಈಂ ಶಿಶುರ್ಧಯತಿ ತಂ ರಿಹಂತಿ ।
(ಋ. ಸಂ. ೨-೩೫-೧೩)

ಇತ್ಯಾದ್ಯನೇಕ ಸನ್ನಿವೇಶಗಳಲ್ಲಿ ಅಗ್ನಿಯು ಶಿಶುರೂಪನಾಗಿದ್ದರೂ ಅಸಾಧಾರಣವಾದ ಕೆಲಸಗಳನ್ನು ಮಾಡುವವನೆಂದು ಸ್ತುತಿಸಿದೆ. ಇದಲ್ಲದೇ, ಇನ್ನು ಕೆಲವೆಡೆಗಳಲ್ಲಿ ಕುಮಾರ ಪದವು ಅಗ್ನಿಪರ್ಯಾಯವಾಗಿದೆಯೆಂದು ಹೇಳುವುದಕ್ಕೂ ಅವಕಾಶವಿರುತ್ತದೆ. ಪ್ರಕೃತವಾದ ಸೂಕ್ತವಲ್ಲಿ ಕುಮಾರ ಶಬ್ದಕ್ಕೆ ಅಗ್ನಿಯೆಂದರ್ಥಮಾಡುವಂತೆ, ಆ ಸನ್ನಿವೇಶಗಳಲ್ಲೂ ಸಹ ಅದೇ ರೀತಿ ಅರ್ಥವನ್ನು ಹೇಳಬಹುದು. ಉದಾಹರಣೆಗೆ—

ಬೋಧದ್ಯನ್ಮಾ ಹರಿಭ್ಯಾಂ ಕುಮಾರಃ ಸಾಹದೇವ್ಯಃ । ಅಚ್ಛಾ ನ ಹೂತ ಉದರಂ ।
(೪-೧೫-೭)

ಉತ ತ್ಯಾ ಯಜತಾ ಹರೀ ಕುಮಾರಾತ್ಸಾಹದೇವ್ಯಾತ್ । ಪ್ರಯತಾ ಸದ್ಯ ಆ ದದೇ ॥
(೪-೧೫-೮)

ಎಂಬಲ್ಲಿ ಸಹದೇವಪುತ್ರನಾದ ಕುಮಾರನಿಂದ ವಾಮದೇವನು ಅಶ್ವಗಳನ್ನು ಪಡೆದ ಸನ್ನಿವೇಶವನ್ನು ತಿಳಿಸಿದೆ. ಇದು ಅಗ್ನಿ ಪರವಾದ ಸೂಕ್ತವು, ಎಂದು ಸಾಯಣಭಾಷ್ಯದಿಂದ ತಿಳಿಯುತ್ತದೆ.

" ಸೋಽಗ್ನಿಂ ತು ಪಂಚದಶಭಿರಿಂದ್ರಂ ಷೋಡಶಭಿಃ ಸರ್ವೈಃ ॥
(ಬೃ. ದೇ. ೪-೧೩೭)

ನಾಲ್ಕನೆಯ ಮಂಡಲದಲ್ಲಿ ಮೊದಲು ೧೫ ಸೂಕ್ತಗಳೂ ಅಗ್ನಿಪರವಾಗಿವೆಯೆಂದು ಬೃಹದ್ದೇವತೆಯಲ್ಲಿ ತಿಳಿಸಿದೆ. ಆದರೆ, ಕೆಲವು ವಿಶೇಷ ವಿಷಯಗಳನ್ನು ತಿಳಿಸುವಾಗ, ಮೇಲೆ ಉದಾಹೃತವಾದ ಎರಡು ಮಂತ್ರಗಳನ್ನು ಮಾತ್ರ ನಿರ್ದೇಶಿಸಿ,

ಲಿಂಗೋಕ್ತದೈವತೇ ಸೂಕ್ತೇ ಏಕೇ ಪ್ರತ್ಯಗ್ನಿರೇವತು ।
ಋಷಿರ್ಬೋಧದಿತಿ ದ್ವಾಭ್ಯಾಂ ಸ್ತೌತಿ ಸೋಮಕಮೇವ ತು ॥
(ಬೃ. ದೆ ೪-೧೩೯)

ಋ. ಸಂ. ೪-೧೩, ೧೪ ನೇ ಸೂಕ್ತಗಳು ಆಯಾ ದೇವತೆಗಳ ವೈಯಕ್ತಿಕವಾದ ಗುಣಗಳನ್ನು ಪ್ರಶಂಸಿಸಿ ಪಠಿತವಾಗಿದೆ. ಆದರೆ, 'ಬೋಧದ್ಯನ್ಮಾ'; ಮತ್ತು 'ಉತ ತ್ಯಾ ಯಜತಾ' ಎಂಬ ಎರಡು ಮಂತ್ರಗಳು ಮಾತ್ರ ಅಗ್ನಿಪರನೆಂದು ಕೆಲವರೂ, ಸೋಮಕೋದ್ದಿಷ್ಟವೆಂದು ಇನ್ನು ಕೆಲವರೂ ಹೇಳಿರುತ್ತಾರೆಂದು ತಿಳಿಸಿದೆ. ಆದುದರಿಂದ ಈ ಎರಡು ಮಂತ್ರಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಹೇಳುವುದು ಶ್ರಮವೆಂದು ಹೇಳಿದಂತಾಯಿತು. " ಇತರ ಶ್ರುತಿವಾಕ್ಯಗಳ ಆಧಾರದ ಮೇಲೆ ಇಲ್ಲಿ ಕುಮಾರನೆಂಬುದಕ್ಕೆ ಅಗ್ನಿಯೆಂದೇ ಅರ್ಥಮಾಡಬಹುದು. ಮತ್ತು ಎರಡು ಅಶ್ವಗಳೂ ಅಶ್ವಿನೀದೇವತೆಗಳನ್ನು ನಿರ್ದೇಶಿಸುವುವು. ಸಹದೇವಶಬ್ದಕ್ಕೆ ದೇವತಾಸಾಹಿತ್ಯವೆಂದರ್ಥಮಾಡಬಹುದು. ಅಹೋರಾತ್ರಗಳನ್ನಾಗಲೀ ಶುಕ್ಲ ಮತ್ತು ಕೃಷ್ಣ ಪಕ್ಷಗಳನ್ನಾಗಲಿ ಪ್ರತಿಬಿಂಬಿಸುವ ಅಶ್ವಿನೀದೇವತೆಗಳೇ ಅಶ್ವದ್ವಯವು" ಇತ್ಯಾದಿಯಾಗಿ ಕೆಲವು ಪಂಡಿತರು ಈ ಸಂದರ್ಭದಲ್ಲಿ ವಿವರಣೆಯನ್ನು ಹೇಳಿದ್ದಾರೆ. ಆದರೆ ಉದ್ಧೃತವಾಗಿರುವ ಈ ಮಂತ್ರಗಳಲ್ಲಿ ಕುಮಾರಪದಕ್ಕೆ ಅಗ್ನಿಯೆಂದರ್ಥಮಾಡಿದರೆ ಉಳಿದ ಪದಗಳಿಗೂ ಅದಕ್ಕನುಗುಣವಾದ ತಾತ್ಪರ್ಯಗಳನ್ನು ಹೇಳಬೇಕು. ಇದು ಪ್ರಯಾಸದ ಕೆಲಸ. ನಿಷ್ಕೃಷ್ಟವಾದ ಶ್ರುತಿವಾಕ್ಯಗಳ ಆಧಾರವಿಲ್ಲದೇ ಈ ಅರ್ಥವನ್ನು ಒಪ್ಪುವುದಕ್ಕಾಗಲಾರದು. ಆದರೂ ಸಹ, ಬೃಹದ್ದೇವತಾಕಾರರ ವಾಕ್ಯದಿಂದಲೇ, ಈ ಮಂತ್ರಗಳ ಅರ್ಥವು ಗಹನವಾದುದು ಎಂದು ತಿಳಿಯುತ್ತದೆ. ಆದುದರಿಂದ ಅಗ್ನಿಯೆಂದರ್ಥಮಾಡುವುದೂ ಒಂದು ವಿಧದಲ್ಲಿ ಉಚಿತವೇ ಆಗಿರುತ್ತದೆ.

ಯುವತಿ ಶಬ್ದಕ್ಕೆ ಪೈಶಾಚೀ ಸ್ತ್ರೀಯೆಂದರ್ಥಮಾಡುವುದು ಒಂದುವಿಧ. ಅಥವಾ ಉಷಸ್ಸೆಂದರ್ಥಮಾಡುವುದು ಇನ್ನೊಂದು ವಿಧ. ಆದರೆ ಇಲ್ಲಿ ಕಥಾಸಂದರ್ಭಕ್ಕನುಸಾರವಾಗಿ ಪೈಶಾಚೀಸ್ತ್ರೀಯೆಂದೇ, ಅರ್ಥಮಾಡಬಹುದೆಂದು ಹೇಳಿದರೆ, ಅದೂ ನಿಷ್ಕೃಷ್ಟವಾಗಿಲ್ಲ. ಸಾಯಣರೇ, ಯುವತಿ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಿದ್ದಾರೆ. ಆದುದರಿಂದ ಯುವತಿ ಶಬ್ದಕ್ಕೆ ಉಷಸ್ಸೆಂದು ಅರ್ಥಮಾಡಿದರೂ ಪ್ರಕೃತದಲ್ಲಿ ಸಮಂಜಸವಾಗಿರುತ್ತದೆಯಾದುದರಿಂದ ಈ ವಿಷಯವನ್ನು ಮುಂದಿನ ಮಂತ್ರದ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

ಈ ಋಕ್ಕಿನ ವಿವರಣೆಯ ವಿಷಯದಲ್ಲಿ ವಿಲ್ಸನ್ ಪಂಡಿತನು ಈ ರೀತಿ ಹೇಳಿದ್ದಾನೆ—

According to what is no doubt the most accurate interpretation of this verse, and of those which follow, they contain only a metaphorically obscure allusion to the lighting of the sacrificial fire : the mother is the two pieces of touch-wood, which retain fire, the child, and will not spontaneously give it up to the father, the yajamana, until forced by attrition : till then, also, people, the priests, do not behold it, but they see it when bursting into ignition : this however, has not satisfied the commentators, and a curious and strange legend has been devised for the interpreation of the text, or has been perhaps, applied to it by way of explanation, having been previously current : it is more probably, however, suggested by, than suggestive of, the verses : Sayana quotes the Shatyayana Brahmana as the authority : the story is this : Raja Tryaruna, the son of Trivrishna of the race of Ikshwakus had for his Purohita Vrishna the son of Jara ; it was the custom, it is said, when a Raja and his Purohit went out in the same chariot, that the latter should drive, and on an occasion of this kind, the chariot went over a Brahman boy who was playing in the road, and killed him : a dispute ensued between the Raja and the priest as to which was the murderer, the former accusing the latter because he was driving, the the Purohit retorting, that as the chariot was the Raja's, he was the responsible person : they referred the matter to an assembly of the Ikshwakus, who decided against the Purohit : Vrisha restored the boy to life by the prayer thenceforth called after him the Varsha-saman, but being offended with the Ikshwakus for what he considered their partiality, fire thenceforth ceased to perform its functions in their dwellings and the cooking of their food and other offices ceased : attributing this to the displeasure of the Rishi, the Ikshwakus respecfully invoked his presence, and with the same mantra, he prayed that the energy of fire would be restored to them, which accordingly took place : this energy or activity is designated by the unusual term of Haras, Agner haras : so far the legend is intelligible, but what follows is rather obscure : Sayana proceeds : so

singing, the Rishi having seen distinctly Brahmanicide become the wife of the king Trasadasyu, in the garb of a Pishachi, and that she, having taken the Haras away from the fire-chamber, was concealing it in her regal clothing (kashipau?) he, having propitiated that Haras by Varsha Sama, re-united it with Agni, upon which the offices of fire, in cooking and the like, were discharged as before : Sayana adds to his version a quotation from the Tandya which stops with the restarotion of the boy to life : Niti-manjari cites the legend from the Brihad-devata, the first part of which is the same as that given above but there is some slight variation in the con-clusion : after the decision against the Purohit, this authority continues, the Atharvan having seen (or composed) the Angirasa mantras, restored the boy to life, but beeing in wrath, desertedthe king, and went to another country : upon his departure, the Haras or function of Agni ceased, and there were no more burnt-offerings : the Raja, being much distressed, went to the Rishi, and pacified and brought him back, and prevailed upon him to become his Purohit once more : still the fire withheld its activity, until the Rishi discovered that the queen was in reality a Pishachi, with whom the Haras had associated, and was seated on the throne with her, and hidden in her robe : on discovering this, the Rishi repeated the second stanza of this Suktha, "Young mother, etc.," to which Haras, in the form of a boy, replied : the Rishi then recited the ninth stanza, "Agni shines etc.," on which the flame burst forth and consumed the Pishachi, after which things went on as before : if there be any meaning in this legend, it may possibly intimate some quarrel between the princes and priests, and a consequent temporary discontinuance of worship with fire.

॥ ಸಂಹಿತಾಪಾಠಃ ॥

ಕಮೇತಂ ತ್ವಂ ಯುವತೇ ಕುಮಾರಂ ಪೇಷೀ ಬಿಭರ್ಷಿ ಮಹಿಷೀ ಜಜಾನ ।
ಪೂರ್ವೀರ್ಹಿ ಗರ್ಭಃ ಶರದೋ ವವರ್ಧಾಪಶ್ಯಂ ಜಾತಂ ಯದಸೂತ ಮಾತಾ ॥ ೨ ॥

‖ ಪದಪಾಠಃ ‖

ಕಂ । ಏತಂ । ತ್ವಂ । ಯುವತೇ । ಕುಮಾರಂ । ಪೇಷೀ । ಬಿಭರ್ಷಿ । ಮಹಿಷೀ । ಜಜಾನ ।

ಪೂರ್ವೀಃ । ಹಿ । ಗರ್ಭಃ । ಶರದಃ । ವವರ್ಧ । ಅಪಶ್ಯಂ । ಜಾತಂ । ಯತ್ । ಅಸೂತ । ಮಾತಾ ‖ ೨ ‖

‖ ಸಾಯಣಭಾಷ್ಯಂ ‖

ಅತ್ರಾಗ್ನೇರುತ್ಪಾದ್ಯಮಾನತ್ವಾತ್ಕುಮಾರಶಬ್ದೇನ ವ್ಯವಹಾರಃ । ಹೇ ಯುವತೇ ತ್ವಂ ಕಮೇತಂ ಕುಮಾರಂ ಪೇಷೀ ಹಿಂಸಿಕಾ ಪಿಶಾಚಿಕಾ ಸತೀ ಬಿಭರ್ಷಿ । ಏವಂ ವೃಶಾಖ್ಯೋ ಮಹರ್ಷಿಃ ಕಶಿಪುನಾಚ್ಛನ್ನಮಗ್ನೇರ್ಹರೋ ಬ್ರೂತೇ । ತ್ವಯಾನುತ್ಪಾದಿತತ್ವಾದ್ಧಾರಣಮನುಚಿತಮಿತ್ಯರ್ಥಃ । ಮಹಿಷೀ ಮಹತೀ ಪೂಜನೀಯಾರಣಿರೇನಂ ಜಜಾನ । ಅಜನಯತ್ । ತದೇವಾಹ । ಗರ್ಭಃ ಶಿಶೋರ್ಗರ್ಭಹಕೋಽರಣ್ಯಾಃ ಸಂಬಂಧೀ ಗರ್ಭೋ ಹಿ ಯಸ್ಮಾತ್ಪೂರ್ವೀಃ ಶರದೋ ಗತಾನನೇಕಾನ್ ಸಂವತ್ಸರಾನ್ವವರ್ಧ । ವವೃಧೇ । ಅಹಂ ಚ ತತೋ ಜಾತಮಪಶ್ಯಂ । ಯದ್ಯಸ್ಮಾನ್ಮಾತಾರಣಿರಸೂತ । ಉದಪಾದಯತ್ । ರಾಜಕುಮಾರ ಪಕ್ಷೇ ಹೇ ಯುವತೇ ಭೂದೇವಿ: ಕಮೇತಂ ಕುಮಾರಂ ಪೇಷೀ ಸತೀ ಬಿಭರ್ಷಿ । ಅವಶಿಷ್ಟಂ ಕುಮಾರಜನನಪರತಯಾ ಯೋಜ್ಯಂ । ಏವಮುತ್ತರತ್ರಾಪಿ ಕುಮಾರಾಗ್ನಿಹರಸೋಃ ಪರತ್ವೇನ ಯಥೋಚಿತಂ ವ್ಯಾಖ್ಯೇಯಂ ‖

‖ ಪ್ರತಿಪದಾರ್ಥ ‖

ಯುವತೇ—ಎಲೈ ತರುಣಿಯೇ । ಪೇಷೀ—ಹಿಂಸಾಸ್ವರೂಪವನ್ನು ಹೊಂದಿರುವ । ತ್ವಂ—ನೀನು । ಕಂ ಏತಂ ಕುಮಾರಂ—ಯಾವ ಈ ಕುಮಾರನನ್ನು । ಬಿಭರ್ಷಿ—ಪೋಷಿಸುತ್ತಿದ್ದೀಯೆ? (ನೀನು ಪೋಷಿಸುತ್ತಿರುವ ಈ ಕುಮಾರನಾರು?) ಮಹಿಷೀ—ಪೂಜ್ಯಳಾದ ಮಾತೆಯು । ಜಜಾನ—(ಇವನನ್ನು) ಹಡೆದಳು । ಗರ್ಭಃ—ಈ ಪುತ್ರನ ಗರ್ಭವು । ಪೂರ್ವೀಃ ಶರದಃ—ಅನೇಕ ಸಂವತ್ಸರಗಳ ಕಾಲ । ವವರ್ಧ ಹಿ—ಬೆಳೆಯಿತಲ್ಲವೇ । ಯತ್—ಯಾವಾಗ । ಮಾತಾ—ತಾಯಿಯು । ಅಸೂತ—ಹಡೆದಳೋ (ಆಗ) । ಜಾತಂ—ಉತ್ಪನ್ನನಾದ ಈ ಪುತ್ರನನ್ನು ಅಪಶ್ಯಂ—ನಾನು ನೋಡಿದೆನು.

‖ ಭಾವಾರ್ಥ ‖

ಎಲೈ ತರುಣಿಯೇ, ಹಿಂಸಾಸ್ವರೂಪವನ್ನು ಹೊಂದಿರುವ ನೀನು ಪೋಷಿಸುತ್ತಿರುವ ಈ ಕುಮಾರನಾರು? ಪೂಜ್ಯಳಾದ ಮಹಾಮಾತೆಯು ಇವನನ್ನು ಹಡೆದಳು. ಈ ಪುತ್ರನ ಗರ್ಭವು ಅನೇಕ ಸಂವತ್ಸರಗಳ ಕಾಲ ಬೆಳೆಯಿತು. ಇವನ ತಾಯಿಯು ಇವನನ್ನು ಹಡೆದಾಗ ಉತ್ಪನ್ನನಾದ ಈ ಪುತ್ರನನ್ನು ನಾನು ನೋಡಿದೆನು.

## English Translation.

Young mother, what boy is this whom you, (become) a malevolent spirit, foster? The mighty (queen) has given him birth; the embryo has

thriven through many years: I have seen him born as the mother brought him forth.

॥ ವಿಶೇಷವಿಷಯಗಳು ॥

ಸಾಯಣರು ಈ ಮಂತ್ರದಲ್ಲಿ ಅಗ್ನೇರುತ್ಪಾದ್ಯಮಾನತ್ವಾತ್ ಕುಮಾರಶಬ್ದೇನ ವ್ಯವಹಾರಃ । ಉತ್ಪನ್ನನಾಗಿರುವುದರಿಂದ ಅಗ್ನಿಯು ಇಲ್ಲಿ ಕುಮಾರಶಬ್ದವಾಚ್ಯನಾಗಿರುವನು ಎಂದು ತಿಳಿಸಿ, ಯುವತಿಶಬ್ದಕ್ಕೆ ಪೈಶಾಚೀ ಸ್ತ್ರೀಯೆಂದರ್ಥಮಾಡಿದ್ದಾರೆ. ಆದರೆ ಈ ಮಂತ್ರದಲ್ಲಿ ಮುಂದಕ್ಕೆ ಮಹಿಷೀ ಜಜಾನ—ಪೂಜ್ಯಳಾದ ಮಾತೆಯು ಈ ಪುತ್ರನನ್ನು ಹಡೆದಳು; ಗರ್ಭಃ ಪೂರ್ವೀಃ ಶರದಃ ವವರ್ಧ ಹಿ । ಈ ಗರ್ಭವು ಅನೇಕ ಸಂವತ್ಸರಗಳ ಕಾಲ ಬೆಳೆಯಿತು ಇತ್ಯಾದಿಯಾದ ವರ್ಣನೆಯೂ ಇರುತ್ತದೆ. ಒಂದು ವೇಳೆ ಕಥಾಸನ್ನಿವೇಶಕ್ಕನುಗುಣವಾಗಿ, ಇಲ್ಲಿ ಪೈಶಾಚೀ ಸ್ತ್ರೀಯೆಂದರ್ಥಮಾಡಿದರೂ ಸಹ, ತ್ರ್ಯರುಣನ ಪತ್ನೀರೂಪಳಾಗಿದ್ದ ಆ ಪೈಶಾಚಿಸ್ತ್ರೀಯು ಅಗ್ನಿಯನ್ನು ಮರೆಮಾಡಿದಳೇ ಹೊರತು, ಅವನನ್ನು ಹಡೆಯಲಿಲ್ಲ, ಮತ್ತು ಭರಿಸಲೂ ಇಲ್ಲ. ಆದುದರಿಂದ ಪ್ರಕೃತದಲ್ಲಿ ಯುವತಿ ಶಬ್ದಕ್ಕೆ ಅಗ್ನಿಮಾತೆಯಾದ ಉಷಸ್ಸೆಂದು ಅರ್ಥಮಾಡುವುದೂ ಉಚಿತವಾಗಿರುತ್ತದೆ

ಏತಾ ಉ ತ್ಯಾಃ ಪ್ರತ್ಯದೃಶ್ರನ್ ಪುರಸ್ತಾಜ್ಜ್ಯೋತಿರ್ಯಚ್ಛಂತೀರುಷಸೋ ವಿಭಾತೀಃ ।
ಅಜೀಜನನ್ತ್ಸೂರ್ಯಂ ಯಜ್ಞಮಗ್ನಿಮಪಾಚೀನಂ ತಮೋ ಅಗಾದಜುಷ್ಟಂ ॥
(ಋ. ಸಂ. ೭-೭೮-೩)

ಇತ್ಯಾದಿ ಸ್ಥಳಗಳಲ್ಲಿ ಉಷಸ್ಸು ಅಗ್ನಿ ಜನನಿಯು ಎಂದು ನಿಶ್ಚಯವಾಗಿ ತಿಳಿಸಿದೆ. ಅಲ್ಲದೇ ಹಿಂದೆ, ಈ ಸೂಕ್ತದ ಪೀಠಿಕೆಯಲ್ಲಿ ಉದ್ಧೃತವಾಗಿರುವ ಶತಪಥಬ್ರಾಹ್ಮಣದ ವಾಕ್ಯದಲ್ಲಿ ಉಷಸ್ಸಿನಿಂದ ಅಗ್ನಿಯು ಜನಿಸಿ ಅವನೇ ಕುಮಾರ ನಾಮಾಂಕಿತನಾದನು. ಮತ್ತು ರುದ್ರಾದಿ ಇತರ ಅಷ್ಟನಾಮಗಳನ್ನು ಹೊಂದಿದನು ಎಂಬುದನ್ನೂ ತಿಳಿಸಿದೆ.

ಏಷಾ ದಿವೋ ದುಹಿತಾ ಪ್ರತ್ಯದರ್ಶಿ ವ್ಯುಚ್ಛಂತೀ ಯುವತಿಃ ಶುಕ್ರವಾಸಾಃ ।
ವಿಶ್ವಸ್ಯೇಶಾನಾ ಪಾರ್ಥಿವಸ್ಯ ವಸ್ವ ಉಷೋ ಅದ್ಯೇಹ ಸುಭಗೇ ವ್ಯುಚ್ಛ ॥
(ಋ. ಸಂ. ೧-೧೧೩-೭)

ಇತ್ಯಾದ್ಯನೇಕ ಮಂತ್ರಗಳಲ್ಲಿ ಉಷಸ್ಸಿನ ಯುವತಿತ್ವವೂ ಅವಕ್ಕನುರೂಪವಾದ ಸೌಂದರ್ಯವೂ ವರ್ಣಿತವಾಗಿದೆ. ಅಗ್ನಿಜನನಿಯೂ ಯುವತಿಯೂ ಆದ ಉಷಸ್ಸಿಗೆ ಪೇಷೀ ಎಂಬ ವಿಶೇಷಣವು ಹೇಗೆ ಎಂಬುದು ವಿಮರ್ಶಿಸಬೇಕಾದುದು. ಪೈಶಾಚೀಸ್ತ್ರೀಯೆಂದರೆ ಈ ವಿಶೇಷಣವು ಉಚಿತವಾಗಿರುತ್ತದೆ, ಉಷಸ್ಸೆಂದರೆ ಹೊಂದಿಕೊಳ್ಳುವುದಿಲ್ಲ ಎಂದು ಹೇಳಿದರೆ, ಅದಕ್ಕುತ್ತರವಾಗಿ, ಪೇಷೀ ಎಂಬುದು ಉಷಸ್ಸಿನ ಸ್ವರೂಪವನ್ನು ವರ್ಣಿಸುವ ವಿಶೇಷಣವೆಂದು ಧಾರಾಳವಾಗಿ ಹೇಳಬಹುದು.

ಏತದ್ಘೇದುತ ವೀರ್ಯ೧ಮಿಂದ್ರ ಚಕರ್ಥ ಪೌಂಸ್ಯಂ ।
ಸ್ತ್ರಿಯಂ ಯದ್ದುರ್ಹಣಾಯುವಂ ವಧೀರ್ದುಹಿತರಂ ದಿವಃ ॥
(ಋ. ಸಂ. ೪-೩೦-೮)

ದಿವಶ್ಚಿದ್ಘಾ ದುಹಿತರಂ ಮಹಾನ್ ಮಹಿಯಮಾನಾಂ ।
ಉಷಾಸಮಿಂದ್ರ ಸಂ ಪಿಣಕ್ ॥

(೪-೩೦-೯)

ಈ ಇಂದ್ರನು ಪರಾಕ್ರಮಶಾಲಿಯು. ಇವನು ದ್ಯುಲೋಕ ಪುತ್ರಿಯಾದ ಉಷಸ್ಸನ್ನು ಪ್ರಬಲವಾಗಿ ಹೊಡೆದನು. ತನ್ನ ಆತ್ಮ ಪ್ರಶಂಸೆಯಲ್ಲೇ ನಿರತಳಾಗಿದ್ದ ಉಷಸ್ಸನ್ನು ಇಂದ್ರನು ಪೂರ್ಣವಾಗಿ ಮರ್ದನಮಾಡಿದನು.

ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ॥
ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥

(೪-೩೦-೧೦, ೧೧)

ಉಷಸ್ಸಿನ ರಥವು ಛಿದ್ರವಾದೊಡನೆಯೇ ಅವಳು ಇಂದ್ರನಿಗೆ ಬೆದರಿ ಓಡಿದಳು. ಅವಳು ಬಿಟ್ಟು ಹೋದ ರಥವು ಛಿದ್ರಿತವಾಗಿ ಅಲ್ಲಿಯೇ ಉಳಿಯಿತು ಇತ್ಯಾದಿಯಾಗಿ ಇಂದ್ರನಿಂದ ಹಿಂಸಿತಳಾದ ಉಷಸ್ಸು ಸಂ ಪಿಣಕ್, ಸು ಸಂಪಿಷ್ಟ ಇತ್ಯಾದಿ ವಿಶೇಷಣಗಳುಳ್ಳ ಮಂತ್ರಗಳಿಂಧ ಪ್ರಶಂಸಿಸಲ್ಪಟ್ಟಿದ್ದಾಳೆ. ಸಂ ಪಿಣಕ್ ಎಂಬುದು ಅವಳ ಸ್ಥಿತಿಯನ್ನು ತಿಳಿಸುತ್ತದೆ. ಸು ಸಂಪಿಷ್ಟ ಎಂಬುದು ಅವಳ ರಥದ ಸ್ಥಿತಿಯನ್ನು ತಿಳಿಸುತ್ತದೆ. ಆದುದರಿಂದ ಪ್ರಕೃತವಾದ ಮಂತ್ರದಲ್ಲಿ ಪೇಷೀ ಎಂಬ ವಿಶೇಷಣವೂ ಸಹ ಉಷಸ್ಸಿನ ಹಿಂಸಿತವಾದ ಸ್ವರೂಪವನ್ನು ತಿಳಿಸಬಹುದು.

ಈ ಅರ್ಥವು ಹೊಂದುವುದಾದರೆ, ಇಂದ್ರನಿಂದ ಹಿಂಸಿತಳಾದ ಉಷಸ್ಸು ತನ್ನ ಪುತ್ರನಾದ ಅಗ್ನಿಯನ್ನು ಧರಿಸಿ ಪೋಷಿಸಿದುದೂ ಉಷಸ್ಸಿನ ಆವಿರ್ಭಾವವಾದೊಡನೆಯೇ ಅಗ್ನಿಯ ಪ್ರಜ್ವಲನವೂ ನಂತರ ಯಜಮಾನನು ಅಗ್ನಿಯನ್ನು ಕಾಣುವುದೂ ವರ್ಣಿತವಾಗಿದೆಯೆಂದು ಹೇಳಬಹುದು.



॥ ಸಂಹಿತಾಪಾಠಃ ॥

ಹಿರಣ್ಯದಂತಂ ಶುಚಿವರ್ಣಮಾರಾತ್ಕ್ಷೇತ್ರಾದಪಶ್ಯಮಾಯುಧಾ ಮಿಮಾನಂ ।
ದದಾನೋ ಅಸ್ಮಾ ಅಮೃತಂ ವಿಪೃಕ್ವತ್ಕಿಂ ಮಾಮನಿಂದ್ರಾಃ ಕೃಣವನ್ನನುಕ್ಥಾಃ ॥ ೩ ॥

॥ ಪದಪಾಠಃ ॥

ಹಿರಣ್ಯಽದಂತಂ । ಶುಚಿಽವರ್ಣಂ । ಆರಾತ್ । ಕ್ಷೇತ್ರಾತ್ । ಅಪಶ್ಯಂ । ಆಯುಧಾ । ಮಿಮಾನಂ ।
ದದಾನಃ । ಅಸ್ಮೈ । ಅಮೃತಂ । ವಿಪೃಕ್ವತ್ । ಕಿಂ । ಮಾಂ । ಅನಿಂದ್ರಾಃ । ಕೃಣವನ್ । ಅನುಕ್ಥಾಃ ॥ ೩ ॥

॥ ಸಾಯಣಭಾಷ್ಯಂ ॥

ಹಿರಣ್ಯದಂತಂ ಹಿರಣ್ಯಸದೃಶದಂತಸ್ಥಾನೀಯಜ್ವಾಲೋಪೇತಂ ಶುಚಿವರ್ಣಂ ಪ್ರದೀಪ್ತವರ್ಣ-ಮಾಯುಧಾಯುಧಾನ್ಯಾಯುಧಸ್ಥಾನೀಯಾನ್ ಸ್ಫುಲಿಂಗಾನ್ ಜ್ವಾಲಾ ವಾ ಮಿಮಾನಂ ನಿರ್ಮಿಮಾಣ-ಮಗ್ನಿಮಾರಾತ್ಸಮೀಪೇ ಕ್ಷೇತ್ರಾತ್ ಕ್ಷೇತ್ರೇ ದೇಶೇಽಪಶ್ಯಂ। ಪಶ್ಯೇಯಂ । ಏವಂ ವೃಶಃ ಕಾಮಯತೇ । ಅಹಮಸ್ಮಾ ಅಗ್ನಯೇಽಮೃತಮವಿನಾಶ್ಯಮೃತತ್ವಸಾಧನಂ ವಾ ವಿಪೃಕ್ವತ್ಸರ್ವತೋ ವ್ಯಾಪ್ತಂ ಹವಿಃ ಸ್ತೋತ್ರಂ ವಾ ದದಾನಃ । ದಾತಾಸ್ಮಿ । ಮಾಮನಿಂದ್ರಾಃ । ಇಂದ್ರಃ ಪರಮೈಶ್ವರ್ಯೋಽಗ್ನಿಃ । ತದ್ರಹಿತಾ ಅನಿಂದ್ರಾಃ । ಇಂದ್ರಮಯಜಂತ ಇತ್ಯರ್ಥಃ । ಅನುಕ್ಥಾ ಅಸ್ತುತಯ ಇಂದ್ರಮಸ್ತುವಂತಶ್ಚ ಕಿಂ ಕೃಣವನ್ । ಕಿಂ ಕುರ್ಯುಃ ॥

॥ ಪ್ರತಿಪದಾರ್ಥ ॥

ಹಿರಣ್ಯದಂತಂ—ಹಿರಣ್ಯನಿರ್ಮಿತವಾದ ದಂತದಂತೆ ಪ್ರಕಾಶಿಸುವ ಜ್ವಾಲಾಯುಕ್ತನೂ । ಶುಚಿವರ್ಣಂ—ಪ್ರಭಾಯುತವಾದ ವರ್ಣವುಳ್ಳವನೂ । ಆಯುಧಾ—ಆಯುಧಗಳಂತಿರುವ ಕಿಡಿಗಳನ್ನು । ಮಿಮಾನಂ—ನಿರ್ಮಿಸುವವನೂ ಆದ ಅಗ್ನಿಯನ್ನು । ಆರಾತ್—ಸಮೀಪಸ್ಥವಾದ । ಕ್ಷೇತ್ರಾತ್—ಪ್ರದೇಶದಲ್ಲಿ । ಅಪಶ್ಯಂ—ನೋಡಿದ್ದೇನೆ । ಅಸ್ಮೈ—ಈ ಅಗ್ನಿಗೆ । ಅಮೃತಂ—ಅಮೃತತ್ವಸಾಧಕವಾದುದೂ । ವಿಪೃಕ್ವತ್—ಸರ್ವತ್ರ ವ್ಯಾಪ್ತವಾದುದೂ ಆದ ಹವಿಸ್ಸನ್ನು । ದದಾನಃ—ಅರ್ಪಿಸುವ । ಮಾಂ—ನನ್ನನ್ನು । ಅನಿಂದ್ರಾಃ—ಪರಮೈಶ್ವರ್ಯಯುಕ್ತನಾದ ಅಗ್ನಿಯನ್ನು ಪೂಜಿಸದಿರುವವರೂ । ಅನುಕ್ಥಾಃ—ಅವನಿಗೆ ಸ್ತುತಿಯನ್ನರ್ಪಿಸದಿರುವವರೂ ಆದ ನಾಸ್ತಿಕರು । ಕಿಂ ಕೃಣವನ್—ಏನು ತಾನೇ ಮಾಡಬಲ್ಲರು?

॥ ಭಾವಾರ್ಥ ॥

ಹಿರಣ್ಯನಿರ್ಮಿತವಾದ ದಂತದಂತೆ ಪ್ರಕಾಶಿಸುವ ಜ್ವಾಲಾಯುಕ್ತನೂ ಪ್ರಭಾಯುತವಾದ ವರ್ಣವುಳ್ಳವನೂ, ಆಯುಧಗಳಂತಿರುವ ಕಿಡಿಗಳನ್ನು ನಿರ್ಮಿಸುವವನೂ ಆದ ಅಗ್ನಿಯನ್ನು ಸಮೀಪಸ್ಥವಾದ ಪ್ರದೇಶದಲ್ಲಿ ನಾನು ನೋಡಿದ್ದೇನೆ. ಇಂತಹ ಅಗ್ನಿಗೆ ಅಮೃತತ್ವಸಾಧಕವಾದುದೂ, ಸರ್ವತ್ರ ವ್ಯಾಪ್ತವಾದುದೂ ಆದ ಹವಿಸ್ಸನ್ನು ಅರ್ಪಿಸುವ ನನ್ನನ್ನು, ಪರಮೈಶ್ವರ್ಯಯುಕ್ತನಾದ ಅಗ್ನಿಯನ್ನು ಪೂಜಿಸದಿರುವವರೂ, ಅವನಿಗೆ ಸ್ತುತಿಯನ್ನರ್ಪಿಸದಿರುವವರೂ ಆದ ನಾಸ್ತಿಕರು ಹಿಂಸಿಸಲಾರರು.

## English Translation.

I have seen him from a near place, golden-toothed, bright-coloured wielding (flames-like) weapons, (when) offering to him the ambrosial, all-diffusing (oblation) : what can those who acknowledge not Indra, who repeat not his praise, do unto me?

॥ ವಿಶೇಷವಿಷಯಗಳು ॥

ಹಿರಣ್ಯದಂತಂ ಇತ್ಯಾದಿ ವಿಶೇಷಣಗಳಿಂದ ಪ್ರಕೃತವಾದ ಮಂತ್ರದಲ್ಲಿ ಅಗ್ನಿಯನ್ನು ಪ್ರಶಂಸಿಸಿದೆ. ಆದರೆ, ಇಲ್ಲಿ, ಅನಿಂದ್ರಾಃ ಎಂಬ ಪದದ ತಾತ್ಪರ್ಯವನ್ನು ತಿಳಿಯಬೇಕಾದುದು ಅವಶ್ಯವಾಗಿರುತ್ತದೆ. ಈ ಪದಕ್ಕೆ ಸಾಯಣರ ನಿರ್ವಚನವು ಈ ರೀತಿಯಲ್ಲಿರುತ್ತದೆ.

ಇಂದ್ರಃ ಪರಮೈಶ್ವರ್ಯಃ ಅಗ್ನಿಃ । ತದ್ರಹಿತಾಃ ಅನಿಂದ್ರಾಃ । ಇಂದ್ರಮಯಜಂತ ಇತ್ಯರ್ಥಃ । ಇಂದ್ರ ಶಬ್ದಕ್ಕೆ ಪರಮೈಶ್ವರ್ಯವೆಂದರ್ಥ. ಈ ಐಶ್ವರ್ಯಯುಕ್ತನಾದುದರಿಂದ ಅಗ್ನಿಯೂ ಇಂದ್ರಶಬ್ದವಾಚ್ಯನು. ಆದುದರಿಂದ ಇಲ್ಲಿ ಅನಿಂದ್ರಾಃ ಎಂಬುದಕ್ಕೆ ಇಂದ್ರಪೂಜಕರಲ್ಲದ ಎಂದರೆ, ಅಗ್ನಿಪೂಜಕರಲ್ಲದ ಅವೈದಿಕರು ಎಂದರ್ಥ.

ಈ ನಿರ್ವಚನವು ನಿರುಕ್ತಕಾರರು ಇಂದ್ರಶಬ್ದಕ್ಕೆ ಹೇಳಿರುವ ಅನೇಕ ವಿವರಣೆಗಳಲ್ಲೊಂದಾಗಿದೆ. ಅವನ್ನೆಲ್ಲಾ ಹಿಂದೆ ವಿಶದವಾಗಿ ತಿಳಿಸಿದೆ. ಆದರೆ, ಅಗ್ನಿಯು ಇಂದ್ರ ಶಬ್ದವಾಚ್ಯನಾಗಿರುವುದರಿಂದ ಈ ಪದಕ್ಕೆ ನಿಸ್ಸೃಷ್ಟವಾದ ಅರ್ಥವನ್ನು ತಿಳಿಯಬೇಕು. ಅನಂತರ ಇಂದ್ರನಿಗೂ ಅಗ್ನಿಗೂ ಇರುವ ತಾದಾತ್ಮ್ಯವನ್ನು ಪರಿಶೀಲಿಸಬಹುದು. ನಿರುಕ್ತಕಾರರಿಗೂ ಪೂರ್ವದಲ್ಲಿಯೇ ಇಂದ್ರಶಬ್ದಾರ್ಥವನ್ನು ವಿವರಿಸಲಾಗಿದೆ.

> ಇಂಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷಸ್ತಂ ವಾ ಏತಮಿಂಧಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣೈವ ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ ।
>
> (ಶ. ಬ್ರಾ. ೧೪-೬-೧೧-೨; ಬೃ. ಉ. ೪-೨-೨)

ದಕ್ಷಿಣಾಕ್ಷಿಯಲ್ಲಿರುವ ಪುರುಷನು ಪ್ರಜ್ವಲಿತವಾದ ವಿಶೇಷಗುಣವಿರುವುದರಿಂದ ಇಂದ್ರಶಬ್ದವಾಚ್ಯನಾಗಿದ್ದಾನೆ. (ಇದು ಅಗ್ನಿಯ ಎಂದರೆ ತೇಜಸ್ಸಿನ ಗುಣವಾಗಿರುತ್ತದೆ). ತೇಜೋಯುಕ್ತನಾದುದರಿಂದ ತಿಳಿದವರು ಈ ಪುರುಷನನ್ನು ಇಂದ್ರನೆಂದು ನಿರ್ದೇಶಿಸುತ್ತಾರೆ ಎಂದು ತಿಳಿಸಿದೆ. ಇದನ್ನೇ ಇನ್ನೂ ವಿವರವಾಗಿ ಬೇರೆ ಕಡೆ ಈ ರೀತಿ ಉಕ್ತವಾಗಿದೆ.

> ಸ ಯೋಽಯಂ ಮಧ್ಯೇ ಪ್ರಾಣಃ । ಏಷ ಏವೇಂದ್ರಸ್ತಾನೇಷ ಪ್ರಾಣಾನ್ಮಧ್ಯತ ಇಂದ್ರಿಯೇಣೈಂಧ ಯದೈಂಧ ತಸ್ಮಾದಿಂಧ ಇಂಧೋ ಹ ವೈ ತಮಿಂದ್ರ ಇತ್ಯಾಚಕ್ಷತೇ ॥
>
> (ಶ. ಬ್ರಾ. ೬-೧-೧-೨)

ದೇಹಮಧ್ಯವರ್ತಿಯಾದ ಈ ಪ್ರಾಣವೇ ಇಂದ್ರನು. ಈ ತತ್ತ್ವವೇ ದೇಹದ ಇತರ ಪ್ರಾಣಿಗಳಿಗೂ ಚೈತನ್ಯವನ್ನೂ ತೇಜಸ್ಸನ್ನೂ ಒದಗಿಸುತ್ತದೆ. ಈ ರೀತಿ ಉಳಿದ ಪ್ರಾಣಿಗಳಿಗೂ ತೇಜಸ್ಸನ್ನೊದಗಿಸುವುದರಿಂದ ಈ ತತ್ತ್ವವು ಇಂದ್ರ ಶಬ್ದವಾಚ್ಯವು ಎಂದಿದೆ. "ಅಸ್ಮಿನ್ ವಾ ಇದಮಿಂದ್ರಿಯಂ" ಇತ್ಯಾದಿಯಾಗಿ ತೈತ್ತಿರೀಯಬ್ರಾಹ್ಮಣದಲ್ಲೂ ಈ ಅರ್ಥವನ್ನೇ ತಿಳಿಸಿದೆ. (ತೈ. ಬ್ರಾ. ೨-೨-೧೦-೪) ಇದಲ್ಲದೇ ಯಾಸ್ಕರ ಸುಮಾರು ಹದಿನೈದು ವಿಧವಾದ ನಿರ್ವಚನವನ್ನು ಹಿಂದೆ ಉದ್ಧರಿಸಿ ವಿವರಿಸಿದೆ.

ಈ ರೀತಿಯಾಗಿ ಇಂಧ್ ಶಬ್ದವು ಪ್ರಜ್ವಲಿತವಾದ ತೇಜಸ್ಸು ಎಂಬರ್ಥವನ್ನು ಕೊಡುವ ಪದಗಳಿಗೆ ಮೂಲರೂಪವಾಗಿದೆ. ಪ್ರಸಿದ್ಧನಾದ ಇಂದ್ರನಿಗೆ ಮಾತ್ರವಲ್ಲದೇ, ತೇಜೋಯುತರಾದ ಇತರ ದೇವತೆಗಳ ಪರವಾಗಿಯೂ ಈ ಪದದ ಪ್ರಯೋಗವಿರುತ್ತದೆ.

ಅಭೂದುಷಾ ಇಂದ್ರತಮಾ ಮಘೋನ್ಯಜೀಜನತ್ಸುವಿತಾಯ ಶ್ರವಾಂಸಿ ।
ವಿ ದಿವೋ ದೇವೀ ದುಹಿತಾ ದಧಾತ್ಯಂಗಿರಸ್ತಮಾ ಸುಕೃತೇ ವಸೂನಿ ॥

(ಋ. ಸಂ. ೭-೭೯-೩)

ಎಂಬಲ್ಲಿ ಇಂದ್ರತಮಾ ಎಂಬುದಕ್ಕೆ ಸಾಯಣರು ಸರ್ವಸ್ಯ ಈಶ್ವರತಮಾ ಎಂದು ಅರ್ಥಮಾಡಿದ್ದರೂ ಸಹ, ಮೇಲೆ ಶತಪಥಾದಿ ಬ್ರಾಹ್ಮಣವಾಕ್ಯಗಳಲ್ಲಿ ಹೇಳಿರುವಂತೆ ಇಲ್ಲಿಯೂ ಸಹ ಅತ್ಯಂತ ತೇಜೋಯುತಳಾದ ಎಂಬರ್ಥವೇ ಸಹಜ ವಾಗಿರುತ್ತದೆ. ಹೀಗೆಯೇ,

ಇಂದ್ರತಮಾ ಹಿ ಧಿಷ್ಣ್ಯಾ ಮರುತ್ತಮಾ ದಸ್ರಾ ದಂಸಿಷ್ಠಾ ರಥ್ಯಾ ರಥೀತಮಾ ।

(ಋ. ಸಂ. ೧-೧೮೨-೨)

ಎಂಬಲ್ಲಿ ಅಶ್ವಿನೀದೇವತೆಗಳಿಗೆ ವಿಶೇಷಣವಾಗಿ ಪ್ರಯುಕ್ತವಾಗಿರುವಾಗಲೂ ಸಹ ಇದೇ ಅರ್ಥವನ್ನು ಹೇಳಬೇಕಾಗುತ್ತದೆ. ಇಂದ್ರನೂ ಸಹ ಈ ತೇಜೋಗುಣವಿರುವುದರಿಂದಲೇ, ಅಗ್ನಿಯಿಂದ ನಿರ್ವಹಿಸಲ್ಪಡುವ ಕಾರ್ಯವನ್ನೂ ಮಾಡುವವನೆಂದು ವರ್ಣಿತನಾಗಿದ್ದಾನೆ. ಉದಾಹರಣೆಗೆ—

ಇಂದ್ರಃ ಸಮತ್ಸು ಯಜಮಾನಮಾರ್ಯಂ................ ।
ಧಕ್ಷನ್ನ ವಿಶ್ವಂ ತತೃಷಾಣಮೋಷತಿ ನ್ಯರ್ಶಸಾನಮೋಷತಿ ॥

(ಋ. ಸಂ. ೧-೧೩೦-೮)

ಇಂದ್ರನು ಕರ್ಮರಹಿತರಾದ ಅಸುರಾದಿಗಳನ್ನೂ, ಅವರ ಅನುಚರರನ್ನೂ ದಹಿಸಿ ಭಸ್ಮಮಾಡಿದನೆಂದು ವರ್ಣಿತವಾಗಿದೆ. (ದಹನಕರ್ಮವು ಅಗ್ನಿಯ ಕಾರ್ಯ). ಮತ್ತು,

ಭೀಮಸ್ತುವಿಷ್ಮಾನ್ ಚರ್ಷಣಿಭ್ಯ ಆತಪಃ ಶಿಶೀತೇ ವಜ್ರಂ ತೇಜಸೇ ನ ವಂಸಗಃ ।

(ಋ. ಸಂ. ೧-೫೫-೧)

ಎಂಬಲ್ಲಿಯೂ ಆತಪಃ ಎಂಬುದು ಇಂದ್ರನ ಗುಣವನ್ನು ತೋರಿಸುವ ವಿಶೇಷಣ. ಆಸಮಂತಾತ್ತಾಪಕಾರಿ ಸುತ್ತಲೂ ತಾಪವನ್ನುಂಟುಮಾಡುವನು ಎಂದರ್ಥ. ಇದೂ ಸಹ ಅಗ್ನಿಯಕಾರ್ಯ, ಮತ್ತು ಇಂದ್ರವಿಶೇಷಣವಾಗಿದೆ. ಋ. ಸಂ. ೩-೩೧-೧೦ ನೇ ಮಂತ್ರದಲ್ಲಿ ಪ್ರತ್ನಸ್ಯ ರೇತಸಃ ಎಂಬುದು ಇಂದ್ರವರ್ಣನೆಯಾದರೂ, ಈ ಸನ್ನಿವೇಶದಲ್ಲಿ ಆದಿತ್ಯನ ಸ್ವರೂಪವನ್ನು ತಿಳಿಸುವುದಾಗಿದೆ. ಎಂದರೆ, ಇಂದ್ರನೇ ಆದಿತ್ಯನ ಗುಣವನ್ನು ಹೊಂದಿರುವವನು ಎಂದೂ ಹೇಳ ಬಹುದು. ಆದುದರಿಂದ ಅಗ್ನಿಯ ರೂಪಾಂತರವಾದ ಆದಿತ್ಯನಿಗೂ ಇಂದ್ರನಿಗೂ ತಾದಾತ್ಮ್ಯವನ್ನು ಹೇಳಿದೆಯೆಂದೂ ಹೇಳಬಹುದು. ಹೀಗೆಯೇ, ಇಂದ್ರನು ಅಗ್ನಿಕೃತವಾದ ಕರ್ಮಗಳನ್ನು ಮಾಡತಕ್ಕವನು, ತೇಜೋಯುತನು, ಶತ್ರು ಗಳನ್ನು ದಹಿಸತಕ್ಕವನು ಎಂದು ಹೇಳಿರುವಂತೆಯೇ, ಅಗ್ನಿಯೂ ಸಹ ಅನೇಕವೇಳೆ ಇಂದ್ರನಿಯತವಾದ ಕರ್ಮ ಗಳನ್ನು ಮಾಡತಕ್ಕವನೆಂದೂ ವರ್ಣಿತನಾಗಿದ್ದಾನೆ

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।
ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥

(ಋ. ಸಂ. ೧-೫೯-೬)

ಎಂಬಲ್ಲಿ ಅಗ್ನಿಯು ವೃತ್ರಹಂತಕನೆಂದೂ, ಶಂಬರಾಸುರನ ಭೇದಕನೆಂದೂ ವರ್ಣಿತನಾಗಿದ್ದಾನೆ. ಇವೆರಡೂ ಇಂದ್ರನ ಕರ್ಮಗಳೆಂದು ಪ್ರಸಿದ್ಧವಾಗಿದೆ. ಹೀಗೆಯೇ, "ತಮು ತ್ವಾ ವೃತ್ರಹಂತಮಂ......." ಇತ್ಯಾದಿಯಾಗಿಯೂ (೧-೭೮-೪) ಅನೇಕ ಕಡೆಗಳಲ್ಲಿ ಅಗ್ನಿಯು ವರ್ಣಿತನಾಗಿದ್ದಾನೆ. ಅಲ್ಲದೇ ಇಂದ್ರನಿಗೂ ಅಗ್ನಿಗೂ ಸ್ಪಷ್ಟವಾಗಿ ತಾದಾತ್ಮ್ಯವನ್ನೇ ಹೇಳಿರುವ ಸನ್ನಿವೇಶಗಳೂ ಹೇರಳವಾಗಿದೆ. ಉದಾಹರಣೆಗೆ—

"ಅಥ ಯತ್ರೈತತ್ಪ್ರದೀಪ್ತೋ ಭವತಿ। ಉಚ್ಚೈರ್ಧೂಮಃ ಪರಮಯಾ ಜೂತ್ಯಾ ಬಲ್ಬಲೀತಿ ತರ್ಹಿ ಹೈಷ ಭವತೀಂದ್ರಃ ॥

(ಶ. ಬ್ರಾ. ೨-೩-೨-೧೧)

ಇದೇ ಅಗ್ನಿಯು ಪೂರ್ಣವಾಗಿ ಪ್ರಜ್ವಲಿತನಾಗಿ, ತನ್ನ ಜ್ವಾಲೆಗಳಿಂದ ವ್ಯಾಪಿಸುತ್ತಲೂ, ಧೂಮಗಳನ್ನು ಹರಡುತ್ತಲೂ ವೇಗವಾಗಿ ಊರ್ಧ್ವಮುಖನಾಗಿ ಪ್ರಸರಿಸುವ ಕಾಲದಲ್ಲಿ ಇವನನ್ನೇ ಇಂದ್ರನೆಂದು ಪ್ರಶಂಸಿಸುತ್ತಾರೆ.

ಸ ಉಪಹವಮಿಷ್ಟ್ವಾ ಭಕ್ಷಯತಿ ಮಧು ಹುತಮಿಂದ್ರತಮೇಽಗ್ನಾವಿತಿ।

(ಶ. ಬ್ರಾ. ೧೪-೨-೨-೪೨)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯನ್ನು ಅತ್ಯಂತ ಶ್ರೇಷ್ಠನಾದ ಇಂದ್ರನೆಂದೇ ಸ್ತುತಿಸಿದೆ. ಹೀಗೆ ಇಂದ್ರಾಗ್ನಿಗಳ ತಾದಾತ್ಮ್ಯವು ಅನೇಕ ಕಡೆಗಳಲ್ಲಿ ವರ್ಣಿತವಾಗಿರುವುದರಿಂದ ಪ್ರಕೃತದಲ್ಲಿ ಅನಿಂದ್ರಾಃ ಎಂಬ ಅಗ್ನಿವಿಶೇಷವಾಚಕವು ಉಚಿತವಾಗಿದೆ.



॥ ಸಂಹಿತಾಪಾಠಃ ॥

ಕ್ಷೇತ್ರಾದಪಶ್ಯಂ ಸನುತಶ್ಚರಂತಂ ಸುಮದ್ಯೂಥಂ ನ ಪುರು ಶೋಭಮಾನಂ।

ನ ತಾ ಅಗೃಭ್ರನ್ನಜನಿಷ್ಟ ಹಿ ಷಃ ಪಲಿಕ್ನೀರಿದ್ಯುವತಯೋ ಭವಂತಿ ॥ ೪ ॥

॥ ಪದಪಾಠಃ ॥

ಕ್ಷೇತ್ರಾತ್। ಅಪಶ್ಯಂ। ಸನುತರಿತಿ। ಚರಂತಂ। ಸುಽಮತ್। ಯೂಥಂ। ನ। ಪುರು। ಶೋಭಮಾನಂ।

ನ। ತಾಃ। ಅಗೃಭ್ರನ್। ಅಜನಿಷ್ಟ। ಹಿ। ಸಃ। ಪಲಿಕ್ನೀಃ। ಇತ್। ಯುವತಯಃ। ಭವಂತಿ॥ ೪ ॥

॥ ಸಾಯಣಭಾಷ್ಯಂ ॥

ಅಹಂ ವೃಶ ಇದಾನೀಂ ಕ್ಷೇತ್ರಾತ್ ಕ್ಷೇತ್ರೇ ಸನುತಃ। ಅಂತರ್ಹಿತನಾಮೈತತ್। ನಿಗೂಢಂ ಚರಂತಮರಣ್ಯಾಂ ಯೂಥಂ ನ ಗವಾಂ ಸಮೂಹಮಿವ ಸುಮತ್ಸ್ವಯಮೇವ ಪುರು ಬಹು ಶೋಭಮಾ-

ನಮಪಶ್ಯಂ। ಪಶ್ಯಾಮಿ। ಪುರಾ ಹರಸಃ ಪಿಶಾಚ್ಯಾಕ್ರಮಣಕಾಲೇ ತಾ ಜ್ವಾಲಾ ನಿರ್ವೀರ್ಯಾ ನಾಗೃಭ್ರನ್ । ನಾಗೃಹ್ಣಂತ ನರಾಃ । ಇದಾನೀಂ ಸೋऽಗ್ನಿರಜನಿಷ್ಟ ಹಿ । ಹರಸಾ ಪ್ರಾದುರಭೂತ್ಖಲು । ಅತ ಏವ ಹೇತೋಃ ಪಲಿಕ್ನೀರಿತ್ಪಲಿಕ್ನ್ಯಃ ಪಲಿತಾ ಜೀರ್ಣಾ ಜ್ವಾಲಾ ಏವೇದಾನೀಂ ಯುವತಯೋ ಭವಂತಿ ॥

॥ ಪ್ರತಿಪದಾರ್ಥ ॥

ಕ್ಷೇತ್ರಾತ್—ಒಂದು ಪ್ರದೇಶದಿಂದ (ಮತ್ತೊಂದು ಪ್ರದೇಶಕ್ಕೆ) । ಸನುತಃ—ಗುಪ್ತವಾಗಿ । ಸುಮತ್—ತಾನಾಗಿಯೇ । ಚರಂತಂ—ಸಂಚರಿಸುವವನ್ನೂ । ಯೂಥಂ ನ—ಗೋವುಗಳ ಹಿಂಡಿನಂತೆ । ಪುರು—ಅಧಿಕವಾಗಿ । ಶೋಭಮಾನಂ—ಪ್ರಕಾಶಿಸುವವನೂ ಆದ ಅಗ್ನಿಯನ್ನು । ಅಪಶ್ಯಂ— ನಾನು ನೋಡುತ್ತೇನೆ । ತಾಃ—ಹಿಂದೆ ಪ್ರವೃದ್ಧವಾಗಿದ್ದ ಆ ಜ್ವಾಲೆಗಳನ್ನು । ನ ಅಗೃಭ್ರನ್—ಯಾರೂ ನೋಡಲಾಗಲಿಲ್ಲ । ಸಃ— ಅದೇ ಅಗ್ನಿಯು । ಅಜನಿಷ್ಟ ಹಿ—ಪುನಃ ಉತ್ಪನ್ನನಾಗಿದ್ದಾನೆ । ಪಲಿಕ್ನೀರಿತ್—ವಾರ್ಧಕ್ಯವನ್ನು ಹೊಂದಿದ್ದ ಅದೇ ಜ್ವಾಲೆಗಳು ಯುವತಯಃ—ತಾರುಣ್ಯವನ್ನು ಹೊಂದಿದವುಗಳಾಗಿ । ಭವಂತಿ—ಆಗಿವೆ.

॥ ಭಾವಾರ್ಥ ॥

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಗೋವುಗಳ ಹಿಂಡಿನಂತೆ ಸ್ವತಃ ಸಂಚರಿಸುವವನೂ, ಅತ್ಯಧಿಕವಾಗಿ ಪ್ರಕಾಶಿಸುವವನೂ ಆದ ಅಗ್ನಿಯನ್ನು ನಾನು ನೋಡುತ್ತೇನೆ. ಹಿಂದೆ ಪ್ರವೃದ್ಧವಾಗಿದ್ದ ಆ ಜ್ವಾಲೆಗಳನ್ನು ಯಾರೂ ನೋಡಲಾಗಲಿಲ್ಲ. ಅದೇ ಅಗ್ನಿಯು ಪುನಃ ಉತ್ಪನ್ನನಾಗಿದ್ದಾನೆ. ವಾರ್ಧಕ್ಯವನ್ನು ಹೊಂದಿದ್ದ ಅದೇ ಜ್ವಾಲೆಗಳು ಪುನಃ ತಾರುಣ್ಯವನ್ನು ಹೊಂದಿದವುಗಳಾಗಿ ಆಗಿವೆ.

## English Translation.

I have seen him passing secretly from place (to place) like a herd (of cattle), shining brightly of his own accord : they apprehended not those (flames of his), but he has (again) been born, and they which had become grey-haired are (once more) young.

॥ ವಿಶೇಷವಿಷಯಗಳು ॥

ಸನುತಃ—ಈ ಪದವು ನಿಣ್ಯಂ, ಸ್ವಸಃ ಇತ್ಯಾದಿ ಅಂತರ್ಹಿತನಾಮಗಳಲ್ಲಿ ಪಠಿತವಾಗಿದೆ. (ನಿ. ೩-೨೫) ರಹಸ್ಯವಾದುದು, ಸಾಧಾರಣವಾಗಿ ಇತರರ ಗೋಚರಕ್ಕೆ ಬರದಿರುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ದುಷ್ಟರನ್ನು ದೂರಮಾಡಿ ಕಣ್ಮರೆಯಾಗಿರು ಎಂದು ಪ್ರಾರ್ಥಿಸುವ ಸನ್ನಿವೇಶಗಳಲ್ಲೆಲ್ಲಾ ಈ ಪದದ ಪ್ರಯೋಗವು ಅಧಿಕವಾಗಿರುತ್ತದೆ.

ಯೂಯಂ ದೇವಾಃ ಪ್ರಮತಿರ್ಯೂಯಮೋಜೋಯೂಯಂ ದ್ವೇಷಾಂಸಿ ಸನುತರ್ಯುಯೋತ.

(ಋ. ಸಂ. ೨-೨೯-೨)

ಆರೇ ದ್ವೇಷಾಂಸಿ ಸನುತರ್ದಧಾಮಾಯಾಮ ಪ್ರಾಂಚೋ ಯಜಮಾನಮಚ್ಛ ॥

(ಋ. ಸಂ. ೫-೪೫-೫)

ಸ್ತೈಃ ಷ ವಿಶ್ವೈರ್ಮರ್ಯಮುರತ್ಸ್ಪೋಽಸ್ಯಂ ರಯಿಂ ಸನುತರ್ಧೇಹಿ ತಂ ತತಃ (ಋ. ಸಂ. ೮-೯೭-೩);
ವಿದಾನಾಸೋ ವಸವೋ ರಾಧ್ಯಸ್ಯಾ ರಾಚ್ಚಿದ್ದ್ವೇಷಸ್ಸನುತರ್ಯುಯೋತ (ಋ. ಸಂ ೧೦-೭೭-೬).
ಹೀಗೆ ದ್ವೇಷಿಗಳನ್ನು ದೂರವಾಗಿಡು, ಎಂಬ ಪ್ರಾರ್ಥನೆಗಳಲ್ಲಿಯೇ ಈ ಪದದ ಪ್ರಯೋಗವಿರುವುದು ಒಂದು ವಿಶೇಷ. ಆದರೆ, ಇವುಗಳಲ್ಲಿ ೫-೧೫-೫ ನೇ ಮಂತ್ರದ ಸನುತಃ ಎಂಬ ಪದಕ್ಕೆ ಮಾತ್ರ ಸಾಯಣರು ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ. ಸನುತೃವೆಂಬ ಋಕಾರಾಂತ ಶಬ್ದವನ್ನಾಗಿ ತೋರಿಸಿ ಸನುತಃ ದ್ವೇಷಾಂಸಿ—ಸಂಭಕ್ತ್ಯಾನ್ ಶತ್ರೂನ್ ನಮ್ಮ ಸಂಪತ್ತಿನಲ್ಲಿ ಭಾಗವಹಿಸಬೇಕೆಂಬ ಆಸೆಯುಳ್ಳ ಶತ್ರುಗಳನ್ನು ಎಂದರ್ಥಮಾಡಿದ್ದಾರೆ. ಅಲ್ಲಿಯೂ ಸಹ ಉಳಿದೆಡೆಗಳಲ್ಲಿ ಅವ್ಯಯರೂಪವಾದ ಸನುತಃ ಎಂಬುದಕ್ಕೆ ಯಾವ ಅರ್ಥವನ್ನು ತೋರಿಸಿದ್ದಾರೋ ಅದೇ ರೀತಿ ಅರ್ಥವನ್ನು ಹೇಳಿದ್ದರೂ ತಪ್ಪಾಗಿರಲಾರದು. ಆದರೆ ಸಂಭಕ್ತ್ಯಾನ್ ಎಂದು ಹೇಳಿರುವುದೂ ಅನುಚಿತವಲ್ಲ.

ಪ್ರಕೃತವಾದ ಮಂತ್ರದಲ್ಲಿ ಅಗ್ನಿಯ ಗೂಢವಾದ ಸಂಚಾರವು ವರ್ಣಿತವಾಗಿದೆ. ಯಾರಿಗೂ ಗೋಚರವಾಗದ ರೀತಿಯಲ್ಲಿ ಸಂಚರಿಸುವವನು ಎಂದು ತಾತ್ಪರ್ಯ.

**ಸುಮತ್**—ಸುಮತ್ ಶಬ್ದಕ್ಕೆ ಸ್ವಯಂ ಎಂದರ್ಥ. (ನಿ. ೬-೨೨). ಇತರರ ಪ್ರೇರಣೆಯಿಲ್ಲದೇ ತಾನೇ ನಿರ್ವಹಿಸುವುದು ಎಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ನಿರುಕ್ತಕಾರರ, 'ಉಪ ಪ್ರಾಗಾತ್ಸುಮನ್ಮೇಽಧಾಯಿ' (ಋ. ಸಂ. ೧-೧೬೨-೭) ಎಂಬ ಮಂತ್ರವನ್ನುದಾಹರಿಸಿ ಈ ಪದದ ತಾತ್ಪರ್ಯವನ್ನು ವಿವರಿಸಿದ್ದಾರೆ. 'ಉಪ ಪ್ರಾಗಾತ್ಸುಮತ್' ನಾನು ಇಚ್ಛಿಸಿದ ಅರ್ಥವು ತಾನಾಗಿಯೇ ನನ್ನನ್ನು ಬಂದು ಸೇರಲಿ ಎಂಬುದೇ ಪ್ರಾರ್ಥನೆ. ಈ ಪದವು ಕಲ್ಯಾಣ, ಶೋಭನ ಇತ್ಯಾದ್ಯರ್ಥಗಳಲ್ಲಿ ಪ್ರಯುಕ್ತವಾಗಿರುವುದನ್ನು ಹಿಂದೆ ತಿಳಿಸಿದೆ.

---

॥ ಸಂಹಿತಾಪಾಠಃ ॥

ಕೇ ಮೇ ಮರ್ಯಕಂ ವಿ ಯವಂತ ಗೋಭಿರ್ನ ಯೇಷಾಂ ಗೋಪಾ ಅರಣಶ್ಚಿದಾಸ ।
ಯ ಈಂ ಜಗೃಭುರವ ತೇ ಸೃಜಂತ್ವಾಜಾತಿ ಪಶ್ವ ಉಪ ನಶ್ಚಿಕಿತ್ವಾನ್ ॥ ೫ ॥

॥ ಪದಪಾಠಃ ॥

ಕೇ । ಮೇ । ಮರ್ಯಕಂ । ವಿ । ಯವಂತ । ಗೋಭಿಃ । ನ । ಯೇಷಾಂ । ಗೋಪಾಃ । ಅರಣಃ । ಚಿತ್ । ಆಸ ।
ಯೇ । ಈಂ । ಜಗೃಭುಃ । ಅವ । ತೇ । ಸೃಜಂತು । ಆ । ಅಜಾತಿ । ಪಶ್ವಃ । ಉಪ । ನಃ । ಚಿಕಿತ್ವಾನ್ ॥

। ಸಾಯಣಭಾಷ್ಯಂ ।

ಕೇ ನೋ ಮದೀಯಂ ಮರ್ಯಕಂ ಮರ್ತ್ಯಸಂಘಂ ರಾಷ್ಟ್ರಂ ಗೋಭಿಃ ಸಹ ವಿ ಯವಂತ । ವಿಯುಕ್ತಮಕುರ್ವನ್ । ಗಾ ಭೃತ್ಯಾಂಶ್ಚ ವ್ಯಯೋಜಯನ್ । ಯೇಷಾಂ ಗೋಪಾ ಅಸ್ಮಾಕಂ ಗೋಪಯಿತಾರಣಶ್ಚಿದಭಿಗಂತಾ ನಾಸ । ಬಭೂವ । ಸೋಽಯಮಗ್ನಿಃ । ಯೇ ದ್ವೇಷಿಣ ಈಮೇನಂ ಜನಸಂಘಂ ರಾಷ್ಟ್ರಂ ಜಗೃಭುಃ । ಗೃಹ್ಣಂತಿ । ತೇಽವ ಸೃಜಂತು । ನಶ್ಯಂತು । ಕಿಂಚ ಚಿಕಿತ್ವಾನ್ ಚೇತನಾವಾನಸ್ಮದ್ವಿಷಯಜ್ಞಾನವಾನಗ್ನಿರ್ನೋಽಸ್ಮಾಕಂ ಪಶ್ವಃ ಪಶೂನುಪಾಜಾತಿ । ಉಪಾಗಚ್ಛತಿ ॥

। ಪ್ರತಿಪದಾರ್ಥ ।

ಯೇಷಾಂ—ಯಾವ ನನ್ನ ಸಂಬಂಧಿಯಾದ ಭೃತ್ಯರಿಗೂ ಪಶುಗಳಿಗೂ । ಗೋಪಾಃ—ರಕ್ಷಕನು । ಅರಣಶ್ಚಿತ್—(ಶತ್ರುಗಳನ್ನು) ಪ್ರತಿಭಟಿಸುವವನಾಗಿ । ನ ಆಸ—ಇರಲಿಲ್ಲವೋ ಅಂತಹ । [ನೋ—ನನಗೆ ಸಂಬಂಧಿಸಿದ । ಮರ್ಯಕಂ—(ಭೃತ್ಯರೂಪರಾದ) ಪ್ರಜೆಗಳನ್ನು । ಗೋಭಿಃ—ಗೋವುಗಳಿಂದ । ಕೇ—ಯಾರು । ವಿ ಯವಂತ—ಪ್ರತ್ಯೇಕಿಸಿದ್ದಾರೆ । ಯೇ—ಯಾವ ಶತ್ರುಗಳು । ಈಂ—ಈ ಭೃತ್ಯಸಂಘವನ್ನು । ಜಗೃಭುಃ—ಹಿಡಿದಿದ್ದಾರೋ । ತೇ—ಅವರು । ಅವ ಸೃಜಂತು—ನಾಶವನ್ನು ಹೊಂದಲಿ । ಚಿಕಿತ್ವಾನ್—ನಮ್ಮ ಕಷ್ಟವನ್ನರಿತ ಅಗ್ನಿಯು । ನಃ—ನಮ್ಮ । ಪಶ್ವಃ—ಪಶುಗಳನ್ನು (ಸಂರಕ್ಷಿಸಲು) । ಉಪ ಆಜಾತಿ—ಸಮೀಪಿಸಿ ಬರಲಿ.

। ಭಾವಾರ್ಥ ॥

ಯಾವ ನನ್ನ ಭೃತ್ಯರಿಗೂ ಪಶುಗಳಿಗೂ ರಕ್ಷಕನೂ ಶತ್ರುಗಳನ್ನು ಪ್ರತಿಭಟಿಸುವವನೂ ಆದ ಅಗ್ನಿಯು ಸಮೀಪದಲ್ಲಿಲ್ಲದಿರುವಾಗ ನನ್ನ ಪ್ರಜೆಗಳನ್ನು ಬಂಧಿಸಿ ಅವರನ್ನು ಗೋವುಗಳಿಂದ ಪ್ರತ್ಯೇಕಿಸಿದವರು ಯಾರು ? ನನ್ನ ಈ ಭೃತ್ಯಸಂಘವನ್ನು ಬಂಧಿಸಿರುವ ಶತ್ರುಗಳು ನಾಶವನ್ನು ಹೊಂದಲಿ. ನಮ್ಮ ಕಷ್ಟಗಳನ್ನರಿತ ಅಗ್ನಿಯು ನಮ್ಮ ಪಶುಗಳನ್ನು ಸಂರಕ್ಷಿಸಲು ನಮ್ಮನ್ನು ಸಮೀಪಿಸಿ ಬರಲಿ.

## English Translation.

Who have disunited my people from cattle? Was there not for them an invincible protector ? May they who have seized upon that (people) perish, for he who knows (our wishes) approaches to (protect) the cattle.

॥ ವಿಶೇಷವಿಷಯಗಳು ॥

ಅರಣಃ—ಅರಣ ಶಬ್ದವು ರಣ್ ಧಾತುವಿನಿಂದ ನಿಷ್ಪನ್ನವಾಗಿ ಅದರ ನಿಷೇಧಾರ್ಥವನ್ನು ಸೂಚಿಸುತ್ತದೆ. ರಣ ಶಬ್ದವು ಹರ್ಷಾರ್ಥದಲ್ಲಿಯೂ ಯುದ್ಧವೆಂಬರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ.

ಕೃತೇ ಚಿದತ್ರ ಮರುತೋ ರಣಂತಾನವದ್ಯಾಸಃ ಶುಚಯಃ ಪಾವಕಾಃ ।

(ಋ. ಸಂ. ೭-೫೭-೫)

ಇತ್ಯಾದಿ ಮಂತ್ರಗಳಲ್ಲಿ ಹರ್ಷಧ್ವನಿಯನ್ನು ಸೂಚಿಸುವ ಪದವಾಗಿದೆ. ಅನೇಕ ಕಡೆಗಳಲ್ಲಿ ಯುದ್ಧಪರ್ಯಾಯವಾಗಿದೆ. ಆದುದರಿಂದ ಅರಣ ಪದವು ಹರ್ಷಾಭಾವವನ್ನಾಗಲಿ ಸೂಚಿಸುವುದಾಗಿದೆ. ನಿರುಕ್ತಕಾರರು—

ನಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ ಮಂತವಾ ಉ ।
(ಋ. ಸಂ. ೭-೪-೮)

ಎಂಬ ಮಂತ್ರವನ್ನು ಉದಾಹರಿಸಿ (ನಿ. ೩-೨) ಈ ಪದಪ್ರಯೋಗದ ಸಂದರ್ಭವನ್ನು ಮಾತ್ರ ತಿಳಿಸಿದ್ದಾರೆ. ಸಾಯಣರಿಂದ ಉದಾಹೃತವಾಗಿರುವ ಮಂತ್ರದಲ್ಲಿ ಈ ಪದಕ್ಕೆ ಅರಮಮಾಣಃ ಎಂದರೆ ತಾನೂ ಹರ್ಷಪಡದೇ, ಇತರರನ್ನು ಹರ್ಷಪಡಿಸದೇ ಇರತಕ್ಕವನೆಂದರ್ಥವಾಗುತ್ತದೆ. ಇತರರ ಪುತ್ರನು ಹರ್ಷಕಾರಕನಾಗುವುದಿಲ್ಲವೆಂದರ್ಥ. ಅಥವಾ ಇದೇ ಅರ್ಥವನ್ನು ಕೊಡುವುದರಿಂದಲೇ ಶತ್ರುವೆಂದೂ ಆಗಬಹುದು. ಈ ಅರ್ಥದಲ್ಲೂ ಈ ಪದವನ್ನು ಪ್ರಯೋಗಿಸಿದೆ. ಉದಾಹರಣೆಗೆ—

ಇಮ ಇಂದ್ರ ಭರತಸ್ಯ ಪುತ್ರಾ ಅಪಪಿತ್ವಂ ಚಿಕಿತುರ್ನ ಪ್ರಪಿತ್ವಂ ।
ಹಿನ್ವಂತ್ಯಶ್ವಮರಣಂ ನ ನಿತ್ಯಂ ಜ್ಯಾವಾಜಂ ಪರಿ ಣಯಂತ್ಯಾಜೌ ॥
(ಋ ಸಂ. ೩-೫೩-೨೪)

ಎಲೈ ಇಂದ್ರನೇ, ಈ ಭರತಪುತ್ರರು ವಸಿಷ್ಠರೊಂದಿಗೆ ಪ್ರತ್ಯೇಕತೆಯನ್ನೇ ಅಪೇಕ್ಷಿಸುವರೇ ಹೊರತು ಐಕ್ಯವನ್ನಪೇಕ್ಷಿಸುವುದಿಲ್ಲ. ಶಾಶ್ವತವಾದ ಶತ್ರುಗಳಂತೆ ಸರ್ವದಾ ಅವರೊಡನೆ ಹೋರಾಡಲು ಸಿದ್ಧರಾಗಿದ್ದಾರೆ ಎಂಬ ತಾತ್ಪರ್ಯವುಳ್ಳ ಈ ಮಂತ್ರದಲ್ಲಿ ಅರಣ ಶಬ್ದಕ್ಕೆ ಶತ್ರುವೆಂದರ್ಥ. ಹರ್ಷಕಾರಕನಲ್ಲದುದರಿಂದ ಅದಾತೃವಿಗೂ ಇದು ಪರ್ಯಾಯಪದವಾಗಿರುವ ಸಂದರ್ಭವುಂಟು—

ವೇಶಂ ವಾ ನಿತ್ಯಂ ವರುಣಾರಣಂ ವಾ ಯತ್ಸೀಮಾಗಶ್ಚಕೃಮಾ ಶಿಶ್ರಥಸ್ತತ್ ।
(ಋ. ಸಂ. ೫-೮೫-೭)

ಎಂಬಲ್ಲಿ ಅರಣ ಶಬ್ದಕ್ಕೆ ಅಶಬ್ದವೆಂಬ ಒಂದರ್ಥವೂ, ಅದಾತೃವೆಂದು ಇನ್ನೊಂದರ್ಥವೂ ವೈಕಲ್ಪಿಕವಾಗಿ ಹೇಳಲ್ಪಟ್ಟಿದೆ. ಹೀಗೆ ಸಂದರ್ಭಾನುಸಾರವಾಗಿ ಅರ್ಥಗಳನ್ನು ಹೇಳಿದರೂ ಸಹ ಮೂಲಧಾತುವು ಹರ್ಷಾರ್ಥಕವಾದ ರಣ್ ಧಾತುವೇ ಆಗಿರುತ್ತದೆ. ಹರ್ಷಾಭಾವವೇ ಅರಣ ಶಬ್ದದ ತಾತ್ಪರ್ಯ. ಪ್ರಕೃತವಾದ ಋಕ್ಕಿನಲ್ಲಿ ಅಭಿಗಂತಾ ಎಂದರ್ಥಮಾಡಿರುವುದಕ್ಕೆ ಶತ್ರುಗಳನ್ನು ಪ್ರತಿಭಟಿಸಿ ಹಿಂಸಿಸುವವನು ಎಂದು ತಾತ್ಪರ್ಯವಾಗಿರಬಹುದು.



॥ ಸಂಹಿತಾಪಾಠಃ ॥

ವಸಾಂ ರಾಜಾನಂ ವಸತಿಂ ಜನಾನಾಮರಾತಯೋ ನಿ ದಧುರ್ಮರ್ತ್ಯೇಷು ।
ಬ್ರಹ್ಮಾಣ್ಯತ್ರೇರವ ತಂ ಸೃಜಂತು ನಿಂದಿತಾರೋ ನಿಂದ್ಯಾಸೋ ಭವಂತು ॥

॥ ಪದಪಾಠಃ ॥

ವಸಾಂ । ರಾಜಾನಂ । ವಸತಿಂ । ಜನಾನಾಂ । ಅರಾತಯಃ । ನಿ । ದಧುಃ । ಮರ್ತ್ಯೇಷು ।

ಬ್ರಹ್ಮಾಣಿ । ಅತ್ರೇಃ । ಅವ । ತಂ । ಸೃಜಂತು । ನಿಂದಿತಾರಃ । ನಿಂದ್ಯಾಸಃ । ಭವಂತು ॥ ೬ ॥

॥ ಸಾಯಣಭಾಷ್ಯಂ ॥

ವಸಾಂ ವಸತಾಂ ಪ್ರಾಣಿನಾಂ ರಾಜಾನಂ ಸ್ವಾಮಿನಂ ಜನಾನಾಂ ಪ್ರಾಣಿನಾಂ ವಸತಿಮಾವಾಸಭೂತಂ ತ್ರ್ಯರುಣಮುಕ್ತಲಕ್ಷಣಮಗ್ನಿಂ ವಾರಾತಯೋ ನಿ ದಧುಃ । ಅಗೋಪಯನ್ । ಮರ್ತ್ಯೇಷು ಲೋಕೇಷು ಮಧ್ಯೇ । ಅತ್ರೇರತ್ರಿಗೋತ್ರಸ್ಯ ವೃಶಸ್ಯ ಬ್ರಹ್ಮಾಣಿ ಮಂತ್ರಾಃ ಸ್ತೋತ್ರಾಣಿ ವಾ ತಂ ಕುಮಾರಮಗ್ನಿಂ ವಾವ ಸೃಜಂತು । ಅಥವಾತ್ರೇರತ್ರಿಗೋತ್ರಸ್ಯ ಕುಮಾರಂ ಬ್ರಹ್ಮಾಣಿ । ಯದ್ವಾ । ವೃಶಸ್ಯ ಬ್ರಹ್ಮಾಣ್ಯತ್ರೇರತ್ರಿಗೋತ್ರಂ ॥ ಕರ್ಮಣಿ ಷಷ್ಠೀ ॥ ತಂ ಕುಮಾರಮವ ಸೃಜಂತು । ವಿಸೃಜಂತು । ನಿಂದಿತಾರೋಽಸ್ಮನ್ನಿಂದಕಾ ನಿಂದ್ಯಾಸೋಽಸ್ಮಾಭಿರ್ನಿಂದ್ಯಾ ಭವಂತು । ಅತ್ರೇರ್ಬ್ರಹ್ಮಾಣೀತ್ಯೇತದುಪಜೀವ್ಯ ವೃಶಮುಪ್ಯಾತ್ರೇಯಂ ವದಂತಿ । ಆತ್ರೇಯಃ ಕುಮಾರ ಇತಿ ಪಕ್ಷೇ ಸ ಏವ ಪ್ರಾಣಮಯಮಾತ್ಮಾನಮವಸೃಜಂತ್ವಿತ್ಯಾಶಾಸ್ತೇ ॥

॥ ಪ್ರತಿಪದಾರ್ಥ ॥

ವಸಾಂ—ಪ್ರಾಣಿಗಳಿಗೆ । ರಾಜಾನಂ—ಸ್ವಾಮಿಯೂ । ಜನಾನಾಂ—ಮಾನವರಿಗೆಲ್ಲಾ । ವಸತಿಂ—ಆವಾಸಭೂತನೂ ಆದ ಅಗ್ನಿಯನ್ನು । ಅರಾತಯಃ—ಶತ್ರುಗಳು । ಮರ್ತ್ಯೇಷು—ಮರ್ತ್ಯಲೋಕಗಳ ನಡುವೆ । ನಿ ದಧುಃ—ಮರೆಸಿಟ್ಟರು । ಅತ್ರೇಃ—ಅತ್ರಿಮಹರ್ಷಿಯ ವಂಶಸ್ಥನಾದ ವೃಶನ । ಬ್ರಹ್ಮಾಣಿ—ಸ್ತೋತ್ರಗಳು । ತಂ—ಆ ಅಗ್ನಿಯನ್ನು । ಅವ ಸೃಜಂತು—ಮರೆಯಿಂದ ಹೊರಕ್ಕೆ ಬರುವಂತೆ ಮಾಡಲಿ । ನಿಂದಿತಾರಃ—ನಮ್ಮನ್ನು ನಿಂದಿಸುವ ಶತ್ರುಗಳು । ನಿಂದ್ಯಾಸಃ—ನಮ್ಮ ದೂಷಣೆಗೆ ಪಾತ್ರರಾಗಿ । ಭವಂತು—ಆಗಲಿ.

॥ ಭಾವಾರ್ಥ ॥

ಪ್ರಾಣಿಗಳಿಗೆಲ್ಲಾ ಸ್ವಾಮಿಯೂ, ಮಾನವರಿಗೆಲ್ಲಾ ಆವಾಸಭೂತನೂ ಆದ ಅಗ್ನಿಯನ್ನು ಶತ್ರುಗಳು ಮರ್ತ್ಯಲೋಕಗಳ ನಡುವೆ ಮರೆಸಿಟ್ಟರು. ಅತ್ರಿಮಹರ್ಷಿಯ ವಂಶಸ್ಥನಾದ ವೃಶನ ಸ್ತೋತ್ರಗಳು ಮರೆಯಾದ ಅಗ್ನಿಯನ್ನು ಹೊರಕ್ಕೆ ಬರುವಂತೆ ಮಾಡಲಿ. ನಮ್ಮನ್ನು ನಿಂದಿಸುವ ಶತ್ರುಗಳು ನಮ್ಮ ದೂಷಣೆಗೆ ಪಾತ್ರರಾಗಲಿ.

## English Translation.

Enemies have secreted amongst mortals, the king of living beings, the asylum of men : may the prayers of Atri set him free ; may those who revile be reviled.

॥ ವಿಶೇಷವಿಷಯಗಳು ॥

ಹಿಂದೆ ವಿವರಿಸಿದಂತೆ ವೃಶನ ಸ್ತುತಿಯು ಮರೆಯಾಗಿದ್ದ ಅಗ್ನಿಯನ್ನು ಯಜಮಾನನಿಗೆ ಗೋಚರಮಾಡಿಸಿದ ಸನ್ನಿವೇಶವು ಸ್ತುತವಾಗಿದೆ. ವೃಶನು ಅಗ್ನಿಯನ್ನು ಪ್ರಾರ್ಥಿಸುವ ಸನ್ನಿವೇಶವಿದು.

ಅತ್ರೇಃ ಬ್ರಹ್ಮಾಣಿ ಅವ ಸೃಜಂತು—ಅತ್ರಿಗೋತ್ರೋತ್ಪನ್ನನಾದ ವೃಶನ ಸ್ತೋತ್ರಗಳು ಮರೆಯಾಗಿರುವ ಅಗ್ನಿಯನ್ನು ಹೊರಕ್ಕೆ ಬರುವಂತೆ ಮಾಡಲಿ ಎಂದು ಸ್ತುತಿಯು.

ಬ್ರಹ್ಮಾಣಿ—ಬ್ರಹ್ಮಶಬ್ದವನ್ನು ಅನ್ನನಾಮಗಳಲ್ಲಿಯೂ ಧನನಾಮಗಳಲ್ಲಿಯೂ ಪಠಿಸಿದೆ (ನಿ. ೩-೯) ವೃದ್ಧಿಯನ್ನುಹೊಂದು ಎಂಬರ್ಥವುಳ್ಳ ಬೃಹ್‌ಧಾತುವಿನಿಂದ ನಿಷ್ಪನ್ನವಾಗಿದೆ. ವೃದ್ಧಿಕಾರಕವಾದ ಕರ್ಮ ಅಥವಾ ಅನ್ನಕ್ಕೆಎಂಬರ್ಥವಾಗುತ್ತದೆ.

ತಸ್ಮಿನ್ ಬಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ।

(ಋ. ಸಂ. ೧-೮೦-೧೬)

ಇತ್ಯಾದಿ ಋಕ್ಕುಗಳಲ್ಲಿ ಹವೀರೂಪವಾದ ಅನ್ನವೆಂದರ್ಥಮಾಡಿದೆ. ಇದು ಸಾಯಣಭಾಷ್ಯದ ಅರ್ಥ. ಇದೇ ವಾಕ್ಯವನ್ನು ನಿರುಕ್ತಕಾರರು ಉದಹರಿಸಿ ತಸ್ಮಿನ್ ಬ್ರಹ್ಮಾಣಿ ಕರ್ಮಾಣಿ ಎಂದು ಬ್ರಹ್ಮಶಬ್ದಕ್ಕೆ ಕರ್ಮವೆಂದರ್ಥಮಾಡಿದ್ದಾರೆ. ಇದಲ್ಲದೇ, ಸ್ತುತಿಯೆಂಬರ್ಥವೂ ಪ್ರಸಿದ್ಧವಾಗಿದೆ.

ಪ್ರಾಣಪ್ರ್ರಹ್ಮಾಪಿ ಸುಪ್ರೀತಃ ಸುತಾಯ ತೆದಥರ್ವಣಃ ।
ಸ ಚಾಭವದೃಷಿಸ್ತೇನ ಬ್ರಹ್ಮಣಾ ದೀಪ್ತಿಮತ್ತರಃ ॥

(ಬೃ. ದೇ. ೩-೧೮)

ಎಂಬಲ್ಲಿ ಅಥರ್ವನಿಗೆ ಇಂಪ್ರನು ಸ್ತುತಿರೂಪವಾದ ಮಂತ್ರವನ್ನು ಉಪದೇಶಿಸಿದ ಸನ್ನಿವೇಶವು ವರ್ಣಿತವಾಗಿದೆ. ದಧೀಚಿ ಋಷಿಯು ಆ ಬ್ರಹ್ಮವನ್ನು (ಸ್ತುತಿರೂಪವಾದ ಮಂತ್ರ) ಸ್ವೀಕರಿಸಿ ಅತ್ಯಂತ ಕಾಂತಿಯುಕ್ತನಾದನು ಎಂದು ಬ್ರಹ್ಮಶಬ್ದಕ್ಕಿರುವ ಮಂತ್ರಪರವಾದ ಅರ್ಥವನ್ನು ಹೇಳಿದೆ. ಪ್ರಕೃತವಾದ ಮಂತ್ರದಲ್ಲೂ ಸಹ ಸ್ತುತಿ ಅಥವಾ ಮಂತ್ರ ಎಂದರ್ಥಮಾಡಿದ್ದಾರೆ. ಈ ಪದಕ್ಕೆ ಅನ್ನ, ಕರ್ಮ, ಮಂತ್ರ, ಪರಬ್ರಹ್ಮ, ಇತ್ಯಾದ್ಯನೇಕಾರ್ಥಗಳು ಹೇಗೆ ಸಾಧ್ಯ, ಯಾವ ಯಾವ ಸನ್ನಿವೇಸಗಳಲ್ಲಿ ಯಾವ ರೀತಿಯ ಪ್ರಯೋಗಗಳಿವೆ ಎಂಬುದನ್ನು ಬೇರೆಕಡೆ ತಿಳಿಸಲಾಗುತ್ತದೆ.



॥ ಸಂಹಿತಾಪಾಠಃ ॥

ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾದ್ಯೂಪಾದಮುಂಚೋ ಅಶಮಿಷ್ಟ ಹಿ ಷಃ ।
ಏವಾಸ್ಮದಗ್ನೇ ವಿ ಮುಮುಗ್ಧಿ ಪಾಶಾನ್ಹೋತಶ್ಚಿಕಿತ್ವ ಇಹ ತೂ ನಿಷದ್ಯ ॥

॥ ಪದಪಾಠಃ ॥

ಶುನಃ<sub></sub>ಶೇಪಂ । ಚಿತ್ । ನಿಽದಿತಂ । ಸಹಸ್ರಾತ್ । ಯೂಪಾತ್ । ಅಮುಂಚಃ । ಅಶಮಿಷ್ಟ । ಹಿ । ಸಃ ॥

ಏವ । ಅಸ್ಮತ್ । ಅಗ್ನೇ । ವಿ । ಮುಮುಗ್ಧಿ । ಪಾಶಾನ್ । ಹೋತಃ । ಚಿಕಿತ್ವಃ । ಇಹ । ತು ।

ನಿಽಸದ್ಯ ॥ ೭ ॥

॥ ಸಾಯಣಭಾಷ್ಯಂ ॥

ಅಂಜಃಸವ ಆಹವನೀಯೋಪಸ್ಥಾನೇ ಶುನಶ್ಚಿಚ್ಛೇಪಮಿತ್ಯೇಷಾ । ಅಗ್ನಿಮಾಹವನೀಯಮುಪ-ಸ್ಥಾಪಯಾಂಚಕಾರ ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾತ್ । ಐ. ಬ್ರಾಂ. ೭–೧೭ । ಇತಿ ಬ್ರಾಹ್ಮಣಂ ॥

ಹೇ ಅಗ್ನೇ ನಿದಿತಂ ನಿತರಾಂ ಬದ್ಧಂ ಶುನಃಶೇಪಮೃಷಿಂ ಸಹಸ್ರಾದನೇಕರೂಪಾದ್ಯೂಪಾದ-ಮುಂಚಃ । ಅಮೋಚಯಃ । ಚಿದಿತಿ ಪೂರಣಃ । ಶುನಃಶೇಪಮಿತಿ ಪದಸ್ಯ ಮಧ್ಯೇ ಪದಾಂತರಸ್ಯ ಸಂಹಿತಾಯಾಂ ವ್ಯತ್ಯಯೇನಾವಸ್ಥಿತಿಃ । ಸ ಋಷಿರಶಮಿಷ್ಟ ಹಿ । ಶಾಂತವಾನ್ ಖಲು । ಯದ್ವಾ । ಸ ಹಿ ಯಸ್ಮಾದಶಮಿಷ್ಟ । ಸ್ತುತಿಕರ್ಮೈತತ್ । ತಸ್ತಾವೀತ್ । ತಸ್ಮಾದಮುಂಚ ಇತಿ ಸಂಬಂಧಃ । ಏವಮೇವಮಸ್ಮದಸ್ಮತ್ತಃ ಪಾಶಾನ್ವಿ ಮುಮುಗ್ಧಿ । ವಿಮೋಚಯ । ಹೇ ಹೋತರ್ಹೇ ಚಿಕಿತ್ವಶ್ಚೇತನವಾನ್ನಗ್ನೇ ಇಹ ತು ವೇದ್ಯಾಂ ನಿಷದ್ಯಾವಸ್ಥಾಯ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) । ನಿದಿತಂ—ಪೂರ್ಣವಾಗಿ ಬದ್ಧನಾದ । ಶುನಃಶೇಫಂ—ಶುನಃಶೇಫ ನೆಂಬ ಋಷಿಯನ್ನು । ಸಹಸ್ರಾತ್—ಸಹಸ್ರಾರು । ಯೂಪಾತ್—ಬಂಧನಗಳಿಂದ । ಅಮುಂಚಃ—ನೀನು ಬಿಡಿಸಿದ್ದೀಯೆ । ಸಃ—ಆ ಋಷಿಯು । ಅಶಮಿಷ್ಟ—ಪ್ರಶಾಂತಚಿತ್ತನಾಗಿಯೇ ಇದ್ದನು । ಹೋತಃ—ಹೋಮ ಸಂಪಾದಕನೂ । ಚಿಕಿತ್ವಃ—ಪ್ರಜ್ಞಾವಂತನೂ ಆದ । ಅಗ್ನೇ—ಎಲೈ ಅಗ್ನಿಯೇ । ಇಹ ತು—ಈ ಯಜ್ಞ ವೇದಿಯಲ್ಲಿಯೇ । ನಿಷದ್ಯ—ಕುಳಿತುಕೊಂಡು । ಏವ—ಶುನಶ್ಶೇಫನನ್ನು ಬಿಡಿಸಿದಂತೆಯೇ । ಅಸ್ಮತ್—ನಮ್ಮಿಂದ । ಪಾಶಾನ್—ಪಾಶಗಳನ್ನು । ವಿ ಮುಮುಗ್ಧಿ—ಬಿಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪೂರ್ಣವಾಗಿ ಸಹಸ್ರಾರು ಸ್ತಂಭಗಳಿಗೆ ಬದ್ಧನಾದ ಶುನಃಶೇಫನೆಂಬ ಋಷಿಯನ್ನು ಅವನ ಎಲ್ಲಾ ಬಂಧನಗಳಿಂದಲೂ ನೀನು ಬಿಡಿಸಿದೆ ಅದೇ ರೀತಿಯಲ್ಲಿ, ಎಲೈ ಹೋಮಸಂಪಾದಕನೂ, ಪ್ರಜ್ಞಾವಂತನೂ ಆದ ಅಗ್ನಿಯೇ, ಈ ಯಜ್ಞವೇದಿಯಲ್ಲಿಯೇ ಕುಳಿತುಕೊಂಡು ನಮ್ಮಿಂದ ಎಲ್ಲಾ ಪಾಶಗಳನ್ನೂ ಬಿಡಿಸು.

## English Translation.

You have liberated fettered Shunahshepa from a thousand stakes, for he was patient in endurance: so, Agni, free us from our bonds, having sat down here (at our sacrifice), intelligent offerer of oblations.

**। ವಿಶೇಷವಿಷಯಗಳು ।**

ತನ್ನನ್ನು ಪಾಪರೂಪವಾದ ಅಥವಾ ದುಃಖರೂಪವಾದ ಪಾಶಗಳಿಂದ ಬಿಡಿಸಬೇಕೆಂದು ಇಲ್ಲಿ ಋಷಿಯು ಅಗ್ನಿಯನ್ನು ಪ್ರಾರ್ಥಿಸಿಕೊಳ್ಳುತ್ತಾನೆ. ಈ ಪ್ರಾರ್ಥನೆಯಲ್ಲಿ ಶುನಃಶೇಫನೇ ಉಪಮಾನವಿದೆ. ಅಗ್ನಿಯು ಶುನಃಶೇಫನನ್ನು ರಕ್ಷಿಸಿದಂತೆ, ಅವನನ್ನು ಪಾಶದಿಂದ ಬಿಡಿಸಿದಂತೆ ತನ್ನನ್ನೂ ಬಿಡಿಸಬೇಕೆಂಬ ಸ್ತುತಿಯಿದೆ. ಇದೇ ಶುನಃಶೇಫನ ಕಥೆಯನ್ನು ಐತರೇಯಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆ ಋ. ಸಂ. ೧–೨೭ ನೇ ಸೂಕ್ತದ ವಿಶೇಷ ವಿಷಯಗಳಲ್ಲಿ (ಋಗ್ವೇದಸಂಹಿತಾ, ಭಾಗ ೩) ವಿಸ್ತೃತವಾಗಿ ತಿಳಿಸಿದೆ. ಅವನು ಅಗ್ನಿ, ಸವಿತೃ, ವರುಣ, ಇಂದ್ರ ಇತ್ಯಾದಿ ದೇವತೆಗಳನ್ನು ಕ್ರಮವಾಗಿ ಪ್ರಾರ್ಥಿಸಿ ಅವರೆಲ್ಲರ ಅನುಗ್ರಹದಿಂದ ಮತ್ತು ಅದರಲ್ಲೂ ಇಂದ್ರನ ಅನುಗ್ರಹ ದಿಂದ ತನ್ನ ಪಾಶವನ್ನು ಬಿಡಿಸಿಕೊಂಡನು ಎಂದು ತಿಳಿಸಿದೆ. ಈ ಶುನಃಶೇಫನ ಕಥೆಯು ಆಧುನಿಕ ವಿಮರ್ಶಕರ ದೃಷ್ಟಿಯಿಂದ ಒಂದು ಪ್ರಧಾನವಾದ ಸನ್ನಿವೇಶವಾಗಿದೆ. ಅನೇಕ ದೃಷ್ಟಿಗಳಿಂದ ಈ ಸನ್ನಿವೇಶವು ವಿಮರ್ಶೆಗೆ ಆಸ್ಪದ ವಾಗಿರುತ್ತದೆ. ಹಿಂದೆ ಈ ಕಥೆಯ ಆನುಪೂರ್ವಿಯನ್ನು ಮಾತ್ರ ಹೇಳಿರುತ್ತದೆಯೇ ಹೊರತು ಈ ಆಖ್ಯಾನದ ಮರ್ಮವೇನು ಎಂಬುದನ್ನು ಪರಿಶೀಲಿಸಿಲ್ಲ. ಪ್ರಕೃತದಲ್ಲಿ ಶುನಃಶೇಫಾಖ್ಯಾನದ ತತ್ತ್ವವೇನು ಎಂಬುದನ್ನು ಪರಿಶೀಲಿಸುವುದು ಉಚಿತವಾಗಿರುತ್ತದೆ. ಅನಂತರ ಪ್ರಕೃತವಾದ ಮಂತ್ರದಲ್ಲಿ ಈ ಉಪಮಾನದ ಔಚಿತ್ಯವನ್ನು ಅರ್ಥಮಾಡಿಕೊಳ್ಳಬಹುದು.

ವೈದಿಕಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ ಆಖ್ಯಾನಗಳಲ್ಲಿ ಶುನಃಶೇಫಾಖ್ಯಾನಕ್ಕೆ ಇರುವ ಪ್ರಾಧಾನ್ಯವೂ ಪ್ರಶಸ್ತಿಯೂ ಇನ್ನಾವುದಕ್ಕೂ ಇರಲಾರದು. ಆದುದರಿಂದಲೇ ಬ್ರಾಹ್ಮಣಾದಿ ವೈದಿಕಗ್ರಂಥಗಳಲ್ಲೂ ಪುರಾಣಾದಿ ಲೌಕಿಕಗ್ರಂಥಗಳಲ್ಲೂ ಈ ಆಖ್ಯಾನವು ಪದೇಪದೇ ಉದಾಹೃತವಾಗಿ ಪಠಿತವಾಗುತ್ತಿದೆ.

ಈ ಆಖ್ಯಾನವು ಪೂರ್ಣವಾಗಿ ಐತರೇಯಬ್ರಾಹ್ಮಣದಲ್ಲಿ (೭–೩) ಪಠಿತವಾಗಿದೆ. ಹರಿಶ್ಚಂದ್ರಪುತ್ರನಾದ ರೋಹಿತನ ಪ್ರತಿನಿಧಿಯಾಗಿ ಶುನಃಶೇಫನು ಯಜ್ಞಪಶುವಾಗಿ ಸ್ವೀಕೃತವಾದುದೂ, ವಿಶ್ವಾಮಿತ್ರನ ಅನುಗ್ರಹದಿಂದ ಶುನಃಶೇಫನು ವರುಣಾದಿಗಳನ್ನು ಸ್ತುತಿಸಿ ಪಾಶದಿಂದ ಮುಕ್ತನಾದುದೂ ಅಲ್ಲಿ ವರ್ಣಿತವಾಗಿರುವ ಕಥೆ. ಈ ಕಥೆಯ ಆಧಾರದ ಮೇಲೆ ಆಧುನಿಕಪಂಡಿತರಲ್ಲಿ ಕೆಲವರು ವೈದಿಕಕಾಲದಲ್ಲಿ ಪುರುಷಯಜ್ಞವು ಆಚರಣೆಯಲ್ಲಿತ್ತು ಎಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಆದರೆ ಈ ಅಭಿಪ್ರಾಯಕ್ಕೆ ಶ್ರುತಿವಾಕ್ಯಗಳು ಅಷ್ಟು ಸಮರ್ಪಕವಾದ ಸಮರ್ಥನೆ ಯನ್ನು ಕೊಡುವುದಿಲ್ಲ. ಆ ಕಥಾಸಂದರ್ಭವನ್ನು ಪರಿಶೀಲಿಸಿದರೆ, ಸನ್ನಿವೇಶವು ಈ ರೀತಿಯಿರುತ್ತದೆ.

ಯಜ್ಞಾಂಗಗಳಾದ ಪೂರ್ವಭಾವಿಯಾದ ಕರ್ಮಗಳೆಲ್ಲವೂ ನೆರವೇರಿದನಂತರ ಪ್ರಧಾನಯಜ್ಞದಲ್ಲಿ ಪಶು ಬಂಧನವೂ ಪಶುಚ್ಛೇದನವೂ ಆಗಬೇಕಾದ ಕಾಲದಲ್ಲಿ ಶುನಃಶೇಫನನ್ನು ಯೂಪಸ್ತಂಭಕ್ಕೆ ಬಂಧಿಸಲು ಯಾರೂ ಒಪ್ಪಲಿಲ್ಲ. ಆಗ ಅಜೀಗರ್ತನೇ (ತಂದೆಯೇ) ಈ ಕಾರ್ಯಕ್ಕೆ ನೆರವಾಗಲು ಒಪ್ಪುತ್ತಾನೆ. ಅದೂ ಅಲ್ಲದೇ, ಪಶುವಿನಂತೆ ತನ್ನ ಮಗನನ್ನೇ ಛೇದಿಸಲೂ ಒಪ್ಪಿಬಿಡುತ್ತಾನೆ. ಆಗ ಶುನಃಶೇಫನು ತಾನು ಮೃಗದಂತೆ ಛೇದಿಸಲ್ಪಡುವನೆಂದು ಗಾಬರಿ ಪಟ್ಟು ದೇವತೆಗಳಲ್ಲಿ ಮೊರೆಯಿಡುತ್ತಾನೆ. ಕ್ರಮವಾಗಿ, ಪ್ರಜಾಪತಿ, ಅಗ್ನಿ, ಸವಿತೃ, ವರುಣ, ಇಂದ್ರ, ಅಶ್ವಿನೀ ದೇವತೆಗಳು, ಉಷಸ್ಸು ಈ ದೇವತೆಗಳನ್ನು ಪ್ರಾರ್ಥಿಸಿ ಇವರ ಸಹಾಯವನ್ನಪೇಕ್ಷಿಸುತ್ತಾನೆ. ಉಷಸ್ಸನ್ನುದ್ದೇಶಿಸಿ ಅವಳನ್ನು ಸ್ತುತಿಸುವ ಮಂತ್ರಗಳನ್ನು ಒಂದೊಂದಾಗಿ ಪಠಿಸುವಾಗ ಅವನ ಬಂಧನಗಳೆಲ್ಲವೂ ಪೂರ್ಣವಾಗಿ ಸಡಿಲಿಸಿ

ಅವನು ಮುಕ್ತನಾಗುತ್ತಾನೆ (ಹರಿಶ್ಚಂದ್ರನ ವ್ಯಾಧಿಯು ನಾಶವಾಗುತ್ತದೆ). ಆಗ ಶುನಃಶೇಫನು ಋತ್ವಿಕ್ಕುಗಳ ನಡುವೆ ಸೇರಿಕೊಳ್ಳಬೇಕೆಂದು ಪ್ರಾರ್ಥಿತನಾಗುತ್ತಾನೆ. ಆಗ ಅಂಜಸ್ಸವದ ಕ್ರಮವನ್ನು ಅರಿತು ಅದರಂತೆ ಅಭಿಷವಕರ್ಮವನ್ನಾ ಚರಿಸುತ್ತಾನೆ.

ಅನಂತರ ಅಜೀಗರ್ತನನ್ನು ತಂದೆಯಾಗಿ ಸ್ವೀಕರಿಸಲು ತಿರಸ್ಕರಿಸಿ ವಿಶ್ವಾಮಿತ್ರನ ಪುತ್ರತ್ವವನ್ನು ಪಡೆಯುತ್ತಾನೆ. ಇದು ಐತರೇಯಬ್ರಾಹ್ಮಣೋಕ್ತದ ಕಥೆ. ಆದರೆ ಈ ಪೂರ್ಣವಾದ ಕಥೆಗೆ ಋಕ್ಸಂಹಿತೆಯು ಪೂರ್ಣವಾಗಿ ಆಧಾರವಾಗಿದೆಯೆಂದು ಹೇಳಲಾಗುವುದಿಲ್ಲ. ಋಕ್ಸಂಹಿತೆಯಲ್ಲಿ ಈ ಆಖ್ಯಾನದ ಪಠನವು ಪೂರ್ಣವಾಗಿ ಎಲ್ಲಿಯೂ ಇಲ್ಲ. ಆದರೂ ಸಹ ಈ ಕಥಾಸಂದರ್ಭವು ಅನೇಕ ಕಡೆಗಳಲ್ಲಿ ಸೂಚಿತವಾಗಿದೆ. ಅಂಜಃಸವರೂಪವಾದ ಅಭಿಷವ ಕರ್ಮವು ಪ್ರಥಮತಃ ಶುನಃಶೇಫನಿಂದಲೇ ದೃಷ್ಟವಾದುದೆಂದು ಪ್ರಸಿದ್ಧವಾಗಿದೆ. ಇದರಲ್ಲಿ ಋಕ್ಸಂಹಿತಾವಾಕ್ಯಗಳು ಪ್ರಧಾನವಾದ ಸ್ತುತಿವಾಕ್ಯಗಳಾಗಿವೆ. ಇವೆಲ್ಲವೂ ಶುನಃಶೇಫನಿಂದ ಪಠಿತವಾದವು. ಅವುಗಳು ಯಾವುವೆಂದು ಪ್ರಥಮತಃ ತಿಳಿದರೆ, ನಂತರ ಈ ಆಖ್ಯಾನದ ಅಂತಸ್ತತ್ತ್ವವು ಸುಲಭವಾಗಿ ಅರ್ಥವಾಗುತ್ತದೆ. ಅಂಜಃಸವಕರ್ಮ ಕಾಲದಲ್ಲಿ ಶುನಃಶೇಫನಿಂದ ಪಠಿತವಾದ ಮಂತ್ರಗಳ ಕ್ರಮವು ಈ ರೀತಿಯಿದೆ:—

೧. ಕಸ್ಯ ನೂನಂ ಕತಮಸ್ಯಾಮೃತಾನಾಂ (೧–೨೪–೧) ಪ್ರಜಾಪತಿಯ ಪ್ರಾರ್ಥನೆ.

೨. ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ (೧–೨೪–೨) ಅಗ್ನಿಸ್ತುತಿ.

೩. ಅಭಿ ತ್ವಾ ದೇವ ಸವಿತಃ (೧–೨೪–೩ ರಿಂದ ೫) ಸವಿತೃಸ್ತುತಿ.

೪. ನ ಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ (೧–೨೪–೬ ರಿಂದ ೧೫) ೧–೨೫–೧ ರಿಂದ ೨೧ ಎಂಬ ೩೧ ಮಂತ್ರಗಳೂ ವರುಣಸ್ತುತಿ.

೫. ವಸಿಷ್ವಾ ಹಿ ಮಿಯೇಧ್ಯ (೧–೨೬–೧) ೧–೨೭–೧ ರಿಂದ ೧೨ ಎಂಬ ೨೨ ಮಂತ್ರಗಳೂ ಪುನಃ ಅಗ್ನಿಸ್ತುತಿಗಳು.

೬. ನಮೋ ಮಹದ್ಭ್ಯೋ ಎಂಬುದು (೧–೨೭–೧೩) ವಿಶ್ವೇದೇವಪ್ರಾರ್ಥನೆ.

೭. ಯಚ್ಚಿದ್ಧಿ ಸತ್ಯ ಸೋಮಪಾ (೧–೨೯–೧; ೧–೩೦–೧ ರಿಂದ ೧೫) ಎಂಬ ಮಂತ್ರಗಳು ಇಂದ್ರ ಪ್ರಶಂಸಾತ್ಮಕವು.

ಈ ಮಂತ್ರಗಳಿಂದ ಇಂದ್ರನು ಸಂತುಷ್ಟನಾಗಿ ಶುನಃಶೇಫನಿಗ ಸುವರ್ಣದ ರಥವನ್ನು ಕೊಡುತ್ತಾನೆ. ಆಗ ಶುನಃಶೇಫನು ಶಶ್ವದಿಂದ್ರ (೧–೩೦–೧೬) ಇತ್ಯಾದಿ ಮಂತ್ರಗಳನ್ನು ಪಠಿಸಿ ಅದನ್ನು ಸ್ವೀಕರಿಸುತ್ತಾನೆ. ನಂತರ ಅಶ್ವಿನೀ ಮತ್ತು ಉಷೋದೇವತೆಗಳನ್ನು ಪ್ರಾರ್ಥಿಸಿ ಸ್ತುತಿಸುತ್ತಾನೆ. ಆಗ ಇವನು ಬಂಧನದಿಂದ ಪೂರ್ಣವಾಗಿ ಮುಕ್ತನಾಗುತ್ತಾನೆ.

(ಈ ಮಂತ್ರಗಳಿಗೂ ಬ್ರಾಹ್ಮಣೋಕ್ತವಾದ ಕಥೆಗೂ ಸಂಬಂಧವಿಲ್ಲವೆಂದೂ Keith ಮುಂತಾದ ಪಂಡಿತರು ಅಭಿಪ್ರಾಯಪಡುತ್ತಾರೆ. Journal of Royal Asatic Socicty 1911, p. 988. ಈ ಅಂಶವನ್ನು ಶ್ರುತಿವಾಕ್ಯಗಳ ಆಧಾರದ ಮೇಲೆ ವಿಮರ್ಶಿಸಿ ನಿಷ್ಕರ್ಷಿಸಬೇಕಾಗಿರುತ್ತದೆ).

ಐತರೇಯ ಬ್ರಾಹ್ಮಣದ ಕಥೆಯೇ ಶಾಂಖಾಯನ ಶ್ರೌತಸೂತ್ರದಲ್ಲೂ ಉಕ್ತವಾಗಿದೆ. (೧೫-೧೭-೨೭). ಆದರೆ ಪಾಠಭೇದವು ಇರುತ್ತದೆ. ಇದೇ ಕಥಾಸಂದರ್ಭವನ್ನು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ.

ಸ್ತೂಯಮಾನಃ ಶಶ್ವದಿತಿ ಪ್ರೀತಸ್ತು ಮನಸಾ ದದೌ ।

ಶುನಃಶೇಫಾಯ ದಿವ್ಯಂ ಸ ರಥಂ ಸರ್ವಂ ಹಿರಣ್ಮಯಂ ॥

(ಬೃ. ದೇ ೩-೧೦೩)

ಶಶ್ವತ್ (೧-೩೦-೧೬) ಇತ್ಯಾದಿ ಸ್ತುತಿಗಳಿಂದ ಪ್ರೀತನಾದ ಇಂದ್ರನು ತನ್ನಲ್ಲಿಯೇ ಸಂತುಷ್ಟನಾಗಿ ಶುನಃಶೇಫನಿಗೆ ದಿವ್ಯವಾದುದೂ ಹಿರಣ್ಮಯವಾದುದೂ ಆದ ರಥವನ್ನು ದಾನವಾಗಿ ಕೊಟ್ಟನು.

ಕಸ್ಯ ಪಂಚೋನಾಜೀಗರ್ತಿಃ ಶುನಃಶೇಫಃ ಸ ಕೃತ್ರಿಮೋ ವೈಶ್ವಾಮಿತ್ರೋ ದೇವರಾತಃ ।

(ಸರ್ವಾನುಕ್ರಮಣೀ.)

ಅಜೀಗರ್ತಪುತ್ರನಾದ ಶುನಃಶೇಫನು ನಂತರ ವಿಶ್ವಾಮಿತ್ರಪುತ್ರನಾದನೆಂದು ಸರ್ವಾನುಕ್ರಮಣಿಯು ತಿಳಿಸುತ್ತದೆ.

ಇದೇ ಕಥೆಯು ಇತಿಹಾಸಪುರಾಣಾದಿಗಳಲ್ಲಿ ಸ್ವಲ್ಪ ವ್ಯತ್ಯಾಸವನ್ನು ಹೊಂದಿ ಪಠಿತವಾಗಿದೆ. ರಾಮಾಯಣದಲ್ಲಿ ಶುನಃಶೇಫನು ಋಚೀಕಋಷಿಯ ಪುತ್ರನೆಂದು ಹೇಳಿದೆ. ಹರಿಶ್ಚಂದ್ರನಿಗೆ ಬದಲಾಗಿ ಅಂಬರೀಷಚಕ್ರವರ್ತಿಯೆಂದಿದೆ. ಮಹಾಭಾರತದಲ್ಲಿ ಶುನಃಶೇಫನು ಋಚೀಕಪುತ್ರನು. ಆದರೆ ಅಂಬರೀಷನಿಲ್ಲ. ಹರಿಶ್ಚಂದ್ರನೇ ರಾಜನು.

ಪುರಾಣಗಳಲ್ಲಿ ಈ ಕಥಾಸಂದರ್ಭವು ಎರಡು ವಿಧವಾಗಿ ವರ್ಣಿತವಾಗಿದೆ. ಭಾಗವತವೂ, ದೇವೀಭಾಗವತವೂ ಐತರೇಯಬ್ರಾಹ್ಮಣದ ಕಥೆಯನ್ನವಲಂಬಿಸಿರುತ್ತದೆ. ಹರಿವಂಶವು ರಾಮಾಯಣದ ಕಥೆಯನ್ನವಲಂಬಿಸಿರುತ್ತದೆ. ಆದುದರಿಂದ ಈ ಕಥಾಪಠನದಲ್ಲಿ ಮೂರು ಮಾರ್ಗಗಳನ್ನು ಕಾಣಬಹುದು.

೧. ಐತರೇಯಬ್ರಾಹ್ಮಣ, ೨. ರಾಮಾಯಣ, ೩. ಮಹಾಭಾರತ—ಇವುಗಳಲ್ಲಿ ಕಥಾಭಾಗದ ಮುಖ್ಯಾಂಶವು ಒಂದೇ ವಿವರಣೆಯಲ್ಲಿ ಸ್ವಲ್ಪ ವ್ಯತ್ಯಾಸವಿರುತ್ತದೆ.

ಪ್ರಕೃತದಲ್ಲಿ, ಋಕ್ಸಂಹಿತೆಯಲ್ಲಿ ಶುನಃಶೇಫನ ನಿರ್ದೇಶವೂ, ಅವನಿಂದ ನಿರ್ಮಿತವಾದ ಮತ್ತು ಪಠಿತವಾದ ಮಂತ್ರಗಳೂ ಐತರೇಯಬ್ರಾಹ್ಮಣದಲ್ಲಿ ವಿವೃತವಾಗಿರುವ ಆಖ್ಯಾನಕ್ಕೆ ಪೂರ್ಣವಾಗಿ ಆಧಾರವಾಗಿರುವುದೇ, ಅಥವಾ ಐತರೇಯಬ್ರಾಹ್ಮಣದಲ್ಲಿ ಹೇಳಿರುವ ಕೆಲವು ಮುಖ್ಯ ಸನ್ನಿವೇಶಗಳು ಅನಂತರ ಕಲ್ಪಿತವಾದವೇ ಎಂಬುದನ್ನೂ ತಿಳಿಯ ಬೇಕಾದ ಪ್ರಮೇಯವಿರುತ್ತದೆ. ಅನಂತರ, ಈ ಆಖ್ಯಾನವು ವೈದಿಕಕಾಲದಲ್ಲಿ ನರಮೇಧದ ಆಚರಣೆಯಿದ್ದಿತು ಎಂಬ ವಿಷಯವನ್ನು ಸಮರ್ಥಿಸುವುದೇ ಎಂಬುದನ್ನೂ ಪರಿಶೀಲಿಸಬೇಕಾಗುತ್ತದೆ.

ಐತರೇಯಬ್ರಾಹ್ಮಣದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು ಮೂರು :—೧. ಹರಿಶ್ಚಂದ್ರ ಮತ್ತು ವರುಣರ ಸಮಯ. ತತ್ಫಲವಾಗಿ ಹರಿಶ್ಚಂದ್ರನು ರೋಹಿತನೆಂಬ ಪುತ್ರನನ್ನು ಪಡೆದುದು. ೨. ಅಜೀಗರ್ತ ಮತ್ತು ಶುನಃಶೇಫನ ಸನ್ನಿವೇಶ. ೩. ವಿಶ್ವಾಮಿತ್ರನಿಗೂ ಅವನ ಪುತ್ರರಿಗೂ ನಡೆದ ಸಂವಾದ ಮತ್ತು ವಿಶ್ವಾಮಿತ್ರನು ಶುನಃಶೇಫನನ್ನು ಪುತ್ರನನ್ನಾಗಿ ಸ್ವೀಕರಿಸಿದುದು.

ಹರಿಶ್ಚಂದ್ರ, ರೋಹಿತ, ಅಜೀಗರ್ತ ಮತ್ತು ಈ ಸಂದರ್ಭದಲ್ಲಿ ವಿಶ್ವಾಮಿತ್ರನ ಪ್ರವೇಶ ಇವಾವುದೂ ಋಕ್ಸಂಹಿತೆಯಲ್ಲಿ ವರ್ಣಿತವಾಗಿಲ್ಲ. ಆದುದರಿಂದಲೇ ಋಕ್ಸಂಹಿತೆಯು ಈ ಪೂರ್ಣವಾದ ಕಥೆಗೆ ಆಧಾರವಲ್ಲವೆಂದೂ ಬ್ರಾಹ್ಮಣದಲ್ಲಿ ಕಲ್ಪಿತವಾದ ಕಥೆಗೆ ಪೋಷಕವಾಗಿ ಮೇಲೆ ತಿಳಿಸಿರುವ ೧೦೦ ಮಂತ್ರಗಳನ್ನೂ ಆ ಸಮಯಕ್ಕೆ ಉಚಿತವಾಗಿ ಕಥಾಂತರ್ಗತವಾಗಿರುವಂತೆ ಸೇರಿಸಿಕೊಂಡಿದೆಯೆಂದೂ Roth ಮುಂತಾದ ಆಂಗ್ಲಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಅವರ ಮತದಂತೆ, ಶುನಃಶೇಫನೆಂಬ ಋಷಿಯು ಯಾವುದೋ ಆಪತ್ತಿಗೆ ಸಿಕ್ಕಿಬಿದ್ದು ವರುಣಾದಿ ದೇವತೆಗಳನ್ನು ಪ್ರಾರ್ಥಿಸಿದ್ದುದರ ಫಲವಾಗಿ ಅವರ ಅನುಗ್ರಹವನ್ನು ಪಡೆದು ಬಂಧನದಿಂದ ಮುಕ್ತನಾಗುತ್ತಾನೆ (ಋ. ಸಂ. ೧-೨೪-೧೨; ೧-೨೪-೧೩; ೫-೨-೭) ಇದು ಋಕ್ಸಂಹಿತೆಯ ಆಧಾರ. ಇದನ್ನೇ ಹರಿಶ್ಚಂದ್ರನ ಕಥಾರೂಪದಲ್ಲಿ ಬ್ರಾಹ್ಮಣಾದಿಗಳಲ್ಲಿ ಬೆಳೆಸಿ ಶುನಃಶೇಫನು ಯಜ್ಞಪಶುವಾಗಿ ಮಾಡಲ್ಪಟ್ಟು ನಂತರ ವಿಶ್ವಾಮಿತ್ರನ ಸಹಾಯದಿಂದ ಮುಕ್ತನಾಗಿ ಆತನ ಪುತ್ರತ್ವವನ್ನು ಪಡೆಯುವವರಿಗೂ ವಿಸ್ತರಿಸಿದೆ ಎಂಬುದೇ ಈ ಮತದ ಅಭಿಪ್ರಾಯ. ಋಕ್ಸಂಹಿತೆಯಲ್ಲಿ ಕೇವಲ ಬಂಧನವೆಂಬ ವರ್ಣನೆಯಿದೆ ಅಥವಾ ಪ್ರಕೃತವಾದ ಮಂತ್ರದಲ್ಲಿ (೫-೨-೭) **ಯೂಪಾತ್** ಎಂಬ ಶಬ್ದಪ್ರಯೋಗವಿದೆಯಾದುದರಿಂದ ಇಲ್ಲಿ ಯಜ್ಞಪಶುವೆಂದೇ ಭಾವಿಸಬೇಕೆಂದರೆ- **ಸಹಸ್ರಾತ್** ಎಂಬ ವಿಶೇಷಣವಿರುತ್ತದೆ. ಆದುದರಿಂದ ಇಲ್ಲಿ ಯೂಪಶಬ್ದಕ್ಕೆ ವಾಚ್ಯವಾಗಿ ಯಜ್ಞಪಶುವನ್ನು ಕಟ್ಟುವ ಸ್ತಂಭವೆಂದು ಅರ್ಥಮಾಡದೆ, ಲಾಕ್ಷಣಿಕವಾದ ಯೂಪರೂಪಕ್ಕೆ ಬಂಧನವೆಂದರ್ಥಮಾಡಬಹುದೇ:ದೂ ಆಗ ಪುರುಷಪಶುವೆಂಬ ತಾತ್ಪರ್ಯವಾಗುವುದಿಲ್ಲವೆಂದೂ ಕೆಲವರ ಮತ. ಸಾಯಣರು ಸಹಸ್ರಾತ್ ಎಂಬುದಕ್ಕೆ **ಸಹಸ್ರರೂಪಾತ್** ಎಂದರ್ಥಮಾಡಿದ್ದಾರೆ. ಪಶುವನ್ನು ಕಟ್ಟುವ ಸ್ತಂಭವು ಸಹಸ್ರರೂಪವಾಗಿರುವುದಿಲ್ಲ. ಆದುದರಿಂದ ಅನೇಕವಿಧವಾದ ಬಂಧನಗಳಿಂದ ಬಿಡಿಸಲ್ಪಟ್ಟನು ಎಂದು ಲಾಕ್ಷಣಿಕವಾದ ತಾತ್ಪರ್ಯವನ್ನು ಹೇಳಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಒಂದುವೇಳೆ ಯೂಪವು ಯಜ್ಞಸ್ತಂಭವೆಂಬ ಅರ್ಥವನ್ನೇ ಕೊಡುವುದೆಂದು ಹೇಳಿದರೂ ಸಹ ಈ ಒಂದು ಉದಾಹರಣೆಯಿಂದಲೇ ನರಮೇಧವು ಇತರ ಮೇಧಗಳಂತೆ ಪ್ರಚಾರದಲ್ಲಿದ್ದಿತೆಂದು ಹೇಳಲಾಗುವುದಿಲ್ಲ. ಶುನಃಶೇಫನ ಬಂಧನವು ಕೇವಲ ಯಾದೃಚ್ಛಿಕವಾದುದು. ವರುಣನಿಗೂ, ಹರಿಶ್ಚಂದ್ರನಿಗೂ ನಡೆದ ಸಮಯದ ಫಲವಾಗಿ ಈ ಬಂಧನದಲ್ಲಿ ಪರ್ಯವಸಾನವಾಗುತ್ತದೆ. ಮತ್ತು ಈ ಸಂದರ್ಭದಲ್ಲಿ ನಡೆದ ಘಟನೆಗಳೇ ನರಮೇಧಕ್ಕೆ ಪ್ರತಿಭಟನೆಯನ್ನೂ ತೋರಿಸುತ್ತವೆ. ಯಜ್ಞಯೂಪದಲ್ಲಿ ಬಂಧಿತವಾಗಿದ್ದ ಪಶುವನ್ನು ಛೇದಿಸುವುದಕ್ಕೆ ಋತ್ವಿಕ್ಕುಗಳ ಸಹಾಯವು ಅವಶ್ಯವಾಗಿರುತ್ತದೆ. ಆ ಯಜ್ಞಪ್ರದೇಶಕ್ಕೆ ಸಂಬಂಧಿಸಿದ ಋತ್ವಿಕ್ಕುಗಳಾರೂ ಈ ನೀಚಕಾರ್ಯಕ್ಕೆ ಸಹಾಯ ಮಾಡಲೊಪ್ಪುವುದಿಲ್ಲ. ಅಲ್ಲಿ ಆ ಕಾರ್ಯಕ್ಕೆ ನಿಯತನಾದ ಶಮಿತೃವೂ ಹಿಂಜರಿಯುತ್ತಾನೆ. ನೀಚನೂ, ದುರಾಸೆಯುಳ್ಳವನೂ ಆದ ಪಿತೃವೇ ಈ ಕಾರ್ಯಕ್ಕೆ ಮುಂದುವರಿಯುತ್ತಾನೆ. ಅಲ್ಲದೇ, ಇದು ಆರ್ಯನ ಕಾರ್ಯವಲ್ಲ. ಅನಾರ್ಯನ ಕಾರ್ಯವೆಂಬುದೂ ಇದರಿಂದ ವ್ಯಕ್ತವಾಗುತ್ತದೆ. ಬ್ರಾಹ್ಮಣರೆಲ್ಲರೂ ಆರ್ಯರೆಂಬ ಅಭಿಪ್ರಾಯವು ಋಕ್ಸಂಹಿತೆಯಲ್ಲೂ ಇಲ್ಲ. ವೈದಿಕಕರ್ಮರಹಿತರನ್ನೆಲ್ಲಾ ಒಟ್ಟಿಗೆ ಅನಾರ್ಯರೆಂದು ವರ್ಣಿಸಿರುವ ಸಂದರ್ಭವೂ ಹಿಂದೆ ಋಕ್ಸಂಹಿತಾವಾಕ್ಯಗಳಲ್ಲಿ ಅನೇಕ ಕಡೆಗಳಲ್ಲಿ ತಿಳಿಸಿದೆ. ಶುನಃಶೇಫನ ಪಿತೃವಿನ ಹೆಸರೂ, ಇವನ ಸಹೋದರರ ಹೆಸರೂ ಈ ಅಂಶವನ್ನು ಸ್ಥಿರಪಡಿಸುತ್ತದೆ. ಅಜೀಗರ್ತನೆಂದರೆ ನುಂಗಲು ಏನೂ ಇಲ್ಲದವನು ಎಂದರೆ ದಟ್ಟದರಿದ್ರನೆಂದರ್ಥ. **ಶುನಃಪುಚ್ಛ** ಇತ್ಯಾದಿ ಹೆಸರುಗಳೂ ಸಹ ಇವನ ನೀಚತ್ವವನ್ನೇ ತೋರಿಸುತ್ತದೆ. ಆದರೆ ಕೇವಲ ದಾರಿದ್ರ್ಯವೇ ಅನಾರ್ಯತ್ವವಲ್ಲ. ಇತರ ವ್ಯವಹಾರಗಳೂ ಇವನ ನೀಚತ್ವವನ್ನು ತೋರಿಸುತ್ತವೆ. ಮತ್ತು ಯಜ್ಞಪಶುವನ್ನು ಛೇದಿಸಲು ನಿಯುಕ್ತರಾದ ಶಮಿತೃಗಳೇ ಈ ಕಾರ್ಯಕ್ಕೆ ಒಪ್ಪದಿರುವಾಗ ಈ ನೀಚನಾದ ಪಿತೃವು ಈ ಕಾರ್ಯಕ್ಕೆ

ಒಪ್ಪಿದುದರಿಂದ ಅವನ ಪಾಪಕಾರ್ಯಕ್ಕೆ ಶಿಕ್ಷಾರೂಪವಾಗಿ ಬಂಧನದಿಂದ ಮುಕ್ತನಾದ ಶುನಃಶೇಫನು ಪುನಃ ಅಜೀಗರ್ತನನ್ನು ಪಿತೃವನ್ನಾಗಿ ಪರಿಗ್ರಹಿಸಲು ತಿರಸ್ಕರಿಸುತ್ತಾನೆ. ಮತ್ತು ತಾನು ದಿವ್ಯಸೂಕ್ತಗಳ ದರ್ಶನವನ್ನು ಪಡೆದುದರಿಂದ ತಾನೂ ಋತ್ವಿಕ್ಕಾಗಲು ಅರ್ಹತೆಯನ್ನು ಪಡೆಯುತ್ತಾನೆ ಎಂಬ ಅನೇಕ ಸಂದರ್ಭಗಳು, ನರಮೇಧವು ಎಷ್ಟು ಪಾಪಕಾರ್ಯವೆಂದು ವೈದಿಕ ಮಾರ್ಗಾವಲಂಬಿಗಳು ಭಾವಿಸಿದ್ದರೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ.

> "ಸ ಹೋವಾಚ ಶುನಶೇಪೋ ಯಃ ಸಕೃತ್ಪಾಪಕಂ ಕುರ್ಯಾತ್ಕುರ್ಯಾದೇನತ್ತ್ರಶೋಪರಂ । ನಾಪಗಾಃ ಶೌದ್ರಾನ್ನ್ಯಾಯಾದಸಂಧೇಯಂ ತ್ವಯಾ - ಕೃತಮಿತ್ಯಸಂಧೇಯಮಿತಿ ಹ ವಿಶ್ವಾಮಿತ್ರ ಉಪಪಪಾದ ಸ ಹೋವಾಚ ವಿಶ್ವಾಮಿತ್ರೋ ಭೀಮ ಏವ ಸೌಯವಸಿಃ ಶಾಸೇನ ವಿಶಿಶಾಸಿಷುಃ । ಅಸ್ಥಾನ್ಮೈತಸ್ಯ ಪುತ್ರೋ ಭೂಃ............... "
>
> (ಐ. ಬ್ರಾ. ೭-೧೭)

"ಮಗುವೇ, ನಾನು ಹಿಂದೆ ಮಾಡಿದುದು ತಪ್ಪಾಯಿತು. ಈ ಪಾಪವನ್ನು ನೀಗಿಸಿಕೊಳ್ಳುತ್ತೇನೆ ಮನೆಗೆ ಬಾ" ಎಂದು ಅಜೀಗರ್ತನು ಹೇಳಿದುದಕ್ಕೆ ಪ್ರತಿಯಾಗಿ ಶುನಃಶೇಫನು "ಒಂದು ಸಲ ಈ ಪಾಪಕೃತ್ಯಕ್ಕೆ ಹೇಸದ ನೀನು ಇಂತಹ ಕೃತ್ಯವನ್ನು ಪುನಃ ಪುನಃ ಮಾಡುವುದಕ್ಕೂ ಹಿಂಜರಿಯುವುದಿಲ್ಲ. ನಿನ್ನ ಈ ಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ" ಎನ್ನಲಾಗಿ ವಿಶ್ವಾಮಿತ್ರನೂ ಸಹ "ಇಲ್ಲ, ಇಂತಹ ಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ" ಎಂಬುದಾಗಿ ಸಮರ್ಥಿಸುತ್ತಾನೆ. ಪುನಃ "ನಿನ್ನ ವಧಕ್ಕಾಗಿ ಕೈಯನ್ನು ಎತ್ತಿ ಹಿಡಿದಿದ್ದಾಗ ಅಜೀಗರ್ತನು ಭೀಕರಸ್ವರೂಪನಾಗಿದ್ದನು. ಪುನಃ ಅವನ ಮಗನಾಗಬೇಡ" ಎಂದುಪದೇಶಿಸುತ್ತಾನೆ.

ಈ ರೀತಿ ಕಥಾಂಗರ್ತವಾದ ಜುಗುಪ್ಸೆಯೇ ಸ್ಪಷ್ಟವಾಗಿರುವಾಗ ಈ ವಿಷಯದಲ್ಲಿ ಬೇರೆ ಆಧಾರವೇ ಬೇಕಾಗಿಲ್ಲ. ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾ Max Muller ಎಂಬ ಪಂಡಿತನೂ ಸಹ ಈ ರೀತಿ ಹೇಳಿದ್ದಾನೆ :—" It does not necessarily follow from this legend that the Rishis, the authors of thc Vedic Hymns offered human sacrifices."

ವೈದಿಕಕಾಲದ ಋಷಿಗಳು ಯಜ್ಞಕಾಲಗಳಲ್ಲಿ ಪುರುಷರೂಪವಾದ ಹವಿಸ್ಸನ್ನು ಅರ್ಪಿಸುತ್ತಿದ್ದರೆಂಬುದನ್ನು ಈ ಸನ್ನಿವೇಶದಿಂದ ಮಾತ್ರವೇ ಹೇಳಲು ಸಾಧ್ಯವೇ ಇಲ್ಲ ಎಂಬುದು ಸ್ಪಷ್ಟವಾಗಿದೆ.

[History of Ancient Sanskrit Literature 1926 Ed. p. 221]

Weber ಎಂಬುವನು ಪುರುಷಮೇಧವು ಪ್ರಚಾರದಲ್ಲಿದ್ದಿತು ಎಂದು ತಿಳಿಸಿದ್ದಾನೆ. ಆ ಮತವನ್ನು ವಿರೋಧಿಸುತ್ತಾ, Eggling ಎಂಬ ಪಂಡಿತನು—

"This legeud, so far from bearing witness to the existence of human sacrifices as a generally recognised practice."

(Sacred Books of the East, Vol. 44, p. XXXVI).

ಈ ಸನ್ನಿವೇಶಗಳಿಂದ ಮಾತ್ರವೇ ನರಮೇಧವು ರೂಢಿಯಲ್ಲಿದ್ದಿತು ಎಂದು ಹೇಳುವುದರಲ್ಲಿ ಸ್ವಲ್ಪವೂ ತಿರುಳಿಲ್ಲ ಎಂದು ಸ್ಪಷ್ಟಪಡಿಸಿದ್ದಾನೆ.

ಆದುದರಿಂದ ಸಹಸ್ರಾತ್ ಯೂಪಾತ್ ಎಂದು ಇರುವಲ್ಲಿ, ಪ್ರಕೃತವಾದ ಮಂತ್ರದಲ್ಲಿ ಪಾಪರೂಪವಾದ ಬಂಧನವೆಂದರ್ಥಮಾಡಬೇಕು. ಅದರಂತೆಯೇ ತನ್ನನ್ನೂ ಬಂಧನದಿಂದ ಬಿಡಿಸಬೇಕೆಂದು ಅಗ್ನಿಯನ್ನು ಋಷಿಯು ಪ್ರಾರ್ಥಿಸಿದ್ದಾನೆ.



॥ ಸಂಹಿತಾಪಾಠಃ ॥

ಹೃಣೀಯಮಾನೋ ಅಪ ಹಿ ಮದೈಯೇಃ ಪ್ರ ಮೇ ದೇವಾನಾಂ ವ್ರತಪಾ ಉವಾಚ ।

ಇಂದ್ರೋ ವಿದ್ವಾँ ಅನು ಹಿ ತ್ವಾ ಚಚಕ್ಷ ತೇನಾಹಮಗ್ನೇ ಅನುಶಿಷ್ಟ ಆಗಾಂ॥

॥ ಪದಪಾಠಃ ॥

ಹೃಣೀಯಮಾನಃ । ಅಪ । ಹಿ । ಮತ್ । ಐಯೇಃ । ಪ್ರ । ಮೇ । ದೇವಾನಾಂ । ವ್ರತऽಪಾಃ । ಉವಾಚ । ಇಂದ್ರಃ । ವಿದ್ವಾನ್ । ಅನು । ಹಿ । ತ್ವಾ । ಚಚಕ್ಷ । ತೇನ । ಅಹಂ । ಅಗ್ನೇ । ಅನುऽಶಿಷ್ಟಃ । ಆ । ಅಗಾಂ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಹೃಣೀಯಮಾನಃ ಕ್ರುಧ್ಯಂಸ್ತ್ವಂ ಮತ್ ಮತ್ತೋऽಪೈಯೇರ್ಹಿ । ಅಪಾಗಾಃ ಖಲು ॥ ಈ ಗತಾವಿತ್ಯಸ್ಮಾತ್ ಶ್ಯನ್ವಿಕರಣಾಲ್ಲಙಿ ಮಧ್ಯಮೇ ಛಾಂದಸೇ ಪರಸ್ಮೈಪದ ಆಡಾಗಮೇ ವೃದ್ಧೌ ವ್ಯತ್ಯಯೇನ ಶ್ಯನೋऽಕಾರಸ್ಯ ಏಕಾರೇ ಚ ಕೃತೇ ರೂಪಂ ॥ ಮೇ ಮಹ್ಯಂ ದೇವಾನಾಂ ವ್ರತಪಾಃ ಕರ್ಮಣಃ ಪಾಲಕ ಇಂದ್ರಃ ಪ್ರೋವಾಚ ಹಿ । ಸ ಏವ ವಿದ್ವಾನ್ ತ್ವಾನು ಚಚಕ್ಷ । ತ್ವಾಂ ದದರ್ಶ । ತೇನಾನುಶಿಷ್ಟೋऽಹಂ ಹೇ ಅಗ್ನೇ ತ್ವಾಮಾಗಾಮಿತಿ । ಏವಂ ವೃಶ ಆಹ ॥

॥ ಪ್ರತಿಪದಾರ್ಥ ॥

ಹೃಣೀಯಮಾನಃ—(ನನ್ನ ಅಪರಾಧಗಳಿಂದ) ಕ್ರುದ್ಧನಾದ ನೀನು । ಮತ್—ನನ್ನಿಂದ । ಅಪ ಐಯೇಃ ಹಿ—ದೂರವಾಗಿ ಹೊರಟುಹೋದೆಯಲ್ಲವೇ ? । ದೇವಾನಾಂ—ದೇವತೆಗಳ । ವ್ರತಪಾಃ—ಕರ್ಮ ಪಾಲಕನಾದ । ಇಂದ್ರಃ—ಇಂದ್ರನು । ಮೇ—ನನಗೆ । ಪ್ರ ಉವಾಚ—ಹೇಳಿ ತಿಳಿಸಿದ್ದಾನೆ । ವಿದ್ವಾನ್—ನಿನ್ನ ಸ್ವರೂಪವನ್ನು ತಿಳಿದ ಅವನೇ । ತ್ವಾ—ನಿನ್ನನ್ನು । ಅನು ಚಚಕ್ಷ—ಅರಿಸಿ ನೋಡಿದ್ದಾನೆ । ತೇನ—ಆ ಇಂದ್ರನಿಂದ । ಅನುಶಿಷ್ಟಃ—ಉಪದಿಷ್ಟನಾದ । ಅಹಂ—ನಾನು । ಅಗ್ನೇ—ಎಲೈ ಅಗ್ನಿಯೇ । ಆಗಾಂ—ನಿನ್ನನ್ನು ಸಮೀಪಿಸಿ ಬಂದಿದ್ದೇನೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನನ್ನ ಅಪರಾಧಗಳಿಂದ ಕ್ರುದ್ಧನಾದ ನೀನು ನನ್ನಿಂದ ದೂರನಾಗಿ ಹೊರಟುಹೋದೆಯಲ್ಲವೇ? ದೇವತೆಗಳ ಕರ್ಮಪಾಲಕನಾದ ಇಂದ್ರನು ನನಗೆ ನಿನ್ನ ವಿಷಯವನ್ನು ಹೇಳಿ ತಿಳಿಸಿದ್ದಾನೆ. ನಿನ್ನ ಸ್ವರೂಪವನ್ನು ತಿಳಿದ ಅವನೇ ನಿನ್ನನ್ನು ಅರಿಸಿ ನೋಡಿದ್ದಾನೆ. ಆ ಇಂದ್ರನಿಂದ ಉಪದಿಷ್ಟನಾದ ನಾನು ನಿನ್ನನ್ನು ಸಮೀಪಿಸಿ ಬಂದಿದ್ದೇನೆ.

## English Translation.

When angered, (Agni), depart from me: the protector of the worship of the gods, (Indra), has spoken to me: the wise Indra has looked upon you, and instructed by him, I have come, Agni, to you.

॥ ವಿಶೇಷವಿಷಯಗಳು ॥

೧. ವೃಶನರಾಜನಿಂದ (ತ್ರ್ಯರುಣ) ಅಗ್ನಿಯು ಅಪಗತನಾದುದು.

೨. ಪುನಃ ಅಥರ್ವಾಂಗಿರಸಮಂತ್ರವನ್ನು ಪಠಿಸಿ ಅಗ್ನಿಯನ್ನು ಆವಿರ್ಭವಿಸುವಂತೆ ಮಾಡಿದುದು.

೩. ಇದೇ ಅಗ್ನೀಂಧನತಂತ್ರವನ್ನು ಇಂದ್ರನು ಉಪದೇಶಮಾಡಿದುದು. ಈ ಮೂರು ಅಂಶಗಳೂ ಸಹ ಈ ಮಂತ್ರದಲ್ಲಿ ಸೂಚಿತವಾಗಿವೆ.

**ಹೃಣೀಯಮಾನಃ ಮತ್ತಃ ಅಪ ಐಯೇಃ** । ಕ್ರುದ್ಧನಾಗಿ ನನ್ನಿಂದ ದೂರವಾಗಿ ಹೊರಟುಹೋದೆ ಎಂದು ಅಗ್ನಿಯನ್ನು ಸಂಬೋಧಿಸಿದೆ. ಅಗ್ನಿಯ ಹವಿಸ್ಸು ಅಪಗತವಾಗಿ ತ್ರ್ಯರುಣನ ಹವಿರಾದಿಗಳು ಪಕ್ವವಾಗದೇ ಪುನಃ ತ್ರ್ಯರುಣನು ವೃಶನ ಸಹಾಯವನ್ನು ಪಡೆದುದನ್ನು ಹಿಂದೆ ತಿಳಿಸಿದೆ. ಮತ್ತು ಅಥರ್ವಾಂಗಿರಸಮಂತ್ರಪಠನದಿಂದ ಮೃತನಾಗಿದ್ದ ಬಾಲಕನನ್ನು ಬದುಕುವಂತೆ ಮಾಡಿದುದೂ ಮತ್ತು ಅಗ್ನಿಯ ಹವಿಸ್ಸನ್ನು ಪುನಃ ಅವಿರ್ಭೂತವಾಗುವಂತೆ ಮಾಡಿದುದೂ ಸಹ ಹಿಂದೆ ತಿಳಿಸಿದೆ. ಆದರೆ ಈ ಅಥರ್ವಾಂಗಿರಸಮಂತ್ರವನ್ನು ಇಂದ್ರನು ಉಪದೇಶಮಾಡಿದುದು ಹೇಗೆಂಬುದನ್ನೂ ಸಹ ಹಿಂದೆ ತಿಳಿಸಿದೆ. "ಸ ಹೇಂದ್ರೇಣೋಕ್ತ ಆಸ............" (ಶ. ಬ್ರಾ. ೧೪-೧-೧-೧೯) ಎಂಬ ಮಂತ್ರವನ್ನುದ್ಧರಿಸಿ (ಋಗ್ವೇದಸಂಹಿತಾ ಭಾಗ ೧೧ ಪುಟ 85) ಇಂದ್ರನಿಂದ ಉಪದಿಷ್ಟವಾದ ಅಥರ್ವಾಂಗಿರಸ ಮಂತ್ರದ ಮಹತ್ವವನ್ನು ತಿಳಿಸಿದೆ. ಆದರೆ, ಅಲ್ಲಿ ದಧೀಚಿ ಋಷಿಯ ವೃತ್ತಾಂತವನ್ನು ತಿಳಿಸುವ ಸಂದರ್ಭವಿದೆ. ಪ್ರಕೃತದಲ್ಲಿ ಇಂದ್ರನಿಗೂ ವೃಶನಿಗೂ ಗುರುಶಿಷ್ಯಭಾವವು ಹೇಳಲ್ಪಟ್ಟಿದೆ. ಸೋಽಥರ್ವಾಂಗಿರಸಾನ್ಮಂತ್ರಾನ್‌ದೃಷ್ಟ್ವಾ" ಎಂದಿರುವುದರಿಂದ ಇಲ್ಲಿಯೂ ವೃಶನಿಗೂ ಇಂದ್ರನಿಗೂ ಇರುವ ಗುರುಶಿಷ್ಯಸಂಬಂಧವನ್ನು ಸೂಚಿಸುವುದಾಗಿದೆ. ತ್ರ್ಯರುಣನು ಅತ್ರಿಗೋತ್ರೋತ್ಪನ್ನನು. ಅತ್ರಿಯು ಅಥರ್ವಾಂಗಿರಸನ ವಂಶೋತ್ಪನ್ನನು.

**"ಆತ್ರೇಯಾದಾತ್ರೇಯೋ ಮಾಂಟೇಃ ..............ಆಥರ್ವಣಾದ್ದಧ್ಯಙ್"**

(ಬೃ. ಉ. ೨-೬-೩)

ಎಂದು ಬೃಹದಾರಣ್ಯಕದಲ್ಲಿ ಅತ್ರಿವಂಶೋತ್ಪನ್ನರಾದ ಋಷಿಗಳ ಕ್ರಮವಿದೆ. ಆದರೆ, ವೃಶನು ಅಥರ್ವಾಂಗಿರಸನ ಪುತ್ರನಾಗಿರಬಹುದು. ಪ್ರಕೃತದಲ್ಲಿ ವೃಶನು ಅಥರ್ವಾಂಗಿರಸಮಂತ್ರವನ್ನು ದರ್ಶಿಸಿ ಪಠಿಸಿದನು ಎಂದಿದೆ. ಆದುದರಿಂದ

ಇಲ್ಲಿ ಸನ್ನಿವೇಶವೇನೆಂಬುದು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ. ಆದರೆ, 'ಅಗ್ನಿರ್ಜಾತೋ ಅಥರ್ವಣಾ' (೧೦-೨೧-೫) ಇತ್ಯಾದಿ ಮಂತ್ರಗಳು ಅಥರ್ವಾಂಗಿರಸ್ಸಿನ ಪ್ರವೃತ್ತಿಯೇ ಅಗ್ನಿಯ ಪ್ರಥಮಪ್ರಜ್ವಲನಕ್ಕೆ ಕಾರಣವೆಂದು ತಿಳಿಸಿದೆ.

॥ ಸಂಹಿತಾಪಾಠಃ ॥

ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।
ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥ ೯ ॥

॥ ಪದಪಾಠಃ ॥

ವಿ । ಜ್ಯೋತಿಷಾ । ಬೃಹತಾ । ಭಾತಿ । ಅಗ್ನಿಃ । ಆವಿಃ । ವಿಶ್ವಾನಿ । ಕೃಣುತೇ । ಮಹಿಽತ್ವಾ ।
ಪ್ರ । ಅದೇವೀಃ । ಮಾಯಾಃ । ಸಹತೇ । ದುಃಽಏವಾಃ । ಶಿಶೀತೇ । ಶೃಂಗೇ ಇತಿ । ರಕ್ಷಸೇ । ವಿಽನಿಕ್ಷೇ ॥ ೯ ॥

॥ ಸಾಯಣಭಾಷ್ಯಂ ॥

ಅಯಮಗ್ನಿರ್ಜ್ಯೋತಿಷಾ ತೇಜಸಾ ಬೃಹತಾ ಮಹತಾ ವಿ ಭಾತಿ । ವಿಶೇಷೇಣ ದೀಪ್ಯತೇ । ಅಥ ತಥಾಭೂತಃ ಸನ್ ಮಹಿತ್ವಾ ಸ್ವಮಹತ್ತ್ವೇನ ವಿಶ್ವಾನಿ ಸರ್ವಾಣಿ ಪದಾರ್ಥಜಾತಾನ್ಯಾವಿಷ್ಕೃಣುತೇ । ಪ್ರಕಟೀಕರೋತಿ । ಏವಂ ಪ್ರವೃದ್ಧೋಽಗ್ನಿರದೇವೀರದೇವನಶೀಲಾ ಆಸುರೀರ್ಮಾಯಾ ದುರೇವಾ ದುಃಖಗಮನಾಃ ಪ್ರಸಹತೇ । ಅಭಿಭವತಿ । ಕಿಂಚ ಶಿಶೀತೇ । ತೀಕ್ಷ್ಣೀಕರೋತಿ । ಶೃಂಗೇ ಶೃಂಗಾಣಿ । ಶೃಂಗಸದೃಶೀರ್ಹಿಂಸಿಕಾ ವಾ ಜ್ವಾಲಾಃ ಶಿಶೀತೇ । ತೀಕ್ಷ್ಣೀಕರೋತಿ । ಕಿಮರ್ಥಂ । ರಕ್ಷಸೇ ವಿನಿಕ್ಷೇ ರಕ್ಷಸೋ ನಾಶಾಯ । ನಿಶ್ಯತಿ ಶೃಂಗೇ ರಕ್ಷಸೋ ವಿನಿಕ್ಷಣನಾಯ । ನಿ. ೪-೧೮ । ಇತಿ ಯಾಸ್ಕಃ ॥

॥ ಪ್ರತಿಪದಾರ್ಥ ॥

ಅಗ್ನಿಃ—ಅಗ್ನಿಯು । ಬೃಹತಾ—ಅತ್ಯಧಿಕವಾದ । ಜ್ಯೋತಿಷಾ—ತೇಜಸ್ಸಿನಿಂದ । ವಿ ಭಾತಿ—ಪ್ರಕಾಶಿಸುತ್ತಾನೆ । ಮಹಿತ್ವಾ—ತನ್ನ ಮಾಹಾತ್ಮ್ಯದಿಂದ । ವಿಶ್ವಾನಿ—ಸಮಸ್ತ ಭೂತಗಳನ್ನೂ । ಆವಿಃ ಕೃಣುತೇ—ಪ್ರಕಾಶಪಡಿಸುತ್ತಾನೆ । ಅದೇವೀಃ—ಆಸುರೀಸ್ವಭಾವವುಳ್ಳವೂ । ದುರೇವಾಃ—ದುಃಖಕಾರಕವಾದವೂ ಆದ । ಮಾಯಾಃ—ದುಷ್ಟಶಕ್ತಿಗಳನ್ನು । ಪ್ರ ಸಹತೇ—ಮೆಟ್ಟಿ ತುಳಿಯುತ್ತಾನೆ । ಶೃಂಗೇ—ಶೃಂಗಗಳಂತಿರುವ ತನ್ನ ಜ್ವಾಲೆಗಳನ್ನು । ರಕ್ಷಸೇ—ರಾಕ್ಷಸ ಶಕ್ತಿಯ । ವಿನಿಕ್ಷೇ—ನಾಶಕ್ಕಾಗಿ । ಶಿಶೀತೇ—ತೀಕ್ಷ್ಣವಾಗಿ ಮಾಡಿಕೊಳ್ಳುತ್ತಾನೆ.

॥ ಭಾವಾರ್ಥ ॥

ಅಗ್ನಿಯು ತನ್ನ ಅತ್ಯಧಿಕವಾದ ತೇಜಸ್ಸಿನಿಂದ ಪ್ರಕಾಶಿಸುತ್ತಾನೆ. ತನ್ನ ಮಾಹಾತ್ಮ್ಯದಿಂದ ಸಮಸ್ತಭೂತಗಳನ್ನೂ ಪ್ರಕಾಶಪಡಿಸುತ್ತಾನೆ. ಆಸುರೀಸ್ವಭಾವವುಳ್ಳವೂ, ದುಃಖಕಾರಕವೂ ಆದ ದುಷ್ಟಶಕ್ತಿಗಳನ್ನು ಮೆಟ್ಟಿ ತುಳಿಯುತ್ತಾನೆ. ಶೃಂಗಗಳಂತಿರುವ ತನ್ನ ಜ್ವಾಲೆಗಳನ್ನು ರಾಕ್ಷಸಶಕ್ತಿಯ ನಾಶಕ್ಕಾಗಿ ತೀಕ್ಷ್ಣವಾಗಿ ಮಾಡಿಕೊಳ್ಳುತ್ತಾನೆ.

## English Translation.

Agni shines with great and varied radiance ; he makes all things manifest by his might ; he overcomes undivine malignant delusions ; he sharpens his horns for the destruction of the Rakshasas.



॥ ಸಂಹಿತಾಪಾಠಃ ॥

ಉತ ಸ್ವಾನಾಸೋ ದಿವಿ ಷಂತ್ವಗ್ನೇಸ್ತಿಗ್ಮಾಯುಧಾ ರಕ್ಷಸೇ ಹಂತವಾ ಉ ।
ಮದೇ ಚಿದಸ್ಯ ಪ್ರ ರುಜಂತಿ ಭಾಮಾ ನ ವರಂತೇ ಪರಿಬಾಧೋ ಅದೇವೀಃ ॥

॥ ಪದಪಾಠಃ ॥

ಉತ । ಸ್ವಾನಾಸಃ । ದಿವಿ । ಸಂತು । ಅಗ್ನೇಃ । ತಿಗ್ಮಽಆಯುಧಾಃ । ರಕ್ಷಸೇ । ಹಂತವೈ । ಊಂ ಇತಿ ।
ಮದೇ । ಚಿತ್ । ಅಸ್ಯ । ಪ್ರ । ರುಜಂತಿ । ಭಾಮಾಃ । ನ । ವರಂತೇ । ಪರಿಽಬಾಧಃ । ಅದೇವೀಃ ॥ ೧೦ ॥

॥ ಸಾಯಣಭಾಷ್ಯಂ ॥

ಉತಾಪಿ ಚಾಗ್ನೇಃ ಸ್ವಾನಾಸಃ ಶಬ್ದಂ ಕುರ್ವಾಣಾ ಜ್ವಾಲಾ ದಿವಿ ಷಂತು । ದ್ಯುಲೋಕೇ ಪ್ರಾದುರ್ಭವಂತು । ಕಿಮರ್ಥಂ । ತಿಗ್ಮಾಯುಧಾಸ್ತೀಕ್ಷ್ಣಾಯುಧಸ್ಥಾನೀಯಾ ಜ್ವಾಲಾಃ । ರಕ್ಷಸೇ ಹಂತವಾ ಉ ರಕ್ಷಸೋ ಹನನಾಯ । ಉ ಇತಿ ಪೂರಣಃ । ಮದೇ ಚಿತ್ ಹರ್ಷೇ ಸತ್ಯಸ್ಯಾಗ್ನೇರ್ಭಾಮಾಃ ಕ್ರೋಧಾ ದೀಪ್ತಯೋ ವಾ ಪ್ರ ರುಜಂತಿ । ಪ್ರಕರ್ಷೇಣ ಭಂಗಂ ಗಚ್ಛಂತಿ ಪೀಡಯಂತಿ ವಾ ರಕ್ಷಾಂಸಿ । ಪರಿಬಾಧಃ ಪರಿತೋ ಬಾಧಿಕಾ ಅದೇವೀರದೇವನಾ ಆಸುರ್ಯಃ ಸೇನಾ ನ ವರಂತೇ । ನ ವಾರಯಂತ್ಯೇನಂ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಅಗ್ನೇಃ—ಅಗ್ನಿಯ । ಸ್ವಾನಾಸಃ—ಶಬ್ದಮಾಡತಕ್ಕವೂ । ತಿಗ್ಮಾಯುಧಾಃ—ತೀಕ್ಷ್ಣವಾದ ಆಯುಧದಂತೆ ನಾಶಕಾರಕವೂ ಆದ ಜ್ವಾಲೆಗಳು । ರಕ್ಷಸೇ—ರಾಕ್ಷಸ ಶಕ್ತಿಯ । ಹನ್ತವಾ ಉ—

ನಾಶಕ್ಕಾಗಿಯೇ | ದಿವಿ—ದ್ಯುಲೋಕದಲ್ಲಿ | ಷಂತು—ಪ್ರಾದುರ್ಭೂತವಾಗಲಿ | ಮದೇ ಚಿತ್—ಹರ್ಷವುಂಟಾದಾಗ | ಅಸ್ಯ—ಈ ಅಗ್ನಿಯ | ಭಾಮಾಃ—ಪ್ರಭೆಗಳು | ಪ್ರ ರುಜಂತಿ—(ಅಸುರರನ್ನು) ಪೂರ್ಣವಾಗಿ ಹಿಂಸಿಸುತ್ತವೆ | ಪರಿಬಾಧಃ—ಸುತ್ತಲೂ ಬಾಧೆಯನ್ನಪೇಕ್ಷಿಸುವವರೂ | ಅದೇವೀಃ—ಆಸುರೀ ಸ್ವರೂಪವುಳ್ಳವರೂ ಆದ ಶತ್ರುಗಳು | ನ ವರಂತೇ—(ಅಗ್ನಿಯ ಈ ರಶ್ಮಿಗಳನ್ನು) ತಡೆಯಲಾರರು.

॥ ಭಾವಾರ್ಥ ॥

ಶಬ್ದಮಾಡತಕ್ಕವೂ, ತೀಕ್ಷ್ಣವಾದ ಆಯುಧದಂತೆ ನಾಶಕಾರಕವೂ ಆದ ಅಗ್ನಿಯ ಜ್ವಾಲೆಗಳು ರಾಕ್ಷಸ ಶಕ್ತಿಯ ನಾಶಕ್ಕಾಗಿ ದ್ಯುಲೋಕದಲ್ಲಿ ಪ್ರಾದುರ್ಭೂತವಾಗಲಿ. ಈ ಅಗ್ನಿಯ ಪ್ರಭೆಗಳು ತಮಗೆ ಹರ್ಷವುಂಟಾದಾಗ ಅಸುರರನ್ನು ಪೂರ್ಣವಾಗಿ ಹಿಂಸಿಸುತ್ತವೆ. ಸುತ್ತಲೂ ಬಾಧೆಯನ್ನುಂಟುಮಾಡಲು ಕಾದಿರುವವರೂ, ಆಸುರೀಸ್ವರೂಪವುಳ್ಳವರೂ ಆದ ಶತ್ರುಗಳು ಅಗ್ನಿಯ ಈ ರಶ್ಮಿಗಳನ್ನು ತಡೆಯಲಾರರು.

## English Translation.

May your roaring (flames), Agni, be manifest in the sky as sharp weapons wherewith to slay the Rakshasas : in his exhilaration his shining (rays) infliet (destruction), and undivine opposing (hosts) arrest him not.

॥ ಸಂಹಿತಾಪಾಠಃ ॥

ಏತಂ ತೇ ಸ್ತೋಮಂ ತುವಿಜಾತ ವಿಪ್ರೋ ರಥಂ ನ ಧೀರಃ ಸ್ವಪಾ ಅತಕ್ಷಂ ।
ಯದೀದಗ್ನೇ ಪ್ರತಿ ತ್ವಂ ದೇವ ಹರ್ಯಾಃ ಸ್ವರ್ವತೀರಪ ಏನಾ ಜಯೇಮ ॥

॥ ಪದಪಾಠಃ ॥

ಏತಂ । ತೇ । ಸ್ತೋಮಂ । ತುವಿಽಜಾತ । ವಿಪ್ರಃ । ರಥಂ । ನ । ಧೀರಃ । ಸುಽಅಪಾಃ । ಅತಕ್ಷಂ ।
ಯದಿ । ಇತ್ । ಅಗ್ನೇ । ಪ್ರತಿ । ತ್ವಂ । ದೇವ । ಹರ್ಯಾಃ । ಸ್ವಃಽವತೀಃ । ಅಪಃ । ಏನ । ಜಯೇಮ ॥೧೧॥

॥ ಸಾಯಣಭಾಷ್ಯಂ ॥

ಹೇ ತುವಿಜಾತ ಬಹುಭಾವಮಾಪನ್ನಾಗ್ನೇ ತೇ ತ್ವದರ್ಥಮೇತಂ ಸ್ತೋಮಮೇತತ್ಸ್ತೋತ್ರಂ ವಿಪ್ರೋ ಮೇಧಾವೀ ಸ್ತೋತಾ ರಥಂ ನ ರಥಮಿವ ಧೀರಃ ಸ್ವಪಾಃ ಶೋಭನಕರ್ಮಾಹಮತಕ್ಷಂ । ಸಮಪಾದಯಂ । ಹೇ ಅಗ್ನೇ ದೇವ ತ್ವಂ ಯದೀದೇನಂ ಸ್ತೋಮಂ ಪ್ರತಿ ಹರ್ಯಾಃ । ಪ್ರತಿಕಾಮಯೇಥಾಃ। ತರ್ಹಿ ಸ್ವರ್ವತೋಃ ಸ್ವರಣವತೀರ್ವ್ಯಾಪ್ತಿಮತೀರಪ ಏನೈನೇನ ಜಯೇಮ। ಪ್ರಾಪ್ನುಯಾಮ ॥

॥ ಪ್ರತಿಪದಾರ್ಥ ॥

**ತುವಿಜಾತ**—ನಾನಾರೂಪಗಳಿಂದ ಆವಿರ್ಭೂತನಾಗುವ ಎಲೈ ಅಗ್ನಿಯೇ । **ವಿಪ್ರಃ**—ಮೇಧಾವಿಯೂ । **ಧೀರಃ**—ಶ್ರೇಷ್ಠವಾದ ಬುದ್ಧಿಯುಳ್ಳವನೂ । **ಸ್ವಪಾಃ**—ಉತ್ತಮವಾದ ಕರ್ಮವುಳ್ಳವನೂ ಆದ ನಾನು । **ತೇ**—ನಿನ್ನನ್ನುದ್ದೇಶಿಸಿ । **ಏತಂ ಸ್ತೋಮಂ**—ಈ ಸ್ತುತಿಯನ್ನು । **ರಥಂ ನ**—(ಕುಶಲತೆಯಿಂದ) ರಥವನ್ನು ನಿರ್ಮಿಸುವಂತೆ । **ಅತಕ್ಷಂ**—ನಿರ್ಮಿಸಿದ್ದೇನೆ । **ದೇವ**—ದೇವತಾತ್ಮನಾದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಯದೀತ್**—ಈ ಸ್ತೋತ್ರವನ್ನು । **ಪ್ರತಿ ಹರ್ಯಾಃ**—ಅನುಗ್ರಹಿಸಿ ಸ್ವೀಕರಿಸು । **ಏನಾ**—ಈ ಸ್ತುತಿಯ ಮಹಿಮೆಯಿಂದ । **ಸ್ವರ್ವತೀಃ**—ಸರ್ವತ್ರ ವ್ಯಾಪಿಸತಕ್ಕ । **ಅಪಃ**—ಉದಕಗಳನ್ನು । **ಜಯೇಮ**—ನಾವು ಹೊಂದುವಂತಾಗಲಿ.

॥ ಭಾವಾರ್ಥ ॥

ನಾನಾರೂಪಗಳಿಂದ ಆವಿರ್ಭೂತನಾಗುವ ಎಲೈ ಅಗ್ನಿಯೇ, ಮೇಧಾವಿಯೂ, ಶ್ರೇಷ್ಠವಾದ ಬುದ್ಧಿಯುಳ್ಳವನೂ, ಉತ್ತಮವಾದ ಕರ್ಮವುಳ್ಳವನೂ ಆದ ನಾನು ನಿನ್ನನ್ನುದ್ದೇಶಿಸಿ ಕುಶಲತೆಯಿಂದ ರಥವನ್ನು ನಿರ್ಮಿಸುವಂತೆ ಈ ಸ್ತುತಿಯನ್ನು ನಿರ್ಮಿಸಿದ್ದೇನೆ. ದೇವತಾತ್ಮನಾದ ಎಲೈ ಅಗ್ನಿಯೇ, ಈ ಸ್ತೋತ್ರವನ್ನು ನೀನು ಅನುಗ್ರಹಿಸಿ ಸ್ವೀಕರಿಸು. ಈ ಸ್ತುತಿಯ ಮಹಿಮೆಯಿಂದ ಸರ್ವತ್ರ ವ್ಯಾಪಿಸಿ ಪ್ರವಹಿಸತಕ್ಕ ಉದಕಗಳನ್ನು ನಾವು ಪಡೆಯುವಂತಾಗಲಿ.

## English Translation.

This praise have I, a devout worshipper, composed for your, (Agni), who are born with many (faculties), as a steady dexterous (artisan fabricates) a car : if, divine Agni, you approve of it, then may we obtain abundant flowing water.



॥ ಸಂಹಿತಾಪಾಠಃ ॥

ತುವಿಗ್ರೀವೋ ವೃಷಭೋ ವಾವೃಧಾನೋಽಶತ್ರ್ವರ್ಯಃ ಸಮಜಾತಿ ವೇದಃ ।

ಇತೀಮಮಗ್ನಿಮಮೃತಾ ಅವೋಚನ್ ಬರ್ಹಿಷ್ಮತೇ ಮನವೇ ಶರ್ಮ ಯಂಸದ್ಧವಿಷ್ಮತೇ ಮನವೇ ಶರ್ಮ ಯಂಸತ್ ॥ ೧೨ ॥

॥ ಪದಪಾಠಃ ॥

ತುವಿऽಗ್ರೀವಃ । ವೃಷಭಃ । ವವೃಧಾನಃ । ಅಶತ್ರು । ಅರ್ಯಃ । ಸಂ । ಅಜಾತಿ । ವೇದಃ ।

ಇತಿ । ಇಮಂ । ಅಗ್ನಿಂ । ಅಮೃತಾಃ । ಅವೋಚನ್ । ಬರ್ಹಿಷ್ಮತೇ । ಮನವೇ । ಶರ್ಮ । ಯಂಸತ್ ।

ಹವಿಷ್ಮತೇ । ಮನವೇ । ಶರ್ಮ । ಯಂಸತ್ ॥ ೧೨ ॥

॥ ಸಾಯಣಭಾಷ್ಯಂ ॥

ತುವಿಗ್ರೀವೋ ಬಹುಜ್ವಾಲಃ ಪ್ರಭೂತಗ್ರೀವೋ ವಾ ವೃಷಭೋ ವರ್ಷಿತಾ ಕಾಮಾನಾಂ ವವೃಧಾನೋ ವರ್ಧಮಾನೋಽಗ್ನಿರಯೋರ್ಽರೇರ್ವೇದೋ ಧನಮಶತ್ರ್ವಕಂಟಕಂ ಸಮಜಾತಿ । ಸಂಯೋಜಯತಿ । ಇತೀಮಮರ್ಥಮಗ್ನಿಮಮೃತಾ ಅನ್ಯೇ ದೇವಾ ಅವೋಚನ್ । ಯಸ್ಮಾದೇವಂ ತಸ್ಮಾದ್ಬರ್ಹಿಷ್ಮತೇ ಯಾಗವತೇ ಮನವೇ ಮನುಷ್ಯಾಯ ಯಜಮಾನಾಯ ಶರ್ಮ ಸುಖಂ ಯಂಸತ್। ಯಚ್ಛತು । ಹವಿಷ್ಮತೇ ಚ ಶರ್ಮ ಯಂಸತ್ ॥

॥ ಪ್ರತಿಪದಾರ್ಥ ॥

ತುವಿಗ್ರೀವಃ—ಕತ್ತುಗಳಂತಿರುವ ಅನೇಕ ಜ್ವಾಲೆಗಳುಳ್ಳವನೂ । ವೃಷಭಃ—ಕಾಮವರ್ಷಕನೂ । ವವೃಧಾನಃ—ವೃದ್ಧಿಯನ್ನು ಹೊಂದುವವನೂ ಆದ ಅಗ್ನಿಯು । ಅರ್ಯಃ—ಶತ್ರುವಿನ । ವೇದಃ—ಧನವನ್ನು । ಅಶತ್ರು—ವಿರೋಧರಹಿತನಾಗಿ । ಸಮಜಾತಿ—ಶೇಖರಿಸುತ್ತಾನೆ । ಇತೀಮಂ—ಇಂತಹ ಸಂಪದ್ಯುಕ್ತನಾದ । ಅಗ್ನಿಂ—ಅಗ್ನಿಯನ್ನು । ಅಮೃತಾಃ—(ಇತರ) ದೇವತೆಗಳೆಲ್ಲಾ । ಅವೋಚನ್—ಪ್ರಶಂಸಿಸುತ್ತಾರೆ (ಈ ಪ್ರಶಂಸೆಯ ಪ್ರಭಾವದಿಂದಲೇ) । ಬರ್ಹಿಷ್ಮತೇ—ಯಜ್ಞವಂತನಾದ । ಮನವೇ—ಯಜಮಾನನಿಗೆ । ಶರ್ಮ—ಸುಖವನ್ನು । ಯಂಸತ್—ಕೊಡಲಿ । ಹವಿಷ್ಮತೇ ಮನವೇ—ಹವಿಸ್ಸನ್ನರ್ಪಿಸುವ ಯಜಮಾನನಿಗೆ । ಶರ್ಮ—ಸುಖವನ್ನು । ಯಂಸತ್—ಕೊಡಲಿ.

॥ ಭಾವಾರ್ಥ ॥

ಕತ್ತಿನ ರೂಪದಲ್ಲಿರುವ ಅನೇಕ ಜ್ವಾಲೆಗಳುಳ್ಳವನೂ, ಕಾಮವರ್ಷಕನೂ, ವೃದ್ಧಿಯನ್ನು ಹೊಂದುವವನೂ ಆದ ಅಗ್ನಿಯು ಶತ್ರುವಿನ ಧನವನ್ನು ಯಾವ ವಿರೋಧವೂ ಇಲ್ಲದೇ ಶೇಖರಿಸುತ್ತಾನೆ. ಇಂತಹ ಸಂಪದ್ಯುಕ್ತನಾದ ಅಗ್ನಿಯನ್ನು ಇತರ ದೇವತೆಗಳೆಲ್ಲಾ ಪ್ರಶಂಸಿಸುತ್ತಾರೆ. ಈ ಪ್ರಶಂಸೆಯ ಪ್ರಭಾವದಿಂದ, ಯಜ್ಞವಂತನಾದವನೂ, ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗೆ ಅಗ್ನಿಯು ಸುಖವನ್ನುಂಟುಮಾಡಲಿ.

English Translation.

The many-necked, the showerer (of benefits), ever increasing, collects together the wealth of the enemy without opposition: the immortals have enjoined Agni that he will bestow happiness on the man who offers sacrifice; that he will bestow happiness on the man who offers oblations.

# ಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ತ್ವಮಗ್ನೇ ವರುಣ ಇತಿ ದ್ವಾದಶರ್ಚಂ ತೃತೀಯಂ ಸೂಕ್ತಮಾತ್ರೇಯಸ್ಯ ವಸುಶ್ರುತಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ತ್ವಮಗ್ನೇ ವಸುಶ್ರುತ ಇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗೋಽಬೋಧ್ಯಗ್ನಿರಿತ್ಯುಕ್ತಃ ॥

ಅನುವಾದವು—ತ್ವಮಗ್ನೇ ವರುಣಃ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರೋದ್ಭವನಾದ ವಸುಶ್ರುತನೆಂಬುವನು ಋಷಿಯು, ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ತ್ವಮಗ್ನೇ ವಸುಶ್ರುತಃ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಬೋಧ್ಯಗ್ನಿಃ ಎಂಬ ಸೂಕ್ತದ (ಈ ಮಂಡಲದ ಮೊದಲನೆಯ ಸೂಕ್ತದ) ವಿನಿಯೋಗದಲ್ಲಿಯೇ ಹೇಳಿರುವುದು.

## ಸೂಕ್ತ—೩

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೩ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

॥ ಋಷಿಃ— ವಸುಶ್ರುತ ಆತ್ರೇಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।

ತ್ವೇ ವಿಶ್ವೇ ಸಹಸಸ್ಪುತ್ರ ದೇವಾಸ್ತ್ವಮಿಂದ್ರೋ ದಾಶುಷೇ ಮರ್ತ್ಯಾಯ ॥

॥ ಪದಪಾಠಃ ॥

ತ್ವಂ । ಅಗ್ನೇ । ವರುಣಃ । ಜಾಯಸೇ । ಯತ್ । ತ್ವಂ । ಮಿತ್ರಃ । ಭವಸಿ । ಯತ್ । ಸಂऽಇದ್ಧಃ ।

ತ್ವೇ ಇತಿ । ವಿಶ್ವೇ । ಸಹಸಃ । ಪುತ್ರ । ದೇವಾಃ । ತ್ವಂ । ಇಂದ್ರಃ । ದಾಶುಷೇ । ಮರ್ತ್ಯಾಯ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವರುಣಸ್ತಮಸಾಂ ವಾರಕೋ ರಾತ್ರ್ಯಭಿಮಾನೀ ದೇವೋಽಪಿ ತ್ವಮೇವ ಯದ್ಯದಾ ಜಾಯಸೇ । ಕಿಂಚ ತ್ವಂ ಮಿತ್ರೋಽಹರಭಿಮಾನೀ ದೇವಃ ಪ್ರಮೀತೇಸ್ತ್ರಾತಾ ಯದ್ಯದಾ ಸಮಿದ್ಧಃ । ತ್ವಮುತ್ಪನ್ನಮಾತ್ರಃ ಸನ್ ತಮೋ ನಿವಾರಯಸಿ ಪ್ರವೃದ್ಧಃ ಸನ್ ಹಿತಕಾರೀ ಭವಸೀತ್ಯರ್ಥಃ। ತ್ವೇ ತ್ವಯಿ ವಿಶ್ವೇ ಸರ್ವೇಽಪಿ ದೇವಾ ವರ್ತಂತೇ । ತ್ವದ್ದತ್ತೇನ ಹವಿಷಾ ತೇಷಾಂ ಜೀವನಾತ್ । ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ನಿತಿ ಹಿ ಶ್ರುತೇಃ । ಹೇ ಸಹಸಸ್ಪುತ್ರ ಬಲೇನ ಮಥ್ಯಮಾನತ್ವಾತ್ । ಕಿಂಚ ತ್ವಮಿಂದ್ರಃ ಸ್ವಾಮೀ ದಾಶುಷೇ ಹವಿರ್ದಾತ್ರೇ ಮರ್ತ್ಯಾಯ ಯಜಮಾನಾಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಯತ್—ಯಾವಾಗ । ಜಾಯಸೇ—ಉತ್ಪನ್ನ ನಾಗುತ್ತೀಯೋ (ಆಗ) । ವರುಣಃ—ವರುಣರೂಪನು । ಯತ್—ಯಾವಾಗ । ಸಮಿದ್ಧಃ—ಪ್ರಜ್ವಲಿತನಾಗು ವೆಯೋ (ಆಗ) । ತ್ವಂ—ನೀನು । ಮಿತ್ರಃ ಭವಸಿ—ಮಿತ್ರರೂಪನೂ ಆಗುತ್ತೀಯೆ । ತ್ವೇ—ನಿನ್ನಲ್ಲಿ । ವಿಶ್ವೇ—ಸಮಸ್ತವಾದ । ದೇವಾ—ದೇವತೆಗಳೂ (ಅಂತರ್ಗತರಾಗಿದಾರೆ) । ಸಹಸಸ್ಪುತ್ರ—ಶಕ್ತಿಪುತ್ರನಾದ ಎಲೈ ಅಗ್ನಿಯೇ । ತ್ವಂ—ನೀನು । ದಾಶುಷೇ—ಹವಿಸ್ಸನ್ನರ್ಪಿಸುವ । ಮರ್ತ್ಯಾಯ—ಮಾನವನಿಗೆ । ಇಂದ್ರಃ—ಇಂದ್ರ (ಸ್ವಾಮಿ) ರೂಪನಾಗಿದ್ದೀಯೆ ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಉತ್ಪನ್ನನಾಗುವ ಕಾಲದಲ್ಲಿ ವರುಣರೂಪನು ನಂತರ ಪ್ರಜ್ವಲಿತನಾದಾಗ ಮಿತ್ರರೂಪನು. ನಿನ್ನಲ್ಲೇ ಸಮಸ್ತ ದೇವತೆಗಳೂ ಅಂತರ್ಗತರಾಗಿದ್ದಾರೆ. ಶಕ್ತಿಪುತ್ರನಾದ ಎಲೈ ಅಗ್ನಿಯೇ, ನೀನು ಹವಿಸ್ಸನ್ನರ್ಪಿಸುವ ಮಾನವನ ಭಾಗಕ್ಕೆ ಇಂದ್ರರೂಪನಾಗಿದ್ದೀಯೆ

## English Translation.

You, Agni, are born Varuna, you become Mitra when kindled : in you, son of strength, are all the gods : you are Indra, son of strength, to the mortal who presents (oblations).

ಈ ಸೂಕ್ತಕ್ಕೂ ಮುಂದಿನ ಮೂರು ಸೂಕ್ತಗಳಿಗೂ (ಈ ಮಂಡಲದ ೩, ೪, ೫, ೬ ನೇ ಸೂಕ್ತಗಳು) ವಸುಶ್ರುತನೆಂಬುವನು ಋಷಿಯು. ಈ ವಸುಶ್ರುತನು ಆತ್ರೇಯಗೋತ್ರೋದ್ಭವನು ಎಂಬ ವಿಷಯವಲ್ಲದೆ ಮತ್ತೆ ಬೇರೆ ಯಾವವಿಷಯವೂ ತಿಳಿಯಲವಕಾಶವಿಲ್ಲ.

ಈ ಸೂಕ್ತದ ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ಅಗ್ನಿಯನ್ನು ಇತರ ದೇವತಾ ಸ್ವರೂಪನೆಂದು ವರ್ಣಿಸಿ ಸ್ತುತಿಸಲಾಗಿದೆ. ಮತ್ತು ಅಗ್ನಿಯಲ್ಲಿ ಹೋಮಮಾಡುವ ಹವಿಸ್ಸುಗಳನ್ನು ಎಲ್ಲಾ ದೇವತೆಗಳೂ

ಅಗ್ನಿಮುಖವಾಗಿಯೇ ಸ್ವೀಕರಿಸುವುದರಿಂದ ಅಗ್ನಿಯು ಸರ್ವದೇವತಾ ಸ್ವರೂಪನೆಂದು ಹೇಳಲ್ಪಡುವನು. ಈ ವಿಷಯ ಸಮರ್ಥನೆಗಾಗಿ ಭಾಷ್ಯಕಾರರು—

**ದೇವಾಸುರಾಃ ಸಂಯತ್ತಾ ಆಸನ್ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ತಸ್ಮಾದಾಹುರಗ್ನಿಃ ಸರ್ವಾ ದೇವತಾ ಇತಿ ತೇಽಗ್ನಿಮೇವ ವರೂಥಂ ಕೃತ್ವಾಸುರಾನಭ್ಯಭವನ್ ।**

(ತೈ. ಸಂ. ೬-೨-೨-೬, ೭)

ಎಂಬ ತೈತ್ತಿರೀಯ ಸಂಹಿತಾವಾಕ್ಯವನ್ನು ಉದಾಹರಿಸಿದ್ದಾರೆ. ಎಂದರೆ ಪೂರ್ವದಲ್ಲಿ ದೇವತೆಗಳು ಅಸುರರೂ ಯುದ್ಧಸನ್ನದ್ಧರಾದರು. ಆಗ ಅಸುರರ ಬಲವು ಹೆಚ್ಚಾಗಿದ್ದುದನ್ನು ಕಂಡು ದೇವತೆಗಳಿಗೆ ಭಯವುಂಟಾಯಿತು. ಅದಕ್ಕಾಗಿ ದೇವತೆಗಳು ಅಗ್ನಿಯೇ ತಮ್ಮನ್ನು ರಕ್ಷಿಸಬೇಕೆಂದು ಅವನ ಮರೆಹೊಕ್ಕರು. ಅವನಲ್ಲಿ(ಅಗ್ನಿಯಲ್ಲಿ) ಪ್ರವೇಶ ಮಾಡಿ ಐಕ್ಯರಾಗಿದ್ದರು. ಅನಂತರ ಅಗ್ನಿಯ ರಕ್ಷಣೆಯಿಂದ ದೇವತೆಗಳು ಅಸುರರನ್ನು ಜಯಿಸಲು ಸಾಧ್ಯವಾಯಿತು ಎಂದು ಹೇಳಿದೆ. ಇವೇ ಮೊದಲಾದ ಕಾರಣಗಳಿಂದ ಅಗ್ನಿಯಲ್ಲಿ ಸಮಸ್ತ ದೇವತೆಗಳೂ ನೆಲಸಿರುವರೆಂದೂ ಅಗ್ನಿಯು ಸರ್ವದೇವತಾತ್ಮಕನೆಂದೂ ಪ್ರಸಿದ್ಧಿಯು.

**ವರುಣಃ ಮಿತ್ರಃ**—ಮಿತ್ರನು ಅಹಸ್ಸಿಗೆ(ಹಗಲಿಗೆ) ಅಭಿಮಾನಿ ದೇವತೆಯೆಂದೂ, ವರುಣನು ರಾತ್ರ್ಯಭಿಮಾನಿ ದೇವತೆಯೆಂದೂ—**ಮೈತ್ರ್ಯಂ ವಾ ಅಹಃ । ವಾರುಣೀ ರಾತ್ರಿಃ** ಎಂಬ ಶ್ರುತಿವಾಕ್ಯವು ಸಾರುವುದು. ಅಗ್ನಿಯ ಪ್ರಕಾಶವು ರಾತ್ರಿಕಾಲದಲ್ಲಿಯೇ ಹೆಚ್ಚಾಗಿ ಪ್ರಕಾಶಿಸುವುದರಿಂದಲೂ ಅಗ್ನಿಯು ತನ್ನ ಪ್ರಕಾಶದಿಂದ ಕತ್ತಲನ್ನು ನಿವಾರಣೆ ಮಾಡಿ ಬೆಳಕನ್ನು ಉಂಟುಮಾಡುವುದರಿಂದಲೂ ಅಗ್ನಿಯನ್ನು ವರುಣ, ಮಿತ್ರ ಎಂಬ ದೇವತೆಗಳೆಂದು ಸ್ತುತಿಸಲಾಗಿದೆ.

**ಸಹಸಃ ಪುತ್ರ**—ಶಕ್ತಿಯ ಪುತ್ರನೆಂದು ಅಗ್ನಿಯನ್ನು ಸಂಬೋಧಿಸಲಾಗಿದೆ. ಯಜ್ಞಾದಿಗಳಲ್ಲಿ ಅಗ್ನಿಯನ್ನು ಅರಣಿಗಳಲ್ಲಿ (ಮರದ ತುಂಡುಗಳಲ್ಲಿ) ಮಥಿಸಿ ಉತ್ಪನ್ನಮಾಡುವಾಗ ಅಗ್ನಿಮಥನಕ್ಕಾಗಿ ಹೆಚ್ಚಾಗಿ ಶಕ್ತಿಯನ್ನು ಉಪಯೋಗಿಸಬೇಕಾಗಿರುವುದರಿಂದ ಅಗ್ನಿಯು ಶಕ್ತಿ (ಬಲ) ಇಂದ ಉತ್ಪನ್ನವಾಗುವನು. ಆದ್ದರಿಂದ ಅಗ್ನಿಯು ಶಕ್ತಿಯ (ಬಲದ) ಪುತ್ರನು ಎಂದು ಹೇಳುವುದು ರೂಢಿಯಾಗಿದೆ.



॥ ಸಂಹಿತಾಪಾಠಃ ॥

ತ್ವಮ॒ರ್ಯ॒ಮಾ ಭ॑ವಸಿ॒ ಯತ್ಕನೀ॑ನಾಂ॒ ನಾಮ॑ ಸ್ವಧಾವ॒ನ್ಗುಹ್ಯಂ॑ ಬಿಭರ್ಷಿ ।
ಅಂ॒ಜಂತಿ॑ ಮಿ॒ತ್ರಂ ಸುಧಿ॑ತಂ॒ ನ ಗೋಭಿ॒ರ್ಯದ್ದಂಪ॑ತೀ॒ ಸಮ॑ನಸಾ ಕೃ॒ಣೋಷಿ॑ ॥

॥ ಪದಪಾಠಃ ॥

ತ್ವಂ । ಅ॒ರ್ಯ॒ಮಾ । ಭ॒ವ॒ಸಿ॒ । ಯತ್ । ಕ॒ನೀನಾಂ॑ । ನಾಮ॑ । ಸ್ವ॒ಧಾ॒ಽವ॒ನ್ । ಗುಹ್ಯಂ॑ । ಬಿ॒ಭ॒ರ್ಷಿ॒ । ಅಂ॒ಜಂತಿ॑ । ಮಿ॒ತ್ರಂ । ಸುಽಧಿ॑ತಂ । ನ । ಗೋಭಿಃ॑ । ಯತ್ । ದಂಪ॑ತೀ॒ ಇತಿ॒ ದಂಽಪ॑ತೀ । ಸಽಮ॑ನಸಾ । ಕೃ॒ಣೋಷಿ॑ ॥ ೨ ॥

॥ ಸಾಯಣಭಾಷ್ಯಂ ॥

ವಿವಾಹೇ ಚತುರ್ಥ್ಯಾಮಾಜ್ಯಾಹುತೌ ತ್ವಮರ್ಯಮೇತ್ಯೇಷಾ । ಸೂತ್ರಿತಂ ಚ । ತ್ವಮರ್ಯಮಾ ಭವಸಿ ಯತ್ಕನೀನಾಮಿತಿ ವಿವಾಹೇ ಚತುರ್ಥೀಂ । ಆ. ಗೃ. ೧-೪ । ಇತಿ ॥

ಹೇ ಅಗ್ನೇ ತ್ವಮರ್ಯಮಾ ಭವಸಿ । ಸರ್ವೇಷಾಂ ನಿಯಮಿತಾಸಿ । ಯದ್ಯದಾ ಕನೀನಾಂ ಕನ್ಯಕಾನಾಂ ಸಂಬಂಧ್ಯಸಿ । ಕಿಂಚ ಹೇ ಸ್ವಧಾವನ್ ಹವಿರ್ಲಕ್ಷಣಾನ್ನವನ್ ಗುಹ್ಯಂ ಗೋಪನೀಯಂ ನಾಮ ಬಿಭರ್ಷಿ ವೈಶ್ವಾನರ ಇತಿ ತನ್ನಾಮ । ಸುಧಿತಂ ಸುಷ್ಠು ನಿಹಿತಂ ಮಿತ್ರಂ ನ ಮಿತ್ರಮಿವ ಗೋಭಿಃ । ವಿಕಾರೇ- ಪ್ರಕೃತಿಶಬ್ದಃ । ಗೋವಿಕಾರೈಃ ಕ್ಷೀರಾದಿಭಿರಂಜಂತಿ । ಯದ್ಯಸ್ಮಾದ್ದಂಪತೀ ಜಾಯಾಪತೀ। ಸಮನಸಾ ಸಮಾನಮನಸ್ಕೌ ಕೃಣೋಷಿ । ಕರೋಷಿ ॥

॥ ಪ್ರತಿಪದಾರ್ಥ ॥

ಹೇ ಅಗ್ನೇ—(ಎಲೈ ಅಗ್ನಿಯೇ) । ಯತ್—ಯಾವಾಗ । ತ್ವಂ—ನೀನು । ಕನೀನಾಂ—ಕನ್ಯಕೆಯರೊಂದಿಗೆ ಸಂಬಂಧವನ್ನು ಹೊಂದುವೆಯೋ ಆಗ । ಅರ್ಯಮಾ—ಅರ್ಯಮರೂಪನಾಗಿ । ಭವಸಿ—ಆಗುತ್ತೀಯೆ । ಸ್ವಧಾವನ್—ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ಎಲೈ ಅಗ್ನಿಯೇ। ಗುಹ್ಯಂ—ರಹಸ್ಯವಾದ । ನಾಮ—ಹೆಸರನ್ನು । ಬಿಭರ್ಷಿ—ಧರಿಸಿದ್ದೀಯೆ । ಯತ್—ಯಾವ ಪ್ರಭಾವದಿಂದ । ದಂಪತೀ—ಜಾಯಾಪತಿಗಳನ್ನು । ಸಮನಸಾ—ಒಂದೇ ಮನಸ್ಸುಳ್ಳವರನ್ನಾಗಿ । ಕೃಣೋಷಿ—ಮಾಡುವೆಯೋ (ಆದುದರಿಂದಲೇ) । ಸುಧಿತಂ—ಶ್ರೇಷ್ಠವಾಗಿ ಸತ್ಕರಿಸಲ್ಪಟ್ಟ । ಮಿತ್ರಂ ನ—ಸ್ನೇಹಿತನಂತೆ । ಗೋಭಿಃ—ಗೋವಿಕಾರವಾದ ಕ್ಷೀರಾದಿಗಳಿಂದ ಅಂಜಂತಿ—ಅಲಂಕರಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಕನ್ಯಕೆಯರೊಂದಿಗೆ ಸಂಬಂಧವನ್ನು ಹೊಂದಿದಾಗ ಅರ್ಯಮದೇವನಾಗುತ್ತೀಯೆ, ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ಎಲೈ ಅಗ್ನಿಯೇ, ನೀನು ರಹಸ್ಯವಾದ ಹೆಸರನ್ನು ಹೊಂದಿದ್ದೀಯೆ. ಯಾವ ಪ್ರಭಾವದಿಂದ ನೀನು ಪತಿಪತ್ನಿಯರನ್ನು ಒಂದೇ ಮನಸ್ಸುಳ್ಳವರನ್ನಾಗಿ ಮಾಡುತ್ತೀಯೋ ಆ ಕಾರಣದಿಂದಲೇ, ನಿನ್ನನ್ನು ಉತ್ತಮವಾಗಿ ಸತ್ಕರಿಸಲ್ಪಡುವ ಸುಹೃತ್ತಿನಂತೆ ಗೋವಿಕಾರವಾದ ಕ್ಷೀರಾದಿಗಳಿಂದ ಅಲಂಕರಿಸುತ್ತಾರೆ.

## English Translation.

You are Aryaman in relation to maidens ; you bear, enjoyer of sacrificial food, a mysterious name : they anoint you, like a welcome friend with milk and butter, when you make husband and wife of one mind.

॥ ವಿಶೇಷವಿಷಯಗಳು ॥

ವಿವಾಹಪ್ರಧಾನಹೋಮದಲ್ಲಿ ಆಜ್ಯಾಹುತಿಯನ್ನು ಅಗ್ನಿಯಲ್ಲಿ ಹೋಮಮಾಡುವಾಗ ತ್ವಮರ್ಯಮಾ ಎಂಬ ಈ ಋಕ್ಕನ್ನು ನಾಲ್ಕನೆಯ ಆಹುತಿಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ

**ತ್ವಮರ್ಯಮಾ ಭವಸಿ ಯತ್ಕನೀನಾಮಿತಿ ವಿವಾಹೇ ಚತುರ್ಥೀಂ** ಎಂಬ ಸೂತ್ರದಿಂದ (ಆ. ಗೃ. ೧-೪-೭) ವಿವೃತವಾಗಿರುವುದು.

**ಯತ್ ತ್ವಂ ಕನೀನಾಂ ಅರ್ಯಮಾ ಭವಸಿ**—ಎಲೈ ಅಗ್ನಿಯೇ, ನೀನು ಯಾವಾಗ ಕನ್ಯಕೆಯರೊಂದಿಗೆ ಸಂಬಂಧವನ್ನು ಹೊಂದುತ್ತೀಯೋ ಆಗ ಅರ್ಯಮರೂಪನಾಗಿ ಆಗುತ್ತೀಯೆ. ಎಂದರೆ ಇಲ್ಲಿ ಕನ್ಯಕೆಯರ ಸಂಬಂಧವೆಂದರೆ ವಿವಾಹದಲ್ಲಿ ಪ್ರಧಾನಹೋಮಮಾಡುವಾಗ ವಿವಾಹಾಗ್ನಿಗೆ **ಅರ್ಯಮಾ** ಎಂಬ ಹೆಸರು ಪ್ರಸಿದ್ಧವಾಗಿರುವುದು. ಈ ವಿಷಯದಲ್ಲಿ—**ಅರ್ಯಮಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ**—ವಿವಾಹಕಾಲದಲ್ಲಿ ಕನ್ಯೆಯಾದವಳು **ಅರ್ಯಮಾ** ಎಂಬ ಹೆಸರಿನಿಂದ ಪ್ರಸಿದ್ಧವಾದ ಅಗ್ನಿಯನ್ನು ಪೂಜಿಸುತ್ತಾಳೆ ಎಂಬ ಶ್ರುತ್ಯಂತರವಾಕ್ಯವೂ ಇರುವುದು. ಆದುದರಿಂದ ಕನ್ಯೆಯ ಸಂಬಂಧವಾದ ವಿವಾಹಾಗ್ನಿಗೆ **ಅರ್ಯಮಾ** ಎಂದು ಹೆಸರು. ಆ ವಿಷಯವನ್ನೇ ಇಲ್ಲಿ ಹೇಳಿರುವುದು.

**ಸ್ವಧಾವನ್ ಗುಹ್ಯಂ ನಾಮ ಬಿಭರ್ಷಿ—ಹವಿರ್ಲಕ್ಷಣಾನ್ನವನ್ ಗೋಪನೀಯಂ ವೈಶ್ವಾನರ ಇತಿ ನಾಮ ಬಿಭರ್ಷಿ** । ಎಲೈ ಅಗ್ನಿಯೇ, ನೀನು ಹವಿರ್ಲಕ್ಷಣರೂಪವಾದ ಅನ್ನವನ್ನು ಯಜಮಾನರಿಂದ ಸ್ವೀಕರಿಸಿ ಉದ್ದಿಷ್ಟದೇವತೆಗಳಿಗೆ ಒಯ್ಯುವುದರಿಂದ ನಿನಗೆ ವೈಶ್ವಾನರನೆಂಬ ರಹಸ್ಯವಾದ ಹೆಸರೂ ಇರುವುದು. ವೈಶ್ವಾನರನೆಂದರೆ ಸಮಸ್ತರಿಗೂ ಸ್ನೇಹಿತನಾಗಿರುವವನು ಎಂದರ್ಥವು. ಇಲ್ಲಿ ಯಜ್ಞಮಾಡುವ ಯಜಮಾನರಾದಿ ಸಮಸ್ತ ಮಾನವರಿಗೂ, ನಿನ್ನ ಮೂಲಕ ಹವಿಸ್ಸನ್ನು ಸ್ವೀಕರಿಸುವ ದೇವತೆಗಳಿಗೂ ಬೇಕಾದವನಾಗಿರುವುದರಿಂದ ನೀನು ಎಲ್ಲರ ವಿಷಯದಲ್ಲಿಯದಲ್ಲಿಯೂ ಎಂದರೆ ದೇವಮಾನವಾದಿಸಮಸ್ತರ ವಿಷಯದಲ್ಲಿ ಸ್ನೇಹಿತನಾಗಿರುವೆ ಎಂದಭಿಪ್ರಾಯವು ವೈಶ್ವಾನರಾಗ್ನಿ ಪದದಿಂದ ಸೂಚಿತವಾಗಿದೆ.

**ಯತ್ ದಂಪತೀ ಸಮನಸಾ ಕೃಣೋಷಿ ಸುಧಿತಂ ಮಿತ್ರಂ ನ ಗೋಭಿಃ ಅಂಜಂತಿ**—ಎಲೈ ಅಗ್ನಿಯೇ ವಿವಾಹಕಾರ್ಯದಲ್ಲಿ ನೀನು ವಧೂವರರನ್ನು ಏಕಮನಸ್ಕರನ್ನಾಗಿ ಎಂದರೆ ಪರಸ್ಪರ ಪ್ರೀತಿಯುಕ್ತರನ್ನಾಗಿ ಮಾಡುವುದರಿಂದ ಮಿತ್ರನ ವಿಷಯದಲ್ಲಿ ಜನರು ಯಾವರೀತಿ ಆದರಾತಿಶಯಗಳಿಂದ ವರ್ತಿಸುವರೋ ಅದರಂತೆ ನಿನ್ನನ್ನು ಕ್ಷೀರಾದಿ ದ್ರವ್ಯಗಳಿಂದ ಸತ್ಕರಿಸಿ ಪೂಜಿಸುವರು ಎಂದಭಿಪ್ರಾಯವು. ಇಲ್ಲಿ **ಗೋಭಿಃ ಗೋವಿಕಾರೈಃ ಕ್ಷೀರಾದಿಭಿಃ** ಎಂದರೆ ಗೋವಿನಿಂದ ಲಭಿಸುವ ಕ್ಷೀರವನ್ನು ಸೂಚಿಸುವುದಕ್ಕಾಗಿ **ಗೋಭಿಃ** ಎಂದು ಗೋಶಬ್ದವನ್ನೇ ಉಪಯೋಗಿಸಿದೆ.

॥ ಸಂಹಿತಾಪಾಠಃ ॥

ತವ ಶ್ರಿಯೇ ಮರುತೋ ಮರ್ಜಯಂತ ರುದ್ರ ಯತ್ತೇ ಜನಿಮ ಚಾರು-
ಚಿತ್ರಂ ।
ಪದಂ ಯದ್ವಿಷ್ಣೋರುಪಮಂ ನಿಧಾಯಿ ತೇನ ಪಾಸಿ ಗುಹ್ಯಂ ನಾಮ
ಗೋನಾಂ ॥ ೩ ॥

॥ ಪದಪಾಠಃ ॥

ತವ । ಶ್ರಿಯೇ । ಮರುತಃ । ಮರ್ಜಯಂತ । ರುದ್ರ । ಯತ್ । ತೇ । ಜನಿಮ । ಚಾರು । ಚಿತ್ರಂ ।

ಪದಂ । ಯತ್ । ವಿಷ್ಣೋಃ । ಉಪಮಂ । ನಿಧಾಯಿ । ತೇನ । ಪಾಸಿ । ಗುಹ್ಯಂ । ನಾಮ । ಗೋನಾಂ॥

॥ ಸಾಯಣಭಾಷ್ಯಂ ॥

ಅನಯಾಗ್ನೇರ್ಮಾಧ್ಯಮಿಕೀ ಮೂರ್ತಿರುಚ್ಯತೇ। ಹೇ ಅಗ್ನೇ ತವ ಶ್ರಿಯೇ ಶ್ರಯಣಾಯ ಮರುತೋಽಪೋಽಂತರಿಕ್ಷ್ಯಾ ಮರ್ಜಯಂತ । ಮಾರ್ಜಯಂತಿ । ಹೇ ರುದ್ರ ವೃಷ್ಟ್ಯಾ ರುದ್ರವದ್ವರ್ಧಿತೇ- ರಗ್ನೇ ತೇ ತವ ಯಜ್ಜನಿಮ।ಜನ್ಮ ವೈದ್ಯುತಲಕ್ಷಣಂ ಚಾರು ಚರಣೀಯಂ ಚಿತ್ರಂ ಚಾಯನೀಯಂ ಚ ತತ್ಕಥಮಿತಿ ಚೇದುಚ್ಯತೇ । ವಿಷ್ಣೋರ್ವ್ಯಾಪನಶೀಲಸ್ಯ ದೇವಸ್ಯೋಪಮಂ ಗುಹ್ಯಮಗಮ್ಯಂ ಯತ್ಪದಂ ನಿಧಾಯಿ। ಅನೇನಾಂತರಿಕ್ಷಮುಕ್ತಂ। ಉಪಮೋಯಮಿವ ವಿಷ್ಣೋರ್ಮಧ್ಯಮಂ ಪದಂ ತಸ್ಮಾನ್ನಾಂತರಿಕ್ಷಂ ಪಶ್ಯಂತೀತಿ ಬ್ರಾಹ್ಮಣಂ । ತೇನ ಗೋನಾಮುದಕಾನಾಂ ಗುಹ್ಯಂ ನಾಮ ನಾಮಾನಿ ಪಾಸಿ । ರಕ್ಷಸಿ ॥

॥ ಪ್ರತಿಪದಾರ್ಥ ॥

ಎಲೈ ಅಗ್ನಿಯೇ । ತವ—ನಿನ್ನ । ಶ್ರಿಯೇ—ಮಹಿಮೆಯ ಪ್ರಕಾಶಕ್ಕಾಗಿ। ಮರುತಃ— ಮರುತ್ತುಗಳು । ಮರ್ಜಯಂತ— (ಅಂತರಿಕ್ಷವನ್ನು) ಶುದ್ಧಿಮಾಡುತ್ತವೆ । ರುದ್ರ—ರುದ್ರನಂತಿರುವ ಎಲೈ ಅಗ್ನಿಯೇ । ತೇ—ನಿನ್ನ । ಜನಿಮ—ವೈದ್ಯುತರೂಪದ ಉತ್ಪತ್ತಿಯು । ಯತ್—ಯಾವುದಿದೆಯೋ ಅದು । ಚಾರು—ಮನೋಹರವಾಗಿಯೂ । ಚಿತ್ರಂ—ಆಶ್ಚರ್ಯಾವಹವಾಗಿಯೂ (ಇದೆ) । ವಿಷ್ಣೋಃ—ವಿಷ್ಣುವಿನ । ಯತ್—ಯಾವ । ಉಪಮಂ ಪದಂ—ಮಧ್ಯಮ ಪಾದವು । ನಿಧಾಯಿ—ಇಡಲ್ಪಟ್ಟಿದೆಯೋ । ತೇನ— ಆದರಿಂದ । ಗೋನಾಂ—ಉದಕಗಳ । ಗುಹ್ಯಂ ನಾಮ—ರಹಸ್ಯವಾದ ಹೆಸರುಗಳನ್ನು । ಪಾಸಿ— ರಕ್ಷಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಮಹಿಮೆಯ ಪ್ರಕಾಶಕ್ಕಾಗಿ ಮರುತ್ತುಗಳು ಅಂತರಿಕ್ಷವನ್ನು ಶುದ್ಧಿಮಾಡುತ್ತವೆ. ರುದ್ರನಂತಿರುವ ಎಲೈ ಅಗ್ನಿಯೇ, ನಿನ್ನ ವೈದ್ಯುತರೂಪದ ಉತ್ಪತ್ತಿಯು ಮನೋಹರವಾಗಿಯೂ ಆಶ್ಚರ್ಯಕರವಾಗಿಯೂ ಇದೆ ವಿಷ್ಣುವಿನ ಮಧ್ಯಮಪಾದದ ನಿಕ್ಷೇಪದ ಕಾರಣದಿಂದ ನೀನು ಉದಕಗಳ ರಹಸ್ಯವಾದ ಹೆಸರುಗಳನ್ನು ಪೋಷಿಸುತ್ತೀಯೆ.

## English Translation.

For your glory the Maruts sweep (the firmament), when your birth, Rudra, is beautiful and wounderful : the middle step of Vishnu has been placed, so you cherish the mysterious name of the waters.

|| ವಿಶೇಷವಿಷಯಗಳು ||

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಇಲ್ಲಿ ಮಧ್ಯಮಸ್ಥಾನ ದೇವತೆಯಾದ ವೈದ್ಯುತಾಗ್ನಿಯನ್ನು (ಮಿಂಚು) ಸ್ತುತಿಸಲಾಗಿದೆ.

**(ಹೇ ಅಗ್ನೇ) ತವ ಶ್ರಿಯೇ ಮರುತಃ ಮರ್ಜಯಂತ—ತವ ಶ್ರಯಣಾಯ ಮರುತಃ ಅಂತರಿಕ್ಷ್ಯಾಃ ಮಾರ್ಜಯಂತಿ** । ಎಲೈ ಅಗ್ನಿಯೇ, ನಿನ್ನ ಮಹಿಮೆಯನ್ನು ಪ್ರಕಾಶಪಡಿಸುವುದಕ್ಕಾಗಿ ಮರುತ್ತುಗಳು ಅಂತರಿಕ್ಷವನ್ನು ಶುದ್ಧಿಮಾಡುತ್ತವೆ. ಅಂತರಿಕ್ಷದಲ್ಲಿ ವಿದ್ಯುದ್ಗೋಚರವು ವೃಷ್ಟಿಯ ಸಮಯದಲ್ಲಿ ಮಾತ್ರ ಆಗುವುದು. ಆ ಕಾಲದಲ್ಲಿ ಗಾಳಿಯು (ವೇಗವಾಗಿ ಬೀಸುವ ಗಾಳಿಗೆ ಮರುತ್ ಎಂದು ಹೆಸರು) ವೇಗವಾಗಿ ಬೀಸುವುದು. ಅನಂತರ ವೃಷ್ಟಿಕಾಲದಲ್ಲಿ ಅಥವಾ ತತ್ಪೂರ್ವದಲ್ಲಿ ವೈದ್ಯುತಾಗ್ನಿ ಅಥವಾ ಮಿಂಚು ಗೋಚರವಾಗುವುದು. ವೈದ್ಯುತಾಗ್ನಿಯು ಕಾಣಿಸುವುದಕ್ಕಿಂತ ಮುಂಚಿತವಾಗಿ ಗಾಳಿಯು ರಭಸವಾಗಿ ಬೀಸುವುದರಿಂದ ವಿದ್ಯುದಗ್ನಿಯ ಮಹಿಮೆಯನ್ನು ಎಲ್ಲರಿಗೂ ತಿಳಿಸುವುದಕ್ಕಾಗಿ ಗಾಳಿಯು ಅಂತರಿಕ್ಷದಲ್ಲಿ ಬೀಸಿ ಅಂತರಿಕ್ಷವನ್ನು ಶುದ್ಧಿಮಾಡುವುದೆಂದು ಇಲ್ಲಿ ಪ್ರಕಾರಾಂತರವಾಗಿ ವರ್ಣಿಸಿದೆ. ರಾಜನ ಆಗಮನ ಕಾಲದಲ್ಲಿ ಮಾರ್ಗವನ್ನು ಶುದ್ಧಿಮಾಡುವುದು ಸ್ವಾಭಾವಿಕವಾಗಿದೆ. ಎಂದರೆ ರಾಜನು ಬರುವುದಕ್ಕೆ ಮುಂಚಿತವಾಗಿ ಮಾರ್ಗಶುದ್ಧಿಕ್ರಿಯೆಯು ನಡೆಯುವುದು. ಅದರಂತೆ ವಿದ್ಯುದಗ್ನಿಯ ಆವಿರ್ಭಾವಕ್ಕೆ ಮುಂಚಿತವಾಗಿ ಗಾಳಿಯು ವೇಗವಾಗಿ ಬೀಸುತ್ತಾ ಅಗ್ನಿಯ ಸಂಚಾರಮಾರ್ಗವಾದ ಅಂತರಿಕ್ಷವನ್ನು ಶುದ್ಧಿಗೊಳಿಸುವುದೆಂದು ವರ್ಣಿಸಲಾಗಿದೆ.

**ರುದ್ರ ತೇ ಜನಿಮ ಯತ್ ಚಾರು ಚಿತ್ರಂ ವಿಷ್ಣೋಃ ಯತ್ ಪದಂ ಉಪಮಂ ಪದಂ ನಿಧಾಯಿ—** ಇಲ್ಲಿ ಅಗ್ನಿಯನ್ನು ರುದ್ರಶಬ್ದದಿಂದ ಸಂಬೋಧಿಸಿದೆ. ರುದ್ರವದ್ವರ್ಧಿತಃ— ರುದ್ರನಂತೆ ಪ್ರವರ್ಧಮಾನನು ಎಂದು ಸಾಯಣರ ವಿವರಣೆಯು. ಎಲೈ ಅಗ್ನಿಯೇ, ಅಂತರಿಕ್ಷದಲ್ಲಿ ನಿನ್ನ ಆವಿರ್ಭಾವವು ವಿಷ್ಣುವಿನ ಪಾದಪ್ರಕ್ಷೇಪದಂತೆ ಅತ್ಯಾಶ್ಚರ್ಯಕರವಾಗಿದೆ ಎಂದು ಇಲ್ಲಿ ಹೇಳಿದೆ. ವಿಷ್ಣುವಿನ ಮೂರು ಪಾದಪ್ರಕ್ಷೇಪಗಳು ಭೂಮಿ, ಅಂತರಿಕ್ಷ, ಸ್ವರ್ಗವೆಂಬ ಮೂರು ಸ್ಥಾನಗಳಲ್ಲಿರುವುದೆಂದು ಪ್ರಸಿದ್ಧಿಯಾಗಿರುವುದರಿಂದ ಇಲ್ಲಿ ಅಂತರಿಕ್ಷದಲ್ಲಿ ವಿಷ್ಣುವಿನ ಎರಡನೆಯ ಪಾದವಿಕ್ಷೇಪವನ್ನು ಸೂಚಿಸಿದೆ. ಅತ್ಯಾಶ್ಚರ್ಯಕರವಾದ ಎಂದರೆ ಅಂತರಿಕ್ಷದಲ್ಲಿ ಪೂರ್ವಸೂಚನೆಯಿಲ್ಲದೆ ಆಕಸ್ಮಿಕವಾಗಿ ಗೋಚರಿಸುವ ಮಿಂಚು ಅಥವಾ ವಿದ್ಯುದಗ್ನಿಯು ವಿಷ್ಣುವಿನ ಅಂತರಿಕ್ಷದಲ್ಲಿರುವ ದ್ವಿತೀಯ ಪಾದವಿಕ್ಷೇಪದಂತೆ ಆಶ್ಚರ್ಯಕಾರಕವಾಗಿರುವುದು ಎಂದು ವಿಷ್ಣುವಿನ ಪಾದವಿಕ್ಷೇಪದ ಉಪಮಾನವನ್ನು ಹೇಳಿದೆ.

**ತೇನ ಗೋನಾಂ ಗುಹ್ಯಂ ನಾಮ ಪಾಸಿ—ತೇನ ಉದಕಾನಾಂ ನಾಮಾನಿ ರಕ್ಷಸಿ** । ಎಲೈ ಅಗ್ನಿಯೇ, ಈ ವಿಧವಾದ ನಿನ್ನ ಆಶ್ಚರ್ಯಕರವಾದ ಕರ್ಮಾಚರಣೆಯಿಂದ ಉದಕಗಳ (ವೃಷ್ಟ್ಯುದಕಗಳ) ಹೆಸರುಗಳನ್ನು ರಕ್ಷಿಸುತ್ತೀಯೆ ಎಂದರೆ ರಹಸ್ಯವಾದ ಉದಕಗಳ ಮಹಿಮೆಯನ್ನು ಪ್ರಕಾಶಪಡಿಸುತ್ತೀಯೆ ಎಂದಭಿಪ್ರಾಯವು. ಈ ಕೊನೆಯ ವಾಕ್ಯದ ಸರಿಯಾದ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ.



॥ ಸಂಹಿತಾಪಾಠಃ ॥

ತವ ಶ್ರಿಯಾ ಸುದೃಶೋ ದೇವ ದೇವಾಃ ಪುರೂ ದಧಾನಾ ಅಮೃತಂ ಸಪಂತ।

ಹೋತಾರಮಗ್ನಿಂ ಮನುಷೋ ನಿ ಷೇದುರ್ದಶಸ್ಯಂತ ಉಶಿಜಃ ಶಂಸ-

ಮಾಯೋಃ ॥ ೪ ॥

॥ ಪದಪಾಠಃ ॥

ತವ । ಶ್ರಿಯಾ । ಸುऽದೃಶಃ । ದೇವ । ದೇವಾಃ । ಪುರು । ದಧಾನಾಃ । ಅಮೃತಂ । ಸಪಂತ ।

ಹೋತಾರಂ । ಅಗ್ನಿಂ । ಮನುಷಃ । ನಿ । ಸೇದುಃ । ದಶಸ್ಯಂತಃ । ಉಶಿಜಃ । ಶಂಸಂ । ಆಯೋಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವಾಗ್ನೇ ಸುದೃಶಸ್ತವ ಶ್ರಿಯಾ ಸಮೃದ್ಧ್ಯಾ ದೇವಾ ಇಂದ್ರಾದಯಃ ಪುರ್ವತ್ಯಧಿಕಂ ದಧಾನಾಸ್ತ್ವಯಿ ಪ್ರೀತಿಂ ಧಾರಯಂತೋಽಮೃತಂ ಸಪಂತೇ ಸ್ಪೃಶಂತಿ । ಹೋತಾರಂ ಹೋಮನಿಷ್ಪಾದಕಮಗ್ನಿಂ ಮನುಷೋ ಮನುಷ್ಯಾ ನಿ ಷೇದುಃ । ಪರಿಚರಂತ್ಯೃತ್ವಿಜಃ । ಕಿಂ ಕುರ್ವಂತಃ । ದಶಸ್ಯಂತೋ ಹವಿರ್ವಿತರಂತಃ ಶಂಸಂ ಫಲಮುಶಿಜಃ ಕಾಮಯಮಾನಸ್ಯಾಯೋರ್ಮನುಷ್ಯಸ್ಯ ಯಜಮಾನಸ್ಯಾರ್ಥಂ ॥

॥ ಪ್ರತಿಪದಾರ್ಥ ॥

ದೇವ—ಪ್ರಕಾಶಮಾನನಾದ ಅಗ್ನಿಯೇ। ತವ—ನಿನ್ನ। ಶ್ರಿಯಾ—ಕಾಂತಿಸಂಪತ್ತಿನಿಂದ । ಸುದೃಶಃ—ರಮ್ಯವಾದ ರೂಪವನ್ನು ಹೊಂದಿದ । ದೇವಾಃ—ಇಂದ್ರಾದಿ ದೇವತೆಗಳು । ಪುರು—ಅಧಿಕವಾಗಿ । ದಧಾನಾಃ—ಪ್ರೀತಿಯನ್ನು ಹೊಂದಿದವರಾಗಿ । ಅಮೃತಂ—ಅಮೃತವನ್ನು । ಸಪಂತ—ಸೇವಿಸುತ್ತಾರೆ । ಶಂಸಂ—ಯಜ್ಞ ಫಲವನ್ನು । ಉಶಿಜಃ—ಅಪೇಕ್ಷಿಸಿದ । ಆಯೋಃ—ಮಾನವನಾದ ಯಜಮಾನನಿಗಾಗಿ । ದಶಸ್ಯಂತಃ—ಹವಿಸ್ಸನ್ನು ಅರ್ಪಿಸತಕ್ಕ । ಮನುಷಃ—ಋತ್ವಿಗಾದಿಗಳು । ಹೋತಾರಂ—ಹೋಮ ಸಂಪಾದಕನಾದ । ಅಗ್ನಿಂ—ಅಗ್ನಿಯನ್ನು । ನಿಷೇದುಃ—ಉಪಚರಿಸಿ ಪೂಜಿಸುತ್ತಾರೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ನಿನ್ನ ಕಾಂತಿಸಂಪತ್ತಿನಿಂದ ರಮ್ಯವಾದ ರೂಪವನ್ನು ಹೊಂದಿದ ಇಂದ್ರಾದಿ ದೇವತೆಗಳು ನಿನ್ನಲ್ಲಿ ಅಧಿಕವಾದ ಪ್ರೀತಿಯನ್ನು ಹೊಂದಿದವರಾಗಿ ಅಮೃತವನ್ನು ಸೇವಿಸುತ್ತಾರೆ. ಯಜ್ಞ ಫಲವನ್ನು ಅಪೇಕ್ಷಿಸಿದ ಮಾನವನಾದ ಯಜಮಾನನಿಗಾಗಿ ಹವಿರ್ದಾತರಾದ ಋತ್ವಿಕ್ಕುಗಳು ಹೋಮಸಂಪಾದಕನಾದ ಅಗ್ನಿಯನ್ನು ಉಪಚರಿಸಿ ಪೂಜಿಸುತ್ತಾರೆ.

## English Translation.

Divine (Agni), the gods (made) comely by your glory, and bearing (the) great (affection), sip the ambrosia : men adore Agni, the conveyer of the burnt-offering, presenting, oblations on behalf of the institutor of the rite, desirous of (its) reward.

॥ ವಿಶೇಷವಿಷಯಗಳು ॥

ಅಗ್ನಿಯು ತನ್ನ ಮಹಿಮೆಯಿಂದ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ಒಯ್ಯುವುದರಿಂದ ಆ ದೇವತೆಗಳು ಅಗ್ನಿಯ ಮತ್ತು ಯಜಮಾನರ ವಿಷಯದಲ್ಲಿ ಪ್ರೀತರಾಗಿ ಯಜ್ಞದಲ್ಲಿ ಅರ್ಪಿಸುವ ಸೋಮರೂಪವಾದ ಅಮೃತವನ್ನು ಸಂತೋಷದಿಂದ ಸೇವಿಸುತ್ತಾರೆ. ಮತ್ತು ಯಜಮಾನನ ಪರವಾಗಿ ಹವಿಸ್ಸನ್ನು ಅರ್ಪಿಸುವ ಋತ್ವಿಕ್ಕುಗಳು ಹೋಮನಿಷ್ಪಾದಕನಾದ ಅಗ್ನಿಯನ್ನು ಉಪಚರಿಸಿ ಪೂಜಿಸುತ್ತಾರೆ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ನ ತ್ವದ್ಧೋತಾ ಪೂರ್ವೋ ಅಗ್ನೇ ಯಜೀಯಾನ್ನ ಕಾವ್ಯೈಃ ಪರೋ ಅಸ್ತಿ
ಸ್ವಧಾವಃ ।
ವಿಶಶ್ಚ ಯಸ್ಯಾ ಅತಿಥಿರ್ಭವಾಸಿ ಸ ಯಜ್ಞೇನ ವನವದ್ದೇವ ಮರ್ತಾನ್ ॥೫॥

॥ ಪದಪಾಠಃ ॥

ನ । ತ್ವತ್ । ಹೋತಾ । ಪೂರ್ವಃ । ಅಗ್ನೇ । ಯಜೀಯಾನ್ । ನ । ಕಾವ್ಯೈಃ । ಪರಃ । ಅಸ್ತಿ ।
ಸ್ವಧಾಽವಃ ।
ವಿಶಃ । ಚ । ಯಸ್ಯಾಃ । ಅತಿಥಿಃ । ಭವಾಸಿ । ಸಃ । ಯಜ್ಞೇನ । ವನವತ್ । ದೇವ । ಮರ್ತಾನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವತ್ತ್ವತ್ತೋಽನ್ಯೋ ನಾಸ್ತಿ ಹೋತಾ ಪೂರ್ವಃ ಪೂರಕಃ ಪುರಾಣೋ ವಾ ಯಜೀಯಾನ್ಯಷ್ಟಾ ವಾ । ಕಾವ್ಯೈಃ-ಸ್ತೋತ್ರೈಃ ಸ್ತುತ್ಯಃ ಪರಃ ಪರಸ್ತಾತ್ಪರಸ್ಮಿನ್ನಪಿ ಕಾಲೇ ನಾಸ್ತಿ । ಹೇ ದೇವ ಹೇ ಸ್ವಧಾವೋಽನ್ನವನ್ ಯಸ್ಯಾ ವಿಶಃ ಪ್ರಜಾಯಾ ಋತ್ವಿಗ್ರೂಪಾಯಾ ಅತಿಥಿರ್ಭವಾಸಿ । ಅತಿಥಿವತ್ಪೂಜ್ಯೋ ಭವಸಿ । ಸ ಯಜ್ಞೇನ ಮರ್ತಾನಸ್ಮದ್ದ್ವೇಷ್ಟೄನ್ ವನವತ್ । ವೃಶ್ಚತಿ । ಹಿನಸ್ತಿ । ಯದ್ವಾ । ಮರ್ತಾನ್ಪರಿಚಾರಕಾನ್ವನವತ್ । ಸಂಭಜೇತ್ ॥

‖ ಪ್ರತಿಪದಾರ್ಥ ‖

ಅಗ್ನೇ—ಎಲೈ ಅಗ್ನಿಯೇ । ತ್ವತ್— ನಿನ್ನನ್ನು ಬಿಟ್ಟರೆ । ಪೂರ್ವಃ– ನಿನಗಿಂಲೂ ಮೊದಲು । ಹೋತಾ—ಹೋಮಸಂಪಾದಕನು । ನ ಅಸ್ತಿ—ಯಾರೂ ಇಲ್ಲ । ಕಾವ್ಯೈಃ—ಸ್ತುತಿಗಳಿಂದ ಪ್ರಶಂಸಿತನಾದ । ಯಜೀಯಾನ್—ಯಜ್ಞಕರ್ತನು । ಪರಃ—ನಿನಗಿಂತಲೂ ಬೇರೆ ಯಾರು । ನ—ಇಲ್ಲ । ದೇವ—ದೇವತಾತ್ಮನಾದ ಅಗ್ನಿಯೇ । ಸ್ವಧಾವಃ—ಅನ್ನವಂತನಾಗಿ । ಯಸ್ಯಾ ವಿಶಃ—ಯಾವ ಋತ್ವಿಗಾದಿ ಪ್ರಜೆಗೆ । ಅತಿಥಿಃ—ಅತಿಥಿಯಾಗಿ । ಭವಸಿ—ಆಗುತ್ತೀಯೋ । ಸಃ—ಅಂತಹ ಮಾನವನು । ಯಜ್ಞೇನ—ಯಜ್ಞದ ಸಹಾಯದಿಂದ । ಮರ್ತಾನ್—ತನ್ನ ಮಾನವ ರೂಪರಾದ ಶತ್ರುಗಳನ್ನು । ವನವತ್—ನಾಶಮಾಡುತ್ತಾನೆ.

‖ ಭಾವಾರ್ಥ ‖

ಎಲೈ ಅಗ್ನಿಯೇ, ಉತ್ತಮನಾದ ಹೋತೃವಾಗಲಿ, ಸ್ತುತಿಗಳಿಂದ ಪ್ರಶಂಸಿತನಾದ ಯಜ್ಞಕರ್ತನಾಗಲಿ ನಿನ್ನನ್ನು ಬಿಟ್ಟರೆ ನಿನಗಿಂತಲೂ ಪೂರ್ವಭಾವಿಯಾಗಿ ಯಾರೂ ಇಲ್ಲ. ಮುಂದೆಯೂ ನಿನ್ನನ್ನು ಮೀರಿಸಿದವರೂ ಯಾರೂ ಇರಲಾರದು. ದೇವತಾತ್ಮನಾದ ಎಲೈ ಅಗ್ನಿಯೇ, ನೀನು ಅನ್ನವಂತನಾಗಿ ಯಾವ ಋತ್ವಿಗಾದಿ ಪ್ರಜೆಗೆ ಅತಿಥಿಯಾಗಿ ಆಗುತ್ತೀಯೋ ಅಂತಹ ಮಾನವನು ಯಜ್ಞದ ಸಹಾಯದಿಂದ ತನ್ನ ಮಾನವರೂಪರಾದ ಶತ್ರುಗಳನ್ನು ನಾಶಮಾಡುತ್ತಾನೆ.

## English Translation.

There is no more venerable offerer of oblations, Agni, than you, nor (one) prior to you; neither, giver of food, is any one subsequent (to be more glorified by hymns): the man of whom you are the guest destroys hostile men by sacrifice.

‖ ವಿಶೇಷವಿಷಯಗಳು ‖

ಎಲೈ ಅಗ್ನಿಯೇ, ಯಜ್ಞಕರ್ಮವನ್ನು ಆಚರಿಸುವ ಯಜಮಾನರಲ್ಲಿಯಾಗಲಿ ಅಥವಾ ಋತ್ವಿಕ್ಕುಗಳಲ್ಲಿಯಾಗಲಿ ಎಂದರೆ ಆಯಾ ಕರ್ಮಗಳ ತಿಳುವಳಿಕೆ ಮತ್ತು ಕರ್ಮನಿರ್ವಹಣೆಯಲ್ಲಿ ನಿನಗಿಂತ ಉತ್ತಮರಾದವರು ಯಾರೂ ಇಲ್ಲ. ನೀನೇ ಎಲ್ಲವನ್ನೂ ತಿಳಿದವನು ಇದಲ್ಲದೆ ನೀನು ಋತ್ವಿಗಾದಿ ಜನರಿಗೆ ಅತಿಥಿಯಂತೆ ಪೂಜ್ಯನಾಗಿ ಅನ್ನಾದಿಗಳನ್ನು ಕೊಟ್ಟು ಅವರ ಶತ್ರುಗಳನ್ನು, ದಾವಾಗ್ನಿಯು ವನವನ್ನು ನಾಶಮಾಡುವಂತೆ ನಾಶಮಾಡುತ್ತೀಯೆ ಅಥವಾ ನಿನ್ನನ್ನು ಉಪಚರಿಸುವ ಋತ್ವಿಗಾದಿ ಜನರಿಗೆ ಅನುಗ್ರಹ ಮಾಡುವುದಕ್ಕಾಗಿ ಅವರ ಬಳಿಗೆ ಹೋಗುವೆ ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯ-
ಮಾನಾಃ ।
ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ
ಮರ್ತಾನ್ ॥ ೬ ॥

॥ ಪದಪಾಠಃ ॥

ವಯಂ । ಅಗ್ನೇ । ವನುಯಾಮ । ತ್ವಾಽಊತಾಃ । ವಸುಽಯವಃ । ಹವಿಷಾ । ಬುಧ್ಯಮಾನಾಃ ।

ವಯಂ । ಸಽಮರ್ಯೇ । ವಿದಥೇಷು । ಅಹ್ನಾಂ । ವಯಂ । ರಾಯಾ । ಸಹಸಃ । ಪುತ್ರ । ಮರ್ತಾನ್ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಯಂ ಯಜಮಾನಾಸ್ತ್ವೋತಾಸ್ತ್ವಯಾ ರಕ್ಷಿತಾಃ ಸಂತೋ ವನುಯಾಮ । ಶತ್ರೂನ್ಹಿಂಸಯಾಮ ಸಂಭಜೇಮಹಿ ವಾ ಧನಂ । ಕೀದೃಶಾ ವಯಂ । ವಸೂಯವೋ ವಸುಕಾಮಾ ಹವಿಷಾ ತ್ವಾಂ ಬುಧ್ಯಮಾನಾ ಬೋಧಯಂತೋ ವಯಂ ಸಮರ್ಯೇ ಸಮರಣೇ ಜಯೇಮ ಶತ್ರೂನಿತಿ ಶೇಷಃ । ವಿದಥೇಷು ಯಾಗೇಷು ಪ್ರಾಪ್ನುಯಾಮ ಬಲಂ । ಯದ್ವಾ । ವನುಯಾಮೇತ್ಯೇತದನುಷಜ್ಯತೇ । ಅಹ್ನಾಂ ಸರ್ವೇಷ್ವಹಃಸು । ಕಿಂಚ ವಯಂ ಹೇ ಸಹಸಸ್ಪುತ್ರ ಬಲಸ್ಯ ಪುತ್ರ ಪಾಲಕ ವಾಗ್ನೇ ರಾಯಾ ಧನೇನ ಸಹ ಮರ್ತ್ಯಾನ್ಪುತ್ರಭೃತ್ಯಾದೀನ್ ಲಭೇಮಹಿ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ವಯಂ—ಯಜಮಾನರಾದ ನಾವು । ವಸೂಯವಃ—ಧನಾರ್ಥಿಗಳಾಗಿ । ಹವಿಷಾ—ಹವಿಸ್ಸುಗಳಿಂದ । ಬುಧ್ಯಮಾನಾಃ—(ನಿನ್ನನ್ನು) ಎಚ್ಚರಗೊಳಿಸುತ್ತಾ । ತ್ವೋತಾಃ—ನಿನ್ನಿಂದ ರಕ್ಷಿತರಾಗಿ । ವನುಯಾಮ—ಧನವನ್ನು ಹೊಂದುವಂತಾಗಲಿ । ಅಹ್ನಾಂ—ಸಕಲ ದಿನಗಳಲ್ಲಿಯೂ । ವಿದಥೇಷು—ಯಜ್ಞಗಳಲ್ಲಿ (ಶಕ್ತಿಯನ್ನು ಪಡೆದು) । ವಯಂ—ನಾವು । ಸಮರ್ಯೇ—ಯುದ್ಧದಲ್ಲಿ (ಜಯವನ್ನು ಹೊಂದುವಂತಾಗಲಿ)। ಸಹಸಸ್ಪುತ್ರ—ಶಕ್ತಿಪುತ್ರನಾದ ಎಲೈ ಅಗ್ನಿಯೇ। ವಯಂ—ನಾವು। ರಾಯಾ—ಧನಸಂಪತ್ತಿನೊಡನೆ। ಮರ್ತಾನ್—ಪುತ್ರಭೃತ್ಯಾದಿಗಳನ್ನು (ಪಡೆಯುವಂತಾಗಲಿ).

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಜಮಾನರಾದ ನಾವು ಧನಾರ್ಥಿಗಳಾಗಿ ಹವಿಸ್ಸುಗಳಿಂದ ನಿನ್ನನ್ನು ಎಚ್ಚರಗೊಳಿಸುತ್ತಾ ನಿನ್ನಿಂದ ರಕ್ಷಿತರಾಗಿ ಧನವನ್ನು ಹೊಂದುವಂತಾಗಲಿ. ಸಕಲದಿನಗಳಲ್ಲಿಯೂ ಯಜ್ಞಗಳಲ್ಲಿ ಶಕ್ತಿಯನ್ನು ಪಡೆದೂ

ನಾವು ಯುದ್ಧದಲ್ಲಿ ಜಯವನ್ನು ಹೊಂದುವಂತಾಗಲಿ. ಶಕ್ತಿಪುತ್ರನಾದ ಎಲೈ ಅಗ್ನಿಯೇ, ನಾವು ಧನಸಂಪತ್ತಿನೊಡನೆ ಪುತ್ರಭೃತ್ಯಾದಿಗಳನ್ನು ಪಡೆಯುವಂತಾಗಲಿ.

English Translation.

May we, desirous of wealth, Agni, and arousing you by oblations, secure in your protection, acquire (riches): may we (be victorious) in battle, (successful) in sacrifices every day; and may we, son of strength, obtain with riches male (descendants).

॥ ಸಂಹಿತಾಪಾಠಃ ॥

ಯೋನ ಆಗೋ ಅಭ್ಯೇನೋ ಭರಾತ್ಯಧೀದಘಮಘಶಂಸೇ ದಧಾತ ।
ಜಹೀ ಚಿಕಿತ್ವೋ ಅಭಿಶಸ್ತಿಮೇತಾಮಗ್ನೇ ಯೋ ನೋ ಮರ್ಚಯತಿ
ದ್ವಯೇನ ॥ ೭ ॥

॥ ಪದಪಾಠಃ ॥

ಯಃ । ನಃ । ಆಗಃ । ಅಭಿ । ಏನಃ । ಭರಾತಿ । ಅಧಿ । ಇತ್ । ಅಘಂ । ಅಘಽಶಂಸೇ । ದಧಾತ ।
ಜಹಿ । ಚಿಕಿತ್ವಃ । ಅಭಿಽಶಸ್ತಿಂ । ಏತಾಂ । ಅಗ್ನೇ । ಯಃ । ನ । ಮರ್ಚಯತಿ । ದ್ವಯೇನ ॥ ೭ ॥

॥ ಸಾಯಣಭಾಷ್ಯಂ ॥

ಯೋ ಮರ್ತ್ಯ ಆಗೋಽಪರಾಧಮೇನಃ ಪಾಪಂ ಚ ನೋಽಸ್ಮಭ್ಯಮಭಿ ಭರಾತಿ । ಅಭಿತಃ ಕರೋತಿ । ತಸ್ಮಿನ್ನಘಶಂಸೇಽಘಂ ಪಾಪಮಧಿ ದಧಾತ । ದದಾತ್ವಗ್ನಿಃ । ಇದಿತಿ ಪೂರಣಃ । ಆಗೋಽಪರಾಧಂ ಯೋ ಮಹ್ಯಮಿದಂ ಕರೋತಿ ತಸ್ಮಾ ಏವಾಗ್ನಿಸ್ತತ್ಕರೋತ್ವಿತ್ಯರ್ಥಃ । ಅಥ ಪ್ರತ್ಯಕ್ಷೇಣೋಚ್ಯತೇ । ಹೇ ಅಗ್ನೇ ಏತಾಮಭಿಶಸ್ತಿಂ ಜಹಿ । ಉತ್ತರತ್ರ -ಯಚ್ಛಬ್ದಶ್ರವಣಾತ್ತದಾನುಗುಣ್ಯೇನೈನಮಭಿಶಂಸಕಮಿತಿ ವ್ಯಾಖ್ಯೇಯಂ । ಯೋಽಭಿಶಸ್ತಾ ನೋಽಸ್ಮಾನ್ದ್ವಯೇನೋಕ್ತೇನಾಗಸೈನಸಾ ವಾ ಮರ್ಚಯತಿ । ಬಾಧತೇ । ತಮಿತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಮಾನವನು । ನಃ–ನಮ್ಮ ವಿಷಯದಲ್ಲಿ ।। ಆಗಃ–ದೌಷ್ಟ್ಯವನ್ನೂ ।। ಏನಃ– ಪಾಪಕಾರ್ಯವನ್ನೂ । ಅಭಿ ಭರತಿ—ನಡೆಸುತ್ತಾನೆಯೋ (ಅಂತಹ) । ಅಘಶಂಸೇ—ದುಷ್ಟಬುದ್ಧಿಯುಳ್ಳ ಪಾಪಿಷ್ಠನಲ್ಲಿ ।

ಅಘಂ—ಸ್ವಹಿಂಸಾಕಾರಕವಾದ ಪಾಪವನ್ನು । ಅಧಿ ದಧಾತ—ಅಗ್ನಿಯು (ತುಂಬಿಡಲಿ) । ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಹಿಂಸಕನು । ನಃ—ನಮ್ಮನ್ನು । ದ್ವಯೇನ—ಮೇಲೆ ಹೇಳಿದ ಎರಡು ವಿಧಗಳಿಂದಲೂ । ಮರ್ಚಯತಿ—ಹಿಂಸಿಸುವನೋ । ಏತಾಂ ಅಭಿಶಸ್ತಿಂ—ಅಂತಹ ಹಿಂಸಕನನ್ನು । ಚಿಕಿತ್ವಃ—ತಿಳಿದವನಾಗಿ । ಜಹಿ—ನಾಶಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಮಾನವನು ನಮ್ಮ ವಿಷಯದಲ್ಲಿ ದೌಷ್ಟ್ಯವನ್ನೂ ಪಾಪಕಾರ್ಯವನ್ನೂ ನಡೆಸುವನೋ, ಅಂತಹ ದುಷ್ಟಬುದ್ಧಿಯುಳ್ಳ ಪಾಪಿಷ್ಠನಲ್ಲಿ ಸ್ವಹಿಂಸಾಕಾರಕವಾದ ಪಾಪವನ್ನೇ ತುಂಬಿಡು. ಮತ್ತು ಯಾವ ಹಿಂಸಕನು ನಮ್ಮನ್ನು ಮೇಲೆಹೇಳಿದ ಎರಡು ವಿಧಗಳಿಂದಲೂ ಹಿಂಸಿಸುವನೋ ಅಂತಹ ಹಿಂಸಕನನ್ನು ನೀನು ತಿಳಿದವನಾಗಿ ಅವನನ್ನು ನಾಶಮಾಡು.

English Translation.

May Agni inflict (evil) upon the evil-doer who commits offence or wickedness against us; destroy, sagacious Agni, the calumniator who injures us in these two ways.

॥ ವಿಶೇಷವಿಷಯಗಳು ॥

ಯಃ ನಃ ಆಗಃ ಏನಃ ಅಭಿ ಭವತಿ ಅಘಶಂಸೇ ಅಘಂ ಅಧಿ ದಧಾತ—ಎಲೈ ಅಗ್ನಿಯೇ, ಯಾವ ಪುರುಷನು ನಮ್ಮ ವಿಷಯದಲ್ಲಿ ಅಪರಾಧಗಳನ್ನು ಮಾಡಿ ಪಾಪಕೃತ್ಯಗಳನ್ನೆಸಗುವನೋ ಅಂತಹ ದುಷ್ಟನಲ್ಲಿ ಪಾಪವೇ ಶೇಖರಿತವಾಗುವಂತೆ ಮಾಡು. ಎಂದರೆ ಅವನಿಗೆ ಪಾಪಕಾರ್ಯದಲ್ಲಿಯೇ ಆಸಕ್ತಿಯನ್ನು ಹುಟ್ಟಿಸಿ ಅವನ ಪಾಪಕರ್ಮಗಳ ಫಲವಾಗಿ ಅವನಿಗೆ ಕೆಡಕಾಗಲಿ ಎಂದಭಿಪ್ರಾಯವು.

ಅಗ್ನೇ ಯಃ ನಃ ದ್ವಯೇನ ಮರ್ಚಯತಿ ಏತಾಂ ಅಭಿಶಸ್ತಿಂ ಚಿಕಿತ್ವಃ ಜಹಿ—ಎಲೈ ಅಗ್ನಿಯೇ, ಮೇಲೆ ಹೇಳಿದ ಎರಡು ವಿಧವಾದ ಅಕೃತ್ಯಗಳನ್ನು ಮಾಡುವ ದುಷ್ಟಮನುಷ್ಯನನ್ನು ತಿಳಿದು ಅವನನ್ನು ನಿಗ್ರಹಿಸು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

---

। ಸಂಹಿತಾಪಾಠಃ ।

ತ್ವಾಮಸ್ಯಾ ವ್ಯುಷಿ ದೇವ ಪೂರ್ವೇ ದೂತಂ ಕೃಣ್ವಾನಾ ಅಯಜಂತ ಹವ್ಯೈಃ।
ಸಂಸ್ಥೇ ಯದಗ್ನ ಈಯಸೇ ರಯೀಣಾಂ ದೇವೋ ಮರ್ತೈರ್ವಸುಭಿರಿಧ್ಯಮಾನಃ ॥ ೮ ॥

|| ಪದಪಾಠಃ ||

ತ್ವಾಂ । ಅಸ್ಯಾಃ । ವಿಽಉಷಿ । ದೇವ । ಪೂರ್ವೇ । ದೂತಂ । ಕೃಣ್ವಾನಾಃ । ಅಯಜಂತ । ಹವ್ಯೈಃ ।

ಸಂಽಸ್ಥೇ । ಯತ್ । ಅಗ್ನೇ । ಈಯಸೇ । ರಯೀಣಾಂ । ದೇವಃ । ಮರ್ತೈಃ । ವಸುಽಭಿಃ । ಇಧ್ಯಮಾನಃ ||

ಹೇ ಅಗ್ನೇ ತ್ವಾಮಸ್ಯಾ ರಾತ್ರೇರ್ವ್ಯುಷಿ । ವ್ಯುಷ್ಟಾಯಾಮುಷಸೀತ್ಯರ್ಥಃ । ಪೂರ್ವೇ ಪುರಾತನಾ ಯಜಮಾನಾ ದೂತಂ ದೇವಾನಾಂ ಪ್ರೇರಕಂ ಕೃಣ್ವಾನಾಃ ಕುರ್ವಾಣಾ ಅಯಜಂತ ಹವ್ಯೈರ್ಹವಿರ್ಭಿಃ ಸಾಧನೈ ರಯೀಣಾಂ ಹವಿರ್ಲಕ್ಷಣಾನಾಂ ಸಂಸ್ಥೇ ಸಂಸ್ಥಾನ ಆಸಾದನೇ ಸತಿ ಹೇ ಅಗ್ನೇ ಯದ್ಯದೇಯಸೇ। ಗಚ್ಛಸಿ । ದೇವೋ ದ್ಯೋತಮಾನೋ ಮರ್ತೈರ್ಮನುಷ್ಯೈರೃತ್ವಿಗ್ಭಿರ್ವಸುಭಿರ್ವಾಸಕೈರಿಧ್ಯಮಾನಃ ಸಮಿಧ್ಯಮಾನಃ ಸನ್ ||

|| ಪ್ರತಿಪದಾರ್ಥ ||

ದೇವ—ಪೂಜ್ಯನಾದ | ಅಗ್ನೇ —ಎಲೈ ಅಗ್ನಿಯೇ । ಯತ್—ಯಾವಾಗ | ದೇವಃ—ಪ್ರಕಾಶ ಮಾನನಾದ ನೀನು । ವಸುಭಿಃ—ನಿನಗೆ ವಾಸದಾತರಾದ | ಮರ್ತೈಃ—ಋತ್ವಿಕ್ಕುಗಳಿಂದ । ಇಧ್ಯಮಾನಃ—ಪ್ರಜ್ವಲಿತನಾಗಿ | ರಯೀಣಾಂ—ಹವಿಸ್ಸಿನ ರೂಪವಾದ ಧನಗಳ| ಸಂಸ್ಥೇ—ಸಮುದಾಯವಿರುವ ಯಜ್ಞಾದಿಗಳಿಗೆ| ಈಯಸೇ—ಹೋಗಿರುವೆಯೋ (ಆಗ) | ಪೂರ್ವೇ—ಪುರಾತನರಾದ ಯಜಮಾನರು | ತ್ವಾಂ—ನಿನ್ನನ್ನು | ದೂತಂ—ದೇವದೂತನನ್ನಾಗಿ | ಕೃಣ್ವಾನಾಃ—ಮಾಡುತ್ತಾ | ಅಸ್ಯಾಃ—ರಾತ್ರಿಯ | ವ್ಯುಷಿ—ಕೊನೆಯ ಭಾಗವಾದ ಉಷಃಕಾಲದಲ್ಲಿ | ಹವ್ಯೈಃ—ಹವಿಸ್ಸುಗಳ ಅರ್ಪಣೆಯಿಂದ | ಅಯಜಂತ—ಪೂಜಿಸಿದ್ದಾರೆ.

|| ಭಾವಾರ್ಥ ||

ಪೂಜ್ಯನಾದ ಎಲೈ ಅಗ್ನಿಯೇ, ಪ್ರಕಾಶಮಾನನಾದ ನೀನು, ನಿನಗೆ ವಾಸದಾತರಾದ ಋತ್ವಿಕ್ಕುಗಳಿಂದ ಪ್ರಜ್ವಲಿತನಾಗಿ, ಹವಿಸ್ಸಿನ ರೂಪದ ಧನಗಳ ಸಮುದಾಯವಿರುವ ಯಜ್ಞಸ್ಥಾನಗಳಿಗೆ ಪುರಾತನರಾದ ಯಜಮಾನರು ನಿನ್ನನ್ನು ದೇವದೂತನನ್ನಾಗಿ ಮಾಡುತ್ತಾ ರಾತ್ರಿಯ ಕೊನೆಯ ಭಾಗವಾದ ಉಷಃಕಾಲದಲ್ಲಿ ಹವಿಸ್ಸುಗಳ ಅರ್ಪಣೆಯಿಂದ ನಿನ್ನನ್ನು ಪೂಜಿಸಿದ್ದಾರೆ.

## English Translation.

Former (worshippers) constituting you, divine (Agni), the messenger (of the gods), have worshipded you with oblations at the dawn of day; when you proceed to the place (of the aggregation) of the wealth (of sacrifice), bright-shining, kindled by the mortals who have given you an abode.

॥ ವಿಶೇಷವಿಷಯಗಳು ॥

ಎಲೈ ಅಗ್ನಿಯೇ, ಹಿಂದಿನ ಕಾಲದಲ್ಲಿಯೂ ಯಜ್ಞಮಾಡುತ್ತಿದ್ದ ಯಜಮಾನರು ಉಷಃಕಾಲದಲ್ಲಿ ನಿನಗೆ ಹವಿಸ್ಸನ್ನು ಅರ್ಪಿಸಿ ಪೂಜಿಸುತ್ತಿದ್ದರು. ಆ ಕಾಲದಲ್ಲಿ ಎಂದರೆ ಯಜ್ಞದಲ್ಲಿ ನೀನು ಋತ್ವಿಕ್ಕುಗಳಿಂದ ಯಜ್ಞವೇದಿಯಲ್ಲಿ ಸ್ಥಾಪಿತನಾಗಿ, ಪ್ರಕಾಶಮಾನನಾಗಿ ಬೆಳಗುತ್ತಿರುವೆ. ಇಂತಹ ನಿನ್ನನ್ನು ತಾವು ಅರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ಒಯ್ಯುವ ದೂತನನ್ನಾಗಿ ಭಾವಿಸಿ ನಿನ್ನನ್ನು ಹವಿರಾದಿಗಳಿಂದ ನಾನಾವಿಧವಾಗಿ ಪೂಜಿಸಿದ್ದಾರೆ. ಎಂದರೆ ಹಿಂದಿನವರೂ ಸಹ ನಮ್ಮಂತೆಯೇ ನಿನ್ನನ್ನು ಉಷಃಕಾಲದಲ್ಲಿ ಯಜ್ಞಾದಿಗಳಲ್ಲಿ ಹವಿರರ್ಪಣೆಯಿಂದ ಪೂಜಿಸಿ ಉಪಚರಿಸುತ್ತಿದ್ದರು ಎಂದು ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ಅವ ಸ್ಪೃಧಿ ಪಿತರಂ ಯೋಧಿ ವಿದ್ವಾನ್ಪುತ್ರೋ ಯಸ್ತೇ ಸಹಸಃ ಸೂನ ಊಹೇ ।
ಕದಾ ಚಿಕಿತ್ವೋ ಅಭಿ ಚಕ್ಷಸೇ ನೋಽಗ್ನೇ ಕದಾಁ ಋತಚಿದ್ಯಾತಯಾಸೇ ॥

॥ ಪದಪಾಠಃ ॥

ಅವ । ಸ್ಪೃಧಿ । ಪಿತರಂ । ಯೋಧಿ । ವಿದ್ವಾನ್ । ಪುತ್ರಃ । ಯಃ । ತೇ । ಸಹಸಃ । ಸೂನೋಇತಿ । ಊಹೇ ।
ಕದಾ । ಚಿಕಿತ್ವಃ । ಅಭಿ । ಚಕ್ಷಸೇ । ನಃ । ಅಗ್ನೇ । ಕದಾ । ಋತಽಚಿತ್ । ಯಾತಯಾಸೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರಾಗ್ನೇ ತ್ವಮುವ ಸ್ಪೃಧಿ । ಪಾರಯ । ಯೋಧಿ । ಪೃಥಕ್ಕುರು ಪಾಪಾತ್ । ಯಃ ಪುತ್ರಃ ಪುತ್ರಸ್ಥಾನೀಯಸ್ತವ ಯೋ ಯಜಮಾನಸ್ತೇ ತ್ವಾಂ ಪಿತರಂ ಬಾಲಕಂ ಪಿತೃಭೂತಂ ವಿದ್ವಾನ್ ಜಾನನ್ ಊಹೇ । ವಹತಿ ಹವಿಃ । ತಮೇವಂ ಕುರ್ವಿತ್ಯೃಷಿರಾತ್ಮಾನಂ ಪರೋಕ್ಷೇಣಾಹ । ಹವ್ಯವಾಳಗ್ನಿರಜರಃ ಪಿತಾ ನಃ । ಋಗ್ವೇ. ೫-೪-೨ । ಇತಿ ಹಿ ವಕ್ಷ್ಯತಿ । ಯದ್ವಾ । ಪಿತೃಪುತ್ರಭಾವೋ ವ್ಯತ್ಯಸ್ತಃ । ಪಿತರಂ ಪಿತೃವದ್ರಕ್ಷಕಂ ಯಜಮಾನಮುವ ಸ್ಪೃಧಿ ಯೋಧಿ ಚ ಯಸ್ತ್ವಂ ಪುತ್ರಃ ಪುತ್ರವತ್ಸದಾ ರಕ್ಷಣೀಯಃ । ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ । ಋಗ್ವೇ. ೨-೧-೯ । ಇತಿ ಹಿ ಶ್ರುತಿಃ । ಹೇ ಚಿಕಿತ್ವಶ್ಚೇತನಾವನ್ನಗ್ನೇ ಕದಾ ನೋಽಸ್ಮಾನಭಿ ಚಕ್ಷಸೇ । ಅಪಿಪಶ್ಯಸಿ । ಕದಾ ಚ ಋತಚಿದ್ಯಜ್ಞಸ್ಯೋದಕಸ್ಯ ವಾ ಚೇತಯಿತಾ ಯಾತಯಾಸೇ । ಪ್ರೇರಯಸಿ ಸನ್ಮಾರ್ಗೇಣ ॥

॥ ಪ್ರತಿಪದಾರ್ಥ ॥

ಸಹಸಃ ಸೂನೋ—ಶಕ್ತಿಪುತ್ರನಾದ ಎಲೈ ಅಗ್ನಿಯೇ। ಯಃ ಪುತ್ರಃ—(ನಿನಗೆ) ಪುತ್ರರೂಪನಾದ ಯಾವ ಯಜಮಾನನು। ತೇ—ನಿನ್ನನ್ನು। ಪಿತರಂ—ತನ್ನ ಪಿತೃರೂಪನನ್ನಾಗಿ। ವಿದ್ವಾನ್—ತಿಳಿದುಕೊಂಡು। ಊಹೇ—ಹವಿಸ್ಸನ್ನು ತಂದೊಪ್ಪಿಸುವನೋ (ಅವನನ್ನು)। ಅವ ಸ್ಪೃಧಿ—ದುಃಖದಿಂದ ಕೊನೆಗಾಣಿಸು। ಯೋಧಿ—ಪಾಪದಿಂದ ಬೇರೆಮಾಡು। ಅಗ್ನೇ—ಎಲೈ ಅಗ್ನಿಯೇ। ಚಿಕಿತ್ವಃ—ಎಲ್ಲವನ್ನೂ ತಿಳಿದವನಾಗಿ। ನಃ—ನಮ್ಮನ್ನು। ಕದಾ—ಯಾವಾಗ। ಅಭಿ ಚಕ್ಷಸೇ—ಅನುಗ್ರಹಿಸಿ ವೀಕ್ಷಿಸುತ್ತೀಯೆ। ಋತಚಿತ್—ಯಜ್ಞಾದಿಗಳಿಗೆ ಪ್ರೇರಕನಾಗಿ। ಕದಾ—ಯಾವಾಗ। ಯೊತಯೊಸೇ—(ನಮ್ಮನ್ನು ಸನ್ಮಾರ್ಗಕ್ಕೆ) ಪ್ರೇರಿಸುತ್ತೀಯೆ.

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ನಿನಗೆ ಪುತ್ರರೂಪನಾದ ಯಾವ ಯಜಮಾನನು ನಿನ್ನನ್ನು ತನ್ನ ಪಿತೃರೂಪನೆಂದು ತಿಳಿದು ಭಕ್ತಿಯಿಂದ ನಿನಗೆ ಹವಿಸ್ಸನ್ನು ತಂದೊಪ್ಪಿಸುವನೋ ಅವನನ್ನು ದುಃಖದಿಂದ ಕೊನೆಗಾಣಿಸು. ಪಾಪದಿಂದ ಬೇರೆಮಾಡು. ಎಲೈ ಅಗ್ನಿಯೇ, ನೀನು ಸಕಲವನ್ನೂ ತಿಳಿದವನಾಗಿ ನಮ್ಮನ್ನು ಯಾವಾಗ ಅನುಗ್ರಹಿಸಿ ವೀಕ್ಷಿಸುತ್ತೀಯೆ? ಯಜ್ಞಾದಿ ಕಾರ್ಯಗಳಿಗೆ ಪ್ರೇರಕನಾಗಿ ನಮ್ಮನ್ನು ಯಾವಾಗ ಸನ್ಮಾರ್ಗಕ್ಕೆ ತರುತ್ತೀಯೆ?

## English Translation.

Convey him (to safety) in war, son of strength, who like a wise son offers to you (reverence) as to a father: when, sagacious Agni, do you look upon us? when, director of sacrifice, do you direct us (to good ways)?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಗೂ ಯಜಮಾನನಿಗೂ ಪಿತೃಪುತ್ರಭಾವವನ್ನು ಆರೋಪಿಸಿ ಅಗ್ನಿಯನ್ನು ಸ್ತುತಿಸಲಾಗಿದೆ. ತಂದೆಯು ಮಗನನ್ನು ಹೇಗೆ ರಕ್ಷಿಸುವನೋ ಅದರಂತೆ ಪಾಲಕನಾದ ಅಗ್ನಿಯು ಪುತ್ರಸ್ಥಾನೀಯನಾದ ಯಜಮಾನನನ್ನು ರಕ್ಷಿಸು ಎಂಬುದು ಒಂದು ವಿಧವಾದ ವಿವರಣೆಯು. ಈ ವಿಷಯಸಮರ್ಥನೆಗಾಗಿ—

ಹವ್ಯವಾಳಗ್ನಿರಜರಃ ಪಿತಾ ನೋ ವಿಭುರ್ವಿಭಾವಾ ಸುದೃಶೀಕೋ ಅಸ್ಮೇ।
ಸುಗಾರ್ಹಪತ್ಯಾಃ ಸಮಿಷೋ ದಿದೀಹ್ಯಸ್ಮದ್ರ್ಯ೧ಕ್ಸಂ ಮಿಮೀಹಿ ಶ್ರವಾಂಸಿ॥

(ಋ. ಸಂ. ೫-೪-೨)

ಎಂಬ ಋಕ್ಕನ್ನು ಉದಾಹರಿಸಿರುವರು ನಮಗೆ (ಯಜಮಾನನಿಗೆ) ಪಿತೃಸ್ಥಾನೀಯನಾದ ಅಥವಾ ಪಾಲಕನಾದ ಅಗ್ನಿಯು ಯಜಮಾನನ ಪರವಾಗಿ ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಾ ನಮ್ಮನ್ನು ರಕ್ಷಿಸಲಿ ಎಂಬರ್ಥವು ಇಲ್ಲಿ ಸೂಚಿತವಾಗಿದೆ. ಅಥವಾ ಯಜಮಾನರು ತಮ್ಮ ಪುತ್ರರನ್ನು ಯಾವರೀತಿ ಎಚ್ಚರಿಕೆಯಿಂದ ರಕ್ಷಿಸುವರೋ ಅದರಂತೆ ಪುತ್ರಸ್ಥಾನೀಯನಾದ ಅಗ್ನಿಯನ್ನು ರಕ್ಷಿಸುವರು ಎಂಬ ಇನ್ನೊಂದುವಿಧವಾದ ಅರ್ಥವಿವರಣೆಯೂ ಸಾಧ್ಯವೆಂದು ತೋರಿಸಿ ಅದರ ಸಮರ್ಥನೆಗಾಗಿ—

ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ ತ್ವಂ ಸಖಾ ಸುಶೇವಃ ಪಾಸ್ಯಾಧೃಷಃ ।

(ಋ. ಸಂ. ೨-೧-೯)

ಎಂಬ ಋಕ್ಕನ್ನು ಉದಾಹರಿಸಿದಾರೆ. ಇಲ್ಲಿ ಅಗ್ನಿಯನ್ನು ಪುತ್ರ, ಸ್ನೇಹಿತ ಮೊದಲಾದ ಆದರಾತಿಶಯವನ್ನು ಸೂಚಿಸುವ ಶಬ್ದಗಳಿಂದ ಸ್ತುತಿಸಲಾಗಿದೆ.

॥ ಸಂಹಿತಾಪಾಠಃ ॥

ಭೂರಿ ನಾಮ ವಂದಮಾನೋ ದಧಾತಿ ಪಿತಾ ವಸೋ ಯದಿ ತಜ್ಜೋಷಯಾಸೇ ।
ಕುವಿದ್ದೇವಸ್ಯ ಸಹಸಾ ಚಕಾನಃ ಸುಮ್ನಮಗ್ನಿರ್ವನತೇ ವಾವೃಧಾನಃ ॥೧೦॥

॥ ಪದಪಾಠಃ ॥

ಭೂರಿ । ನಾಮ । ವಂದಮಾನಃ । ದಧಾತಿ । ಪಿತಾ । ವಸೋ ಇತಿ । ಯದಿ । ತತ್ । ಜೋಷಯಾಸೇ ।
ಕುವಿತ್ । ದೇವಸ್ಯ । ಸಹಸಾ । ಚಕಾನಃ । ಸುಮ್ನಂ । ಅಗ್ನಿಃ । ವನತೇ । ವವೃಧಾನಃ ॥ ೧೦ ॥

॥ ಸಾಯಣಭಾಷ್ಯಂ ॥

ಭೂರಿ ಪ್ರಭೂತಂ ನಾಮ ತ್ವದೀಯಂ ನಾಮ ವಂದಮಾನಃ ಸನ್ ದಧಾತಿ । ಧಾರಯತಿ । ಸಾಮರ್ಥ್ಯಾದ್ಧವಿಃ । ಅಥವಾ ನಾಮಕಂ ಹವಿಃ ಪ್ರಭೂತಂ ಧಾರಯತಿ ದಾತುಂ । ಪಿತಾ ಪಾಲಕಸ್ತ್ವಂ ಹೇ ವಸೋ ವಾಸಕಾಗ್ನೇ ಯದಿ ತದ್ಧವಿರ್ಜೋಷಯಾಸೇ । ಸೇವಸೇ । ದೇವಸ್ಯ ವ್ಯವಹರ್ತುರ್ಯಜಮಾನಸ್ಯ ಕುವಿದ್ಬಹು ಹವಿಃ ಸಹಸಾ ಬಲೇನ ಯುಕ್ತಃ ಸನ್ ಚಕಾನಃ ಕಾಮಯಮಾನಃ । ಯದ್ವಾ ಕರ್ಮಣಿ ಷಷ್ಠೀ । ದೇವಂ ಯಜಮಾನಂ ಕಾಮಯಮಾನೋಽಗ್ನಿರ್ವವೃಧಾನೋ ವರ್ಧಮಾನೋ ಯಜಮಾನಂ ವರ್ಧಯನ್ವಾ ಸುಮ್ನಂ ವನತೇ । ಪ್ರಯಚ್ಛತಿ ॥

॥ ಪ್ರತಿಪದಾರ್ಥ ॥

ವಸೋ—ವಸತಿದಾಯಕನಾದ ಎಲೈ ಅಗ್ನಿಯೇ । ಪಿತಾ—ಪಾಲಕನಾದ ನೀನು । ಯತ್—ಯಾವಾಗ । ತತ್—ಯಜಮಾನನಿಂದ ಅರ್ಪಿತವಾದ ಹವಿಸ್ಸನ್ನು । ಜೋಷಯಸೇ—ಸೇವಿಸುವೆಯೋ (ಆಗ) । ನಾಮ—(ಯಜಮಾನನು) ನಿನ್ನ ಪ್ರಸಿದ್ಧವಾದ ಹೆಸರನ್ನು । ವಂದಮಾನಃ—ಪ್ರಶಂಸಿಸುತ್ತಾ । ಭೂರಿ—ಪ್ರಭೂತವಾಗಿ । ದಧಾತಿ—(ಹವಿಸ್ಸನ್ನು) ಹಿಡಿದಿರುತ್ತಾನೆ । ಸಹಸಾ—ಶಕ್ತಿಯುತನಾದ । ಅಗ್ನಿಃ—ಅಗ್ನಿಯು । ವವೃಧಾನಃ—ವೃದ್ಧಿಯನ್ನು ಹೊಂದುತ್ತಲೂ । ಕುವಿತ್—ಪ್ರಭೂತವಾದ ಹವಿಸ್ಸನ್ನು । ಚಕಾನಃ—ಆಶಿಸುತ್ತಲೂ । ದೇವಸ್ಯ—ಹವಿರ್ದಾತನಾದ ಯಜಮಾನನಿಗೆ । ಸುಮ್ನಂ—ಸುಖವನ್ನು । ವನತೇ—ಉಂಟುಮಾಡುತ್ತಾನೆ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಅಗ್ನಿಯೇ, ಪಾಲಕನಾದ ನೀನು ಯಜಮಾನನಿಂದ ಅರ್ಪಿತವಾದ ಹವಿಸ್ಸನ್ನು ಸೇವಿಸಲಿಚ್ಛಿಸಿದಾಗೆಲ್ಲಾ, ಯಜಮಾನನು ನಿನ್ನ ಪ್ರಸಿದ್ಧವಾದ ಹೆಸರನ್ನು ಪ್ರಶಂಸಿಸುತ್ತಾ ಪ್ರಭೂತವಾದ ಹವಿಸ್ಸನ್ನು ನಿನಗೆ ಅರ್ಪಿಸಲು ಹಿಡಿದಿರುತ್ತಾನೆ. ಶಕ್ತಿಯುತನಾದ ಅಗ್ನಿಯು ವೃದ್ಧಿಯನ್ನು ಹೊಂದುತ್ತಲೂ, ಪ್ರಭೂತವಾದ ಹವಿಸ್ಸನ್ನು ಆಶಿಸುತ್ತಲೂ ಸಹ ಹವಿರ್ದಾತನಾದ ಯಜಮಾನನಿಗೆ ಸುಖವನ್ನುಂಟುಮಾಡುತ್ತಾನೆ.

## English Translation

Glorifyiug you he offers the copious oblation, if, bestower of dwellings, you as a father are pleased to accept it: Agni, ever augmenting, and desirous (to befriend), by his might, the devout (worshipper, offering) copious oblations, bestows upon him happiness.



॥ ಸಂಹಿತಾಪಾಠಃ ॥

ತ್ವಮಂಗ ಜರಿತಾರಂ ಯವಿಷ್ಠ ವಿಶ್ವಾನ್ಯಗ್ನೇ ದುರಿತಾತಿ ಪರ್ಷಿ ।

ಸ್ತೇನಾ ಅದೃಶ್ರನ್ರಿಪವೋ ಜನಾಸೋಽಜ್ಞಾತಕೇತಾ ವೃಜಿನಾ ಅಭೂವನ್ ॥

॥ ಪದಪಾಠಃ ॥

ತ್ವಂ । ಅಂಗ । ಜರಿತಾರಂ । ಯವಿಷ್ಠ । ವಿಶ್ವಾನಿ । ಅಗ್ನೇ । ದುಃಽಇತಾ । ಅತಿ । ಪರ್ಷಿ ॥

ಸ್ತೇನಾಃ । ಅದೃಶ್ರನ್ । ರಿಪವಃ । ಜನಾಸಃ । ಅಜ್ಞಾತಽಕೇತಾಃ । ವೃಜಿನಾಃ । ಅಭೂವನ್ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಂಗ ಸ್ವಾಮಿನ್ಯವಿಷ್ಠ ಯುವತಮಾಗ್ನೇ ಜರಿತಾರಂ ಸ್ತೋತಾರಮನುಗ್ರಹೀತುಂ ವಿಶ್ವಾನಿ ದುರಿತಾ ದುರಿತಾನ್ಯತಿ ಪರ್ಷಿ । ಅತಿಪಾರಯಸಿ । ಸ್ತೇನಾಸ್ತಸ್ಕರಾ ಅದೃಶ್ರನ್ । ದೃಶ್ಯಂತೇ । ರಿಪವೋ ಜನಾಸಃ ಶತ್ರುಭೂತಾ ಮನುಷ್ಯಾ ಅಜ್ಞಾತಕೇತಾ ಅಪ್ರಜ್ಞಾತಚಿಹ್ನಾ ವೃಜಿನಾ ಅಸ್ಮಾಭಿರ್ವರ್ಜಿತಾ ಅಭೂವನ್ । ಭವಂತಿ ॥

॥ ಪ್ರತಿಪದಾರ್ಥ ॥

ಯವಿಷ್ಠ—ಅತ್ಯಂತಯುವಕನೂ । ಅಂಗ—ಸ್ವಾಮಿಯೂ ಆದ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಜರಿತಾರಂ—ಸ್ತೋತೃವನ್ನು । ವಿಶ್ವಾನಿ—ಸಮಸ್ತವಾದ । ದುರಿತಾ—ಪಾಪಗಳಿಂದಲೂ ।

**ಅತಿ ಪರ್ಷಿ**—ಕೊನೆಗಾಣಿಸುತ್ತೀಯೆ। **ಸ್ತೇನಾಃ**—ಚೋರರು। **ಅದೃಶ್ರನ್**—ನಮ್ಮ ಗೋಚರಕ್ಕೆ ಸಿಕ್ಕಿಬಿದ್ದಿದ್ದಾರೆ। **ಅಜ್ಞಾತಕೇತಾಃ**—ರಹಸ್ಯವಾಗಿ ಸಂಚರಿಸತಕ್ಕ (ನಮಗೆ ತಿಳಿಯದೇ ಕೇಡುಬಯಸುವ)। **ರಿಪವೋ ಜನಾಸಃ**—ಶತ್ರುಜನರು। **ವೃಜಿನಾಃ**—ನಮ್ಮಿಂದ ತ್ಯಾಗಮಾಡಲ್ಪಟ್ಟವರಾಗಿ। **ಅಭೂವನ್**—ಆಗಿದ್ದಾರೆ.

॥ ಭಾವಾರ್ಥ ॥

ಅತ್ಯಂತಯುವಕನೂ, ಸ್ವಾಮಿಯೂ ಆದ ಎಲೈ ಅಗ್ನಿಯೇ, ನೀನು ನಿನ್ನ ಸ್ತೋತೃವನ್ನು ಸಮಸ್ತವಾದ ಪಾಪಗಳಿಂದಲೂ ಕೊನೆಗಾಣಿಸುತ್ತೀಯೆ. ನಮ್ಮ ಚೋರರೆಲ್ಲಾ ನಮ್ಮ ಗಮನಕ್ಕೆ ಸಿಕ್ಕಿಬಿದ್ದಿದ್ದಾರೆ. ನಮ್ಮ ಕೇಡನ್ನು ಬಯಸಿ ನಮಗೆ ತಿಳಿಯದೇ ರಹಸ್ಯಚಿಹ್ನೆಗಳುಳ್ಳ ಸಕಲ ಶತ್ರುಜನರೂ ನಮ್ಮಿಂದ ತ್ಯಕ್ತರಾಗಿದ್ದಾರೆ.

English Translation.

Agni, youngst (of the gods), verily you bear your adorer (safe) beyond all calamities : thieves have been detected, and hostile men with covert evil intentions, have been avoided (by us.)

॥ ವಿಶೇಷವಿಷಯಗಳು ॥

ಸಮಸ್ತಪಾಪಗಳಿಂದ ನಮ್ಮನ್ನು ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಈ ವಿಧವಾದ ಪ್ರಾರ್ಥನೆಯನ್ನೊಳಗೊಂಡ ವಾಕ್ಯಗಳು ಅಗ್ನಿಯ ಸ್ತುತಿಯಲ್ಲಿ ವಿಶೇಷವಾಗಿ ಕಂಡುಬರುವುದು. ಕೆಲವು ಸಂದರ್ಭಗಳಲ್ಲಿ ಉಪಮಾನ ಸಹಿತವಾಗಿಯೂ ವರ್ಣನೆ ಇದೆ. ಈ ವಿಷಯದಲ್ಲಿ—

**ವಿಶ್ವಾನ್ಯಗ್ನೇ ದುರಿತಾತಿ ಪರ್ಷಿ**—(ಋ. ಸಂ. ೫-೩-೧೧)

**ಸಿಂಧುಂ ನ ನಾವಾ ದುರಿತಾತಿ ಪರ್ಷಿ**—(ಋ. ಸಂ. ೫-೪-೯)

**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ।**
(ಋ. ಸ. ೧-೯೯-೧)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

॥ ಸಂಹಿತಾಪಾಠಃ ॥

ಇಮೇ ಯಾಮಾಸಸ್ತ್ವದ್ರಿಗಭೂವನ್ವಸವೇ ವಾ ತದಿದಾಗೋ ಅವಾಚಿ ।
ನಾಹಾಯಮಗ್ನಿರಭಿಶಸ್ತಯೇ ನೋ ನ ರೀಷತೇ ವಾವೃಧಾನಃ ಪರಾ ದಾತ್ ॥

॥ ಪದಪಾಠಃ ॥

ಇಮೇ । ಯಾಮಾಸಃ । ತ್ವದ್ರಿಕ್ । ಅಭೂವನ್ । ವಸವೇ । ವಾ । ತತ್ । ಇತ್ । ಆಗಃ । ಅವಾಚಿ । ನ । ಅಹ । ಅಯಂ । ಅಗ್ನಿಃ । ಅಭಿsಶಸ್ತಯೇ । ನಃ । ನ । ರಿಷತೇ । ವವೃಧಾನಃ । ಪರಾ । ದಾತ್ ॥೧೨॥

॥ ಸಾಯಣಭಾಷ್ಯಂ ॥

ಇಮೇ ಯಾಮಾಸೋ ಗಂತಾರಃ ಸ್ತೋಮಾಸ್ತ್ವದ್ರಿಕ್ ತ್ವದಭಿಮುಖಾ ಅಭೂವನ್ । ಭವಂತಿ । ವಾ ಅಥವಾ ವಸವೇ ವಾಸಕಾಯ ತದಾಗೋऽಪರಾಧಮಾಶಾಸನರೂಪಮವಾಚಿ । ಉಕ್ತಮಾನಹಮಗ್ನಿಂ। ಇದಂ ದೇಹೀತಿ ಯಾಚನಮೇವಾಪರಾಧಃ । ಇದಿತಿ ಪೂರಣಃ । ಯದ್ವಾ । ತದಿದಂ ವಕ್ಷ್ಯಮಾಣಂ ಶತ್ರುಭಿಃ ಕೃತಮಾಗೋऽವಾಚಿ । ಕಿಂಚಾಯಮಗ್ನಿರ್ವವೃಧಾನಃ ಸ್ತುತ್ಯಾ ವರ್ಧಮಾನಃ ಸನ್ ನಾಹ ನೈವಾಭಿಶಸ್ತಯೇ ನಿಂದಕಾಯ ನೋऽಸ್ಮಾನ್ ಪರಾ ದಾತ್ । ಪರಾದದ್ಯಾತ್ । ತಥಾ ರಿಷತೇ ಹಿಂಸಕಾಯ ನೈವ ಪರಾ ದಾತ್ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಯಾಮಾಸಃ—ನಿನ್ನನ್ನೇ ಅರಸಿ ಹೊರಟಿರುವ । ಇಮೇ—ಈ ಸ್ತುತಿಗಳು । ತ್ವದ್ರಿಕ್—ನಿನಗೆ ಅಭಿಮುಖವಾಗಿಯೇ । ಅಭೂವನ್—ಆಗಿವೆ । ವಾ—ಅಥವಾ ಒಂದುವೇಳೆ । ವಸವೇ—ವಾಸದಾಯಕವಾದ ಅಗ್ನಿಯ ವಿಷಯದಲ್ಲಿ। ತತ್—ನನ್ನ ಯಾಚನೆಯು। ಆಗಃ—ಪಾಪರೂಪದಲ್ಲಿ। ಅವಾಚಿ—ಉಕ್ತವಾಗಿದ್ದರೂ ಇದ್ದಿರಬಹುದು । ಅಯಂ—ಈ ಅಗ್ನಿಯು । ವವೃಧಾನಃ—(ನನ್ನ ಸ್ತುತಿಯಿಂದ) ವೃದ್ಧಿಯನ್ನು ಹೊಂದುತ್ತಾ । ನಃ—ನಮ್ಮನ್ನು । ಅಭಿಶಸ್ತಯೇ—ನಿಂದಕನಾದ ಶತ್ರುವಿನ ವಶಕ್ಕೆ । ನ ಅಹ ಪರಾ ದಾತ್—ಖಂಡಿತ ಒಪ್ಪಿಸದಿರಲಿ । ರಿಷತೇ ನ—ಹಿಂಸಕನಾದ ಶತ್ರುವಿಗೂ ಒಪ್ಪಿಸದಿರಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನೇ ಅರಸಿ ಹೊರಟಿರುವ ಈ ಸ್ತುತಿಗಳು ನಿನಗೆ ಅಭಿಮುಖವಾಗಿಯೇ ಇವೆ. ಅಥವಾ ಒಂದುವೇಳೆ ನನ್ನ ಯಾಚನೆಯಿಂದ ನಿನಗೆ ತೊಂದರೆಯಾದರೂ ಆಗಬಹುದು. ಈ ಪಾಪವನ್ನು ಮನ್ನಿಸಿ, ನನ್ನ ಸ್ತುತಿಗಳಿಂದ ವೃದ್ಧಿಯನ್ನು ಪಡೆದು, ನಮ್ಮನ್ನು ನಿಂದಿಸುವವನೂ, ಹಿಂಸಿಸುವವನೂ ಆದ ಶತ್ರುವಿನ ವಶಕ್ಕೆ ಮಾತ್ರ ನಮ್ಮನ್ನು ಒಪ್ಪಿಸಬೇಡ.

## English Translation.

These (encomiums) are directed towards you, but perhaps an offence has thereby been uttered to (you), the giver of dwellings: may Agni, augmenting (by our praise), yield us not up to the maligner or the malevolent.

|| ವಿಶೇಷವಿಷಯಗಳು ||

ಉಪಸಂಹಾರರೂಪವಾದ ಈ ಕೊನೆಯ ಋಕ್ಕಿನಲ್ಲಿ ಋಷಿಯು ಅಗ್ನಿಯನ್ನು ಸ್ತುತಿಸುತ್ತಾ ಕಾರಣಾಂತರದಿಂದ ಅಥವಾ ಅಜ್ಞಾನದಿಂದ ಅಗ್ನಿಯ ವಿಷಯದಲ್ಲಿ ಪಾಪವನ್ನು ಆಚರಿಸಿದ್ದರೆ ಅದೆಲ್ಲವನ್ನೂ ಕ್ಷಮಿಸಿ, ಶತ್ರುವಿನ ವಶವಾಗದಂತೆ ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದಾನೆ.

# ನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ತ್ವಾಮಗ್ನ ಇತ್ಯೇಕಾದಶರ್ಚಂ ಚತುರ್ಥಂ ಸೂಕ್ತಮಾತ್ರೇಯಸ್ಯ ವಸುಶ್ರುತಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಅನುಕ್ರಾಂತಂ ಚ । ತ್ವಾಮಗ್ನ ಏಕಾದಶೇತಿ || ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗೋಽಬೋಧ್ಯಗ್ನಿರಿತ್ಯತ್ರೋಕ್ತಃ ||**

ಅನುವಾದವು—ತ್ವಾಮಗ್ನೇ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಆತ್ರೇಯಗೋತ್ರದ ವಸುಶ್ರುತನೆಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ ತ್ವಾಮಗ್ನ ಏಕಾದಶ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಈ ಮಂಡಲದ ಅಬೋಧ್ಯಗ್ನಿಃ ಎಂಬ ಮೊದಲನೆಯ ಸೂಕ್ತದ ವಿನಿಯೋಗದಲ್ಲಿಯೇ ಹೇಳಲಾಗಿದೆ.

## ಸೂಕ್ತ—೪

ಮಂಡಲ—೫ || ಅನುವಾಕ—೧ || ಸೂಕ್ತ—೪ ||
ಅಷ್ಟಕ—೩ || ಅಧ್ಯಾಯ—೮ || ವರ್ಗ—೧೮, ೧೯ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ||
ಋಷಿಃ—ವಸುಶ್ರುತ ಆತ್ರೇಯಃ ||
ದೇವತಾ—ಅಗ್ನಿಃ ||
ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ತ್ವಾಮಗ್ನೇ ವಸುಪತಿಂ ವಸೂನಾಮಭಿ ಪ್ರ ಮಂದೇ ಅಧ್ವರೇಷು ರಾಜನ್ ।
ತ್ವಯಾ ವಾಜಂ ವಾಜಯಂತೋ ಜಯೇಮಾಭಿ ಷ್ಯಾಮ ಪೃತ್ಸುತೀರ್ಮರ್ತ್ಯಾನಾಂ || ೧ ||

॥ ಪದಪಾಠಃ ॥

ತ್ವಾಂ । ಅಗ್ನೇ । ವಸುಽಪತಿಂ । ವಸೂನಾಂ । ಅಭಿ । ಪ್ರ । ಮಂದೇ । ಅಧ್ವರೇಷು । ರಾಜನ್ ॥

ತ್ವಯಾ । ವಾಜಂ । ವಾಜಽಯಂತಃ । ಜಯೇಮ । ಅಭಿ । ಸ್ಯಾಮ । ಪೃತ್ಸುತೀಃ । ಮರ್ತ್ಯಾನಾಂ ॥೧॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಸೂನಾಂ ವಸುಪತಿಂ । ವೃತ್ತ್ಯವೃತ್ತಿಭ್ಯಾಂ ವಸೂನಾಂ ಬಾಹುಲ್ಯಂ ತತ್ಸ್ವಾಮಿತ್ವಂ ಚೋಕ್ತಂ । ಬಹೂನಾಂ ಧನಾನಾಂ ಸ್ವಾಮಿನಂ ತ್ವಾಮಧ್ವರೇಷು ಯಾಗೇಷ್ವಭಿ ಪ್ರ ಮಂದೇ । ಅಭಿಮುಖ್ಯೇನ ಸ್ತೌಮಿ ಹೇ ರಾಜನ್ । ಕಿಂಚ ತ್ವಯಾನುಕೂಲೇನ ವಾಜಯಂತೋಽನ್ನಮಿಚ್ಛಂತೋ ವಯಂ ವಾಜಂ ಜಯೇಮ । ಕಿಂಚ ಮರ್ತ್ಯಾನಾಂ ಮರಣಧರ್ಮಕಾಣಾಂ ಪೃತ್ಸುತೀಃ ಸೇನಾ ಅಭಿ ಷ್ಯಾಮ । ಅಭಿಭವೇಮ ॥

॥ ಪ್ರತಿಪದಾರ್ಥ ॥

ರಾಜನ್—ಪ್ರಭುವಾದ । ಅಗ್ನೇ—ಎಲೈ ಅಗ್ನಿಯೇ । ವಸೂನಾಂ—ಅನೇಕವಿಧವಾದ ಸಂಪತ್ತುಗಳಿಗೆ ವಸುಪತಿಂ—ಒಡೆಯನಾದ । ತ್ವಾಂ—ನಿನ್ನನ್ನು । ಅಧ್ವರೇಷು—ಯಾಗಗಳಲ್ಲಿ । ಅಭಿ ಪ್ರ ಮಂದೇ—ಸ್ತುತಿಸಿ ತುಷ್ಟಿಯನ್ನುಂಟುಮಾಡುತ್ತೇನೆ । ವಾಜಯಂತಃ — ಅನ್ನಾಪೇಕ್ಷಿಗಳಾದ ನಾವು । ತ್ವಯಾ—ನಿನ್ನ ಅನುಗ್ರಹದಿಂದ । ವಾಜಂ—ಅನ್ನವನ್ನು । ಜಯೇಮ—ಪಡೆಯುವಂತಾಗಲಿ । ಮರ್ತ್ಯಾನಾಂ—ಶತ್ರುಜನರ । ಪೃತ್ಸುತೀಃ—ಸೇನೆಗಳನ್ನು । ಅಭಿ ಷ್ಯಾಮ—ಜಯಿಸುವಂತಾಗಲಿ ।

॥ ಭಾವಾರ್ಥ ॥

ಪ್ರಭುವಾದ ಎಲೈ ಅಗ್ನಿಯೇ, ಅನೇಕವಿಧವಾದ ಸಂಪತ್ತುಗಳಿಗೆ ಒಡೆಯನಾದ ನಿನ್ನನ್ನು ಯಾಗಗಳಲ್ಲಿ ಸ್ತುತಿಸಿ ನಿನಗೆ ತುಷ್ಟಿಯನ್ನುಂಟುಮಾಡುತ್ತೇನೆ. ಅನ್ನಾಪೇಕ್ಷಿಗಳಾದ ನಾವು ನಿನ್ನ ಅನುಗ್ರಹದಿಂದ ಅನ್ನವನ್ನು ಪಡೆಯುವಂತಾಗಲಿ. ಶತ್ರುಜನರ ಸೇನೆಗಳನ್ನು ಜಯಿಸುವಂತಾಗಲಿ.

## English Translation.

Royal Agni, I glorify at sacrifices, you who are the lord of vast riches; may we who are in want of food obtain food through you, and (through you) may we overcome hosts of (hostile) men.

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದೆ. ವಸುಪತಿಂ ವಸೂನಾಂ ಎಂಬ ಒಂದೇ ಅರ್ಥವಿರುವ ಶಬ್ದಗಳ ದ್ವಿರುಕ್ತಿಯು ಋಗ್ವೇದದಲ್ಲಿ ಅನೇಕಕಡೆಗಳಲ್ಲಿರುವುದು. ರಯಿಪತಿಂ ರಯೀಣಾಂ, ವಿಶಾಂ ವಿಶ್ಪತಿಂ, ದೇವೋ ದೇವಾನಾಂ, ಜ್ಯೋತಿಷಾಂ ಜ್ಯೋತಿಃ ಇತ್ಯಾದ್ಯನೇಕ ಉದಾಹರಣೆಗಳಿವೆ.

ಪೃತ್ಸುತೀಃ—ಪೃತ್ಸು ಶಬ್ದವು ಸಂಗ್ರಾಮ (ಯುದ್ಧ) ನಾಮುಗಳಲ್ಲಿ ಪಠಿತವಾಗಿದೆ. (ನಿ. ೩-೯) ಪೃತ್ಸುತೀಃ ಎಂದರೆ ಯುದ್ಧಗಳಲ್ಲಿ ಭಾಗವಹಿಸುವ ಸೇನೆಗಳು ಎಂದರ್ಥವು.

॥ ಸಂಹಿತಾಪಾಠಃ ॥

ಹವ್ಯವಾಳಗ್ನಿರಜರಃ ಪಿತಾ ನೋ ವಿಭುರ್ವಿಭಾವಾ ಸುದೃಶೀಕೋ ಅಸ್ಮೇ ।

ಸುಗಾರ್ಹಪತ್ಯಾಃ ಸಮಿಷೋ ದಿದೀಹ್ಯಸ್ಮದ್ರ್ಯ೧ಕ್ಸಂ ಮಿಮೀಹಿ ಶ್ರವಾಂಸಿ ॥

॥ ಪದಪಾಠಃ ॥

ಹವ್ಯऽವಾಟ್ । ಅಗ್ನಿಃ । ಅಜರಃ । ಪಿತಾ । ನಃ । ವಿऽಭುಃ । ವಿಭಾऽವಾ । ಸುऽದೃಶೀಕಃ । ಅಸ್ಮೇ ಇತಿ ।

ಸುऽಗಾರ್ಹಪತ್ಯಾಃ । ಸಂ । ಇಷಃ । ದಿದೀಹಿ । ಅಸ್ಮದ್ರ್ಯಕ್ । ಸಂ । ಮಿಮೀಹಿ । ಶ್ರವಾಂಸಿ ॥ ೨ ॥

॥ ಸಾಯಣಭಾಷ್ಯಂ ॥

ದರ್ಶಪೂರ್ಣಮಾಸೇ ಪತ್ನೀಸಂಯೋಜೇ ಗೃಹಪತೇರ್ಯೋಜ್ಯೈಷಾ। ಸೂತ್ರಿತಂ ಚ । ಹವ್ಯವಾಳಗ್ನಿರಜರಃ ಪಿತಾ ನ ಇತಿ ಪತ್ನೀಸಂಯಾಜಾಃ । ಆ. ೧-೧೦ । ಇತಿ ॥ ದೇವಸುವಾಂ ಹವಿಃಷ್ವಪ್ಯಗ್ನೇರೇಷೈವ ಯಾಜ್ಯಾ। ಸೂತ್ರಿತಂ ಚ। ಹವ್ಯವಾಳಗ್ನಿರಜರಃ ಪಿತಾ ನಸ್ತ್ವಂ ಚ ಸೋಮ ನೋ ವಶಃ। ಆ. ೪-೧೧। ಇತಿ॥

ಅಯಂ ಹವ್ಯವಾಡಗ್ನಿರಜರೋऽಜೀರ್ಣಃ ಸನ್ ನಃ ಪಿತಾ ಭವತ್ವಿತಿ ಶೇಷಃ । ಕಿಂಚ ವಿಭುರ್ವ್ಯಾಪ್ತಃ ವಿಭಾವಾ ದೀಪ್ತಿಮಾನ್ ಸುದೃಶೀಕಃ ಶೋಭನದರ್ಶನೋऽಸ್ಮೇ ಅಸ್ಮಾಕಂ ಭವತು । ಅಥ ಪ್ರತ್ಯಕ್ಷವಾದಃ । ಸುಗಾರ್ಹಪತ್ಯಾಃ ಶೋಭನಗಾರ್ಹಪತ್ಯಯುಕ್ತಾನೀಷೋऽನ್ನಾನಿ ಸಂ ದಿದೀಹಿ । ಸಮ್ಯಕ್ ಪ್ರಕಾಶಯ । ದದಸ್ವ ವಾ । ಅಸ್ಮದ್ರ್ಯಕ್ ಅಸ್ಮದಭಿಮುಖಂ ಶ್ರವಾಂಸ್ಯನ್ನಾನಿ ಸಂ ಮಿಮೀಹಿ । ಸಮ್ಯಕ್ ಪ್ರಯಚ್ಛ ॥

॥ ಪ್ರತಿಪದಾರ್ಥ ॥

ಹವ್ಯವಾಟ್—ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ। ಅಜರಃ—ಕ್ಷಯರಹಿತನೂ ಆದ । ಅಗ್ನಿಃ—ಅಗ್ನಿಯು । ನಃ—ನಮಗೆ । ಪಿತಾ—ಪಾಲಕನಾಗಿರಲಿ । ವಿಭುಃ—ಸರ್ವವ್ಯಾಪಕನೂ । ವಿಭಾವಾ—ಪ್ರಕಾಶಯುಕ್ತನೂ ಆದ ಅಗ್ನಿಯು। ಅಸ್ಮೇ—ನಮಗೆ । ಸುದೃಶೀಕಃ—ಶೋಭನಾತ್ಮಕವಾದ ದರ್ಶನವುಳ್ಳವನಾಗಿರಲಿ । ಸುಗಾರ್ಹಪತ್ಯಾಃ—ಶ್ರೇಷ್ಠವಾದ ಗಾರ್ಹಪತ್ಯಕ್ಕೆ ಉಪಯುಕ್ತವಾದ । ಇಷಃ—ಅನ್ನಗಳನ್ನು । ಸಂ ದಿದೀಹಿ—ನಮಗೆ ತೋರಿಕೊಡು । ಅಸ್ಮದ್ರ್ಯಕ್—ನಮಗೆ ಅಭಿಮುಖವಾಗಿ । ಶ್ರವಾಂಸಿ—ಅನ್ನಗಳನ್ನು । ಸಂ ಮಿಮೀಹಿ—ತುಂಬಿಡು.

॥ ಭಾವಾರ್ಥ ॥

ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ, ಕ್ಷಯರಹಿತನೂ ಆದ ಅಗ್ನಿಯು ನಮ್ಮ ಪಾಲಕನಾಗಿರಲಿ. ಸರ್ವವ್ಯಾಪಕನೂ, ಪ್ರಕಾಶಯುತನೂ ಆದ ಅಗ್ನಿಯು ನಮಗೆ ಶೋಭನಾತ್ಮಕವಾದ ದರ್ಶನವುಳ್ಳವನಾಗಿರಲಿ. ಎಲೈ ಅಗ್ನಿಯೇ, ಶ್ರೇಷ್ಠವಾದ ಗಾರ್ಹಪತ್ಯಕ್ಕೆ ಉಪಯುಕ್ತವಾದ ಅನ್ನಗಳನ್ನು ನಮಗೆ ಒದಗಿಸಿಕೊಡು.

English Translation.

May the undecaying Agni, the bearer of oblations. be a father to us, all-pervading and resplendent (may he be) to us of pleasing aspect: supply us plentifully with food in return for our well-maintained household fire: grant us viands abundantly.

॥ ವಿಶೇಷವಿಷಯಗಳು ॥

ದರ್ಶಪೂರ್ಣಮಾಸಯಾಗದಲ್ಲಿ ಪತ್ನೀಸಂಯಾಜವೆಂಬ ಹೋಮವನ್ನು ಮಾಡುವಾಗ ಗೃಹಪತಿಯು ಈ ಮಂತ್ರವನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಹವ್ಯವಾಳಗ್ನಿರಜರಃ ಪಿತಾ ನ ಇತಿ ಪತ್ನೀಸಂಯಾಜಾಃ ಎಂಬ ಸೂತ್ರದಿಂದಲೂ (ಅ. ೧-೧೦) ದೇವಸುವ ಹವಿಸ್ಸುಗಳೆಂಬ ಎಂಟು ಆಹುತಿಗಳಲ್ಲಿ ಅಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿಯೂ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಹವ್ಯವಾಳಗ್ನಿರಜರಃ ಪಿತಾ ನಸ್ತ್ವಂ ಚ ಸೋಮ ನೋ ವಶಃ ಎಂಬ ಸೂತ್ರದಿಂದಲೂ (ಅ. ೪-೧೧) ವಿವೃತವಾಗಿರುವುದು.

---

॥ ಸಂಹಿತಾಪಾಠಃ ॥

ವಿಶಾಂ ಕವಿಂ ವಿಶ್ಪತಿಂ ಮಾನುಷೀಣಾಂ ಶುಚಿಂ ಪಾವಕಂ ಘೃತಪೃಷ್ಠಮಗ್ನಿಂ ।
ನಿ ಹೋತಾರಂ ವಿಶ್ವವಿದಂ ದಧಿಧ್ವೇ ಸ ದೇವೇಷು ವನತೇ ವಾರ್ಯಾಣಿ ॥೩॥

॥ ಪದಪಾಠಃ ॥

ವಿಶಾಂ । ಕವಿಂ । ವಿಶ್ಪತಿಂ । ಮಾನುಷೀಣಾಂ । ಶುಚಿಂ । ಪಾವಕಂ । ಘೃತಽಪೃಷ್ಠಂ । ಅಗ್ನಿಂ ।
ನಿ । ಹೋತಾರಂ । ವಿಶ್ವಽವಿದಂ । ದಧಿಧ್ವೇ । ಸಃ । ದೇವೇಷು । ವನತೇ । ವಾರ್ಯಾಣಿ ॥ ೩ ॥

॥ ಸಾಯಣಭಾಷ್ಯಂ ॥

ಮಾನುಷೀಣಾಂ ವಿಶಾಂ ವಿಶ್ಪತಿಂ ಸರ್ವಾಸಾಂ ಮನುಷ್ಯರೂಪಾಣಾಂ ಪ್ರಜಾನಾಂ ಪಾಲಕಂ ಸ್ವಾಮಿನಂ ವಾ ಕವಿಂ ಮೇಧಾವಿನಂ ಶುಚಿಂ ಶುದ್ಧಂ ದೀಪ್ತಂ ವಾ ಪಾವಕಮನ್ಯೇಷಾಂ ಶೋಧಕಂ

ಘೃತಪೃಷ್ಠಂ ಪ್ರದೀಪ್ತಪೃಷ್ಠೋಪಲಕ್ಷಿತಶರೀರಂ । ಅಥವಾ ಉಪರಿತನಭಾಗಾಜ್ಯೋಪೇತಂ ಹೋತಾರಂ ಹೋಮನಿಷ್ಪಾದಕಂ ವಿಶ್ವವಿದಂ ವಿಶ್ವಸ್ಯ ವೇತ್ತಾರಮಗ್ನಿಂ ನಿ ದಧಿಧ್ವೇ । ಧಾರಯಥ । ಹೇ ಋತ್ವಿಜಃ । ಸ ದೇವೋ ದೇವೇಷು ಮಧ್ಯೇ ವಾರ್ಯಾಣಿ ವರಣೀಯಾನಿ ಧನಾನಿ ವನತೇ । ಸಂಭಜತೇಽಸ್ಮದರ್ಥಂ । ಸ್ವಯಂ ವಾ ವಾರ್ಯಾಣಿ ಹವೀಂಷಿ ವನತೇ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) ಮಾನುಷೀಣಾಂ ವಿಶಾಂ—ಸಕಲಮಾನವ ಪ್ರಜೆಗಳಿಗೂ । ವಿಶ್ಪತಿಂ-ಪಾಲಕನೂ। ಕವಿಂ— ಮೇಧಾವಿಯೂ । ಶುಚಿಂ— ಶುದ್ಧನೂ । ಪಾವಕಂ— ಶುದ್ಧಿಕಾರಕನೂ । ಘೃತಪೃಷ್ಠಂ— ಆಜ್ಯೋಪೇತವಾದ ಶರೀರವುಳ್ಳವನೂ । ಹೋತಾರಂ—ಹೋಮಸಂಪಾದಕನೂ । ವಿಶ್ವವಿದಂ—ಸಕಲವನ್ನೂ ತಿಳಿದವನೂ ಆದ । ಅಗ್ನಿಂ—ಅಗ್ನಿಯನ್ನು । ನಿ ದಧಿಧ್ವೇ—ಪೂಜ್ಯಸ್ಥಾನದಲ್ಲಿ ಧರಿಸಿರಿ (ಸ್ಥಾಪಿಸಿರಿ)। ಸಃ— ಆ ಅಗ್ನಿಯು । ದೇವೇಷು—ದೇವತೆಗಳ ಮಧ್ಯದಲ್ಲಿ । ವಾರ್ಯಾಣಿ—ಅಪೇಕ್ಷಿತಗಳಾದ ಧನಗಳನ್ನು । ವನತೇ— ಒದಗಿಸಿಕೊಡುತ್ತಾನೆ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಸಕಲ ಮಾನವ ಪ್ರಜೆಗಳಿಗೂ ಪಾಲಕನೂ, ಮೇಧಾವಿಯೂ, ಶುದ್ಧನೂ, ಶುದ್ಧಿಕಾರಕನೂ, ಆಜ್ಯೋಪೇತವಾದ ಶರೀರವುಳ್ಳವನೂ, ಹೋಮಸಂಪಾದಕನೂ, ಸಕಲವನ್ನೂ ತಿಳಿದವನೂ ಆದ ಅಗ್ನಿಯನ್ನು ಪೂಜ್ಯಸ್ಥಾನದಲ್ಲಿ ಸ್ಥಾಪಿಸಿರಿ. ಅದೇ ಅಗ್ನಿಯು ದೇವತೆಗಳ ಮಧ್ಯದಲ್ಲಿ ಅಪೇಕ್ಷಿತವಾದ ಧನಗಳನ್ನು ಒದಗಿಸಿಕೊಡುತ್ತಾನೆ.

## English Translation.

You (priests) possess the wise lord of human beings, the pure, the purifying, Agni, cherished with oblations of butter, the offerer of the burnt-offering, the all-knowing ; he among the gods bestows desirable (riches).

---

॥ ಸಂಹಿತಾಪಾಠಃ ॥

ಜುಷಸ್ವಾಗ್ನ ಇಳಯಾ ಸಜೋಷಾ ಯತಮಾನೋ ರಶ್ಮಿಭಿಃ ಸೂರ್ಯಸ್ಯ ।
ಜುಷಸ್ವ ನಃ ಸಮಿಧಂ ಜಾತವೇದ ಆ ಚ ದೇವಾನ್ಹವಿರದ್ಯಾಯ ವಕ್ಷಿ ॥೪॥

॥ ಪದಪಾಠಃ ॥

ಜುಷಸ್ವ । ಅಗ್ನೇ । ಇಳಯಾ । ಸಽಜೋಷಾಃ । ಯತಮಾನಃ । ರಶ್ಮಿಽಭಿಃ । ಸೂರ್ಯಸ್ಯ ।
ಜುಷಸ್ವ । ನಃ । ಸಂಽಇಧಂ । ಜಾತಽವೇದಃ । ಆ । ಚ । ದೇವಾನ್ । ಹವಿಃಽಅದ್ಯಾಯ । ವಕ್ಷಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜುಷಸ್ವ । ಸೇವಸ್ವ ಸ್ತುತಿಂ । ಇಳಯಾ ವೇದಿಲಕ್ಷಣಯಾ ಭೂಮ್ಯಾ ವಾಚಾ ವಾ ಸಜೋಷಾಃ ಸಮಾನಪ್ರೀತಿಃ । ತಥಾ ಸೂರ್ಯಸ್ಯ ರಶ್ಮಿಭಿರ್ಯತಮಾನಃ ಪ್ರಯತ್ನಮುಷಃಕಾಲೇ ಕುರ್ವನ್। ಕಿಂಚ ಹೇ ಜಾತವೇದೋ ಜಾತಸ್ಯ ವೇದಿತರಗ್ನೇ ನೋಽಸ್ಮದೀಯಾಂ ಸಮಿಧಂ ಜುಷಸ್ವ । ಸೇವಸ್ವ। ಆವಹ ಚ ದೇವಾನ್ಹವಿರದ್ಯಾಯ ಹವಿರದನಾಯ । ಆವಾಹ್ಯ ವಕ್ಷಿ । ವಹಸಿ ತದ್ಧವಿಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಸೂರ್ಯಸ್ಯ—ಸೂರ್ಯನ । ರಶ್ಮಿಭಿಃ—ರಶ್ಮಿಗಳೊಡನೆ । ಯತಮಾನಃ—ಪ್ರಯತ್ನಿಸುವವನಾಗಿಯೂ । ಇಳಯಾ—ಇಳಾದೇವಿಯೊಡನೆ । ಸಜೋಷಾಃ—ಸಮಾನವಾದ ಪ್ರೀತಿಯುಳ್ಳವನಾಗಿಯೂ । ಜುಷಸ್ವ—(ನಮ್ಮ ಸ್ತುತಿಗಳನ್ನು) ಸೇವಿಸು । ಜಾತವೇದಃ—ಜಾತಪ್ರಜ್ಞನಾದ ಎಲೈ ಅಗ್ನಿಯೇ । ನಃ—ನಮ್ಮ । ಸಮಿಧಂ—ಸಮಿತ್ತುಗಳನ್ನು । ಜುಷಸ್ವ—ಸೇವಿಸು । ಹವಿರದ್ಯಾಯ—ಹವಿಸ್ಸನ್ನು ಭಕ್ಷಿಸಲು । ದೇವಾನ್—ದೇವತೆಗಳನ್ನು । ಆ ವಕ್ಷಿ—ಕರೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಉಷಃಕಾಲದಲ್ಲಿ ಸೂರ್ಯರಶ್ಮಿಗಳೊಡನೆ ಪ್ರಯತ್ನಿಸುವವನಾಗಿಯೂ, ಇಳಾದೇವಿಯೊಡನೆ ಸಮಾನವಾದ ಪ್ರೀತಿಯುಳ್ಳವನಾಗಿಯೂ, ನಮ್ಮ ಸ್ತುತಿಗಳನ್ನು ಸೇವಿಸು. ಜಾತಪ್ರಜ್ಞನಾದ ಎಲೈ ಅಗ್ನಿಯೇ, ನಮ್ಮ ಸಮಿತ್ತುಗಳನ್ನು ಸೇವಿಸು. ಹವಿಸ್ಸನ್ನು ಭಕ್ಷಿಸಲು ದೇವತೆಗಳನ್ನು ಕರೆದುಕೊಂಡು ಬಾ.

## English Translation.

Be propitiated, Agni, sharing in satisfaction with Ila, vieing with the rays of the sun : be gratified, Jatavedas, by our fuel, and bring the gods to partake of the oblation.

......

ಇಳಯಾ—ಇಳಾಶಬ್ದವು ಇಪ್ಪತ್ತೊಂದು ಪೃಥಿವೀನಾಮಗಳಲ್ಲಿಯೂ (ನಿ. ೨-೫) ವಾಙ್ನಾಮಗಳಲ್ಲಿಯೂ (ನಿ. ೨-೩೩) ಅನ್ನನಾಮಗಳಲ್ಲಿಯೂ (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇದಲ್ಲದೆ ಇಳಾ ಎಂಬ ಪ್ರತ್ಯೇಕದೇವತೆಯೂ ಇದೆ. ಪ್ರಕೃತ ಋಕ್ಕಿನಲ್ಲಿ ಭಾಷ್ಯಕಾರರು ಇಳಯಾ ಎಂಬ ಶಬ್ದಕ್ಕೆ ವೇದಿಲಕ್ಷಣಯಾ ಭೂಮ್ಯಾ ವಾಚಾ ವಾ—ವೇದಿರೂಪವಾದ ಯಜ್ಞಭೂಮಿಯಿಂದ ಅಥವಾ ವಾಕ್ಕಿನಿಂದ ಎಂಬ ಎರಡರ್ಥಗಳಲ್ಲಿ ಯಾವುದನ್ನಾದರೂ ಹೇಳಬಹುದೆಂದು ತಿಳಿಸಿದಾರೆ.

॥ ಸಂಹಿತಾಪಾಠಃ ॥

ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್ ।
ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥ ೫ ॥

॥ ಪದಪಾಠಃ ॥

ಜುಷ್ಟಃ । ದಮೂನಾಃ । ಅತಿಥಿಃ । ದುರೋಣೇ । ಇಮಂ । ನಃ । ಯಜ್ಞಂ । ಉಪ । ಯಾಹಿ । ವಿದ್ವಾನ್ ।
ವಿಶ್ವಾಃ । ಅಗ್ನೇ । ಅಭಿಽಯುಜಃ । ವಿಽಹತ್ಯ । ಶತ್ರುಽಯತಾಂ । ಆ । ಭರ । ಭೋಜನಾನಿ ॥ ೫ ॥

॥ ಸಾಯಣಭಾಷ್ಯಂ ॥

ಅಥ ಪವಿತ್ರೇಷ್ಟ್ಯಾಂ ಸ್ವಿಷ್ಟಕೃತೋಽನುವಾಕ್ಯೈಷಾ । ಸೂತ್ರಿತಂ ಚ । ಜುಷ್ಟೋ ದಮೂನಾ ಅಗ್ನೇ ಶರ್ಧ ಮಹತೇ ಸೌಭಗಾಯೇತಿ ಸಂಯಾಜ್ಯೇ । ಆ. ೨-೧೨ । ಇತಿ ॥ ಮರುದ್ಭ್ಯಃ ಪುರೋಡಾಶಂ ಸಪ್ತಕಪಾಲಮಿತ್ಯತ್ರಾಪಿ ಸ್ವಿಷ್ಟಕೃತೋಽನುವಾಕ್ಯಾ। ಅತ್ಯಾಸೋ ನ ಯೇ ಮರುತಃ ಸ್ವಂಚೋ ಜುಷ್ಟೋ ದಮೂನಾಃ । ಆ. ೨-೧೮ । ಇತಿ ॥

ಜುಷ್ಟಃ ಪರ್ಯಾಪ್ತೋ ದಮೂನಾ ದಾನಮನಾ ದಾಂತಮನಾ ವಾ ಅತಿಥಿಸ್ತದ್ವದ್ದುರೋಣೇ ಗೃಹೇ ಪೂಜ್ಯಃ ಸನ್ ಇಮಂ ನೋಽಸ್ಮದೀಯಂ ಯಜ್ಞಮುಪ ಯಾಹಿ । ಉಪಗಚ್ಛ । ವಿದ್ವಾನ್ ಜಾನನ್ ಹೇ ಅಗ್ನೇ ವಿಶ್ವಾ ಅಭಿಯುಜೋ ಸರ್ವಾನಭಿಯೋಕ್ತ್ರೄನ್ವಿಹತ್ಯ ಶತ್ರೂಯತಾಂ ತೇಷಾಂ ಭೋಜನಾನ್ಯನ್ನಾನಿ ಧನಾನ್ಯಾ ಭರ । ಆಹರ । ಅತಿಥಿರಭ್ಯತಿತೋ ಗೃಹಾನ್ಭವತೀತ್ಯಾದಿನಿರುಕ್ತಂ । ನಿ. ೪-೫. । ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ,) ಜುಷ್ಟಃ— ಸಂತೃಪ್ತಿಯನ್ನು ಹೊಂದುವವನಾಗಿಯೂ । ದಮೂನಾಃ—ದಾನ ಮನಸ್ಕನಾಗಿಯೂ । ದುರೋಣೇ—ನಮ್ಮ ಯಜ್ಞಗೃಹದಲ್ಲಿ । ಅತಿಥಿಃ—ಪೂಜ್ಯನಾಗಿಯೂ ಇರುವ ನೀನು । ನಃ—ನಮ್ಮ ಯಜ್ಞದಲ್ಲಿ । ಇಮಂ ಯಜ್ಞಂ—ಈ ಯಜ್ಞವನ್ನು । ವಿದ್ವಾನ್—ಅರಿತವನಾಗಿ । ಉಪ ಯಾಹಿ—ಯಜ್ಞಕ್ಕೆ ದಯಮಾಡು । ಅಗ್ನೇ—ಎಲೈ ಅಗ್ನಿಯೇ । ವಿಶ್ವಾಃ—ಸಮಸ್ತವಾದ । ಅಭಿಯುಜಃ—ನಮ್ಮ ಎದುರಾಳಿಗಳನ್ನು (ಶತ್ರುಗಳನ್ನು) । ವಿಹತ್ಯ—ನಾಶಮಾಡಿ । ಶತ್ರೂಯತಾಂ—ಆ ಶತ್ರುಗಳಿಗೆ ಸೇರಿದ । ಭೋಜನಾನಿ—ಅನ್ನಸಂಪತ್ತುಗಳನ್ನೆಲ್ಲಾ ಅಥವಾ ಧನಗಳನ್ನೆಲ್ಲಾ । ಆ ಭರ—(ನಮಗೆ) ತೆಗೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ಪೂಜೆಯಿಂದ ಸಂತೃಪ್ತಿಯನ್ನು ಹೊಂದುವವನಾಗಿಯೂ, ದಾನಮನಸ್ಕನಾಗಿಯೂ, ನಮ್ಮ ಯಜ್ಞಗೃಹದಲ್ಲಿ ಅತಿಥಿಯಂತೆ ಪೂಜ್ಯನಾಗಿಯೂ ಇರುವ ನೀನು ನಮ್ಮ ಈ ಯಜ್ಞವನ್ನರಿತವನಾಗಿ ಈ ಯಜ್ಞಕ್ಕೆ ದಯಮಾಡು. ಎಲೈ ಅಗ್ನಿಯೇ, ಸಮಸ್ತಶತ್ರುಗಳನ್ನೂ ನಾಶಮಾಡಿ ಆ ಶತ್ರುಗಳಿಗೆ ಸೇರಿದ ಅನ್ನಸಂಪತ್ತುಗಳನ್ನೆಲ್ಲಾ ನಮಗೆ ಕೊಡುವುದಕ್ಕಾಗಿ ತೆಗೆದುಕೊಂಡು ಬಾ.

English Translation.

Propitiated, lowly-minded, a guest in the dwelling, come, you who are wise, to this our sacrifice : having destroyed, Agni, all our adversaries, bring off the possessions of those who bear us enmity.

॥ ವಿಶೇಷವಿಷಯಗಳು ॥

ಪವಿತ್ರೇಷ್ಟಿಯಲ್ಲಿ ಜುಷ್ಟೋ ದಮೂನಾ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಜುಷ್ಟೋ ದಮೂನಾ ಅಗ್ನೇ ಶರ್ಧ ಮಹತೇ ಸೌಭಗಾಯೇತಿ ಸಂಯಾಜ್ಯೇ ಎಂಬ ಸೂತ್ರದಿಂದಲೂ (ಅ. ೨-೧೨) ಮರುತ್ವತ್ಯಃ ಪುರೋಡಾಶಂ ಸಪ್ತಕಾಲಂ ಎಂದು ಹೇಳಿರುವ ಸ್ವಿಷ್ಟಕೃದ್ಧೋಮದಲ್ಲಿ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅತ್ಯಾಸೋ ನ ಯೇ ಮರುತಃ ಸ್ವಂಚೋ ಜುಷ್ಟೋ ದಮೂನಾಃ ಎಂಬ ಸೂತ್ರದಿಂದಲೂ (ಅ. ೨-೧೮), ವಿವೃತವಾಗಿರುವುದು.



। ಸಂಹಿತಾಪಾಠಃ ।

ವಧೇನ ದಸ್ಯುಂ ಪ್ರ ಹಿ ಚಾತಯಸ್ವ ವಯಃ ಕೃಣ್ವಾನಸ್ತನ್ವೇ೩ ಸ್ವಾಯೈ ।
ಪಿಪರ್ಷಿ ಯತ್ಸಹಸಸ್ಪುತ್ರ ದೇವಾನ್ತ್ಸೋ ಅಗ್ನೇ ಪಾಹಿ ನೃತಮ ವಾಜೇ ಅಸ್ಮಾನ್ ॥ ೬ ॥

॥ ಪದಪಾಠಃ ॥

ವಧೇನ । ದಸ್ಯುಂ । ಪ್ರ । ಹಿ । ಚಾತಯಸ್ವ । ವಯಃ । ಕೃಣ್ವಾನಃ । ತನ್ವೇ । ಸ್ವಾಯೈ ।

ಪಿಪರ್ಷಿ । ಯತ್ । ಸಹಸಃ । ಪುತ್ರ । ದೇವಾನ್ । ಸಃ । ಅಗ್ನೇ । ಪಾಹಿ । ನೃತಮ । ವಾಜೇ । ಅಸ್ಮಾನ್ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಧೇನಾಯುಧೇನ ದಸ್ಯುಮುಪಕ್ಷಪಯಿತಾರಂ ಪ್ರ ಹಿ ಜಾತಯಸ್ವ । ಪ್ರಣಾಶಯ । ಹೀತಿ ಪೂರಣಃ । ವಯಃ ಕೃಣ್ವಾನಃ ಕುರ್ವಾಣಸ್ತನ್ವೇ ಶರೀರಾಯ ಸ್ವಾಯೈ ಸ್ವೀಯಾಯ । ಅಥವಾ ಸ್ವಾಯೈ ತನ್ವೇ ಯಜಮಾನಾದಿರೂಪಾಯ ಪುತ್ರಾಯ ವಯೋಽನ್ನಂ ಕುರ್ವಾಣಃ । ಯದ್ಯಸ್ಮಾತ್ ಸಹಸಸ್ಪುತ್ರಾಗ್ನೇ ದೇವಾನ್ಪಿಪರ್ಷಿ । ತರ್ಪಯಸಿ । ಹೇ ನೃತಮ ನೇತೃತಮಾಗ್ನೇ ಸ ತ್ವಂ ವಾಜೇ ಸಂಗ್ರಾಮೇಽಸ್ಮಾನ್ ಪಾಹಿ । ರಕ್ಷ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ವಯಃ—(ಶತ್ರುವಿನ) ಅನ್ನವನ್ನು । ಸ್ವಾಯೈ ತನ್ವೇ—ನಿನ್ನ ಸ್ವಂತ ಸ್ವತ್ತನ್ನಾಗಿ ಕೃಣ್ವಾನಃ—ಮಾಡಿಕೊಳ್ಳುತ್ತಾ । ವಧೇನ— ವಧಸಾಧನವಾದ ಆಯುಧದಿಂದ । ದಸ್ಯುಂ—ಹಿಂಸಕನಾದ ಶತ್ರುವನ್ನು । ಪ್ರ ಹಿ ಜಾತಯಸ್ವ—ಪೂರ್ಣವಾಗಿ ನಾಶಗೊಳಿಸು । ಸಹಸಸ್ಪುತ್ರ — ಶಕ್ತಿಪುತ್ರನೂ । ನೃತಮ — ಅತ್ಯುತ್ತಮನಾದ ನೇತೃವೂ ಆದ । ಅಗ್ನೇ — ಎಲೈ ಅಗ್ನಿಯೇ । ಯತ್—ಯಾವ ನೀನು । ದೇವಾನ್—ದೇವತೆಗಳನ್ನು । ಪಿಪರ್ಷಿ—ತೃಪ್ತಿಪಡಿಸುತ್ತೀಯೋ । ಸಃ— ಅಂತಹ ನೀನು । ವಾಜೇ— ಯುದ್ಧದಲ್ಲಿ । ಅಸ್ಮಾನ್—ನಮ್ಮನ್ನು । ಪಾಹಿ—ರಕ್ಷಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಶತ್ರುವಿನ ಸಂಪತ್ತುಗಳನ್ನು ನಿನ್ನ ಸ್ವಂತ ಸ್ವತ್ತುಗಳನ್ನಾಗಿ ಮಾಡಿಕೊಳ್ಳುತ್ತಾ, ವಧಸಾಧನವಾದ ಆಯುಧದಿಂದ ಹಿಂಸಕನಾದ ಶತ್ರುವನ್ನು ಪೂರ್ಣವಾಗಿ ನಾಶಗೊಳಿಸು. ಶಕ್ತಿಪುತ್ರನೂ, ಅತ್ಯುತ್ತಮನಾದ ನೇತೃವೂ ಆದ ಎಲೈ ಅಗ್ನಿಯೇ, ದೇವತೆಗಳನ್ನು ತೃಪ್ತಿಪಡಿಸುವ ನೀನು ನಮ್ಮನ್ನೂ ಅದೇ ಕಾರಣದಿಂದಲೇ ಯುದ್ಧದಲ್ಲಿ ರಕ್ಷಿಸು.

## English Translation.

Demolish, Agni, with your weapon, the Dasyu, appropriating the sustenance to your own person ; and inasmuch, son of strength, as you satisfy the gods, so Agni, chief of leaders, protect us in battle.

॥ ಸಂಹಿತಾಪಾಠಃ ॥

ವಯಂ ತೇ ಅಗ್ನ ಉಕ್ಥೈರ್ವಿಧೇಮ ವಯಂ ಹವ್ಯೈಃ ಪಾವಕ ಭದ್ರಶೋಚೇ ।
ಅಸ್ಮೇ ರಯಿಂ ವಿಶ್ವವಾರಂ ಸಮಿನ್ವಾಸ್ಮೇ ವಿಶ್ವಾನಿ ದ್ರವಿಣಾನಿ ಧೇಹಿ ॥ ೭ ॥

॥ ಪದಪಾಠಃ ॥

ವಯಂ । ತೇ । ಅಗ್ನೇ । ಉಕ್ಥೈಃ । ವಿಧೇಮ । ವಯಂ । ಹವ್ಯೈಃ । ಪಾವಕ । ಭದ್ರsಶೋಚೇ ।

ಅಸ್ಮೇ ಇತಿ । ರಯಿಂ । ವಿಶ್ವsವಾರಂ । ಸಂ । ಇನ್ವ । ಅಸ್ಮೇ ಇತಿ । ವಿಶ್ವಾನಿ । ದ್ರವಿಣಾನಿ । ಧೇಹಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತೇ ತ್ವಾಂ ವಯಮುಕ್ಥೈಃ ಶಸ್ತ್ರೈರ್ವಿಧೇಮ । ಪರಿಚರೇಮ । ವಯಂ ಹವ್ಯೈರ್ಹವಿರ್ಭಿರ್ವಿಧೇಮ । ಪಾವಕ ಶೋಧಕ ಹೇ ಭದ್ರಶೋಚೇ ಕಲ್ಯಾಣದೀಪ್ತೇ ಅಸ್ಮೇ ಅಸ್ಮಭ್ಯಂ ವಿಶ್ವವಾರಂ ವಿಶ್ವೈರ್ವರಣೀಯಂ ರಯಿಂ ಧನಂ ಸಮಿನ್ವ । ಪ್ರಾಪಯ । ಅಸ್ಮೇ ಅಸ್ಮಭ್ಯಂ ವಿಶ್ವಾನಿ ದ್ರವಿಣಾನಿ ಧೇಹಿ । ಸ್ಥಾಪಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ವಯಂ—ನಾವು । ತೇ—ನಿನ್ನನ್ನು । ಉಕ್ಥೈಃ—ಶಸ್ತ್ರಮಂತ್ರಗಳಿಂದ । ವಿಧೇಮ—ಉಪಚರಿಸುತ್ತೇವೆ । ಪಾವಕ—ಶುದ್ಧಿಕಾರಕನೂ । ಭದ್ರಶೋಚೇ—ಮಂಗಳಕರವಾದ ಕಾಂತಿಯುಳ್ಳವನೂ ಆದ ಅಗ್ನಿಯೇ । ಹವ್ಯೈಃ—ಹವಿಸ್ಸುಗಳಿಂದಲೂ । ವಯಂ—ನಾವು (ನಿನ್ನನ್ನು ಪೂಜಿಸುತ್ತೇವೆ) । ಅಸ್ಮೇ—ನಮಗೆ । ವಿಶ್ವವಾರಂ—ಸರ್ವರಿಂದಲೂ ಅಪೇಕ್ಷಿತವಾದ । ರಯಿಂ—ಧನವನ್ನು । ಸಮಿನ್ವ—ಒದಗಿಸಿಕೊಡು । ವಿಶ್ವಾನಿ—ಸಮಸ್ತವಾದ । ದ್ರವಿಣಾನಿ—ಸಂಪತ್ತುಗಳನ್ನೂ । ಧೇಹಿ—ಕೊಡು.

॥ ಭಾವಾರ್ಥ ॥

ಶುದ್ಧಿಕಾರಕನೂ, ಮಂಗಳಕರವಾದ ಕಾಂತಿಯುಳ್ಳವನೂ ಆದ ಎಲೈ ಅಗ್ನಿಯೇ, ನಾವು ನಿನ್ನನ್ನು ಶಸ್ತ್ರಮಂತ್ರಾತ್ಮಕವಾದ ಸ್ತುತಿಯಿಂದಲೂ, ಹವಿಸ್ಸುಗಳಿಂದಲೂ ಪೂಜಿಸುತ್ತೇವೆ. ನಮಗೆ ಸರ್ವರಿಂದಲೂ ಅಪೇಕ್ಷಿತವಾದುದೂ, ಸಮಸ್ತವಾದುದೂ ಆದ ಧನಸಂಪತ್ತುಗಳನ್ನೊದಗಿಸಿಕೊಡು.

**English Translation.**

We worship you, Agni, with hymns; we (worship you), purifier, and of auspicious lustre, with oblations: bestow upon us all desired riches; bestow upon us all sorts of wealth.

---

॥ ಸಂಹಿತಾಪಾಠಃ ॥

ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ ।

ವಯಂ ದೇವೇಷು ಸುಕೃತಃ ಸ್ಯಾಮ ಶರ್ಮಣಾ ನಸ್ತ್ರಿವರೂಥೇನ ಪಾಹಿ ॥

॥ ಪದಪಾಠಃ ॥

ಅಸ್ಮಾಕಂ । ಅಗ್ನೇ । ಅಧ್ವರಂ । ಜುಷಸ್ವ । ಸಹಸಃ । ಸೂನೋ ಇತಿ । ತ್ರಿಽಸಧಸ್ಥ । ಹವ್ಯಂ ।

ವಯಂ । ದೇವೇಷು । ಸುಽಕೃತಃ । ಸ್ಯಾಮ । ಶರ್ಮಣಾ । ನಃ । ತ್ರಿಽವರೂಥೇನ । ಪಾಹಿ ॥ ೮ ॥

ಹೇ ಅಗ್ನೇ ಅಸ್ಮಾಕಮಧ್ವರಂ ಜುಷಸ್ವ । ಸೇವಸ್ವ । ಹೇ ಸಹಸಃ ಸೂನೋ ಹೇ ಬಲಸ್ಯ ಪುತ್ರ ತ್ರಿಷಧಸ್ಥ ತ್ರಿಸು ಕ್ಷಿತ್ಯಾದಿಷು ಸ್ಥಾನೇಷು ಸ್ಥಿತ ಹವ್ಯಂ ಹವಿರ್ಜುಷಸ್ವ । ಯದ್ವಾ । ಅಧ್ವರಂ ಹವಿರಿತಿ ಯೋಜ್ಯಂ । ಅಹಿಂಸಿತಂ ಹವಿರಿತ್ಯರ್ಥಃ । ವಯಂ ಯಜಮಾನಾ ದೇವೇಷು ಮಧ್ಯೇ ಸುಕೃತಃ ಶೋಭನಾಪೂರ್ವಕರ್ತಾರಃ ಸ್ಯಾಮ ಭವೇಮ। ತ್ರಿವರೂಥೇನ ವಾಚಿಕಾದಿಭೇದೇನ ತ್ರಿಧಾ ವರಣೀಯೇನ ಶರ್ಮಣಾ ಸುಖೇನ ತ್ರಿಚ್ಛದಿಷ್ಕೇಣ ಗೃಹೇಣ ವಾ ನಃ ಪಾಹಿ । ರಕ್ಷ ॥

॥ ಪ್ರತಿಪದಾರ್ಥ ॥

ಸಹಸಃ ಸೂನೋ—ಶಕ್ತಿಪುತ್ರನೂ । ತ್ರಿಷದಸ್ಥ—ಕ್ಷಿತ್ಯಾದಿ ಮೂರು ಸ್ಥಾನಗಳಲ್ಲಿರುವವನೂ ಆದ । ಅಗ್ನೇ—ಎಲೈ ಅಗ್ನಿಯೇ। ಅಸ್ಮಾಕಂ—ನಮ್ಮ। ಅಧ್ವರಂ—ಯಜ್ಞವನ್ನೂ। ಹವ್ಯಂ—ಹವಿಸ್ಸನ್ನೂ। ಜುಷಸ್ವ—ಸೇವಿಸು । ವಯಂ—ಯಜ್ಞಕರ್ತರಾದ ನಾವು । ದೇವೇಷು—ದೇವತೆಗಳ ಮಧ್ಯದಲ್ಲಿ । ಸುಕೃತಃ—ಶ್ರೇಷ್ಠವಾದ ಕರ್ಮಕರ್ತರಾಗಿ । ಸ್ಯಾಮ—ಆಗುವಂತೆ ಅನುಗ್ರಹಿಸು । ತ್ರಿವರೂಥೇನ—ಮೂರುಪ್ರಕಾರಗಳಾದ । ಶರ್ಮಣಾ—ಸುಖಸಾಧನಗಳಾದ ರಕ್ಷಣೆಗಳಿಂದ ಅಥವಾ ಗೃಹದಿಂದ । ನಃ—ನಮ್ಮನ್ನು । ಪಾಹಿ—ರಕ್ಷಿಸು.

॥ ಭಾವಾರ್ಥ ॥

ಶಕ್ತಿಪುತ್ರನೂ, ಕ್ಷಿತ್ಯಾದಿಸ್ಥಾನತ್ರಯದಲ್ಲಿರುವವನೂ ಆದ ಎಲೈಅಗ್ನಿಯೇ, ನಮ್ಮ ಯಜ್ಞವನ್ನೂ, ಹವಿಸ್ಸನ್ನೂ ಸ್ವೀಕರಿಸು ಮತ್ತು ಸೇವಿಸು. ಯಜ್ಞಕರ್ತರಾದ ನಾವು ದೇವತೆಗಳ ಮಧ್ಯದಲ್ಲಿ ಶ್ರೇಷ್ಠವಾದ ಕರ್ಮಕರ್ತರಾಗಿರುವಂತೆ ಅನುಗ್ರಹಿಸು. ಮೂರುವಿಧವಾದವೂ, ಸುಖಸಾಧನವೂ ಆದ ರಕ್ಷಣೆಗಳಿಂದ ನಮ್ಮನ್ನು ರಕ್ಷಿಸು.

## English Translation.

Aceept, Agni, our sacrifice : son of strength, the abider in the three regions, (accept our) oblation : may we be (regarded) amongst the gods as doers of good : cherish us with triply-protected felicity.

॥ ವಿಶೇಷವಿಷಯಗಳು ॥

ತ್ರಿಷಧಸ್ಥ— ಮೂರು ಸ್ಥಾನಗಳಲ್ಲಿರುವ ಎಲೈ ಅಗ್ನಿಯೇ ಎಂದು ಅಗ್ನಿಯನ್ನು ತ್ರಿಷಧಸ್ಥಶಬ್ದದಿಂದ ಸಂಬೋಧಿಸಿದೆ. ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬಿವೇ ಮೂರು ಸ್ಥಾನಗಳು. ಅಗ್ನಿಯು ಪಾರ್ಥಿವಾಗ್ನಿರೂಪದಿಂದ (ಯಜ್ಞಾಗ್ನಿ ಅಥವಾ ಗೃಹ್ಯಾಗ್ನಿ) ಪೃಥಿವಿಯಲ್ಲಿಯೂ, ವೈದ್ಯುತಾಗ್ನಿರೂಪದಿಂದ (ಮಿಂಚು) ಅಂತರಿಕ್ಷದಲ್ಲಿಯೂ, ಆದಿತ್ಯರೂಪದಿಂದ ಸ್ವರ್ಗಸ್ಥಾನದಲ್ಲಿಯೂ ಇರುವನು ಎಂದು ತ್ರಿಷಧಸ್ಥ ಶಬ್ದದ ಮುಖ್ಯಾರ್ಥವು.

ಅಧ್ವರಂ ಹವಿಃ— ಅಧ್ವರಂ ಹವಿರಿತಿಯೋಜ್ಯಂ । ಅಹಿಂಸಿತಂ ಹವಿರಿತ್ಯರ್ಥಃ । ಇಲ್ಲಿ ಅಧ್ವರಂ ಎಂಬ ಶಬ್ದವನ್ನು ಹವಿಃ ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಉಪಯೋಗಿಸಬೇಕೆಂದು ಭಾಷ್ಯಕಾರರ ವಿವರಣೆಯಿರುವುದು. ಧ್ವರತಿರ್ಹಿಂಸಾಕರ್ಮಾ—ಧ್ವರವೆಂದರೆ ಹಿಂಸೆಯೆಂದೂ, ಅಧ್ವರವೆಂದರೆ ಹಿಂಸಾರಹಿತವಾದ ಎಂದೂ ಯಾಸ್ಕರ ನಿರ್ವಚನವಿದೆ. ಆದುದರಿಂದ ಇಲ್ಲಿ ಅಧ್ವರಂ ಹವಿಃ ಎಂದರೆ ಹಿಂಸಾರಹಿತವಾದ ಹವಿಸ್ಸು ಎಂದರ್ಥವು. ಹಿಂಸಾರಹಿತವಾದ ಹವಿಸ್ಸೆಂದರೆ—ಪ್ರಾಣಿವಧೆ ಮೊದಲಾದ ಪಶುಹೋಮವಲ್ಲ. ಆಜ್ಯ, ಅನ್ನ ಮೊದಲಾದ ಪ್ರಾಣಿಹಿಂಸೆಯಿಲ್ಲದೆ ದೊರೆಯುವ ಹೋಮದ್ರವ್ಯಗಳು ಎಂದಭಿಪ್ರಾಯವು.

ತ್ರಿವರೂಥೇನ—ವಾಚಿಕಾದಿಭೇದೇನ ತ್ರಿಧಾ ವರಣೀಯೇನ । ಕಾಯಿಕ, ವಾಚಿಕ, ಮಾನಸಿಕ ಎಂಬ ಮೂರುವಿಧವಾದ ಎಂದರ್ಥವು.

॥ ಸಂಹಿತಾಪಾಠಃ ॥

ವಿಶ್ವಾನಿ ನೋ ದುರ್ಗಹಾ ಜಾತವೇದಃ ಸಿಂಧುಂ ನ ನಾವಾ ದುರಿತಾತಿ ಪರ್ಷಿ ।
ಅಗ್ನೇ ಅತ್ರಿವನ್ನಮಸಾ ಗೃಣಾನೋಽಸ್ಮಾಕಂ ಬೋಧ್ಯವಿತಾ ತನೂನಾಂ ॥

॥ ಪದಪಾಠಃ ॥

ವಿಶ್ವಾನಿ । ನಃ । ದುಃಽಗಹಾ । ಜಾತಽವೇದಃ । ಸಿಂಧುಂ । ನ । ನಾವಾ । ದುಃಽಇತಾ । ಅತಿ । ಪರ್ಷಿ ।
ಅಗ್ನೇ । ಅತ್ರಿಽವತ್ । ನಮಸಾ । ಗೃಣಾನಃ । ಅಸ್ಮಾಕಂ । ಬೋಧಿ । ಅವಿತಾ । ತನೂನಾಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ನೋಽಸ್ಮಾಕಂ ದುರ್ಗಹಾ ದುಃಖೇನ ಗಾಹ್ಯಾನಿ ದುಃಖೇನ ಭೋಗ್ಯಾನಿ ವಿಶ್ವಾನಿ ದುರಿತಾನ್ಯತಿ ಪರ್ಷಿ । ಅತಿಪಾರಯ । ಸಿಂಧುಂ ನ ನಾವಾ ನದೀಂ ನಾವಿಕೋ ಯಥಾ ತದ್ವತ್ । ಹೇ ಅಗ್ನೇ ಅತ್ರಿವತ್ ಅತ್ರೇರ್ಯಥಾ ತಥಾಸ್ಮಾಕಂ ನಮಸಾ ಸ್ತೋತ್ರೇಣ ಗೃಣಾನಃ ಸ್ತೂಯಮಾನಃ ಸನ್ ಅಸ್ಮಾಕಂ ತನೂನಾಮವಿತಾ ರಕ್ಷಕೋ ಬೋಧಿ । ಬುಧ್ಯಸ್ವ ॥

॥ ಪ್ರತಿಪದಾರ್ಥ ॥

ಜಾತವೇದಃ—ಜಾತವೇದೋರೂಪನಾದ ಎಲೈ ಅಗ್ನಿಯೇ । ನಃ—ನಮ್ಮನ್ನು । ದುರ್ಗಹಾ—ದುಃಖದಿಂದ ಅನುಭವಿಸುತ್ತಿರುವ । ವಿಶ್ವಾನಿ ದುರಿತಾ—ಸಮಸ್ತವಾದ ಪಾಪಗಳಿಂದಲೂ । ನಾವಾ—ದೋಣಿಯಿಂದ । ಸಿಂಧುಂ ನ—ನದಿಯನ್ನು ಸುಖವಾಗಿ ದಾಟುವಂತೆ । ಅತಿ ಪರ್ಷಿ—ಪೂರ್ಣವಾಗಿ ದಾಟಿಸಿ ಕೊನೆಗಾಣಿಸು

ಅಗ್ನೇ—ಎಲೈ ಅಗ್ನಿಯೇ । ಅತ್ರಿವತ್—ಅತ್ರಿಋಷಿಯ ಸ್ತುತಿಯಿಂದ ತೃಪ್ತನಾದಂತೆ । ನಮಸಾ—ನಮ್ಮ ಸ್ತುತಿಗಳಿಂದ । ಗೃಣಾನಃ—ಪ್ರಶಂಸಿತನಾಗಿ । ಅಸ್ಮಾಕಂ—ನಮ್ಮ । ತನೂನಾಂ—ಶರೀರಗಳಿಗೆ । ಅವಿತಾ—ರಕ್ಷಕನಾಗಿರುವಂತೆ । ಬೋಧಿ—ತಿಳಿ.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ದೋಣಿಯಿಂದ ನದಿಯನ್ನು ಸುಖವಾಗಿ ದಾಟುವಂತೆ, ದುಃಖದಿಂದ ಅನುಭವಿಸುತ್ತಿರುವ ನಮ್ಮ ಸಮಸ್ತ ಪಾಪಗಳಿಂದಲೂ ನಮ್ಮನ್ನು ದಾಟಿಸಿ ಅವುಗಳಿಂದ ಕೊನೆಗಾಣಿಸು. ಎಲೈ ಅಗ್ನಿಯೇ, ಅತ್ರಿಋಷಿಯ ಸ್ತುತಿಯಿಂದ ತೃಪ್ತನಾದಂತೆ, ನಮ್ಮ ಸ್ತುತಿಗಳಿಂದಲೂ ಪ್ರಶಂಸಿತನಾಗಿ ತೃಪ್ತಿಯನ್ನು ಹೊಂದಿ ನಮ್ಮ ಶರೀರಗಳಿಗೆ ರಕ್ಷಕನಾಗಿರಬೇಕೆಂದು ತಿಳಿ.

## English Translation.

You convey us, Jatavedas, across all intolerable evils as (people are carried) over a river by a boat : Agni, you are glorified by us with reverence, such as (that shewn) by Atri; know yourself the protector of our persons.

॥ ವಿಶೇಷವಿಷಯಗಳು ॥

ದುರ್ಗಹಾ—ದುಃಖೇನ ಗಾಹ್ಯಾನಿ, ದುಃಖೇನ ಭೋಗ್ಯಾನಿ । ದುಃಖದಿಂದ ಅನುಭವಿಸಲು ಸಾಧ್ಯವಾದ ಎಂದರೆ ದುಃಖಗಳಿಂದ ತುಂಬಿರುವ ಕಷ್ಟಪರಂಪರೆಗಳು ಎಂದರ್ಥ.

ದುರಿತಾನಿ—ಪಾಪಗಳು, ಕಷ್ಟಗಳು, ಕ್ಲೇಶಗಳು ಇತ್ಯಾದಿ.

ಅತ್ರಿವತ್—ಇಲ್ಲಿ ಈ ಸೂಕ್ತದ ದ್ರಷ್ಟೃವಾದ ವಸುಶ್ರುತಋಷಿಯು ಅತ್ರಿಗೋತ್ರೋದ್ಭವನಾದುದರಿಂದ ತನ್ನ ವಂಶದ ಮೂಲಪುರುಷನಾದ ಅತ್ರಿಯ ಹೆಸರನ್ನು ಪ್ರಸ್ತಾಪಿಸಿ ಹಿಂದೆ ಅತ್ರಿಋಷಿಯ ವಿಷಯದಲ್ಲಿ ಅಗ್ನಿಯು ಯಾವರೀತಿ ಅಭಿಮಾನದಿಂದ ರಕ್ಷಕನಾಗಿದ್ದನೋ ಅದರಂತೆ ತನ್ನ ವಿಷಯದಲ್ಲಿಯೂ ಇರಬೇಕೆಂದು ಪ್ರಾರ್ಥಿಸಿದಾನೆ.



॥ ಸಂಹಿತಾಪಾಠಃ ॥

ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಮರ್ತ್ಯಂ ಮರ್ತ್ಯೋ ಜೋಹವೀಮಿ ।
ಜಾತವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ ೧೦ ॥

॥ ಪದಪಾಠಃ ॥

ಯಃ । ತ್ವಾ । ಹೃದಾ । ಕೀರಿಣಾ । ಮನ್ಯಮಾನಃ । ಅಮರ್ತ್ಯಂ । ಮರ್ತ್ಯಃ । ಜೋಹವೀಮಿ ।

ಜಾತಽವೇದಃ । ಯಶಃ । ಅಸ್ಮಾಸು । ಧೇಹಿ । ಪ್ರಽಜಾಭಿಃ । ಅಗ್ನೇ । ಅಮೃತಽತ್ವಂ । ಅಶ್ಯಾಂ ॥ ೧೦ ॥

॥ ಸಾಯಣಭಾಷ್ಯಂ ॥

ಪುತ್ರಕಾಮೇಷ್ಟ್ಯಾಂ ಯಸ್ತ್ವೇತ್ಯೇಷಾ ಪ್ರಧಾನಸ್ಯ ಯಾಜ್ಯಾ । ಸೂತ್ರಿತಂ ಚ । ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಗ್ನಿಸ್ತುವಿಶ್ರವಸ್ತಮಂ । ಆ. ೨-೧೦ । ಇತಿ ॥

ಯೋ ಮರ್ತ್ಯೋ ಮರಣಧರ್ಮಾಹಮಮರ್ತ್ಯಮನಾಶಂ ತ್ವಾ ತ್ವಾಂ ಕೀರಿಣಾ ಸ್ತುತ್ಯಾದಿಷು ವಿಕ್ಷಿಪ್ತೇನ ಹೃದಾ ಹೃದಯೇನ ಯುಕ್ತೋ ಮನ್ಯಮಾನಃ ಸ್ತುವನ್ ಜೋಹವೀಮಿ । ಅತ್ಯರ್ಥಮಾಹ್ವಯಾಮಿ । ಯದ್ವಾ । ಸ್ತೋತೃವಾಚಕೇನ ಕೀರಿಣಾಶಬ್ದೇನ ಸ್ತುತಿರುಪಲಕ್ಷ್ಯತೇ । ಸ್ತುತಿಯುಕ್ತೇನ ಮನಸಾ ತ್ವಾಂ ಮನ್ಯಮಾನೋ ಜೋಹವೀಮಿ । ಹೇ ಜಾತವೇದೋ ಯಶೋ ಧನಂ ಪ್ರಜಾಂ ವಾಸ್ಮಾಸು ಧೇಹಿ । ಪ್ರಜಾಭಿಸ್ತ್ವದ್ದತ್ತಾಭಿರ್ಹೇ ಅಗ್ನೇಽಹಮಮೃತತ್ವಂ ಸಂತತ್ಯವಿಚ್ಛೇದಲಕ್ಷಣಮಶ್ಯಾಂ । ಪ್ರಾಪ್ನುಯಾಂ । ಪ್ರಜಾಮನು ಪ್ರಜಾಯಸೇ ತದು ತೇ ಮರ್ತ್ಯಾಮೃತಂ । ತೈ. ಬ್ರಾ. ೧-೫-೫-೬ । ಇತಿ ಹಿ ಶ್ರುತಿಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಮರ್ತ್ಯಃ—ಮರಣಧರ್ಮವುಳ್ಳ । ಯಃ—ಯಾವ ನಾನು । ಅಮರ್ತ್ಯಂ—ಮರಣರಹಿತನಾದ । ತ್ವಾ—ನಿನ್ನನ್ನು । ಕೀರಿಣಾ—ಸ್ತೋತ್ರಯುಕ್ತವಾದ । ಹೃದಾ—ಹೃದಯದಿಂದ । ಮನ್ಯಮಾನಃ—ಸ್ತುತಿಸುತ್ತಾ । ಜೋಹವೀಮಿ—(ಸಹಾಯಕ್ಕಾಗಿ) ಕರೆಯುತ್ತೇನೆಯೋ । (ಆದುದರಿಂದಲೇ) । ಜಾತವೇದಃ—ಜಾತಪ್ರಜ್ಞನಾದ ಎಲೈ ಅಗ್ನಿಯೇ । ಅಸ್ಮಾಸು—ನಮ್ಮಲ್ಲಿ । ಯಶಃ—ಧನವನ್ನು । ಧೇಹಿ—ಇಡು । ಅಗ್ನೇ—ಎಲೈ ಅಗ್ನಿಯೇ । ಪ್ರಜಾಭಿಃ—(ನಿನ್ನಿಂದ ದತ್ತವಾದ) ಪ್ರಜೆಗಳೊಡನೆ ಕೂಡಿದ ನಾನು । ಅಮೃತತ್ವಂ—ಮರಣರಾಹಿತ್ಯವನ್ನು । ಅಶ್ಯಾಂ—ಹೊಂದುವಂತಾಗಲಿ.

॥ ಭಾವಾರ್ಥ ॥

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಮರಣಧರ್ಮವುಳ್ಳ ನಾನು ಮರಣರಹಿತನಾದ ನಿನ್ನನ್ನು ಸ್ತುತಿಯುಕ್ತವಾದ ಹೃದಯದಿಂದ ಸ್ತುತಿಸುತ್ತಾ ನನ್ನ ರಕ್ಷಣೆಗಾಗಿ ಕರೆಯುತ್ತೇನೆ. ಆದುದರಿಂದ ನೀನು ಅನುಗ್ರಹಿಸಿ ನಮ್ಮಲ್ಲಿ ಸಂಪತ್ತನ್ನಿಡು. ನಿನ್ನಿಂದ ದತ್ತವಾದ ಪ್ರಜೆಗಳೊಡನೆ ಕೂಡಿದ ನಾನು ಮರಣರಾಹಿತ್ಯವನ್ನು ಹೊಂದುವಂತೆ ಅನುಗ್ರಹಿಸು.

## English Translation.

Inasmuch as I who am a mortal earnestly invoke you who are an immortal, praising you with a devoted heart ; therefore, Jatavedas, grant us food, and may I obtain immortality through my posterity.

|| ವಿಶೇಷವಿಷಯಗಳು ||

ಪುತ್ರಕಾಮೇಷ್ಟಿಯಲ್ಲಿ ಯಸ್ತ್ವಾ ಹೃದಾ ಎಂಬ ಈ ಋಕ್ಕನ್ನು ಪ್ರಧಾನ ಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಗ್ನಿಸ್ತ್ರಿವಿಶ್ರವಸ್ತಮಂ ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು.

ಈ ಋಕ್ಕಿನಲ್ಲಿ ಋಷಿಯು ತನ್ನ ಅಲ್ಪತ್ವವನ್ನೂ. ಅಗ್ನಿಯ ಮಹತ್ತ್ವವನ್ನೂ ತೋರಿಸುವುದಕ್ಕಾಗಿ ತನ್ನನ್ನು ಮರ್ತ್ಯಶಬ್ದದಿಂದಲೂ, ಅಗ್ನಿಯನ್ನು ಅಮರ್ತ್ಯಶಬ್ದದಿಂದಲೂ ನಿರ್ದೇಶಿಸಿದಾನೆ.

ಹೃದಾ ಕೀರಿಣಾ ಮನ್ಯಮಾನಃ ಜೋಹವೀಮಿ-- ಇಲ್ಲಿ ಕೀರಿ ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯). ಹೃದಾ ಕೀರಿಣಾ ಎಂಬ ಶಬ್ದಗಳಿಗೆ ಅಗ್ನಿಯ ಸ್ತುತಿಯಲ್ಲಿಯೇ ಆಸಕ್ತವಾದ ಮನಸ್ಸಿನಿಂದ ಎಂದರ್ಥವು. ಇಂತಹ ಅಗ್ನಿಯಲ್ಲಿ ನೆಟ್ಟ ಮನಸ್ಸಿನಿಂದ ಯುಕ್ತವಾದ ಸ್ತೋತ್ರಗಳಿಂದ ಸ್ತುತಿಸುತ್ತಾ ಅಗ್ನಿಯನ್ನು ಯಜ್ಞಭೂಮಿಗೆ ಆಹ್ವಾನ ಮಾಡುತ್ತೇನೆಂದು ಋಷಿಯು ಹೇಳಿದಾನೆ.

ಅಗ್ನೇ ಪ್ರಜಾಭಿಃ ಅಮೃತತ್ವಂ ಅಶ್ಯಾಂ—ಹೇ ಅಗ್ನೇ ತ್ವದ್ದತ್ತಾಭಿಃ ಪ್ರಜಾಭಿಃ ಸಂತತ್ಯವಿಚ್ಛೇದಲಕ್ಷಣಂ ಪ್ರಾಪ್ನುಯಾಂ | ಎಲೈ ಅಗ್ನಿಯೇ, ನಿನ್ನ ಅನುಗ್ರಹದಿಂದ ಲಬ್ಧವಾದ ಪುತ್ರಪೌತ್ರಾದಿ ಸಂತತಿಯನ್ನು ವಿಚ್ಛಿನ್ನರಹಿತವಾಗಿ ನಾನು ಪಡೆಯುವಂತಾಗಲಿ; ಈ ವಿಷಯದಲ್ಲಿ ಭಾಷ್ಯಕಾರರು—

ಅಮೃತಂ ಮರ್ತ್ಯೇಭ್ಯಃ | ಪ್ರಜಾಮನು ಪ್ರಜಾಯಸೇ | ತದು ತೇ ಮರ್ತ್ಯಾಮೃತಂ |
(ತೈ. ಬ್ರಾ. ೧-೫-೫-೬)

ಎಂಬ ತೈತ್ತಿರೀಯಬ್ರಾಹ್ಮಣವಾಕ್ಯವನ್ನು ಉದಾಹರಿಸಿದ್ದಾರೆ. ಇಲ್ಲಿ ಪ್ರಜಾಭಿಃ ಅಮೃತತ್ತ್ವಂ ಎಂಬ ಶಬ್ದಗಳಿಗೆ–ತಂದೆಗೆ ಪುತ್ರ, ಪುತ್ರನಿಗೆ ಪೌತ್ರ ಇತ್ಯಾದಿಯಾಗಿ ವಂಶಪರಂಪರೆಯು ಅವಿಚ್ಛಿನ್ನವಾಗಿ ನಡೆದುಬರುವುದೆಂಬ ಅರ್ಥ ವಿವರಣೆ ಮಾಡಿದ್ದಾರೆ. ಯಜ್ಞಮಾಡುವ ಯಜಮಾನನು ಅಥವಾ ಮಂತ್ರದ್ರಷ್ಟೃವಾದ ಋಷಿಯು ಅಗ್ನಿಯ ಅನುಗ್ರಹದಿಂದ ತನ್ನ ವಂಶಪರಂಪರೆಯು ಅವಿಚ್ಛಿನ್ನವಾಗಿ ನಡೆದುಬರುವಂತಾಗಲಿ ಎಂದು ಅಗ್ನಿಯನ್ನು ಪ್ರಾರ್ಥಿಸಿದಾನೆ.

|| ಸಂಹಿತಾಪಾಠಃ ||

ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಃ ಸ್ಯೋನಂ |
ಅಶ್ವಿನಂ ಸ ಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ||೧೧||

|| ಪದಪಾಠಃ ||

ಯಸ್ಮೈ | ತ್ವಂ | ಸುಽಕೃತೇ | ಜಾತಽವೇದಃ | ಊಂ ಇತಿ | ಲೋಕಂ | ಅಗ್ನೇ | ಕೃಣವಃ | ಸ್ಯೋನಂ |
ಅಶ್ವಿನಂ | ಸಃ | ಪುತ್ರಿಣಂ | ವೀರಽವಂತಂ | ಗೋಽಮಂತಂ | ರಯಿಂ | ನಶತೇ | ಸ್ವಸ್ತಿ || ೧೧ ||

॥ ಸಾಯಣಭಾಷ್ಯಂ ॥

ತಸ್ಯಾಮೇವ ಪುತ್ರಕಾಮೇಷ್ಟ್ಯಾಂ ಯಸ್ಮೈ ತ್ವಮಿತ್ಯೇಷಾಗ್ನೇಃ ಪುತ್ರವತೋಽನುವಾಕ್ಯಾ। ಯಸ್ಮೈ ತ್ವಂ ಸುಕೃತೇ ಜಾತವೇದೋ ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನಃ। ಆ. ೨-೧೦। ಇತಿ ಹಿ ಸೂತ್ರಿತಂ ॥

ಹೇ ಜಾತವೇದೋಽಗ್ನೇ ತ್ವಂ ಯಸ್ಮೈ ಸುಕೃತೇ ಸುಕರ್ಮಣೇ ಯಜಮಾನಾಯ। ಉ ಇತಿ ಪೂರಣಃ। ಲೋಕಂ ಸ್ಯೋನಂ ಸುಖಕರಂ ಕೃಣವಃ। ಅಕರೋಃ। ಯದ್ವಾ। ಲೋಕಮಾಲೋಕೇನ ಸ್ಯೋನಂ ಕೃಣವಃ। ಅನುಗ್ರಹೇಣ ಕುರ್ವಿತ್ಯರ್ಥಃ। ಸ ಯಜಮಾನೋಽಶ್ವಿನಂ ಬಹ್ವಶ್ವೋಪೇತಂ ಪುತ್ರಿಣಂ ಬಹುಪುತ್ರೋಪೇತಂ ವೀರವಂತಂ ವೀರೈರ್ವೀರ್ಯೇಣ ವೋಪೇತಂ ಗೋಮಂತಂ ರಯಿಂ ಧನಂ ನಶತೇ। ಪ್ರಾಪ್ನೋತಿ। ಸ್ವಸ್ತ್ಯವಿನಶ್ವರಂ ॥

॥ ಪ್ರತಿಪದಾರ್ಥ ॥

ಜಾತವೇದಃ—ಜಾತವೇದೋರೂಪನಾದ। ಅಗ್ನೇ—ಎಲೈ ಅಗ್ನಿಯೇ। ತ್ವಂ—ನೀನು। ಯಸ್ಮೈ—ಯಾವ। ಸುಕೃತೇ—ಸತ್ಕರ್ಮಕಾರಕನಾದ ಯಜಮಾನನ ವಿಷಯದಲ್ಲಿ। ಲೋಕಂ—ನಿನ್ನ ವೀಕ್ಷಣವನ್ನು। ಸ್ಯೋನಂ—ಅನುಗ್ರಹಾತ್ಮಕವಾದುದನ್ನಾಗಿ। ಕೃಣವಃ—ಮಾಡುತ್ತೀಯೋ। ಸಃ—ಆ ಯಜಮಾನನು। ಅಶ್ವಿನಂ—ಅಶ್ವೋಪೇತವಾದುದೂ। ಪುತ್ರಿಣಂ—ಬಹುಪುತ್ರೋಪೇತವಾದುದೂ। ವೀರವಂತಂ—ಶಕ್ತಿಯುತವಾದುದೂ। ಗೋಮಂತಂ—ಗೋವುಗಳಿಂದ ಯುಕ್ತವಾದುದೂ ಆದ। ರಯಿಂ—ಧನವನ್ನು। ಸ್ವಸ್ತಿ—ನಾಶರಹಿತವಾದುದನ್ನಾಗಿ। ನಶತೇ—ಹೊಂದುತ್ತಾನೆ.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ನೀನು ಯಾವ ಸತ್ಕರ್ಮಕಾರಿಯಾದ ಯಜಮಾನನ ವಿಷಯದಲ್ಲಿ ಅನುಗ್ರಹಾತ್ಮಕವಾದ ಬುದ್ಧಿಯನ್ನು ತೋರಿಸುತ್ತಾ ನೋಡುವೆಯೋ. ಆ ಯಜಮಾನನು ಅಶ್ವೋಪೇತವಾದುದೂ, ಬಹುಪುತ್ರೋಪೇತವಾದುದೂ, ಶಕ್ತಿಯುತವಾದುಗೂ, ಗೋವುಗಳಿಂದ ಯುಕ್ತವಾದುದೂ ಆದ ಧನವನ್ನು ಹೊಂದುತ್ತಾನೆ. ಅದು ನಾಶರಹಿತವೂ, ಮಂಗಳಕಾರಿಯೂ ಆಗಿರುತ್ತದೆ.

## English Translation.

Upon whatsoever performer of good works you, Agni, who are Jatavedas, cast a favourable regard, he enjoys welfare, and riches comprehending horses, cattle, sons, and male descendants.

॥ ವಿಶೇಷವಿಷಯಗಳು ॥

ಉ—ಉ ಎಂಬ ಶಬ್ದವು ಪಾದಪೂರಣಕ್ಕಾಗಿ ಎಂದರೆ ಒಂದು ಋಕ್ಕಿನ ಪಾದದಲ್ಲಿ ನಿರ್ದಿಷ್ಟಸಂಖ್ಯೆಯ ಅಕ್ಷರಗಳಲ್ಲಿ ಒಂದು ಅಕ್ಷರವು ಕಮ್ಮಿಯಾಗಿದ್ದಾಗ ಅದನ್ನು ಪೂರ್ತಿಮಾಡುವುದಕ್ಕಾಗಿ ಉ ಎಂಬ ಶಬ್ದವನ್ನು ಉಪಯೋಗಿಸುವರು ಎಂದು—ಅಥಾಪಿ ಪದಪೂರಣ ಇದಮು ತದು (ನಿ. ೧-೫) ಎಂದು ಯಾಸ್ಕರು ನಿರ್ವಚನವನ್ನು ಹೇಳಿದಾರೆ. ಇಂತಹ ಸಂದರ್ಭದಲ್ಲಿ ಈ ಶಬ್ದಕ್ಕೆ ನಿರ್ದಿಷ್ಟವಾದ ಯಾವ ಅರ್ಥವೂ ಇರುವುದಿಲ್ಲ.

**ಸ್ಯೋನಂ—ಸ್ಯೋನಂ** ಎಂಬ ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ ಪಠಿತವಾಗಿರುವುದು. (ನಿ. ೩-೧೩) ಇಲ್ಲಿ ಋಷಿಯು ಯಜ್ಞಮಾಡುವ ಯಜಮಾನನಿಗೆ ಅಗ್ನಿಯು ಸುಖವನ್ನುಂಟುಮಾಡುವುದಲ್ಲದೆ, ಅವನಿಗೆ ಅಶ್ವಗಳನ್ನೂ, ಉತ್ತಮವಾದ ಎಂದರೆ ಪರಾಕ್ರಮವುಳ್ಳ ಪುತ್ರಸಂತತಿಯನ್ನೂ, ಗೋವುಗಳನ್ನೂ, ಧನವನ್ನೂ ಅನುಗ್ರಹಮಾಡಿ ಕೊಡಬೇಕೆಂದು ಪ್ರಾರ್ಥಿಸಿದಾನೆ.

**ಸ್ವಸ್ತಿ—ಸ್ವಸ್ತಿ** ಶಬ್ದಕ್ಕೆ ಯಾಸ್ಕರು—**ಸ್ವಸ್ತೀತ್ಯವಿನಾಶಿನಾಮ । ಅಸ್ತಿರಭಿಪೂಜಿತಃ ಸು ಅಸ್ತೀತಿ ।** (ನಿ. ೩-೨೧) ಎಂದು ನಿರ್ವಚನವನ್ನು ಹೇಳಿದಾರೆ. ಸ್ವಸ್ತಿ ಶಬ್ದವು ಸು+ಅಸ್ತಿ ಎಂಬ ಶಬ್ದಗಳು ಸೇರಿ ನಿಷ್ಪನ್ನವಾಗಿದೆ. ಈ ಶಬ್ದಕ್ಕೆ ಚೆನ್ನಾಗಿ ಪೂಜಿಸಲ್ಪಡುವವನು ಎಂದರ್ಥವು. ಆದರೆ, ಪ್ರಯೋಗದಲ್ಲಿ ಈ ಶಬ್ದಕ್ಕೆ ಅವಿನಾಶಿನಾಮ—ನಾಶವಿಲ್ಲದ, ಯಾವಾಗಲೂ ಸುರಕ್ಷಿತವಾಗಿರುವ ಎಂಬರ್ಥವಿರುವುದು. ಇಲ್ಲಿ ಋಷಿಯು ತನಗೆ ಯಾವಾಗಲೂ ನಾಶವಾಗದಿರತಕ್ಕ ಧನಾದಿಗಳನ್ನು ಕೊಡಬೇಕೆಂದು ಅಗ್ನಿಯನ್ನು ಪ್ರಾರ್ಥಿಸುವಾಗ ರಯಿಂ ಸ್ವಸ್ತಿ ಎಂಬ ಶಬ್ದಪ್ರಯೋಗವನ್ನು ಮಾಡಿರುವನು.



# ಐದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸುಸಮಿದ್ಧಾಯೇತ್ಯೇಕಾದಶರ್ಚಂ ಪಂಚಮಂ ಸೂಕ್ತಮಾತ್ರೇಯಸ್ಯ ವಸುಶ್ರುತಸ್ಯಾರ್ಷಂ ಗಾಯತ್ರಮಿಧ್ಮಾದ್ಯುಕ್ತದೇವತಾಕಂ । ಆಪ್ರಮಿತ್ಯುಕ್ತತ್ವಾತ್ತನೂನಪಾದ್ವರ್ಜಿತಂ । ಅನುಕ್ರ. ಮ. ೧. ಸೂ. ೧೩ । ಸುಸಮಿದ್ಧಾಯಾಪ್ರಂ ಗಾಯತ್ರಮಿತ್ಯನುಕ್ರಮಣಿಕಾ । ಅತ್ರೀಣಾಮಿದಮಾಪ್ರೀಸೂಕ್ತಂ । ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ । ಆ. ೩-೨ । ಇತ್ಯುಕ್ತತ್ವಾತ್ ॥**

ಅನುವಾದವು—**ಸುಸಮಿದ್ಧಾಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರೋದ್ಭವನಾದ ವಸುಶ್ರುತನೆಂಬುವನು ಋಷಿಯು; ಆಪ್ರೀ ಸೂಕ್ತಗಳಿಗಿರುವಂತೆ ಈ ಸೂಕ್ತದ ಹನ್ನೊಂದು ಋಕ್ಕುಗಳಿಗೂ ಇಧ್ಮಾದಿ ಹನ್ನೊಂದುಮಂದಿ ದೇವತೆಗಳು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ (ಅನು. ೧-೧೩) ಈ ಸೂಕ್ತದ ವಿಚಾರದಲ್ಲಿ ಆಪ್ರಂ ಎಂದು ಹೇಳುವುದರಿಂದ ತನೂನಪಾತ್ ಎಂಬ ದೇವತಾಕವಾದ ಮಂತ್ರವು ಈ ಸೂಕ್ತದಲ್ಲಿರುವುದಿಲ್ಲ. ಅದಕ್ಕೆ ಬದಲಾಗಿ ನರಾಶಂಸ ದೇವತಾಸ್ತುತಿ ಇದೆ. ಅನುಕ್ರಮಣಿಕೆಯಲ್ಲಿ—**ಸುಸಮಿದ್ಧಾಯಾಪ್ರಂ ಗಾಯತ್ರಂ** ಎಂದು ಹೇಳಿರುವುದು. ಅತ್ರಿಗೋತ್ರೋದ್ಭವರಾದವರು ಪಠಿಸಬೇಕಾದ ಆಪ್ರೀಸೂಕ್ತವಿದು. ಈ ವಿಷಯದಲ್ಲಿ **ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ** ಎಂದು ಆಶ್ವಲಾಯನಶ್ರೌತಸೂತ್ರವಿರುವುದು. (ಆ. ೩-೨)



## ಸೂಕ್ತ—೫

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೫ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ— ವಸುಶ್ರುತ ಆತ್ರೇಯಃ ॥

॥ ದೇವತಾ— ಆಪ್ರೀಸೂಕ್ತಂ ॥ ೧. ಇಧ್ಮಃ ಸಮಿದ್ಧೋಽಗ್ನಿರ್ವಾ । ೨. ನರಾಶಂಸಃ । ೩. ಇಳಃ । ೪. ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯಾಹೋತಾರಾ ಪ್ರಚೇತಸಾ । ೮. ತಿಸ್ರೋ ದೇವ್ಯಃ ಸರಸ್ವತೀ-ಳಾಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಸುಸಮಿದ್ಧಾಯ ಶೋಚಿಷೇ ಘೃತಂ ತೀವ್ರಂ ಜುಹೋತನ ।

ಅಗ್ನಯೇ ಜಾತವೇದಸೇ ॥ ೧ ॥

॥ ಪದಪಾಠಃ ॥

ಸುಽಸಮಿದ್ಧಾಯ । ಶೋಚಿಷೇ । ಘೃತಂ । ತೀವ್ರಂ । ಜುಹೋತನ ।

ಅಗ್ನಯೇ । ಜಾತಽವೇದಸೇ ॥ ೧ ॥

॥ ಸಾಯಣಭಾಷ್ಯಂ ॥

ಸುಸಮಿದ್ಧಾಯ ಸುಷ್ಠು ಸಮಿದ್ಧಾಯೈತನ್ನಾಮಕಾಯಾಗ್ನಯೇ ಶೋಚಿಷೇ ದೀಪ್ತಿಮತೇ ಘೃತಮಾಜ್ಯಂ ತೀವ್ರಂ ಪ್ರಭೂತಂ ಜುಹೋತನ ಹೇ ಋತ್ವಿಜ ಅಗ್ನಯೇಽಂಗನಾದಿಗುಣಯುಕ್ತಾಯ ಜಾತವೇದಸೇ ಜಾತಧನಾಯ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) ಸುಸಮಿದ್ಧಾಯ—ಸುಸಮಿದ್ಧರೂಪನೂ (ಅತಿಶಯವಾಗಿ ಪ್ರಜ್ವಲಿತನಾದವನೂ)। ಜಾತವೇದಸೇ—ಜಾತವೇದೋರೂಪನೂ । ಶೋಚಿಷೇ—ಪ್ರಭಾಯುತನೂ ಆದ । ಅಗ್ನಯೇ—ಅಗ್ನಿಯನ್ನುದ್ದೇಶಿಸಿ । ಘೃತಂ—ಆಜ್ಯವನ್ನು । ತೀವ್ರಂ—ಪ್ರಭೂತವಾಗಿ । ಜುಹೋತನ—ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಸುಸಮಿದ್ಧನಾಮಕನೂ, ಜಾತವೇದೋರೂಪನೂ, ಪ್ರಭಾಯುತನೂ ಆದ ಅಗ್ನಿಯನ್ನುದ್ದೇಶಿಸಿ ಪ್ರಭೂತನಾಗಿ ಆಜ್ಯವನ್ನರ್ಪಿಸಿರಿ.

## English Translation.

Offer abundant butter to the resplendent, Susamiddha, to Agni, to Jatavedas.

॥ ವಿಶೇಷವಿಷಯಗಳು ॥

ಈ ಸೂಕ್ತವು ಆಪ್ರೀ ಸೂಕ್ತವು. ಆಪ್ರೀ ಸೂಕ್ತಗಳ ವಿಷಯವಾಗಿ ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾದ ವಿವರಣೆಯನ್ನು ಬರೆದಿದೇವೆ. ಆದರಲ್ಲಿಯೂ ಋ. ಸಂ. ಭಾಗ ೧೫, ಪುಟಗಳು 665–747 ರಲ್ಲಿ ವಿವರಿಸಿರುವ ಆಪ್ರೀ ಸೂಕ್ತ ಸಂಬಂಧವಾದ ವಿಷಯಗಳೆಲ್ಲಾ ಪ್ರಕೃತ ಸೂಕ್ತಕ್ಕೂ ಅನ್ವಯಿಸುವುದರಿಂದ ಇಲ್ಲಿ ಮತ್ತೆ ವಿವರಿಸಿರುವುದಿಲ್ಲ. ಆ ವಿಷಯಗಳನ್ನೆಲ್ಲಾ ಅಲ್ಲಿಯೇ ನೋಡಿ ತಿಳಿದುಕೊಳ್ಳಬಹುದು.

॥ ಸಂಹಿತಾಪಾಠಃ ॥

ನರಾಶಂಸಃ ಸುಷೂದತೀಮಂ ಯಜ್ಞಮದಾಭ್ಯಃ ।
ಕವಿರ್ಹಿ ಮಧುಹಸ್ತ್ಯಃ ॥ ೨ ॥

ನರಾಶಂಸಃ । ಸುಸೂದತಿ । ಇಮಂ । ಯಜ್ಞಂ । ಅದಾಭ್ಯಃ ।
ಕವಿಃ । ಹಿ । ಮಧುऽಹಸ್ತ್ಯಃ ॥ ೨ ॥

॥ ಸಾಯಣಭಾಷ್ಯಂ ॥

ನರಾಶಂಸಃ ನರೈಃ ಶಂಸನೀಯೋಽಯಮಗ್ನಿರಿಮಂ ಯಜ್ಞಮಿದಂ ಹವಿರ್ವಾ ಸುಷೂದತಿ । ಸುಷ್ಠು ಪ್ರೇರಯತಿ । ಸ ದೇವೋಽದಾಭ್ಯೋಽಹಿಂಸ್ಯಃ ಕೇನಾಪಿ ಕವಿರ್ಮೇಧಾವೀ ಮಧುಹಸ್ತ್ಯೋ ಮಧುರಹಸ್ತ್ಯಃ ॥

॥ ಪ್ರತಿಪದಾರ್ಥ ॥

ಅದಾಭ್ಯಃ—ಯಾರ ಹಿಂಸೆಗೂ ಸಿಲುಕದವನೂ । ಕವಿಃ—ಮೇಧಾವಿಯೂ । ಮಧುಹಸ್ತ್ಯಃ—ಆಹ್ಲಾದಕರವಾದ ಹಸ್ತವುಳ್ಳವನೂ ಆದ । ನರಾಶಂಸಃ—ನರಾಶಂಸನಾಮಕನಾದ ಅಗ್ನಿಯು । ಇಮಂ ಯಜ್ಞಂ—ಈ ಯಜ್ಞವನ್ನು । ಸುಷೂದತಿ ಹಿ—ಉತ್ತಮವಾಗಿ ಪ್ರೇರಿಸುತ್ತಾನೆಯಲ್ಲವೇ ?

॥ ಭಾವಾರ್ಥ ॥

ಯಾರ ಹಿಂಸೆಗೂ ಸಿಲುಕದವನೂ, ಮೇಧಾವಿಯೂ, ಆಹ್ಲಾದಕರವಾದ ಹಸ್ತವುಳ್ಳವನೂ ಆದ ನರಾಶಂಸ ನಾಮಕನಾದ ಅಗ್ನಿಯು ಈ ಯಜ್ಞವನ್ನು ಉತ್ತಮರೀತಿಯಲ್ಲಿ ಪ್ರೇರಿಸುತ್ತಾನೆ.

## English Translation.

Narashansa animates this sacrifice, he who is uninjurable, who verily is wise and sweet-handed.

॥ ಸಂಹಿತಾಪಾಠಃ ॥

ಈಳಿತೋ ಅಗ್ನ ಆ ವಹೇಂದ್ರಂ ಚಿತ್ರಮಿಹ ಪ್ರಿಯಂ ।

ಸುಖೈ ರಥೇಭಿರೂತಯೇ ॥ ೩ ॥

॥ ಪದಪಾಠಃ ॥

ಈಳಿತಃ । ಅಗ್ನೇ । ಆ । ವಹ । ಇಂದ್ರಂ । ಚಿತ್ರಂ । ಇಹ । ಪ್ರಿಯಂ ।

ಸುಽಖೈಃ । ರಥೇಭಿಃ । ಊತಯೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಈಳಿತಃ ಸ್ತುತಃ ಸನ್ನಾ ವಹೇಂದ್ರಂ ಚಿತ್ರಂ ಚಾಯನೀಯಂ ಪ್ರಿಯಮಿಹಾಸ್ಮಿನ್ಯಜ್ಞೇ ಸುಖೈ ರಥೇಭೀ ರಥೈರೂತಯೇಽಸ್ಮದ್ರಕ್ಷಣಾಯ ॥

॥ ಪ್ರತಿಪದಾರ್ಥ ॥

ಈಳಿತಃ—(ಪೂಜಿತನಾದ) ಈಳಿತನಾದ । ಅಗ್ನೇ—ಎಲೈ ಅಗ್ನಿಯೇ । ಚಿತ್ರಂ—ಆಕರ್ಷಕವಾದ ರೂಪವುಳ್ಳವನೂ । ಪ್ರಿಯಂ—ನಮಗೆಲ್ಲಾ ಹಿತಕಾರಕನೂ ಆದ । ಇಂದ್ರಂ—ಇಂದ್ರನನ್ನು ! ಇಹ—ಈ ಯಜ್ಞದಲ್ಲಿ । ಊತಯೇ—ನಮ್ಮ ರಕ್ಷಣೆಗಾಗಿ । ಸುಖೈಃ—ಸುಖಕರವಾದ । ರಥೇಭಿಃ—ರಥಗಳಲ್ಲಿ । ಆ ವಹ—ಕರೆದುಕೊಂಡು ಬಾ

॥ ಭಾವಾರ್ಥ ॥

ಸ್ತುತ್ಯನಾದ ಎಲೈ ಅಗ್ನಿಯೇ, ಆಕರ್ಷಕವಾದ ರೂಪವುಳ್ಳವನೂ, ನಮಗೆಲ್ಲಾ ಹಿತಕಾರಕನೂ ಆದ ಇಂದ್ರನನ್ನು ಈ ಯಜ್ಞದಲ್ಲಿ ನಮ್ಮ ರಕ್ಷಣೆಗಾಗಿ ಸುಖಕರವಾದ ರಥಗಳಲ್ಲಿ ಕರೆದುಕೊಂಡು ಬಾ.

## English Translation.

Agni, you are Ilita ; bring heither the wonderful and friendly Indra, with his easy-going chariots for our protection.



॥ ಸಂಹಿತಾಪಾಠಃ ॥

ಊರ್ಣಮ್ರದಾ ವಿ ಪ್ರಥಸ್ವಾಭ್ಯ೧ರ್ಕಾ ಅನೂಷತ ।

ಭವಾ ನಃ ಶುಭ್ರ ಸಾತಯೇ ॥ ೪ ॥

॥ ಪದಪಾಠಃ ॥

ಊರ್ಣಽಮ್ರದಾಃ । ವಿ । ಪ್ರಥಸ್ವ । ಅಭಿ । ಅರ್ಕಾಃ । ಅನೂಷತ ।

ಭವ । ನಃ । ಶುಭ್ರ । ಸಾತಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಊರ್ಣಮ್ರದಾ ಊರ್ಣಾಕಂಬಲವತ್ ಮೃದು ಹೇ ಬರ್ಹಿರ್ವಿ ಪ್ರಥಸ್ವ । ಪ್ರಥಯ । ಅರ್ಕಾಃ ಸ್ತೋತಾರೋಽಭ್ಯನೂಷತ । ಸ್ತುವಂತಿ । ಹೇ ಶುಭ್ರ ದೀಪ್ತ ಸಾತಯೇ ಧನಾಯ ತದ್ದಾನಾಯ ವಾ ನೋಽಸ್ಮಾಕಂ ಭವ ॥

॥ ಪ್ರತಿಪದಾರ್ಥ ॥

ಊರ್ಣಮ್ರದಾಃ—ರತ್ನಗಂಬಳಿಯಂತೆ ಮೃದುವಾದ ಎಲೈ ಬರ್ಹಿಯೇ । ಅರ್ಕಾಃ—ಸ್ತೋತೃಗಳು । ಅಭಿ॥ಅನೂಷತ—ನಿನ್ನನ್ನು ಸ್ತುತಿಸುತ್ತಾರೆ । (ಆದುವರಿಂದ) ವಿ ಪ್ರಥಸ್ವ—ವಿಸ್ತೃತವಾಗಿ ಹರಡು । ಶುಭ್ರ—ಪ್ರಕಾಶಯುಕ್ತನಾದ ಬರ್ಹಿಯೇ । ನಃ—ನಮ್ಮ ವಿಷಯದಲ್ಲಿ । ಸಾತಯೇ—ಧನದಾನದ ಮನಸ್ಸುಳ್ಳವನಾಗಿ । ಭವ—ಆಗಿರು.

॥ ಭಾವಾರ್ಥ ॥

ರತ್ನಗಂಬಳಿಯಂತೆ ಮೃದುವಾದ ಎಲೈ ಬರ್ಹಿಯೇ, (ಬರ್ಹಿಃ ಎಂದರೆ ಆಸನಾರ್ಥವಾಗಿ ಹರಡಿರುವ ದರ್ಭೆಗಳು) ಸ್ತೋತೃಗಳು ನಿನ್ನನ್ನು ಸ್ತುತಿಸುತ್ತಾರೆ. ಆದುದರಿಂದ ನೀನು ವಿಸ್ತೃತವಾಗಿ ಹರಡು. ಪ್ರಕಾಶಯುತನಾದ ಬರ್ಹಿಯೇ, ನಮಗೆ ಧನದಾನವನ್ನು ಮಾಡಬೇಕೆಂಬ ಮನಸ್ಸುಳ್ಳವನಾಗಿರು.

## English Translation.

(Grass), soft as wool, be spread ; the worshipers praise you : be to us radiant (grass, the source of) liberality.



॥ ಸಂಹಿತಾಪಾಠಃ ॥

ದೇವೀರ್ದ್ವಾರೋ ವಿ ಶ್ರಯಧ್ವಂ ಸುಪ್ರಾಯಣಾ ನ ಊತಯೇ ।

ಪ್ರಪ್ರ ಯಜ್ಞಂ ಪೃಣೀತನ ॥ ೫ ॥

॥ ಪದಪಾಠಃ ॥

ದೇವೀಃ । ದ್ವಾರಃ । ವಿ । ಶ್ರಯಧ್ವಂ । ಸುಪ್ರಽಅಯನಾಃ । ನಃ । ಊತಯೇ ।

ಪ್ರಽಪ್ರ । ಯಜ್ಞಂ । ಪೃಣೀತನ ॥ ೫ ॥

॥ ಸಾಯಣಭಾಷ್ಯಂ ॥

ಹೇ ದ್ವಾರೋ ಯಜ್ಞಸ್ಯ ದ್ವಾರಾಭಿಮಾನಿನ್ಯೋ ಹೇ ದೇವೀರ್ದೇವ್ಯೋ ವಿ ಶ್ರಯಧ್ವಂ । ವಿಯುಕ್ತಾ ಭವತ ।। ಸುಪ್ರಾಯಣಾಃ ಶೋಭನಗಮನಸಾಧನಾ ನೋಽಸ್ಮಾಕಮೂತಯೇ ರಕ್ಷಾಯೈ ಯಜ್ಞಂ ಯಜಮಾನಂ ಪ್ರಪ್ರ ಪೃಣೀತನ । ಪೂರಯತ ಕಾಮ್ಯೈರ್ಯಜ್ಞಮೇವ ವಾ ಫಲೈಃ ॥

॥ ಪ್ರತಿಪದಾರ್ಥ ॥

ದೇವೀಃ—ದೇವತಾತ್ಮರಾದ । ದ್ವಾರಃ—ಯಜ್ಞದ ದ್ವಾರಾಭಿಮಾನದೇವತೆಗಳೇ । ಸುಪ್ರಾಯಣಾಃ—ಶ್ರೇಷ್ಠವಾದ ಸಂಚಾರಸಾಧನವುಳ್ಳವರಾಗಿ । ನಃ—ನಮ್ಮ । ಊತಯೇ—ರಕ್ಷಣಾರ್ಥವಾಗಿ । ವಿ ಶ್ರಯಧ್ವಂ—ವಿವಿಕ್ತರಾಗಿ ದಾರಿಮಾಡಿರಿ । ಯಜ್ಞಂ—ಯಜ್ಞಕರ್ಮವನ್ನು । ಪ್ರಪ್ರ—ಪೂರ್ಣವಾಗಿ । ಪೃಣೀತನ—ನೆರವೇರುವಂತೆ ಮಾಡಿರಿ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಯಜ್ಞದ ದ್ವಾರಾಭಿಮಾನ ದೇವತೆಗಳೇ, ಶ್ರೇಷ್ಠವಾದ ಸಂಚಾರಸಾಧನವುಳ್ಳವರಾಗಿಯೂ, ನಮ್ಮ ರಕ್ಷಣಾರ್ಥವಾಗಿಯೂ ವಿವಿಕ್ತರಾಗಿ ನಮಗೆ ದಾರಿಮಾಡಿಕೊಡಿರಿ. ನಮ್ಮ ಯಜ್ಞಕರ್ಮವು ಪೂರ್ಣವಾಗಿ ನೆರವೇರುವಂತೆ ಮಾಡಿರಿ.

## English Translation.

Open divine doors, our passages to preservation ; fulfill the sacrifice (with its rewards).



॥ ಸಂಹಿತಾಪಾಠಃ ॥

ಸುಪ್ರತೀಕೇ ವಯೋವೃಧಾ ಯಹ್ವೀ ಋತಸ್ಯ ಮಾತರಾ ।

ದೋಷಾಮುಷಾಸಮೀಮಹೇ ॥ ೬ ॥

॥ ಪದಪಾಠಃ ॥

ಸುಪ್ರತೀಕೇ ಇತಿ ಸುಽಪ್ರತೀಕೇ । ವಯಃಽವೃಧಾ । ಯಹ್ವೀ ಇತಿ । ಋತಸ್ಯ । ಮಾತರಾ ।

ದೋಷಾಂ । ಉಷಸಂ । ಈಮಹೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಹ್ನೋ ರಾತ್ರೇಶ್ಚಾಭಿಮಾನಿದೇವ್ಯೌ ಸುಪ್ರತೀಕೇ ಸುರೂಪೇ ಶೋಭನಾಂಗೇ ವಾ ವಯೋವೃಧಾನ್ನಸ್ಯ ವರ್ಧಯಿತ್ರ್ಯೌ ಯಹ್ವೀ ಮಹತ್ಯಾವೃತಸ್ಯ ಯಜ್ಞಸ್ಯೋದಕಸ್ಯ ವಾ ಮಾತರಾ ನಿರ್ಮಾತ್ರ್ಯೌ ತಯೋರ್ಮಧ್ಯೇ ಪ್ರತ್ಯೇಕಂ ದೋಷಾಂ ರಾತ್ರಿದೇವೀಮುಷಸಮಹರ್ದೇವೀಮೀಮಹೇ । ಸ್ತುಮಃ ॥

॥ ಪ್ರತಿಪದಾರ್ಥ ॥

ಸುಪ್ರತೀಕೇ— ಶ್ರೇಷ್ಠವಾದ ರೂಪವುಳ್ಳವರೂ । ವಯೋವೃಧಾ— ಅನ್ನಕ್ಕೆ ವೃದ್ಧಿಕಾರಕರೂ । ಯಹ್ವೀ—ಮಹತ್ಸ್ವರೂಪವುಳ್ಳವರೂ। ಋತಸ್ಯ—ಯಜ್ಞಕ್ಕೆ। ಮಾತರಾ—ಜನನಿಯರೂ ಆದ। ದೋಷಾಂ—ರಾತ್ರಿದೇವಿಯನ್ನೂ । ಉಷಸಂ—ಅಹರ್ದೇವಿಯನ್ನೂ । ಈಮಹೇ—ಸ್ತುತಿಸುತ್ತೇವೆ.

॥ ಭಾವಾರ್ಥ ॥

ಶ್ರೇಷ್ಠವಾದ ರೂಪವುಳ್ಳವರೂ, ಅನ್ನಕ್ಕೆ ವೃದ್ಧಿಕಾರಕರೂ, ಮಹತ್ಸ್ವರೂಪವುಳ್ಳವರೂ, ಯಜ್ಞಕ್ಕೆ ಜನನಿಯರೂ ಆದ ರಾತ್ರಿದೇವಿಯನ್ನೂ ಅಹರ್ದೇವಿಯನ್ನೂ ನಾವು ಸ್ತುತಿಸುತ್ತೇವೆ.

## English Translation.

We glorify the evening and the morning, lovely, food-bestowing, mighty, the mothers of sacrifice.



॥ ಸಂಹಿತಾಪಾಠಃ ॥

ವಾತಸ್ಯ ಪತ್ಮನ್ನೀಳಿತಾ ದೈವ್ಯಾ ಹೋತಾರಾ ಮನುಷಃ ।

ಇಮಂ ನೋ ಯಜ್ಞಮಾ ಗತಂ ॥ ೭ ॥

॥ ಪದಪಾಠಃ ॥

ವಾತಸ್ಯ । ಪತ್ಮನ್ । ಈಳಿತಾ । ದೈವ್ಯಾ । ಹೋತಾರಾ । ಮನುಷಃ ।
ಇಮಂ । ನಃ । ಯಜ್ಞಂ । ಆ । ಗತಂ ॥ ೭ ॥

॥ ಸಾಯಣಭಾಷ್ಯಂ ॥

ವಾತಸ್ಯ ಪತ್ಮನ್ । ಲುಪ್ತೋಪಮೈಷಾ । ವಾಯುಗಮನಸದೃಶಗಮನಾರ್ಥಮೀಳಿತಾಸ್ಮಾಭಿಃ ಸ್ತುತೌ । ಯದ್ವಾ । ವಾತಸ್ಯ ಪತನಸಾಧನೇಽಂತರಿಕ್ಷೇ ಗಚ್ಛಂತೌ ದೈವ್ಯಾ ದೇವಾದಗ್ನೇರಾದಿತ್ಯಾಚ್ಚ ಸಮುದ್ಭೂತೌ ಹೋತಾರಾ ದೇವಾನಾಮಾಹ್ವಾತಾರೌ ಯುವಾಂ ಮನುಷೋ ಮನುಷ್ಯಸ್ಯೇಮಂ ನೋಽಸ್ಮಾಕಂ ಯಜ್ಞಮಾ ಗತಂ । ಆಗಚ್ಛತಂ । ನೋ ಮನುಷೋ ಯಜ್ಞಮಿತಿ ವ್ಯಧಿಕರಣೇ ಷಷ್ಠ್ಯೌ । ಅಸ್ಮಾಕಂ ಯಜಮಾನಸ್ಯ ಯಜ್ಞಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವಾತಸ್ಯ ಪತ್ಮನ್—ವಾಯುವಿನ ಮಾರ್ಗದಲ್ಲಿ ಸಂಚರಿಸುವವರೂ । ದೈವ್ಯಾ ಹೋತಾರಾ—ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ದೇವತೆಗಳೇ । ನಃ—ನಮ್ಮ । ಮನುಷಃ—ಮಾನವರೂಪಿಯಾದ ಯಜಮಾನನ । ಇಮಂ ಯಜ್ಞಂ—ಈ ಯಜ್ಞಕ್ಕೆ । ಆ ಗತಂ—ದಯಮಾಡಿರಿ.

॥ ಭಾವಾರ್ಥ ॥

ವಾಯುವಿನ ಮಾರ್ಗದಲ್ಲಿ ಸಂಚರಿಸುವವರೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ಎಲೈ ದೇವತೆಗಳೇ, ನಮ್ಮ ಯಜಮಾನನ ಈ ಯಜ್ಞಕ್ಕೆ ದಯಮಾಡಿರಿ.

**English Translation.**

Praised (by us), divine invokers of the gods, come, moving on the path of the wind, to this sacrifice of our patron.

॥ ಸಂಹಿತಾಪಾಠಃ ॥

ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ ।
ಬರ್ಹಿಃ ಸೀದಂತ್ವಸ್ರಿಧಃ ॥ ೮ ॥

॥ ಪದಪಾಠಃ ॥

ಇಳಾ । ಸರಸ್ವತೀ । ಮಹೀ । ತಿಸ್ರಃ । ದೇವೀಃ । ಮಯಃऽಭುವಃ ।
ಬರ್ಹಿಃ । ಸೀದಂತು । ಅಸ್ರಿಧಃ ॥ ೮ ॥

॥ ಸಾಯಣಭಾಷ್ಯಂ ॥

ಇಳಾ ಪೃಥಿವೀ ಸರಸ್ವತೀ । ಸರ ಉದಕಂ । ತಸ್ಮಾತ್ಸರಸ್ವಾನ್ವಾಯುಃ । ತಸ್ಯ ಸ್ತ್ರೀ ಸರಸ್ವತೀ । ಮಹೀ ಮಹತೀ ಭಾರತೀ ಭರತಸ್ಯಾದಿತ್ಯಸ್ಯ ಪತ್ನೀ । ಅತ್ರ ಯದ್ಯಪ್ಯೇಷಾ ನೋಕ್ತಾ ತಥಾಪಿ ಸರ್ವತ್ರ ಸಹದೃಷ್ಟತ್ವಾತ್ತ್ರಿಸಂಖ್ಯಾಶ್ರವಣಾಚ್ಚ ಸಾ ಗೃಹ್ಯತೇ । ಅಥವೈತಾಃ ಕ್ಷಿತ್ಯಂತರಿಕ್ಷದ್ಯುಸ್ಥಾನಾ ವಾಗ್ದೇವ್ಯಃ । ಏತಾ ಮಯೋಭುವಃ ಸುಖಸ್ಯ ಭಾವಯಿತ್ರ್ಯೋಽಸ್ರಿಧೋಽಹಿಂಸಿಕಾಃ ಸತ್ಯೋ ಬರ್ಹಿರ್ಬರ್ಹಿಷಿ ಸೀದಂತು । ಉಪವಿಶಂತು ॥

॥ ಪ್ರತಿಪದಾರ್ಥ ॥

ಮಯೋಭುವಃ—ಸುಖದಾತ್ರಿಯರೂ । ಅಸ್ರಿಧಃ—ಅಹಿಂಸಕರೂ । ದೇವೀಃ—ದೇವತಾತ್ಮರೂ ಆದ । ಇಳಾ—ಇಳಾದೇವಿಯೂ । ಸರಸ್ವತೀ—ಸರಸ್ವತಿಯೂ । ಮಹೀ—ಮಹತ್ಸ್ವರೂಪವುಳ್ಳ ಭಾರತಿಯೂ । ಬರ್ಹಿಃ—ದರ್ಭಾಸನದಮೇಲೆ । ಸೀದಂತು—ಆಸೀನರಾಗಲಿ. (ಕುಳಿತುಕೊಳ್ಳಲಿ)

॥ ಭಾವಾರ್ಥ ॥

ಸುಖದಾತ್ರಿಯರೂ, ಅಹಿಂಸಕರೂ, ದೇವತಾತ್ಮರೂ ಆದ ಇಳಾ, ಸರಸ್ವತೀ ಮತ್ತು ಮಹತ್ಸ್ವರೂಪವುಳ್ಳ ಭಾರತಿ ಈ ಮೂವರು ದೇವಿಯರೂ ಸಹ ದರ್ಭಾಸನದಮೇಲೆ ಆಸೀನರಾಗಲಿ.

English Translation.

May Ila, Saraswati, Mahi, the three goddesses who are the sources of happiness, sit down, benevolent, upon the sacred grass.

॥ ವಿಶೇಷವಿಷಯಗಳು ॥

ಈ ಋಕ್ಕು ಋ. ಸಂ. ೧–೧೩ ನೇ ಸುಸಮಿದ್ಧೋ ನ ಆ ವಹ ಎಂಬ ಸೂಕ್ತದಲ್ಲಿ ೯ ನೇ ಋಕ್ಕಾಗಿ ಪಠಿತವಾಗಿದೆ. ಅಲ್ಲಿ ಆ ಸೂಕ್ತಕ್ಕೆ ಮೇಧಾತಿಥಿಃ ಕಾಣ್ವಃ ಎಂಬುವನು ಋಷಿಯು. ಪ್ರಕೃತ ಋಕ್ಕಿಗೆ ವಸುಶ್ರುತ ಆತ್ರೇಯಃ ಎಂಬುವನು ಋಷಿಯು. ಇವರಲ್ಲಿ ಯಾರು ಪೂರ್ವೀಕರು ಅಥವಾ ಇಬ್ಬರೂ ಸಮಕಾಲೀನರೇ ಎಂಬ ವಿಷಯವು ಗೊತ್ತಾಗುವುದಿಲ್ಲ.

॥ ಸಂಹಿತಾಪಾಠಃ ॥

ಶಿವಸ್ತ್ವಷ್ಟರಿಹಾ ಗಹಿ ವಿಭುಃ ಪೋಷ ಉತ ತ್ಮನಾ ।

ಯಜ್ಞೇಯಜ್ಞೇ ನ ಉದವ ॥ ೯ ॥

॥ ಪದಪಾಠಃ ॥

ಶಿವಃ । ತ್ವಷ್ಟಃ । ಇಹ । ಆ । ಗಹಿ । ವಿಽಭುಃ । ಪೋಷೇ । ಉತ । ತ್ಮನಾ ।

ಯಜ್ಞೇಽಯಜ್ಞೇ । ನಃ । ಉತ್ । ಅವ ॥ ೯ ॥

॥ ಸಾಯಣಭಾಷ್ಯಂ ॥

ಹೇ ತ್ವಷ್ಟರ್ದೇವ ಶಿವಃ ಸುಖಕರಃ ಸನ್ನಿಹಾ ಗಹಿ । ಅಸ್ಮದ್ಯಜ್ಞಮಾಗಚ್ಛ। ವಿಭುರ್ವ್ಯಾಪ್ತಸ್ತ್ವಂ ಪೋಷೇ ಪೋಷಕರಣೇ । ಉತಾಗತ್ಯ ಚ ತ್ಮನಾತ್ಮನಾ ಸ್ವಯಮೇವ ಯಜ್ಞೇ ಯಜ್ಞೇ ಸರ್ವೇಷು ಯಜ್ಞೇಷು ನೋಽಸ್ಮಾನುದವ । ಉತ್ಕೃಷ್ಟಂ ರಕ್ಷ ॥

॥ ಪ್ರತಿಪದಾರ್ಥ ॥

ತ್ವಷ್ಟಃ—ಎಲೈ ತ್ವಷ್ಟೃದೇವನೇ । ಪೋಷೇ—ಪೋಷಣ ವ್ಯಾಪಾರದಲ್ಲಿ । ವಿಭುಃ—ಸರ್ವವ್ಯಾಪಿಯೂ। ಶಿವಃ—ಸುಖಕರನೂ ಆಗಿ। ಇಹ—ಈ ಯಜ್ಞಕ್ಕೆ । ಆ ಗಹಿ—ದಯಮಾಡು । ಯಜ್ಞೇ ಯಜ್ಞೇ—ಪ್ರತಿಯೊಂದು ಯಜ್ಞದಲ್ಲಿಯೂ । ನಃ—ನಮ್ಮನ್ನು । ಉದವ—ಪೂರ್ಣವಾಗಿ ರಕ್ಷಿಸು.

॥ ಭಾವಾರ್ಥ ॥

ಎಲೈ ತ್ವಷ್ಟೃದೇವನೇ, ಜಗತ್ಪೋಷಣ ವ್ಯಾಪಾರದಲ್ಲಿ ಸರ್ವವ್ಯಾಪಿಯೂ, ಸುಖಕರನೂ ಆಗಿ, ಈ ಯಜ್ಞಕ್ಕೆ ದಯಮಾಡು. ಪ್ರತಿಯೊಂದು ಯಜ್ಞದಲ್ಲಿಯೂ ನಮ್ಮನ್ನು ಪೂರ್ಣವಾಗಿ ರಕ್ಷಿಸು.

English Translation.

Twashtri, being propitious, you are diffusive in kindness, come of your own accord, protect us in repeated sacrifices.



॥ ಸಂಹಿತಾಪಾಠಃ ॥

ಯತ್ರ ವೇತ್ಥ ವನಸ್ಪತೇ ದೇವಾನಾಂ ಗುಹ್ಯಾ ನಾಮಾನಿ ।
ತತ್ರ ಹವ್ಯಾನಿ ಗಾಮಯ ॥ ೧೦ ॥

॥ ಪದಪಾಠಃ ॥

ಯತ್ರ । ವೇತ್ಥ । ವನಸ್ಪತೇ । ದೇವಾನಾಂ । ಗುಹ್ಯಾ । ನಾಮಾನಿ ॥
ತತ್ರ । ಹವ್ಯಾನಿ । ಗಮಯ ॥ ೧೦ ॥

॥ ಸಾಯಣಭಾಷ್ಯಂ ॥

ಅಗ್ನಿಹೋತ್ರ ಉತ್ತರಾಹುತಿಸ್ಕಂದನೇ ಯತ್ರ ವೇತ್ಥೇತ್ಯನಯಾ ಸಮಿಧಮಾದಧ್ಯಾತ್। ಸೂತ್ರಿತಂ ಚ । ಯತ್ರ ವೇತ್ಥ ವನಸ್ಪತ ಇತ್ಯುತ್ತರಸ್ಯಾ ಆಹುತ್ಯಾಃ ಸ್ಕಂದನೇ । ಆ. ೩–೧೧ । ಇತಿ ॥

ಹೇ ವನಸ್ಪತೇ ಯೂಪಾಭಿಮಾನಿದೇವ ಯತ್ರ ಯಸ್ಮಿನ್ ಸ್ಥಾನೇ ವೇತ್ಥ ದೇವಾನಾಂ ಗುಹ್ಯಾ ಗುಹ್ಯಾನಿ ನಾಮಾನಿ ನಾಮಕಾನಿ ರೂಪಾಣಿ ತತ್ರ ಹವ್ಯಾನಿ ಗಮಯ । ಪ್ರಾಪಯ ॥

॥ ಪ್ರತಿಪದಾರ್ಥ ॥

ವನಸ್ಪತೇ—ಎಲೈ ಯೂಪಾಭಿಮಾನಿಯಾದ ದೇವನೇ । ಯತ್ರ—ಯಾವ ಯಾವ ಸ್ಥಾನಗಳಲ್ಲಿ । ದೇವಾನಾಂ—ದೇವತೆಗಳ । ಗುಹ್ಯಾ—ರಹಸ್ಯವಾದ । ನಾಮಾನಿ—ನಾಮರೂಪಗಳನ್ನು । ವೇತ್ಥ—ಅರಿತಿರುವೆಯೋ । ತತ್ರ—ಅಲ್ಲಿಗೆಲ್ಲಾ । ಹವ್ಯಾನಿ—ಹವಿಸ್ಸುಗಳನ್ನು । ಗಮಯ—ತೆಗೆದುಕೊಂಡುಹೋಗಿ ಸೇರಿಸು.

॥ ಭಾವಾರ್ಥ ॥

ಎಲೈ ಯೂಪಾಭಿಮಾನಿಯಾದ ದೇವನೇ, ನೀನು ಯಾವ ಯಾವ ಸ್ಥಾನಗಳಲ್ಲಿ ದೇವತೆಗಳ ರಹಸ್ಯವಾದ ನಾಮರೂಪಗಳನ್ನು ಅರಿತಿರುವೆಯೋ, ಅಲ್ಲಿಗೆಲ್ಲಾ ಹವಿಸ್ಸುಗಳನ್ನು ತೆಗೆದುಕೊಂಡು ಹೋಗಿ ಅವರಿಗೆ ಸೇರಿಸಿಕೊಡು.

## English Translation.

Wherever you know, Vanaspati, the secret forms of the gods to be, thither convey the oblations.

॥ ವಿಶೇಷವಿಷಯಗಳು ॥

ಅಗ್ನಿಹೋತ್ರಮಾಡುವಾಗ ಉತ್ತರಾಹುತಿಗಾಗಿ ಯತ್ರ ವೇತ್ಥ ಎಂಬ ಈ ಋಕ್ಕಿನಿಂದ ಸಮಿತ್ತನ್ನು ಅಗ್ನಿಯಲ್ಲಿ ಹೋಮಮಾಡಬೇಕೆಂದು ಆಶ್ವಲಾಯನಶ್ರೌತಸೂತ್ರದ—ಯತ್ರ ವೇತ್ಥ ವನಸ್ಪತ ಇತ್ಯುತ್ತರಸ್ಯಾ ಆಹುತ್ಯಾಃ ಸ್ಕಂದನೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೩-೧೨)

॥ ಸಂಹಿತಾಪಾಠಃ ॥

ಸ್ವಾಹಾಗ್ನಯೇ ವರುಣಾಯ ಸ್ವಾಹೇಂದ್ರಾಯ ಮರುದ್ಭ್ಯಃ ॥

ಸ್ವಾಹಾ ದೇವೇಭ್ಯೋ ಹವಿಃ ॥ ೧೧ ॥

॥ ಪದಪಾಠಃ ॥

ಸ್ವಾಹಾ । ಅಗ್ನಯೇ । ವರುಣಾಯ । ಸ್ವಾಹಾ । ಇಂದ್ರಾಯ । ಮರುತ್ಽಭ್ಯಃ ॥

ಸ್ವಾಹಾ । ದೇವೇಭ್ಯಃ । ಹವಿಃ ॥ ೧೧ ॥

ಅಗ್ನ್ಯಾದಿ ವಿಶ್ವೇ ದೇವಾಃ । ತೇಭ್ಯೋ ದೇವೇಭ್ಯ ಇದಂ ಹವಿಃ ಸ್ವಾಹಾ ಕರೋಮೀತಿ ಶೇಷಃ । ಸ್ವಾಹುತಂ ಕರೋಮೀತ್ಯರ್ಥಃ । ಏವಂ ಸ್ವಾಹಾಕೃತೇಃ ಸ್ತುತಿಃ ॥

। ಪ್ರತಿಪದಾರ್ಥ ।

ಹವಿಃ— ಹವಿಸ್ಸು । ಅಗ್ನಯೇ– ಅಗ್ನಿಯನ್ನುದ್ದೇಶಿಸಿ । ಸ್ವಾಹಾ— ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾಗುತ್ತದೆ । ವರುಣಾಯ—ವರುಣನಿಗೂ । ಇಂದ್ರಾಯ— ಇಂದ್ರನಿಗೂ । ಮರುದ್ಭ್ಯಃ—ಮರುತ್ತುಗಳಿಗೂ । ಸ್ವಾಹಾ—ಸ್ವಾಹಾಕಾರವಾದ ಅರ್ಪಣೆಯು । ದೇವೇಭ್ಯಃ—ಸಕಲ ದೇವತೆಗಳನ್ನೂ ಉದ್ದೇಶಿಸಿ । ಸ್ವಾಹಾ—ಸ್ವಾಹಾಕಾರಪೂರ್ಣವಾದ ಅರ್ಪಣೆಯು.

॥ ಭಾವಾರ್ಥ ॥

ಅಗ್ನಿಯನ್ನೂ, ವರುಣ, ಇಂದ್ರ ಮತ್ತು ಮರುತ್ತುಗಳು, ಇತರ ಎಲ್ಲಾ ದೇವತೆಗಳು ಇವರೆಲ್ಲರನ್ನೂ ಉದ್ದೇಶಿಸಿ ಸ್ವಾಹಾಕಾರಪೂರ್ವಕವಾಗಿ ಹವಿಸ್ಸು ಅರ್ಪಿತವಾಗುತ್ತದೆ.

**English Translation.**

The oblation is offered with reverence to Agni, to Varuna; with reverencc to Indra, to the Maruts; with reverence to the gods.

## ಆರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಗ್ನಿಂ ತಂ ಮನ್ಯ ಇತಿ ದಶರ್ಚಂ ಷಷ್ಠಂ ಸೂಕ್ತಂ ವಸುಶ್ರುತಸ್ಯಾರ್ಷಮಾಗ್ನೇಯಂ ಪಾಂಕ್ತಂ। ಅಗ್ನಿಂ ತಂ ದಶ ಪಾಂಕ್ತಮಿತ್ಯನುಕ್ರಮಣಿಕಾ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಪಾಂಕ್ತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ಅಗ್ನಿಂ ತಂ ಮನ್ಯ ಇತಿ ಪಾಂಕ್ತಂ । ಆ. ೪–೧೩ । ಇತಿ ಹಿ ಸೂತ್ರಿತಂ॥ ಆಶ್ವಮೇಧಿಕೇ ಮಧ್ಯಮೇಽಹನೀದಮೇವಾಜ್ಯಶಸ್ತ್ರಂ । ಸೂತ್ರಿತಂ ಚ । ಅಗ್ನಿಂ ತಂ ಮನ್ಯ ಇತ್ಯಾಜ್ಯಂ ತಸ್ಯೈಕಾಹಿಕಮುಪರಿಷ್ಟಾತ್ । ಆ. ೧೦–೧೦ । ಇತಿ ॥ ಆದ್ಯ ಆಭಿಪ್ಲವಿಕೇಷೂಕ್ಥ್ಯೇಷು ಮೈತ್ರಾವರುಣಸ್ಯಾನುರೂಪಸ್ತೃಚಃ । ಸೂತ್ರಿತಂ ಚ । ಅಗ್ನಿಂ ತಂ ಮನ್ಯೇ ಯೋ ವಸುರಾಗ್ನೇ ಸ್ಥೂರಂ ರಯಿಂ ಭರ । ಆ. ೭–೮ । ಇತಿ ॥

ಅನುವಾದವು—ಅಗ್ನಿಂ ತಂ ಮನ್ಯೇ ಎಂಬ ಈ ಸೂಕ್ತವು ಮೊದಲನೆಯ ಅನುವಾವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸುಶ್ರುತನು ಋಷಿಯು ; ಅಗ್ನಿಯು ದೇವತೆಯು ; ಪಂಕ್ತಿಶ್ಛಂದಸ್ಸು. ಅನುಕ್ರಮಣಿಕೆಯಲ್ಲಿ—ಅಗ್ನಿಂ ತಂ ದಶ ಪಾಂಕ್ತಂ ಎಂದು ಹೇಳಿರುವುದು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಪಂಕ್ತಿಶ್ಛಂದಸ್ಸಿನ ಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳ

ಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಅಗ್ನಿಂ ತಂ ಮನ್ಯೆ ಇತ್ಯಾಜ್ಯಂ ತೆಸ್ಯೈಕಾಹಿಕಮುಪರಿಷ್ಟಾತ್ ಎಂಬ ಸೂತ್ರದಿಂದ (ಆ. ೧೦-೧೦) ವಿವೃತವಾಗಿರುವುದು; ಮತ್ತು ಅಭಿಪ್ಲವ ಸಂಬಂಧವಾದ ಉಕ್ಥ್ಯವೆಂಬ ಯಾಗದಲ್ಲಿಯೂ ಮೈತ್ರಾವರುಣನೆಂಬ ಋತ್ವಿಜನು ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಅನುರೂಪ ತೃಚ (ಮೂರು ಋಕ್ಕುಗಳು) ವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಅಗ್ನಿಂ ತಂ ಮನ್ಯೇ ಯೋ ವಸುರಾಗ್ನೇ ಸ್ಥೂರಂ ರಯಿಂ ಭರ ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

## ಸೂಕ್ತ—೬

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೬ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ವಸುಶ್ರುತ ಆತ್ರೇಯಃ ॥

॥ ದೇವತಾ—ಅಗ್ನಿಃ ॥

। ಛಂದಃ—ಪಂಕ್ತಿಃ ॥

॥ ಸಂಹಿತಾಪಾಠಃ ॥

ಅಗ್ನಿಂ ತಂ ಮನ್ಯೇ ಯೋ ವಸುರಸ್ತಂ ಯಂ ಯಂತಿ ಧೇನವಃ ।

ಅಸ್ತಮರ್ವಂತ ಆಶವೋಽಸ್ತಂ ನಿತ್ಯಾಸೋ ವಾಜಿನ ಇಷಂ ಸ್ತೋತೃಭ್ಯ ಆ

ಭರ ॥ ೧ ॥

॥ ಪದಪಾಠಃ ॥

ಅಗ್ನಿಂ । ತಂ । ಮನ್ಯೇ । ಯಃ । ವಸುಃ । ಅಸ್ತಂ । ಯಂ । ಯಂತಿ । ಧೇನವಃ ।

ಅಸ್ತಂ । ಅರ್ವಂತಃ । ಆಶವಃ । ಅಸ್ತಂ । ನಿತ್ಯಾಸಃ । ವಾಜಿನಃ । ಇಷಂ । ಸ್ತೋತೃಽಭ್ಯಃ । ಆ । ಭರ ॥

॥ ಸಾಯಣಭಾಷ್ಯಂ ॥

ತಮಗ್ನಿಂ ಮನ್ಯೇ । ಸ್ತೌಮಿ । ಯೋಽಗ್ನಿರ್ವಸುರ್ವಾಸಕಃ । ಯಮಸ್ತಂ ಸರ್ವೇಷಾಂ ಗೃಹವದಾಶ್ರಯಭೂತಂ ಧೇನವೋ ಯಂತಿ । ಗಚ್ಛಂತಿ ಪ್ರೀಣಯಿತುಂ । ಅಸ್ತಮುಕ್ತಲಕ್ಷಣಮರ್ವಂತೋಽರಣವಂತೋಽಶ್ವಾ ಆಶವಃ ಶೀಘ್ರಗಾಮಿನೋ ಯಂತಿ । ತಥಾ ನಿತ್ಯಾಸೋ ನಿತ್ಯಪ್ರವೃತ್ತಯೋ ವಾಜಿನೋ ಹವಿರ್ಲಕ್ಷಣಾನ್ನವಂತೋ ಯಜಮಾನಾ ಯಮಸ್ತಂ ಯಂತಿ ತಂ ಮನ್ಯೇ । ಇಷಮನ್ನಂ ಸ್ತೋತೃಭ್ಯೋಽಸ್ಮಭ್ಯಮಾ ಭರಾಗ್ನೇ ॥

॥ ಪ್ರತಿಪದಾರ್ಥ ॥

ಯಃ—ಯಾವ ಅಗ್ನಿಯು । ವಸುಃ—ವಸತಿದಾಯಕನೋ । ಅಸ್ತಂ— ಗೃಹದಂತೆ ಆಶ್ರಯದಾತನಾಗಿರುವ । ಯಂ—ಯಾವ ಅಗ್ನಿಯನ್ನು । ಧೇನವಃ—ಧೇನುಗಳು । ಯಂತಿ—ಹೋಗಿ ಸೇರಿಕೊಳ್ಳುವುವೋ । ಅಸ್ತಂ—ಆಶ್ರಯಭೂತನಾದ ಯಾವನನ್ನು । ಆಶವಃ—ಶೀಘ್ರಗಾಮಿಗಳಾದ । ಅರ್ವಂತಃ—ಅಶ್ವಗಳು (ಹೋಗಿ ಸೇರುವುವೋ) । ಅಸ್ತಂ—ಆಶ್ರಯಭೂತನಾದ ಯಾವನನ್ನು । ನಿತ್ಯಾಸಃ—ನಿತ್ಯಕರ್ಮಗಳುಳ್ಳವರೂ । ವಾಜಿನಃ—ಹವಿಸ್ಸಿನರೂಪದ ಅನ್ನವುಳ್ಳವರೂ ಆದ ಯಜಮಾನರು (ಹೋಗಿ ಸೇರುವರೋ) । ತಂ—ಅಂತಹ ಅಗ್ನಿಯನ್ನು । ಮನ್ಯೇ—ಧ್ಯಾನಪೂರ್ವಕವಾಗಿ ಸ್ತುತಿಸುತ್ತೇನೆ । (ಎಲೈ ಅಗ್ನಿಯೇ) ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಂ—ಅನ್ನವನ್ನು । ಆ ಭರ—ತೆಗೆದುಕೊಂಡು ಬಾ.

॥ ಭಾವಾರ್ಥ ॥

ಯಾವನು ಸಕಲರಿಗೂ ವಸತಿದಾಯಕನೋ ಮತ್ತು ತಮ್ಮ ಗೃಹದಂತೆ ಆಶ್ರಯಭೂತನಾದ ಯಾರನ್ನು ಧೇನುಗಳೂ, ಶೀಘ್ರಗಾಮಿಗಳಾದ ಅಶ್ವಗಳೂ ಮತ್ತು ನಿತ್ಯಕರ್ಮಯುಕ್ತರಾಗಿ ಹವಿಸ್ಸಿನ ರೂಪದ ಅನ್ನವುಳ್ಳ ಯಜಮಾನರೂ ಹೋಗಿ ಸೇರುವರೋ ಅಂತಹ ಅಗ್ನಿಯನ್ನು ಧ್ಯಾನಪೂರ್ವಕವಾಗಿ ಸ್ತುತಿಸುತ್ತೇನೆ. ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ಅನ್ನವನ್ನು ತೆಗೆದುಕೊಂಡು ಬಾ.

## English Translation.

I glorify that Agni who is the giver of dwellings; to whom, as to their home, the milch cows, the light-faced steeds, the constant offerers of of oblations, repair : (Agni), bring food to your adorers.



॥ ಸಂಹಿತಾಪಾಠಃ ॥

ಸೋ ಅಗ್ನಿರ್ಯೋ ವಸುರ್ಗೃಣೇ ಸಂ ಯಮಾಯಂತಿ ಧೇನವಃ ।
ಸಮರ್ವಂತೋ ರಘುದ್ರುವಃ ಸಂ ಸುಜಾತಾಸಃ ಸೂರಯ ಇಷಂ ಸ್ತೋ-
ತೃಭ್ಯ ಆ ಭರ ॥ ೨ ॥

॥ ಪದಪಾಠಃ ॥

ಸಃ । ಅಗ್ನಿಃ । ಯಃ । ವಸುಃ । ಗೃಣೇ । ಸಂ । ಯಂ । ಆऽಯಂತಿ । ಧೇನವಃ ।
ಸಂ । ಅರ್ವಂತಃ । ರಘುऽದ್ರುವಃ । ಸಂ । ಸುऽಜಾತಾಸಃ । ಸೂರಯಃ । ಇಷಂ । ಸ್ತೋತೃऽಭ್ಯಃ । ಆ । ಭರ ॥ ೨ ॥

॥ ಸಾಯಣಭಾಷ್ಯಂ ॥

ಸೋಽಗ್ನಿಃ ಸ ಖಲ್ವಗ್ನಿರ್ಯೋ ವಸುರ್ವಾಸಕೋ ಗೃಣೇ । ಸ್ತೂಯತೇ । ಯಂ ಧೇನವಃ ಸಮಾಯಂತಿ ಹೋಮಾರ್ಥಂ । ಅರ್ವಂತೋಽಶ್ವಾ ರಘುದ್ರುವೋ ಲಘುಗಮನಾಃ ಸಮಾಯಂತಿ । ಸುಜಾತಾಸಃ ಸೂರಯೋ ಮೇಧಾವಿನಶ್ಚ ಸಮಾಯಂತಿ ಸ ಖಲ್ವಗ್ನಿರಿತಿ ॥

॥ ಪ್ರತಿಪದಾರ್ಥ ॥

ಯಃ—ಯಾರು । ಗೃಣೇ—ಸ್ತುತಿಕರ್ತನಿಗೆ । ವಸುಃ—ವಸತಿದಾಯಕನೋ । ಯಂ—ಯಾರನ್ನು । ಧೇನವಃ—ಧೇನುಗಳು । ಸು ಆಯಂತಿ—(ಹೋಮಾರ್ಥವಾಗಿ) ಬಂದು ಸೇರುವುವೋ । ರಘುದ್ರುವಃ—ಅತಿವೇಗವಾದ ಓಟವುಳ್ಳ । ಅರ್ವಂತಃ—ಅಶ್ವಗಳು । ಸಂ (ಆಯಂತಿ)—ಬಂದು ಸೇರುವುವೋ । ಮತ್ತು ಸುಜಾತಾಸಃ—ಶ್ರೇಷ್ಠವಾದ ಸ್ಥಿತಿಯುಳ್ಳ । ಸೂರಯಃ—ಮೇಧಾವಿಗಳು । ಸಂ (ಆಯಂತಿ)—ಬಂದು ಸೇರುವರೋ । ಸಃ—ಅವನೇ । ಅಗ್ನಿಃ—ಅಗ್ನಿಯು (ಎಲೈ ಅಗ್ನಿಯೇ) । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಂ—ಅನ್ನವನ್ನು । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಯಾರು ಸ್ತುತಿಕರ್ತನಿಗೆ ವಸತಿದಾಯಕನೋ, ಯಾರನ್ನು ಧೇನುಗಳು ಹೋಮಾರ್ಥವಾಗಿ ಬಂದು ಸೇರುವುವೋ ಮತ್ತು ನಾಗಾಲೋಟವುಳ್ಳ ಅಶ್ವಗಳೂ, ಶ್ರೇಷ್ಠವಾದ ಸ್ಥಿತಿಯುಳ್ಳ ಸೂರಿಗಳೂ ಬಂದು ಸೇರುವರೋ, ಅವನೇ ಅಗ್ನಿಯು. ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ಅನ್ನವನ್ನು ತಂದೊಗಿಸು.

## English Translation.

He is Agni, who is praised as the giver of dwellings, to whom the milch cows, the light-faced steeds, the well-born, devout worshippers repair: Agni, bring food to your adorers.

—

॥ ಸಂಹಿತಾಪಾಠಃ ॥

ಅಗ್ನಿರ್ಹಿ ವಾಜಿನಂ ವಿಶೇ ದದಾತಿ ವಿಶ್ವಚರ್ಷಣಿಃ ।
ಅಗ್ನೀ ರಾಯೇ ಸ್ವಾಭುವಂ ಸ ಪ್ರೀತೋ ಯಾತಿ ವಾರ್ಯಮಿಷಂ ಸ್ತೋತೃಭ್ಯ ಆ ಭರ ॥ ೩ ॥

॥ ಪದಪಾಠಃ ॥

ಅಗ್ನಿಃ । ಹಿ । ವಾಜಿನಂ । ವಿಶೇ । ದದಾತಿ । ವಿಶ್ವಽಚರ್ಷಣಿಃ ।

ಅಗ್ನಿಃ । ರಾಯೇ । ಸ್ವಽಆಭುವಂ । ಸಃ । ಪ್ರೀತಃ । ಯಾತಿ । ವಾರ್ಯಂ । ಇಷಂ । ಸ್ತೋತೃಽಭ್ಯಃ । ಆ । ಭರ ॥ ೩ ॥

॥ ಸಾಯಣಭಾಷ್ಯಂ ॥

ಅಗ್ನಿರ್ಹ್ಯಯಮಗ್ನಿಃ ಖಲು ವಿಶೇ ಯಜಮಾನಾಯ ವಾಜಿನಮನ್ನವಂತಂ ಪುತ್ರಮಶ್ವಮನ್ನಂ ವಾ ದದಾತಿ । ವಿಶ್ವಚರ್ಷಣಿಃ । ವಿಶ್ವೇ ಚರ್ಷಣಯೋ ಮನುಷ್ಯಾ ರಕ್ಷಣೀಯಾ ಅರ್ಚಕಾ ವಾ ಯಸ್ಯ ಸ ತಥೋಕ್ತಃ । ಯದ್ವಾ । ಪಶ್ಯತಿಕರ್ಮೈತತ್ । ಸರ್ವಸ್ಯ ದ್ರಷ್ಟಾಗ್ನೀ ರಾಯೇ ಧನಾರ್ಥಿನೇ । ಅಥವಾ ದ್ವಿತೀಯಾರ್ಥೇ ಚತುರ್ಥೀ । ಧನಂ ಸ್ವಾಭುವಂ ಸುಷ್ಠು ಸರ್ವತ್ರ ವ್ಯಾಪ್ತಂ ವಾರ್ಯಂ ಸರ್ವೈರ್ವರಣೀಯಂ ಪ್ರೀತಃ ಸನ್ ಯಾತಿ । ಯಮಯತಿ । ದಾತುಂ ವಾ ಗಚ್ಛತಿ । ಇಷಮಿತ್ಯಾದಿ ಗತಂ ॥

॥ ಪ್ರತಿಪದಾರ್ಥ ॥

ವಿಶ್ವಚರ್ಷಣಿಃ—ಸಕಲವನ್ನೂ ನೋಡುವ ಸಾಮರ್ಥ್ಯವುಳ್ಳ । ಅಗ್ನಿರ್ಹಿ—ಅದೇ ಅಗ್ನಿಯು । ವಿಶೇ—ಯಜಮಾನರಿಗೆ । ವಾಜಿನಂ—ಅನ್ನಸಂಪದ್ಯುಕ್ತವಾದ ಪುತ್ರಾದಿಗಳನ್ನು । ದದಾತಿ—ಕೊಡುತ್ತಾನೆ । ಪ್ರೀತಃ—ತೃಪ್ತನಾದ । ಸಃ ಅಗ್ನಿಃ—ಅದೇ ಅಗ್ನಿಯು । ರಾಯೇ—ಧನಾಪೇಕ್ಷಿಯಾದ ಯಜಮಾನನಿಗೆ । ಸ್ವಾಭುವಂ—ಸರ್ವವ್ಯಾಪಕವಾದುದೂ । ವಾರ್ಯಂ—ಅಪೇಕ್ಷಿತವಾದುದೂ ಆದ ಧನವನ್ನು । ಯಾತಿ—ಒದಗಿಸಲು ಮುಂದೆ ಬರುತ್ತಾನೆ (ಎಲೈ ಅಗ್ನಿಯೇ) । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಂ—ಅನ್ನವನ್ನು । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಸರ್ವವೀಕ್ಷಕನಾದ ಅಗ್ನಿಯು ಯಜಮಾನರಿಗೆ ಅನ್ನಸಂಪದ್ಯುಕ್ತವಾದ ಪುತ್ರಾದಿಗಳನ್ನು ಕೊಡುತ್ತಾನೆ. ತೃಪ್ತನಾದ ಅದೇ ಅಗ್ನಿಯು ಧನಾಪೇಕ್ಷಿಯಾದ ಯಜಮಾನನಿಗೆ ಸರ್ವವ್ಯಾಪಕವಾದುದೂ, ಅಪೇಕ್ಷಿತವಾದುದೂ ಆದ ಧನವನ್ನು ಒದಗಿಸಲು ಮುಂದೆ ಬರುತ್ತಾನೆ. ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ಅನ್ನವನ್ನು ತಂದೊದಗಿಸು.

## English Translation.

Agni, the all-beholding, gives, verily, to the man (who worships him, a son) possessing abundant food: Agni, when propitiated, proceeds (to bestow) that wealth which is of its own nature precious: Agni, bring food to your adorers.

॥ ಸಂಹಿತಾಪಾಠಃ ॥

ಆ ತೇ ಅಗ್ನ ಇಧೀಮಹಿ ದ್ಯುಮಂತಂ ದೇವಾಜರಂ ।

ಯದ್ಧ ಸ್ಯಾ ತೇ ಪನೀಯಸೀ ಸಮಿದ್ದೀದಯತಿ ದ್ಯವೀಷಂ ಸ್ತೋತೃಭ್ಯ ಆ

ಭರ ॥ ೪ ॥

॥ ಪದಪಾಠಃ ॥

ಆ । ತೇ । ಅಗ್ನೇ । ಇಧೀಮಹಿ । ದ್ಯುಽಮಂತಂ । ದೇವ । ಅಜರಂ ॥

ಯತ್ । ಹ । ಸ್ಯಾ । ತೇ । ಪನೀಯಸೀ । ಸಂಽಇತ್ । ದೀದಯತಿ । ದ್ಯವಿ । ಇಷಂ । ಸ್ತೋತೃಽಭ್ಯಃ ।

ಆ । ಭರ ॥ ೪ ॥

॥ ಸಾಯಣಭಾಷ್ಯಂ ॥

ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಸ್ತೋತ್ರಿಯತೃಚಸ್ಯಾ ತೇ ಅಗ್ನ ಇಧೀಮಹೀ-ತ್ಯಾದಿಕೇ ಪ್ರಥಮಾದ್ವಿತೀಯೇ। ಸೂತ್ರಿತಂ ಚ ಭವತಿ। ಆ ತೇ ಅಗ್ನೇ ಇಧೀಮಹ್ಯುಭೇ ಸುಶ್ಚಂದ್ರ ಸರ್ಪಿಷ ಇತಿ ದ್ವೇ ಏಕಾ ಚ । ಆ. ೭-೮ । ಇತಿ ॥

ಹೇ ಅಗ್ನೇ ದೇವ ದ್ಯುಮಂತಂ ದೀಪ್ತಿಮಂತಮಜರಮಜೀರ್ಣಂ ತೇ ತ್ವಾಮಾ ಸರ್ವತ ಇಧೀಮಹಿ । ದೀಪಯಾಮಃ । ಯದ್ಧ ಖಲು ಸ್ಯಾ ಸಾ ತೇ ತವ ಪನೀಯಸೀ ಸ್ತುತ್ಯಾ ಸಮಿದ್ದೀಪ್ತಿ-ರ್ದೀದಯತಿ । ದೀಪ್ಯತೇ । ದ್ಯವಿ ದ್ಯುಲೋಕೇ ॥

॥ ಪ್ರತಿಪದಾರ್ಥ ॥

ದೇವ—ಪ್ರಕಾಶಮಾನನಾದ । ಅಗ್ನೇ—ಎಲೈ ಅಗ್ನಿಯೇ । ಯದ್ಧ—ಯಾವ ಮಾಹಾತ್ಮ್ಯದಿಂದ । ತೇ—ನಿನ್ನ । ಸ್ಯಾ—ಪ್ರಸಿದ್ಧವಾದುದೂ । ಪನೀಯಸೀ—ಪ್ರಶಂಸಿತವಾದುದೂ ಆದ । ಸಮಿತ್—ಕಾಂತಿಯು ದ್ಯವಿ—ಅಂತರಿಕ್ಷದಲ್ಲಿ । ದೀದಯತಿ—ಪ್ರಕಾಶಿಸುವುದೋ (ಆದುದರಿಂದ) । ದ್ಯುಮಂತಂ—ಪ್ರಭಾಯುತ ನಾದವನೂ । ಅಜರಂ—ಕ್ಷಯರಹಿತನೂ ಆದ । ತೇ—ನಿನ್ನನ್ನು । ಆ ಇಧೀಮಹಿ—ಸರ್ವತ್ರ ಪ್ರಜ್ವಲಿತ ನನ್ನಾಗಿ ಮಾಡುತ್ತೇವೆ । (ಎಲೈ ಅಗ್ನಿಯೇ) । ಸ್ತೋತೃಭ್ಯಃ—ನಿನ್ನನ್ನು ಸ್ತುತಿಸುವವರಿಗೆ । ಇಷಃ—ಅನ್ನವನ್ನು । ಆ ಭರ—ತಂದೊದಗಿಸು ।

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ಯಾವ ನಿನ್ನ ಮಾಹಾತ್ಮ್ಯದಿಂದ ನಿನ್ನ ಪ್ರಸಿದ್ಧವಾದುದೂ, ಪ್ರಶಂಸಿತ ವಾದುದೂ ಆದ ಕಾಂತಿಯು ಅಂತರಿಕ್ಷದಲ್ಲಿ ಪ್ರಕಾಶಿಸುವುದೋ, ಆ ಕಾರಣದಿಂದಲೇ, ಪ್ರಭಾಯುತನಾದವನೂ,

ಕ್ಷಯರಹಿತನೂ ಆದ ನಿನ್ನನ್ನು ಸರ್ವತ್ರ ಪ್ರಜ್ವಲಿತನನ್ನಾಗಿ ಮಾಡುತ್ತೇವೆ. ಎಲೈ ಅಗ್ನಿಯೇ, ನಿನ್ನನ್ನು ಸ್ತುತಿಸುವವಂಗೆ ಅನ್ನವನ್ನು ತಂದೊಗಿಸು.

### English Translation

We kindle you, divine Agni, bright, undecaying, so that your glorious blaze shines in heaven: bring food to your adorers.

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯವೆಂಬಯಾಗದ ತೃತೀಯ ಸವನಕಾಲದಲ್ಲಿ ಆ ತೇ ಅಗ್ನ ಇಧೀಮಹಿ ಎಂಬ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಸ್ತೋತ್ರಿಯತೃಚದ ಮೊದಲಿನ ಎರಡು ಋಕ್ಕುಗಳಿಗಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಆ ತೇ ಅಗ್ನ ಇಧೀಮಹ್ಯುಭೇ ಸುಶ್ಚಂದ್ರ ಸರ್ಪಿಷ ಇತಿ ದ್ವೇ ಏಕಾಚ ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

---

॥ ಸಂಹಿತಾಪಾಠಃ ॥

ಆ ತೇ ಅಗ್ನ ಋಚಾ ಹವಿಃ ಶುಕ್ರಸ್ಯ ಶೋಚಿಷಸ್ಪತೇ ।
ಸುಶ್ಚಂದ್ರ ದಸ್ಮ ವಿಶ್ಪತೇ ಹವ್ಯವಾಟ್ ತುಭ್ಯಂ ಹೂಯತ ಇಷಂ
ಸ್ತೋತೃಭ್ಯ ಆ ಭರ ॥ ೫ ॥

॥ ಪದಪಾಠಃ ॥

ಆ । ತೇ । ಅಗ್ನೇ । ಋಚಾ । ಹವಿಃ । ಶುಕ್ರಸ್ಯ । ಶೋಚಿಷಃ । ಪತೇ ॥
ಸುಽಚಂದ್ರ । ದಸ್ಮ । ವಿಶ್ಪತೇ । ಹವ್ಯಽವಾಟ್ । ತುಭ್ಯಂ । ಹೂಯತೇ । ಇಷಂ । ಸ್ತೋತೃಽಭ್ಯಃ ।
ಆ । ಭರ ॥ ೫ ॥

॥ ಸಾಯಣಭಾಷ್ಯಂ ॥

ಹೇ ಶೋಚಿಷೋ ದೀಪ್ತೇಃ ಪತೇ ಸ್ವಾಮಿನ್ನಗ್ನೇ ಶುಕ್ರಸ್ಯ ದೀಪ್ತಸ್ಯ ತೇ ತುಭ್ಯಮೃಚಾ ಮಂತ್ರೇಣ ಸಹ ಹವಿರ್ಹೂಯತೇ । ಹೇ ಸುಶ್ಚಂದ್ರ ಸುಷ್ಠ್ವಾಹ್ಲಾದಕ ಶೋಭನಹಿರಣ್ಯ ವಾ ಹೇ ದಸ್ಮ ಶತ್ರೂಣಾಮುಪಕ್ಷಪಯಿತರ್ವಿಶ್ಪತೇ ವಿಶಾಂ ಪ್ರಜಾನಾಂ ಪಾಲಕ ಹವ್ಯವಾಟ್ ಹವಿಷೋ ವೋಢಃ । ಇಷಮಿತಿ ಗತಂ ॥

॥ ಪ್ರತಿಪದಾರ್ಥ ॥

ಶೋಚಿಷಃ—ಪ್ರಭೆಗೆ | ಪತೇ—ಒಡೆಯನಾದ | ಅಗ್ನೇ—ಎಲೈ ಅಗ್ನಿಯೇ | ಶುಕ್ರಸ್ಯ—ಪ್ರಭಾಯುತನಾದ | ತೇ—ನಿನ್ನನ್ನುದ್ದೇಶಿಸಿ | ಋಚಾ—ಮಂತ್ರಪೂರ್ವಕವಾಗಿ | ಹವಿಃ—ಹವಿಸ್ಸು (ಅರ್ಪಿತವಾಗುತ್ತದೆ) | ಸುಶ್ಚಂದ್ರ—ಅತ್ಯಂತ ಆಹ್ಲಾದಕಾರಕನೂ | ದಸ್ಮ—ಶತ್ರುನಾಶಕನೂ | ವಿಶ್ಪತೇ—ಯಜಮಾನರ ಪಾಲಕನೂ | ಹವ್ಯವಾಟ್—(ದೇವತೆಗಳಿಗೆ) ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯೇ | ತುಭ್ಯಂ—ನಿನ್ನನ್ನುದ್ದೇಶಿಸಿ | ಹೂಯತೇ—ಹವಿಸ್ಸು ಅರ್ಪಿತವಾಗುತ್ತದೆ | ಸ್ತೋತೃಭ್ಯಃ—ನಿನ್ನ ಸ್ತುತಿಕರ್ತರಿಗೆ | ಇಷಃ—ಅನ್ನವನ್ನು | ಆ ಭರ—ತಂದೊಗಿಸು.

॥ ಭಾವಾರ್ಥ ॥

ಪ್ರಭೆಗೆಲ್ಲಾ ಒಡೆಯನಾದ ಎಲೈ ಅಗ್ನಿಯೇ, ಪ್ರಭಾಯತನಾಡ ನಿನ್ನನ್ನುದ್ದೇಶಿಸಿ ಮಂತ್ರಪೂರ್ವಕವಾದ ಹವಿಸ್ಸು ಅರ್ಪಿತವಾಗುತ್ತದೆ. ಅತ್ಯಂತ ಆಹ್ಲಾದಕಾರಕನೂ, ಶತ್ರುನಾಶಕನೂ, ಯಜಮಾನರ ಪಾಲಕನೂ, ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯೇ, ನಿನಗಾಗಿ ಹವಿಸ್ಸು ಅರ್ಪಿತವಾಗುತ್ತದೆ. ಎಲೈ ಅಗ್ನಿಯೇ, ನಿನ್ನ ಸ್ತುತಿಕರ್ತರಿಗೆ ಅನ್ನವನ್ನು ತಂದೊಗಿಸು.

## English Translation.

To you, radiant Agni, lord of light, giver of pleasure, destroyer (of foes), protector of man, the bearer of oblations, to you the oblation is offered with the sacred verse: bring food to your adorers.



॥ ಸಂಹಿತಾಪಾಠಃ ॥

ಪ್ರೋ ತ್ಯೇ ಅಗ್ನಯೋಽಗ್ನಿಷು ವಿಶ್ವಂ ಪುಷ್ಯಂತಿ ವಾರ್ಯಂ |
ತೇ ಹಿನ್ವಿರೇ ತ ಇನ್ವಿರೇ ತ ಇಷಣ್ಯಂತ್ಯಾನುಷಗಿಷಂ ಸ್ತೋತೃಭ್ಯ ಆ ಭರ ॥೬॥

॥ ಪದಪಾಠಃ ॥

ಪ್ರೋ ಇತಿ | ತ್ಯೇ | ಅಗ್ನಯಃ | ಅಗ್ನಿಷು | ವಿಶ್ವಂ | ಪುಷ್ಯಂತಿ | ವಾರ್ಯಂ ॥
ತೇ | ಹಿನ್ವಿರೇ | ತೇ | ಇನ್ವಿರೇ | ತೇ | ಇಷಣ್ಯಂತಿ | ಆನುಷಕ್ | ಇಷಂ | ಸ್ತೋತೃಽಭ್ಯಃ | ಆ | ಭರ ॥೬॥

॥ ಸಾಯಣಭಾಷ್ಯಂ ॥

ಪ್ರೋ ಪ್ರೈವ ಪುಷ್ಯಂತಿ ತ್ಯೇ ತೇಽಗ್ನಯೋ ಧಿಷ್ಣ್ಯಾ ಅಗ್ನಿಷು ಗಾರ್ಹಪತ್ಯಾದಿಷು । ಯದ್ವಾ। ಲೌಕಿಕಾ ಅಗ್ನಯಸ್ತೇಜಃಪದಾರ್ಥೋಽಗ್ನಿಷು ವೈದಿಕೇಷು ವಿಶ್ವಂ ಸರ್ವಂ ವಾರ್ಯಂ ವರಣೀಯಮ-ಪೇಕ್ಷಿತಂ ಧನಂ ಪುಷ್ಯಂತಿ । ತೇಽಗ್ನಯೋ ಹಿನ್ವಿರೇ । ಪ್ರೀಣಯಂತಿ । ಇನ್ವಿರೇ । ವ್ಯಾಪ್ನುವಂತಿ ಚ । ತ ಇಷಣ್ಯಂತಿ । ಅನ್ನಮಿಚ್ಛಂತಿ । ಆನುಷಕ್ ಸರ್ವತ್ರಾನುಷಕ್ತಂ । ಕತ್ರಾಗ್ನಿಸಾಮಾನ್ಯಾಭಿಪ್ರಾಯೇಣೈಕ-ವಚನಂ ॥

॥ ಪ್ರತಿಪದಾರ್ಥ ॥

ತ್ಯೇ—ಪ್ರಸಿದ್ಧವಾದ । ಅಗ್ನಯಃ—ಅಗ್ನಿಗಳು । ಅಗ್ನಿಷು—ಯಜ್ಞಾಗ್ನಿಗಳಲ್ಲಿ । ವಿಶ್ವಂ—ಸಮಸ್ತವಾದವೂ । ವಾರ್ಯಂ—ಅಪೇಕ್ಷಿತವಾದವೂ ಆದ ಧನಗಳನ್ನು । ಪ್ರೋ ಪುಷ್ಯಂತಿ—ಅತಿಶಯವಾಗಿ ಪೋಷಿಸುತ್ತವೆ । ತೇ—ಅದೇ ಅಗ್ನಿಗಳು । ಹಿನ್ವಿರೇ—ತೃಪ್ತಿಪಡಿಸುತ್ತವೆ । ತೇ—ಅವೇ । ಇನ್ವಿರೇ—ವ್ಯಾಪಿಸುತ್ತವೆ । ತೇ—ಅವೇ । ಆನುಷಕ್—ಸರ್ವತ್ರ । ಇಷಣ್ಯಂತಿ— ಯಜ್ಞಾನ್ನವನ್ನು ಇಚ್ಛಿಸುತ್ತವೆ (ಎಲೈ ಅಗ್ನಿಯೇ)। ಸ್ತೋತೃಭ್ಯಃ—ಸ್ತೋತೃಗಳಿಗೆ । ಇಷಂ—ಅನ್ನವನ್ನು । ಆ ಭರ—ತಂದುಕೊಡು.

॥ ಭಾವಾರ್ಥ ॥

ಪ್ರಸಿದ್ಧವಾದ ಲೌಕಿಕಾಗ್ನಿಗಳು ಯಜ್ಞಾಗ್ನಿಗಳಲ್ಲಿ ಸಮಸ್ತವೂ, ಸರ್ವಾಪೇಕ್ಷಿತವೂ ಆದ ಧನಗಳನ್ನು ಅತಿಶಯವಾಗಿ ಪೋಷಿಸುತ್ತವೆ. ಅದೇ ಅಗ್ನಿಗಳು ಸರ್ವವ್ಯಾಪಕವಾಗಿ ಯಜಮಾನರನ್ನು ತೃಪ್ತಿಪಡಿಸುತ್ತಾ ತಾವೂ ಸಹ ಸರ್ವದಾ ಯಜ್ಞಾನ್ನವನ್ನಿಚ್ಛಿಸುತ್ತವೆ. ಎಲೈ ಅಗ್ನಿಯೇ, ನಿನ್ನ ಸ್ತುತಿಕರ್ತರಿಗೆ ಅನ್ನವನ್ನು ತಂದೊದಗಿಸು.

## English Translation.

These fires cherish all that is precious in the fires (of sacrifice); they give delight; they spread abroad; they crave perpetually (sacrificial) food: bring, Agni, food to your adorers.



॥ ಸಂಹಿತಾಪಾಠಃ ॥

ತವ ತ್ಯೇ ಅಗ್ನೇ ಅರ್ಚಯೋ ಮಹಿ ವ್ರಾಧಂತ ವಾಜಿನಃ ।
ಯೇ ಪತ್ವಭಿಃ ಶಫಾನಾಂ ವ್ರಜಾ ಭುರಂತ ಗೋನಾಮಿಷಂ ಸ್ತೋತೃಭ್ಯ ಆ ಭರ ॥ ೭ ॥

॥ ಪದಪಾಠಃ ॥

ತವ । ತ್ಯೇ । ಅಗ್ನೇ । ಅರ್ಚಯಃ । ಮಹಿ । ವ್ರಾಧಂತ । ವಾಜಿನಃ ।

ಯೇ । ಪತ್ವಽಭಿಃ । ಶಫಾನಾಂ । ವ್ರಜಾ । ಭುರಂತ । ಗೋನಾಂ । ಇಷಂ । ಸ್ತೋತೃಽಭ್ಯಃ । ಆ । ಭರ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತವ ತ್ವದೀಯಾಸ್ತ್ಯೇ ತೇಽರ್ಚಯೋ ರಶ್ಮಯೋ ಮಹಿ ಮಹದತ್ಯಧಿಕಂ ವಾಜಿನೋಽನ್ನವಂತೋ ವಾ ವ್ರಾಧಂತ। ವರ್ಧಂತೇ। ಯದ್ವಾ ಲುಪ್ತೋಪಮಾ। ವಾಜಿನೋಽಶ್ವಾ ಇವ। ಯೇ ರಶ್ಮಯಃ ಪತ್ವಭಿಃ ಪತನೈಃ ಶಫಾನಾಂ ಗೋನಾಂ ವ್ರಜಾ ಯೂಥಾನಿ ಭುರಂತ। ಇಚ್ಛಂತಿ। ಆಯತಾ ಜ್ವಾಲಾ ಹೋಮಾಯ ಕಾಂಕ್ಷಂತ ಇತ್ಯರ್ಥಃ। ತೇ ವರ್ಧಂತೇ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯೇ—ಯಾವ ನಿನ್ನ ರಶ್ಮಿಗಳು । ಪತ್ವಭಿಃ— ತಮ್ಮ ಪತನರೂಪವಾದ ವಿಸ್ತೃತಿಯಿಂದ । ಶಫಾನಾಂ—ಗೊರಸುಗಳುಳ್ಳ । ಗೋನಾಂ—ಗೋವುಗಳ । ವ್ರಜಾ—ಕೊಟ್ಟಗೆಗಳನ್ನು । ಭುರಂತ—(ಯಜ್ಞಸಾಧನವೆಂದು) ಇಚ್ಛಿಸುವುವೋ । ತ್ಯೇ-ಅಂತಹ ಪ್ರಸಿದ್ಧವಾದ। ತವ-ನಿನ್ನ । ಅರ್ಚಯಃ-ರಶ್ಮಿಗಳು । ಮಹಿ—ಅತ್ಯಧಿಕವಾದ । ವಾಜಿನಂ—ಅನ್ನವುಳ್ಳವಾಗಿ । ವ್ರಾಧಂತೇ—ವೃದ್ಧಿಯನ್ನು ಹೊಂದುತ್ತವೆ । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಂ—ಅನ್ನವನ್ನು । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನ ರಶ್ಮಿಗಳು ತಮ್ಮ ಪತನರೂಪವಾದ ವಿಸ್ತೃತಿಯಿಂದ ಗೊರಸುಗಳುಳ್ಳ ಗೋವುಗಳುಳ್ಳವೂ ಮತ್ತು ಯಜ್ಞಾಂಗವಾದ ಗವ್ಯವನ್ನೊದಗಿಸುವುವೂ ಆದ ಗೋವುಗಳ ಕೊಟ್ಟಗೆಯನ್ನು ಇಚ್ಛಿಸುವುವೋ, ಅಂತಹ ನಿನ್ನ ರಶ್ಮಿಗಳು ಅತ್ಯಧಿಕವಾದ ಅನ್ನವುಳ್ಳವಾಗಿ ವೃದ್ಧಿಯನ್ನು ಹೊಂದುತ್ತವೆ. ಸ್ತೋತೃಗಳಾದ ನಮಗೆ ಅನ್ನವನ್ನು ತಂದೊದಗಿಸು.

## English Translation.

These your flames, Agni, fed with abundant food, increase, as, by their descent, they seek the pastures of the hoofed cattle: bring, Agni, food to your adorers.

॥ ಸಂಹಿತಾಪಾಠಃ ॥

ನವಾ ನೋ ಅಗ್ನ ಆ ಭರ ಸ್ತೋತೃಭ್ಯಃ ಸುಕ್ಷಿತೀರಿಷಃ ।
ತೇ ಸ್ಯಾಮ ಯ ಆನೃಚುಸ್ತ್ವಾದೂತಾಸೋ ದಮೇದಮ ಇಷಂ ಸ್ತೋ-
ತೃಭ್ಯ ಆ ಭರ ॥ ೮ ॥

॥ ಪದಪಾಠಃ ॥

ನವಾಃ । ನಃ । ಅಗ್ನೇ । ಆ । ಭರ । ಸ್ತೋತೃಽಭ್ಯಃ । ಸುಽಕ್ಷಿತೀಃ । ಇಷಃ ।

ತೇ । ಸ್ಯಾಮ । ಯೇ । ಆನೃಚುಃ । ತ್ವಾಽದೂತಾಸಃ । ದಮೇಽದಮೇ । ಇಷಂ । ಸ್ತೋತೃಽಭ್ಯಃ । ಆ । ಭರ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ್ತೋತೃಭ್ಯೋ ನೋಽಸ್ಮಭ್ಯಂ ನವಾಃ ಸ್ತುತ್ಯಾ ನೂತ್ನಾ ವಾ ಸುಕ್ಷಿತೀಃ ಸುನಿವಾಸಾಃ ಸುಪ್ರಜಾ ವಾ ಇಷ ಉಕ್ತಲಕ್ಷಣಾನ್ಯನ್ನಾನ್ಯಾ ಭರ । ಪ್ರಯಚ್ಛ । ಯೇ ವಯಂ ದಮೇ ದಮೇ ಸರ್ವೇಷು ಯಾಗಗೃಹೇಷು ತ್ವಾಮಾನೃಚುಃ । ಅರ್ಚಯಂತಿ । ತೇ ವಯಂ ತ್ವಾದೂತಾಸಸ್ತ್ವಾಂ ದೂತಂ ಫಲಸೂಚಕಂ ಲಬ್ಧವಂತಃ ಸಂತಃ ಸ್ಯಾಮ । ಸಮೃದ್ಧಾ ಭೂಯಾಸ್ಮ । ದಮೇ ದಮೇ ಸ್ಯಾಮೇತಿ ವಾ ಯೋಜ್ಯಂ ॥

॥ ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । ಸ್ತೋತೃಭ್ಯಃ—ಸ್ತೋತೃಗಳಾದ । ನಃ—ನಮಗೆ । ನವಾಃ—ನೂತನವಾದವೂ । ಸುಕ್ಷಿತೀಃ—ಶ್ರೇಷ್ಠವಾದವೂ ಆದ ವಾಸಸ್ಥಾನಗಳನ್ನೂ । ಇಷಃ—ಅನ್ನಗಳನ್ನೂ । ಆ ಭರ—ಒದಗಿಸಿಕೊಡು । ಯೇ—ಯಾವ ನಾವು । ದಮೇದಮೇ—ಪ್ರತಿಯೊಂದು ಯಜ್ಞಗೃಹದಲ್ಲಿಯೂ । ಆನೃಚುಃ—ನಿನ್ನನ್ನು ಪೂಜಿಸುವೆವೋ । ತೇ—ಅಂತಹ ನಾವು । ತ್ವಾದೂತಾಸಃ—ನಿನ್ನನ್ನೇ ದೇವದೂತನನ್ನಾಗಿ ಆರಿಸಿ । ಸ್ಯಾಮ—ಸುಖವಾಗಿರುವಂತೆ ಆಗಲಿ (ಎಲೈ ಅಗ್ನಿಯೇ) । ಸ್ತೋತೃಭ್ಯಃ—ನಿನ್ನನ್ನು ಸ್ತುತಿಸುವ ನಮಗೆ । ಇಷಃ—ಅನ್ನಗಳನ್ನು । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ನೂತನವಾದವೂ, ಶ್ರೇಷ್ಠವಾದವೂ ಆದ ವಾಸಸ್ಥಾನಗಳನ್ನೂ, ಅನ್ನಗಳನ್ನೂ ಒದಗಿಸಿಕೊಡು. ಯಾವ ನಾವು ಪ್ರತಿಯೊಂದು ಯಜ್ಞಗೃಹದಲ್ಲೂ ನಿನ್ನನ್ನು ಪೂಜಿಸುವೆವೋ, ಅಂತಹ ನಾವು ನಿನ್ನನ್ನು ದೇವದೂತನನ್ನಾಗಿ ಆರಿಸಿ ಸುಖವಾಗಿರುವಂತಾಗಲಿ. ಎಲೈ ಅಗ್ನಿಯೇ, ನಿನ್ನನ್ನು ಸ್ತುತಿಸುವ ನಮಗೆ ಅನ್ನಗಳನ್ನು ತಂದೊಗಿಸು.

## English Translation.

Grant, Agni, to us who praise you, new dwellings, and (abundant) food: may we be those who worship you, having you for a messenger (to the gods) in every house: bring, Agni, food to your adorers.

---

॥ ಸಂಹಿತಾಪಾಠಃ ॥

ಉಭೇ ಸುಶ್ಚಂದ್ರ ಸರ್ಪಿಷೋ ದರ್ವೀ ಶ್ರೀಣೀಷ ಆಸನಿ ।
ಉತೋ ನ ಉತ್ಪುಪೂರ್ಯಾ ಉಕ್ಥೇಷು ಶವಸಸ್ಪತ ಇಷಂ ಸ್ತೋತೃಭ್ಯ
ಆ ಭರ ॥ ೯ ॥

॥ ಪದಪಾಠಃ ॥

ಉಭೇ ಇತಿ । ಸುऽಚಂದ್ರ । ಸರ್ಪಿಷಃ । ದರ್ವೀ ಇತಿ । ಶ್ರೀಣೀಷೇ । ಆಸನಿ ।
ಉತೋ ಇತಿ । ನಃ । ಉತ್ । ಪುಪೂರ್ಯಾಃ । ಉಕ್ಥೇಷು । ಶವಸಃ । ಪತೇ । ಇಷಂ । ಸ್ತೋತೃऽಭ್ಯಃ ।
ಆ । ಭರ ॥ ೯ ॥

॥ ಸಾಯಣಭಾಷ್ಯಂ ॥

ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ವೈಕಲ್ಪಿಕಸ್ತೋತ್ರಿಯತೃಚ ಉಭೇ ಸುಶ್ಚಂದ್ರೇತ್ಯೇಷಾ ತೃತೀಯಾ । ಸೂತ್ರಮುಕ್ತಂ ॥

ಹೇ ಸುಶ್ಚಂದ್ರ ಶೋಭನಾಹ್ಲಾದನ ಶೋಭನಹಿರಣ್ಯ ವಾಗ್ನೇ ಉಭೇ ಸರ್ಪಿಷಃ ಪೂರ್ಣೇ ದರ್ವೀ ಜುಹೂಪಭೃತಾವಾಸನ್ಯಾಸ್ಯೇ ಶ್ರೀಣೀಷೇ। ಶ್ರಯಸಿ ಪಚಸಿ ವಾ। ಉತೋ ಅಪಿ ಚ ನೋಽಸ್ಮಾನುಕ್ಥೇಷು ಯಾಗೇಷೂತ್ಪುಪೂರ್ಯಾಃ । ಉತ್ಪೂರಯ ಫಲೈಃ। ಹೇ ಶವಸಸ್ಪತೇ ಬಲಸ್ಯ ಪಾಲಯಿತಃ ॥

॥ ಪ್ರತಿಪದಾರ್ಥ ॥

ಸುಶ್ಚಂದ್ರ—ಆಹ್ಲಾದಕಾರಕನಾದ ಎಲೈ ಅಗ್ನಿಯೇ । ಸರ್ಪಿಷಃ—ಆಜ್ಯಪೂರ್ಣವಾದ । ಉಭೇ ದರ್ವೀ—ಎರಡು ದರ್ವಿಗಳನ್ನೂ । ಆಸನಿ—ನಿನ್ನ ಮುಖದಲ್ಲಿ । ಶ್ರೀಣೀಷೇ—ಸ್ವೀಕರಿಸುತ್ತೀಯೆ । ಉತ—ಮತ್ತು । ಶವಸಸ್ಪತೇ—ಶಕ್ತಿಪಾಲಕನಾದ ಅಗ್ನಿಯೇ । ನಃ—ನಮ್ಮನ್ನು । ಉಕ್ಥೇಷು—ಯಾಗಗಳಲ್ಲಿ । ಉತ್ಪುಪೂರ್ಯಾಃ—ಫಲಗಳಿಂದ ಪೂರ್ಣರನ್ನಾಗಿ ಮಾಡು । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಃ—ಅನ್ನಗಳನ್ನು । ಆ ಭರ—ತಂದೊಗಿಸು.

॥ ಭಾವಾರ್ಥ ॥

ಆಹ್ಲಾದಕಾರಕನಾದ ಎಲೈ ಅಗ್ನಿಯೇ, ಆಜ್ಯಪೂರ್ಣವಾದ ಎರಡು ದರ್ವಿಪಾತ್ರೆಗಳನ್ನು ನೀನು ಮುಖದಿಂದ ಸ್ವೀಕರಿಸುತ್ತೀಯೆ. ಮತ್ತು ಶಕ್ತಿಪಾಲಕನಾದ ಎಲೈ ಅಗ್ನಿಯೇ, ಯಜ್ಞಫಲಗಳಿಂದ ನಮ್ಮನ್ನು ಸಂಪತ್ಸಮೃದ್ಧರನ್ನಾಗಿ ಮಾಡು. ಸ್ತೋತೃಗಳಾದ ನಮಗೆ ಅನ್ನವನ್ನು ತಂದೊಗಿಸು.

## English Translation.

Giver of delight, you receive into your mouth the two ladles (full) of butter; so may you fulfil (our desires), lord of strength, at our solemn rites: bring, Agni, food to your adorers.

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯವೆಂಬ ಯಾಗದ ತೃತೀಯಸವನಕಾಲದಲ್ಲಿ ಉಭೇ ಸುಶ್ಚಂದ್ರ ಎಂಬ ಈ ಋಕ್ಕನ್ನು ವೈಕಲ್ಪಿಕಸ್ತೋತ್ರಿಯತೃಚದ ಮೂರನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಆ ತೇ ಅಗ್ನ ಇಧೀಮಹ್ಯುಭೇ ಸುಶ್ಚಂದ್ರ ಸರ್ಪಿಷ ಇತಿ ದ್ವೇ ಏಕಾ ಚ ಎಂಬ ಸೂತ್ರದಿಂದ (ಆ. ೭-೮). ವಿವೃತವಾಗಿರುವುದು. (ಈ ಸೂಕ್ತದ ೪ ನೆಯ ಋಕ್ಕಿನ ವಿಷಯಗಳನ್ನು ನೋಡಿ).

॥ ಸಂಹಿತಾಪಾಠಃ ॥

ಏವಾँ ಅಗ್ನಿಮಜುರ್ಯಮುರ್ಗೀರ್ಭಿರ್ಯಜ್ಞೇಭಿರಾನುಷಕ್ ।
ದಧದಸ್ಮೇ ಸುವೀರ್ಯಮುತ ತ್ಯದಾಶ್ವಶ್ವ್ಯಮಿಷಂ ಸ್ತೋತೃಭ್ಯ ಆ ಭರ ॥

॥ ಪದಪಾಠಃ ॥

ಏವ । ಅಗ್ನಿಂ । ಅಜುರ್ಯಮುಃ । ಗೀಃऽಭಿಃ । ಯಜ್ಞೇಭಿಃ । ಆನುಷಕ್ ॥
ದಧತ್ । ಅಸ್ಮೇ ಇತಿ । ಸುऽವೀರ್ಯಂ । ಉತ । ತ್ಯತ್ । ಆಶುऽಅಶ್ವ್ಯಂ । ಇಷಂ । ಸ್ತೋತೃऽಭ್ಯ । ಆ । ಭರ ॥ ೧೦ ॥

॥ ಸಾಯಣಭಾಷ್ಯಂ ॥

ಏವೋಕ್ತರೀತ್ಯಾಗ್ನಿಂ ಗೀರ್ಭಿಃ ಸ್ತುತಿಭಿರ್ಯಜ್ಞೇಭಿರ್ಯಜ್ಞೈರ್ವಾ ತತ್ಸಾಧನೈರ್ಹವಿರ್ಭಿರ್ವಾನುಷಗನುಷಕ್ತಮಜುಃ । ಗಚ್ಛಂತಿ । ತಥಾ ಕೃತ್ವಾ ಯಮುಃ । ಯಮಯಂತಿ । ಸ್ಥಾಪಯಂತಿ । ಹವಿರ್ಭಿರ್ಯಜಂತೀತ್ಯರ್ಥಃ । ಏವಮಾತ್ರೇಯಾಃ ಸ್ವಾನ್ಪರೋಕ್ಷತಯಾ ನಿರ್ದಿಶಂತಿ ॥ ಅಜುರ್ಯಮುರಿ-

ತ್ಯತ್ಪ್ರಖ್ಯಾತವಮಾಖ್ಯಾತೇನ ಕ್ರಿಯಾಸಾತತ್ಯ ಇತಿ ಸಮಾಸಃ ॥ ಕಿಂಚ ಅಸ್ಮೇ ಅಸ್ಮಾಸು ಸುವೀರ್ಯಂ ಶೋಭನಪುತ್ರಾದಿಕಮುತಾಪಿ ಚ ತ್ಯತ್ತದಾಶ್ವಶ್ವ್ಯಂ । ಆಶವೋಽಶ್ವಾ ಯಸ್ಯ ಭವಂತಿ ಸ ಆಶ್ವಶ್ವಃ । ತಸ್ಯ ಭಾವ ಆಶ್ವಶ್ವ್ಯಂ । ತದಪಿ ದಧತ್ । ಧಾರಯತಿ ॥

॥ ಪ್ರತಿಪದಾರ್ಥ ॥

ಏವ—ಮೇಲೆ ಉಕ್ತವಾದ ರೀತಿಯಲ್ಲಿ (ಋತ್ವಿಗಾದಿಗಳು) । ಅಗ್ನಿಂ—ಅಗ್ನಿಯನ್ನು । ಗೀರ್ಭಿಃ—ಸ್ತುತಿಗಳಿಂದಲೂ । ಯಜ್ಞೇಭಿಃ— ಯಜ್ಞಸಾಧನಗಳಿಂದಲೂ । ಆನುಷಕ್—ನಿರಂತರವೂ । ಅಜುಃ—ಸಮೀಪಿಸಿದ್ದಾರೆ । ಯೆಮುಃ—ಯಜ್ಞಾದಿಗಳಿಂದ ಆರಾಧಿಸಿದ್ದಾರೆ । (ಅದೇ ಅಗ್ನಿಯು) ಅಸ್ಮೇ—ನಮಗಾಗಿ । ಸುವೀರ್ಯಂ—ಶ್ರೇಷ್ಠವಾದ ಶಕ್ತಿಯುಳ್ಳ ಪುತ್ರಾದ್ಯುಪೇತವಾದುದೂ । ಉತ—ಮತ್ತು । ಆಶ್ವಶ್ವ್ಯಂ—ವೇಗಗಾಮಿಗಳಾದ ಅಶ್ವಗಳಿಂದ ಕೂಡಿದುದೂ ಆದ । ತ್ಯತ್—ಧನಸಂಪತ್ತನ್ನು । ದಧತ್—ಧರಿಸಿದ್ದಾನೆ । ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಇಷಂ—ಅನ್ನವನ್ನು । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಮೇಲೆ ಉಕ್ತವಾದ ರೀತಿಯಲ್ಲಿ ಋತ್ವಿಗಾದಿಗಳು ಅಗ್ನಿಯನ್ನು ಸ್ತುತಿಗಳಿಂದಲೂ ಯಜ್ಞಸಾಧನಗಳಿಂದಲೂ ನಿರಂತರವೂ ಸಮೀಪಿಸಿದ್ದಾರೆ. ಮತ್ತು ಯಜ್ಞಾದಿಗಳಿಂದ ಆರಾಧಿಸಿದ್ದಾರೆ. ಅದೇ ಅಗ್ನಿಯು ನಮಗಾಗಿ ಶ್ರೇಷ್ಠವಾದ ಶಕ್ತಿಯುಳ್ಳ ಪುತ್ರಾದ್ಯುಪೇತವಾದುದೂ, ವೇಗಗಾಮಿಗಳಾದ ಅಶ್ವಯುಕ್ತವಾದದೂ ಆದ ಧನಸಂಪತ್ತನ್ನು ಧರಿಸಿದ್ದಾನೆ. ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ಅನ್ನವನ್ನು ತಂದೊದಗಿಸು.

## English Translation.

Thus have they repaired to Agni with praises and with sacrifice successively, and have established (the manner of his worship); and he has given us male descendants, and wealth of fleet horses: bring, Agni food to your adorers.

## ಏಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಸಖಾಯಃ ಸಂ ವ ಇತಿ ದಶರ್ಚಂ ಸಪ್ತಮಂ ಸೂಕ್ತಂ । ಆತ್ರೇಯ ಇಷ ಋಷಿಃ । ಅಂತ್ಯಾ ಪಂಕ್ತಿಃ ಶಿಷ್ಟಾಃ ಪಂಕ್ತ್ಯಂತಪರಿಭಾಷಯಾನುಷ್ಟುಭಃ । ತಥಾ ಚಾನುಕ್ರಾಂತಂ । ಸಖಾಯ ಇಷಃ ಪಂಕ್ತ್ಯಂತಮಿತಿ ॥ ಪ್ರಾತರನುವಾಕ ಆಗ್ನೇಯೇ ಕ್ರತಾವಾನುಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೋತ್ತ್ರಪಂಕ್ತ್ಯಂತಮಿತಿ ॥ ಪ್ರಾತರನುವಾಕ ಆಗ್ನೇಯೇ ಕ್ರತಾವಾನುಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೋತ್ತ್ರ-

ಅನುವಾದವು—**ಸಖಾಯಃ ಸಂ ವಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರೋದ್ಭವನಾದ ಇಷನೆಂಬುವನು ಋಷಿಯು; ಅಗ್ನಿಯು ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ಪಂಕ್ತಿಚ್ಛಂದಸ್ಕವು; ಉಳಿದ ಋಕ್ಕುಗಳು ಅನುಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಸಖಾಯ ಇಷಃ ಪಕ್ತ್ಯಂತಂ** ಎಂದು ಹೇಳಿರುವುದು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಅನುಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಸಖಾಯಃ ಸಂ ವಸ್ತ್ವಾಮಗ್ನೇ ಹವಿಷ್ಮಂತ ಇತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

## ಸೂಕ್ತ—೭

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೭ ॥

ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೨೪, ೨೫ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

ಋಷಿಃ—ಇಷ ಆತ್ರೇಯಃ ॥

ದೇವತಾ—ಅಗ್ನಿಃ ॥

ಛಂದಃ—೧-೯ ಅನುಷ್ಟುಪ್ । ೧೦. ಪಂಕ್ತಿಃ ॥

॥ ಸಂಹಿತಾಪಾಠಃ ॥

ಸಖಾಯಃ ಸಂ ವಃ ಸಮ್ಯಂಚಮಿಷಂ ಸ್ತೋಮಂ ಚಾಗ್ನಯೇ ।

ವರ್ಷಿಷ್ಠಾಯ ಕ್ಷಿತೀನಾಮೂರ್ಜೋ ನಪ್ತ್ರೇ ಸಹಸ್ವತೇ ॥ ೧ ॥

॥ ಪದಪಾಠಃ ॥

ಸಖಾಯಃ । ಸಂ । ವಃ । ಸಮ್ಯಂಚಂ । ಇಷಂ । ಸ್ತೋಮಂ । ಚ । ಅಗ್ನಯೇ ॥

ವರ್ಷಿಷ್ಠಾಯ । ಕ್ಷಿತೀನಾಂ । ಊರ್ಜಃ । ನಪ್ತ್ರೇ । ಸಹಸ್ವತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಖಿಭೂತಾ ಋತ್ವಿಜೋ ವೋ ಯೂಯಂ ಸಂಸ್ಕುರುತ । ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಕಿಂಚ ಸಮ್ಯಂಚಮಿಷಮನ್ನಂ ಸ್ತೋಮಂ ಸ್ತೋತ್ರಂ ಚಾಗ್ನಯೇ ವರ್ಷಿಷ್ಠಾಯಾತಿಶಯೇನ ಪ್ರವೃದ್ಧಾಯ ಕ್ಷಿತೀನಾಂ ಯಜಮಾನಾನಾಮರ್ಥಾಯ ವರ್ಷಿಷ್ಠಾಯ ಪ್ರವೃದ್ಧತಮಾಯೋರ್ಜೋ ನಪ್ತ್ರೇ ಬಲಸ್ಯ ನ ಪಾತಯಿತ್ರೇ ತತ್ಪುತ್ರಾಯ ವಾ ಸಹಸ್ವತೇ ಬಲವತೇ ಸಂಸ್ಕುರುತೇತಿ ॥

|| ಪ್ರತಿಪದಾರ್ಥ ||

ಸಖಾಯಃ-ಸಖಿಭೂತರಾದ ಋತ್ವಿಕ್ಕುಗಳೇ | ಕ್ಷಿತೀನಾಂ-ಯಜಮಾನಾದಿಗಳಿಗಾಗಿ | ವರ್ಷಿಷ್ಠಾಯ-ವೃದ್ಧಿಯನ್ನು ಹೊಂದುವವನೂ | ಊರ್ಜೋ ನಪ್ತ್ರೇ—ಶಕ್ತಿಪುತ್ರನೂ | ಸಹಸ್ವತೇ—ಶಕ್ತಿಯುತನೂ ಆದ | ಅಗ್ನಯೇ—ಅಗ್ನಿಯನ್ನುದ್ದೇಶಿಸಿ | ವಃ—ನೀವು | ಸಮ್ಯಂಚಂ—ತದನುರೂಪವಾಗಿ ಪೂರ್ಣವಾದ | ಇಷಂ—ಅನ್ನವನ್ನೂ | ಸ್ತೋಮಂ ಚ—ಸ್ತೋತ್ರವನ್ನೂ | ಸಂ—ಸಂಸ್ಕರಿಸಿ ಅರ್ಪಿಸಿರಿ.

|| ಭಾವಾರ್ಥ ||

ಸಖಿಭೂತರಾದ ಎಲೈ ಋತ್ವಿಕ್ಕುಗಳೇ, ಯಜಮಾನಾದಿಗಳ ಕ್ಷೇಮಕ್ಕಾಗಿ ವೃದ್ಧಿಯನ್ನು ಹೊಂದುವವನೂ, ಶಕ್ತಿಪುತ್ರನೂ ಶಕ್ತಿಯುತನೂ ಆದ ಅಗ್ನಿಯನ್ನುದ್ದೇಶಿಸಿ ತದನುರೂಪವಾದುದೂ, ಸುಸಂಸ್ಕೃತವಾದುದೂ ಆದ ಅನ್ನವನ್ನೂ, ಸ್ತೋತ್ರವನ್ನೂ ಸಂಪಾದಿಸಿ ಅರ್ಪಿಸಿರಿ.

**English Translation.**

Friends, offer fitting praise and food to Agni, the most liberal benefactor of men, the powerful son of strength.



|| ಸಂಹಿತಾಪಾಠಃ ||

ಕುತ್ರಾ ಚಿದ್ಯಸ್ಯ ಸಮೃತೌ ರಣ್ವಾ ನರೋ ನೃಷದನೇ |
ಅರ್ಹಂತಶ್ಚಿದ್ಯಮಿಂಧತೇ ಸಂಜನಯಂತಿ ಜಂತವಃ || ೨ ||

|| ಪದಪಾಠಃ ||

ಕುತ್ರ | ಚಿತ್ | ಯಸ್ಯ | ಸಂಽಋತೌ | ರಣ್ವಾಃ | ನರಃ | ನೃಽಸದನೇ ||
ಅರ್ಹಂತಃ | ಚಿತ್ | ಯಂ | ಇಂಧತೇ | ಸಂಽಜನಯಂತಿ | ಜಂತವಃ || ೨ ||

|| ಸಾಯಣಭಾಷ್ಯಂ ||

ಸೋಽಗ್ನಿಃ ಕುತ್ರ ಚಿದ್ವರ್ತತ ಇತಿ ಶೇಷಃ | ಕುತ್ರಾಸ್ತೇ | ಯಸ್ಯಾಗ್ನೇಃ ಸಮೃತೌ ಸಂಪ್ರಾಪ್ತೌ ರಣ್ವಾ ರಮಮಾಣಾ ನರೋ ನೇತಾರ ಋತ್ವಿಜಃ | ನೃಷದನೇ ಯಾಗಗೃಹೇಽರ್ಹಂತಶ್ಚಿತ್ | ಚಿದಿತಿ ಪೂಜಾಯಾಂ | ಅರ್ಹಂತಃ ಪೂಜ್ಯಾಃ ಪೂಜಯಂತೋ ವಾ ಸಂತೋ ಯಮಿಂಧತೇ | ದೀಪಯಂತಿ | ತದರ್ಥಂ ಸಂಜನಯಂತಿ ಚಾರಣ್ಯಾಂ ಜಂತವಃ ಪ್ರಾಣಿನಃ | ಸ ಕುತ್ರೇತಿ ಸಂಬಂಧಃ ||

॥ ಪ್ರತಿಪದಾರ್ಥ ॥

ಯಸ್ಯ—ಯಾವ ಅಗ್ನಿಯ । ಸಮೃತೌ—ಸಂಪ್ರಾಪ್ತಿಕಾಲದಲ್ಲಿ । ರಣ್ವಾಃ—ಸಂತೋಷಗೊಳ್ಳುವವರೂ । ನರಃ—ನೇತೃಗಳೂ ಆದ ಋತ್ವಿಗಾದಿಗಳು । ನೃಷದನೇ—ಯಜ್ಞಗೃಹದಲ್ಲಿ । ಅರ್ಹಂತಶ್ಚಿತ್—ಪೂಜಿಸುತ್ತಾ । ಯಂ—ಯಾವ ದೇವನನ್ನು । ಇಂಧತೇ—ಪ್ರಜ್ವಲಿತನನ್ನಾಗಿ ಮಾಡುವರೋ । ಜಂತವಃ—ಪ್ರಾಣಿಗಳು (ಮಾನವರು) । ಸಂಜನಯಂತಿ—ಯಾವನನ್ನು ಉತ್ಪನ್ನನಾಗುವಂತೆ ಮಾಡುವರೋ (ಆ ಅಗ್ನಿದೇವನು) । ಕುತ್ರ ಚಿತ್—ಎಲ್ಲಿದ್ದಾನೆ ?

॥ ಭಾವಾರ್ಥ ॥

ಯಾವ ಅಗ್ನಿಯ ಸಂಪ್ರಾಪ್ತಿಕಾಲದಲ್ಲಿ ಸಂತೋಷಗೊಳ್ಳುವವರೂ, ನೇತೃಗಳೂ ಆದ ಋತ್ವಿಗಾದಿಗಳು ಯಜ್ಞಗೃಹದಲ್ಲಿ ಪೂಜಿಸುತ್ತಾ ಯಾವ ದೇವನನ್ನು ಪ್ರಜ್ವಲಿತನನ್ನಾಗಿ ಮಾಡುವರೋ ಮತ್ತು ಸಕಲ ಮಾನವರೂ ಯಾವನನ್ನು ಉತ್ಪನ್ನನಾಗುವಂತೆ ಮಾಡುವರೋ ಆ ಅಗ್ನಿದೇವನು ಎಲ್ಲಿದ್ದಾನೆ ?

English Translation.

Where is (the deity) upon whose presence the rejoicing conductors (of the ceremony) are offering homage in the hall of sacrifice, (he) whom they kindle, and living beings generate.



॥ ಸಂಹಿತಾಪಾಠಃ ॥

ಸಂ ಯದಿಷೋ ವನಾಮಹೇ ಸಂ ಹವ್ಯಾ ಮಾನುಷಾಣಾಂ ।
ಉತ ದ್ಯುಮ್ನಸ್ಯ ಶವಸ ಋತಸ್ಯ ರಶ್ಮಿಮಾ ದದೇ ॥ ೩ ॥

॥ ಪದಪಾಠಃ ॥

ಸಂ । ಯತ್ । ಇಷಃ । ವನಾಮಹೇ । ಸಂ । ಹವ್ಯಾ । ಮಾನುಷಾಣಾಂ ।
ಉತ । ದ್ಯುಮ್ನಸ್ಯ । ಶವಸಾ । ಋತಸ್ಯ । ರಶ್ಮಿಂ । ಆ । ದದೇ ॥ ೩ ॥

॥ ಸಾಯಣಭಾಷ್ಯಂ ॥

ಯದ್ಯದೇಷೋಽನ್ನಾನಿ ಸಂ ವನಾಮಹೇ । ಸಂಭಜಾಮಹೇ । ಯದಾ ಚ ಮಾನುಷಾಣಾಮಸ್ಮಾಕಂ ಹವ್ಯಾ ಹವೀಂಷ್ಯಗ್ನಿಃ ಸಂಸೇವತೇ ತವ ತದಾನೀಂ ದ್ಯುಮ್ನಸ್ಯ ದ್ಯೋತಮಾನಸ್ಯಾನ್ನಸ್ಯ ಶವಸಾ ಬಲೇನ ಸಾಮರ್ಥ್ಯೇನ ಋತಸ್ಯೋದಕಸ್ಯ ಗ್ರಾಹಕಂ ರಶ್ಮಿಮಾ ದದೇ । ಅದತ್ತೇಽಗ್ನಿಃ ।

ಫಲಜನಕಂ ತೇಜಃ ಸ್ವೀಕೃತವಾನಿತ್ಯರ್ಥಃ । ಯದ್ವಾ । ಋತಸ್ಯ ಯಜ್ಞಸ್ಯ ರಶ್ಮಿಂ ರಶ್ಮಿವದ್ಗ್ರಾಹಕಂ ಸ್ತವಮಾ ದದೇ । ಸ್ವೀಕರೋತಿ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಇಷಃ—ಹವಿಸ್ಸಿನ ರೂಪದ ಅನ್ನಗಳನ್ನು । ಸಂ ವನಾಮಹೇ—ಅರ್ಪಿಸುತ್ತೇವೆಯೋ ಮತ್ತು (ಯಾವಾಗ) । ಮಾನುಷಾಣಾಂ—ಯಜಮಾನರಾದ ನಮ್ಮ । ಹವ್ಯಾ—ಹವಿಸ್ಸುಗಳನ್ನು । ಸಂ (ಸೇವತೇ)—(ಅಗ್ನಿಯು) ಸ್ವೀಕರಿಸುವನೋ । ಉತ—ಆಗ । ದ್ಯುಮ್ನಸ್ಯ—ಪ್ರಕಾಶಮಾನವಾದ ಅನ್ನದ । ಶವಸಾ—ಬಲದಿಂದ । ಋತಸ್ಯ—ಉದಕಗ್ರಾಹಕವಾದ । ರಶ್ಮಿಂ—ರಶ್ಮಿಗಳನ್ನು । ಆ ದದೇ—ಎತ್ತಿ ಧರಿಸುತ್ತಾನೆ.

॥ ಭಾವಾರ್ಥ ॥

ಯಾವಾಗ ಹವಿಸ್ಸಿನ ರೂಪದ ಅನ್ನಗಳನ್ನು ನಾವು ಅರ್ಪಿಸುತ್ತೇವೆಯೋ ಮತ್ತು ಯಾವಾಗ ಯಜಮಾನರಾದ ನಮ್ಮ ಹವಿಸ್ಸುಗಳನ್ನು ಅಗ್ನಿಯು ಸ್ವೀಕರಿಸುವನೋ, ಆಗ ಪ್ರಕಾಶಮಾನವಾದ ಅನ್ನದ ಬಲದಿಂದ ಉದಕಗ್ರಾಹಕಗಳಾದ ರಶ್ಮಿಗಳನ್ನು ಅಗ್ನಿಯು ಎತ್ತಿ ಧರಿಸುತ್ತಾನೆ (ಪ್ರಕಾಶಿಸುತ್ತಾನೆ).

English Translation.

When we present to him (sacrificial) food, when (he accepts) the oblations of men, then by the power of the brilliant (viands), he assumes the radiance of the rite.



॥ ಸಂಹಿತಾಪಾಠಃ ॥

ಸ ಸ್ಮಾ ಕೃಣೋತಿ ಕೇತುಮಾ ನಕ್ತಂ ಚಿದ್ದೂರ ಆ ಸತೇ ।
ಪಾವಕೋ ಯದ್ವನಸ್ಪತೀನ್ಪ್ರ ಸ್ಮಾ ಮಿನಾತ್ಯಜರಃ ॥ ೪ ॥

॥ ಪದಪಾಠಃ ॥

ಸಃ । ಸ್ಮ । ಕೃಣೋತಿ । ಕೇತುಂ । ಆ । ನಕ್ತಂ । ಚಿತ್ । ದೂರೇ । ಆ । ಸತೇ ।
ಪಾವಕಃ । ಯತ್ । ವನಸ್ಪತೀನ್ । ಪ್ರ । ಸ್ಮ । ಮಿನಾತಿ । ಅಜರಃ ॥ ೪ ॥

॥ ಸಾಯಣಭಾಷ್ಯಂ ॥

ಸ ಸ್ಮ ಸ ಖಲ್ವಗ್ನಿಃ ಕೃಣೋತಿ । ಕರೋತಿ । ಕೇತುಂ ಪ್ರಜ್ಞಾನಮಾ ಸರ್ವತಃ । ಕಸ್ಯೇತ್ಯುಚ್ಯತೇ । ಚಿದಪ್ಯರ್ಥೇ । ನಕ್ತಂ ಚಿದ್ರಾತ್ರಾವಪಿ ದೂರ ಆ ಸತೇ । ಆ ಇತಿ ಚಾರ್ಥೇ । ದೂರೇಽಪಿ ವರ್ತಮಾನಾಯ ಮನುಷ್ಯಾಯ । ಕದಾ । ಯದ್ಯದಾ ಪಾವಕೋಽಯಮಗ್ನಿರಜರೋಽಜೀರ್ಣೋಽನಭಿಭಾವ್ಯಃ ಸನ್ ವನಸ್ಪತೀನೇಧಾಂಸಿ ಪ್ರ ಸ್ಮ ಮಿನಾತಿ । ಪ್ರಕರ್ಷೇಣ ದಹತಿ । ಸ್ಮೇತಿ ಪೂರಣಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಪಾವಕಃ—ಶುದ್ಧಿಕಾರಕನಾದ ಅಗ್ನಿಯು । ಅಜರಃ—ಕ್ಷಯರಹಿತನಾಗಿ । ವನಸ್ಪತೀನ್—ವನವೃಕ್ಷಗಳನ್ನು । ಪ್ರ ಸ್ಮ ಮಿನಾತಿ—ಪೂರ್ಣವಾಗಿ ದಹಿಸುವನೋ (ಆಗ) । ಸ ಸ್ಮ—ಅದೇ ಅಗ್ನಿಯು । ನಕ್ತಂ ಚಿತ್—ರಾತ್ರಿಕಾಲದಲ್ಲಿಯೂ ಕೂಡ । ದೂರೇ ಆ ಸತೇ—ದೂರದಲ್ಲಿರುವ ಮನುಷ್ಯನಿಗೂ । ಆ—ಸುತ್ತಲೂ । ಕೇತುಂ—ತಿಳಿವಳಿಕೆಯನ್ನು । ಕೃಣೋತಿ—ಉಂಟುಮಾಡುತ್ತಾನೆ.

॥ ಭಾವಾರ್ಥ ॥

ಶುದ್ಧಿಕಾರಕನೂ, ಕ್ಷಯರಹಿತನೂ ಆದ ಅಗ್ನಿಯು ಯಾವಾಗ ವನವೃಕ್ಷಗಳನ್ನು ಪೂರ್ಣವಾಗಿ ದಹಿಸುವನೋ ಆಗ ಅದೇ ಅಗ್ನಿಯು ರಾತ್ರಿಕಾಲದಲ್ಲಿಯೂ ಸಹ ದೂರದಲ್ಲಿರುವ ಮನುಷ್ಯನಿಗೂ ಸುತ್ತಲೂ (ಚೆನ್ನಾಗಿ) ತಿಳಿವಳಿಕೆಯನ್ನುಂಟುಮಾಡುತ್ತಾನೆ.

## English Translation.

Verily he gives a signal by night to one who is far off, when he, the the purifier, the undecaying, consumes the forest lords.



॥ ಸಂಹಿತಾಪಾಠಃ ॥

ಅವ ಸ್ಮ ಯಸ್ಯ ವೇಷಣೇ ಸ್ವೇದಂ ಪಥಿಷು ಜುಹ್ವತಿ ।
ಅಭೀಮಹ ಸ್ವಜೇನ್ಯಂ ಭೂಮಾ ಪೃಷ್ಠೇವ ರುರುಹುಃ ॥ ೫ ॥

॥ ಪದಪಾಠಃ ॥

ಅವ । ಸ್ಮ । ಯಸ್ಯ । ವೇಷಣೇ । ಸ್ವೇದಂ । ಪಥಿಷು । ಜುಹ್ವತಿ ।
ಅಭಿ । ಈಂ । ಅಹ । ಸ್ವಽಜೇನ್ಯಂ । ಭೂಮ । ಪೃಷ್ಠಾಽಇವ । ರುರುಹುಃ ॥ ೫ ॥

॥ ಸಾಯಣಭಾಷ್ಯಂ ॥

ಯಸ್ಯಾಗ್ನೇರ್ವೇಷಣೇ ಪರಿಚರ್ಯಾಯಾಂ ಪಥಿಷು ಹೋಮಮಾರ್ಗೇಷು ರಶ್ಮಿಷು ಸ್ತೋಕಂ ಸ್ರವದಾಜ್ಯಮವಾಧೋಮುಖಂ ಜುಹ್ವತ್ಯಧ್ವರ್ಯವಃ ತದಾನೀಮೀಮೇನಮಗ್ನಿಮಭಿ ರುರುಹುರಹ । ಅಭ್ಯಾರೋಹಂತ್ಯೇವಾಜ್ಯಧಾರಾಃ । ಅಹ ಇತಿ ವಿನಿಗ್ರಹಾರ್ಥೀಯಃ । ಸ್ವಜೇನ್ಯಂ ಸ್ವೋತ್ಪನ್ನಂ ಭೂಮ । ಬಹು ಭವತೀತಿ ಭೂಮಾಪತ್ಯಂ । ತತ್ಪೃಷ್ಠ್ಯೇವ ಪಿತುಃ ಪೃಷ್ಠದೇಶಾನಿವ । ಪುತ್ರಾ ಯಥಾ ಪಿತುರಂಕ-ಮಾರೋಹಂತಿ ತದ್ವತ್ ॥

॥ ಪ್ರತಿಪದಾರ್ಥ ॥

ಯಸ್ಯ—ಯಾವ ಅಗ್ನಿಯ । ವೇಷಣೇ—ಪೂಜಾಕಾಲದಲ್ಲಿ । ಪಥಿಷು—ಯಜ್ಞಾಗ್ನಿಜ್ವಾಲೆಗಳಲ್ಲಿ । ಸ್ತೋಕಂ—ಪ್ರವಹಿಸುವ ಆಜ್ಯಧಾರೆಯನ್ನು । ಅವ—ಅಧೋಮುಖವಾಗಿ । ಜುಹ್ವತಿ—(ಅಧ್ವರ್ಯುವೇ ಮುಂತಾದವರು) ಅರ್ಪಿಸುವರೋ । ಈಂ—ಅದೇ ಅಗ್ನಿಯನ್ನು । ಸ್ವಜೇನ್ಯಂ—ತಸ್ಸಿಂದಲೇ ಉತ್ಪನ್ನರಾದವರೂ । ಭೂಮ—ಬಹುಸಂಖ್ಯಾಕರೂ ಆದ ಪುತ್ರರು । ಪೃಷ್ಠ್ಯೇವ—ತಂದೆಯ ತೊಡೆಯಮೇಲೆ ಏರಿ ಕುಳಿತುಕೊಳ್ಳುವಂತೆ । ಅಹ—ಖಂಡಿತವಾಗಿಯೂ । ಅಭಿ ರುರುಹುಃ—ಆಶ್ರಯಿಸಿ ಸ್ಥಿತವಾಗುತ್ತವೆ.

॥ ಭಾವಾರ್ಥ ॥

ಯಾವ ಅಗ್ನಿಯ ಪೂಜಾಕಾಲದಲ್ಲಿ, ಪ್ರವಹಿಸುವ ಆಜ್ಯಧಾರೆಯನ್ನು ಯಜ್ಞಾಗ್ನಿಜ್ವಾಲೆಗಳಲ್ಲಿ ಅಧ್ವರ್ಯುವೇ ಮುಂತಾದವರು ಅಧೋಮುಖವಾಗಿ ಅರ್ಪಿಸುವರೋ, ಅದೇ ಅಗ್ನಿಯನ್ನು ತಸ್ಸಿಂದಲೇ ಉತ್ಪನ್ನರಾದವರೂ, ಬಹು ಸಂಖ್ಯಾಕರೂ ಆದ ಪುತ್ರರು ತಂದೆಯ ತೊಡೆಯಮೇಲೆ ಏರಿ ಕುಳಿತುಕೊಳ್ಳುವಂತೆ ಆಜ್ಯಧಾರೆಗಳು ಆಶ್ರಯಿಸಿ ಸ್ಥಿತವಾಗುತ್ತವೆ.

English Translation.

At whose worship (the priests) pour the dripping (butter) upon the the flames, and (the drops) mount upon the fire as if they were its own numerous offspring, as (boys ride) upon the back (of a father).



॥ ಸಂಹಿತಾಪಾಠಃ ॥

ಯಂ ಮರ್ತ್ಯಃ ಪುರುಸ್ಪೃಹಂ ವಿದದ್ವಿಶ್ವಸ್ಯ ಧಾಯಸೇ ।
ಪ್ರ ಸ್ವಾದನಂ ಪಿತೂನಾಮಸ್ತತಾತಿಂ ಚಿದಾಯವೇ ॥ ೬ ॥

॥ ಪದಪಾಠಃ ॥

ಯಂ । ಮರ್ತ್ಯಃ । ಪುರುಽಸ್ಪೃಹಂ । ವಿದತ್ । ವಿಶ್ವಸ್ಯ । ಧಾಯಸೇ ।

ಪ್ರ । ಸ್ವಾದನಂ । ಪಿತೂನಾಂ । ಅಸ್ತಽತಾತಿಂ । ಚಿತ್ । ಆಯವೇ ॥ ೬ ॥

॥ ಸಾಯಣಭಾಷ್ಯಂ ॥

ಯಮಗ್ನಿಂ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ವಿದತ್ । ವೇತ್ತಿ । ಮರ್ತ್ಯೋ ಯಜಮಾನೋ ವಿಶ್ವಸ್ಯ ಧಾಯಸೇ ಸರ್ವಸ್ಯ ವ್ಯಾಪ್ತ್ಯರ್ಥಂ ಪಿತೂನಾಮನ್ನಾನಾಂ ಪ್ರ ಸ್ವಾದನಂ ಪ್ರಕರ್ಷೇಣ ಸ್ವಾದೂಕರ್ತಾರಮಸ್ತತಾತಿಮಸ್ತೇ ಗೃಹೇ ನಿವಾಸಕರ್ತಾರಮಾಯವೇಽನ್ನಾರ್ಥಂ ಯಜಮಾನಾರ್ಥಂ ವಾ॥

॥ ಪ್ರತಿಪದಾರ್ಥ ॥

ಪುರುಸ್ಪೃಹಂ—ಅನೇಕರಿಂದ ಅಪೇಕ್ಷಿತನಾದ । ಯಂ—ಯಾವ . ಅಗ್ನಿಯನ್ನು । ಮರ್ತ್ಯಃ—ಮಾನವನಾದ ಯಜಮಾನನು । ವಿಶ್ವಸ್ಯ—ಸಕಲ ಲೋಕಕ್ಕೂ । ಧಾಯಸೇ—ಧಾರಕನೆಂದೂ । ಪಿತೂನಾಂ—ಅನ್ನಗಳಿಗೆ । ಪ್ರಸ್ವಾದನಂ—ರುಚಿಯನ್ನು ಕೊಡುವವನೆಂದೂ । ಆಯವೇ—ಮಾನವನಾದ ಯಜಮಾನನಿಗೆ । ಅಸ್ತತಾತಿಂ—ವಸತಿದಾಯಕನೆಂದೂ । ವಿದತ್—ತಿಳಿಯುವನೋ (ಆ ಅಗ್ನಿಯನ್ನು ಆಜ್ಯಧಾರೆಗಳು ಆಶ್ರಯಿಸುವುವು).

॥ ಭಾವಾರ್ಥ ॥

ಅನೇಕರಿಂದ ಅಪೇಕ್ಷಿತನಾದ ಯಾವ ಅಗ್ನಿಯನ್ನು ಮಾನವನಾದ ಯಜಮಾನನು ಸಕಲ ಲೋಕಕ್ಕೂ ಧಾರಕನೆಂದೂ, ಅನ್ನಗಳಿಗೆ ರುಚಿಯನ್ನು ಕೊಡುವವನೆಂದೂ, ಮಾನವನಾದ ಯಜಮಾನನಿಗೆ ವಸತಿದಾಯಕನೆಂದೂ ತಿಳಿಯುವನೋ ಆ ಅಗ್ನಿಯನ್ನು ಆಜ್ಯಧಾರೆಗಳು ಪ್ರವೇಶಿಸುವುವು.

## English Translation.

Him whom the desired of many, the (devout) man recognizes as the sustainer of all, the flavourer of food, the provider of dwellings for men.

॥ ಸಂಹಿತಾಪಾಠಃ ॥

ಸ ಹಿ ಷ್ಮಾ ಧನ್ವಾಕ್ಷಿತಂ ದಾತಾ ನ ದಾತ್ಯಾ ಪಶುಃ ।

ಹಿರಿಶ್ಮಶ್ರುಃ ಶುಚಿದನ್ನೃಭುರನಿಭೃಷ್ಟತವಿಷಿಃ ॥ ೭ ॥

॥ ಪದಪಾಠಃ ॥

ಸಃ । ಹಿ । ಸ್ಮ । ಧನ್ವ । ಆऽಕ್ಷಿತಂ । ದಾತಾ । ನ । ದಾತಿ । ಆ । ಪಶುಃ ।
ಹಿರಿऽಶ್ಮಶ್ರುಃ । ಶುಚಿऽದನ್ । ಋಭುಃ । ಅನಿಭೃಷ್ಟऽತವಿಷಿಃ ॥ ೭ ॥

॥ ಸಾಯಣಭಾಷ್ಯಂ ॥

ಸ ಹಿ ಷ್ಮ ಸ ಖಲ್ವಗ್ನಿರ್ಧನ್ವ ನಿರುದಕಪ್ರದೇಶಮಾಕ್ಷಿತಂ ತೃಣಕಾಷ್ಠಾದಿಭಿರಾಕ್ಷಿಪ್ತಮಾ ದಾತಿ । ಸರ್ವತಃ ಖಂಡಯತಿ। ದಹತೀತ್ಯರ್ಥಃ। ದಾತಾ ತೃಣಾದಿಖಂಡಯಿತಾ ಪಶುರ್ನ ಪಶುರಿವ। ಪಶುರ್ಯಥಾ ತೃಣಜಾತಂ ಕ್ರಮೇಣ ಭಕ್ಷಯತಿ ತದ್ವತ್ । ಹಿರಿಶ್ಮಶ್ರುರ್ಹಿರಣ್ಯಶ್ಮಶ್ರುಃ ಶುಚಿದನ್ ದೀಪ್ತದಂತ ಋಭುರುರು ಭವನ್ । ಮಹಾನಿತ್ಯರ್ಥಃ । ಅನಿಭೃಷ್ಟತವಿಷಿರಪೀಡಿತಬಲಃ ॥

॥ ಪ್ರತಿಪದಾರ್ಥ ॥

ಹಿರಿಶ್ಮಶ್ರುಃ—ಹೊಂಬಣ್ಣದ ಕೂದಲಿನಂತಿರುವ ಜ್ವಾಲೆಗಳುಳ್ಳವನೂ । ಶುಚಿದನ್—ಕಾಂತಿಯುತನೂ। ಋಭುಃ—ಮಹಾತ್ಮನೂ । ಅನಿಭೃಷ್ಟತವಿಷಿಃ—ಅಪ್ರತಿಹತವಾದ ಶಕ್ತಿಯುಳ್ಳವನೂ ಆದ । ಸ ಹಿ ಸ್ಮ—ಅದೇ ಅಗ್ನಿಯು । ದಾತಾ—ತೃಣಾದಿಗಳನ್ನು ಖಂಡಿಸುವ (ಭಕ್ಷಿಸುವ)। ಪಶುಃ ನ—ಪಶುವಿನಂತೆ । ಆಕ್ಷಿತಂ—ಕಾಷ್ಠಾದಿಗಳಿಂದ ವ್ಯಾಪ್ತವಾದುದೂ । ಧನ್ವ—ಉದಕರಹಿತವಾದುದೂ ಆದ ಕಾಡನ್ನು । ಆ ದಾತಿ—ಪೂರ್ಣವಾಗಿ ವ್ಯಾಪಿಸಿ ದಹಿಸುತ್ತಾನೆ.

॥ ಭಾವಾರ್ಥ ॥

ಹೊಂಬಣ್ಣದ ಕೂದಲಿನಂತಿರುವ ಜ್ವಾಲೆಗಳುಳ್ಳವನೂ, ಕಾಂತಿಯುತನೂ, ಮಹಾತ್ಮನೂ, ಅಪ್ರತಿಹತವಾದ ಶಕ್ತಿಯುಳ್ಳವನೂ ಆದ ಅಗ್ನಿಯು ತೃಣಾದಿಗಳನ್ನು ಖಂಡಿಸುವ ಪಶುವಿನಂತೆ ಕಾಷ್ಠಾದಿಗಳಿಂದ ವ್ಯಾಪ್ತವಾದುದೂ, ಉದಕರಹಿತವಾದುದೂ ಆ ಕಾಡನ್ನು ಪೂರ್ಣವಾಗಿ ವ್ಯಾಪಿಸಿ ದಹಿಸುತ್ತಾನೆ.

## English Translation.

He crops the dry ground strewn (with grass and wood), like an animal grazing; he with a golden beard, wilh a shining teeth, vast, and of irresistible strength.

॥ ಸಂಹಿತಾಪಾಠಃ ॥

ಶುಚಿಃ ಷ್ಮ ಯಸ್ಮಾ ಅತ್ರಿವತ್ಪ್ರ ಸ್ವಧಿತೀವ ರೀಯತೇ ।
ಸುಷೂರಸೂತ ಮಾತಾ ಕ್ರಾಣಾ ಯದಾನಶೇ ಭಗಂ ॥ ೮ ॥

॥ ಪದಪಾಠಃ ॥

ಶುಚಿಃ । ಸ್ಮ । ಯಸ್ಮೈ । ಅತ್ರಿऽವತ್ । ಪ್ರ । ಸ್ವಧಿತಿಃऽಇವ । ರೀಯತೇ ।

ಸುऽಸೂಃ । ಅಸೂತ । ಮಾತಾ । ಕ್ರಾಣಾ । ಯತ್ । ಆನಶೇ । ಭಗಂ ॥ ೮ ॥

॥ ಸಾಯಣಭಾಷ್ಯಂ ॥

ಅಯಮಗ್ನಿಃ ಶುಚಿಃ ಸ್ಮ ದೀಪ್ತಃ ಖಲು । ಯಸ್ಮಾ ಅಗ್ನಯೇऽತ್ರಿವದತ್ರಿರಿವ ಯಜಮಾನೋ ಹವಿರ್ದಾತುಂ ಪ್ರ ರೀಯತೇ । ಪ್ರಗಚ್ಛತಿ । ಯದ್ವಾ । ಸ್ಮೇತಿ ಪೂರಣಃ । ಶುಚಿರ್ಯಸ್ಮೈ ॥ ಪ್ರಥಮಾರ್ಥೇ ಚತುರ್ಥೀ ॥ ದೀಪ್ತೋ ಯೋऽತ್ರಿವತ್ । ಅತ್ತಿ ತೃಣಮಿತ್ಯತ್ರಿಃ ಪಶುಃ । ಸ ಇವ । ಸ ಯಥಾ ತೃಣಾನಿ ಖಾದಮಾನೋ ಗಚ್ಛತಿ ತದ್ವದ್ದಹತೀತ್ಯರ್ಥಃ । ಸ್ವಧಿತಿರಿವ ಪರಶುರಿವ ಛಿಂದನ್ । ಸುಷೂಃ ಸುಪ್ರಸವಾ ಮಾತಾರಣಿರಸೂತ ಕ್ರಾಣಾ ಕುರ್ವಾಣಂ ಜಗದುಪಕಾರಕಂ । ಯದ್ಯಸ್ಮಾತ್ ಯ ಇತಿ ವಾ । ಯೋऽಗ್ನಿರ್ಭಗಮನ್ನಮಾನಶೇ । ಅಶ್ನುತೇ ॥

॥ ಪ್ರತಿಪದಾರ್ಥ ॥

ಯಸ್ಮೈ—ಯಾವ ಅಗ್ನಿಯನ್ನುದ್ದೇಶಿಸಿ । ಅತ್ರಿವತ್—ಅತ್ರಿಯನ್ನನುಕರಿಸುವ ಯಜಮಾನನು । ಪ್ರ ರೀಯತೇ—(ಹವಿಸ್ಸನ್ನರ್ಪಿಸಲು) ಸಮೀಪಿಸುವನೋ (ಆ ಅಗ್ನಿಯು) । ಸ್ವಧಿತೀವ—ಹರಿತವಾಗಿರುವ ಕೊಡಲಿಯ ಅಲಗಿನಂತೆ । ಶುಚಿಃ ಸ್ಮ—ಪ್ರಕಾಶಮಾನನಾಗಿಯೇ ಇದ್ದಾನೆ । ಯತ್—ಯಾವ ಕಾರಣದಿಂದ । ಭಗಂ—ಹವಿಸ್ಸಿನ ರೂಪದ ಅನ್ನವನ್ನು । ಆನಶೇ—(ಅಗ್ನಿಯು) ಭಕ್ಷಿಸುವನೋ (ಅದುದರಿಂದ) । ಸ್ವಸೂಃ—ಶ್ರೇಷ್ಠವಾದ ಪುತ್ರನನ್ನು ಹಡೆಯುವ । ಮಾತಾ—ಜನನಿಯಾದ ಅರಣಿಯು । ಕ್ರಾಣಾ—ಜಗದುಪಕಾರಕನನ್ನಾಗಿ । ಅಸೂತ—(ಅಗ್ನಿಯನ್ನು) ಹಡೆದಳು.

॥ ಭಾವಾರ್ಥ ॥

ಯಾವ ಅಗ್ನಿಯನ್ನುದ್ದೇಶಿಸಿ ಅತ್ರಿಋಷಿಯನ್ನನುಕರಿಸುವ ಯಜಮಾನನು ಹವಿಸ್ಸನ್ನರ್ಪಿಸಲು ಸಮೀಪಿಸುವನೋ, ಆ ಅಗ್ನಿಯು ಹರಿತವಾಗಿರುವ ಕೊಡಲಿಯ ಅಲಗಿನಂತೆ ಪ್ರಕಾಶಮಾನನಾಗಿಯೇ ಇದ್ದಾನೆ. ಯಾವ ಕಾರಣದಿಂದ ಹವಿಸ್ಸಿನ ರೂಪದ ಅನ್ನವನ್ನು ಅಗ್ನಿಯು ಭಕ್ಷಿಸುವನೋ ಅದುದರಿಂದಲೇ, ಶ್ರೇಷ್ಠವಾದ ಪುತ್ರಪ್ರಸವಿನಿ ಯಾವ ಅರಣಿಯು ಅಗ್ನಿಯನ್ನು ಜಗದುಪಕಾರಕನನ್ನಾಗಿ ಹಡೆದಳು.

## English Translation.

Bright as an axe is he to whom the (worshipper), like Atri, proceeds (to offer worship): he whom his prolific mother has brought forth, bestowing (a benefactor on the world), when (Agni) obtains (sacrificial) food.

॥ ಸಂಹಿತಾಪಾಠಃ ॥

ಆ ಯಸ್ತೇ ಸರ್ಪಿರಾಸುತೇಽಗ್ನೇ ಶಮಸ್ತಿ ಧಾಯಸೇ ।
ಐಷು ದ್ಯುಮ್ನಮುತ ಶ್ರವ ಆ ಚಿತ್ತಂ ಮರ್ತ್ಯೇಷು ಧಾಃ ॥ ೯ ॥

॥ ಪದಪಾಠಃ ॥

ಆ । ಯಃ । ತೇ । ಸರ್ಪಿಃಽಆಸುತೇ । ಅಗ್ನೇ । ಶಂ । ಅಸ್ತಿ । ಧಾಯಸೇ ।
ಆ । ಏಷು । ದ್ಯುಮ್ನಂ । ಉತ । ಶ್ರವಃ । ಆ । ಚಿತ್ತಂ । ಮರ್ತ್ಯೇಷು । ಧಾಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸರ್ಪಿರಾಸುತೇ ಘೃತಾಖ್ಯಾನ್ನಾಗ್ನೇ ಯಸ್ತ್ವಮಾ ಸರ್ವತೋ ಭವಸಿ ತಾದೃಶಾಯ ಧಾಯಸೇ ಸರ್ವಸ್ಯ ಧಾತ್ರೇ ತೇ ತುಭ್ಯಂ ಶಮಸ್ತಿ । ಸುಖಮಸ್ತಿ । ಸ್ತುತೇಃ ಸಕಾಶಾತ್ । ತಥಾ ಚೇತ್ ಏಷು ಮರ್ತ್ಯೇಷು ಸ್ತೋತೃಷ್ವಾತ್ರೇಯೇಷು ದ್ಯುಮ್ನಂ ಯಶ ಆ ಧಾಃ । ಅಧೇಹಿ । ಉತಾಪಿ ಚ ಶ್ರವೋಽನ್ನಮಾ ಧಾಃ । ಚಿತ್ತಂ ತ್ವದೀಯಾಮನುಗ್ರಹಬುದ್ಧಿಮಪ್ಯಾ ಧಾಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ನೀನು । ಆ—ಸರ್ವತ್ರ ವ್ಯಾಪಿಸಿರುವೆಯೋ (ಅಂತಹ) । ಸರ್ಪಿರಾಸುತೇ—ಹವಿಸ್ಸನ್ನು ಸ್ವೀಕರಿಸುವವನೂ । ಧಾಯಸೇ—ಲೋಕಧಾರಕನೂ ಆದ । ತೇ—ನಿನಗೆ । ಶಂ—(ನಮ್ಮ ಸ್ತುತಿಜನ್ಯವಾದ ) ಸುಖವು ! ಅಸ್ತಿ—ಇರುತ್ತದೆ (ಆದುದರಿಂದ) । ಏಷು ಮರ್ತ್ಯೇಷು—ಮಾನವ ರೂಪರಾದ ಈ ಸ್ತೋತೃಗಳಲ್ಲಿ । ದ್ಯುಮ್ನಂ—ಧನವನ್ನು । ಆ ಧಾಃ—ತಂದಿಡು । ಉತ—ಮತ್ತು । ಶ್ರವಃ—ಅನ್ನವನ್ನು । ಆ (ಧಾಃ)—ತಂದೊದಗಿಸು । ಚಿತ್ತಂ—(ಭಕ್ತಿಯುತವಾದ) ಮನಸ್ಸನ್ನು (ಒದಗಿಸು).

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನೀನು ಸರ್ವತ್ರ ವ್ಯಾಪಿಸಿರುವೆಯೋ, ಅಂತಹ ಹವಿಸ್ಸನ್ನು ಸ್ವೀಕರಿಸುವವನೂ ಲೋಕಧಾರಕನೂ ಆದ ನಿನಗೆ ನಮ್ಮ ಸ್ತುತಿಯು ಸುಖವನ್ನುಂಟುಮಾಡುತ್ತದೆ. ಆದುದರಿಂದ ಮಾನವರೂಪರಾದ ಈ ಸ್ತೋತೃಗಳಿಗೆ ಧನವನ್ನೂ ಅನ್ನವನ್ನೂ ತಂದೊದಗಿಸು ಮತ್ತು ಭಕ್ತಿಯುತವಾದ ಮನಸ್ಸಿರುವಂತೆ ಮಾಡು.

## English Translation.

To you, Agni, the accepter of the oblation, the upholder (of all), there is pleasure (from our praise): bestow upon these your worshippers wealth, and food, and a heart (grateful for your favour.)



॥ ಸಂಹಿತಾಪಾಠಃ ॥

ಇತಿ ಚಿನ್ಮನ್ಯುಮಧ್ರಿಜಸ್ತ್ವಾದಾತಮಾ ಪಶುಂ ದದೇ ।
ಆದಗ್ನೇ ಅಪೃಣತೋಽತ್ರಿಃ ಸಾಸಹ್ಯಾದ್ದಸ್ಯೂನಿಷಃ ಸಾಸಹ್ಯಾನ್ನೄನ್ ॥೧೦॥

॥ ಪದಪಾಠಃ ॥

ಇತಿ । ಚಿತ್ । ಮನ್ಯುಂ । ಅಧ್ರಿಜಃ । ತ್ವಾದಾತಂ । ಆ । ಪಶುಂ । ದದೇ ।
ಆತ್ । ಅಗ್ನೇ । ಅಪೃಣತಃ । ಅತ್ರಿಃ । ಸಸಹ್ಯಾತ್ । ದಸ್ಯೂನ್ । ಇಷಃ । ಸಸಹ್ಯಾತ್ । ನೄನ್ ॥೧೦॥

॥ ಸಾಯಣಭಾಷ್ಯಂ ॥

ಇತಿ ಚಿತ್ ಇತ್ಥಂ ಕೃತಪ್ರಕಾರೇಣ ಮನ್ಯುಂ ಮನನಸಾಧನಂ ಸ್ತೋತ್ರಮಧ್ರಿಜಃ । ಅಧೃತಮನ್ಯೈರಗ್ನಿವ್ಯತಿರಿಕ್ತೈರಧೃಷ್ಯಂ ವಾ ಜನಯಿತಾ ಋಷಿಸ್ತ್ವಾದಾತಂ ತ್ವಯಾ ದಾತವ್ಯಂ ಪಶುಮಾ ದದೇ । ಆದತ್ತೇ । ಆದದೀತ ವಾ । ಆದನಂತರಮೇವಾಗ್ನೇಽರಪೃಣತೋಽದದತೋ ದಸ್ಯೂನತ್ರಿಸ್ತದ್ಗೋತ್ರ ಇಷಃ ಸಾಸಹ್ಯಾತ್ । ಭೃಶಮಭಿಭವೇತ್ । ಇಷ ಏಷ್ವಾನ್ನೄನ್ ವಿರೋಧಿನಃ ಸಾಸಹ್ಯಾತ್ । ಪುನರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಇತಿ ಚಿತ್—ಇದೇ ರೀತಿಯಲ್ಲಿ । ಮನ್ಯುಂ—ಧ್ಯಾನಾತ್ಮಕವಾದ ಸ್ತುತಿಯನ್ನು (ಅರ್ಪಿಸುವವನೂ) । ಅಧ್ರಿಜಃ—(ಇತರ ದೇವತೆಗಳಿಂದ) ಅಪಹರಿಸದಿರತಕ್ಕ (ಮತ್ತು ಕೇವಲ ಅಗ್ನಿಯನ್ನೇ ಉದ್ದೇಶಿಸಿದ) ಸ್ತುತಿನಿರ್ಮಾಪಕನೂ ಆದ ಋಷಿಯು । ತ್ವಾದಾತಂ—ನಿನ್ನಿಂದ ಕೊಡಲ್ಪಡತಕ್ಕ । ಪಶುಂ—ಪಶುವನ್ನು । ಆ ದದೇ—ಸ್ವೀಕರಿಸುವಂತಾಗಲಿ । ಆತ್—ಆ ಒಡನೆಯೇ । ಅಗ್ನೇ—ಎಲೈ ಅಗ್ನಿಯೇ । ಅಪೃಣತಃ—ಹವಿಸ್ಸನ್ನರ್ಪಿಸದಿರುವ । ದಸ್ಯೂನ್—ದಸ್ಯುಗಳನ್ನು । ಅತ್ರಿಃ—ಅತ್ರಿಗೋತ್ರೋತ್ಪನ್ನನಾದ । ಇಷಃ—ಇಷ ಋಷಿಯು । ಸಾಸಹ್ಯಾತ್—ಪೂರ್ಣವಾಗಿ ಸೋಲಿಸಲಿ । ನೄನ್—ವಿರೋಧಿಜನರನ್ನೂ । ಸಾಸಹ್ಯಾತ್—ಪೂರ್ಣವಾಗಿ ಸೋಲಿಸಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮೇಲೆ ಉಕ್ತವಾದ ರೀತಿಯಲ್ಲಿ, ಇತರ ದೇವತೆಗಳಿಂದ ಅಪಹರಿಸಲ್ಪಡದೇ, ಕೇವಲ ಅಗ್ನಿಯನ್ನೇ ಉದ್ದೇಶಿಸಿದ ಸ್ತುತಿಯನ್ನು ನಿರ್ಮಿಸುವವನೂ, ಧ್ಯಾನಾತ್ಮಕವಾದ ಸ್ತುತಿಯನ್ನರ್ಪಿಸುವವನೂ ಆದ ಋಷಿಯು ನಿನ್ನಿಂದ ಕೊಡಲ್ಪಡತಕ್ಕ ಪಶುವನ್ನು ಸ್ವೀಕರಿಸುವಂತಾಗಲಿ. ಒಡನೆಯೇ, ಹವಿಸ್ಸನ್ನರ್ಪಿಸದಿರುವ ದಸ್ಯುಗಳನ್ನೂ, ವಿರೋಧಿಜನರನ್ನೂ, ಅತ್ರಿ ಗೋತ್ರೋತ್ಪನ್ನನಾದ ಇಷಋಷಿಯು ಪೂರ್ಣವಾಗಿ ಸೋಲಿಸಲಿ.

## English Translation.

May the sage who is in this manner the offerer of exclusive praise (Agni, to you), accept the cattle which are to be given to you; and thereupon may Atri overcome irreligious Dasyus; may Isha (hostile) men.



# ಎಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ತ್ವಾಮಗ್ನ ಇತಿ ಸಪ್ತರ್ಚಮಷ್ಟಮಂ ಸೂಕ್ತಮಾತ್ರೇಯಸ್ಯೇಷಸ್ಯಾರ್ಷಂ ಜಾಗತಮಾಗ್ನೇಯಂ । ತ್ವಾಮಗ್ನೇ ಸಪ್ತ ಜಾಗತಮಿತ್ಯನುಕ್ರಮಣಿಕಾ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಜಾಗತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ತಥಾ ಚ ಸೂತ್ರಂ । ಜನಸ್ಯ ಗೋಪಾಸ್ತ್ವಾಮಗ್ನ ಋತಾಯವಃ । ಆ. ೪–೧೩ । ಇತಿ ॥

ಅನುವಾದವು—ತ್ವಾಮಗ್ನೇ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರೋದ್ಭವನಾದ ಇಷನೆಂಬುವನು ಋಷಿಯು; ಅಗ್ನಿಯು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—ತ್ವಾಮಗ್ನೇ ಸಪ್ತ ಜಾಗತಂ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಜಗತೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಜನಸ್ಯ ಗೋಪಾಸ್ತ್ವಾಮಗ್ನ ಋತಾಯವಃ ಎಂಬ ಸೂತ್ರದಿಂದ (ಆ. ೪–೧೩) ವಿವೃತವಾಗಿರುವುದು.

## ಸೂಕ್ತ—೮

ಮಂಡಲ—೫ ॥ ಅನುವಾಕ—೧ ॥ ಸೂಕ್ತ—೮ ॥
ಅಷ್ಟಕ—೩ ॥ ಅಧ್ಯಾಯ—೮ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಇಷ ಆತ್ರೇಯಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ತ್ವಾಮಗ್ನ ಋತಾಯವಃ ಸಮೀಧಿರೇ ಪ್ರತ್ನಂ ಪ್ರತ್ನಾಸ ಊತಯೇ ಸಹಸ್ಕೃತ ।
ಪುರುಶ್ಚಂದ್ರಂ ಯಜತಂ ವಿಶ್ವಧಾಯಸಂ ದಮೂನಸಂ ಗೃಹಪತಿಂ ವರೇಣ್ಯಂ ॥ ೧ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಋತಽಯವಃ । ಸಂ । ಈಧಿರೇ । ಪ್ರತ್ನಂ । ಪ್ರತ್ನಾಸಃ । ಊತಯೇ । ಸಹಃಽಕೃತ ।

ಪುರುಽಚಂದ್ರಂ । ಯಜತಂ । ವಿಶ್ವಽಧಾಯಸಂ । ದಮೂನಸಂ । ಗೃಹಽಪತಿಂ । ವರೇಣ್ಯಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಹಸ್ಕೃತ ಬಲಸ್ಯ ಕರ್ತರಗ್ನೇ ಪ್ರತ್ನಂ ಪುರಾತನಂ ತ್ವಾಂ ಪ್ರತ್ನಾಸಃ ಪುರಾತನಾ ಋತಾಯವೋ ಯಜ್ಞಕಾಮಾ ಋಷಯ ಊತಯೇ ಸ್ವರಕ್ಷಣಾಯ ಸಮೀಧಿರೇ । ಸಮ್ಯಗ್ದೀಪಿತವಂತಃ । ಕೀದೃಶಂ ತ್ವಾಂ । ಪುರುಶ್ಚಂದ್ರಂ ಬಹುಧನಮತಿಶಯೇನಾಹ್ಲಾದಕಂ ವಾ ಯಜತಂ ಯಷ್ಟವ್ಯಂ ವಿಶ್ವಧಾಯಸಂ ಬಹ್ವನ್ನಂ ದಮೂನಸಂ ದಾನಮನಸಂ ಗೃಹಪತಿಂ ಯಜಮಾನಗೃಹಸ್ಯ ಪಾಲಕಂ ವರೇಣ್ಯಂ ವರಣೀಯಂ ॥

॥ ಪ್ರತಿಪದಾರ್ಥ ॥

ಸಹಸ್ಕೃತ—ಶಕ್ತಿಯನ್ನು ಪ್ರಕಟಿಸುವ ಕರ್ಮವುಳ್ಳ । ಅಗ್ನೇ—ಅಗ್ನಿಯೇ । ಪುರುಶ್ಚಂದ್ರಂ—ಅನೇಕರಿಗೆ ಆಹ್ಲಾದಕಾರಕನೂ । ಯಜತಂ—ಯಜ್ಞಾರ್ಹನೂ । ವಿಶ್ವಧಾಯಸಂ—ಅನೇಕ ವಿಧವಾದ ಅನ್ನವುಳ್ಳವನೂ (ಅಥವಾ ಸಕಲವನ್ನೂ ಧರಿಸುವವನೂ) । ದಮೂನಸಂ—ದಾನಮನಸ್ಕನೂ । ಗೃಹಪತಿಂ—ಯಜ್ಞಗೃಹಕ್ಕೆ ಪಾಲಕನೂ । ವರೇಣ್ಯಂ—ಆದೃತನೂ । ಪ್ರತ್ನಂ—ಪುರಾತನನೂ ಆದ । ತ್ವಾಂ—ನಿನ್ನನ್ನು । ಪ್ರತ್ನಾಸಃ—ಪುರಾತನರೂ । ಋತಾಯವಃ—ಯಜ್ಞಕಾಮರೂ ಆದ ಋಷಿಗಳು । ಊತಯೇ—ರಕ್ಷಣಾರ್ಥವಾಗಿ । ಸಮೀಧಿರೇ—ಪ್ರಜ್ವಲಿತನನ್ನಾಗಿ ಮಾಡಿದ್ದಾರೆ.

॥ ಭಾವಾರ್ಥ ॥

ಶಕ್ತಿಪ್ರಕಾಶಕವಾದ ಕರ್ಮವುಳ್ಳ ಅಗ್ನಿಯೇ, ಅನೇಕರಿಗೆ ಆಹ್ಲಾದಕಾರಕನೂ, ಯಜ್ಞಾರ್ಹನೂ, ಬಹ್ವನ್ನವುಳ್ಳವನೂ, ದಾನಮನಸ್ಕನೂ ಯಜ್ಞಗೃಹಕ್ಕೆ ಪಾಲಕನೂ, ಆದೃತನೂ, ಪುರಾತನನೂ ಆದ ನಿನ್ನನ್ನು ಪುರಾತನನೂ ಯಜ್ಞಕಾಮರೂ ಆದ ಋಷಿಗಳು ರಕ್ಷಣಾರ್ಥವಾಗಿ ಪ್ರಜ್ವಲಿತನನ್ನಾಗಿ ಮಾಡಿದ್ದಾರೆ.

## English Translation.

Manifester of strength, Agni, ancient worshippers have kindled you of old for their preservation : you, the delighter of many, the adorable, the all-sustaining, the lowly-minded, the lord of the house, the excellent.



॥ ಸಂಹಿತಾಪಾಠಃ ॥

ತ್ವಾಮ॑ಗ್ನೇ ಅತಿ॑ಥಿಂ ಪೂ॒ರ್ವ್ಯಂ ವಿಶಃ॑ ಶೋ॒ಚಿಷ್ಕೇ॑ಶಂ ಗೃ॒ಹಪ॑ತಿಂ॒ ನಿ ಷೇ॑ದಿರೇ ।
ಬೃ॒ಹತ್ಕೇ॑ತುಂ ಪುರು॒ರೂ॑ಪಂ ಧನ॒ಸ್ಪೃತಂ॑ ಸು॒ಶರ್ಮಾ॑ಣಂ॒ ಸ್ವವ॑ಸಂ ಜರ॒-
ದ್ವಿಷಂ॑ ॥ ೧ ॥

॥ ಪದಪಾಠಃ ॥

ತ್ವಾಂ । ಅ॒ಗ್ನೇ॒ । ಅತಿ॑ಥಿಂ । ಪೂ॒ರ್ವ್ಯಂ । ವಿಶಃ॑ । ಶೋ॒ಚಿಃಽಕೇ॑ಶಂ । ಗೃ॒ಹಽಪ॑ತಿಂ । ನಿ । ಸೇ॒ದಿ॒ರೇ॒ ।
ಬೃ॒ಹತ್ಽಕೇ॑ತುಂ । ಪು॒ರು॒ಽರೂ॑ಪಂ । ಧ॒ನ॒ಽಸ್ಪೃತಂ॑ । ಸು॒ಽಶರ್ಮಾ॑ಣಂ । ಸು॒ಽಅವ॑ಸಂ । ಜ॒ರತ್ಽವಿ॑ಷಂ ॥೨॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ವಿಶೋ ಯಜಮಾನಾ ಗೃಹಪತಿಂ ಗೃಹಸ್ವಾಮಿನಂ ನಿ ಷೇದಿರೇ । ಗಾರ್ಹಪತ್ಯ-ರೂಪೇಣ ಸ್ಥಾಪಿತವಂತ ಇತ್ಯರ್ಥಃ ॥ ಕೀದೃಶಂ ತ್ವಾಂ । ಅತಿಥಿಮತಿಥಿವತ್ಪೂಜ್ಯಂ ಪೂರ್ವ್ಯಂ ಪುರಾತನಂ ಶೋಚಿಷ್ಕೇಶಂ ದೀಪ್ತಜ್ವಾಲಂ ಬೃಹತ್ಕೇತುಂ ಪ್ರಭೂತಪ್ರಜ್ಞಾನಂ ಪುರುರೂಪಮಾಹವನೀಯಾದಿರೂಪೇಣ ಬಹುರೂಪಂ ಧನಸ್ಪೃತಂ ಧನಾನಾಂ ಸ್ಪರ್ತಾರಂ ಸುಶರ್ಮಾಣಂ ಶೋಭನಸುಖಂ ಸ್ವವಸಂ ಸುರಕ್ಷಣಂ ಜರದ್ವಿಷಂ ಜರತಾಂ ವೃಕ್ಷಾಣಾಂ ವ್ಯಾಪಕಂ ಜೀರ್ಣೋದಕಂ ವಾ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ, ಅತಿಥಿಂ—ಅತಿಥಿಯಂತೆ ಪೂಜ್ಯನೂ । ಪೂರ್ವ್ಯಂ—ಪುರಾತನನೂ । ಶೋಚಿಷ್ಕೇಶಂ— ಪ್ರಕಾಶಮಾನವಾದ ಜ್ವಾಲೆಯುಳ್ಳವನೂ । ಬೃಹತ್ಕೇತುಂ— ವಿಸ್ತೃತವಾದ ಧ್ವಜವುಳ್ಳವನೂ । ಪುರುರೂಪಂ—ಆಹವನೀಯಾದಿ ನಾನಾರೂಪವುಳ್ಳವನೂ । ಧನಸ್ಪೃತಂ— ಧನವನ್ನು ವಿಭಾಗ ಮಾಡುವವನೂ । ಸುಶರ್ಮಾಣಂ—ಶ್ರೇಷ್ಠವಾದ ಸುಖಕಾರಕನೂ । ಸ್ವವಸಂ—ಉತ್ತಮವಾದ ರಕ್ಷಕನೂ । ಜರದ್ವಿಷಂ—ಹಳೆಯ ಮರಗಳನ್ನೆಲ್ಲಾ ವ್ಯಾಪಿಸುವವನೂ ಆದ । ತ್ವಾಂ—ನಿನ್ನನ್ನು । ವಿಶಃ– ಯಜಮಾನರು । ಗೃಹಪತಿಂ—ಯಜ್ಞಗೃಹಕ್ಕೆ ಪಾಲಕನನ್ನಾಗಿ । ನಿಷೇದಿರೇ—ಸ್ಥಾಪಿಸಿದ್ದಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅತಿಥಿಯಂತೆ ಪೂಜ್ಯನೂ, ಪುರಾತನನೂ, ಪ್ರಕಾಶಮಾನವಾದ ಜ್ವಾಲೆಯುಳ್ಳವನೂ, ಆಹವನೀಯಾದಿ ನಾನಾರೂಪವುಳ್ಳವನೂ ಧನವನ್ನು ವಿಭಾಗಮಾಡುವವನೂ, ಶ್ರೇಷ್ಠವಾದ ಸುಖಕಾರಕನೂ, ಉತ್ತಮವಾದ ರಕ್ಷಕನೂ, ಹಳೆಯ (ಒಣಗಿದ) ವೃಕ್ಷಗಳನ್ನೆಲ್ಲಾ ವ್ಯಾಪಿಸಿ ದಹಿಸುವವನೂ ಆದ ನಿನ್ನನ್ನು ಯಜಮಾನರು ಯಜ್ಞಗೃಹಕ್ಕೆ ಪಾಲಕನನ್ನಾಗಿ ಸ್ಥಾಪಿಸಿದ್ದಾರೆ.

## English Translation.

Men have established you, (Agni), their ancient guest, as the lord of the house ; (you), the blazing-haired, the vast bannered, the multiform the dispenser of wealth, the bestower of happiness, the kind protector, the destructor of decaying (trees).



॥ ಸಂಹಿತಾಪಾಠಃ ॥

ತ್ವಾಮ॑ಗ್ನೇ ಮಾನು॑ಷೀರೀಳತೇ ವಿಶೋ॑ ಹೋತ್ರಾವಿದಂ॒ ವಿವಿ॑ಚಿಂ ರತ್ನಧಾ-

ತ॑ಮಂ ।

ಗುಹಾ ಸಂತಂ॑ ಸುಭಗ ವಿಶ್ವದ॑ರ್ಶತಂ ತುವಿಷ್ವ॒ಣಸಂ॑ ಸುಯಜಂ॑ ಘೃತ-

ಶ್ರಿ॑ಯಂ ॥ ೩ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಮಾನು॑ಷೀಃ । ಈಳತೇ । ವಿಶಃ॑ । ಹೋತ್ರಾಽವಿದಂ॑ । ವಿವಿ॑ಚಿಂ । ರತ್ನಽಧಾತ॑ಮಂ ।

ಗುಹಾ॑ । ಸಂತಂ॑ । ಸುಽಭಗ । ವಿಶ್ವಽದ॑ರ್ಶತಂ । ತುವಿಽಸ್ವನಸಂ॑ । ಸುಽಯಜಂ॑ । ಘೃತಽಶ್ರಿ॑ಯಂ ॥ ೩ ॥

॥ ಸಾಯಣಭಾಷ್ಯಂ ॥

ಅಗ್ನೀನಾಂ ಪರಸ್ಪರಂ ಸಂಸರ್ಗೇ ವಿವಿಚಯೇಽಗ್ನಯೇ ಕಾಚಿದಿಷ್ಟಿಃ । ತತ್ರ ತ್ವಾಮಗ್ನೇ ಮಾನುಷೀರಿತಿ ಯಾಜ್ಯಾ । ಸೂತ್ರಿತಂ ಚ । ತ್ವಾಮಗ್ನೇಮಾನುಷೀರೀಳತೇ ವಿಶೋಽಗ್ನ ಆಯಾಹಿ ವೀತಯೇ । ಆ. ೩-೧೩ । ಇತಿ ॥

ಹೇ ಅಗ್ನೇ ಸುಭಗ ಶೋಭನಧನ ತ್ವಾಂ ಮಾನುಷೀರ್ವಿಶೋ ಮಾನುಷಸಂಬಂಧಿನ್ಯಃ ಸರ್ವಾಃ ಪ್ರಜಾ ಈಳತೇ । ಸ್ತುವಂತಿ । ಕೀದೃಶಂ ತ್ವಾಂ । ಹೋತ್ರಾವಿದಂ ಹೋಮಾನಾಂ ಸಪ್ತಹೋತ್ರಕಾಣಾಂ ವಾ ವೇತ್ತಾರಂ ವಿವಿಚಿಂ ವಿವೇಚಕಂ ಸದಸತೋಃ ರತ್ನಧಾತಮಂ ರಮಣೀಯಾನಾಂ ಧನಾನಾಂ ದಾತೃತಮಂ ಗುಹಾ ಗುಹಾಯಾಮರಣ್ಯಾಂ ಹೃದಯೇಷು ವಾ ಸಂತಂ ಸರ್ವದಾ ವರ್ತಮಾನಂ ವಿಶ್ವದರ್ಶತಂ ಸರ್ವೈರ್ದ್ರಷ್ಟವ್ಯಂ ತುವಿಷ್ವಣಸಂ ಪ್ರಭೂತಧ್ವನಿಂ ಸುಯಜಂ ಸುಷ್ಠು ಯಷ್ಟಾರಂ ಘೃತಶ್ರಿಯಂ ಘೃತಂ ಶ್ರಯಂತಂ ॥

॥ ಪ್ರತಿಪದಾರ್ಥ ॥

**ಸುಭಗ**—ಶ್ರೇಷ್ಠವಾದ ಧನವುಳ್ಳ । **ಅಗ್ನೇ**—ಅಗ್ನಿಯೇ । **ಹೋತ್ರಾವಿದಂ**—ಅರ್ಪಿತವಾದ ಆಹುತಿಗಳ ಸ್ವರೂಪವನ್ನು ಅರಿಯುವವನೂ । **ವಿವಿಚಿಂ**—ಸದಸತ್ತುಗಳ ವಿವೇಕಜ್ಞಾನವುಳ್ಳವನೂ । **ರತ್ನಧಾತಮಂ**—ರಮಣೀಯವಾದ ಧನದ ದಾತೃವೂ । **ಗುಹಾ ಸಂತಂ**—ಅರಣಿರೂಪವಾದ ಗುಹೆಯಲ್ಲಿರುವವನೂ (ಅಥವಾ ಹೃದಯ ರೂಪವಾದ ಗುಹೆಯಲ್ಲಿರುವವನೂ) । **ವಿಶ್ವದರ್ಶತಂ**— ಸಕಲರಿಗೂ ಗೋಚರನೂ । **ತುವಿಷ್ವಣಸಂ**—ಪ್ರಭೂತ ವಾದ ಧ್ವನಿಯುಳ್ಳವನೂ । **ಸುಯಜಂ**—ಅತಿಶಯವಾಗಿ ಯಜ್ಞಮಾಡುವವನೂ । **ಘೃತಶ್ರಿಯಂ**—ಘೃತವನ್ನು ಆಶ್ರಯಿಸಿರುವವನೂ ಆದ । **ತ್ವಾಂ**—ನಿನ್ನನ್ನು । **ಮಾನುಷೀಃ ವಿಶಃ**—ಮಾನವರೂಪದ ಪ್ರಜೆಗಳೆಲ್ಲಾ । **ಈಳತೇ**—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಶ್ರೇಷ್ಠವಾದ ಧನವುಳ್ಳ ಅಗ್ನಿಯೇ, ಅರ್ಪಿತವಾದ ಆಹುತಿಗಳ ಸ್ವರೂಪವನ್ನರಿಯುವವನೂ, ಸದಸತ್ತುಗಳ ವಿವೇಕಜ್ಞಾನವುಳ್ಳವನೂ, ರಮಣೀಯವಾದ ಧನದ ದಾತೃವೂ, ಅರಣಿ (ಅಥವಾ ಹೃದಯ) ರೂಪದ ಗುಹೆಯಲ್ಲಿರುವವನೂ, ಸಕಲರಿಗೂ ಗೋಚರನೂ, ಪ್ರಭೂತವಾದ ಧ್ವನಿಯುಳ್ಳವನೂ, ಅತಿಶಯವಾಗಿ ಯಜ್ಞಮಾಡುವವನೂ, ಘೃತವನ್ನು ಆಶ್ರಯಿಸಿರುವವನೂ ಆದ ನಿನ್ನನ್ನು ಮಾನವರೂಪದ ಪ್ರಜೆಗಳೆಲ್ಲರೂ ಸ್ತುತಿಸುತ್ತಾರೆ.

## English Translation.

Human beings glorify you, Agni, the appreciator of burnt-offerrings the discriminator (of truth), the most liberal giver of precious (things), abiding (awhile), auspicious one, in secret, (at other times) visible to all; loud sounding, offering worship, thriving upon clarified butter.

॥ ವಿಶೇಷವಿಷಯಗಳು ॥

ಯಜ್ಞದಲ್ಲಿ ಒಂದಗ್ನಿಗೂ, ಮತ್ತೊಂದಗ್ನಿಗೂ ಪರಸ್ಪರ ಸಂಸರ್ಗವಾದರೆ ವಿವಿಚಿ ಎಂಬ ಅಗ್ನಿಯನ್ನುದ್ದೇಶಿಸಿ ಒಂದು ಇಷ್ಟಿಯನ್ನು ಮಾಡಬೇಕು. ಆಗ ಆ ಇಷ್ಟಿಯಲ್ಲಿ ತ್ವಾಮಗ್ನೇ ಮಾನುಷೀಃ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತ್ವಾಮಗ್ನೇ ಮಾನುಷೀರೀಳತೇ ವಿಶೋಽಗ್ನ ಆಯಾಹಿ ವೀತಯೇ ಎಂಬ ಸೂತ್ರದಿಂದ (ಆ. ೩–೧೩) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತ್ವಾಮಗ್ನೇ ಧರ್ಣಸಿಂ ವಿಶ್ವಧಾ ವಯಂ ಗೀರ್ಭಿರ್ಗೃಣಂತೋ ನಮಸೋಪ ಸೇದಿಮ ।
ಸ ನೋ ಜುಷಸ್ವ ಸಮಿಧಾನೋ ಅಂಗಿರೋ ದೇವೋ ಮರ್ತಸ್ಯ ಯಶಸಾ ಸುದೀತಿಭಿಃ ॥ ೪ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಧರ್ಣಸಿಂ । ವಿಶ್ವಧಾ । ವಯಂ । ಗೀಃಽಭಿಃ । ಗೃಣಂತಃ । ನಮಸಾ । ಉಪ । ಸೇದಿಮ । ಸಃ । ನಃ । ಜುಷಸ್ವ । ಸಂಽಇಧಾನಃ । ಅಂಗಿರಃ । ದೇವಃ । ಮರ್ತಸ್ಯ । ಯಶಸಾ । ಸುದೀತಿಽಭಿಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಧರ್ಣಸಿಂ ಸರ್ವಸ್ಯ ಧಾರಕಂ ತ್ವಾಂ ವಯಮಾತ್ರೇಯಾ ವಾ ವಿಶ್ವಧಾ ಬಹುಪ್ರಕಾರೇಣ ಗೀರ್ಭಿರ್ಗೃಣಂತಃ ಸ್ತುವಂತೋ ನಮಸಾ ನಮಸ್ಕಾರೇಣೋಪ ಸೇದಿಮ । ಉಪಸನ್ನಾ ಭವೇಮ । ಸ ತ್ವಂ ನೋಽಸ್ಮಾನ್ ಜುಷಸ್ವ । ಸೇವಸ್ವ ಧನಾದಿಭಿಃ । ಸಮಿಧಾನಃ ಸಮ್ಯಗ್ದೀಪ್ತೋ ದೀಪ್ಯಮಾನೋಽಸ್ಮಾಭಿರ್ಹೇ ಅಂಗಿರಃ ಸರ್ವತ್ರ ಗಂತರಂಗಿರಸಃ ಪುತ್ರ ವಾ ದೇವೋ ದೀಪ್ಯಮಾನಸ್ತ್ವಂ ಮರ್ತಸ್ಯ ಯಜಮಾನಸ್ಯ ಯಶಸಾ ಸುದೀತಿಭಿರ್ಜ್ವಾಲಾಭಿಃ ಸಹ ಜುಷಸ್ವ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಧರ್ಣಸಿಂ—ಸರ್ವಧಾರಕನಾದ । ತ್ವಾಂ—ನಿನ್ನನ್ನು । ವಯಂ—ನಾವು । ವಿಶ್ವಧಾ—ಅನೇಕ ಪ್ರಕಾರವಾಗಿ । ಗೀರ್ಭಿಃ—ಸ್ತೋತ್ರಗಳಿಂದ । ಗೃಣಂತಃ—ಸ್ತುತಿಸುತ್ತಲೂ । ನಮಸಾ—ನಮಸ್ಕಾರಪೂರ್ವಕವಾಗಿಯೂ । ಉಪ ಸೇದಿಮ—ಸಮೀಪಿಸುತ್ತೇವೆ । ಸಮಿಧಾನಃ—ಚೆನ್ನಾಗಿ ಪ್ರಜ್ವಲಿತನಾದವನೂ । ಅಂಗಿರಃ—ಅಂಗಿರಸ್ಸಿನ ಪುತ್ರನೂ । ದೇವಃ—ದೇವತಾತ್ಮನೂ ಆದ । ಸಃ—ನೀನು । ಮರ್ತಸ್ಯ—ಮಾನವನ (ಯಜಮಾನನ) । ಯಶಸಾ—ಪ್ರಕಾಶಮಾನವಾದ । ಸುದೀತಿಭಿಃ—ಜ್ವಾಲೆಗಳೊಡನೆ । ನಃ—ನಮ್ಮನ್ನು । ಜುಷಸ್ವ—ಆದರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸರ್ವಧಾರಕನಾದ ನಿನ್ನನ್ನು ನಾವು ಅನೇಕ ಪ್ರಕಾರವಾಗಿ ಸ್ತೋತ್ರಗಳಿಂದ ಸ್ತುತಿಸುತ್ತಲೂ, ನಮಸ್ಕಾರಗಳಿಂದಲೂ ಸಮೀಪಿಸುತ್ತೇವೆ. ಚೆನ್ನಾಗಿ ಪ್ರಜ್ವಲಿತನಾದವನೂ, ಅಂಗಿರಸ್ಸಿನ ಪುತ್ರನೂ, ದೇವತಾತ್ಮನೂ ಆದ ನೀನು ಯಜಮಾನನ ಪ್ರಕಾಶಮಾನವಾದ ಜ್ವಾಲೆಗಳೊಡನೆ ನಮ್ಮನ್ನು ಆದರಿಸು.

## English Translation.

We approch you, all-sustaining Agni, adoring you in many ways with hymns and with prostrations: do you. Angiras, when kindled, be propitious to us: may the divine (Agni be pleased) by the (sacrificial) food (offered by the) worshipper, and by the bright flames (of his sacrifice).

॥ ಸಂಹಿತಾಪಾಠಃ ॥

ತ್ವಮ॑ಗ್ನೇ ಪುರು॒ರೂಪೋ॑ ವಿ॒ಶೇವಿ॑ಶೇ॒ ವಯೋ॑ ದಧಾಸಿ ಪ್ರ॒ತ್ನಥಾ॑ ಪುರು-ಷ್ಟುತ ।

ಪು॒ರೂಣ್ಯನ್ನಾ॒ ಸಹ॑ಸಾ॒ ವಿ ರಾ॑ಜಸಿ॒ ತ್ವಿಷಿಃ॒ ಸಾ ತೇ॑ ತಿತ್ವಿ॒ಷಾಣಸ್ಯ॒ ನಾಧೃಷೇ॑ ॥

॥ ಪದಪಾಠಃ ॥

ತ್ವಂ । ಅ॒ಗ್ನೇ॒ । ಪು॒ರು॒ಽರೂಪಃ॑ । ವಿ॒ಶೇಽವಿ॑ಶೇ । ವಯಃ॑ । ದ॒ಧಾ॒ಸಿ॒ । ಪ್ರ॒ತ್ನಽಥಾ॑ । ಪು॒ರು॒ಽಸ್ತು॒ತ॒ ।

ಪು॒ರೂಣಿ॑ । ಅನ್ನಾ॑ । ಸಹ॑ಸಾ । ವಿ । ರಾ॒ಜ॒ಸಿ॒ । ತ್ವಿಷಿಃ॑ । ಸಾ । ತೇ॒ । ತಿ॒ತ್ವಿ॒ಷಾ॒ಣಸ್ಯ॑ । ನ । ಆ॒ಽಧೃಷೇ॑ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಪುರುರೂಪಃ ಸನ್ ವಿಶೇ ವಿಶೇ ಸರ್ವಸ್ಮೈ ಯಜಮಾನಾಯ ಪ್ರತ್ನಥಾ ಪುರಾಣ ಇವ ವಯೋಽನ್ನಂ ದಧಾಸಿ । ಧಾರಯಸಿ । ಹೇ ಪುರುಷ್ಟುತ ಬಹುಭಿಃ ಸ್ತುತ್ಯ ಪುರೂಣಿ ಬಹೂನ್ಯನ್ನಾ-ನ್ನಾನಿ ಚರುಪುರೋಡಾಶಾದೀನಿ ಸಹಸಾ ಬಲೇನ ವಿ ರಾಜಸಿ । ಈಶ್ವರೋ ಭವಸಿ ಸ್ವೀಕರ್ತುಂ । ತಿತ್ವಿಷಾ-ಣಸ್ಯ ದೀಪ್ತಸ್ಯ ತೇ ತವ ಸಾ ಪ್ರಸಿದ್ಧಾ ತ್ವಿಷಿರ್ದೀಪ್ತಿರ್ನಾಧೃಷೇ । ಅನ್ಯೈರಧೃಷ್ಯಾ ಭವತಿ ॥

॥ ಪ್ರತಿಪದಾರ್ಥ ॥

ಪುರುಷ್ಟುತ—ಅನೇಕರಿಂದ ಸ್ತುತನಾದ । ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಪುರುರೂಪಃ—ಅನೇಕರೂಪವುಳ್ಳವನಾಗಿ । ವಿಶೇ ವಿಶೇ—ಸಕಲ ಯಜಮಾನರಿಗೂ । ಪ್ರತ್ನಥಾ—ಪುರಾತನವಾದ । ವಯಃ—ಅನ್ನವನ್ನು । ದಧಾಸಿ—ಧರಿಸುತ್ತೀಯೆ । ಸಹಸಾ—ನಿನ್ನ ಶಕ್ತಿಯಿಂದ । ಪುರೂಣಿ ಅನ್ನಾ—ಅನೇಕ ವಿಧವಾದ ಅನ್ನಗಳಿಗೆ । ವಿ ರಾಜಸಿ—ಪ್ರಭುವಾಗಿದ್ದೀಯೆ । ತಿತ್ವಿಷಾಣಸ್ಯ—ಪ್ರಕಾಶಿಸುತ್ತಿರುವ । ತೇ—ನಿನ್ನ । ಸಾ—ಪ್ರಸಿದ್ಧವಾದ । ತ್ವಿಷಿಃ—ಕಾಂತಿಯು । ನಾಧೃಷೇ—ಯಾರಿಂದಲೂ ಪ್ರತಿಭಟಿಸಲ್ಪಡುವುದಿಲ್ಲ.

॥ ಭಾವಾರ್ಥ ॥

ಅನೇಕರಿಂದ ಸ್ತುತನಾದ ಎಲೈ ಅಗ್ನಿಯೇ, ನೀನು ಅನೇಕರೂಪವುಳ್ಳವನಾಗಿ ಸಕಲ ಯಜಮಾನರಿಗಾಗಿಯೂ ಪುರಾತನವಾದ ಅನ್ನವನ್ನು ಧರಿಸುತ್ತೀಯೆ. ನಿನ್ನ ಶಕ್ತಿಯಿಂದ ಅನೇಕವಿಧವಾದ ಅನ್ನಗಳಿಗೆ ಪ್ರಭುವಾಗಿದ್ದೀಯೆ. ಪ್ರಕಾಶಮಾನವಾದ ನಿನ್ನ ಪ್ರಸಿದ್ಧವಾದ ಕಾಂತಿಯು ಯಾರಿಂದಲೂ ಪ್ರತಿಭಟಿಸಲ್ಪಡುವುದಿಲ್ಲ.

English Translation.

Agni, the praised of many, you who are multiform, give of old to every mortal; you reign with strength over the various (sacrificial) viands; the splendour of you when blazing brightly is not rivalled (by any).

॥ ಸಂಹಿತಾಪಾಠಃ ॥

ತ್ವಾಮಗ್ನೇ ಸಮಿಧಾನಂ ಯವಿಷ್ಠ್ಯ ದೇವಾ ದೂತಂ ಚಕ್ರಿರೇ ಹವ್ಯವಾಹನಂ।
ಉರುಜ್ರಯಸಂ ಘೃತಯೋನಿಮಾಹುತಂ ತ್ವೇಷಂ ಚಕ್ಷುರ್ದಧಿರೇ ಚೋದಯನ್ಮತಿ ॥ ೬ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಸಂಽಇಧಾನಂ । ಯವಿಷ್ಠ್ಯ । ದೇವಾಃ । ದೂತಂ । ಚಕ್ರಿರೇ । ಹವ್ಯಽವಾಹನಂ ।
ಉರುಽಜ್ರಯಸಂ । ಘೃತಽಯೋನಿಂ । ಆಽಹುತಂ । ತ್ವೇಷಂ । ಚಕ್ಷುಃ । ದಧಿರೇ । ಚೋದಯತ್ಽಮತಿ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ್ಯ ಯುವತಮಾಗ್ನೇ ಸಮಿಧಾನಂ ಸಮ್ಯಗಿಧ್ಯಮಾನಂ ತ್ವಾಂ ಹವ್ಯವಾಹನಂ ಹವಿಷಾಂ ವೋಢಾರಂ ದೂತಂ ಚಕ್ರಿರೇ । ಕೃತವಂತೋ ದೇವಾಃ । ತ್ರಯಾಣಾಮಗ್ನೀನಾಂ ಮಧ್ಯೇ ಹವ್ಯವಾಹನಃ ಖಲು ಪೂರ್ವಂ ದೇವೈರ್ಹವಿರ್ವಹನಾಯ ದೂತಃ ಕೃತಃ । ಹವ್ಯವಾಹನೋ ದೇವಾನಾಂ। ತೈ. ಸಂ. ೨-೫-೮-೬ । ಇತಿ ಹಿ ಶ್ರುತಿಃ । ಕಿಂಚ ಉರುಜ್ರಯಸಂ ಪ್ರಭೂತವೇಗಂ ಘೃತಯೋನಿಂ । ಘೃತಂ ಯೋನಿಃ ಕಾರಣಂ ಯಸ್ಯ ತಂ । ಆಹುತಂ ತ್ವಾಂ ಚೋದಯನ್ಮತಿ । ಚೋದಯಂತೀ ಮತಿರ್ಯಸ್ಯ ತಚ್ಚೋದಯನ್ಮತಿ । ತ್ವೇಷಂ ದೀಪ್ತಂ ಚಕ್ಷುರುಕ್ತಲಕ್ಷಣಂ ಸರ್ವಪ್ರಕಾಶಕಂ ಚಕ್ಷುಃಸ್ಥಾನೀಯಂ ಕೃತ್ವಾ ದಧಿರೇ ದೇವಾ ಮನುಷ್ಯಾಶ್ಚ । ಮತ್ಯಾ ಹಿ ಚಕ್ಷುಶ್ಚೋದ್ಯತೇ ॥

॥ ಪ್ರತಿಪದಾರ್ಥ ॥

ಯವಿಷ್ಠ್ಯ—ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ । ಸಮಿಧಾನಂ—ಪ್ರಜ್ವಲಿತನಾದ । ತ್ವಾಂ—ನಿನ್ನನ್ನು । ದೇವಾಃ—ದೇವತೆಗಳು । ಹವ್ಯವಾಹನಂ—ಹವಿಸ್ಸನ್ನು ವಹಿಸತಕ್ಕ । ದೂತಂ—ದೂತನನ್ನಾಗಿ । ಚಕ್ರಿರೇ—ಮಾಡಿದ್ದಾರೆ । ಉರುಜ್ರಯಸಂ—ಪ್ರಭೂತವಾದ ವೇಗವುಳ್ಳವನೂ । ಘೃತಯೋನಿಂ—ಘೃತವೇ ಯೋನಿಯಾಗಿ ಉಳ್ಳವನೂ । ಆಹುತಂ—ಆಹುತಿಯನ್ನರ್ಪಿಸಲ್ಪಟ್ಟವನೂ ಆದ ನಿನ್ನನ್ನು । ತ್ವೇಷಂ—ಪ್ರಕಾಶಮಾನವಾದುದೂ । ಚೋದಯನ್ಮತಿ—ಜ್ಞಾನಪ್ರಚೋದಿತವಾದುದೂ ಆದ । ಚಕ್ಷುಃ—(ವಿಶ್ವ) ಚಕ್ಷುಸ್ಸಿನ ರೂಪದಲ್ಲಿ । ದಧಿರೇ—ಧಾರಣೆಮಾಡಿದ್ದಾರೆ.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಪ್ರಜ್ವಲಿತನೂ, ಯಜ್ಞಕ್ಕೆ ಕರೆಯಲ್ಪಟ್ಟವನೂ ಆದ ನಿನ್ನನ್ನು ದೇವತೆಗಳು ಹವಿಸ್ಸನ್ನು ವಹಿಸತಕ್ಕ ದೂತನನ್ನಾಗಿ ಮಾಡಿದ್ದಾರೆ. ಪ್ರಭೂತವಾದ ವೇಗವುಳ್ಳವನೂ, ಘೃತವೇ ಯೋನಿಯಾಗಿ ಉಳ್ಳವನೂ, ಆಹುತಿಯನ್ನರ್ಪಿಸಲ್ಪಟ್ಟವನೂ ಆದ ನಿನ್ನನ್ನು ಪ್ರಕಾಶಮಾನವಾದುದೂ, ಜ್ಞಾನಪ್ರಚೋದಿತವಾದುದೂ ಆದ ವಿಶ್ವಚಕ್ಷುಸ್ಸಾಗಿ ಧರಿಸಿದ್ದಾರೆ.

## English Translation.

Agni, youngest (of the deities), the gods have made you, when kindled, their messenger, the bearer of oblations; you, who are rapid in movement, and of whom butter is the source, they have made, when invoked, the brilliant eye (of the universe), instigated by the understanding.

॥ ವಿಶೇಷವಿಷಯಗಳು ॥

ದೇವಾ ದೂತಂ ಚಕ್ರಿರೇ ಹವ್ಯವಾಹಂ—ದೇವತೆಗಳು ಹವ್ಯವನ್ನು ವಹಿಸತಕ್ಕ ಅಗ್ನಿಯನ್ನು ತಮ್ಮ ದೂತನನ್ನಾಗಿ ಮಾಡಿಕೊಂಡರು ಎಂದರ್ಥವು. ಈ ವಿಷಯದಲ್ಲಿ ಭಾಷ್ಯಕಾರರು ತೈತ್ತಿರೀಯಸಂಹಿತೆಯ ವಾಕ್ಯವನ್ನು ಉದಾಹರಿಸಿದ್ದಾರೆ—

> ತ್ರಯೋ ವಾ ಅಗ್ನಯೋ ಹವ್ಯವಾಹನೋ ದೇವಾನಾಂ ಕವ್ಯವಾಹನಃ ಪಿತೃಣಾಗ್ಂ ಸಹರಕ್ಷಾ ಅಸುರಾಣಾಂ ತ ಏತರ್ಹ್ಯಾಶಗ್ಂಸಂತೇ ಮಾಂ ವರಿಷ್ಯತೇ ಮಾಂ ವೃಣೀಧ್ವಗ್ಂ ಹವ್ಯವಾಹನಮಿತ್ಯಾಹ ॥
>
> (ತೈ. ಸಂ. ೨-೫-೮-೬)

ಮೂರು ವಿಧವಾದ ಅಗ್ನಿಗಳಿರುವವು—ದೇವತೆಗಳಿಗೆ ಹವ್ಯವನ್ನು ವಹಿಸುವ ಅಗ್ನಿಯು ಮೊದಲನೆಯದು; ಇದಕ್ಕೆ ಹವ್ಯವಾಹನ ಎಂದು ಹೆಸರು. ಎರಡನೆಯದಕ್ಕೆ ಕವ್ಯವಾಹನ ಎಂದು ಹೆಸರು. ಈ ಅಗ್ನಿಯು ಪಿತೃಗಳಿಗೆ ಕವ್ಯವನ್ನು ವಹಿಸುವುದು. ಮೂರನೆಯ ಅಗ್ನಿಯು ಯಜ್ಞಾದಿಕರ್ಮಗಳಲ್ಲಿ ಅಸುರರಿಂದ ತೊಂದರೆಯಾಗದಂತೆ ರಕ್ಷಕನಾಗಿರುವುದರಿಂದ ಸಹರಕ್ಷ ಎಂದು ಹೆಸರು. ಈ ಮೂರು ವಿಧ ಅಗ್ನಿಗಳಲ್ಲಿ ದೇವತೆಗಳು ಹವ್ಯವಾಹನ ಎಂಬ ಅಗ್ನಿಯನ್ನು ತಮಗೆ ಹವಿಸ್ಸನ್ನು ವಹಿಸುವುದಕ್ಕಾಗಿ ದೂತನನ್ನಾಗಿ ಮಾಡಿಕೊಂಡರು, ಎಂದು ಈ ವಾಕ್ಯದಲ್ಲಿ ಅಗ್ನಿಯೇ ಹೇಳಿದ್ದಾನೆ.



॥ ಸಂಹಿತಾಪಾಠಃ ॥

ತ್ವಾಮಗ್ನೇ ಪ್ರದಿವ ಆಹುತಂ ಘೃತೈಃ ಸುಮ್ನಾಯವಃ ಸುಷಮಿಧಾ ಸಮೀಧಿರೇ ।
ಸ ವಾವೃಧಾನ ಓಷಧೀಭಿರುಕ್ಷಿತೋಽಭಿ ಜ್ರಯಾಂಸಿ ಪಾರ್ಥಿವಾ ವಿ ತಿಷ್ಠಸೇ ॥ ೭ ॥

